# ಶ್ರೀಮದ್ಭಾಗವತ

## ಪಂಚಮಸ್ಕಂಧ



ಅನುವಾದ ಹಾಗೂ ಸಂಪಾದನೆ

ಪಂ. ಪೂ. ಗುತ್ತಲ ರಂಗಾಚಾರ್ಯರು

ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

ಪ್ರಕಾಶನ : ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - ೧೪೬

# ಶ್ರೀಮದ್ಭಾಗವತ

## ಪಂಚಮಸ್ಕಂಧ

ಶ್ರೀಜಯತೀರ್ಥವಿದ್ಯಾಪೀಠದ
ರಜತಮಹೋತ್ಸವದ ಶುಭಸಂದರ್ಭದಲ್ಲಿ
ಅರಳಿದ ಕೃತಿಕುಸುಮ

*ಅನುವಾದ ಹಾಗೂ ಸಂಪಾದನೆ*
ಪಂ.ಪೂ. ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :
ಡಾ. ರಾಘವೇಂದ್ರಾಚಾರ್ಯ ರಾಚೂರಿ

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

**Srimad Bhagavata Pancama Skandha**
A highly scholarly yet simple translation in Kannada with word by word meaning, summary, detailed in-depth notes and colourful illustrations based on Bhavata Tatparya of Śri Madhwacharya a deptly summarizing all available commentaries on the subject by Sudha Visharada Pandita Poojya **Rangacharya Guttal**, Kulapati of Sri Jayateertha Vidyapitha.

Published by : **Vishva Madhwa Maha Parishat**

**ISBN : 81-903336-9-0**

Copies : **1000**

First Edition : **12th December 2014**

No.of Pages : **16+688**

© : Reserved

**Price** : [In India] ₹. **300/-**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4,Ph : 080 26603692, mail:vmmp05@gmail.com

Type Setting : V.M.M.P Research Wing.

Cover Design : **B.S. Srinivas, Vedatma Animation**

Printed by : **Vagartha, 149, 8th Cross, N.R.Colony, Bng - 4**





ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ
ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

## ಶ್ರೀ ಶ್ರೀ 1008 ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಶ್ರೀಮದ್ಭಾಗವತ ಪುರಾಣಗಳ ರಾಜ. ಶ್ರೀಕೃಷ್ಣನ ಮತ್ತೊಂದು ರೂಪ. ಭಕ್ತಿರಸಾಯನ. ಸಾಧಕನಿಗೆ ಸಂಜೀವಿನಿ. ಮೋಕ್ಷದ ಪಥದಲ್ಲಿರುವವರಿಗೆ ದಾರಿತೋರುವ ದೀಪ. ನಿವೃತ್ತಧರ್ಮದ ಸಿಂಧು. ಭಕ್ತರ ಬಂಧು.

ಇದರಲ್ಲಿ ಓತಃಪ್ರೋತವಾಗಿ ಹೆಜ್ಜೆ ಹೆಜ್ಜೆಗೆ ಭಗವನ್ಮಹಿಮೆಗಳು ಪ್ರತಿಪಾದಿತವಾಗಿವೆ. ನಾರದರ ಪ್ರಾರ್ಥನೆಯಂತೆ ಭಗವಾನ್ ವೇದವ್ಯಾಸರು ಕಲಿಯುಗದ ಮಂದಮತಿಗಳಿಗಾಗಿ ಅಂದವಾಗಿ ಗೋವಿಂದನ ಮಹಿಮೆಯನ್ನು ತಿಳಿಸಿಕೊಡುವುದಕ್ಕಾಗಿಯೇ ಇದರ ರಚನೆಯನ್ನು ಮಾಡಿದ್ದಾರೆ. ಸಮಾಧಿನಾನುಸ್ಮರ ಯದ್ವಿಚೇಷ್ಟಿತಂ...

ಈ ಭಾಗವತದ ಸಾಗರದಲ್ಲಿ ಭಕ್ತಿರಸಾಯನ, ಭಗವತ್ಕಥಾಪೀಯೂಷ, ಭಾಗವತರ ಮಹಿಮಾ ಮಧುಗಳು ತುಂಬಿ ಹರಿಯುತ್ತಿವೆ. ಅಂತೆಯೇ ಪಿಬತ ಭಾಗವತಂ ರಸಮಾಲಯಂ...

ಈ ಸಾಗರದ ಗರ್ಭದಲ್ಲಿ ಅನರ್ಘ್ಯವಾದ ಕಣ್‌ಕುಕ್ಕುವ ಪ್ರಮೇಯಮಣಿಗಳು, ಕೈಗುಟುಕಲು ದುಃಸಾಧ್ಯವಾದ ತತ್ತ್ವ ರತ್ನಗಳು ಅಡಗಿ ಕುಳಿತಿವೆ. ಅಂತೆಯೇ ವಿದ್ಯಾವತಾಂ ಭಾಗವತೇ ಪರೀಕ್ಷಾ...

ಇದರಲ್ಲಿ ವಿಚಿತ್ರಕಥೆಗಳು, ವಿರುದ್ಧ ಮಾತುಗಳು, ತಿಳಿಯಲಾರದ ಯುಕ್ತಿಗಳು. ಮೋಹಕ ಉಕ್ತಿಗಳು ಹೀಗೆ ದಾರಿತಪ್ಪಿಸುವ ಮೋಹಕ ಮೀನುಗಳೂ ಇವೆ.

ಇದರ ರಸವನ್ನು ಆಸ್ವಾದಿಸಿಲು ರಸಿಕತೆ ಬೇಕು. ಇದರ ತತ್ತ್ವಗಳನ್ನು ಅರಿಯಲು ಧೀಮಂತಿಕೆ ಬೇಕು. ಇದರಲ್ಲಿ ಮೋಹವನ್ನು ಮೀರಲು ಅಪಾರ ಜ್ಞಾನದ ರಾಶಿ ಬೇಕು. ಅಲ್ಲ ಅಲ್ಲ ಆತ ಸರ್ವಜ್ಞನೇ ಆಗಿರಬೇಕು. ಭಗವದನುಗ್ರಹ ಇರಲೇಬೇಕು.

ಇದೆಲ್ಲಾ ಪರಿಪೂರ್ಣವಾಗಿರುವುದು ಶ್ರೀಮತ್ಪೂರ್ಣಪ್ರಜ್ಞರಲ್ಲಿ ಮಾತ್ರ. ತತ್ಪ್ರಸಾದಬಲೋದ್ಧತಃ..... ಭಗವಂತನ ಪ್ರಸಾದದ ಮಹಾಬಲ ಇವರ ಬೆಂಬಲಕ್ಕಿದೆ. ಸ್ವಯಂ ಸರ್ವಜ್ಞರಾಗಿದ್ದಾರೆ. ಅಂತೆಯೇ ಅವರು ಹೇಳುವ ಪ್ರತಿಯೊಂದು ಮಾತೂ ಮಾನ್ಯ. ಪ್ರತಿಯೊಂದು ಉಕ್ತಿಯೂ ಯುಕ್ತಿಯುಕ್ತ. ಅವರು ನೀಡುವ ಪ್ರತಿಯೊಂದು ಯುಕ್ತಿಯೂ ಅಕಾಟ್ಯ. ಮಾಡುವ ಎಲ್ಲ ನಿರ್ಣಯಗಳೂ ವೇದಾದಿಸದಾಗಮಳಿಗೆ ಸಮ್ಮತ. ಶ್ರೀವೇದವ್ಯಾಸರಿಗೆ ಅಭಿಮತ.

ಶ್ರೀಮದಾಚಾರ್ಯರು ರಚಿಸಿದ ಭಾಗವತತಾತ್ಪರ್ಯದ ಸಹಾಯ ಇಲ್ಲದಿದ್ದರೆ ಭಾಗವತದ ಅರಿವು ದುಃಸಾಧ್ಯ. ಭಾಗವತ ತಾತ್ಪರ್ಯದ ಸರಿಯಾದ ತಿಳುವಳಿಕೆಗೆ ಟಿಪ್ಪಣೀಕಾರರುಗಳ ಉಪಕಾರ ಅಪಾರ.

ಪ್ರಕೃತ ಪಂ. ಗುತ್ತಲ ರಂಗಾಚಾರ್ಯರು (ನಮ್ಮ ಪೂರ್ವಾಶ್ರಮದ ಪಿತೃಚರಣರು) ಭಾಗವತದ ಕನ್ನಡಾನುವಾದದ ತಪಸ್ಸನ್ನು ಪೂರ್ಣಗೊಳಿಸಿದ್ದಾರೆ. ಇದು ಕೇವಲ ಭಾಗವತದ ಭಾವಾನುವಾದ ಮಾತ್ರ ಆಗಿರದೆ ಭಾಗವತತಾತ್ಪರ್ಯ ಹಾಗೂ ಶ್ರೀವಿಜಯಧ್ವಜರು, ಶ್ರೀಸತ್ಯಧರ್ಮತೀರ್ಥರು, ಶ್ರೀಯಾದವಾರ್ಯರು ಇವರೇ ಮೊದಲಾದ ಎಲ್ಲ ವ್ಯಾಖ್ಯಾನಗಳ ಅನುವಾದವೂ ಅಗಿರವುದು ಇದರ ವೈಶಿಷ್ಟ್ಯ. ಸಾಮಾನ್ಯ ಜಿಜ್ಞಾಸುವಿಗೆ ಹಾಗೂ ಪಂಡಿತರಿಗೂ ಇವರ ಅನುವಾದ ಉಪಕಾರಿಯಾಗಿದೆ. ಜಯತೀರ್ಥವಿದ್ಯಾಪೀಠದ ಕುಲಪತಿಗಳಾಗಿ ವಿದ್ಯಾರ್ಥಿಗಳಿಗೆ ನಿರಂತರ ಉದ್ಗ್ರಂಥಗಳ ಪಾಠಗಳನ್ನು ಹೇಳುತ್ತಾ ಈ ಗ್ರಂಥಲೇಖನದ ವಿಶಿಷ್ಟ ಕಾರ್ಯವನ್ನು ಆಚಾರ್ಯರು ಮಾಡುತ್ತಿದ್ದಾರೆ. ತದ್ಧಿ ತಪಸ್ತದ್ಧಿತಪಃ ಅನ್ನುವುದೇ ಅವರ ಆದರ್ಶ. ಅವರ ಈ ಭಾಗವತದ ಸೇವೆಯಿಂದ ಸಂತುಷ್ಟನಾದ ಭಗವಂತ ಅವರಿಗೆ ದೀರ್ಘವಾದ ಸಾರ್ಥಕ ಆಯುಷ್ಯವನ್ನು ನೀಡಿ ನಿರಂತರ ನಿವೃತ್ತಿಧರ್ಮಾಚರಣೆಯನ್ನು ಅವರಿಂದ ಮಾಡಿಸಲಿ.

ಈ ಭಾಗದಲ್ಲಿ ಭಾಗವತದ ಪಂಚಮಸ್ಕಂಧದ ಅನುವಾದ ಮೂಡಿಬಂದಿದೆ. ಈ ಭಾಗದ ಸಂಪಾದನೆಯನ್ನು ಡಾ. ರಾಘವೇಂದ್ರಾಚಾರ್ಯ ರಾಚೂರಿ ಇವನು ಅತ್ಯಂತ ಶ್ರದ್ಧೆಯಿಂದ ಮಾಡಿದ್ದಾನೆ. ಪಂಚಮಸ್ಕಂಧದಲ್ಲಿ ಬರುವ ಭೂಗೋಳ, ಖಗೋಳಗಳಿಗೆ ಸಾಮಾನ್ಯರಿಗೂ ತಿಳಿಯುವಂತೆ ಅವುಗಳಿಗೆ ಬಣ್ಣದ ಕಾಲ್ಪನಿಕ ಚಿತ್ರದ ರೂಪ ಕೊಟ್ಟಿದ್ದಾನೆ. ಅದಕ್ಕಾಗಿ ವಿಶೇಷ ಅಧ್ಯಯನ ಹಾಗೂ ಪರಿಶ್ರಮವನ್ನು ಪಟ್ಟಿದ್ದಾನೆ.

ಪಂ. ಗುತ್ತಲ ಅಚಾರ್ಯರವರಿಗೂ ಹಾಗೂ ಪಂ. ರಾಘವೇಂದ್ರಚಾರ್ಯ ರಾಚೂರಿ ಇವನಿಗೂ ಭಗವಂತ ವಿಶೇಷವಾಗಿ ಭಾಗವತಧರ್ಮಾಚರಣೆಯಲ್ಲಿ ಆಸಕ್ತಿಯನ್ನು ನೀಡಿ ಅನುಗ್ರಹಿಸಲಿ ಎಂದು ನಮ್ಮ ಉಪಾಸ್ಯಮೂರ್ತಿ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸವಂಶರಾಮಪ್ರಸನ್ನವಿಠ್ಠಲ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಉತ್ತರಾದಿಮಠ



# ಮುನ್ನುಡಿ

ಶ್ರೀಮದ್ಭಾಗವತ ಭಗವಂತನ ಪ್ರತಿಮೆ. ಅಲ್ಲಿ ಪಂಚಮಸ್ಕಂಧ ನಾಭಿದೇಶ. ಭಗವಂತನ ನಾಭಿಯಂತೆ ಈ ಸ್ಕಂಧವೂ ಬಹು ಗಂಭೀರ. **ವಿದ್ಯಾವತಾಂ ಭಾಗವತೇ ಪರೀಕ್ಷಾ** ಎನ್ನುತ್ತಾರೆ ಪ್ರಾಜ್ಞರು. ಈ ಪರೀಕ್ಷೆಗೆ ಸ್ವಯಂ ಜಗದ್ಗುರುಗಳಾದ ಶ್ರೀಮದಾಚಾರ್ಯರೂ ಗುರಿಯಾದರು. ಒಮ್ಮೆ ಅಚ್ಯುತಪ್ರೇಕ್ಷರು ತಮ್ಮ ಶಿಷ್ಯರಿಗೆ ಭಾಗವತ ಪಾಠವನ್ನು ಹೇಳುತ್ತಿದ್ದರು. ಆ ಸಂದರ್ಭದಲ್ಲಿ ಶಿಷ್ಯರು ಅನೇಕ ಪಾಠಗಳನ್ನೊಳಗೊಂಡ ಹಸ್ತಪ್ರತಿಗಳನ್ನು ಪರಿಶೀಲಿಸುತ್ತಿದ್ದರು. ಆಗ ಶ್ರೀಮದಾಚಾರ್ಯರು ಒಂದು ಪ್ರತಿಯನ್ನು ತೋರಿಸಿ ಕೇವಲ ಈ ಪಾಠ ವೇದವ್ಯಾಸದೇವರಿಗೆ ಸಮ್ಮತವಾದದ್ದು ಎಂದು ನುಡಿದರು. ಗುರುಗಳು ಅದು ಹೇಗೆ ನಿರ್ಣಯಿಸುವಿರಿ ಎಂದು ಕೇಳಲು ವೇದವ್ಯಾಸದೇವರು ರಚಿಸಿದ ಪಾಠ ಇದೇನೇ ಎಂದು ನಮಗೆ ಸ್ಪಷ್ಟವಾಗಿ ಗೊತ್ತಾಗುತ್ತಿದೆ ಎಂದರು. ಆ ಮಾತನ್ನು ಕೇಳಿ ಗುರುಗಳು ಓಹೋ! ನೀವು ವೇದವ್ಯಾಸರ ಸಮಗ್ರಕೃತಿಯನ್ನು ಬಲ್ಲವರಾಗಿದ್ದರೆ ಪಂಚಮಸ್ಕಂಧದ ಗದ್ಯಭಾಗವನ್ನು ಹೇಳಿ ನೋಡೋಣ ಎಂದರು. ಆಗ ಶ್ರೀಮದಾಚಾರ್ಯರು ಒಂದಕ್ಷರ ಬಿಡದೆ ಮುಖೋದ್ಗತವಾಗಿ ಪಂಚಮಸ್ಕಂಧದ ಗದ್ಯಭಾಗವನ್ನು ಪಠಿಸಿ ತಮ್ಮ ಸರ್ವಜ್ಞತೆಯನ್ನು ಸಾಬೀತು ಪಡಿಸಿದರು. ಕೇವಲ ಪಾಠದಲ್ಲೇ ಅಲ್ಲ ಅದರ ಅರ್ಥನಿರ್ಣಯದಲ್ಲಿಯೂ ಶ್ರೀಮದಾಚಾರ್ಯರು ದಕ್ಷರು. ಈ ಸ್ಕಂಧದಲ್ಲಿ ಶ್ರೀಮದಾಚಾರ್ಯರು ಎಷ್ಟೋ ಪ್ರಸಂಗಗಳಲ್ಲಿ ಅನೇಕ ಪ್ರಮಾಣಗ್ರಂಥಗಳನ್ನು ಉದಾಹರಿಸುವ ಮೂಲಕ ಅಪೂರ್ವನಿರ್ಣಯಗಳನ್ನು ತಮ್ಮ ಭಾಗವತತಾತ್ಪರ್ಯ ನಿರ್ಣಯದಲ್ಲಿ ನೀಡಿರುತ್ತಾರೆ. ಭಾಗವತಾದಿ ಪುರಾಣಗಳಲ್ಲಿ ನಿರೂಪಿತವಾದ ಭೂಗೋಲ, ಖಗೋಲಗಳ ವ್ಯವಸ್ಥೆಯು ಅಲ್ಪಪ್ರಜ್ಞರಾದ ಮಾನವರ ಬುದ್ಧಿಗಳಿಗೆ ತಿಳಿಯದು. ಅದು ಕೇವಲ ಜ್ಞಾನದೃಷ್ಟಿಯಿಂದ ಮಾತ್ರ ಗೋಚರವಾಗುವುದು. ಈ ಸ್ಕಂಧದಲ್ಲಿ ಸಪ್ತದ್ವೀಪಗಳು, ಅವುಗಳಲ್ಲಿರುವ ಉಪಾಸಕರು, ಉಪಾಸ್ಯ ಭಗವದ್ರೂಪಗಳು, ಜಂಬೂದ್ವೀಪ, ಮೇರುಪರ್ವತ, ಇತರ ಎತ್ತರವಾದ ಮಾನಸೋತ್ತರವೇ ಮೊದಲಾದ ಪರ್ವತಗಳು, ಅವಷ್ಟಂಭಗಿರಿಗಳು, ನದನದಿಗಳು, ನಗರಗಳು, ವೃಕ್ಷರಾಶಿ, ಪಶುಪಕ್ಷಿಗಳು, ಅಂತರಿಕ್ಷ, ಸೂರ್ಯಚಂದ್ರರು, ರಾಶಿಗಳು, ನಕ್ಷತ್ರಗಳು, ಗ್ರಹಗಳು, ಶಿಂಶುಮಾರ ರೂಪದ ಮಹಿಮೆ, ಧ್ರುವನಕ್ಷತ್ರ, ಜಾರದ್ಗವಾದಿ ವೀಥಿಗಳು, ಸಂವತ್ಸರ-ಇಡಾವತ್ಸರಾದಿ ಕಾಲಪ್ರಭೇದಗಳು, ಊರ್ಧ್ವ-ಅಧೋಲೋಕಗಳು, ವಿವಿಧ ನರಕಗಳು ಇವೇಮೊದಲಾದವುಗಳ ವಿಸ್ತೃತ ವರ್ಣನೆಯಿಂದ ಭಗವಂತನ ಸೃಷ್ಟಿಯ ಮಹಿಮೆ ಕಣ್ಣುಮುಂದೆ ಕಟ್ಟುವುದು. ಭಗವನ್ನಿಷ್ಠೆ ಹೆಚ್ಚುವುದು. ಭಕ್ತಿರಸ ಉಕ್ಕೇರುವುದು.

ಇಂಥಹ ಮಹತ್ವವುಳ್ಳ ಶ್ರೀಮದ್ಭಾಗವತ ಪಂಚಮ ಸ್ಕಂಧದ ಕನ್ನಡಾನುವಾದವನ್ನು ಉಪಲಭ್ಯವಾದ ವಿಜಯಧ್ವಜಿ, ಯಾದುಪತ್ಯ ಮೊದಲಾದ ಮಾಧ್ವಪರಂಪರೆಯ ವ್ಯಾಖ್ಯಾನಗಳನ್ನು ಪರಿಶೀಲಿಸಿ ಅವುಗಳಸಾರರೂಪವಾಗಿ ಸಹೃದಯರಾದ ಪಾಠಕರ ಮುಂದಿರಿಸಲು ಮಹದಾನಂದವಾಗುತ್ತಿದೆ. ಹಾಗೆಯೇ ಪ್ರಸಕ್ತವಾದಲ್ಲಿ ವೀರರಾಘವ, ಶ್ರೀಧರಸ್ವಾಮಿ ಮೊದಲಾದ ಇತರ ವ್ಯಾಖ್ಯಾನಗಳ ಅಭಿಪ್ರಾಯಗಳನ್ನು ಸಹ ಇಲ್ಲಿ ಸೇರಿಸಿದೆ.

ನನಗೆ ಈ ಭಾಗವತಗ್ರಂಥದ ಅನುವಾದಸಾಮರ್ಥ್ಯವು ಬರಲು ಕಾರಣರಾದ, ಪ್ರಾತಃಸ್ಮರಣೀಯರಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಅನಂತ ಪ್ರಣಾಮಗಳನ್ನು ಸಲ್ಲಿಸುವೆ. ಅದರಂತೆಯೇ ನನ್ನ ಅನುವಾದ ಕಾರ್ಯವು ಸಾಂಗವಾಗಿ ನೆರವೇರಲು ನಿಮಿತ್ತರಾದ ಉತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥರ ಪಾದಾರವಿಂದಗಳಿಗೂ ಭಕ್ತಿಪೂರ್ವಕ ನಮನಗಳನ್ನು ಸಲ್ಲಿಸಿ ಇನ್ನು ಮುಂದೆ ನನ್ನಿಂದ ಹೀಗೆಯೇ ಸತ್ಕರ್ಮಗಳನ್ನು ಮಾಡಿಸಲೆಂದು ಮದ್ಗುರ್ವಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುವೆ.

ಈ ಗ್ರಂಥದ ಸಂಪಾದನೆಯಲ್ಲಿ ವಿಶೇಷವಾಗಿ ಸಹಕರಿಸಿದ ಪಂ. ರಾಘವೇಂದ್ರಾಚಾರ್ಯ ರಾಚೂರಿ ಇವನಿಗೆ ಅಸ್ಮತ್ ಕುಲಸ್ವಾಮಿ ತೋರವಿ ಶ್ರೀಲಕ್ಷ್ಮೀನರಸಿಂಹನು ಇತೋಪ್ಯತಿಶಯವಾದ ಜ್ಞಾನಭಕ್ತಿವೈರಾಗ್ಯಗಳನ್ನು ಆಯುರಾರೋಗ್ಯಗಳನ್ನು ನೀಡಿ ಅನುಗ್ರಹಿಸಲೆಂದು ಪ್ರಾರ್ಥಿಸುವೆ.

ಅದರಂತೆ ಈ ಪುಸ್ತಕಕ್ಕೆ ಸುಂದರ ರೂಪವನ್ನು ಕೊಟ್ಟ ಪಂ. ಮಹಿದಾಸಾಚಾರ್ಯ ಜೋಶಿ ಇವನಿಗೆ, ಟಂಕಿಸಿದ ಶ್ರೀ ವೇಣುಗೋಪಾಲ ಇವನಿಗೆ, ನಕ್ಷೆಗಳನ್ನು ಸಿದ್ಧಪಡಿಸುವದರಲ್ಲಿ ಸಹಕರಿಸಿದ ಪ್ರೊ. ಎನ್. ವೆಂಕಟೇಶ್‌ರವರಿಗೆ, ರೇಖಾಚಿತ್ರಗಳನ್ನು ಸುಂದರವಾಗಿ ರೂಪಿಸಲು ಸಹಕರಿಸಿದ ಶ್ರೀ ಬಿ. ಎಸ್. ಶ್ರೀನಿವಾಸ್, ಡೈರಕ್ಟರ್, ವೇದಾತ್ಮ ಆ್ಯನಿಮೇಶನ್ ಮತ್ತು ತಂಡದವರಿಗೆ, ಮುಖಪುಟವಿನ್ಯಾಸದಲ್ಲಿ ಸಹಕರಿಸಿದ ಶ್ರೀ. ಗೋಪಾಲಕೃಷ್ಣ ಅವರಿಗೂ ಭಗವಂತ ವಿಶೇಷವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಭಾಗವತಜನಸೇವಕ

**ಪಂ. ರಂಗಾಚಾರ್ಯ ಗುತ್ತಲ**

# ವಿಷಯಾನುಕ್ರಮಣಿಕಾ

★★★

# ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಉತ್ತರಾದಿಮಠಾಧೀಶರಾದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''**ವಿಶ್ವಮಧ್ವಮಹಾಪರಿಷತ್**''

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ವದ ಗ್ರಂಥಗಳನ್ನು ಅನೇಕ ಟೀಕಾ-ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ- ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ಪಂ.ಪೂಜ್ಯ ಗುತ್ತಲಾಚಾರ್ಯರವರು ಸಮಗ್ರ ಶ್ರೀಮದ್ಭಾಗವತದ ಕನ್ನಡ ಅನುವಾದವನ್ನು ಅನೇಕ ವ್ಯಾಖ್ಯಾನಗಳ ವಿಶೇಷ ಅಂಶಗಳೊಂದಿಗೆ ಮಾಡಿದ್ದಾರೆ. ಈಗಾಗಲೇ 1, 2, 3, 4, 6, 9, 10, 11, 12 ಈ ಸ್ಕಂಧಗಳ ಪ್ರಕಾಶನವನ್ನು ಮಾಡಿ ಪರಿಷತ್ತು ಸಜ್ಜನರ ಮುಂದಿಟ್ಟಿದೆ. ಈಗ ''**ಶ್ರೀಮದ್ಭಾಗವತ ಪಂಚಮಸ್ಕಂಧ**'' ವನ್ನು ಜಿಜ್ಞಾಸುಗಳ ಮುಂದಿಡುತ್ತಿದ್ದೇವೆ. ಎಲ್ಲ ಪುಸ್ತಕಗಳಂತೆ ಇದನ್ನೂ ತಾವು ಸ್ವಾಗತಿಸುತ್ತೀರಿ ಎಂದು ನಂಬಿದ್ದೇವೆ.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು-4

ಪರೋೕರಜಃ ಸವಿತರ್ಜಾತವೇದೋ

ವೇದಸ್ಯ ಗರ್ಭೋ ಮನಸೇದಂ ಜಜಾನ ।

ಸ್ವರೇತಸಾದಃ ಪುನರಾವಿಶ್ಯ ಚ(ಸ್ವಂ)ಷ್ಟೇ

ಹಂಸಂ ಗೃಧ್ರಾರ್ಣಾಮೃಷಭಂ ಸಂಗೃಣೀಮಃ ॥೭.೧೩॥

ಶ್ರೀಹರಿಯೇ! ನೀನು ಪ್ರಕೃತಿಗಿಂತ ಉತ್ತಮನು. ದೋಷ ವಿದೂರನು. ಜಗತ್ತನ್ನು ಸೃಷ್ಟಿಸಿದವನು. ಹುಟ್ಟಿದ್ದನ್ನೆಲ್ಲ ತಿಳಿದವನು. ಸರ್ವಜ್ಞನು. ನೀನು ವೇದತಾತ್ಪರ್ಯವಿಷಯನು. ಈ ಜಗತ್ತನ್ನು ಇಚ್ಛಾಮಾತ್ರದಿಂದಲೇ ಆಯಾಸವಿಲ್ಲದೆ ಸೃಷ್ಟಿಸಿದಿ. ಸೃಷ್ಟಿಸಿದಮೇಲೆ ಈ ಜಗತ್ತನ್ನು ಸ್ವರೂಪಭೂತ ಶಕ್ತಿಯಿಂದ ಪ್ರವೇಶಿಸಿ ಇರುವೆ. ಆದರೂ ನಿನಗೆ ದೋಷಲೇಪವಿಲ್ಲ. ನೀನು ಭಕ್ತರ ದೋಷಗಳನ್ನು ಹೋಗಲಾಡಿಸುವಿ. ಸ್ವತಂತ್ರನಾಗಿದ್ದಿ. ಸಂಸಾರ ಬಂಧದಿಂದ ಮೋಕ್ಷವನ್ನು ಇಚ್ಛಿಸುವ ಸಜ್ಜೀವರಿಗೆ ಸ್ವಾಮಿಯಾದ ನಿನ್ನನ್ನು ನಾವು ಸ್ತೋತ್ರಮಾಡುವೆವು.

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ

# ಪ್ರಥಮೋಽಧ್ಯಾಯಃ

ಹಿಂದಿನ ಸ್ಕಂಧದಲ್ಲಿ ಸ್ವಾಯಂಭುವ ಮನುವಿನ ಮಗನಾದ ಉತ್ತಾನಪಾದನ ಕಥೆ ಮತ್ತು ವಂಶಾವಳಿಯನ್ನೂ ಹೇಳಿ ಆಗಿದೆ. ಈ ಸ್ಕಂಧದಲ್ಲಿ ಅವನ ಅಣ್ಣನಾದ ಪ್ರಿಯವ್ರತನ ಮಾಹಾತ್ಮ್ಯ ಮತ್ತು ವಂಶಾವಳಿಯನ್ನು ಹೇಳುವರು.

**ಈ ಅಧ್ಯಾಯದಲ್ಲಿ...**

ಅವರವರಿಗೆ ವಿಹಿತವಾದ ಧರ್ಮಸಾಧನವೆಂಬ ಸಾಮಗ್ರಿಯಿಂದ ಉಂಟಾದ ಸಮೀಚಿನ ತತ್ತ್ವಜ್ಞಾನದಿಂದ ಸಜ್ಜನರಿಗೆ ಯೋಗ್ಯವಾದ ಮುಕ್ತಿಯಾಗುವುದು ಎಂದು ಈ ಅಧ್ಯಾಯದಲ್ಲಿ ಹೇಳುವರು. ವಿಶೇಷವಾಗಿ ತಿಳಿಯುವ ಇಚ್ಛೆಯಿಂದ ಪರೀಕ್ಷಿತನು ಪ್ರಶ್ನಿಸುವನು.

## ಪ್ರಿಯವ್ರತರಾಜರ ಚರಿತ್ರೆ

ಪರೀಕ್ಷಿತನ ಪ್ರಶ್ನೆ - ನಾರದರ ಉಪದೇಶ ಪಡೆದಮೇಲೂ ಪ್ರಿಯವ್ರತನು ರಾಜ್ಯಭಾರ ಮಾಡಿದ್ದು ಯಾಕೆ?

**'ಯೋ ನಾರದಾದಾತ್ಮವಿದ್ಯಾಂ ಅಧಿಗಮ್ಯ ಪುನರ್ಮಹೀಂ । ಭುಕ್ತ್ವಾ'** ಎಂದು ನಾಲ್ಕನೇ ಸ್ಕಂಧದ ಕೊನೆಗೆ ಹೇಳಿದ ನಾರದರ ಉಪದೇಶ ಪಡೆದಮೇಲೂ ಪ್ರಿಯವ್ರತನು ರಾಜ್ಯಭಾರ ಮಾಡಿದ್ದನ್ನು ಕೇಳಿ ರಾಜನು ಪ್ರಶ್ನಿಸುವನು-

**ಪ್ರಿಯವ್ರತೋ ಭಾಗವತ ಆತ್ಮಾರಾಮಃ ಕಥಂ ಮುನೇ ।**
**ಗೃಹೇಽರಮತ ಯನ್ಮೂಲಃ ಕರ್ಮಬಂಧಃ ಪರಾಭವಃ ॥೧॥**



**ಹೇ ಮುನೇ** ಶುಕಾಚಾರ್ಯರೇ **ಭಾಗವತಃ** ಸ್ವಯಂ ಭಗವದ್ಭಕ್ತನಾದ **ಆತ್ಮಾರಾಮಃ** ನಾರದರ ಉಪದೇಶದಿಂದ ಪರಮಾತ್ಮನಲ್ಲೇ ಸಂತೋಷಿಸುವ **ಪ್ರಿಯವ್ರತಃ** ಪ್ರಿಯವ್ರತಮಹಾರಾಜನು **ಕರ್ಮಬಂಧಃ** ಪುನಃ ಪುನಃ ಸಂಸಾರ ತಂದುಕೊಡುವ ಕರ್ಮಾರ್ಜನೆಯೂ ಆದರಿಂದ **ಪರಾಭವಃ** ಪುನಃ ಪುನಃ ದುಃಖಾನುಭವವು **ಯನ್ಮೂಲಃ** ಯಾವ ಮನೆ ಮಡದಿ ಮೂಲಕವೋ ಅಂಥಹ **ಗೃಹೇ** ಮನೆಮಡದಿಯಲ್ಲಿ **ಕಥಂ ಅರಮತ** ಹೇಗೆ ಸಂತೋಷಿಸಿದನು?

ಅಥವಾ **ಪರಾಭವಃ** ಜೀವನಿಗೆ ತನ್ನ ಮತ್ತು ಪರಮಾತ್ಮನ ಜ್ಞಾನವಿಲ್ಲದಿರುವುದು **ಕರ್ಮಬಂಧಃ** ದುಷ್ಕರ್ಮ ನಿಮಿತ್ತವಾಗಿ **ಯನ್ಮೂಲಃ** ಯಾವ ಗೃಹಮೂಲಕವೋ ಅಂಥಹ **ಗೃಹೇ** ಮನೆಮಡದಿಯಲ್ಲಿ **ಕಥಂ ಅರಮತ** ಹೇಗೆ ಸಂತೋಷಿಸಿದನು? ಹೀಗೂ ಅರ್ಥ.

**ತಾತ್ಪರ್ಯ**

ಶುಕಾಚಾರ್ಯರೇ! ಪ್ರಿಯವ್ರತಮಹಾರಾಜನು ಸ್ವಯಂ ಭಗವದ್ಭಕ್ತನು. ನಾರದರ ಉಪದೇಶದಿಂದ ಪರಮಾತ್ಮನಲ್ಲೇ ಸಂತೋಷಿಸುವವನು. ಮನೆಮಡದಿಗಳಿಂದ ಪುನಃ ಪುನಃ ಸಂಸಾರ ತಂದುಕೊಡುವ ಕರ್ಮಾರ್ಜನೆಯೂ ಆದರಿಂದ ಪುನಃ ಪುನಃ ದುಃಖಾನುಭವವು ಆಗುವುದು ಎಂದು ತಿಳಿದರೂ ಅಂಥಹ ಮನೆಮಡದಿಗಳಲ್ಲಿ ಹೇಗೆ ಸಂತೋಷಿಸಿದನು?

ಅಥವಾ

ಮನೆಮಡದಿಗಳಲ್ಲಿ ಆಸಕ್ತಿಯಿಂದ ಜೀವನು ದುಷ್ಕರ್ಮಪರನಾಗುವನು. ಇದರಿಂದ ತನ್ನ ಮತ್ತು ಪರಮಾತ್ಮನ ಜ್ಞಾನರಹಿತನಾಗುವನು. ಅಂಥಹ ಮನೆಮಡದಿಗಳಲ್ಲಿ ಹೇಗೆ ಸಂತೋಷಿಸಿದನು? ಹೀಗೂ ಅರ್ಥ.

**ಪ್ರಶ್ನೆಯ ಆಂತರ್ಯ**

ಆತ್ಮರಮಣ ಗೃಹರಮಣಗಳು ಪರಸ್ಪರವಿರುದ್ಧವಾದ್ದರಿಂದ ಇದು ಅಸಂಭಾವಿತ. ಇನ್ನು ಗೃಹಾಸಕ್ತಿಯು ಕಾಮೋಪಭೋಗಕ್ಕೆ ಕಾರಣವಾದ್ದರಿಂದ ಆತ್ಮಾರಾಮತೆಯನ್ನು ತ್ಯಜಿಸಿ ಗೃಹಾಸಕ್ತಿಯನ್ನೇ ಮಾಡಿದನು ಕಾರಣ ವಿರೋಧವಿಲ್ಲ ಎನ್ನುವಂತಿಲ್ಲ. ಗೃಹಾಸಕ್ತಿಯು ಪುನಃ ಪುನಃ ಸಂಸಾರಾಪಾದಕ ಕರ್ಮಕ್ಕೆ ಕಾರಣವಾಗಿ

ದುಃಖದಾಯಕವಾಗಿದೆ. ಕಾರಣ ಅದಕ್ಕಾಗಿ ಆತ್ಮಾರಾಮತೆಯನ್ನು ಪರಿತ್ಯಾಗ ಮಾಡುವುದು ಸರಿಯಲ್ಲವೆಂದು ಭಾವ. ಕೇವಲ ಇವನಿಗೆ ಮಾತ್ರ ಗೃಹಾಸಕ್ತಿ ಅಯುಕ್ತವೆಂದಲ್ಲ ಬೇರೆಲ್ಲ ಇಂಥಹ ಭಕ್ತರಿಗೂ ಯುಕ್ತವಲ್ಲ. ।।೧।।

## ಆತ್ಮಾರಾಮರು ಗೃಹಾಸಕ್ತಿಯನ್ನು ಮಾಡಲಾರರು

ಆತ್ಮಾರಾಮರು ಗೃಹಾಸಕ್ತಿಯನ್ನು ಮಾಡಲಾರರು ಎಂದು ಎರಡು ಶ್ಲೋಕಗಳಿಂದ ಹೇಳುವರು.

**ನ ನೂನಂ ಮುಕ್ತಸಂಗಾನಾಂ ತಾದೃಶಾನಾಂ ಮಹಾಮುನೇ ।**
**ಗೃಹೇಷ್ವಭಿನಿವೇಶೋಽಯಂ ಪುಂಸಾಂ ಭವಿತುಮರ್ಹತಿ ।।೨।।**

**ಮಹತಾಂ ಖಲು ವಿಪ್ರರ್ಷೇ ಉತ್ತಮಶ್ಲೋಕಪಾದಯೋಃ ।**
**ಛಾಯಾನಿರ್ವೃತಚಿತ್ತಾನಾಂ ನ ಕುಟುಂಬೇ ಸ್ಪೃಹಾಮತಿಃ* ।।೩।।**

**ಮಹಾಮುನೇ** ಶುಕಾಚಾರ್ಯರೇ **ತಾದೃಶಾನಾಂ** ನಿಮ್ಮಿಂದ ಉಪದೇಶಪಡೆದ ಆದ್ದರಿಂದಲೇ **ಮುಕ್ತಸಂಗಾನಾಂ** ಫಲೇಚ್ಛೆ ಇಲ್ಲದ **ಪುಂಸಾಂ** ಜನರಿಗೆ **ಅಯಂ ಗೃಹೇಷು ಅಭಿನಿವೇಶಃ** ಈ ಮನೆ ಮುಂತಾದವುಗಳಲ್ಲಿ ಆಸಕ್ತಿಯು **ನೂನಂ** ನಿಶ್ಚಯವಾಗಿ **ನ ಭವಿತುಂ ಅರ್ಹತಿ** ಹುಟ್ಟಲು ಸಾಧ್ಯವಿಲ್ಲ. ।।೨।।

**ಹೇ ವಿಪ್ರರ್ಷೇ** ಬ್ರಾಹ್ಮಣ ಶ್ರೇಷ್ಠರೇ **ಉತ್ತಮಶ್ಲೋಕಪಾದಯೋಃ** ಪರಮಾತ್ಮನ ಪಾದಾರವಿಂದಗಳ **ಛಾಯಾನಿರ್ವೃತಚಿತ್ತಾನಾಂ** ಜ್ಞಾನಧ್ಯಾನಗಳಿಂದ ಆವಿರ್ಭೂತವಾದ ಪರಮಾನಂದವನ್ನು ಪಡೆದ ಮನಸ್ಸುಳ್ಳ **ಮಹತಾಂ** ಮಹಾತ್ಮರಿಗೆ **ಕುಟುಂಬೇ ಸ್ಪೃಹಾಮತಿಃ ನ** ಕುಟುಂಬದಲ್ಲಿ ಇಚ್ಛಾ ಸಂಮ್ಮತಿಗಳು ಇರಲಾರವು ಅಥವಾ ಇಚ್ಛೆಯಿಂದ ಕೂಡಿದ ಮತಿಯು ಇರಲಾರದು. ।।೩।।

★ ಇಲ್ಲಿ ಸ್ಪೃಹಾಮತಿಃ ಎಂದು ಸಮಸ್ತಪದವಾಗಿ ಇಟ್ಟುಕೊಂಡಾಗ ಇಚ್ಛೆಯಿಂದ ಕೂಡಿದ ಮತಿ ಎಂಬುದಾಗಿಯು, **ಸ್ಪೃಹಾ ಮತಿಃ** ಎಂಬುದಾಗಿ ಭಿನ್ನ ಪದಗಳಾಗಿ ಇಟ್ಟುಕೊಂಡಾಗ ಇಚ್ಛಾ ಸಂಮ್ಮತಿಗಳು ಎಂಬುದಾಗಿಯೂ ಅರ್ಥ.

## ಪರೀಕ್ಷಿತನ ಪ್ರಶ್ನೆ - ಮನೆಮಡದಿಗಳಲ್ಲಿ ಆಸಕ್ತರಾದವರಿಗೆ ಮುಕ್ತಿಯು ಸಾಧ್ಯವೇ?

ಹಿಂದೆ ನೀವು **ಭುಕ್ತ್ವಾ ವಿಭಜ್ಯ ಪುತ್ರೇಭ್ಯ ಐಶ್ವರ್ಯಂ ಸಮಗಾತ್ ಪದಂ** ಎಂದೇನು ಹೇಳಿದಿರೋ ಅದೂ ಅಸಂಭಾವಿತವೇ ಎಂದು ಹೇಳುವನು.

**ಸಂಶಯೋಽಯಂ ಮಹಾನ್ ಬ್ರಹ್ಮನ್ ದಾರಾಗಾರಸುತಾದಿಷು ।**
**ಸಕ್ತಸ್ಯ ಯತ್ಸಿದ್ಧಿರಭೂತ್ ಕೃಷ್ಣೇ ಚ ಮತಿರಚ್ಯುತಾ ॥೪॥**

**ಹೇ ಬ್ರಹ್ಮನ್** ಶುಕಾಚಾರ್ಯರೇ **ದಾರಾಗಾರಸುತಾದಿಷು** ಮಡದಿ, ಮನೆ, ಮಕ್ಕಳು ಮುಂತಾದವುಗಳಲ್ಲಿ **ಸಕ್ತಸ್ಯ** ಆಸಕ್ತನಾದವನಿಗೆ **ಸಿದ್ಧಿಃ** ಮುಕ್ತಿಯು **ಅಭೂತ್** ಆಯಿತು **ಕೃಷ್ಣೇ** ಶ್ರೀಹರಿಯಲ್ಲಿ **ಅಚ್ಯುತಾ** ನಿರಂತರವಾದ **ಮತಿಃ** ಉಪಾಸನೆಯೂ **ಅಭೂತ್** ಆಯಿತು **ಇತಿ ಯತ್** ಎಂಬುದೇನಿದೆಯೋ **ತತ್ರ** ಆ ವಿಷಯದಲ್ಲಿ **ಮಹಾನ್ ಸಂಶಯಃ** ಅಸಂಭಾವನಾಶಂಕೆ ಬರುವುದು.

### ತಾತ್ಪರ್ಯ

ದಾರಾದಿಗಳಲ್ಲಿ ಸಕ್ತಿಯು ಸಿದ್ಧಿಗೆ ಪ್ರತಿಬಂಧಕ. ಹೀಗಿರುವಾಗ ದಾರಾದಿಗಳಲ್ಲಿ ಸಕ್ತನಾದ ಪ್ರಿಯವ್ರತಮಹಾರಾಜನಿಗೆ ಸಿದ್ಧಿ ಹೇಗೆ ಆಯಿತು? ಭಗವಂತನಲ್ಲಿ ನಿರಂತರವಾದ ಉಪಾಸನೆಯೂ ಹೇಗೆ ಸಾಧ್ಯವಾಯಿತು ಎಂದು ಶಂಕೆಯ ಅಭಿಪ್ರಾಯ.

**ವಿಜಯಧ್ವಜ ರೀತ್ಯಾ :** ಕುಟುಂಬಾಸಕ್ತನಾದವನಿಗೆ ಇಲ್ಲಿ ನಾಲ್ಕು ಪಕ್ಷಗಳು.

೧. ಮುಕ್ತಿಯಾಗಲು ಅಚ್ಯುತ ಮತಿಯು ಪ್ರಯೋಜಕವೋ ಅಥವಾ

೨. '**ಗೃಹಸ್ಥೋಽಪಿ ವಿಮುಚ್ಯತೇ**' ಎಂಬ ಸ್ಮೃತಿ ಮತ್ತು '**ಕುಟುಂಬೀ ಶುಚೌ ದೇಶೇ ಸ್ವಾಧ್ಯಾಯಮಧೀಯಾನಃ**' ಮುಂತಾಗಿ ಶ್ರುತಿ ಇರುವುದರಿಂದ ಕುಟುಂಬ ಭರಣಾಸಕ್ತಿಯೂ ಸಾಕೋ ಅಥವಾ

೩. ಎರಡೂನೋ ಅಥವಾ

೪. ನಿವೃತ್ತಿಮಾರ್ಗಾನುಪಮರ್ದದಿಂದ (ನಿವೃತ್ತಿಮಾರ್ಗವನ್ನು ಬಿಡದ) ಕುಟುಂಬಾಸಕ್ತಿಯು ವಿರೋಧಿ ಅಲ್ಲವೋ ಎಂದು ಸಂಶಯ.

**ಕೊನೆಯ ಪಕ್ಷವನ್ನು** ಅಂಗೀಕರಿಸಿ ಉತ್ತರಿಸುವರು.

ಎರಡು ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರಿಸಲು ಮೊದಲು ರಾಜನು ಹೇಳಿದ್ದನ್ನು ಅಂಗೀಕರಿಸುವರು

**ಶ್ರೀಶುಕ ಉವಾಚ**

**ಬಾಢಮುಕ್ತಂ ಭಗವತ ಉತ್ತಮಶ್ಲೋಕಸ್ಯ ಶ್ರೀಮಚ್ಚರಣಾರವಿಂದ-ಮಕರಂದರಸ ಆದಿತ ಆವೇಶಿತ ಚೇತಸೋ ಭಾಗವತಪಾರಮಹಂಸ್ಯದಯಿತಃ ಕಥಂಚಿದಂತರಾಯವಿಹತಾಂ ಸ್ವಾಂ ಶಿವತಮಾಂ ಪದವೀಂ ನ ಪ್ರಾಯೇಣ ಹಿ ಹಿನ್ವನ್ ಆಸ್ತೇ ।।೫।।**

**ಉಕ್ತಂ** ಆತ್ಮಾರಾಮರಿಗೆ ಗೃಹಾಸಕ್ತಿಯು ಅಸಂಭಾವಿತ ಎಂದೇನು ಹೇಳಿದೆಯೋ ಅದು (ಪ್ರಮಾಣಸಿದ್ಧವಾಗಿದ್ದರಿಂದ) **ಬಾಢಂ** ಸತ್ಯವೇ ಎಂದು ಹೇಳುವರು. **ಭಗವತಃ** ಸರ್ವಗುಣಪೂರ್ಣನಾದ ಸಕಲ ಸೌಭಾಗ್ಯನಿಧಿಯಾದ **ಉತ್ತಮಶ್ಲೋಕಸ್ಯ** ಸದಾ ನಿರ್ದುಷ್ಟ ಯಶಸ್ಸುಳ್ಳ ಶ್ರೀಹರಿಯ **ಶ್ರೀಮಚ್ಚರಣಾರವಿಂದಮಕರಂದರಸೇ** ಸಕಲ ಸಂಪತ್ಕರವಾದ ಪಾದಕಮಲಗಳ ಸೌಗಂಧ್ಯ ಸೌಂದರ್ಯ ಮೊದಲಾದ ಮಾಹಾತ್ಮ್ಯವೆಂಬ ಪುಷ್ಪರಸದಲ್ಲಿ **ಆದಿತಃ ಆವೇಶಿತಚೇತಸಃ** ಹುಟ್ಟಿನಿಂದಲೂ ಅಥವಾ ಅನಾದಿಕಾಲದಿಂದಲೂ ಮನಸ್ಸನ್ನು ಸ್ಥಾಪಿಸಿರುವ ಮನುಷ್ಯನಿಗೆ ಗೃಹಸ್ಥಾಶ್ರಮವು ನಿವೃತ್ತಿ ಮಾರ್ಗವಿರೋಧಿ ಅಲ್ಲ ಎಂದು **ಉಕ್ತಂ** ಹೇಳಿದ್ದು **ಬಾಢಂ** ಸತ್ಯವು. ಹಾಗಾದರೆ ಯಾರಿಗೆ ವಿರೋಧಿಯಾಗುವುದು ಎಂದರೆ ಸನ್ಯಾಸಿಗಳಿಗೆ ಎಂದು ಹೇಳುತ್ತಾರೆ. **ಉತ್ತಮಶ್ಲೋಕಸ್ಯ** ವೇದದ ಶಿರಸ್ಸಾದ್ದರಿಂದ ಉತ್ತಮವಾದ ವೇದಾಂತವನ್ನು ಪ್ರತಿಪಾದಕವಾಗಿ ಹೊಂದಿರುವ ಶ್ರೀಹರಿಯ **ಶ್ರೀಮಚ್ಚರಣಾರ-ವಿಂದಮಕರಂದರಸೇ** ಪಾದ ಕಮಲಗಳಲ್ಲಿ **ಆದಿತಃ ಆವೇಶಿತಚೇತಸಃ** ನಿರಂತರ ರತಿ ಎಂಬ ಆಸ್ವಾದನೆಯಿಂದ ಉತ್ಸುಕವಾದಮನಸ್ಸುಳ್ಳ **ಭಗವತಃ** ಸರ್ವಪೂಜ್ಯನಾದ ಸನ್ಯಾಸಿಗೆ ಗೃಹಸ್ಥಾಶ್ರಮವು ವಿರೋಧಿ ಎಂದು ಹೇಳಿದುದು ಸರಿಯೇ. ''**ಸ್ತ್ರೀಭೂಹಿರಣ್ಯಪಶವೋ ಯತೇರ್ಯಸ್ಯ ಪರಿಗ್ರಹಃ ತಾದೃಶಂ ಕಶ್ಮಲಂ ದೃಷ್ಟ್ವಾ ಸಚೈಲೋ ಜಲಮಾವಿಶೇತ್**'' ಎಂದೇನು ನಿಂದಾವಚನವಿದೆ ಅದು ಸತ್ಯವೇ.

**ಒಂದನೇ ಪಕ್ಷವನ್ನು** ಅಂಗೀಕರಿಸಿದರೂ ಇದೇ ಉತ್ತರ. ಕುಟುಂಬಾಸಕ್ತಿಯು ಮೋಕ್ಷಕ್ಕೆ ವಿರೋಧಿ ಅಲ್ಲವೇ ಎಂದರೆ ಶ್ರೀಹರಿಯ ಚರಣವನ್ನು ಆಶ್ರಯಿಸಿದ ಅಧಿ

ಕಾರಿಗೆ ವಾಯುದೇವರಿಗೆ ವಿಷವು ಬಾಧಕ ಹೇಗಲ್ಲವೋ ಹಾಗೆ ಕುಟುಂಬಾಸಕ್ತಿಯು ಮೋಕ್ಷ ವಿರೋಧಿಯಲ್ಲ. ಅಷ್ಟೇ ಅಲ್ಲ ಅದೂ ಒಂದು ಭೂಷಣವೇ.

**ಎರಡನೇ ಪಕ್ಷದಲ್ಲಿಯೂ** ಸ್ಮೃತಿ ಶ್ರುತಿಗಳಲ್ಲಿ ಭಗವದರ್ಪಣ ಬುದ್ಧಿಯಿಂದ ಮಾಡಿದ ಕರ್ಮದಿಂದ ಜ್ಞಾನವು ಬಂದು ಮುಕ್ತಿಯಾಗುವುದು ಇಲ್ಲದಿದ್ದರೆ ಅನರ್ಥವಾಗುವುದು ಎಂದರೂ ಇದೆ ಉತ್ತರ '**ನೈಷ್ಕರ್ಮ್ಯಮಪ್ಯಚ್ಯುತಭಾವ-ವರ್ಜಿತಂ**' ಎಂದು ತಾವೇ ಹೇಳಿರುವರು.

**ಮೂರನೇ ಪಕ್ಷಕ್ಕೂ** ಇದೇ ಉತ್ತರ. ಮೋಕ್ಷಕ್ಕೆ ಶ್ರೀಹರಿಯ ಚರಣಾರವಿಂದ ಸೇವೆ ಅತ್ಯಾವಶ್ಯಕವೆಂಬುವುದಕ್ಕಾಗಿಯೇ **ಭಗವತ ಉತ್ತಮಶ್ಲೋಕಸ್ಯ** ಮುಂತಾಗಿ ಹೇಳಿದ್ದು.

ಕುಟುಂಬ ಭರಣದಲ್ಲಿಯೇ ಅತ್ಯಂತ ಆಸಕ್ತನಾದವನಿಗೆ ವಿತ್ತೇಷಣ (ದ್ರವ್ಯೇಚ್ಛೆ) ಮೊದಲಾದ ವಿಘ್ನಗಳಿಂದ ಶ್ರೀಹರಿಯ ಉಪಾಸನೆ ಪರಿಚರ್ಯೆಗೆ ವಿಘ್ನವು ಬಂದೇ ಬರಬೇಕಲ್ಲವೇ ಎಂದರೆ ಹೇಳುತ್ತಾರೆ **ಭಾಗವತಪಾರಮಹಂಸ್ಯದಯಿತಃ** ಭಗವದ್ಭಕ್ತ ಮತ್ತು ಸಂನ್ಯಾಸಿಗಳಿಗೆ ಪ್ರಿಯನಾದ ಅಧಿಕಾರಿಯು **ಸ್ವಾಂ** ತನಗೆ ವಿಹಿತವಾದ **ಶಿವತಮಾಂ** ಮೋಕ್ಷಕ್ಕೆ ಕಾರಣವಾದ **ಪದವೀಂ** ನಿವೃತ್ತಿ ಕರ್ಮಮಾರ್ಗವನ್ನು **ಕಥಂಚಿತ್** ಹೇಗಾದರೂ **ಅಂತರಾಯ ವಿಹತಾಂ ಅಪಿ** ಧನದ ಆಶೆ ಮೊದಲಾದವುಗಳಿಂದ ಕುಂಠಿತವಾದರೂ **ಪ್ರಾಯೇಣ** ಬಹುಮಟ್ಟಿಗೆ ನ **ಹಿನ್ವನ್ ಆಸ್ತೇ** ಬಿಡದೇ ಇರುವನು. ಬಿಡದೇ ಇರುವದಕ್ಕೆ ಕಾರಣವನ್ನೇ '**ಭಾಗವತಪಾರಮಹಂಸ್ಯದಯಿತಃ**' ಎಂಬ ವಿಶೇಷಣದಿಂದ ತಿಳಿಸಿರುವರು (**ವಿಜಯಧ್ವಜ**).

### ಯಾದವಾರ್ಯರ ವ್ಯಾಖ್ಯಾನ

ಯಾದವಾರ್ಯರ ಪ್ರಕಾರ ಈ ಮೂಲವನ್ನು ಒಂದೇ ವಾಕ್ಯವಾಗಿ ಮಾಡುವುದಾದರೆ ಆಗ ಶ್ರೀಹರಿಯ ಮಾಹಾತ್ಮ್ಯವೆಂಬ ಮಧುವಿನಲ್ಲಿ ಅನಾದಿಕಾಲದಿಂದ ಮನಸ್ಸಿಟ್ಟಿರುವ ಉತ್ತಮ ಭಕ್ತನ ಅನುಗ್ರಹದಿಂದ ಭಗವದ್ಭಕ್ತರಾದ ಸಂನ್ಯಾಸಿಗಳಿಗೆ ಪ್ರಿಯನಾದವನು ತನ್ನ ನಿವೃತ್ತಿ ಮಾರ್ಗವನ್ನು ಯಾವ ರೀತಿಯಿಂದಲೂ ರಾಗದ್ವೇಷ ಮೊದಲಾದ ವಿಘ್ನಗಳಿಂದ ಹೋಗದಿರುವುದನ್ನು (**ವಿಹತಾಂ** ಎಂದು ಪಾಠ ಇಟ್ಟುಕೊಂಡು ಅರ್ಥ) (**ವಿಗತಾಂ** ಎಂಬ ಪಾಠದಲ್ಲಿಯೂ **ವಿ ವಿಗತ** ಹೋದ ವಿಚ್ಛಿತ್ತಿಯುಳ್ಳ ಅಂದರೆ ವಿಚ್ಛಿನ್ನವಾಗದ ಎಂದೇ ಅರ್ಥ)

ಪ್ರಾಯೇಣ ನಮ್ಮಂತೆ ಬಿಡದೆ ಇರುತ್ತಾನೆ ಎಂದರ್ಥ. ನಮ್ಮಂಥವರು ಬಿಡುವರು ಎಂಬುದನ್ನು ಪ್ರಾಯೇಣ ಎಂಬುದರಿಂದ ತಿಳಿಸಿರುವರು. ||೫||

## ಪ್ರಿಯವ್ರತನು ಗೃಹಾದಿಗಳಲ್ಲಿ ರಮಿಸಲಿಲ್ಲ

ಈಗ ಮೊದಲನೇ ಪ್ರಶ್ನೆಗೆ ಆತ್ಮಾರಾಮನಾದ ಪ್ರಿಯವ್ರತನು ಗೃಹಾದಿಗಳಲ್ಲಿ ರಮಿಸಲಿಲ್ಲವೆಂದು ಉತ್ತರಿಸುವರು.

**ಯರ್ಹಿ ವಾವ ಸ ರಾಜಪುತ್ರಃ ಪ್ರಿಯವ್ರತಃ ಪರಮಭಾಗವತೋ ನಾರದಸ್ಯ ಚರಣೋಪಸೇವಯಾಽಂಜಸಾಽವಗತ ಪರಮಾರ್ಥಸತ್ತತ್ತ್ವೋ ಬ್ರಹ್ಮಸತ್ರೇಣ ದೀಕ್ಷಿಷ್ಯಮಾಣೋಽವನಿತಲಪರಿಪಾಲನಾಯಾಮ್ನಾತಪ್ರವರಗುಣಗಣೈಕಾಂತ-ಭಾಜನತಯಾ ಸ್ವಪಿತ್ರೋಪಾಮಂತ್ರಿತೋ ಭಗವತಿ ವಾಸುದೇವ ಏವಾವ್ಯವಧಾನಸಮಾಧಿಯೋಗೇನ ಸಮಾವೇಶಿತಸಕಲಕಾರಕಕ್ರಿಯಾ-ಕಲಾಪೋ ನೈವಾಭ್ಯನಂದತ್ । ಯದಪಿ ತತ್ರ ತ್ಯಾಮ್ನಾತವ್ಯಂ ತದಧಿಕರಣ ಆತ್ಮನೋಽನ್ಯಸ್ಮಾದಸತೋ ಯದಾ ಪರಾಭವಮನ್ವೀಕ್ಷಮಾಣಃ ||೬||**

**ಯರ್ಹಿ** ಯಾವಾಗ **ರಾಜಪುತ್ರಃ ಪ್ರಿಯವ್ರತಃ** ಮನುಪುತ್ರನಾದ ಪ್ರಿಯವ್ರತನು **ಅವನಿತಲಪರಿಪಾಲನಾಯ** ಭೂಮಿಯನ್ನು ರಕ್ಷಿಸಲು **ಆಮ್ನಾತ** ವೇದಗಳಲ್ಲಿ ಹೇಳಿದ ಪ್ರವರ ಶ್ರೇಷ್ಠವಾದ **ಗುಣಗಣ** ಶೌರ್ಯ ಮುಂತಾದ ಗುಣ ಸಮೂಹಕ್ಕೆ **ಏಕಾಂತ** ನಿಯಮದಿಂದ **ಭಾಜನತಯಾ** ಆಶ್ರಯನಾದುದರಿಂದ **ಸ್ವಪಿತ್ರಾ** ತನ್ನ ತಂದೆಯಾದ ಸ್ವಾಯಂಭುವ ಮನುವಿನಿಂದ **ಉಪಾಮಂತ್ರಿತಃ** ಆಜ್ಞಾಪಿಸಲ್ಪಟ್ಟನೋ **ತದಾ** ಆಗ **ಪರಮಭಾಗವತಃ** ಮಹಾಭಗವದ್ಭಕ್ತನಾದವನು **ನಾರದಸ್ಯ** ನಾರದರ **ಚರಣೋಪಸೇವಯಾ** ಪಾದಸೇವೆಯಿಂದ **ಅಂಜಸಾ** ಚೆನ್ನಾಗಿ **ಅವಗತ** ತಿಳಿಯಲ್ಪಟ್ಟ **ಪರಮಾರ್ಥ** ತ್ರಿಕಾಲದಲ್ಲಿಯೂ ಅಬಾಧಿತವಾದ ಉತ್ತಮವಾದ **ಸತ್** ನಿರ್ದುಷ್ಟವಾದ **ತತ್ತ್ವಃ** ಅನಾರೋಪಿತ ಸ್ವರೂಪವುಳ್ಳವನು ಆದ್ದರಿಂದಲೇ **ಬ್ರಹ್ಮಸತ್ರೇಣ** ಸಂನ್ಯಾಸದಿಂದ **ದೀಕ್ಷಿಷ್ಯಮಾಣಃ** ದೀಕ್ಷೆ ಪಡೆಯುವ ಸಂನ್ಯಾಸವನ್ನು ಸ್ವೀಕರಿಸುವೆನೆಂಬ ಸಂಕಲ್ಪವುಳ್ಳವನು ಮತ್ತು **ಭಗವತಿ ವಾಸುದೇವೇ ಏವ** ಶ್ರೀಹರಿಯಲ್ಲಿಯೇ **ಅವ್ಯವಧಾನಸಮಾಧಿಯೋಗೇನ** ನಿರಂತರ ಚಿತ್ತೈಕಾಗ್ರತೆಯಿಂದ **ಸಮಾವೇಶಿತ** ಸಮರ್ಪಿತಗಳಾದ **ಸಕಲ** ಎಲ್ಲ **ಕಾರಕ** ಇಂದ್ರಿಯಗಳ **ಕ್ರಿಯಾಕಲಾಪಃ** ಜ್ಞಾನಕರ್ಮಗಳೆಂಬ ಕಾರ್ಯಸಮೂಹವುಳ್ಳವನು ಆದ್ದರಿಂದ **ಯದಪಿ** ಯದ್ಯಪಿ **ತತ್**

ರಾಜ್ಯ ಪರಿಪಾಲನೆ ಮಾಡೆಂಬ ತಂದೆಯ ವಚನವು **ಅಪ್ರತ್ಯಾಮ್ನಾತವ್ಯಂ (ಇತಿ ಜಾನಾತಿ)** ಮೀರಲಾರದಂತಹುದು ಎಂದು ತಿಳಿದವನೇ ಆದರೂ **ತದಧಿಕರಣೇ** ರಾಜ್ಯ ರಕ್ಷಣದ ಅಧಿಕಾರ ಮಾಡುವಾಗ **ಅಸತಃ** ಅಮಂಗಲವಾದ **ಅನ್ಯಸ್ಮಾತ್** ವಿಷಯಗಳ ಸಮೂಹದಿಂದ **ಆತ್ಮನಃ** ಮನಸ್ಸಿನ **ಪರಾಭವಂ** ತಿರಸ್ಕಾರವನ್ನು ಅಂದರೆ ಶ್ರೀಹರಿಯನ್ನು ಬಿಟ್ಟು ಇತರ ಪದಾರ್ಥಗಳಲ್ಲಿ ಹೋಗುವುದನ್ನು **ಅನ್ವೀಕ್ಷಮಾಣಃ** ಪುನಃ ಪುನಃ ಆಲೋಚನೆ ಮಾಡುವವನಾಗಿ **ನೈವ ಅಭ್ಯನಂದತ್** ಸಂತೋಷಿಸಲಿಲ್ಲ. ರಾಜ್ಯಭಾರ ಮಾಡಲು ಒಪ್ಪಲಿಲ್ಲವೆಂದು ಭಾವ. ಹಿರಿಯರ ಮಾತಾದರೂ ಅದು ಮೋಕ್ಷ ಮಾರ್ಗವಿರೋಧಿಯಾಗಿದ್ದರೇ ಸ್ವೀಕಾರ್ಯವಲ್ಲ. ಶಾಸ್ತ್ರಾರ್ಥವನ್ನು ಆಲೋಚಿಸಿ ಮಾಡಿದ್ದರಿಂದ ಆಜ್ಞಾ ಉಲ್ಲಂಘನ ದೋಷವಿಲ್ಲವೆಂದು ಭಾವ. ।।೬।।

## ಹಂಸವಾಹನದಲ್ಲಿ ಬ್ರಹ್ಮದೇವರ ಆಗಮನ

ಹಾಗಾದರೆ ಹಿಂದಿನ ಸ್ಕಂಧದ ಕೊನೆಯಲ್ಲಿ **ಮಹೀಂ ಭುಕ್ತ್ವಾ** (ರಾಜ್ಯವಾಳಿ) ಎಂದು ಹೇಳಿದ್ದು ಹೇಗೆ? ಎಂಬ ಶಂಕೆ ಬಂದಾಗ ಪ್ರಿಯವ್ರತನ ಸ್ವರೂಪ ಯೋಗ್ಯತೆಯನ್ನರಿತ ಬ್ರಹ್ಮದೇವರು ನಿನಗೆ ಗೃಹಸ್ಥಾಶ್ರಮವೇ ಶ್ರೀಹರಿ ಪೂಜಾರೂಪವಾಗಿದೆ. ವಿವಿಧ ಭೋಗಗಳನ್ನು ಅನುಭವಿಸಿ ನಂತರ ವಿರಕ್ತನಾಗಿ ಪರಮಹಂಸಾಶ್ರಮ ಪಡೆದು ಮುಕ್ತಿಯನ್ನು ಹೊಂದುವಿ ಎಂದು ಉಪದೇಶಿಸಿದಾಗ ಅದನ್ನು ಕೇಳಿ ಅದರಂತೆ ಭೂಮಿಯನ್ನು ಆಳಿದನು ಎಂದು ಉತ್ತರಿಸಲು ಬ್ರಹ್ಮದೇವರ ಆಗಮನವನ್ನು ಇಲ್ಲಿ ಮೊದಲಿಗೆ ಹೇಳುವರು.

**ಅಥ ಹ ಭಗವಾನಾದಿದೇವಃ ಏತಸ್ಯ ಗುಣವಿಸರ್ಗಸ್ಯ ಪರಿಬೃಂಹಣಾನು-ಧ್ಯಾನೇನ ವ್ಯವಸಿತಸಕಲಜಗದಭಿಪ್ರಾಯ ಆತ್ಮಯೋನಿರಖಿಲನಿಗಮನಿಜಜನ-ಪರಿವೇಷ್ಟಿತಃ ಸ್ವಭವನಾದವತತಾರ ।।೭।।**

**ಅಥ** ತಂದೆಯ ಮಾತನ್ನು ಉಲ್ಲಂಘಿಸಿದ ನಂತರ **ಗುಣವಿಸರ್ಗಸ್ಯ** ಸತ್ವಾದಿ ಗುಣಗಳಿಂದ ವಿವಿಧ ಸೃಷ್ಟಿಯುಳ್ಳ **ಏತಸ್ಯ** ಜಗತ್ತಿನ **ಪರಿಬೃಂಹಣಾನುಧ್ಯಾನೇನ** ಅಭಿವೃದ್ಧಿಗೆ ಅನುಕೂಲವಾದ ಆಲೋಚನೆಯಿಂದ **ವ್ಯವಸಿತಸಕಲಜಗದಭಿಪ್ರಾಯಃ** ನಿಶ್ಚಿತವಾದ ಎಲ್ಲ ಜಗತ್ತಿನ ಸೃಷ್ಟಿಯ ಪ್ರಕಾರದ ಕುರಿತಾದ ಅಭಿಪ್ರಾಯವುಳ್ಳ **ಭಗವಾನ್** ಪೂಜ್ಯರಾದ **ಆದಿದೇವಃ** ಜಗತ್ತಿಗೆ ಮೊದಲಿಗನಾದ **ಆತ್ಮಯೋನಿಃ** ಬ್ರಹ್ಮದೇವರು **ಅಖಿಲ** ಎಲ್ಲ **ನಿಗಮ** ಮೂರ್ತಿಮತ್ತಾದ ವೇದಗಳು ಮತ್ತು **ನಿಜಜನ**

ಮರೀಚಿ ಮುಂತಾದವರಿಂದ **ಪರಿವೇಷ್ಟಿತಃ** ಸುತ್ತುವರೆದವರಾಗಿ **ಸ್ವಭವನಾದವತತಾರ** ಸತ್ಯಲೋಕದಿಂದ ಇಳಿದುಬಂದರು. ।।೭।।

**ತತ್ರ ತತ್ರ ಗಗನತಲ ಉಡುಪತಿರಿವ ವಿಮಾನಾವಲಿಭಿರನುಪಥಮು-ಮರಪರಿವೃಢೈರಭಿ ಪೂಜ್ಯಮಾನಃ ಪಥಿ ಪಥಿ ಚ ವರೂಥಶಃ ಸಿದ್ಧಗಂಧರ್ವ-ಚಾರಣಮುನಿಗಣೈರುಪಗೀಯ ಮಾನೋ ಗಂಧಮಾದನದ್ರೋಣೀ-ಮವಭಾಸಯನ್ನುಪಸಸರ್ಪ ।।೮।।**

**ತತ್ರ ತತ್ರ** ಅಲ್ಲಲ್ಲಿ **ಗಗನತಲೇ** ಆಕಾಶಮಾರ್ಗದಲ್ಲಿ **ವಿಮಾನಾವಲಿಭಿಃ** ವಿಮಾನಗಳ ಸಾಲುಗಳುಳ್ಳ **ಅಮರಪರಿವೃಢೈಃ** ದೇವತಾಶ್ರೇಷ್ಠರಿಂದ **ಅನುಪಥಂ** ದಾರಿಯುದ್ದಕ್ಕೂ **ಅಭಿಪೂಜ್ಯಮಾನಃ** ಚೆನ್ನಾಗಿ ಪೂಜಿಸಲ್ಪಟ್ಟು **ಪಥಿ ಪಥಿ** ಹಾದಿಯಲ್ಲಿ **ವರೂಥಶಃ** ಗುಂಪುಗುಂಪಾಗಿ **ಸಿದ್ಧಗಂಧರ್ವಚಾರಣಮುನಿಗಣೈಃ** ಸಿದ್ಧರು ಗಂಧರ್ವರು ಚಾರಣರು ಮುನಿಗಳಿಂದ **ಉಪಗೀಯಮಾನಃ** ಸ್ತುತಿಸಲ್ಪಡುವವನಾಗಿ **ಗಂಧಮಾದನದ್ರೋಣೀಂ** ಗಂಧಮಾದನ ಪರ್ವತದ ಮಧ್ಯಪ್ರದೇಶವನ್ನು **ಉಡುಪತಿರಿವ** ಚಂದ್ರನಂತೆ **ಅವಭಾಸಯನ್** ಪ್ರಕಾಶ ಗೊಳಿಸುತ್ತ **ಉಪಸಸರ್ಪ** ಬಂದು ತಲುಪಿದರು.

ಅಲ್ಲಿಯೇ ಪ್ರಿಯವ್ರತನು ತಪಸ್ಸು ಮಾಡುತ್ತಿದ್ದನು. ಬ್ರಹ್ಮದೇವರು ಬಂದಾಗ ಅಲ್ಲಿ ಪ್ರಿಯವ್ರತನಿಗೆ ನಾರದರು ಉಪದೇಶ ಮಾಡುತ್ತಿದ್ದರು. ಮನುವೂ ಕೂಡ ಅವನನ್ನು ಕರೆದುಕೊಂಡು ಹೋಗಲು ಬಂದಿದ್ದನು.

**ತತ್ರ ಹ ವಾ ಏನಂ ದೇವರ್ಷಿಃ ಹಂಸಯಾನೇನ ಪಿತರಂ ಭಗವಂತಂ ಹಿರಣ್ಯಗರ್ಭಮುಪಲಭಮಾನಃ ಸಹಸೈವ ಸಹಪಿತಾಪುತ್ರಾಭ್ಯಾಂ ಅವಹಿತಾಂಜಲಿರುಪತಸ್ಥೇ ।।೯।।**

**ತತ್ರ** ಆ ಸಂದರ್ಭದಲ್ಲಿ **ದೇವರ್ಷಿಃ** ನಾರದರು **ಹಂಸಯಾನೇನ** ಹಂಸವಾಹನದಿಂದ (ಬರುತ್ತಿರುವ) **ಏನಂ ಪಿತರಂ** ತನ್ನ ತಂದೆಯಾದ **ಭಗವಂತಂ** ಪೂಜ್ಯರಾದ **ಹಿರಣ್ಯಗರ್ಭಂ** ಚತುರ್ಮುಖದೇವರನ್ನು **ಉಪಲಭಮಾನಃ** ನೋಡಿದವನಾಗಿ (ಶಿಷ್ಯರಿಗೆ ಶಿಕ್ಷಣಮಾಡಲು) ಕುಳಿತಿರುವವನು **ಸಹಸೈವ** ತಟ್ಟನೇ **ಪಿತಾಪುತ್ರಾಭ್ಯಾಂ** ಸ್ವಾಯಂಭುವಮನು ಮತ್ತು ಪ್ರಿಯವ್ರತರಿಂದ **ಸಹ** ಕೂಡಿಕೊಂಡು **ಅವಹಿತಾಂಜಲಿಃ** ಕೈ ಜೋಡಿಸಿ **ಉಪತಸ್ಥೇ** ಎದ್ದು ನಿಂತು ಕೊಂಡರು. ।।೯।।

## ಹ, ವಾ ಗಳ ಕೃತ್ಯ

ಇಲ್ಲಿ 'ಹ', 'ವಾ' ಮುಂತಾದ ನಿಪಾತಗಳು ಶ್ರದ್ಧಾತಿಶಯ ಹುಟ್ಟಿಸಲು ಆಸ್ವಾದನೆಗಾಗಿ ಎಂದು ತಿಳಿಯಬೇಕು.

**ಭಗವಾನಪಿ ಭಾರತ ತದುಪನೀತಾರ್ಹಣಃ ಸೂಕ್ತವಾಕ್ಯೇನಾತಿತರಾ-ಮುದಿತಗುಣ ಗಣಾವತಾರಸುವಿಜಯಃ ಪ್ರಿಯವ್ರತಮಾದಿಪೂರುಷಃ ಸದಯಹಾಸಾವಲೋಕ ಇತಿ ಹೋವಾಚ ॥೧೦॥**

**ಹೇ ಭಾರತ** ಪರೀಕ್ಷಿತನೇ **ತದುಪನೀತಾರ್ಹಣಃ** ಮನುಸಹಿತನಾದ ಪ್ರಿಯವ್ರತನಿಂದ ಮಾಡಲ್ಪಟ್ಟ ಅರ್ಘ್ಯಪಾದ್ಯಾದಿ ಪೂಜೆಗೊಂಡ **ಸೂಕ್ತವಾಕ್ಯೇನ** '' **ಹಿರಣ್ಯಗರ್ಭಃ ಸಮವರ್ತತಾಗ್ರೇ**'' ಮುಂತಾದ ಸೂಕ್ತ ವಾಕ್ಯದಿಂದ **ಅತಿತರಾಂ** ಅತಿಶಯವಾಗಿ **ಉದಿತ** ಪ್ರಕಾಶಿತವಾದ **ಗುಣಗಣಾವತಾರ** ಗುಣ ಸಮೂಹಗಳ ವಿಸ್ತಾರ ಹಾಗೂ **ಸುವಿಜಯಃ** ಶೋಭನವಾದ ವಿಜಯವುಳ್ಳ **ಸದಯಹಾಸಾವಲೋಕಃ** ದಯಾಸಹಿತವಾದ ಮಂದಹಾಸದಿಂದ ಕೂಡಿದ ದೃಷ್ಟಿಯುಳ್ಳ **ಆದಿಪೂರುಷಃ ಭಗವಾನ್ ಅಪಿ** ಬ್ರಹ್ಮದೇವರು **ತಂ ಪ್ರಿಯವ್ರತಂ** ಆ ಪ್ರಿಯವ್ರತನಿಗೆ **ಇತಿ** ಮುಂದೆ ಹೇಳುವ ರೀತಿಯಿಂದ **ಉವಾಚ ಹ** ಹೇಳಿದರು.

## ಸ್ವಯೋಗ್ಯ ಕರ್ಮದಿಂದ ಮುಕ್ತಿ

ಯಾವ ಅಧಿಕಾರಿಗಳಿಗೆ ಯಾವ ಕರ್ಮದಿಂದ ಮುಕ್ತಿಯು ದೊರೆಯುವುದೋ ಆ ಕರ್ಮವನ್ನೇ ಶ್ರೀಹರಿಯು ವಿಧಾನ ಮಾಡಿರುವನು. ಅವನಿಂದ ವಿಹಿತವಾದುದನ್ನೇ ನಾವೆಲ್ಲ ಮಾಡುವೆವು. ಆದ್ದರಿಂದ ನೀನೂ ಸಹ ನಿನ್ನ ಯೋಗ್ಯತಾನುಸಾರ ಶ್ರೀಹರಿಯಿಂದ ವಿಹಿತವಾದ ಗೃಹಸ್ಥಾಶ್ರಮದಲ್ಲಿಯೇ ಇದ್ದು ಅಲ್ಲಿ ಶ್ರೀಹರಿ ಪೂಜಾತ್ಮಕವೆಂದು ಭೋಗಗಳನ್ನು ಅನುಭವಿಸಿ ವಿರಕ್ತನಾಗಿ ಸಂನ್ಯಾಸ ಪಡೆದು ಮುಕ್ತಿ ಪಡೆಯುವಿ ಇಲ್ಲವಾದರೆ ಇಲ್ಲವೆಂದು ಹೇಳುವರು ''ನಿಬೋಧ'' ಮುಂತಾದ ಶ್ಲೋಕಗಳಿಂದ

**ಬ್ರಹ್ಮೋವಾಚ**

**ನಿಬೋಧ ತಾತೇದಮೃತಂ ಬ್ರವೀಮಿ**
**ಮಾಽಸೂಯಿತುಂ ದೇವಮರ್ಹಸ್ಯಮೇಯಮ್ ।**

**ಅಹಂ ಭವಸ್ತೇ ತತ ಏಷ ಮಹರ್ಷಿ**
**ರ್ವಹಾಮ ಸರ್ವೇ ವಿವಶಾ ಯಸ್ಯ ದಿಷ್ಟಮ್** ॥೧೧॥

**ಹೇ ತಾತ** ಎಲೋ ಮಗುವೇ! **ಋತಂ** ಶಾಸ್ತ್ರವಿಹಿತವಾದುದನ್ನು **ಬ್ರವೀಮಿ** ಹೇಳುವೆನು **ನಿಬೋಧ** ಕೇಳು **ಅಮೇಯಂ** ಅಜ್ಞೇಯನಾದ **ದೇವಂ** ಶ್ರೀಹರಿಯನ್ನು **ಅಸೂಯಿತುಂ ಮಾರ್ಹಸಿ** ಅಸೂಯೆ ಮಾಡಲು ಯೋಗ್ಯನಲ್ಲ ನಿನ್ನಂಥ ರಾಜರಿಗೆ ಗೃಹಸ್ಥಾಶ್ರಮದಿಂದಲೇ ಮುಕ್ತಿ ಎಂದು ''**ಸ್ವಧರ್ಮೋ ದುಷ್ಟದಮನಂ ಧರ್ಮಜ್ಞಾನಾನುಪಾಲನಂ**'' ಎಂದು ಶ್ರೀಹರಿ ಆಜ್ಞೆ ಮಾಡಿರುವನು. ಅವನ ಆಜ್ಞೆಯನ್ನು ಉಲ್ಲಂಘಿಸಿ ನಿವೃತ್ತಿ ಮಾರ್ಗವನ್ನು ಅಂಗೀಕರಿಸಿದರೆ ಅದನ್ನು ಹೇಳಿದ ಶ್ರೀಹರಿಯಲ್ಲಿ ದೋಷವನ್ನು ಆವಿಷ್ಕಾರ ಮಾಡಿದಂತೆ ಆಗಿ ಅಸೂಯೆ ಮಾಡಿದ ಅಪರಾಧದಿಂದ ಅಧಃಪಾತವಾಗುವುದು. ಕಾರಣ ಅಸೂಯೆಮಾಡುವುದು ಸರಿಯಲ್ಲವೆಂದು ಭಾವ. ಏಕೆ ನಮ್ಮನ್ನು ಚಿತ್ತ ವಿಕ್ಷೇಪಕರ ಆಶ್ರಮದಲ್ಲಿ ಇರಲು ಆಜ್ಞಾಪಿಸಿರುವನು ಎಂದು ದೋಷಗೊಳ್ಳಬೇಡ ಎಂದೂ ಅರ್ಥ.

**ಅಹಂ** ನಾನು **ಭವಃ** ರುದ್ರದೇವರು **ತೇ ತಾತಃ** ನಿನ್ನ ತಂದೆಯಾದ ಮನುವು **ಏಷಃ ಮಹರ್ಷಿಃ** ಈ ನಾರದನು **ಸರ್ವೇ** ಎಲ್ಲರೂ **ವಿವಶಾಃ** ಅಸ್ವತಂತ್ರರಾಗಿ ವಿಷ್ಣುವಶರಾಗಿ **ಯಸ್ಯ** ಯಾವನ **ದಿಷ್ಟಂ** ಆಜ್ಞೆಯನ್ನು **ವಹಾಮ** ಪಾಲನ ಮಾಡುವೆವು. ಸರ್ವೇಶನ ಆಜ್ಞೆಯು ಅನುಲ್ಲಂಘ್ಯವೆಂದು ಭಾವ. ॥೧೧॥

### ಭಗವಂತನ ಆಜ್ಞೆ ಉಲ್ಲಂಘಿಸಲು ಸಾಧ್ಯವೇ?

ತಪಸ್ಸು ಮುಂತಾದ ಸಾಮರ್ಥ್ಯವುಳ್ಳವರು ಅವನ ಆಜ್ಞೆ ಉಲ್ಲಂಘಿಸಬಹುದು ಎಂದರೆ ಹೇಳುವರು

**ನ ತಸ್ಯ ಕಶ್ಚಿತ್ತಪಸಾ ವಿದ್ಯಯಾ ವಾ**
**ನ ಯೋಗವೀರ್ಯೇಣ ಮನೀಷಯಾ ವಾ ।**
**ನೈವಾರ್ಥಧರ್ಮೈಃ ಪರತಃ ಸ್ವತೋ ವಾ**
**ಕೃತಂ ವಿಹಂತುಂ ತನುಭೃದ್ವಿಭೂಯಾತ್** ॥೧೨॥

**ಕಶ್ಚಿತ್ ತನುಭೃತ್** ಯಾವನೊಬ್ಬ ಜೀವನು **ತಸ್ಯ ಕೃತಂ** ಶ್ರೀಹರಿಯಿಂದ ವಿಹಿತವಾದುದನ್ನು **ವಿಹಂತುಂ** ವ್ಯತ್ಯಾಸ ಮಾಡಲು **ತಪಸಾ** ತಪಸ್ಸಿನಿಂದಾಗಲಿ

**ವಿದ್ಯಯಾ ವಾ** ಜ್ಞಾನದಿಂದಾಗಲಿ **ನ ವಿಭೂಯಾತ್** ಸಮರ್ಥನಾಗಲಾರ **ಯೋಗವೀರ್ಯೇಣ** ಪ್ರಾಣಾಪಾನಾದಿ ಯೋಗದಿಂದುಂಟಾದ ಐಶ್ವರ್ಯದಿಂದ **ಮನೀಷಯಾ ವಾ** ಬುದ್ಧಿನೈಪುಣ್ಯದಿಂದಾಗಲಿ **ನ ವಿಭೂಯಾತ್** ಸಮರ್ಥನಲ್ಲ **ಅರ್ಥಧರ್ಮೈಃ** ದುಡ್ಡಿನಿಂದಾಗಲಿ ಪುಣ್ಯದಿಂದಾಗಲಿ **ಪರತಃ** ಮತ್ತೊಬ್ಬರ ಸಹಾಯದಿಂದ **ಸ್ವತೋ ವಾ** ಯಾರ ಸಹಾಯವಿಲ್ಲದೆ ತನ್ನ ಸಾಮರ್ಥ್ಯದಿಂದಾಗಲಿ **ನ ವಿಭೂಯಾತ್** ಸಮರ್ಥನಲ್ಲವೆಂದು ಭಾವ. ॥೧೨॥

## ಎಲ್ಲರು ಭಗವಂತನ ಅಧೀನರು

ಭಗವಂತನ ಆಜ್ಞೆಯನ್ನು ಯಾರೂ ಮೀರಲಾರರು. ಏಕೆಂದರೆ ಎಲ್ಲರೂ ಅವನ ಅಧೀನರಾದ್ದರಿಂದ ಎಂಬ ಅಭಿಪ್ರಾಯದಿಂದ ಅವನ ವಶತ್ವವನ್ನು ಉಪಪಾದಿಸುವರು ಮೂರು ಶ್ಲೋಕಗಳಿಂದ

**ಭವಾಯ ನಾಶಾಯ ಚ ಕರ್ಮ ಕರ್ತುಂ**
**ಶೋಕಾಯ ಮೋಹಾಯ ಸದಾಭಯಾಯ ।**
**ಸುಖಾಯ ದುಃಖಾಯ ಚ ದೇಹಯೋಗ-**
**ಮವ್ಯಕ್ತದಿಷ್ಟಂ ಜನತಾಽಂಗ ಧತ್ತೇ ॥೧೩॥**

**ಹೇ ಅಂಗ** ಪ್ರಿಯವ್ರತನೇ! **ಜನತಾ** ಈ ಜನ ಸಮೂಹವು **ಭವಾಯ** ಜನ್ಮಕ್ಕಾಗಿ **ನಾಶಾಯ** ಮರಣಕ್ಕಾಗಿ **ಕರ್ಮ ಕರ್ತುಂ** ಕೆಲಸಗಳನ್ನು ಮಾಡಲು **ಶೋಕಾಯ** ಸಂತಾಪಕ್ಕಾಗಿ **ಮೋಹಾಯ** ಮೂರ್ಛೆಗಾಗಿ **ಅಭಯಾಯ** ಭಯಪರಿಹಾರಕ್ಕಾಗಿ **ಸುಖಾಯ** ಸುಖಕ್ಕಾಗಿ **ದುಃಖಾಯ** ದುಃಖಕ್ಕಾಗಿ **ಅವ್ಯಕ್ತದಿಷ್ಟಂ** ಶ್ರೀಹರಿಯಿಂದ, ಅವನಿಂದ ಪ್ರೇರಿತಳಾದ ಲಕ್ಷ್ಮೀದೇವಿಯಿಂದ ಹಾಗೂ ಜಡ ಪ್ರಕೃತಿಯಿಂದ ಕೊಡಲ್ಪಟ್ಟ **ದೇಹಯೋಗಂ** ತನ್ನ ಕರ್ಮಫಲ ಭೋಗಕ್ಕಾಗಿ ನಿರ್ಮಿಸಿದ ದೇಹ ಸಂಬಂಧವನ್ನು **ಸದಾ ಧತ್ತೇ** ಯಾವಾಗಲೂ ಪಡೆಯುವನು. ॥೧೩॥

## ಕರ್ಮ ಮಾಡುವುದು ಶ್ರೀಹರಿ ಅಧೀನ

ಕರ್ಮ ಮಾಡುವುದೂ ಅವನ ಅಧೀನವಾಗಿಯೇ ಎಂದು ಹೇಳುವರು.

**ಯದ್ವಾಚಿ ತಂತ್ಯಾಂ ಗುಣಕರ್ಮನಾಮಭಿಃ**
**ಸ್ವದಾಮಭಿರ್ವತ್ಸ ವಯಂ ಸುಯೋಜಿತಾಃ ।**

**ಸರ್ವೇ ವಹಾಮೋ ಬಲಿಮೀಶ್ವರಾಯ**
**ಪ್ರೋತಾ ನಸೀವ ದ್ವಿಪದೇ ಚತುಷ್ಪದಃ** ॥೧೪॥

**ಹೇ ವತ್ಸ** ಪ್ರಿಯವ್ರತನೇ! **ನಸಿ ಪ್ರೋತಾಃ** ಮೂಗುದಾರ ಹಾಗಿದ **ಚತುಷ್ಪದಃ** ಎತ್ತುಗಳು **ದ್ವಿಪದೇ** ಮನುಷ್ಯರೂಪವಾದ ತನ್ನ ಒಡೆಯನಿಗೆ **ಇವ** ಮೂಟೆಗಳನ್ನು ಹೊರುವಂತೆ **ಯದ್ವಾಚಿ ತಂತ್ಯಾಂ** ಯಾವ ಶ್ರೀಹರಿಯ ವಾಕ್ಯವೆನಿಸುವ ವೇದಗಳೆಂಬ ದೊಡ್ಡ ಹಗ್ಗದಲ್ಲಿ **ಗುಣಕರ್ಮನಾಮಭಿಃ** ಗುಣ ಕರ್ಮಗಳಿಂದ ಬ್ರಾಹ್ಮಣ ಕ್ಷತ್ರಿಯ ಮುಂತಾದ ನಾಮಗಳೆಂಬ **ಸ್ವದಾಮಭಿಃ** ತಮ್ಮನ್ನು ಕಟ್ಟುವ ಚಿಕ್ಕ ಹಗ್ಗಗಳಿಂದ **ಸುಯೋಜಿತಾಃ** ಚೆನ್ನಾಗಿ ಕಟ್ಟಲ್ಪಟ್ಟ **ವಯಂ ಸರ್ವೇ** ನಾವೆಲ್ಲರೂ **ಈಶ್ವರಾಯ** ನಮ್ಮ ಸ್ವಾಮಿಗೆ **ಬಲಿಂ ವಹಾಮಃ** ಪೂಜಾಸಾಮಗ್ರಿಗಳನ್ನು ಹೊರುವೆವು. ವೇದದಲ್ಲಿ ಶ್ರೀಹರಿಯು ವಿಧಿಸಿದ ಸ್ವಯೋಗ್ಯವಾದ ಕರ್ಮವನ್ನು ಅವನ ಪೂಜಾರೂಪವಾಗಿ ಮಾಡುವೆವು ಎಂದು ಭಾವ.

**ಅರ್ಥಾಂತರ**

**ಗುಣಕರ್ಮನಾಮಭಿಃ** ಎಂಬ ಪದಕ್ಕೆ 'ಗುಣಕರ್ಮ ನಿಮಿತ್ತ ನಾನಾ ಪ್ರಾಕೃತ ನಾಮಗಳಿಂದ' ಎಂದು ಹೀಗೂ ಅರ್ಥ ಮಾಡಬಹುದು. ॥೧೪॥

### ಕರ್ಮಫಲ ಭೋಗವೂ ಶ್ರೀಹರಿಯ ಅಧೀನ

ಕರ್ಮಫಲ ಭೋಗದಲ್ಲಿಯೂ ಶ್ರೀಹರಿಯ ಅಧೀನತೆ ತಿಳಿಸುವರು

**ಈಶಾವಸೃಷ್ಟಂ ಹ್ಯವರುಂಧ್ಮಹೇಽಂಗ**
**ದುಃಖಂ ಸುಖಂ ವಾ ಗುಣಕರ್ಮಸಂಗಾತ್ ।**
**ಆಸ್ಥಾಯ ತತ್ತದ್ ಯದಯುಂಕ್ತನಾಥ**
**ಚಕ್ಷುಷ್ಮತಾಽಂಧಾ ಇವ ನೀಯಮಾನಾಃ** ॥೧೫॥

**ಹೇ ಅಂಗ** ಪ್ರಿಯವ್ರತನೇ! **ಚಕ್ಷುಷ್ಮತಾ** ಕಣ್ಣುಳ್ಳವನಿಂದ **ನೀಯಮಾನಾಃ** ಕರೆದೊಯ್ಯಲ್ಪಡುವ **ಅಂಧಾಃ ಇವ** ಕುರಡರು ಅವನು ತೋರಿಸಿದ ಮಾರ್ಗದಿಂದ ಗ್ರಾಮವನ್ನು ತಲುಪಿ ಅವನಿತ್ತದ್ದನ್ನು ತಿನ್ನುವಂತೆ **ಗುಣಕರ್ಮಸಂಗಾತ್** ಜನ್ಮಾಂತರದಲ್ಲಿ (ಪೂರ್ವದಲ್ಲಿ) ಮಾಡಿದ ಪ್ರಯತ್ನ, ಕರ್ಮಗಳ ಸಂಬಂಧದಿಂದ **ನಾಥಃ** ಶ್ರೀಹರಿಯು **ಯತ್** ಯಾವುದನ್ನು ಅಂದರೆ ಮಾನುಷಶರೀರವನ್ನು ಅಥವಾ ಪಶುಪಕ್ಷ್ಯಾದಿಗಳ

**ವಿದ್ಯಯಾ ವಾ** ಜ್ಞಾನದಿಂದಾಗಲಿ **ನ ವಿಭೂಯಾತ್** ಸಮರ್ಥನಾಗಲಾರ **ಯೋಗವೀರ್ಯೇಣ** ಪ್ರಾಣಾಪಾನಾದಿ ಯೋಗದಿಂದುಂಟಾದ ಐಶ್ವರ್ಯದಿಂದ **ಮನೀಷಯಾ ವಾ** ಬುದ್ಧಿನೈಪುಣ್ಯದಿಂದಾಗಲಿ **ನ ವಿಭೂಯಾತ್** ಸಮರ್ಥನಲ್ಲ **ಅರ್ಥಧರ್ಮೈಃ** ದುಡ್ಡಿನಿಂದಾಗಲಿ ಪುಣ್ಯದಿಂದಾಗಲಿ **ಪರತಃ** ಮತ್ತೊಬ್ಬರ ಸಹಾಯದಿಂದ **ಸ್ವತೋ ವಾ** ಯಾರ ಸಹಾಯವಿಲ್ಲದೆ ತನ್ನ ಸಾಮರ್ಥ್ಯದಿಂದಾಗಲಿ **ನ ವಿಭೂಯಾತ್** ಸಮರ್ಥನಲ್ಲವೆಂದು ಭಾವ. ।।೧೨।।

## ಎಲ್ಲರು ಭಗವಂತನ ಅಧೀನರು

ಭಗವಂತನ ಆಜ್ಞೆಯನ್ನು ಯಾರೂ ಮೀರಲಾರರು. ಏಕೆಂದರೆ ಎಲ್ಲರೂ ಅವನ ಅಧೀನರಾದ್ದರಿಂದ ಎಂಬ ಅಭಿಪ್ರಾಯದಿಂದ ಅವನ ವಶತ್ವವನ್ನು ಉಪಪಾದಿಸುವರು ಮೂರು ಶ್ಲೋಕಗಳಿಂದ

**ಭವಾಯ ನಾಶಾಯ ಚ ಕರ್ಮ ಕರ್ತುಂ**
**ಶೋಕಾಯ ಮೋಹಾಯ ಸದಾಭಯಾಯ ।**
**ಸುಖಾಯ ದುಃಖಾಯ ಚ ದೇಹಯೋಗ-**
**ಮವ್ಯಕ್ತದಿಷ್ಟಂ ಜನತಾಽಂಗ ಧತ್ತೇ ।।೧೩।।**

**ಹೇ ಅಂಗ** ಪ್ರಿಯವ್ರತನೇ! **ಜನತಾ** ಈ ಜನ ಸಮೂಹವು **ಭವಾಯ** ಜನ್ಮಕ್ಕಾಗಿ **ನಾಶಾಯ** ಮರಣಕ್ಕಾಗಿ **ಕರ್ಮ ಕರ್ತುಂ** ಕೆಲಸಗಳನ್ನು ಮಾಡಲು **ಶೋಕಾಯ** ಸಂತಾಪಕ್ಕಾಗಿ **ಮೋಹಾಯ** ಮೂರ್ಛೆಗಾಗಿ **ಅಭಯಾಯ** ಭಯಪರಿಹಾರಕ್ಕಾಗಿ **ಸುಖಾಯ** ಸುಖಕ್ಕಾಗಿ **ದುಃಖಾಯ** ದುಃಖಕ್ಕಾಗಿ **ಅವ್ಯಕ್ತದಿಷ್ಟಂ** ಶ್ರೀಹರಿಯಿಂದ, ಅವನಿಂದ ಪ್ರೇರಿತಳಾದ ಲಕ್ಷ್ಮೀದೇವಿಯಿಂದ ಹಾಗೂ ಜಡ ಪ್ರಕೃತಿಯಿಂದ ಕೊಡಲ್ಪಟ್ಟ **ದೇಹಯೋಗಂ** ತನ್ನ ಕರ್ಮಫಲ ಭೋಗಕ್ಕಾಗಿ ನಿರ್ಮಿಸಿದ ದೇಹ ಸಂಬಂಧವನ್ನು **ಸದಾ ಧತ್ತೇ** ಯಾವಾಗಲೂ ಪಡೆಯುವನು. ।।೧೩।।

## ಕರ್ಮ ಮಾಡುವುದು ಶ್ರೀಹರಿ ಅಧೀನ

ಕರ್ಮ ಮಾಡುವುದೂ ಅವನ ಅಧೀನವಾಗಿಯೇ ಎಂದು ಹೇಳುವರು.

**ಯದ್ವಾಚಿ ತಂತ್ಯಾಂ ಗುಣಕರ್ಮನಾಮಭಿಃ**
**ಸ್ವದಾಮಭಿರ್ವತ್ಸ ವಯಂ ಸುಯೋಜಿತಾಃ ।**




**ಸರ್ವೇ ವಹಾಮೋ ಬಲಿಮೀಶ್ವರಾಯ**
**ಪ್ರೋತಾ ನಸೀವ ದ್ವಿಪದೇ ಚತುಷ್ಪದಃ ॥೧೪॥**

**ಹೇ ವತ್ಸ** ಪ್ರಿಯವ್ರತನೇ! **ನಸಿ ಪ್ರೋತಾಃ** ಮೂಗುದಾರ ಹಾಗಿದ **ಚತುಷ್ಪದಃ** ಎತ್ತುಗಳು **ದ್ವಿಪದೇ** ಮನುಷ್ಯರೂಪವಾದ ತನ್ನ ಒಡೆಯನಿಗೆ **ಇವ** ಮೂಟೆಗಳನ್ನು ಹೊರುವಂತೆ **ಯದ್ವಾಚಿ ತಂತ್ಯಾಂ** ಯಾವ ಶ್ರೀಹರಿಯ ವಾಕ್ಯವೆನಿಸುವ ವೇದಗಳೆಂಬ ದೊಡ್ಡ ಹಗ್ಗದಲ್ಲಿ **ಗುಣಕರ್ಮನಾಮಭಿಃ** ಗುಣ ಕರ್ಮಗಳಿಂದ ಬ್ರಾಹ್ಮಣ ಕ್ಷತ್ರಿಯ ಮುಂತಾದ ನಾಮಗಳೆಂಬ **ಸ್ವದಾಮಭಿಃ** ತಮ್ಮನ್ನು ಕಟ್ಟುವ ಚಿಕ್ಕ ಹಗ್ಗಗಳಿಂದ **ಸುಯೋಜಿತಾಃ** ಚೆನ್ನಾಗಿ ಕಟ್ಟಲ್ಪಟ್ಟ **ವಯಂ ಸರ್ವೇ** ನಾವೆಲ್ಲರೂ **ಈಶ್ವರಾಯ** ನಮ್ಮ ಸ್ವಾಮಿಗೆ **ಬಲಿಂ ವಹಾಮಃ** ಪೂಜಾಸಾಮಗ್ರಿಗಳನ್ನು ಹೊರುವೆವು. ವೇದದಲ್ಲಿ ಶ್ರೀಹರಿಯು ವಿಧಿಸಿದ ಸ್ವಯೋಗ್ಯವಾದ ಕರ್ಮವನ್ನು ಅವನ ಪೂಜಾರೂಪವಾಗಿ ಮಾಡುವೆವು ಎಂದು ಭಾವ.

**ಅರ್ಥಾಂತರ**

**ಗುಣಕರ್ಮನಾಮಭಿಃ** ಎಂಬ ಪದಕ್ಕೆ 'ಗುಣಕರ್ಮ ನಿಮಿತ್ತ ನಾನಾ ಪ್ರಾಕೃತ ನಾಮಗಳಿಂದ' ಎಂದು ಹೀಗೂ ಅರ್ಥ ಮಾಡಬಹುದು. ॥೧೪॥

### ಕರ್ಮಫಲ ಭೋಗವೂ ಶ್ರೀಹರಿಯ ಅಧೀನ

ಕರ್ಮಫಲ ಭೋಗದಲ್ಲಿಯೂ ಶ್ರೀಹರಿಯ ಅಧೀನತೆ ತಿಳಿಸುವರು

**ಈಶಾವಸೃಷ್ಟಂ ಹ್ಯವರುಂಧ್ಮಹೇಽಂಗ**
**ದುಃಖಂ ಸುಖಂ ವಾ ಗುಣಕರ್ಮಸಂಗಾತ್ ।**
**ಆಸ್ಥಾಯ ತತ್ತದ್ ಯದಯುಂಕ್ತನಾಥ**
**ಚಕ್ಷುಷ್ಮತಾಽಂಧಾ ಇವ ನೀಯಮಾನಾಃ ॥೧೫॥**

**ಹೇ ಅಂಗ** ಪ್ರಿಯವ್ರತನೇ! **ಚಕ್ಷುಷ್ಮತಾ** ಕಣ್ಣುಳ್ಳವನಿಂದ **ನೀಯಮಾನಾಃ** ಕರೆದೊಯ್ಯಲ್ಪಡುವ **ಅಂಧಾಃ ಇವ** ಕುರಡರು ಅವನು ತೋರಿಸಿದ ಮಾರ್ಗದಿಂದ ಗ್ರಾಮವನ್ನು ತಲುಪಿ ಅವನಿತ್ತದ್ದನ್ನು ತಿನ್ನುವಂತೆ **ಗುಣಕರ್ಮಸಂಗಾತ್** ಜನ್ಮಾಂತರದಲ್ಲಿ (ಪೂರ್ವದಲ್ಲಿ) ಮಾಡಿದ ಪ್ರಯತ್ನ, ಕರ್ಮಗಳ ಸಂಬಂಧದಿಂದ **ನಾಥಃ** ಶ್ರೀಹರಿಯು **ಯತ್** ಯಾವುದನ್ನು ಅಂದರೆ ಮಾನುಷಶರೀರವನ್ನು ಅಥವಾ ಪಶುಪಕ್ಷ್ಯಾದಿಗಳ

**ವಿದ್ಯಯಾ ವಾ** ಜ್ಞಾನದಿಂದಾಗಲಿ **ನ ವಿಭೂಯಾತ್** ಸಮರ್ಥನಾಗಲಾರ **ಯೋಗವೀರ್ಯೇಣ** ಪ್ರಾಣಾಪಾನಾದಿ ಯೋಗದಿಂದುಂಟಾದ ಐಶ್ವರ್ಯದಿಂದ **ಮನೀಷಯಾ ವಾ** ಬುದ್ಧಿನೈಪುಣ್ಯದಿಂದಾಗಲಿ **ನ ವಿಭೂಯಾತ್** ಸಮರ್ಥನಲ್ಲ **ಅರ್ಥಧರ್ಮೈಃ** ದುಡ್ಡಿನಿಂದಾಗಲಿ ಪುಣ್ಯದಿಂದಾಗಲಿ **ಪರತಃ** ಮತ್ತೊಬ್ಬರ ಸಹಾಯದಿಂದ **ಸ್ವತೋ ವಾ** ಯಾರ ಸಹಾಯವಿಲ್ಲದೆ ತನ್ನ ಸಾಮರ್ಥ್ಯದಿಂದಾಗಲಿ **ನ ವಿಭೂಯಾತ್** ಸಮರ್ಥನಲ್ಲವೆಂದು ಭಾವ. ।।೧೨।।

## ಎಲ್ಲರು ಭಗವಂತನ ಅಧೀನರು

ಭಗವಂತನ ಆಜ್ಞೆಯನ್ನು ಯಾರೂ ಮೀರಲಾರರು. ಏಕೆಂದರೆ ಎಲ್ಲರೂ ಅವನ ಅಧೀನರಾದ್ದರಿಂದ ಎಂಬ ಅಭಿಪ್ರಾಯದಿಂದ ಅವನ ವಶತ್ವವನ್ನು ಉಪಪಾದಿಸುವರು ಮೂರು ಶ್ಲೋಕಗಳಿಂದ

**ಭವಾಯ ನಾಶಾಯ ಚ ಕರ್ಮ ಕರ್ತುಂ**
**ಶೋಕಾಯ ಮೋಹಾಯ ಸದಾಭಯಾಯ ।**
**ಸುಖಾಯ ದುಃಖಾಯ ಚ ದೇಹಯೋಗ-**
**ಮವ್ಯಕ್ತದಿಷ್ಟಂ ಜನತಾಽಂಗ ಧತ್ತೇ ।।೧೩।।**

**ಹೇ ಅಂಗ** ಪ್ರಿಯವ್ರತನೇ! **ಜನತಾ** ಈ ಜನ ಸಮೂಹವು **ಭವಾಯ** ಜನ್ಮಕ್ಕಾಗಿ **ನಾಶಾಯ** ಮರಣಕ್ಕಾಗಿ **ಕರ್ಮ ಕರ್ತುಂ** ಕೆಲಸಗಳನ್ನು ಮಾಡಲು **ಶೋಕಾಯ** ಸಂತಾಪಕ್ಕಾಗಿ **ಮೋಹಾಯ** ಮೂರ್ಛೆಗಾಗಿ **ಅಭಯಾಯ** ಭಯಪರಿಹಾರಕ್ಕಾಗಿ **ಸುಖಾಯ** ಸುಖಕ್ಕಾಗಿ **ದುಃಖಾಯ** ದುಃಖಕ್ಕಾಗಿ **ಅವ್ಯಕ್ತದಿಷ್ಟಂ** ಶ್ರೀಹರಿಯಿಂದ, ಅವನಿಂದ ಪ್ರೇರಿತಳಾದ ಲಕ್ಷ್ಮೀದೇವಿಯಿಂದ ಹಾಗೂ ಜಡ ಪ್ರಕೃತಿಯಿಂದ ಕೊಡಲ್ಪಟ್ಟ **ದೇಹಯೋಗಂ** ತನ್ನ ಕರ್ಮಫಲ ಭೋಗಕ್ಕಾಗಿ ನಿರ್ಮಿಸಿದ ದೇಹ ಸಂಬಂಧವನ್ನು **ಸದಾ ಧತ್ತೇ** ಯಾವಾಗಲೂ ಪಡೆಯುವನು. ।।೧೩।।

## ಕರ್ಮ ಮಾಡುವುದು ಶ್ರೀಹರಿ ಅಧೀನ

ಕರ್ಮ ಮಾಡುವುದೂ ಅವನ ಅಧೀನವಾಗಿಯೇ ಎಂದು ಹೇಳುವರು.

**ಯದ್ವಾಚಿ ತಂತ್ಯಾಂ ಗುಣಕರ್ಮನಾಮಭಿಃ**
**ಸ್ವದಾಮಭಿರ್ವತ್ಸ ವಯಂ ಸುಯೋಜಿತಾಃ ।**

 

**ಸರ್ವೇ ವಹಾಮೋ ಬಲಿಮೀಶ್ವರಾಯ**
**ಪ್ರೋತಾ ನಸೀವ ದ್ವಿಪದೇ ಚತುಷ್ಪದಃ** ॥೧೪॥

**ಹೇ ವತ್ಸ** ಪ್ರಿಯವ್ರತನೇ! **ನಸಿ ಪ್ರೋತಾಃ** ಮೂಗುದಾರ ಹಾಗಿದ **ಚತುಷ್ಪದಃ** ಎತ್ತುಗಳು **ದ್ವಿಪದೇ** ಮನುಷ್ಯರೂಪವಾದ ತನ್ನ ಒಡೆಯನಿಗೆ **ಇವ** ಮೂಟೆಗಳನ್ನು ಹೊರುವಂತೆ **ಯದ್ವಾಚಿ ತಂತ್ಯಾಂ** ಯಾವ ಶ್ರೀಹರಿಯ ವಾಕ್ಯವೆನಿಸುವ ವೇದಗಳೆಂಬ ದೊಡ್ಡ ಹಗ್ಗದಲ್ಲಿ **ಗುಣಕರ್ಮನಾಮಭಿಃ** ಗುಣ ಕರ್ಮಗಳಿಂದ ಬ್ರಾಹ್ಮಣ ಕ್ಷತ್ರಿಯ ಮುಂತಾದ ನಾಮಗಳೆಂಬ **ಸ್ವದಾಮಭಿಃ** ತಮ್ಮನ್ನು ಕಟ್ಟುವ ಚಿಕ್ಕ ಹಗ್ಗಗಳಿಂದ **ಸುಯೋಜಿತಾಃ** ಚೆನ್ನಾಗಿ ಕಟ್ಟಲ್ಪಟ್ಟ **ವಯಂ ಸರ್ವೇ** ನಾವೆಲ್ಲರೂ **ಈಶ್ವರಾಯ** ನಮ್ಮ ಸ್ವಾಮಿಗೆ **ಬಲಿಂ ವಹಾಮಃ** ಪೂಜಾಸಾಮಗ್ರಿಗಳನ್ನು ಹೊರುವೆವು. ವೇದದಲ್ಲಿ ಶ್ರೀಹರಿಯು ವಿಧಿಸಿದ ಸ್ವಯೋಗ್ಯವಾದ ಕರ್ಮವನ್ನು ಅವನ ಪೂಜಾರೂಪವಾಗಿ ಮಾಡುವೆವು ಎಂದು ಭಾವ.

**ಅರ್ಥಾಂತರ**

**ಗುಣಕರ್ಮನಾಮಭಿಃ** ಎಂಬ ಪದಕ್ಕೆ 'ಗುಣಕರ್ಮ ನಿಮಿತ್ತ ನಾನಾ ಪ್ರಾಕೃತ ನಾಮಗಳಿಂದ' ಎಂದು ಹೀಗೂ ಅರ್ಥ ಮಾಡಬಹುದು. ॥೧೪॥

## ಕರ್ಮಫಲ ಭೋಗವೂ ಶ್ರೀಹರಿಯ ಅಧೀನ

ಕರ್ಮಫಲ ಭೋಗದಲ್ಲಿಯೂ ಶ್ರೀಹರಿಯ ಅಧೀನತೆ ತಿಳಿಸುವರು

**ಈಶಾವಸೃಷ್ಟಂ ಹ್ಯವರುಂಧ್ಮಹೇಽಂಗ**
**ದುಃಖಂ ಸುಖಂ ವಾ ಗುಣಕರ್ಮಸಂಗಾತ್ ।**
**ಆಸ್ಥಾಯ ತತ್ತದ್ ಯದಯುಂಕ್ತನಾಥ**
**ಚಕ್ಷುಷ್ಮತಾಽಂಧಾ ಇವ ನೀಯಮಾನಾಃ** ॥೧೫॥

**ಹೇ ಅಂಗ** ಪ್ರಿಯವ್ರತನೇ! **ಚಕ್ಷುಷ್ಮತಾ** ಕಣ್ಣುಳ್ಳವನಿಂದ **ನೀಯಮಾನಾಃ** ಕರೆದೊಯ್ಯಲ್ಪಡುವ **ಅಂಧಾಃ ಇವ** ಕುರಡರು ಅವನು ತೋರಿಸಿದ ಮಾರ್ಗದಿಂದ ಗ್ರಾಮವನ್ನು ತಲುಪಿ ಅವನಿತ್ತದ್ದನ್ನು ತಿನ್ನುವಂತೆ **ಗುಣಕರ್ಮಸಂಗಾತ್** ಜನ್ಮಾಂತರದಲ್ಲಿ (ಪೂರ್ವದಲ್ಲಿ) ಮಾಡಿದ ಪ್ರಯತ್ನ, ಕರ್ಮಗಳ ಸಂಬಂಧದಿಂದ **ನಾಥಃ** ಶ್ರೀಹರಿಯು **ಯತ್** ಯಾವುದನ್ನು ಅಂದರೆ ಮಾನುಷಶರೀರವನ್ನು ಅಥವಾ ಪಶುಪಕ್ಷ್ಯಾದಿಗಳ

ಶರೀರವನ್ನು **ಅಯುಂಕ್ತ** ಯೋಜಿಸುವನೋ **ತತ್ ತತ್** ಅದನ್ನು **ಆಸ್ಥಾಯ** ಸ್ವೀಕರಿಸಿ **ಈಶಾವಸೃಷ್ಟಂ** ಶ್ರೀಹರಿಯು ಕೊಟ್ಟ **ದುಃಖಂ ಸುಖಂ ವಾ** ದುಃಖವನ್ನು, ಸುಖವನ್ನೂ **ಅವರುಂಧ್ಮಹೇ** ಸ್ವೀಕರಿಸುವೆವು. ।।೧೫।।

ಇದೆಲ್ಲವೂ ಅಜ್ಞಾನಿಗಳಿಗೆ ಮಾತ್ರ ಜೀವನ್ಮುಕ್ತರಿಗಲ್ಲ ಎಂದರೆ ಹೇಳುವರು.

**ಮುಕ್ತೋಽಪಿ ತಾವದ್ಬಿಭೃಯಾತ್ ಸ್ವದೇಹ-**
**ಮಾರಬ್ಧಮಶ್ನನ್ನಭಿಮಾನಶೂನ್ಯಃ।**
**ಯಥೋಪಯಾತಂ ಪ್ರತಿಯಾತನಿದ್ರಃ**
**ಕಿಂತ್ವನ್ಯದೇಹಾಯ ಗುಣಾನ್ನ ವೃಂಕ್ತೇ** **।।೧೬।।**

**ಮುಕ್ತೋಽಪಿ** ಅಪರೋಕ್ಷಜ್ಞಾನದಿಂದ ಕರ್ಮಕ್ಷಯ ರೂಪವಾದ ಮುಕ್ತಿಯನ್ನು ಪಡೆದವನೂ ಸಹ **ಯಥೋಪಯಾತಂ** ದೈವದಿಂದ ಬಂದ **ಸ್ವದೇಹಂ** ತನ್ನ ದೇಹವನ್ನು **ಯಾವದಾರಬ್ಧಂ ತಾವತ್** ಪ್ರಾರಬ್ಧ ಕರ್ಮ ಇರುವವರೆಗೆ **ಪ್ರತಿಯಾತನಿದ್ರಃ** ಅಜ್ಞಾನವನ್ನು ಕಳೆದುಕೊಂಡವನಾದ್ದರಿಂದ **ಅಭಿಮಾನಶೂನ್ಯಃ** ದೇಹಗೇಹಾದಿಗಳಲ್ಲಿ ಅಭಿಮಾನರಹಿತನಾಗಿ **ಆರಬ್ಧಂ** ಪ್ರಾರಬ್ಧ ಕರ್ಮಫಲವಾದ ಸುಖಾದಿಗಳನ್ನು **ಅಶ್ನನ್** ಅನುಭವಿಸುತ್ತ **ಬಿಭೃಯಾತ್** ಧರಿಸಬೇಕು. **ಕಿಂತು** ಆದರೆ **ಅನ್ಯದೇಹಾಯ** ಅಪ್ರಾರಬ್ಧನಿಮಿತ್ತಕ ದೇಹ ಬರಲು **ಗುಣಾನ್** ಸತ್ವಾದಿಗಳನ್ನು **ನ ವೃಂಕ್ತೇ** ಹೊಂದುವುದಿಲ್ಲ. ಇದೇ ಅಜ್ಞಾನಿಗೂ ಜ್ಞಾನಿಗೂ ಇರುವ ವಿಶೇಷ. ಆದರೆ ಕರ್ಮಾನುಸಾರ ಶ್ರೀಹರಿ ಕೊಟ್ಟ ದೇಹಗಳಲ್ಲಿ ಕರ್ಮಫಲಭೋಗ ಇಬ್ಬರಿಗೂ ಸಮಾನವೇ ಎಂದೂ ಭಾವ. ಕಾರಣ ರಾಜ್ಯಪಾಲನಾದಿ ಕರ್ಮವನ್ನು ಮಾಡಬೇಕು. ।।೧೬।।

## ಜಿತೇಂದ್ರಿಯನಿಗೆ ಗೃಹಸ್ಥಾಶ್ರಮ ಬಂಧಕವಲ್ಲ

ಗೃಹಸ್ಥಾಶ್ರಮದಲ್ಲಿದ್ದರೆ ಭಯ ತಪ್ಪಿದ್ದಲ್ಲ ಕಾರಣ ನಾನು ಅದನ್ನು ಹೇಗೆ ಸ್ವೀಕರಿಸಲಿ ಎಂದರೆ ಹೇಳುವರು.

**ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾ-**
**ದ್ಯತೋ ವಸಂತೇ ಸಹ ಷಟ್ ಸಪತ್ನಾಃ ।।**
**ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ**
**ಗೃಹಾಶ್ರಮಃ ಕಿನ್ನು ಕರೋತ್ಯವದ್ಯಂ** **।।೧೭।।**

**ಪ್ರಮತ್ತಸ್ಯ** ಇಂದ್ರಿಯ ಜಯ ಇಲ್ಲದವನಿಗೆ **ವನೇಷು ಅಪಿ** ನಿರ್ಜನ ಪ್ರದೇಶಗಳಲ್ಲಿ ವಾನಪ್ರಸ್ಥಾದ್ಯಾಶ್ರಮಗಳಲ್ಲಿಯೂ **ಯತಃ** ಯಾವ ಕಾರಣ **ಷಟ್** ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಆರು **ಸಪತ್ನಾಃ** ಶತ್ರುಗಳು **ಸಹ ವಸಂತೇ** ಜೊತೆಗೇ ಇರುವರೋ ಆದ್ದರಿಂದ **ಭಯಂ ಸ್ಯಾತ್** ಪಾಪದಿಂದ ನರಕ ಸಂಸಾರಾದಿ ಪ್ರಾಪ್ತಿರೂಪ ಭಯವು ಆಗೇ ಆಗುವುದು.

ವಾನಪ್ರಸ್ಥಾದ್ಯಾಶ್ರಮಗಳಲ್ಲಿ ಇಂದ್ರಿಯಜಯವಿರುವುದರಿಂದ ಭಗವತ್ ಜ್ಞಾನಿಗಳಿಗೆ, ಪರಮಾತ್ಮನಲ್ಲಿ ರತಿಯುಳ್ಳವರಿಗೆ ಕಾಮಾದಿಗಳು ಜನಿಸದಿರುವಾಗ ಭಯವು ಬರಲಾರದು ಎಂದರೆ ಹಾಗಾದರೆ ಭಯವಿರುವುದು ಇಂದ್ರಿಯಜಯ-ವಿಲ್ಲದಿದ್ದಾಗ ಮಾತ್ರ. ಇಂದ್ರಿಯಜಯವುಳ್ಳ ಗೃಹಸ್ಥಾಶ್ರಮಿಗೂ ಸಹ ಭಯವಾಗಲಾರದು ಎಂದು ಹೇಳುವರು **ಜಿತೇಂದ್ರಿಯಸ್ಯ** ಇಂದ್ರಿಯ ಜಯವುಳ್ಳ **ಆತ್ಮರತೇಃ** ಭಗವಂತನಲ್ಲಿ ಆಸಕ್ತನಾದ **ಬುಧಸ್ಯ** ಜ್ಞಾನಿಗೆ **ಗೃಹಾಶ್ರಮಃ** ಗೃಹಸ್ಥಾಶ್ರಮವು **ಕಿನ್ನು ಅವದ್ಯಂ ಕರೋತಿ** ಯಾವ ಭಯವನ್ನು ಉಂಟುಮಾಡುವುದು? ಏನನ್ನೂ ಮಾಡಲಾರದು. ಜಿತೇಂದ್ರಿಯತ್ವಾದಿಗಳು ಗೃಹಸ್ಥಾಶ್ರಮಿಗೂ ಇದ್ದುದಾದರೆ ಕಾಮಾದಿಗಳು ಉಂಟಾಗದೆ ಆ ಭಯವು ಅವನಿಗೂ ಆಗಲಾರದು ಎಂದು ಭಾವ. ।।೧೭।।

ಇಂದ್ರಿಯ ಜಯದಿಂದಲೇ ಕಾಮಾದಿ ಶತ್ರುಗಳ ಜಯ. ಆದರಿಂದ ಭಯಾಭಾವ ಎಂಬುದನ್ನು ಉಪಪಾದಿಸುವರು

**ಯಃ ಷಟ್‌ಸಪತ್ನಾನ್ವಿಜಿಗೀಷಮಾಣೋ**
**ಗೃಹೇಷು ನಿರ್ವಿಶ್ಯ ಯತೇತ ಪೂರ್ವಂ ।**
**ಯುಧ್ಯೇತ ದುರ್ಗಾಶ್ರಿತ ಊರ್ಜಿತಾರೀನ್**
**ಕ್ಷೀಣೇಷು ಕಾಮಂ ವಿಚರೇದ್ವಿಪಶ್ಚಿತ್** ।।೧೮ ।।

**ಯಃ** ಯಾವನು **ಷಟ್‌ಸಪತ್ನಾನ್** ಕಾಮಾದಿ ಆರು ಶತ್ರುಗಳನ್ನು **ವಿಜಿಗೀಷಮಾಣಃ** ಗೆಲ್ಲಲಿಚ್ಛಿಸುವನು **ಗೃಹೇಷು** ಇಂದ್ರಿಯ ವಿಷಯಗಳಲ್ಲಿ **ಪೂರ್ವಂ ನಿರ್ವಿಶ್ಯ** ಮೊದಲು ಅಲಂಬುದ್ಧಿಯನ್ನು ಪಡೆದು ಮನಸ್ಸು ಬುದ್ಧಿ ಮುಂತಾದ ಇಂದ್ರಿಯ ಜಯ ಸಂಪಾದಿಸಿ **ಯತೇತ** ಕಾಮಾದಿಗಳನ್ನು ಜಯಿಸಲು, ಹರಿಭಕ್ತಿಗಾಗಿಯೂ ಪ್ರಯತ್ನಿಸಬೇಕು. ''**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ**

**ಭರತರ್ಷಭ । ಪಾಪ್ಮಾನಂ ಪ್ರಜಹಿ ಹ್ಯೇನಂ**'' ಎಂದು ಈ ವಿಷಯದಲ್ಲಿ ಪ್ರಮಾಣ ವಚನವಿದೆ. **ದುರ್ಗಾಶ್ರಿತಃ** ಇಂದ್ರಿಯ ಸಾಧ್ಯವಾದ ಭಗವದ್ಭಕ್ತಿ ಎಂಬ ಕೋಟೆಯನ್ನಾಶ್ರಯಿಸಿ **ಊರ್ಜಿತಾರೀನ್** ಪ್ರಬುದ್ಧವಾದ ಕಾಮಾದಿ ಶತ್ರುಗಳೊಡನೆ (ವಿಷಯಭೋಗದಲ್ಲಿ ಸನ್ನದ್ಧವಾದ ಇಂದ್ರಿಯಗಳೊಡನೆ) **ಯುಧ್ಯೇತ** ಯುದ್ಧ ಮಾಡಬೇಕು. ಅಂದರೆ ಮತ್ತೆ ಅವುಗಳು ಹುಟ್ಟದಂತೆ ಮಾಡಬೇಕು. **ಕ್ಷೀಣೇಷು** ಕಾಮಾದಿಗಳು ನಶಿಸಿದ ಮೇಲೆ **ವಿಪಶ್ಚಿತ್** ಜ್ಞಾನಿಯು **ಕಾಮಂ ವಿಚರೇತ್** ಗೃಹಸ್ಥಾಶ್ರಮದಲ್ಲಿಯೂ ಬೇರೆ ಆಶ್ರಮಗಳಲ್ಲಿಯೂ ತನ್ನ ಇಚ್ಛಾನುಸಾರ ಇರಬೇಕು. ಆಗ ಅವನಿಗೆ ಎಲ್ಲಿಯೂ ಭಯವಿಲ್ಲ ಎಂದು ಭಾವ. ॥೧೮॥

## ಪ್ರಿಯವ್ರತಮಹಾರಾಜನಿಗೆ ಯೋಗ್ಯವಾದ ಕರ್ತವ್ಯೋಪದೇಶ

ನನಗೆ ಯೋಗ್ಯವಾದ ಕರ್ತವ್ಯ ಹೇಳಿರಿ ಎಂದಾಗ ಹೇಳುವರು -

**ತ್ವಂ ತ್ವಬ್ಜನಾಭಾಂಘ್ರಿಸರೋಜಕೋಶ-**
**ದುರ್ಗಾಶ್ರಿತೋ ನಿರ್ಜಿತಷಟ್‌ಸಪತ್ನಃ ।**
**ಭುಂಕ್ಷ್ವೇಹ ಭೋಗಾನ್ ಪುರುಷಾತಿಸೃಷ್ಟಾನ್**
**ವಿಮುಕ್ತಸಂಗಃ ಪ್ರಕೃತಿಂ ಭಜಸ್ವ** ॥೧೯॥

**ತ್ವಂ ತು** ನೀನಾದರೂ **ಅಬ್ಜನಾಭಾಂಘ್ರಿಸರೋಜಕೋಶದುರ್ಗಾಶ್ರಿತಃ** ಪರಮಾತ್ಮನ ಪಾದಾರವಿಂದಗಳಲ್ಲಿಯ ಭಕ್ತಿ ಎಂಬ ದುರ್ಗವನ್ನಾಶ್ರಯಿಸಿ **ನಿರ್ಜಿತಷಟ್ ಸಪತ್ನಃ** ಅರಿಷಡ್‌ವರ್ಗವನ್ನು ಜಯಿಸಿದವನಾಗಿ **ಪುರುಷಾತಿಸೃಷ್ಟಾನ್** ಶ್ರೀಹರಿಯಿಂದ ಕೊಡಲ್ಪಟ್ಟ **ಭೋಗಾನ್ ಭುಂಕ್ಷ್ವ** ಭೋಗಗಳನ್ನು ಅನುಭವಿಸು **ವಿಮುಕ್ತಸಂಗಃ** ವಿಷಯಗಳಲ್ಲಿ ಸ್ನೇಹವಿಲ್ಲದೇ ಹರಿಪೂಜೆಯಂದು ಭೋಗಮಾಡುವುದರಿಂದ ನಂತರ ವಿರಕ್ತಿಯುಂಟಾಗಿ ಸಂನ್ಯಾಸ ಪಡೆದು **ಪ್ರಕೃತಿಂ ಭಜಸ್ವ** ಆವಿರ್ಭೂತ ಸ್ವರೂಪವನ್ನು ಹೊಂದು.

## ಸ್ವಯೋಗ್ಯತಾಭಿಜ್ಞಗುರೂಪದಿಷ್ಟವಾದ ಧರ್ಮಾನುಷ್ಠಾನದಿಂದ ಮುಕ್ತಿ

ಅಜ್ಞಾನ, ವಿಪರೀತಜ್ಞಾನಗಳನ್ನು ಪರಿಹರಿಸಲು ಈ ಪ್ರಕರಣದ ತಾತ್ಪರ್ಯ ಪ್ರಮಾಣದಿಂದ ತಿಳಿಸುವರು.

 

**ತಾತ್ಪರ್ಯ -**

**ವಿಹಿತೋ ಯಸ್ಯ ಯೋ ಧರ್ಮೋ ವಿಷ್ಣುನಾ ಪ್ರಭವಿಷ್ಣುನಾ ।**
**ತೇನ ಮುಕ್ತಿರ್ಭವೇತ್ತಸ್ಯ ತಂ ಗುರುರ್ವೇದ ಸರ್ವವಿತ್ ॥**
**ಇತಿ ಪ್ರವೃತ್ತಸಂಹಿತಾಯಾಮ್ ॥**

ಗೃಹಸ್ಥಾಶ್ರಮಾದಿಗಳಿಗೆ ಸಂಬಂಧಿಯಾದ ಯಾವ ಧರ್ಮವು ಯಾವ ಅಧಿಕಾರಿಗೆ ಮುಕ್ತಿಸಾಧನವೆಂದು ಶ್ರೀಹರಿಯಿಂದ ವಿಹಿತವಾಗಿದೆಯೋ ಅವನಿಗೆ ಅಂಥಹ ಸ್ವಯೋಗ್ಯವಾದ ಧರ್ಮಾಚರಣದಿಂದಲೇ ಮೋಕ್ಷವು ಲಭಿಸುವುದು. ಸಮಸ್ತರ ಯೋಗ್ಯತೆಯನ್ನು ತಿಳಿದ ಗುರುಗಳು ಶಿಷ್ಯನ ಯೋಗ್ಯತೆಯನ್ನು ತಿಳಿದಿರುತ್ತಾರೆ ಎಂದು ಪ್ರವೃತ್ತ ಸಂಹಿತೆಯಲ್ಲಿ ಹೇಳಿದೆ.

ಇದರಿಂದ ವಿಷ್ಣು ವಿಹಿತವಾದ ತನ್ನ ಮುಕ್ತಿಸಾಧನ ಆಶ್ರಮಧರ್ಮ ಯಾವುದು ಎಂದು ಮೊದಲು ಗೊತ್ತಿಲ್ಲದಿರುವುದರಿಂದ ನಿಃಶಂಕವಾಗಿ ಮೋಕ್ಷಮಾರ್ಗದಲ್ಲಿ ಪ್ರವೃತ್ತಿಯುಂಟಾಗಲಾರದೆಂಬ ಶಂಕೆಗೆ ಅವಕಾಶವಿಲ್ಲ. ಯೋಗ್ಯತೆ ತಿಳಿದ ಗುರುಗಳ ಉಪದೇಶದಿಂದ ತಿಳಿದು ಮುನ್ನಡೆಯಬಹುದು. ಪ್ರಕೃತ ಪ್ರಿಯವ್ರತನ ಯೋಗ್ಯತೆ ತಿಳಿದ ಗುರು ಬ್ರಹ್ಮದೇವರೇ. ಅವರು ಗೃಹಾಶ್ರಮದಲ್ಲಿದ್ದು ಭೋಗ ಮಾಡಿ ನಂತರ ಮುಕ್ತಸಂಗನಾಗಿ ಸ್ವಭಾವವನ್ನು ಪಡೆಯುವಿ ಎಂದು ಉಪದೇಶಿಸಿರುವರು. ಅದರಂತೆ ಮಾಡಿ ಪ್ರಿಯವ್ರತನು ಮುಕ್ತಿ ಪಡೆದನು.

ಮೋಕ್ಷಾಧಿಕಾರಿಗಳು ಜ್ಞಾನಯೋಗಿಗಳು ಕರ್ಮಯೋಗಿಗಳು ಎಂದು ಎರಡು ವಿಧರು. ಅದರಲ್ಲಿ ಜ್ಞಾನಯೋಗಿಗಳಾದ ಸನಕಾದಿಗಳು ಜ್ಞಾನಮಾರ್ಗದಿಂದಲೂ ಕರ್ಮಯೋಗಿಗಳಾದ ಪ್ರಿಯವ್ರತಾದಿಗಳು ಕರ್ಮಗಳನ್ನೇ ಹೆಚ್ಚು ಮಾಡಿ ಅವುಗಳಿಂದ ಜ್ಞಾನ ಸಂಪಾದನೆ ಮಾಡಿಯೂ ಮೋಕ್ಷವನ್ನು ಹೋಂದುತ್ತಾರೆ. ॥೧೯॥

## ಪ್ರಿಯವ್ರತನಿಂದ ಬ್ರಹ್ಮದೇವರ ಆಜ್ಞಾಸ್ವೀಕಾರ

ಪ್ರಿಯವ್ರತನಿಂದ ಬ್ರಹ್ಮದೇವರ ಆಜ್ಞಾಸ್ವೀಕಾರ ಪ್ರಕಾರ ತಿಳಿಸುವರು.

**ಶ್ರೀ ಶುಕ ಉವಾಚ -**

**ಇತಿ ಸಮಭಿಹಿತೋ ಮಹಾಭಾಗವತೋ ಭಗವತಸ್ತ್ರಿಭುವನ ಗುರೋರನುಶಾಸನಮಾತ್ಮನೋ ಲಘುತಯಾವನತಶಿರೋಧರೋ ಬಾಢಮಿತಿ ಸಬಹುಮಾನಮುವಾಹ ॥೨೦॥**

**ಇತಿ** ಈ ರೀತಿಯಾಗಿ **ಸಮಭಿಹಿತಃ** ಅನುಗ್ರಹ ಪೂರ್ವಕವಾಗಿ ಹೇಳಲ್ಪಟ್ಟ **ಮಹಾಭಾಗವತಃ** ಭಗವದ್ಭಕ್ತನಾದ ಪ್ರಿಯವ್ರತನು **ತ್ರಿಭುವನಗುರೋಃ** ಮೂರುಲೋಕದ ಗುರುಗಳಾದ **ಭಗವತಃ** ಬ್ರಹ್ಮದೇವರ **ಅನುಶಾಸನಂ** ಆಜ್ಞೆಯನ್ನು **ಆತ್ಮನಃ** ತನಗೆ **ಲಘುತಯಾ** ಬ್ರಹ್ಮದೇವರಿಗಿಂತ ಅತಿ ನೀಚತೆ ಇರುವುದರಿಂದ **ಅವನತಶಿರೋಧರಃ** ಕಂಠಬಾಗಿಸಿದವನಾಗಿ **ಬಾಢಂ ಇತಿ** ತಾವು ಹೇಳಿದಂತೆ ಮಾಡುವೆನೆಂದು **ಸಬಹುಮಾನಂ** ಗೌರವದಿಂದ **ಉವಾಹ** ಸ್ವೀಕರಿಸಿದನು. ||೨೦||

**ಭಗವಾನಪಿ ಮನುನಾ ಯಥಾವದುಪಕಲ್ಪಿತಾಪಚಿತಿಃ ಪ್ರಿಯವ್ರತ-ನಾರದಯೋರನಿಮಿಷಮಭಿಸಮೀಕ್ಷಮಾಣಯೋರಾತ್ಮಸಮವಸ್ಥಾನಂ ವಾಙ್ಮನಸೋಃ ಕ್ಷಯಮವ್ಯವಹಿತಮಗಮತ್ ||೨೧||**

**ಭಗವಾನಪಿ** ಬ್ರಹ್ಮದೇವರಾದರೂ **ಮನುನಾ** (ಸಂತುಷ್ಟನಾದ) ಮನುವಿನಿಂದ **ಯಥಾವತ್** ಯಥಾಯೋಗ್ಯವಾಗಿ **ಉಪಕಲ್ಪಿತಾಪಚಿತಿಃ** ಪೂಜಿಸಲ್ಪಟ್ಟವರಾಗಿ **ಪ್ರಿಯವ್ರತನಾರದಯೋಃ** ಪ್ರಿಯವ್ರತ ಮಹಾರಾಜ ಹಾಗೂ ನಾರದ ಮಹರ್ಷಿಗಳು **ಅನಿಮಿಷಂ** ರೆಪ್ಪೆಬಡೆಯದೆ **ಅಭಿಸಮೀಕ್ಷಮಾಣಯೋಃ** ನೋಡುತ್ತಿರುವಾಗಲೇ **ವಾಙ್ಮನಸೋಃ ಕ್ಷಯಂ** ಮಾತು ಮನಸ್ಸುಗಳಿಗೆ ಗೋಚರವಾಗದ ಅಥವಾ **ವಾಙ್ಮನಸೋಃ** ವಾಕ್ ಮತ್ತು ಮನಸ್ಸಿನ ದೇವತೆಯಾದ ಸರಸ್ವತೀದೇವಿಯರ **ಕ್ಷಯಂ** ವಾಸಸ್ಥಾನವಾದ **ಆತ್ಮಸಮವಸ್ಥಾನಂ** ತಮ್ಮ ನಿಜಲೋಕವಾದ ಸತ್ಯಲೋಕಕ್ಕೆ **ಅವ್ಯವಹಿತಂ** ಶೀಘ್ರವಾಗಿ **ಅಗಮತ್** ಹೊರಟರು.

### ಸ್ವಾಯಂಭುವ ಮನುವಿನ ರಾಜ್ಯತ್ಯಾಗ

ಮನುವು ರಾಜ್ಯತ್ಯಾಗ ಮಾಡಿದ ರೀತಿಯನ್ನು ಹೇಳುವರು.

**ಮನುರಪಿ ಪರೇಣೈವೇತ್ಥಂ ಸಮಭಿಸಂಧಿತಮನೋರಥಃ ಸುರರ್ಷಿ-ವರಾನುಮತೇನಾತ್ಮಜ ಮಖಿಲಧರಾಮಂಡಲಸ್ಥಿತಿಗುಪ್ತಯ ಆಸ್ಥಾಯಾತಿ-ವಿಷಮವಿಷಯ ವಿಷಜಲಾಶಯಾದುಪರರಾಮ ||೨೨||**

(ಪಾಠಾಂತರ - **ಆಸ್ಥಾಪ್ಯ ಸ್ವಯಮತಿವಿಷಮ** ಎಂದು ವಿಜಯಧ್ವಜ ಪಾಠ)

**ಮನುರಪಿ** ಸ್ವಾಯಂಭುವಮನುವಾದರೂ **ಪರೇಣೈವ** ಬ್ರಹ್ಮದೇವರಿಂದಲೇ **ಇತ್ಥಂ** ಈ ರೀತಿಯಾಗಿ **ಸಮಭಿಸಂಧಿತಮನೋರಥಃ** ಮಗನನ್ನು ರಾಜ್ಯದಲ್ಲಿರಿಸಿ ವನಕ್ಕೆ

ಹೋಗುವೆನೆಂಬ ಮನೋರಥವನ್ನು ಪಡೆದವನಾಗಿ **ಸುರರ್ಷಿವರಾನುಮತೇನ** ನಾರದರ ಸಮ್ಮತಿಯಿಂದ **ಅಖಿಲಧರಾಮಂಡಲಸ್ಥಿತಿಗುಪ್ತಯೇ** ಎಲ್ಲ ಭೂಮಂಡಲದಲ್ಲಿರುವ ಮರ್ಯಾದಾರಕ್ಷಣೆಗಾಗಿ **ಆತ್ಮಜಂ** ಮಗನಾದ ಪ್ರಿಯವ್ರತನನ್ನು **ಆಸ್ಥಾಯ** ಪಟ್ಟಾಭಿಷೇಕ ಮಾಡಿ **ಅತಿವಿಷಮವಿಷಜಲಾಶಯಾತ್** ಅತ್ಯಂತ ದುರಸ್ತವಾದ ವಿಷಯಗಳೆಂಬ ವಿಷಪೂರಿತ ಮಡುವಿನಂತಿರುವ ಸಂಸಾರದಿಂದ **ಉಪರರಾಮ** ವಿರಾಮ ಪಡೆದನು. ।।೨೨।।

## ಪ್ರಿಯವ್ರತಮಹಾರಾಜನ ರಾಜ್ಯಭಾರ

ಪ್ರಶ್ನೆಗಳೆರಡರ ಉತ್ತರವನ್ನು ಮುಗಿಸುವರು.

**ಇತಿ ಹ ವಾವ ಸ ಜಗತೀಪತಿರೀಶ್ವರೇಚ್ಛಯಾಧಿನಿವೇಶಿತಕರ್ಮಾಧಿ ಕಾರೋಽಖಿಲಜಗದ್ಬಂಧಧ್ವಂಸನಪರಾನುಭಾವಸ್ಯ ಭಗವತ ಆದಿಪುರುಷ-ಸ್ಯಾಂಘ್ರಿಯುಗಲಾನವರತಧ್ಯಾನಾನುಭಾವೇನ ಪರಿರಂಧಿತಕಷಾಯಾ-ಪದಾತೋಽಪಿ ಮಾನವರ್ಧನೋ ಮಹತಾಂ ಮಹೀತಲಮನುಶಶಾಸ ।।೨೩।।**

**ಇತಿ** ಗುರುಗಳ ಆಜ್ಞೆಯು ಅನುಲ್ಲಂಘನೀಯವಾದುದರಿಂದ **ಸ ಜಗತೀಪತಿಃ** ಆ ಪ್ರಿಯವ್ರತರಾಜನು **ಈಶ್ವರೇಚ್ಛಯಾ** ಭಗವಂತನ ಇಚ್ಛೆಯಿಂದ **ಅಧಿನಿವೇಶಿತ-ಕರ್ಮಾಧಿಕಾರಃ** ಗೃಹಸ್ಥಾಶ್ರಮಕ್ಕೆ ವಿಹಿತವಾದ ರಾಜ್ಯಪಾಲನೆ ಮುಂತಾದ ಕಾರ್ಯಗಳಲ್ಲಿ ಅಧಿಕಾರ ಪಡೆದವನಾಗಿ **ಅಖಿಲಜಗದ್ಬಂಧಧ್ವಂಸನಪರಾನುಭಾವಸ್ಯ** ಎಲ್ಲ ಯೋಗ್ಯಜೀವರ ಬಂಧನವನ್ನು ನಾಶಮಾಡುವ ಉತ್ತಮ ಸಾಮರ್ಥ್ಯವುಳ್ಳ **ಭಗವತಃ ಆದಿಪುರುಷಸ್ಯ** ಪರಮಾತ್ಮನ **ಅಂಘ್ರಿಯುಗಲ** ಪಾದದ್ವಂದ್ವಗಳ **ಅನವರತಧ್ಯಾನಾನುಭಾವೇನ** ಸತತ ಧ್ಯಾನದ ಸಾಮರ್ಥ್ಯದಿಂದ **ಪರಿರಂಧಿತಕಷಾಯಾಶಯಃ** ದಗ್ಧವಾದ ರಾಗಾದಿದೋಷವುಳ್ಳ **ಮಾನವರ್ಧನಃ** ಬ್ರಹ್ಮಾದಿಗಳ ಆಜ್ಞಾಪರಿಪಾಲನೆಯಿಂದ ಸತ್ಕಾರ ಮಾಡುವನಾಗಿ **ಅನುಶಶಾಸ** ಭೂಮಂಡಲವನ್ನಾಳಿದನು. ।।೨೩।।

**ಅಥ ಚ ದುಹಿತರಂ ಪ್ರಜಾಪತೇರ್ವಿಶ್ವಕರ್ಮಣ ಉಪಯೇಮೇ ಬರ್ಹಿಷ್ಮತೀಂ ನಾಮ । ತಸ್ಯಾಮು ಹ ವಾ ಆತ್ಮಜಾನಾತ್ಮಸಮಾನಶೀಲ-ಗುಣಕರ್ಮರೂಪವೀರ್ಯೋದಾರಾನ್ ದಶ ಭಾವಯಾಂಬಭೂವ । ಕನ್ಯಾಂ ಯವೀಯಸೀಮೂರ್ಜಸ್ವತೀಂ ನಾಮ ।।೨೪।।**

**ಅಥ ಚ** ಅನಂತರ **ವಿಶ್ವಕರ್ಮಣಃ ಪ್ರಜಾಪತೇಃ** ವಿಶ್ವಕರ್ಮಪ್ರಜೇಶ್ವರನ **ದುಹಿತರಂ** ಮಗಳಾದ **ಬರ್ಹಿಷ್ಮತೀಂ ನಾಮ** ಬರ್ಹಿಷ್ಮತಿ ಎಂಬುವಳನ್ನು **ಉಪಯೇಮೇ** ಮದುವೆಯಾದನು **ತಸ್ಯಾಮು(ತಸ್ಯಾಂ ಉ)** ಅವಳಲ್ಲೇ **ಆತ್ಮಸಮಾನಶೀಲಗುಣಕರ್ಮರೂಪವೀರ್ಯೋದಾರಾನ್** ತನಗೆ ಸಮಾನವಾದ ಸ್ವಭಾವ ಗುಣ ಕಾರ್ಯರೂಪ ಸಾಮರ್ಥ್ಯಗಳಿಂದ ಉತ್ತಮರಾದ **ದಶ** ಹತ್ತು **ಆತ್ಮಜಾನ್** ಗಂಡು ಮಕ್ಕಳನ್ನು ಮತ್ತು **ಯವೀಯಸೀಂ** ಕೊನೆಯವಳಾದ (ಚಿಕ್ಕವಳಾದ) **ಊರ್ಜಸ್ವತೀಂ ನಾಮ ಕನ್ಯಾಂ** ಊರ್ಜಸ್ವತಿ ಎಂಬ ಹೆಣ್ಣು ಮಗುವನ್ನು **ಭಾವಯಾಂಬಭೂವ** ಹುಟ್ಟಿಸಿದನು. ವಿರಕ್ತನಾದ ಪ್ರಿಯವ್ರತನಿಗೂ ಶ್ರೀಹರಿಯ ಇಚ್ಛೆಯಿಂದ ಮಕ್ಕಳು ಜನಿಸಿದರು ಎಂಬ ಹರ್ಷ, ವಿಸ್ಮಯ ಪ್ರಸಿದ್ಧಿಗಳನ್ನು ತಿಳಿಸಲು 'ಉ', 'ಹ', 'ವಾ', 'ವ' ಎಂಬ ನಿಪಾತ ಸಮುದಾಯವು.

ಮಕ್ಕಳ ಹೆಸರನ್ನು ಹೇಳುವರು.

**ಆಗ್ನೀಧ್ರೇಧ್ಮಜಿಹ್ವಯಜ್ಞಬಾಹುಮಹಾವೀರಹಿರಣ್ಯರೇತೋಘೃತಪೃಷ್ಠಸವನ-ಮೇಧಾತಿಥಿ ವೀತಿಹೋತ್ರಕವಯ ಇತಿ ಸರ್ವ ಏವಾಗ್ನಿನಾಮಾನಃ ।।೨೫।।**

ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾವೀರ, ಹಿರಣ್ಯರೇತ, ಘೃತಪೃಷ್ಠ, ಸವನ, ಮೇಧಾತಿಥಿ, ವೀತಿಹೋತ್ರ, ಕವಿ **ಇತಿ** ಎಂಬ **ಸರ್ವೇ** ಎಲ್ಲರೂ **ಅಗ್ನಿನಾಮಾನಃ** ಅಗ್ನಿಯ ಹೆಸರುಳ್ಳವರೇ. ।।೨೫।।

**ಏತೇಷಾಂ ಕವಿಃ ಮಹಾವೀರಃ ಸವನ ಇತಿ ತ್ರಯ ಆಸನ್ನೂರ್ಧ್ವರೇತಸಃ । ತ ಆತ್ಮವಿದ್ಯಾಯಾಮರ್ಭಕಭಾವಾದಾರಭ್ಯ ಕೃತಪರಿಚಯಾಃ ಪಾರಮಹಂಸ್ಯ-ಮೇವಾಶ್ರಮಮಭಜನ್ ।।೨೬।।**

**ಏತೇಷಾಂ** ಇವರುಗಳಲ್ಲಿ **ಕವಿಃ ಮಹಾವೀರಃ ಸವನಃ ಇತಿ ತ್ರಯಃ** ಕವಿ ಮಹಾವೀರ ಸವನ ಎಂಬ ಮೂವರು **ಊರ್ಧ್ವರೇತಸ ಆಸನ್** ಬ್ರಹ್ಮಚರ್ಯ ವ್ರತಧಾರಣ ಮಾಡಿದವರಾಗಿದ್ದರು. **ತೇ** ಅವರು **ಅರ್ಭಕಭಾವಾದಾರಭ್ಯ** ಬಾಲ್ಯದಿಂದಲೇ **ಆತ್ಮವಿದ್ಯಾಯಾಂ** ಬ್ರಹ್ಮವಿದ್ಯೆಯಲ್ಲಿ **ಕೃತಪರಿಚಯಾಃ** ತಮ್ಮ ಯೋಗ್ಯತಾನುಸಾರ ಪೂರ್ಣ ಅಭ್ಯಾಸ ಮಾಡಿದವರು **ಪಾರಮಹಂಸ್ಯಮೇವ ಆಶ್ರಮಂ ಅಭಜನ್** ಸಂನ್ಯಾಸಾಶ್ರಮವನ್ನೇ ಸ್ವೀಕರಿಸಿದರು. ।।೨೬।।




**ತಸ್ಮಿನ್ನು ಹವಾ ಉಪಶಮಶೀಲಾಃ ಪರಮಋಷಯಃ ಸಕಲಜೀವನಿಕಾಯಾ-ವಾಸಸ್ಯ ಭಗವತೋ ವಾಸುದೇವಸ್ಯ ಸಂಸಾರಭೀತಾನಾಂ ಶರಣಭೂತಸ್ಯ ಶ್ರೀ ಮಚ್ಚರಣಾರವಿಂದಾವಿರತಸ್ಮೃತಿವಿಗಲಿತಪರಮಭಕ್ತಿಯೋಗಾನುಭಾವೇನ ಪರಿಭಾವಿತಾಂತರ್ಹೃದಯಾಧಿಗತೇ ಭಗವತಿ ಸರ್ವೇಷಾಂ ಭೂತಾನಾಮಾತ್ಮ-ಭೂತೇ ಪ್ರತ್ಯಗಾತ್ಮನ್ಯೇವ ತಾದಾತ್ಮ್ಯಮವಿಶೇಷೇಣ ಸಮೀಯುಃ ॥೨೭॥**

**ತಸ್ಮಿನ್** ಆ ಆಶ್ರಮದಲ್ಲಿ ಇರುವವರಾಗಿ **ಉಪಶಮಶೀಲಾಃ** ಇಂದ್ರಿಯ ನಿಗ್ರಹ, ಶಾಂತತೆಗಳೇ ಸ್ವಭಾವವಾಗಿವುಳ್ಳ **ಪರಮಋಷಯಃ** ಶ್ರೇಷ್ಠಜ್ಞಾನಿಗಳಾದವರು **ಸಕಲಜೀವನಿಕಾಯಾವಾಸಸ್ಯ** ಎಲ್ಲ ಜೀವ ಸಮೂಹಕ್ಕೆ ಆಶ್ರಯನಾದ **ಸಂಸಾರಭೀತಾನಾಂ ಶರಣಭೂತಸ್ಯ** ಸಂಸಾರದಿಂದ ಹೆದರಿದವರಿಗೆ ರಕ್ಷಕನಾದ **ಭಗವತಃ** ಐಶ್ವರ್ಯಶಾಲಿಯಾದ **ವಾಸುದೇವಸ್ಯ** ಮುಕ್ತಿ ಪ್ರದನಾದ ಪರಮಾತ್ಮನ **ಶ್ರೀಮಚ್ಚರಣಾರವಿಂದಾವಿರತಸ್ಮೃತಿವಿಗಲಿತಪರಮಭಕ್ತಿಯೋಗಾನುಭಾವೇನ** ಕಾಂತಿಯುತಗಳಾದ ಪಾದಾರವಿಂದಗಳಲ್ಲಿ ನಿರಂತರ ಸ್ಮರಣದಿಂದ ತೈಲಧಾರೆಯಂತೆ ಅಖಂಡವಾದ ಭಕ್ತಿರೂಪ 'ಉಪಾಯದ ಸಾಮರ್ಥ್ಯದಿಂದ **ಪರಿಭಾವಿತಾಂತರ್ಹೃದಯಾಧಿಗತೇ** ಶೋಧಿತವಾದ ಮನಸ್ಸಿನಲ್ಲಿ ತಿಳಿಯಲ್ಪಟ್ಟ (ಜ್ಞಾತವಾದ) **ಆತ್ಮಭೂತೇ ಸರ್ವೇಷಾಂ ಭೂತಾನಾಂ** ಎಲ್ಲ ಜೀವರಿಗೆ ಸ್ವಾಮಿಯಾದ **ಪ್ರತ್ಯಗಾತ್ಮನಿ ಏವ** ಬಿಂಬನಾದ ಅಂತರ್ಯಾಮಿಯಲ್ಲಿ **ತಾದಾತ್ಮ್ಯಂ ಅವಿಶೇಷಣ ಸಮೀಯುಃ** ಎಲ್ಲ ಪ್ರಾಣಿಗಳಲ್ಲಿರುವ ಅಂತರ್ಯಾಮಿ ರೂಪಗಳಲ್ಲಿ ಅತ್ಯಂತ ಅಭೇದವನ್ನು ಅವುಗಳ ಗುಣಗಳಲ್ಲಿ ತಾರತಮ್ಯ ಇಲ್ಲದಿರುವುದರಿಂದ ಚೆನ್ನಾಗಿ ತಿಳಿದರು. ಅಥವಾ **ಅವಿಶೇಷೇಣ** ಸಮನಾಗಿ ಅಂದರೆ ತಮ್ಮ ತಮ್ಮಲ್ಲಿ ಒಬ್ಬರು ಹೆಚ್ಚು ಮತ್ತೊಬ್ಬರು ಕಡಿಮೆ ಇಲ್ಲದೆ ಮೂವರೂ ಒಂದೇ ರೀತಿ ತಿಳಿದರು.

ಅಂಥವರು ಪ್ರಾಕೃತ ಶರೀರವನ್ನು ತ್ಯಜಿಸಿ (ಸ್ವಾತಂತ್ರ್ಯವನ್ನು ಬಿಟ್ಟು ತಮ್ಮ ಯೋಗ್ಯತಾನುಸಾರ ಅವನ ರೂಪಸಾಮ್ಯವನ್ನು ಪಡೆದರು (**ಸರ್ವೇ ಚತುರ್ಬಾಹವಃ** ಮುಂತಾಗಿ ಹೇಳಿದ ಸಾರೂಪ್ಯವನ್ನು ಪಡೆದರು).

## ಐಕ್ಯ ಶಬ್ದದ ನಿರ್ವಚನ

**ತಾದಾತ್ಮ್ಯ** ಎಂದರೆ ಹರ್ಯ್ಯಧೀನತ್ವ ತದೇಕಚಿತ್ತತ್ವ ತತ್ಕಾಮಿತಕಾಮಿತ್ವಗಳನ್ನು ಪಡೆದರೆಂದರ್ಥ. ಐಕ್ಯವೆಂದಲ್ಲ. ಹರಿಯೇ ಸ್ವಾಮಿ ಎಂದು ತಿಳಿಯುವುದು,

ಅವನಲ್ಲೇ ಮನಸ್ಸಿಡುವುದು, ಅವನ ಇಚ್ಛಾನುಸಾರ ಇಚ್ಛಿಸುವುದು ಇದೇ ಐಕ್ಯ. ॥೨೭॥

**ಅನ್ಯಸ್ಯಾಮಪಿ ಭಾರ್ಯಾಯಾಂ ತ್ರಯಃ ಪುತ್ರಾಃ ಆಸನ್ ಉತ್ತಮಸ್ತಾಪಸೋ ರೈವತ ಇತಿ ಮನ್ವಂತರಾಧಿಪತಯಃ ॥೨೮॥**

**ಅನ್ಯಸ್ಯಾಂ ಭಾರ್ಯಾಯಾಂ ಅಪಿ** ಬೇರೊಬ್ಬ ಹೆಂಡತಿಯಲ್ಲಿ **ಉತ್ತಮಃ ತಾಪಸಃ ರೈವತಃ** ಇತಿ ಈ ಹೆಸರಿನ **ಮನ್ವಂತರಾಧಿಪತಯಃ** ಮನ್ವಂತರಗಳಿಗೆ ಒಡೆಯರಾದ **ತ್ರಯಃ ಪುತ್ರಾಃ ಆಸನ್** ಮೂರು ಜನ ಮಕ್ಕಳು ಜನಿಸಿದರು. ॥೨೮॥

ಈ ರೀತಿಯಾಗಿ ಮೂರು ಜನ ಮಕ್ಕಳು ಸಂನ್ಯಾಸಾಶ್ರಮಿಗಳಾಗಿರಲು ಪ್ರಿಯವ್ರತನು ಎಷ್ಟು ಕಾಲ ರಾಜ್ಯಭಾರ ಮಾಡಿದನೆಂದು ಹೇಳುವರು

## ಪ್ರಿಯವ್ರತನ ರಾಜ್ಯಭಾರದ ಕಾಲ

**ಏವಮುಪಶಮಾಯನೇಷು ಸ್ವತನಯೇಷ್ವಥ ಜಗತೀಪತಿರ್ಜಗತೀಮರ್ಬುದಾನ್ಯೇಕಾದಶ ಪರಿವತ್ಸರಾಣಾಮವ್ಯಾಹತಾಖಿಲಪುರುಷಾಕಾರಸಾರಭೂತದೋರ್ದಂಡಯುಗಲಾಪೀಡಿತ ಕೋದಂಡಮೌರ್ವೀಗುಣಸ್ತನಿತವಿರಮಿತಧರ್ಮಪ್ರತಿಪಕ್ಷೋ ಬರ್ಹಿಷ್ಮತ್ಯಾಂ ಚಾನುದಿನಮೇಧಮಾನಪ್ರಮೋದಪ್ರಸರಣಯೋಷಣ್ಯವ್ರೀಡಾಪ್ರಮುಷಿತಹಾಸಾವಲೋಕರುಚಿರ ಕ್ಷ್ವೇಲಸಾದಿಭಿಃ ಪರಾಭೂಯಮಾನವಿವೇಕೋಽನವಬುಧ್ಯಮಾನ ಇವ ಮಹಾಮನಾ ಬುಭುಜೇ ॥೨೯॥**

**ಏವಂ** ಈ ರೀತಿಯಾಗಿ **ಸ್ವತನಯೇಷು** ತನ್ನ ಮೂವರು ಕುವರರು **ಉಪಶಮಾಯನೇಷು** ಸಂನ್ಯಾಸಾಶ್ರಮಿಗಳಾಗುತ್ತಿರಲು **ಅವ್ಯಾಹತ** ತಡೆಯಿಲ್ಲದ **ಅಖಿಲ** ಎಲ್ಲ **ಪುರುಷಾಕಾರ** ಪೌರುಷಗಳ **ಸಾರಭೂತ** ಶ್ರೇಷ್ಠವಾದ **ದೋರ್ದಂಡಯುಗಲ** ದಂಡದಂತಿರುವ ಬಾಹುಗಳೆರಡರಿಂದ **ಆಪೀಡಿತ** ಸೆಳೆಯಲ್ಪಟ್ಟ **ಕೋದಂಡ** ಧನುಸ್ಸಿನ **ಮೌರ್ವೀಗುಣ** ಎದೆಯ (ಧನುಸ್ಸಿನ ಹಗ್ಗದ) **ಸ್ತನಿತ** ಝೇಂಕಾರದಿಂದಲೇ (ಯುದ್ಧವಿಲ್ಲದೇ) **ವಿರಮಿತ** ನಿರಾಕರಿಸಲ್ಪಟ್ಟ **ಧರ್ಮಪ್ರತಿಪಕ್ಷಃ** ಧರ್ಮದವಿರೋಧಿಗಳುಳ್ಳ **ಬರ್ಹಿಷ್ಮತ್ಯಾಂ** ತನ್ನ ಹೆಂಡತಿಯಲ್ಲಿ **ಅನುದಿನಂ** ಪ್ರತಿದಿನವೂ **ಏಧಮಾನ್ಯೈಃ** ಅಭಿವೃದ್ಧಗಳಾದ **ಪ್ರಮೋದಪ್ರಸರಣ** ಪ್ರೇಮ ಪ್ರವಾಹದ

**ಪೋಷಣ** ಪ್ರವರ್ಧನೆಯಿಂದ **ವ್ರೀಡಾ** ಲಜ್ಜೆಯಿಂದ **ಪ್ರಮುಷಿತ** ಸಂಕುಚಿತವಾದ **ಹಾಸ** ನಗೆಯಿಂದ ಕೂಡಿದ **ಅವಲೋಕ** ನೋಟದಿಂದ **ರುಚಿರ** ಮನೋಹರಗಳಾದ **ಕ್ಷ್ವೇಲನಾದಿಭಿಃ** ಪರಿಹಾಸದ ಮಾತುಗಳೇ ಮುಂತಾದವುಗಳಿಂದ **ಪರಾಭೂಯಮಾನವಿವೇಕಃ** ಸ್ವಲ್ಪ ಮರೆಯಾದ ತತ್ತ್ವಜ್ಞಾನವುಳ್ಳವನಾಗಿ **ಅನವಬುಧ್ಯಮಾನ ಇವ** ಅಜ್ಞಾನಿಯಂತೆ **ಮಹಾಮನಾಃ** ಶ್ರೀಹರಿ ನಿಷ್ಠವಾದುದರಿಂದ ಪೂಜ್ಯವಾದ ಮನಸ್ಸುಳ್ಳ **ಜಗತೀಪತಿಃ** ಪ್ರಿಯವ್ರತರಾಜನು **ಪರಿವತ್ಸರಾಣಾಂ ಏಕಾದಶ ಅರ್ಬುದಾನಿ** ಒಂದು ನೂರಾ ಹತ್ತು ಕೋಟಿ ವರ್ಷ ಪರ್ಯಂತ **ಜಗತೀಂ ಬುಭುಜೇ** ರಾಜ್ಯಭಾರ ಮಾಡಿದನು.

**ಅವ್ಯಾಹತ** ಮುಂತಾದ ವಿಶೇಷಣದಿಂದ ಪ್ರಿಯವ್ರತರು ಮಾಡಿದ ಧರ್ಮಪಾಲನೆಯನ್ನು **ಏಧಮಾನ** ಮುಂತಾದ ವಿಶೇಷಣದಿಂದ ವಿಷಯ ಭೋಗವನ್ನು **ಇವ** ಎಂಬುದರಿಂದ ಅವರು ಅಜ್ಞಾನಿಗಳಲ್ಲವೆಂದು **ಮಹಾಮನಾ** ಎಂಬುದರಿಂದ ಜ್ಞಾನಿಗಳೆಂದು ತಿಳಿಸುವರು. ॥೨೯॥

## ಪ್ರಿಯವ್ರತನ ಪ್ರಭಾವ

ಪ್ರಿಯವ್ರತನ ಪ್ರಭಾವವನ್ನು ಹೇಳುವರು.

**ಯಾವದವಭಾಸಯತಿ ಸುರಗಿರಿಮನುಪರ್ಯಾಕ್ರಮನ್ ಭಗವಾನಾದಿತ್ಯೋ ವಸುಧಾತಲಮರ್ಧೇನೈವ ಪ್ರತಪತಿ ಅರ್ಧೇನೈವಾಚ್ಛಾದಯತಿ ತದಾ ಹಿ ಭಗವದುಪಾಸನೋಪಚಿತಾತಿಪುರುಷಪ್ರಭಾವಸ್ತದನಭಿನಂದನ್ ಸಮಜವೇನ ರಥೇನ ಜ್ಯೋತಿರ್ಮಯೇನ ರಜನೀಮಪಿ ದಿನಂ ಕರಿಷ್ಯಾಮೀತಿ ಸಪ್ತಕೃತ್ವ ಸ್ತರಣಿಮನುಪರ್ಯಾಕ್ರಾಮತ್ಸ ದ್ವಿತೀಯ ಇವ ಪತಂಗಃ ॥೩೦॥**

**ಭಗವಾನ್ ಆದಿತ್ಯಃ** ಪೂಜ್ಯನಾದ ಸೂರ್ಯನು **ಸುರಗಿರಿಂ** ಮೇರು ಪರ್ವತವನ್ನು **ಅನುಪರ್ಯಾಕ್ರಮನ್** ಪ್ರದಕ್ಷಿಣೆ ಮಾಡುತ್ತ **ಯಾವತ್** ಲೋಕಾಲೋಕ ಪರ್ವತದವರೆಗೆ ಎಷ್ಟು **ಅವಭಾಸಯತಿ** ಪ್ರಕಾಶ ಗೊಳಿಸುವನೋ **ತಾವತ್** ಅಷ್ಟು **ವಸುಧಾತಲಂ** ಭೂಮಂಡಲವನ್ನು **ಅರ್ಧೇನೈವ ಪ್ರತಪತಿ** ಅರ್ಧಭಾಗವನ್ನು ಮಾತ್ರ ಪ್ರಕಾಶಗೊಳಿಸುವನು **ಅರ್ಧೇನ ಆಚ್ಛಾದಯತಿ** ಅರ್ಧವನ್ನು ಕತ್ತಲೆ ಆವರಿಸುವಂತೆ ಮಾಡುವನು **ಹಿ** ಆದಕಾರಣ **ಪದಾ** ತನ್ನ ಆಳ್ವಿಕೆಯ ಕಾಲದಲ್ಲಿ **ತತ್** ಆ ಅರ್ಧಭಾಗ

ಕತ್ತಲೆ ಇರುವುದನ್ನು **ನ ಅಭಿನಂದನ್** ಸಂತೋಷಿಸದೇ **ಭಗವದುಪಾಸನೋಪಚಿತ ಅತಿಪುರುಷಪ್ರಭಾವಃ** ಭಗವಂತನ ಉಪಾಸನೆಯಿಂದ ಸಂಪಾದಿತವಾದ ಪುರುಷರಿಗೆ ಮೀರಿದ ಸಾಮರ್ಥ್ಯವುಳ್ಳ **ಸಃ** ಪ್ರಿಯವ್ರತನು **ರಜನೀಂ ಅಪಿ** ರಾತ್ರಿಯನ್ನೂ **ದಿನಂ ಕರಿಷ್ಯಾಮಿ** ಹಗಲು ಮಾಡುವೆನು **ಇತಿ** ಎಂಬ ಅಭಿಪ್ರಾಯದಿಂದ **ಸಮಜವೇನ** ಸೂರ್ಯನ ರಥಕ್ಕೆ ಸಮಾನವಾದ ವೇಗವುಳ್ಳ **ರಥೇನ** ರಥದಿಂದ **ಜ್ಯೋತಿರ್ಮಯೇನ** ಪ್ರಕಾಶಮಾನವಾದ **ತರಣಿಂ ಅನು** ಸೂರ್ಯನ ಹಿಂದೆ **ದ್ವಿತೀಯಃ ಪತಂಗಃ ಇವ** ಎರಡನೇ ಸೂರ್ಯನಂತೆ **ಸಪ್ತಕೃತ್ವಃ** ಏಳು ಸಲ **ಪರ್ಯಾಕ್ರಾಮತ್** ಸುತ್ತಿದನು. ।।೩೦।।

**ಯಾ ವಾ ಇಹ ತದ್ರಥಚರಣನೇಮಿಕೃತಪರಿಖಾಸ್ತಾಃ ಸಪ್ತಸಿಂಧವಃ ಆಸನ್ ಯತ ಏವಂ ಕೃತಾ ಸಪ್ತ ಭುವೋ ದ್ವೀಪಾಃ ।।೩೧।।**

**ಇಹ** ಭೂಮಿಯಲ್ಲಿ **ತದ್ರಥಚರಣನೇಮಿಕೃತಪರಿಖಾಃ ಯಾಃ ತಾಃ ಸಪ್ತಸಿಂಧವಃ ಆಸನ್** ಪ್ರಿಯವ್ರತನ ರಥದ ಚಕ್ರಗಳ ಅಂಚಿನಿಂದ ಮಾಡಲ್ಪಟ್ಟ ಕಂದಕಗಳು (ಹಳ್ಳ, ತಗ್ಗು) ಏನುಂಟೋ ಅವೇ ಏಳು ಸಮುದ್ರಗಳಾದವು **ಯತಃ** ಯಾವ ಸಮುದ್ರಗಳು ಸೀಮೆಗಳಾಗುವುದರಿಂದ **ಭುವಃ** ಭೂಮಿಯ **ಸಪ್ತ ದ್ವೀಪಾಃ ಕೃತಾಃ** ಏಳು ದ್ವೀಪಗಳು ಮಾಡಲ್ಪಟ್ಟವೋ **ತೇ ಸಪ್ತಸಿಂಧವಃ ಆಸನ್** ಆ ಏಳು ಸಮುದ್ರಗಳಾದವು ಎಂದನ್ವಯ. ।।೩೧।।

## ಸಪ್ತದ್ವೀಪಗಳ ಹೆಸರುಗಳು

ದ್ವೀಪಗಳ ಹೆಸರನ್ನು ಹೇಳುವರು

**ಜಂಬೂಪ್ಲಕ್ಷಶಾಲ್ಮಲಕುಶಕ್ರೌಂಚಶಾಕಪುಷ್ಕರಸಂಜ್ಞಾಃ ತೇಷಾಂ ಪರಿಮಾಣಂ ಪೂರ್ವಸ್ಮಾತ್ ಪೂರ್ವಸ್ಮಾತ್ ಉತ್ತರೋತ್ತರೇ ಯಥಾಸಂಖ್ಯಂ ದ್ವಿಗುಣೇನ ಬಹಿಃ ಸಮಂತತ ಉಪಕ್ಲೃಪ್ತಾಃ ।।೩೨।।**

**ಜಂಬೂ ಪ್ಲಕ್ಷ ಶಾಲ್ಮಲ ಕುಶ ಕ್ರೌಂಚ ಶಾಕ ಪುಷ್ಕರ** ಎಂಬ **ಸಂಜ್ಞಾಃ** ಹೆಸರುಗಳುಳ್ಳವು **ತೇಷಾಂ** ಅವುಗಳ **ಪರಿಮಾಣಂ** ಅಳತೆಯು **ಪೂರ್ವಸ್ಮಾತ್ ಪೂರ್ವಸ್ಮಾತ್** ಹಿಂದಿನ ಹಿಂದಿನ ದ್ವೀಪಗಳ ವಿಸ್ತಾರದಕ್ಕಿಂತ **ಉತ್ತರೋತ್ತರೇ** ಮುಂದಿನ ಮುಂದಿನ ದ್ವೀಪಗಳಲ್ಲಿರುವ ವಿಸ್ತಾರವು (ಒಳಗಿನ ದ್ವೀಪದಕ್ಕಿಂತ




ಹೊರಗಿನ ದ್ವೀಪದ ವಿಸ್ತಾರ) ಅವುಗಳ ಸಂಖ್ಯೆಗೆ ಎರಡರಷ್ಟು **ಬಹಿಃ** ಸಮುದ್ರದ ಹೂರಗೆ **ಸಮಂತತಃ** ಸುತ್ತಲೂ **ಉಪಕ್ಲೃಪ್ತಾಃ** ರಚಿತವಾಗಿವೆ. ।।೩೨।।

ಸಮುದ್ರಗಳ ಹೆಸರುಗಳನ್ನು ಹೇಳಿ ಸಮುದ್ರಗಳ ಸುತ್ತಲೂ ಹೊರಗೆ ದ್ವೀಪಗಳಿದ್ದಂತೆ ದ್ವೀಪಗಳ ಸುತ್ತಲೂ ಹೊರಗೆ ಸಮದ್ರಗಳಿವೆಯೆಂದು ಹೇಳುವರು.

**ಲವಣೋದೇಕ್ಷುರಸೋದಸುರೋದದಧಿಮಂಡೋದಶುದ್ಧೋದನಾಃ ಸಪ್ತಜಲಧಯಃ ಸಪ್ತದ್ವೀಪಪರಿಖಾಃ ಅಭ್ಯಂತರದ್ವೀಪಸಮಾನಾಃ ಏಕೈಕಶೋ ಯಥಾನುಪೂರ್ವಂ ಸಪ್ತಸ್ವಪಿ ಬಹಿರ್ದ್ವೀಪೇಷು ಪೃಥಕ್ ಪೃಥಕ್ ಪರಿತಃ ಉಪಕಲ್ಪಿತಾಃ । ತೇಷು ಜಂಬ್ವಾದಿಷು ಬರ್ಹಿಷ್ಮತೀಪತಿರನುವೃತ್ತಾನಾತ್ಮ-ಜಾನಾಗ್ನೀಧ್ರೇಧ್ಮಜಿಹ್ವಯಜ್ಞಬಾಹುಹಿರಣ್ಯರೇತೋಘೃತಪೃಷ್ಠ ಮೇಧಾತಿಥಿವೀತಿಹೋತ್ರಸಂಜ್ಞಾನ್ ಯಥಾಸಂಖ್ಯಂ ಏಕೈಕಸ್ಮಿನ್ ಏಕಮೇಕ-ಮೇವಾಧಿಪತಿಂ ವಿದಧೇ ।।೩೩।।**

**ಲವಣೋದ** ಉಪ್ಪುನೀರಿನ ಸಮುದ್ರ, **ಇಕ್ಷುರಸೋದ** ಕಬ್ಬಿನ ರಸದ ಸಮುದ್ರ **ಸುರೋದ** ಹೆಂಡದ ಸಮುದ್ರ **ಘೃತೋದ** ತುಪ್ಪದ ಸಮುದ್ರ **ಕ್ಷೀರೋದ** ಹಾಲಿನ ಸಮುದ್ರ **ದಧಿಮಂಡೋದ** ಕಡೆದ ಮೊಸರಿನ ಸಮುದ್ರ **ಶುದ್ಧೋದ** ಶುದ್ಧವಾದ ನೀರಿನ ಸಮುದ್ರ ಹೀಗೆ **ಸಪ್ತಜಲಧಯಃ** ಏಳು ಸಮುದ್ರಗಳು **ಸಪ್ತದ್ವೀಪಪರಿಖಾಃ** ಏಳು ದ್ವೀಪಗಳ ಕಂದಕಗಳಾಗಿ **ಅಭ್ಯಂತರದ್ವೀಪಸಮಾನಾಃ** ಒಳಗಿನ ದ್ವೀಪಗಳಿಗೆ ಸಮಾನವಾದ ಪರಿಮಾಣವುಳ್ಳವುಗಳಾಗಿ **ಏಕೈಕಶಃ** ಒಂದೊಂದು **ಯಥಾನುಪೂರ್ವಂ** ಹಿಂದಿನವುಗಳಂತೆ **ಸಪ್ತಸ್ವಪಿ ಬಹಿರ್ದ್ವೀಪೇಷು** ಏಳೂ ಹೊರಗಿನ ದ್ವೀಪಗಳಲ್ಲಿ **ಪೃಥಕ್ ಪೃಥಕ್** ಬೇರೆ ಬೇರೆಯಾಗಿ **ಪರಿತಃ** ಸೂತ್ತಲೂ **ಉಪಕಲ್ಪಿತಾಃ** ರಚಿತವಾಗಿವೆ.

(ಅಂದರೆ ಜಂಬೂದ್ವೀಪ, ಅದರ ಸುತ್ತಲೂ ಅಷ್ಟೇ ಪರಿಮಾಣದ ಲವಣೋದ, ಅನಂತರ ಇದರ ಎರಡರಷ್ಟು ಪರಿಮಾಣದ ಪ್ಲಕ್ಷದ್ವೀಪ ಅದರ ಸುತ್ತಲೂ ಅದೇ ಪರಿಮಾಣದ ಇಕ್ಷುರಸೊದ, ಪ್ಲಕ್ಷದ್ವೀಪದ ಎರಡು ಪಟ್ಟು ಶಾಲ್ಮಲದ್ವೀಪ ಅಷ್ಟೇ ಪರಿಮಾಣದ ಸುರೋದ ನಂತರ ಕುಶದ್ವೀಪದ ಎರಡರಷ್ಟು ಕ್ರೌಂಚದ್ವೀಪ ಅದರಸುತ್ತ ಅಷ್ಟೇ ಪ್ರಮಾಣದ ಕ್ಷೀರೋದ ನಂತರ ಕ್ರೌಂಚದ ಎರಡರಷ್ಟು ಶಾಕದ್ವೀಪ ಅದರ ಸುತ್ತ ಅಷ್ಟೇ ಪರಿಮಾಣದ ಶುದ್ಧೋದ ಎಂದು ತಿಳಿಯಬೇಕು).

**ತೇಷು ಜಂಬ್ವಾದಿಷು** ಆ ಜಂಬುದ್ವೀಪ ಮೊದಲಾದವುಗಳಲ್ಲಿ **ಬರ್ಹಿಷ್ಮತೀಪತಿಃ** ಬರ್ಹಿಷ್ಮತಿಯ ಯಜಮಾನರಾದ ಪ್ರಿಯವ್ರತರಾಜರು **ಅನುವ್ರತಾನ್** ತಮ್ಮನ್ನು ಅನುಸರಿಸುತ್ತಿದ್ದ **ಆತ್ಮಜಾನ್** ಮಕ್ಕಳಾದ ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಹಿರಣ್ಯರೇತ, ಘೃತಪೃಷ್ಠ, ಮೇಧಾತಿಥಿ, ವೀತಿಹೋತ್ರ ಎಂಬ **ಸಂಜ್ಞಾನ್** ಹೆಸರಿನವರನ್ನು **ಯಥಾಸಂಖ್ಯಂ** ಕ್ರಮವಾಗಿ **ಏಕೈಕಸ್ಮಿನ್** ಒಂದೊಂದರಲ್ಲಿ **ಏಕೈಕಂ** ಒಬ್ಬೊಬ್ಬನನ್ನು **ಅಧಿಪತಿಂ ವಿದಧೇ** ರಾಜನನ್ನಾಗಿ ಮಾಡಿದರು. ।।೩೩।।

**ದುಹಿತರವಮೂರ್ಜಸ್ವತೀಂ ನಾಮೋಶನಸೇ ಪ್ರಾಯಚ್ಛದ್ಯಸ್ಯಾಮಾಸೀ-ದ್ದೇವಯಾನೀ ನಾಮ ಕಾವ್ಯಸುತಾ ।।೩೪।।**

**ಊರ್ಜಸ್ವತೀಂ ನಾಮ ದುಹಿತರಂ** ಊರ್ಜಸ್ವತಿ ಎಂಬ ಮಗಳನ್ನು **ಉಶನಸೇ** ಶುಕ್ರಾಚಾರ್ಯರಿಗೆ **ಪ್ರಾಯಚ್ಛತ್** ವಿವಾಹ ಮಾಡಿಕೊಟ್ಟನು **ಯಸ್ಯಾಂ** ಯಾವ ಊರ್ಜಸ್ವತಿಯಲ್ಲಿ **ದೇವಯಾನೀ ನಾಮ** ದೇವಯಾನಿ ಎಂಬ **ಕಾವ್ಯಸುತಾ** ಶುಕ್ರಚಾರ್ಯರ ಮಗಳು ಜನಿಸಿದಳು.

ತಮ್ಮ ಮಕ್ಕಳನ್ನು ರಾಜರನ್ನಾಗಿ ಮಾಡಿದರೆಂದು ಹೇಳಿದ್ದರಿಂದ ಅರಾಜಕವಾಗಿ ಪರಸ್ಪರ ವಿವಾದರಿಂದ ಜನರಿಗೆ ವಿನಾಶಕ್ಕೆ ಅವಕಾಶವಿಲ್ಲವೆಂದು ತಿಳಿಸಿರುವರು. ಶುಕ್ರಾಚಾರ್ಯರಿಗೆ ಮಗಳನ್ನು ಮದುವೆ ಮಾಡಿಕೊಟ್ಟರೆಂದು ಹೇಳಿದ್ದರಿಂದ ತಂಗಿಗೆ ಬಳುವಳಿ ಕೊಡುವಲ್ಲಿ ಸಹೋದರರಲ್ಲಿ ಪರಸ್ಪರ ವಿವಾದಕ್ಕೆ ಅವಕಾಶ ಕೊಡದೇ ತಾವೇ ವಿವಾಹ ಕಾರ್ಯವನ್ನು ಮುಗಿಸಿದರೆಂದು ಹೇಳಿದ್ದರಿಂದ ಆ ಮಗಳು ರಾಜಕುಲ ಅಭಿವೃದ್ಧಿಗೆ ಕಾರಣಳಾದಳೆಂದು ಹೇಳಿದಂತಾಯಿತು.।।೩೪।।

## ಹರಿಭಕ್ತರ ಮಹಿಮೆ ಅಪಾರ

ಇದುವರೆಗೆ ಹೇಳಿದ ಪ್ರಿಯವ್ರತನ ಸಾಮರ್ಥ್ಯ ಬಹಳ ಆಶ್ಚರ್ಯವೆಂಬ ರಾಜನ ಅಭಿಪ್ರಾಯ ತಿಳಿದು ಹರಿಭಕ್ತರಿಗೆ ಇದೇನಾಶ್ಚರ್ಯವಲ್ಲ ಎಂದು ಹೇಳುವರು ಶುಕಾಚಾರ್ಯರು

**ನೈವಂ ವಿಧಃ ಪುರುಷಕಾರ ಉರುಕ್ರಮಸ್ಯ**
**ಪುಂಸಾಂ ತದಂಘ್ರಿರಜಸಾ ಜಿತಷಡ್ಗುಣಾನಾಮ್ ।**




**ಚಿತ್ರಂ ವಿದೂರವಿಗತಃ ಸಕೃದಾದದೀತ**
**ಯನ್ನಾಮಧೇಯಮಧುನಾ ಸ ಜಹಾತಿ ಬಂಧಮ್ ।।೩೫।।**

**ಯನ್ನಾಮಧೇಯಂ** ಯಾವ ಶ್ರೀಹರಿಯ ನಾರಾಯಣಾದಿ ನಾಮಗಳನ್ನು **ವಿದೂರವಿಗತಃ** ಬ್ರಾಹ್ಮಣ ಕ್ಷತ್ರಿಯರಿಗಿಂತ ದೂರನಾದ ಶೂದ್ರನಿಗಿಂತ ದೂರನಾದ ಚಂಡಾಲನು **ಸಕೃತ್** ಒಂದು ಸಲ **ಆದದೀತ** ಭಕ್ತಿ ಶ್ರದ್ಧೆಯಿಂದ ಸ್ವೀಕರಿಸಿದರೆ **ಸಃ** ಅವನು **ಅಧುನಾ** ತಕ್ಷಣದಲ್ಲಿ **ಬಂಧಂ** ಬಂಧಕವಾದ ಪಾಪವನ್ನು **ಜಹಾತಿ** ಬಿಡುತ್ತಾನೆ ಅಂದಮೇಲೆ **ತದಂಘ್ರಿರಜಸಾ** ಪರಮಾತ್ಮನ ಪಾದಧೂಳಿ ಸೇವನೆಯಿಂದ **ಜಿತಷಡ್ಗುಣಾನಾಂ** ಕಾಮಾದಿಗಳನ್ನು ಗೆದ್ದ **ಉರುಕ್ರಮಸ್ಯ ಪುಂಸಾಂ** ಭಗವದ್ಭಕ್ತರಿಗೆ **ಏವಂ ವಿಧಃ ಪುರುಷಕಾರಃ ನ ಚಿತ್ರಂ** ಈ ವಿಧ ಪೌರುಷವು ಆಶ್ಚರ್ಯವೇನಲ್ಲ.

**ವಿದೂರವಿಗತ ಯಾರು?**

★ಬ್ರಾಹ್ಮಣ ಕ್ಷತ್ರಿಯರಿಗಿಂತ ದೂರನಾದ ಶೂದ್ರನು ವಿದೂರನು. ಅವನಿಗಿಂತ ದೂರನಾದ ಚಂಡಾಲನು ವಿದೂರವಿಗತನು.

**ಪ್ರಿಯವ್ರತರ ಸಂಸಾರ ನಿವೃತ್ತಿ**

ಹಿಂದೆ ಹೇಳಿದ ಪರಾಕ್ರಮವನ್ನು ಅನುವಾದ ಮಾಡುತ್ತಾ ಸಂಸಾರದಿಂದ ನಿವೃತ್ತಿಯಾದುದನ್ನೇ ಹೇಳುವರು.

**ಸ ಏವಮಪರಿಮಿತಬಲಪರಾಕ್ರಮ ಏಕದಾ ತು ದೇವಋಷಿಚರಣಾನು-ಸೇವಯಾನು ಪತಿತಗುಣವಿಸರ್ಗಸಂಸರ್ಗೇಣಾನಿವೃತ್ತಮಿವಾತ್ಮಾನಂ ಮನ್ಯಮಾನಃ ಆತ್ಮನಿರ್ವೇದ ಇದಮಾಹ ।।೩೬।।**

**ಏವಂ** ಈ ರೀತಿ **ಅಪರಿಮಿತಬಲಪರಾಕ್ರಮಃ** ಮಿತಿ ಇಲ್ಲದ ಬಲಪರಾಕ್ರಮಗಳುಳ್ಳ **ಸಃ** ಪ್ರಿಯವ್ರತ ಮಹಾರಾಜನು **ಏಕದಾ** ಒಂದು ಸಲ **ದೇವರ್ಷಿಚರಣಾನುಸೇವಯಾ** ನಾರದರ ಪಾದಸೇವೆಯಿಂದ **ಅನುಪತಿತ** ಶ್ರೀಹರಿ ಇಚ್ಛೆಯಿಂದ, ಆಜ್ಞೆಯಿಂದ ಪ್ರಾಪ್ತವಾದ **ಗುಣವಿಸರ್ಗಸಂಸರ್ಗೇಣ** ಸತ್ವಾದಿಗುಣ ಕಾರ್ಯವಾದ ವನಿತಾದಿ ವಿಷಯ ಸಂಬಂಧದಿಂದ **ಅನಿವೃತ್ತಂ ಇವ** ನಿವೃತ್ತಿಯನ್ನು ಹೊಂದದಿರುವವನಂತೆ **ಆತ್ಮಾನಂ** ತನ್ನನ್ನು **ಮನ್ಯಮಾನಃ** ತಿಳಿದವನಾಗಿ **ಆತ್ಮನಿರ್ವೇದಃ** ವೈರಾಗ್ಯವನ್ನು ಹೊಂದಿ **ಇದಂ ಆಹ** ಮುಂದೆ ಹೇಳುವಂತೆ ಹೇಳಿದನು. ।।೩೬।।

**ಅಹೋ ಅಸಾಧ್ವನುಷ್ಠಿತಂ ಯದಭಿನಿವೇಶಿತೋಽಹಮಿಂದ್ರಿಯೈರವಿದ್ಯಾ-ವಿರಚಿತವಿಷಮ ವಿಷಯಾಂಧಕೂಪೇ ತದಲಮಲಂ ಮನುಷ್ಯವನಿತಾ-ವಿನೋದಮೃಗಂ ಮಾಂ ದಿಗ್ಧಿಗಿತಿ ಗರ್ಹಯಾಂಚಕಾರ ।।೩೭।।**

**ಅಹೋ** ಆಶ್ಚರ್ಯವು **ಮಯಾ ಅನುಷ್ಠಿತಂ ಅಸಾಧು** ನಾನು ಇದುವರೆಗೆ ಮಾಡಿರುವುದು ಸರಿಯಾದುದಲ್ಲ **ಯತ್** ಯಾವ ಕಾರಣ **ಅವಿದ್ಯಾರಚಿತೇ** ಭಗವದಿಚ್ಛೆಯಿಂದ ಅನುಗ್ರಹೀತವಾದ ಪ್ರಕೃತಿ ನಿರ್ಮಿತವಾದ **ವಿಷಮ ವಿಷಯಾಂಧಕೂಪೇ** ಕಠಿಣವಾದ ವಿಷಯಗಳೆಂಬ ಕತ್ತಲು ಭಾವಿಯಲ್ಲಿ **ಇಂದ್ರಿಯೈಃ** ಇಂದ್ರಿಯಗಳಿಂದ **ಅಭಿನಿವೇಶಿತಃ** ಅಭಿಮಾನವನ್ನು ಹೊಂದಿಸಲ್ಪಟ್ಟೆನು **ತತ್** ಆದ ಕಾರಣ **ಅಸಾಧು ಅಲಂ** ಸಾಕು ಸಾಕು ಇನ್ನು **ಮನುಷ್ಯವನಿತಾವಿನೋದಮೃಗಂ** ಮನುಷ್ಯರೂಪದ ಹೆಣ್ಣಿನ ಕ್ರೀಡೆಯ ಮಂಗನಾದ **ಮಾಂ ಧಿಕ್ ಧಿಕ್** ನನಗೆ ಧಿಕ್ಕಾರ **ಇತಿ ಗರ್ಹಯಾಂಚಕಾರ** ನಿಂದಿಸಿದನು. ।।೩೭।।

**ಪರದೇವತಾಪ್ರಸಾದಾಧಿಗತಾತ್ಮಪ್ರತ್ಯವಮರ್ಶನಪರಿನಿರ್ವೃತಃ ಸ್ವಪುತ್ರೇಭ್ಯ ಇಮಾಂ ಗಾಂ ಯಥಾದಾಯಂ ವಿಭಜ್ಯ ಭುಕ್ತಭೋಗಾಂ ಚ ಮಹಿಷೀಂ ಮೃತಕಮಿವ ಸಹ ಮಹಾವಿಭೂತಿಮಪಹಾಯ ಸ್ವಯಂ ನಿಹಿತನಿರ್ವೇದೋ ಹೃದಿಗೃಹೀತರುಚಿರ ವಿಹಾರಾನುಭವೋ ನಾರದಸ್ಯ ಪದವೀಮನುಸಸಾರ ।।**

**ಪರದೇವತಾಪ್ರಸಾದಾಧಿಗತ** ನಾರಾಯಣನನ ಅನುಗ್ರಹದಿಂದ ಪ್ರಾಪ್ತವಾದ **ಆತ್ಮಪ್ರತ್ಯವಮರ್ಶನಪರಿನಿರ್ವೃತಃ** ಪರಮಾತ್ಮನ ಜ್ಞಾನದಿಂದ ಚೆನ್ನಾಗಿ ಆವಿರ್ಭೂತವಾದ ಆನಂದದಿಂದ ಪೂರ್ಣನಾಗಿ **ಸ್ವಪುತ್ರೇಭ್ಯಃ** ತನ್ನ ಮಕ್ಕಳಿಗೆ **ಇಮಾಂ ಗಾಂ** ಈ ಭೂಮಿಯನ್ನು **ಯಥಾದಾಯಂ** ಯಾವನು ಎಷ್ಟು ಪಿತೃಧನಕ್ಕೆ ಯೋಗ್ಯನೋ ಅವನಿಗೆ ಅಷ್ಟನ್ನು **ವಿಭಜ್ಯ** ವಿಭಾಗ ಮಾಡಿಕೊಟ್ಟು **ಭುಕ್ತಭೋಗಾಂ** ಅನುಭವಿಸಿದ **ಸಹಮಹಾವಿಭೂತಿಂ** ಸಾಮ್ರಾಜ್ಯ ಸಂಪತ್ತಿನಿಂದ ಸಹಿತಳಾದ **ಮಹಿಷೀಂ** ರಾಣಿಯನ್ನು **ಮೃತಕಮಿವ** ಶವದಂತೆ **ಅಪಹಾಯ** ಬಿಟ್ಟು **ಸ್ವಯಂ** ತಾನು **ನಿಹಿತನಿರ್ವೇದಃ** ವೈರಾಗ್ಯಯುಕ್ತನಾಗಿ **ಹೃದಿ** ಹೃದಯದಲ್ಲಿ **ಗೃಹೀತರುಚಿರಹರಿ-ವಿಹಾರಾನುಭಾವಃ** ಮನೋಹರವಾದ ಶ್ರೀಹರಿಯ ಕ್ರೀಡಾಸಾಮರ್ಥ್ಯಗಳನ್ನು ಧರಿಸಿದವನಾಗಿ **ಭಗವತಃ ನಾರದಸ್ಯ** ಪೂಜ್ಯರಾದ ನಾರದರ **ಪದವೀಂ** ನಿವೃತ್ತಿಮಾರ್ಗವನ್ನು (ಸಂನ್ಯಾಸವನ್ನು) **ಅನುಸಸಾರ** ಸ್ವೀಕರಿಸಿದನು. ।।೩೮।।

**ತಸ್ಯ ಹ ವಾ ಏತೇ ಶ್ಲೋಕಾಃ -**
**ಪ್ರಿಯವ್ರತಕೃತಂ ಕರ್ಮ ಕೋ ನು ಕುರ್ಯಾದ್ವಿನೇಶ್ವರಮ್ ।**
**ಯೋ ನೇಮಿನಿಮ್ನೈರಕರೋಚ್ಛಾಯಾಂ ಘ್ನನ್ ಸಪ್ತವಾರಿಧೀನ್ ॥೩೯॥**

**ತಸ್ಯ** ಪ್ರಿಯವ್ರತನ ಮಹಿಮೆ ಹೇಳುವ **ಏತೇ ಶ್ಲೋಕಾಃ** ಪೂರ್ವಪ್ರಸಿದ್ಧವಾದ ಶ್ಲೋಕಗಳನ್ನು ಹೇಳುವೆವು. ವೇದದಲ್ಲಿ '**ತದಪ್ಯೇಷ ಶ್ಲೋಕೋ ಭವತಿ**' ಎಂದು ಹೇಳಿದಂತೆ ಎಂದು ಭಾವ.

**ಪ್ರಿಯವ್ರತಕೃತಂಕರ್ಮ** ಪ್ರಿಯವ್ರತನು ಮಾಡಿದ ಕಾರ್ಯವನ್ನು **ಈಶ್ವರಂ ವಿನಾ** ಶ್ರೀಹರಿಯನ್ನು ಬಿಟ್ಟು **ಕೋ ನು ಕುರ್ಯಾತ್** ಯಾರು ತಾನೇ ಮಾಡುವರು (ಯಾರೂ ಮಾಡಲಾರರು) **ಯಃ** ಯಾವನು **ನೇಮಿನಿಮ್ನೈಃ** ರಥದ ಚಕ್ರದ ಅಲಗಿನಿಂದ ಮಾಡಲ್ಪಟ್ಟ ತಗ್ಗು ಪ್ರದೇಶಗಳಿಂದ **ಛಾಯಾಂ ನಿಘ್ನನ್** ಕತ್ತಲೆಯನ್ನು ಕಳೆಯುತ್ತಾ **ಸಪ್ತವಾರಿಧೀನ್ ಅಕರೋತ್** ಏಳು ಸಮುದ್ರಗಳನ್ನು ವಿಸ್ತಾರಗೊಳಿಸಿದನು. ॥೩೯॥

**ಭೂಸಂಸ್ಥಾನಂ ಕೃತಂ ಯೇನ ಸರಿದ್ಗಿರಿವನಾದಿಭಿಃ ।**
**ಸೀಮಾ ಚ ಭೂತನಿರ್ವೃತ್ಯೈ ದ್ವೀಪೇ ದ್ವೀಪೇ ವಿಭಾಗಶಃ ॥೪೦॥**

**ಯೇನ** ಯಾರಿಂದ **ಭೂತನಿರ್ವೃತ್ಯೈ** ಎಲ್ಲ ಜನರ ಸುಖಕ್ಕಾಗಿ **ದ್ವೀಪೇ ದ್ವೀಪೇ** ಪ್ರತಿಯೊಂದು ದ್ವೀಪದಲ್ಲಿ **ಸರಿದ್ಗಿರಿವನಾದಿಭಿಃ** ನದೀ ಪರ್ವತ ವನ ಮುಂತಾದವುಗಳಿಂದ **ಸೀಮಾ ಚ** ಎಲ್ಲೆಯೂ **ಕೃತಾ** ಮಾಡಲ್ಪಟ್ಟಿತು (ಇಲ್ಲವಾದರೆ ಜಗಳವಾಗುತಿತ್ತು) ಮತ್ತು **ಭೂಸಂಸ್ಥಾನಂ ಕೃತಂ** ದ್ವೀಪಗಳೆಂಬ ಭೂಮಿಯ ಅವಯವಗಳು ಮಾಡಲ್ಪಟ್ಟವು **ವಿಭಾಗಶಃ** ವಿಭಾಗಗಳಾಗಿ ಎಲ್ಲೆಗಳು ಮಾಡಲ್ಪಟ್ಟವು.

**ಭೌಮಂ ದಿವ್ಯಂ ಮಾನುಷಂ ಚ ಮಹಿತ್ವಂ ಯೋಗಕರ್ಮಜಮ್ ।**
**ಯಶ್ಚಕ್ರೇ ನಿರಯೌಪಮ್ಯಂ *ಪೌರುಷಂ ತು ಜನಪ್ರಿಯಮ್ ॥೪೧॥**

★ **ಪುರುಷಾನುಜನಪ್ರಿಯಃ ಎಂದು ಪಾಠಾಂತರ.**

**ಯಃ** ಯಾರು **ಯೋಗಕರ್ಮಜಂ** ಯೋಗಸಾಮರ್ಥ್ಯದಿಂದುಂಟಾದ **ಭೌಮಂ ದಿವ್ಯಂ ಮಾನುಷಂ** ಭೂಮಿ ಸ್ವರ್ಗ ಮತ್ತು ಮನುಷ್ಯ ಸಂಬಂಧಿಯಾದ **ಮಹಿತ್ವಂ** ಮಾಹಾತ್ಮ್ಯವೆಂಬ **ಜನಪ್ರಿಯಂ ಪೌರುಷಂ** ಜನಪ್ರಿಯವಾದ ಸಾಮರ್ಥ್ಯವನ್ನು

**ನಿರಯೋಪಮ್ಯಂ** ನರಕಸುಖ ಸಮಾನವೆಂದು **ಚಕ್ರೇ** ಮಾಡಿದರು ಅಂದರೆ ತ್ಯಜಿಸಿದರೆಂದು ಭಾವ.

**ಪುರುಷಾನುಜನಪ್ರಿಯಃ** ಎಂಬ ಪಾಠದಲ್ಲಿ ಶ್ರೀಹರಿಯ ಭಕ್ತರೇ ಪ್ರಿಯವಾಗಿವುಳ್ಳ **ಯಃ** ಯಾವ ಪ್ರಿಯವ್ರತರಾಜರೆಂದು ಅನ್ವಯ.

## ಪ್ರಿಯವ್ರತರು ಮಾಡಿದ ಕಾರ್ಯ ಶ್ರೀಹರಿಯನ್ನು ಬಿಟ್ಟು ಇನ್ಯಾರೂ ಮಾಡಲಾರರೇ?

ಪ್ರಿಯವ್ರತರು ಮಾಡಿದ ಇಂತಹ ಕಾರ್ಯವನ್ನು ಶ್ರೀಹರಿಯನ್ನು ಬಿಟ್ಟು ಯಾವನು ತಾನೇ ಮಾಡಿಯಾನು? ಎಂದು ಹಿಂದಿನ ಶ್ಲೋಕಗಳಲ್ಲಿ ಹೇಳಿದುದರ ಅಭಿಪ್ರಾಯ ವೇನೆಂದರೆ ಶ್ರೀಹರಿಯೇ ಪ್ರಿಯವ್ರತರಲ್ಲಿ ನಿಂತು ಇಂತಹ ಕಾರ್ಯವನ್ನು ಮಾಡಿಸಿದನು. ಅವನ ಅನುಗ್ರಹವಿಲ್ಲದೇ ಯಾರೂ ಮಾಡಲಾರರು ಎಂದು ತಾತ್ಪರ್ಯವೇ ಹೊರತು ಪ್ರಿಯವ್ರತರಿಗಿಂತ ಉತ್ತಮರು ಈ ಕೆಲಸವನ್ನು ಮಾಡಲಾರರು ಎಂದಲ್ಲ.

## ಮೊದಲು ಸಪ್ತಸಮುದ್ರಗಳು ಸಪ್ತದ್ವೀಪಗಳು ಇರಲಿಲ್ಲವೇ?

ಇಲ್ಲಿ '**ಯೋ ನೇಮಿನಿಮ್ನೈಃ ಸಪ್ತವಾರಿಧೀನ್ ಅಕರೋತ್**'' ಎಂದು ಹೇಳಿದ್ದರಿಂದ ಮೊದಲಿಗೆ ಸಮುದ್ರವಿರಲಿಲ್ಲವೆಂದು ತೋರುವುದು. ಅದು ಪ್ರಮಾಣ ವಿರುದ್ಧ ಆದಕಾರಣ ಅಭಿಪ್ರಾಯವನ್ನು ಪ್ರಮಾಣದಿಂದಲೇ ಹೇಳುವರು ಆಚಾರ್ಯರು

ತಾತ್ಪರ್ಯ - ಪೂರ್ವಸೃಷ್ಟಾನ್ ರಥಾವೃತ್ಯಾ ಸ್ಥೂಲಾಂಶ್ಚಕ್ರೆ ಪ್ರಿಯವ್ರತಃ ।
ಸಮುದ್ರಾಂಸ್ತೇನ ತತ್ಕರ್ತೇತ್ಯಾಹುರೇನಂ ಪ್ರಿಯವ್ರತಮ್ ॥ ಇತಿ ಗಾರುಡೇ

ಪಾದ್ಮಕಲ್ಪದಲ್ಲಿ ಸೃಷ್ಟಿಸಲ್ಪಟ್ಟ ಸಮುದ್ರಗಳನ್ನು ಪಾದ್ಮಕಲ್ಪ ಪ್ರಲಯದಲ್ಲಿ ನೀರು ತುಂಬಿ ಸಂಕುಚಿತವಾದವುಗಳನ್ನು ಮತ್ತೆ ವಾರಾಹ ಕಲ್ಪದಲ್ಲಿ ಏಳು ಸಲ ಪ್ರಿಯವ್ರತರಾಜನು ತನ್ನ ರಥವನ್ನು ತಿರುಗಾಡಿಸಿ ಮೊದಲಿನಂತೆ ವಿಸ್ತಾರಮಾಡಿದನು. ಆದಕಾರಣವೇ ಪ್ರಿಯವ್ರತನನ್ನು ಸಮುದ್ರಕರ್ತನೆನ್ನುತ್ತಾರೆ ಎಂದು ಗರುಡ ಪುರಾಣದಲ್ಲಿ ಹೇಳಿದೆ. ।।೪೧।।

॥ ಇಲ್ಲಿಗೆ ಒಂದನೇ ಅಧ್ಯಾಯವು ಮುಗಿಯಿತು ॥




## ಪ್ರಥಮಾಧ್ಯಾಯ ಸಾರ

ಪರೀಕ್ಷಿತರಾಜರು ಪ್ರಶ್ನಿಸುವರು - ಮುನಿವರ್ಯ ಶುಕಾಚಾರ್ಯ! ಜೀವರಿಗೆ ತಮ್ಮ ಮತ್ತು ಶ್ರೀಹರಿಯ ಜ್ಞಾನವಿಲ್ಲದಿರುವುದೇ ಅಪಜಯವು. ಇದು ಅವರ ದುಷ್ಕರ್ಮ ನಿಮಿತ್ತಿಕವಾದುದು. ಈ ಸಂಸಾರ ಕಾರಣವಾದ ಕರ್ಮಾರ್ಜನೆಯಿಂದ ಅವರು ಮತ್ತೆ ಮತ್ತೆ ದುಃಖವನ್ನು ಹೊಂದುವರು. ಇದೆಕ್ಕೆಲ್ಲ ಕಾರಣ ದೇಹಗೇಹಾದಿಗಳಲ್ಲಿ 'ನಾನು' 'ನನ್ನದು'' ಎಂಬ ಸ್ವಾತಂತ್ರ್ಯಾಭಿಮಾನ. ಇದು ಹುಟ್ಟುವುದು ಗೃಹಸ್ಥಾಶ್ರಮದಲ್ಲಿ. ನಾರದರ ಉಪದೇಶದಿಂದ ಶ್ರೀಹರಿಯನ್ನು ತಿಳಿದು ಅವನಲ್ಲಿಯೇ ಸಂತೋಷಿಸುವ ಭಗವದ್ಭಕ್ತರಾದ ಪ್ರಿಯವ್ರತರು ಇಂತಹ ಗೃಹಸ್ಥಾಶ್ರಮದಲ್ಲಿ ಹೇಗೆ ಆಸಕ್ತರಾದರು? ಆತ್ಮಾರಾಮರು, ಮಹನೀಯರಿಂದ ಉಪದೇಶ ಪಡೆದವರೂ, ಫಲಾಪೇಕ್ಷೆ ಇಲ್ಲದವರೂ ಆದ ಅಂತಹ ಉತ್ತಮಾಧಿ ಕಾರಿಗಳಿಗೆ ಕುಟುಂಬಾಭಿನಿವೇಶವು ಬರಲು ಸಾಧ್ಯವೇ ಇಲ್ಲ. ಬ್ರಹ್ಮರ್ಷಿಗಳೇ! ಉತ್ತಮಭಗವದ್ಭಕ್ತರು, ಪವಿತ್ರ ಕೀರ್ತಿಯುಳ್ಳ ಶ್ರೀಹರಿಯ ಪಾದಛಾಯೆಯಿಂದ (ಜ್ಞಾನದಿಂದ) ಪರಮಾನಂದಪೂರ್ಣ ಮನಸ್ಕರೂ ಆದ ಇವರಿಗೆ ಕುಟುಂಬದಲ್ಲಿ, ಆದರಿಂದ ಬರುವ ಲೌಕಿಕ ಸುಖದಲ್ಲಿ ಅಪೇಕ್ಷೆಯು ಬರುವುದಿಲ್ಲವಲ್ಲವೇ? ಬ್ರಹ್ಮಜ್ಞಾನಿಗಳೇ! ನನಗೆ ಮತ್ತೊಂದು ದೊಡ್ಡ ಸಂಶಯ. ಮಡದಿ ಮನೆ ಮಕ್ಕಳಲ್ಲಿ ಆಸಕ್ತರಾದ ಪ್ರಿಯವ್ರತರಿಗೆ ಶ್ರೀಹರಿಯಲ್ಲಿ ಸಂತತವಾದ ಉಪಾಸನೆಯು ಹೇಗೆ ಬಂತು? ಅದರಿಂದ ಮುಕ್ತಿಯಾದರೂ ಹೇಗೆ ಆಯಿತು? ಇದು ಅಸಂಭಾವಿತವಲ್ಲವೇ?

ಶುಕಾಚಾರ್ಯರು ಉತ್ತರಿಸುವರು. ನಿವೃತ್ತಿಮಾರ್ಗಕ್ಕೆ ಕೊರತೆ ಇಲ್ಲದಂತೆ ಕುಟುಂಬಾಸಕ್ತಿ ಇದ್ದರೆ ಗೃಹಸ್ಥನೂ ಮುಕ್ತನಾಗುವನೆಂಬುದೇ ಸರಿ. ಶ್ರೀ ಹರಿಯು

ನಿರ್ದುಷ್ಟಯಶಸ್ಸುಳ್ಳವನು. ಮೋಕ್ಷಾದಿಸಕಲಪುರುಷಾರ್ಥಗಳನ್ನು ಕೊಡುವ ಅವನ ಪಾದಕಮಲಗಳಮಕರಂದರಸದಲ್ಲಿ ಹುಟ್ಟಿದಾಗಿನಿಂದಲೂ ಮನಸ್ಸನ್ನು ಸ್ಥಿರಪಡಿಸಿಕೊಂಡಿರುವ ಅಧಿಕಾರಿ ಚೇತನನಿಗೆ ಗೃಹಸ್ಥಾಶ್ರಮವು ಮುಕ್ತಿವಿರೋಧಿಯಲ್ಲ. ವೇದಾಂತದಲ್ಲಿ ಪ್ರತಿಪಾದಿತನಾದ ಶ್ರೀಹರಿಯ ಪಾದಾರವಿಂದಗಳಲ್ಲಿ ನಿರಂತರ ರತನಾದ ಸರ್ವಾಶ್ರಮಪೂಜ್ಯ ಸಂನ್ಯಾಸಿಗೆ ಮಾತ್ರ ಗೃಹಸ್ಥಾಶ್ರಮವು ಮುಕ್ತಿವಿರೋಧಿ. ಮೇಲೆ ಹೇಳಿದ ಉತ್ತಮಾಧಿಕಾರಿಯು ಭಗವದ್ಭಕ್ತರಿಗೂ ಸಂನ್ಯಾಸಿ ಸಮಾಜಕ್ಕೂ ಪ್ರಿಯನು. ಅವನು ತನಗೆ ವಿಹಿತವಾದ ಮೋಕ್ಷಜನಕ ನಿವೃತ್ತಿ ಕರ್ಮವನ್ನು ಎಷ್ಟೇ ಎಡರುತೊಡರುಗಳು ಬಂದರೂ ಅವುಗಳಿಂದ ಕುಂಠಿತವಾಗದಂತೆ ಪ್ರಾಯಿಕವಾಗಿ ನಡೆಸಿಕೊಂಡೇ ಬರುವನು. (ಸಾಮಾನ್ಯ ಜೀವನಾದರೆ ಈಕ್ಷಣತ್ರಯಗಳಿಗೆ ಸಿಲುಗಿ ನಿವೃತ್ತಿಮಾರ್ಗವನ್ನು ಬಿಟ್ಟು ಬಿಡುವನು). ಇದಕ್ಕೆ ಉತ್ತಮ ಭಕ್ತರ ಅನುಗ್ರಹ ಅವನಿಗಿರಬೇಕು.

ಪ್ರಿಯವ್ರತರಾಜರು ನೀತಿಶಾಸ್ತ್ರದಲ್ಲಿ ಹೇಳಿದ ಎಲ್ಲ ರಾಜಗುಣಗಳಿಗೂ ಮುಖ್ಯ ಪಾತ್ರರಾಗಿದ್ದರು. ಅದರಂತೆ ಸ್ವಯಂಭುವ ಮನುರಾಜರು ಇವರನ್ನು ರಾಜನಾಗೆಂದು ನಿಯೋಜಿಸಿದರು. ಆದರೆ ಪರಮಭಗವದ್ಭಕ್ತರಾದ ಈ ರಾಜಪುತ್ರರು ನಾರದರ ಪಾದ ಸೇವೆಯಿಂದ ಶ್ರೀ ಹರಿಯ ತತ್ತ್ವವನ್ನು ಸರಿಯಾಗಿ ತಿಳಿದಿದ್ದರಿಂದ ಸಂನ್ಯಾಸ ದೀಕ್ಷೆಯನ್ನು ಪಡೆಯಲಪೇಕ್ಷೆಯುಳ್ಳವರಾಗಿದ್ದರು. ಶ್ರೀ ಹರಿಯಲ್ಲಿ ಸಂತತ ಚಿತ್ತೈಕಾಗ್ರತೆಯಿಂದ ತಮ್ಮ ಎಲ್ಲ ಇಂದ್ರಿಯ ವ್ಯಾಪಾರಗಳನ್ನು ಸಮರ್ಪಿಸಿದ ಈ ಪ್ರಿಯವ್ರತರು ತಂದೆಯ ಅಪ್ಪಣೆಯನ್ನು ಸರಿ ಎಂದು ಮನ್ನಿಸಲಿಲ್ಲ. ಪಿತೃವಾಕ್ಯವು ಮೀರತಕ್ಕದ್ದಲ್ಲವೆಂದು ಅವರಿಗೆ ತಿಳಿದಿತ್ತು. ಆದರೂ ರಾಜ್ಯಾಧಿಕಾರದಲ್ಲಿ ಮೋಕ್ಷವಿರೋಧಿ ವಿಷಯಸಂಗದಿಂದ ತಮ್ಮ ಮನಸ್ಸು ಮತ್ತೆ ಮತ್ತೆ ಸಂಸಾರಕ್ಕೆ ಕಾರಣವಾಗಿ ಪರಾಜಿತವಾಗುವುದೆಂದೇ ವಿಮರ್ಶಿಸಿ ತಿಳಿದಿದ್ದರು. ಆ ಕಾರಣದಿಂದಲೇ ತಂದೆಯ ಮಾತಿಗೆ ಒಪ್ಪಿಗೆ ಕೊಡಲೇ ಇಲ್ಲ. (ತಪಸ್ಸಿಗಾಗಿ ಗಂಧಮಾದನ ಪರ್ವತದ ತಪ್ಪಲಿಗೆ ಬಂದು ನೆಲೆಸಿದರು. ಒಂದು ದಿನ ನಾರದರು ಅಲ್ಲಿಗೆ ಬಂದು ಪ್ರಿಯವ್ರತರಿಗೆ ಶ್ರೀಹರಿಯ ತತ್ತ್ವವನ್ನು ಉಪದೇಶಿಸುತ್ತಿದ್ದರು. ಆ ವೇಳೆಗೆ ಮಗನನ್ನು ರಾಜನನ್ನಾಗಿ ಮಾಡ ಬಯಸಿ ಸ್ವಾಯಂಭುವಮನುಗಳೂ ಆಶ್ರಮಕ್ಕೆ ಬಂದಿದ್ದರು).




ಹೀಗೆ ಪ್ರಿಯವ್ರತರಾಜರು ರಾಜ್ಯಾಧಿಕಾರವಿಮುಖರಾಗಿರಲು ಅವನ ಯೋಗ್ಯತೆಯನ್ನು ಅರಿತಿದ್ದ ದೇವತೆಗಳಿಗೆಲ್ಲ ಮೊದಲಿಗರಾಗಿ ಶ್ರೀಹರಿಯಿಂದ ಸೃಷ್ಟರಾಗಿದ್ದ ಪೂಜ್ಯರಾದ ಬ್ರಹ್ಮದೇವರು ತಮ್ಮ ಸತ್ಯಲೋಕದಿಂದ ಭೂಲೋಕಕ್ಕೆ ಇಳಿದು ಬಂದರು.

ಅವರು ಸತ್ವ ಮೊದಲಾದ ಗುಣಗಳಿಂದ ಸೃಷ್ಟವಾಗಿರುವ ಈ ಜಗತ್ತಿನ ವಿಸ್ತಾರವನ್ನೇ ಆಲೋಚಿಸುತ್ತಿದ್ದರು. ಅವರು ಜಗತ್ತನ್ನು ಬೆಳೆಸುವ (ಹೀಗೆ ಮಾಡಬೇಕೆಂದು) ಅಭಿಪ್ರಾಯವನ್ನು ತೀರ್ಮಾನಿಸಿಕೊಂಡಿದ್ದರು. ಸೃಷ್ಟಿಯ ನಂತರದ ಇಷ್ಟ ಪ್ರಾಪ್ತಿ ಅನಿಷ್ಟ ನಿವೃತ್ತಿ ಉಪಾಯವನ್ನು ಪ್ರತ್ಯಕ್ಷವಾಗಿ ಕಂಡಿದ್ದರು. ಭೂಲೋಕಕ್ಕೆ ಹೊರಟ ಬ್ರಹ್ಮದೇವರನ್ನು ಎಲ್ಲ ವೇದಾಭಿಮಾನಿ ದೇವತೆಗಳೂ ಬ್ರಹ್ಮಪುತ್ರರಾದ ಮರೀಚಿ ಮುಂತಾದ ಪ್ರಜೇಶ್ವರರೂ ಅನುಸರಿಸಿ ಹೊರಟಿದ್ದರು. ಆಕಾಶದಲ್ಲಿ ತಮ್ಮ ತಮ್ಮ ವಿಮಾನಗಳಲ್ಲಿ ಸಾಲು ಸಾಲಾಗಿ ಕಾದು ನಿಂತಿದ್ದ ಉತ್ತಮ ದೇವತೆಗಳು ದಾರಿಯುದ್ದಕ್ಕೂ ಭಕ್ತಿಯಿಂದ ಪೂಜಿಸುತ್ತಿದ್ದರು. ಸಿದ್ಧರೂ, ಗಂಧರ್ವರೂ, ಸಾಧ್ಯರು, ಚಾರಣರು, ಋಷಿಗಳು ದಾರಿ ದಾರಿಯಲ್ಲಿ ಗುಂಪು ಗುಂಪಾಗಿ ಬ್ರಹ್ಮದೇವರನ್ನು ಸ್ತೋತ್ರ ಮಾಡುತ್ತಿದ್ದರು. ಭೂತಲಕ್ಕೆ ಬಂದ ಬ್ರಹ್ಮದೇವರು ಚಂದ್ರನಂತೆ ಆಶ್ರಮವನ್ನು ಪ್ರಕಾಶಗೊಳಿಸುತ್ತ ಗಂಧಮಾದನ ಪರ್ವತದ ಗುಹೆಗೆ ಬಂದರು. ದೇವರ್ಷಿ ನಾರದರು ಹಂಸವನ್ನೇರಿ ಬಂದಿದ್ದ ಅವರನ್ನು ತನ್ನ ತಂದೆಯೆಂದು ಗುರುತಿಸಿ ಕೂಡಲೇ ಮನು ಪ್ರಿಯವ್ರತರೊಡನೆ ಎದ್ದು ಎದುರಾಗಿ ಹೋಗಿ ಕೈಮುಗಿದು ಅವರನ್ನು ಪೂಜಿಸಿದರು **'ಹಿರಣ್ಯಗರ್ಭಃ ಸಮವರ್ತತಾಗ್ರೇ'** ಇತ್ಯಾದಿ ಸೂಕ್ತಗಳನ್ನು ಹೇಳಿ ಸ್ವಾಗತಿಸಿ ಸುಖಾಸನವನ್ನಿತ್ತು ಪ್ರಿಯವ್ರತರಾಜರು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು. ಪರೀಕ್ಷಿದ್ರಾಜನೇ! ಬ್ರಹ್ಮದೇವರು ಸತ್ಕರಿಸಿದ ಪ್ರಿಯವ್ರತರಾಜರ ಮೇಲೆ ದಯತೋರಿ ಮುಗುಳುನಗುತ್ತಾ ಅವರನ್ನು ಕುರಿತು ಹಿತೋಪದೇಶ ನುಡಿಗಳನ್ನು ನುಡಿದರು.

ಬ್ರಹ್ಮದೇವರು ಹೇಳುವರು - ಮಗು! ನಾನು ಹೇಳುವ ಮಾತು ಶಾಸ್ತ್ರವಿಹಿತವಾದುದು. ನೀನದನ್ನು ಚೆನ್ನಾಗಿ ಅರ್ಥಮಾಡಿಕೋ. ಶ್ರೀಹರಿಯನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಅವನ ಮಾತುಗಳೂ ಅಷ್ಟೇ. ಅವನ ಆಜ್ಞೆಯನ್ನು ಮೀರಿ ಅವನಲ್ಲಿ ದೋಷವೆಣಿಸಲು ನೀನು ಅರ್ಹನಲ್ಲ. ನಾನು, ಈಶ್ವರನೂ, ಈ ನಿಮ್ಮ ತಂದೆ ಮನುವು, ಈ ನಿನ್ನ ಉಪದೇಶಕ ನಾರದನೂ ಎಲ್ಲರೂ

ಶ್ರೀಹರಿಯ ಅಧೀನರು. ಅವನ ಅಪ್ಪಣೆಯನ್ನು ನಡೆಸುವವರು. ಆತನ ಆಜ್ಞೆಯಾದ ಶಾಸ್ತ್ರವನ್ನು ತಪೋಬಲದಿಂದಾಗಲಿ ವಿದ್ಯಾಬಲದಿಂದಾಗಲಿ ಬುದ್ಧಿಬಲದಿಂದಾಗಲಿ ಯಾವ ಜೀವನೂ ಉಲ್ಲಂಘಿಸಲು ಶಕ್ತನಲ್ಲ. ಅರ್ಥಧರ್ಮಗಳಿಂದಾಗಲಿ ಮತ್ತೊಬ್ಬರ ಸಹಾಯದಿಂದಾಗಲಿ ಅಥವಾ ತಾನೇ ಅಸಹಾಯನಾಗಿ ಆಗಲಿ ಉಲ್ಲಂಘಿಸಲಾರ. ಜೀವಸಮೂಹವು ಶ್ರೀಹರಿಯು ಜಡಪ್ರಕೃತಿಯನ್ನು ಪರಿಣಾಮಗೊಳಿಸಿ ಕೊಟ್ಟ ದೇಹವನ್ನು ಕರ್ಮಫಲಾನುಗುಣವಾಗಿ ಹುಟ್ಟಿಗಾಗಿ, ನಾಶಕ್ಕಾಗಿ, ಕರ್ಮಮಾಡುವದಕ್ಕಾಗಿ, ಶೋಕಕ್ಕಾಗಿ, ಮೋಹಕ್ಕಾಗಿ, ಭಯಕ್ಕಾಗಿ, ಸುಖಕ್ಕಾಗಿ, ದುಃಖಕ್ಕಾಗಿ, ಮುಕ್ತಿಪರ್ಯಂತ ಹೊಂದುತ್ತಲೇ ಇರುವುದು.

ವತ್ಸ! ಉದ್ದವಾದ ದೊಡ್ಡ ಹಗ್ಗದಲ್ಲಿ, ಸಣ್ಣ ಸಣ್ಣ ಹಗ್ಗಗಳಿಂದ ದನಗಳು ತಪ್ಪಿಸಿಕೊಂಡು ಹೋಗದಂತೆ ಕಟ್ಟ ಹಾಕುವಂತೆ, ಶ್ರೀಹರಿಯು ತನ್ನ ಮಾತುಗಳೆಂಬ ವೇದಗಳಲ್ಲಿ ಅವರವರ ಗುಣ ಕರ್ಮಗಳಿಗೆ ತಕ್ಕಂತೆ ಹೆಸರುಗಳನ್ನು ಕೊಟ್ಟು ಕಟ್ಟಿ ಹಾಕಿರುವನು. ಅದನ್ನು ಮೀರಲಾಗುವುದಿಲ್ಲ. ಮೂಗುದಾರ ಹಾಕಿರುವ ನಾಲ್ಕು ಕಾಲುಳ್ಳ ಪ್ರಾಣಿಗಳು ಎರಡು ಕಾಲಿನ ತನ್ನ ಯಜಮಾನನಿಗಾಗಿ ಗೋಣಿ ಹೊರುವಂತೆ ಸರ್ವನಿಯಾಮಕನಾದ ಶ್ರೀಹರಿಗೆ ಪೂಜೆಯೆಂದು ವಿಹಿತಕರ್ಮಗಳನ್ನು ಕೃಷ್ಣಾರ್ಪಣ ಬುದ್ಧಿಯಿಂದ ನಾವು ಮಾಡುತ್ತಿದ್ದೇವೆ. ಪೂರ್ವಜನ್ಮದ ಗುಣಕರ್ಮಗಳಿಗೆ ತಕ್ಕಂತೆ ಸ್ವಾಮಿಯಾದ ಶ್ರೀಹರಿಯು ಯಾವ ಯಾವ ದೇಹಗಳನ್ನು ನಮಗಾಗಿ ನಿರ್ಮಿಸಿಕೊಟ್ಟಿರುವನೋ ಅವುಗಳನ್ನು ಹೊಂದಿ ಅವನಿದಂಲೇ ದತ್ತವಾದ ಸುಖ ಅಥವಾ ದುಃಖವನ್ನು ಅಂಗೀಕರಿಸಿ ಅನುಭವಿಸುತ್ತಲೇ ಇದ್ದೇವೆ. ಒಬ್ಬ ಕುರುಡನನ್ನು ಕಣ್ಣಿರುವವನು ಕರೆದುಕೊಂಡು ಗ್ರಾಮಕ್ಕೆ ಹೋಗುವನು. ಕುರುಡನು ಅಲ್ಲಿದ್ದು ಅವನು ತಂದುಕೊಡುವ ಆಹಾರವನ್ನೇ ತಿನ್ನುವನಲ್ಲವೇ? ಜೀವನ್ಮುಕ್ತನೂ ಶ್ರೀಹರಿಯಿಂದ ದತ್ತವಾದ ತನ್ನ ದೇಹವನ್ನು ತನ್ನ ಪ್ರಾರಬ್ಧಕರ್ಮ ಮುಗಿಯುವವರೆಗೆ ಅಜ್ಞಾನ ಅನ್ಯಥಾಜ್ಞಾನಗಳಿಲ್ಲದೆ ನಿರಭಿಮಾನಿಯಾಗಿ ಪ್ರಾರಬ್ಧವನ್ನು ಅನುಭವಿಸುತ್ತಾ ಕಾಪಾಡಿಕೊಂಡು ಬರಬೇಕು. ಆದರೆ ಅವನು ಅಜ್ಞಾನಿಯಂತೆ ಮತ್ತೊಂದು ದೇಹಕ್ಕೆ ಕಾರಣವಾಗುವ ರಾಗದ್ವೇಷಾದಿಗಳಿಗೆ ಎಡೆಗೊಡುವುದಿಲ್ಲ (ಅಪ್ರಾರಬ್ಧಕರ್ಮ ನಿಮಿತ್ತ ದೇಹ ಪಡೆಯುವದಿಲ್ಲ). ತನ್ನ ಕಾರ್ಯವಿಮುಖನಿಗೆ, ಅಜಿತೇಂದ್ರಿಯನಿಗೆ ವನದಲ್ಲಿಯೂ ಭಯತಪ್ಪಿದ್ದಲ್ಲ. ಅಲ್ಲಿಯೂ ಅವನ ಜೊತೆಗೆ ಆರು ಶತ್ರುಗಳು (ವಶವಾಗದ ಇಂದ್ರಿಯಗಳು ಕಾಮಾದಿ ಅರಿಷಡ್ವರ್ಗಗಳು) ಇದ್ದೇ ಇರುವವು.

 

ಜಿತೇಂದ್ರಿಯನೂ ಆತ್ಮರತನೂ ಆದ ಜ್ಞಾನಿಯಾದಲ್ಲಿ ಗೃಹಸ್ಥಾಶ್ರಮವು ಯಾವ ಭಯವನ್ನು ತಾನೇ ಅವನಿಗೆ ಉಂಟು ಮಾಡೀತು? ಈ ಆರು ಶತ್ರುಗಳನ್ನು ಜಯಿಸಬಯಸುವವನು ಗೃಹಸ್ಥಾಶ್ರಮದಲ್ಲಿ ಇದ್ದು ವಿಷಯಗಳನ್ನು ಅನುಭವಿಸಿ ಮೋಕ್ಷಕ್ಕಾಗಿ ಪ್ರಯತ್ನಿಸಬೇಕು. ಶ್ರೀ ಹರಿಭಕ್ತಿಯೆಂಬ ಕೋಟೆಯನ್ನಾಶ್ರಯಿಸಿ ಈ ಪ್ರಬಲ ಶತ್ರುಗಳನ್ನು ಗೆದ್ದು ತನ್ನ ಅಧೀನ ಮಾಡಿಕೊಳ್ಳಬೇಕು. ಕಾಮಾದಿಗಳು ದುರ್ಬಲವಾಗಲು ಜ್ಞಾನಿಯು ನಿರ್ಭಯವಾಗಿ ಶ್ರೀಹರಿಯ ಸೇವೆಯೆಂದು ಜೀವನವನ್ನು ನಡಿಸಬೇಕು. ನೀನಾದರೋ ಪದ್ಮನಾಭನ ಪಾದಕಮಲಗಳೆಂಬ ದುರ್ಗವನ್ನು ಆಶ್ರಯಿಸಿರುವಿ. ಆರು ಶತ್ರುಗಳನ್ನು ದುರ್ಬಲಗೊಳಿಸಿರುವಿ. ಕಾರಣ ಶ್ರೀಹರಿಯು ಅನುಗ್ರಹಿಸಿದ ಭೋಗಗಳನ್ನು ಅನುಭವಿಸು. ಅನಂತರ ಅವುಗಳಲ್ಲಿ ಆಸಕ್ತಿ ಇಲ್ಲದ ನೀನು ನಿನ್ನ ಸ್ವರೂಪಾನಂದಾಭಿವ್ಯಕ್ತಿಯನ್ನು (ಮೋಕ್ಷವನ್ನು) ಹೊಂದು.

ಹೀಗೆ ಬ್ರಹ್ಮದೇವರು ಅನುಗ್ರಹ ಪೂರ್ವಕ ಪ್ರಿಯವ್ರತರಿಗೆ ನುಡಿದರು. ಆ ಹಿರಿಯ ಭಗವದ್ಭಕ್ತರಾದ ರಾಜಪುತ್ರರು ತ್ರಿಲೋಕ ಗುರುಗಳು, ಪೂಜ್ಯರು, ಆದ ಬ್ರಹ್ಮದೇವರ ಅಪ್ಪಣೆಯನ್ನು ತಾವು ಅವರಿಗಿಂತ ತಾರತಮ್ಯದಲ್ಲಿ ಕೆಳಗಿನವರಾದ್ದರಿಂದ ಕಂಠವನ್ನು ತಗ್ಗಿಸಿ ಗೌರವ ಪೂರ್ವಕ ಹಾಗೇ ಆಗಲಿ ಎಂದು ಒಪ್ಪಿಕೊಂಡರು.

ಹೀಗೆ ತಮ್ಮ ಅಭಿಪ್ರಾಯವು ಮತ್ತೊಬ್ಬರಿಂದ ಈಡೇರಿದುದನ್ನು ಕಂಡು ಮನು ರಾಜರು ನಾರದರ ಒಪ್ಪಿಗೆಯನ್ನು ಪಡೆದು ಮಗನನ್ನು ರಾಜನನ್ನಾಗಿ ಮಾಡಿ ವಿಷಯವೆಂಬ ನೀರಿನ ಮಡುವಾದ ಸಂಸಾರದಿಂದ ಉಪರತರಾದರು. ಗುರುಗಳ ಅಪ್ಪಣೆಯನ್ನು ಮೀರಬಾರದಾಗಿ ಶ್ರೀಹರಿಯ ಇಚ್ಛೆಯಿಂದ ಬಂದ ಕರ್ಮಾಧಿ ಕಾರವನ್ನು ಹೊಂದಿ ಆ ಪ್ರಿಯವ್ರತರಾಜರು ಶ್ರೀಹರಿಯನ್ನೇ ಸತತ ಧ್ಯಾನಮಾಡುತ್ತಾ ಬಂದರು. ಜಗತ್ತಿನ ಬಂಧನವನ್ನು ನಾಶಗೊಳಿಸಿಸುವ ಆ ಶ್ರೀಹರಿಯ ಸಾಮರ್ಥ್ಯದಿಂದ ಅವರು ಮನಸ್ಸಿನ ಎಲ್ಲ ಕಶ್ಮಲಗಳನ್ನೂ ಹೋಗಲಾಡಿಸಿಕೊಂಡು ಶುದ್ಧಾಂತಃಕರಣರಾಗಿ ದೊಡ್ಡವರಿಂದ ಜ್ಞಾನವನ್ನು ಹೆಚ್ಚಿಸಿಕೊಂಡು ತಮ್ಮ ಹಿರಿಯರ ಗೌರವವನ್ನು ವೃದ್ಧಿಗೊಳಿಸುವವರಾಗಿ ಭೂತಲವನ್ನಾಳಿದರು.

ಈ ಪ್ರಿಯವ್ರತರಾಜರು ವಿಶ್ವಕರ್ಮ ಪ್ರಜೇಶ್ವರರ ಪುತ್ರಿ ಬರ್ಹಿಷ್ಮತಿ ಎಂಬವಳನ್ನು ಮದುವೆಯಾದರು. ತಮ್ಮಂತಯೇ ಶೀಲ, ಗುಣ, ಕರ್ಮ, ರೂಪ,

ವೀರ್ಯ, ಔದಾರ್ಯಗಳುಳ್ಳ ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾವೀರ, ಹಿರಣ್ಯರೇತ, ಘೃತಪೃಷ್ಠ, ಸವನ, ಮೇಧಾತಿಥಿ ವೀತಿಹೋತ್ರ, ಕವಿ ಎಂಬ ಅಗ್ನಿಯ ಹೆಸರುಗಳುಳ್ಳ ಹತ್ತು ಗಂಡು ಮಕ್ಕಳನ್ನೂ ಊರ್ಜಸ್ವತಿ ಎಂಬ ಕನ್ಯೆಯನ್ನೂ ಇವರ ತಂಗಿಯಾಗಿ ಆಕೆಯಲ್ಲಿ ಪಡೆದರು.

ಇವರಲ್ಲಿ ಕವಿ, ಮಹಾವೀರ, ಸವನ, ಈ ಮೂವರು ಬ್ರಹ್ಮಚಾರಿಗಳಾಗಿಯೇ ಇದ್ದುಬಿಟ್ಟರು. ಇವರು ಬಾಲ್ಯದಿಂದಲೂ ಆತ್ಮವಿದ್ಯೆಯಲ್ಲಿಯೇ ಪರಿಣಿತರಾಗಿ ಸಂನ್ಯಾಸವನ್ನೇ ಹೊಂದಿದರು. ಸಂನ್ಯಾಸಿಗಳಾದ ಇವರು ವಿಷಯಾಲಂಬುದ್ಧಿಯುಳ್ಳವರಾಗಿ - ಸರ್ವೋತ್ತಮನಾದ ಶ್ರೀಹರಿಯು ದೋಷಲೇಪವಿಲ್ಲದೆ ಸಮಸ್ತ ಜೀವರಲ್ಲಿ ನೆಲೆಸಿರುವನು. ಸಂಸಾರದಿಂದ ಭಯಗ್ರಸ್ತರಾದ ಅಧಿಕಾರಿಚೇತನರಿಗೆ ರಕ್ಷಕನು, ಸಮಸ್ತೈಶ್ವರ್ಯವಂತನು. ಶ್ರೀಹರಿಯ ಜ್ಞಾನಿಗಳಾದರೂ ಇಂತಹ ವಾಸುದೇವನ ಮೋಕ್ಷದಾಯಕ ಪಾದಕಮಲಗಳ ಸಂತತ ಸ್ಮರಣೆಯೆಂಬ ತೈಲಧಾರೆಯಿಂದ (ಪಾರ್ಥಿವ ದೇಹತ್ಯಾಗ ಮಾಡಿ ತಮ್ಮ ಯೋಗ್ಯತೆಗನುಗುಣವಾಗಿ ಸ್ವಾತಂತ್ರ್ಯವನ್ನು ಬಿಟ್ಟು ತಮ್ಮ ವಶದಲ್ಲಿರುವ) ಮನಸ್ಸಿನಲ್ಲಿ ಭಗವಂತನನ್ನು ಕಂಡರು. ಇದರಿಂದ ಈ ಸರ್ವಪ್ರಾಣಿಗಳ ಅಂತರ್ಯಾಮಿಯಾದ ತಮ್ಮ ಬಿಂಬರೂಪಿಯ ಸಾರೂಪ್ಯವನ್ನು ಹೊಂದಿದರು.

ಪ್ರಿಯವ್ರತರಾಜರ ಮತ್ತೊಬ್ಬ ಹೆಂಡತಿಯಲ್ಲಿಯೂ ಮನ್ವಂತರಗಳಿಗೆ ಅಧಿಪತಿಗಳಾದ ಉತ್ತಮ, ತಾಪಸ, ರೈವತ ಎಂಬ ಮೂರು ಜನ ಮಕ್ಕಳಾದರು. ಕವಿ ಮೊದಲಾದ ಮೂವರು ಮಕ್ಕಳು ಸಂನ್ಯಾಸಿಗಳಾಗಲು ಪ್ರಿಯವ್ರತರು ಭೂಮಿಯನ್ನು ಹನ್ನೊಂದು ಅರ್ಬುದ ಅಂದರೆ ಒಂದು ನೂರಾ ಹತ್ತು ಕೋಟಿ ವರ್ಷಗಳ ಕಾಲ ಅನುಭವಿಸಿದರು. ತಡೆಯಿಲ್ಲದ ಎಲ್ಲ ಪೌರುಷಗಳ ಸಾರಗಳೆನಿಸಿದ ಬಾಹುಗಳಿಂದ ಎಳೆದ ಧನುಸ್ಸಿನ ಮೌರ್ವಿಯ ಝೇಂಕಾರದಿಂದಲೇ ಅವರು ಧರ್ಮಶತ್ರುಗಳನ್ನು ಅಡಗಿಸಿದರು. ಮಹಾಮನಸ್ಕರಾಗಿದ್ದರೂ ಬರ್ಹಿಷ್ಮತಿಯಲ್ಲಿ ಪ್ರತಿದಿನ ಬೆಳೆಯುತ್ತಿರುವ ಪ್ರೀತಿಯ ಪ್ರವಾಹದ ಪೋಷಣ, ನಾಚಿಕೆ, ಸಂಕುಚಿತವಾದ ಮಂದಹಾಸಯುತ ನೋಟದಿಂದ, ಸುಂದರವಾದ ಪರಿಹಾಸದ ಮಾತು ಇವೇ ಮೊದಲಾದವುಗಳಿಂದ ತತ್ತ್ವವಿವೇಕವು ತಿರೋಹಿತವಾದವರಂತೆ ಜೀವನವನ್ನು ಸಾಗಿಸಿದರು.




ಪೂಜ್ಯನಾದ ಸೂರ್ಯದೇವನು ಮೇರುಪರ್ವತಕ್ಕೆ ಪ್ರದಕ್ಷಿಣೆ ಹಾಕುತ್ತಾ ಲೋಕಾಲೋಕಪರ್ವತದ ವರೆಗೆ ಭೂಮಿಯನ್ನು ಅರ್ಧಮಾತ್ರ ಪ್ರಕಾಶ ಪಡಿಸುವನಷ್ಟೇ ಇನ್ನರ್ಧಭೂಮಿಯ ಮೇಲೆ ಕತ್ತಲೆ ಕವಿದಿರುವುದು. ತಮ್ಮ ರಾಜ್ಯಭಾರ ಕಾಲದಲ್ಲಿ ಇದನ್ನು ಮೆಚ್ಚದ ಪ್ರಿಯವ್ರತರು ಶ್ರೀಹರಿಯನ್ನು ಉಪಾಸಿಸಿ ಅತಿಮಾನುಷ ಪ್ರಭಾವವನ್ನು ಹೊಂದಿದ್ದರಾದ್ದರಿಂದ ಕತ್ತಲೆಯ ಪ್ರದೇಶವನ್ನೂ ಪ್ರಕಾಶಗೊಳಿಸುವೆನೆಂದು ಭಾವಿಸಿ ಸೂರ್ಯನ ರಥಕ್ಕೆ ಸಮಾನ ವೇಗವುಳ್ಳ ಪ್ರಕಾಶಮಯರಥದಲ್ಲಿ ಕುಳಿತು ಎರಡನೇ ಸೂರ್ಯರಂತೆ ಸೂರ್ಯನ ಹಿಂದೆಯೇ ಏಳುಸಲ ಮೇರುವಿಗೆ ಪ್ರದಕ್ಷಿಣೆ ಹಾಕಿದರು.

ಅವರ ರಥಚಕ್ರದ ಸುತ್ತು ಪಟ್ಟಿಯಿಂದ ಆದ ತೆಗ್ಗುಗಳೇ ಏಳು ಹಿಂದಿನ ಸಮುದ್ರಗಳನ್ನು ಸರಿಯಾಗಿ ವಿಂಗಡಿಸಿ ತೋರಿಸಿದವು. ಇವುಗಳಿಂದ ಭೂಮಿಯು ಏಳು ದ್ವೀಪಗಳಾಗಿ ವಿಭಕ್ತವಾಯಿತು. ಒಳಗಿನ ದ್ವೀಪಕ್ಕಿಂತ ಹೊರಗಿನ ದ್ವೀಪವು ಎರಡರಷ್ಟು ವಿಸ್ತಾರವುಳ್ಳದ್ದು. ಒಂದೊಂದು ದ್ವೀಪಕ್ಕೂ ಒಂದೊಂದು ಸಮುದ್ರವು ಕಂದಕದಂತೆ ಎಲ್ಲೆಯಂತಿದ್ದು ತನ್ನ ಒಳಗೆ ದ್ವೀಪದಷ್ಟೇ ವಿಸ್ತಾರವಾಗಿರುವುದು.

ಜಂಬೂದ್ವೀಪ, ಅದರ ಸುತ್ತ ಲವಣೋದಧಿ. ಇದರ ಹೊರಗೆ ಪ್ಲಕ್ಷ ದ್ವೀಪ, ಅದರ ಸುತ್ತ ಇಕ್ಷುರಸೋದಧಿ. ಹೊರಗೆ ಅದರ ಸುತ್ತಲೂ ಶಾಲ್ಮಲಿ ದ್ವೀಪ. ಅದರ ಸುತ್ತಲೂ ಸುರೋದಧಿ. ಅದರ ಹೊರಗೆ ಸುತ್ತಲೂ ಕುಶದ್ವೀಪ. ಅದರ ಸುತ್ತ ಘೃತೋದಧಿ. ಅದರ ಹೊರವಲಯದಲ್ಲಿ ಕ್ರೌಂಚದ್ವೀಪ. ಅದನ್ನು ಆವರಿಸಿ ಕ್ಷೀರೋದಧಿ. ಅನಂತರ ಶಾಕ ದ್ವೀಪ. ಅದರ ಸುತ್ತ ದಧಿಮಂಡೋದ (ಕಡೆದಮೊಸರಿನ ಸಮುದ್ರ) ಕೊನೆಯದಾಗಿ ಪುಷ್ಕರದ್ವೀಪ ಸುತ್ತಲೂ ಶುದ್ಧೋದಧಿ.

ಪ್ರಿಯವ್ರತರಾಜರು ತಮ್ಮ ಆಜ್ಞಾನುವರ್ತಿಗಳಾದ ಆಗ್ನೀಧ್ರ, ಇಧ್ಮಜಿಹ್ವ, ಇಧ್ಮಬಾಹು ಹಿರಣ್ಯರೇತ ಘೃತಪೃಷ್ಠ ಮೇಧಾತಿಥಿ ಮತ್ತು ವೀತಿಹೋತ್ರರನ್ನು ಕ್ರಮವಾಗಿ ಒಂದೊಂದು ದ್ವೀಪಕ್ಕೆ ಒಬ್ಬೊಬ್ಬರನ್ನು ಅಧಿಪತಿಯನ್ನಾಗಿ ಮಾಡಿದರು. ಮಗಳಾದ ಊರ್ಜಸ್ವತಿಯನ್ನು ಶುಕ್ರಾಚಾರ್ಯರಿಗೆ ಮದುವೆ ಮಾಡಿಕೊಟ್ಟರು. ಆಕೆಯಲ್ಲಿ ದೇವಯಾನಿ ಜನಿಸಿದಳು.

ಪರೀಕ್ಷಿದ್ರಾಜ! ಶ್ರೀಹರಿಯ ಪಾದರಜಸ್ಸನ್ನು ಸೇವಿಸಿ ಕಾಮಾದಿ ಅರಿಷಡ್ವರ್ಗಗಳನ್ನು ಗೆದ್ದ ಭಗವದ್ಭಕ್ತರಿಗೆ ಈ ಬಗೆಯ ಪೌರುಷ ಪ್ರದರ್ಶನವು

ಆಶ್ಚರ್ಯಕರವೇನಲ್ಲ. ಅವನು ಉರುಕ್ರಮಣನು. ಅವನಭಕ್ತರೂ ಯೋಗ್ಯತಾನುಗುಣವಾಗಿ ಉರುಕ್ರಮರು. ಶೂದ್ರವರ್ಣದವರಿಗೂ ಕೆಳಗಿರುವ ಚಂಡಾಲನೂ ಸಹ ಆ ಶ್ರೀಹರಿಯ ನಾಮವನ್ನು ಒಂದು ಸಲ ಭಕ್ತಿಯಿಂದ ಉಚ್ಚರಿಸಿದರೆ ತಕ್ಷಣದಲ್ಲಿಯೇ ಪಾಪದಿಂದ ಮುಕ್ತನಾಗುವನು. ಅಂದ ಮೇಲೆ ಉತ್ತಮ ಭಕ್ತರು ಈ ಸಾಮರ್ಥ್ಯ ತೋರುವುದು ಹೆಚ್ಚೇನಲ್ಲ.

ಹೀಗೆ ಅಪರಿಮಿತ ಬಲಪರಾಕ್ರಮವವುಳ್ಳ ಪ್ರಿಯವ್ರತರು ನಾರದರ ಪಾದಸೇವನೆಯಿಂದ ವಿಷಯ ವೈರಾಗ್ಯವನ್ನು ಹೊಂದಿ ಒಂದು ದಿನ ತಮ್ಮನ್ನು ಶ್ರೀಹರಿಯ ಇಚ್ಛೆಯಿಂದ ಬಂದ ಪ್ರಾಕೃತ ವಿಷಯಗಳ ಸಂಬಂಧದಿಂದ ನಿವೃತ್ತರಾಗದಿರುವುದನ್ನು ಅರಿತರು. ಅಯ್ಯೋ! ನಾನು ಮಾಡಿದ್ದು ಶ್ರೇಯಸ್ಸಿಗೆ ಕಾರಣವಲ್ಲ . ಶ್ರೀಹರಿಯ ಇಚ್ಛೆಯಿಂದ ಪ್ರಕೃತಿಯಿಂದ ಸಂಸಾರ ಕಾರಣ ವಿಷಯಗಳು ನಿರ್ಮಿತವಾಗಿರುವವು. ಇದೊಂದು ದೊಡ್ಡ ಕಗ್ಗತ್ತಲೆಯ ಕೂಪ. ಅದರಲ್ಲಿ ಇಂದ್ರಿಯಗಳ ಮೂಲಕ ಅಭಿನಿವಿಷ್ಟನಾಗಿದ್ದೇನೆ. ಸಾಕು! ಸಾಕು! ಮಾನವ ಹೆಂಗಳೆಯರ ಕ್ರೀಡಾ ಮೃಗದಂತಿರುವ ನನಗೆ ಧಿಕ್ಕಾರ ಎಂದು ತಮ್ಮನ್ನು ಹಳಿದುಕೊಂಡರು. ಕಳೆದುಕೊಂಡ ಚಿಂತಾಮಣಿಯನ್ನು ಮತ್ತೆ ಪಡೆದ ಪ್ರಿಯವ್ರತರು ಮಕ್ಕಳಿಗೆ ಸಲ್ಲಬೇಕಾದ ಭಾಗಗಳಷ್ಟು ಭೂಮಿಯನ್ನು ಹಂಚಿಕೊಟ್ಟರು. ಸುಖವನ್ನು ಅನುಭವಿಸಿದ ಹೆಂಡತಿಯನ್ನೂ ರಾಜಸಂಪತ್ತನ್ನೂ ಶವದಂತೆ ಪರಿತ್ಯಾಗ ಮಾಡಿ ವೈರಾಗ್ಯಶಾಲಿಗಳಾದರು. ಶ್ರೀಹರಿಯ ಸುಂದರ ಲೀಲೆ ಮತ್ತು ಸಾಮರ್ಥ್ಯಗಳನ್ನು ಮನಸ್ಸಿನಲ್ಲಿ ಮನನದಿಂದ ದೃಢಪಡಿಸಿಕೊಂಡು ನಾರದರು ಹೇಳಿಕೊಟ್ಟ ನಿವೃತ್ತಿಮಾರ್ಗವನ್ನು ಅನುಸರಿಸಿ ಸಂನ್ಯಾಸಿಗಳಾದರು.

ಅವರ ಮಹಿಮೆಯನ್ನು ಸಂಕ್ಷೇಪವಾಗಿ ಬಣ್ಣಿಸುವ ಈ ಶ್ಲೋಕಗಳು ಹಿಂದಿನಿಂದಲೂ ಪ್ರಸಿದ್ಧವಾಗಿವೆ. ಶ್ರೀಹರಿಯನ್ನು ಬಿಟ್ಟು ಯಾವನು ತಾನೇ ಪ್ರಿಯವ್ರತರು ಮಾಡಿದ ಕಾರ್ಯವನ್ನು ಮಾಡಬಲ್ಲನು. ಅವರು ಕತ್ತಲನ್ನು ಪರಿಹರಿಸಿ ತಮ್ಮ ರಥದ ಗಾಲಿಗಳ ತುದಿಯಿಂದ ಏಳು ಸಮುದ್ರಗಳನ್ನೂ ಸ್ಥೂಲಗೊಳಿಸಿದರು. ಭೂಮಿಯನ್ನು ದ್ವೀಪಗಳಾಗಿ ವಿಂಗಡಿಸಿ ಆ ದ್ವೀಪಗಳಲ್ಲಿಯೂ ಪ್ರಜೆಗಳ ಸುಖಕ್ಕಾಗಿ ನದಿ ಬೆಟ್ಟ ಕಾಡುಗಳಿಂದ ಎಲ್ಲೆಗಳನ್ನು ಮಾಡಿದರು. ಯೋಗಸಾಮರ್ಥ್ಯದಿಂದ ಬಂದ ದಿವ್ಯ ಭೌಮ ಮತ್ತು ಮಾನುಷ ಮಹಿಮೆಗಳನ್ನು ಜನಪ್ರಿಯ ಪೌರುಷವನ್ನು ನರಕದಲ್ಲಿಯ ಸುಖದಂತೆಯ ಹೇಯವೆಂದು ಬಗೆದರು. ★★

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ

# ದ್ವಿತೀಯೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಮದುವೆಯಾಗದಿದ್ದರೂ ಮಕ್ಕಳನ್ನು ಅಪೇಕ್ಷಿಸುವ ಆಗ್ನೀಧ್ರನ ಬಳಿಗೆ ಚತುರ್ಮುಖ ಬ್ರಹ್ಮದೇವರು ಪೂರ್ವಚಿತ್ತಿ ಎಂಬ ಅಪ್ಸರೆನ್ನು ಕಳಿಸುವರು. ಅವಳೊಡನೆ ಬಹುಕಾಲ ಕ್ರೀಡಿಸುವ ಆಗ್ನೀಧ್ರನಿಗೆ ಅವಳಲ್ಲಿ ನಾಭಿ, ಕಿಂಪುರುಷ ಮುಂತಾದ ಆರು ಜನ ಮಕ್ಕಳು ಜನಿಸುವರು ನಂತರ ಆಗ್ನೀಧ್ರನಿಗೆ ಗಂಧರ್ವಲೋಕ ಪ್ರಾಪ್ತಿಯಾಗುವುದು. ಆಗ್ನೀಧ್ರನ ಕಥಾ ಹೇಳುವ ನೆಪದಿಂದ ಜಿತೇಂದ್ರಿಯನಾದ ಭಗವಂತನ ಪದಕಮಲಗಳಲ್ಲಿ ಆಸಕ್ತನಾದ ಭಕ್ತನಿಗೆ ಮುಕ್ತಿಯು ಕರಗತವೇ ಎಂದು ಈ ಅಧ್ಯಾಯದಲ್ಲಿ ಪ್ರತಿಪಾದಿಸುವರು.

### ಪ್ರಿಯವ್ರತನ ಮಗನಾದ ಆಗ್ನೀಧ್ರನ ಚರಿತ್ರೆ

**ಏವಂ ಪಿತರಿ ಸನ್ನಿವೃತ್ತೇ (ಸಂವೃತ್ತೇ) ತದನುಶಾಸನೇ ವರ್ತಮಾನ ಆಗ್ನೀಧ್ರೋ ಜಂಬೂದ್ವೀಪೌಕಸಃ ಪ್ರಜಾ ಔರಸವದ್ ಧರ್ಮಾನವೇಕ್ಷಮಾಣಃ ಪರ್ಯಗೋಪಾಯತ್ ॥೧॥**

**ಏವಂ** ಈ ರೀತಿಯಾಗಿ **ಪಿತರಿ** ತಂದೆಯಾದ ಪ್ರಿಯವ್ರತರು **ಸನ್ನಿವೃತ್ತೇ** ಸಂನ್ಯಾಸಿಗಳಾಗಿ ಹೋಗುತ್ತಿರಲು **ತದನುಶಾಸನೇ ವರ್ತಮಾನಃ** ಅವರ ಆಜ್ಞೆಯಂತೆ ನಡೆಯುತ್ತಿರುವ **ಆಗ್ನೀಧ್ರಃ** ಆಗ್ನೀಧ್ರನು **ಜಂಬೂದ್ವೀಪೌಕಸಃ** ಜಂಬುದ್ವೀಪವೇ ಮನೆಯಾಗಿಯುಳ್ಳ **ಪ್ರಜಾಃ** ಪ್ರಜರನ್ನು **ಧರ್ಮಾನ್ ಅವೇಕ್ಷಮಾಣಃ**

ರಾಜಧರ್ಮಗಳನ್ನು ತಿಳಿದವರಾಗಿ (ಅನುಸರಿಸಿ) **ಔರಸವತ್** ಸ್ವಂತ ಮಕ್ಕಳಂತೆ **ಪರ್ಯಗೋಪಾಯತ್** ಚೆನ್ನಾಗಿ ರಕ್ಷಿಸಿದನು. ॥೧॥

**ಸ ತು ಕದಾಚಿತ್ ಪಿತೃಲೋಕಕಾಮಃ ಸುರವರವನಿತಾಕ್ರೀಡಾ-ಚಲದ್ರೋಣ್ಯಾಂ ಭಗವಂತಂ ವಿಶ್ವಸೃಜಾಂ ಪತಿಂ ಆಹೃತಪರಿಚರ್ಯೋಪಕರಣ ಆತ್ಮೈಕಾಗ್ರೇಣ ತಪಸಾಽಽರಾಧಯಾಂಬಭೂವ ॥೨॥**

**ಸ ತು** ಆ ಆಗ್ನೀಧ್ರನಾದರೂ **ಕದಾಚಿತ್** ಒಂದುಸಲ **ಪಿತೃಲೋಕಕಾಮಃ** ಪಿತೃಲೋಕ ಪ್ರಾಪ್ತಿಗೆ ಕಾರಣವಾದ ಮಗನಾಗಬೇಕೆಂಬ ಇಚ್ಛೆಯಿಂದ **ಸೋಽಯಂ ಮನುಷ್ಯಲೋಕಃ ಪುತ್ರೇಣ ಜೇಯಃ** ಎಂದು ಶ್ರುತಿಯಿರುವುದರಿಂದ ಒಳ್ಳೇ ಮಗನಿಂದ ತಂದೆಗೆ ಪಿತೃಲೋಕ ದೊರೆಯುವುದು ಆದಕಾರಣ **ಸುರವರವನಿತಾ ಕ್ರೀಡಾಚಲದ್ರೋಣ್ಯಾಂ** ದೇವಶ್ರೇಷ್ಠರ ಸ್ತ್ರೀಯರ ಕ್ರೀಡಾ ಸ್ಥಾನವಾದ ಮಂದರ ಪರ್ವತದ ಗುಹೆಯಲ್ಲಿ (ತಪ್ಪಲಿನಲ್ಲಿ) **ವಿಶ್ವಸೃಜಾಂ ಪತಿಂ** ಪ್ರಜಾಪತಿಗಳಿಗೆ ಒಡೆಯನಾದ **ಭಗವಂತಂ** ಬ್ರಹ್ಮದೇವರನ್ನು **ಆಹೃತಪರಿಚರ್ಯೋಪಕರಣಃ** ಪೂಜಾಸಾಧನಗಳಾದ ಪುಷ್ಪ ಮುಂತಾದವನ್ನು ತಂದವನಾಗಿ **ಆತ್ಮೈಕಾಗ್ರೇಣ** ಏಕಾಗ್ರಮನಸ್ಸುಳ್ಳ **ತಪಸಾ** ತಪಸ್ಸಿನಿಂದ **ಆರಾಧಯಾಂಬಭೂವ** ಪೂಜಿಸಿದನು. ॥೨॥

**ಏತದುಪಲಭ್ಯ ಭಗವಾನಾದಿಪೂರುಷಃ ಸದಸಿ ಗಾಯಂತೀಂ ಪೂರ್ವಚಿತ್ತಿಂ ನಾಮ ಅಪ್ಸರಸಮಭಿಯಾಪಯಾಮಾಸ ॥೩॥**

**ಭಗವಾನ್ ಆದಿಪೂರುಷಃ** ಪೂಜ್ಯರಾದ ಬ್ರಹ್ಮದೇವರು **ಏತದುಪಲಭ್ಯ** ಇದನ್ನು ತಿಳಿದು **ಸದಸಿ** ಸಭೆಯಲ್ಲಿ **ಗಾಯಂತೀಂ** ಹಾಡುವ **ಪೂರ್ವಚಿತ್ತಿಂ ನಾಮ ಅಪ್ಸರಸಂ** ಪೂರ್ವಚಿತ್ತಿ ಎಂಬ ಅಪ್ಸರಾಸ್ತ್ರೀಯನ್ನು **ಅಭಿಯಾಪಯಾಮಾಸ** ಭೋಗಕ್ಕಾಗಿ ಕಳಿಸಿಕೊಟ್ಟರು. ॥೩॥

## ಪೂರ್ವಚಿತ್ತಿಯ ಆಗಮನ

**ಸಾ ಚ ತದಾಶ್ರಮೋಪವನಮತಿರಮಣೀಯವಿವಿಧನಿಬಿಡವಿಟಪಿವಿಟಪ-ನಿಕಟ ಪುಟಲತಾಕುಟಲರೂಢಸ್ಥಲವಿಹಂಗಮಮಿಥುನೈಃ ಪ್ಲಾವ್ಯಮಾನಶ್ರುತಿಭಿಃ ಪ್ರತಿಬೋಧ್ಯಮಾನ ಸಲಿಲಕುಕ್ಕುಟಕಾರಂಡವಕಲಹಂಸಾದಿಭಿರ್ವಿಚಿತ್ರ-ಮುಪಕೂಜಿತಾಮಲ ಜಲಾಶಯ(ರೂಢ)ಕಮಲಾಕರಮುಪಬಭ್ರಾಮ ॥೪॥**

 

**ಸಾ ಚ** ಆ ಪೂರ್ವಚಿತ್ತಿಯಾದರೂ **ಅತಿರಮಣೀಯ** ಬಹಳ ಮನೋಹರವಾದ **ವಿವಿಧ** ಅನೇಕ ರೀತಿಯ **ನಿಬಿಡ** ಪರಸ್ಪರ ಸಂಬದ್ಧಗಳಾದ **ವಿಟಪಿ** ಗಿಡಗಳ **ವಿಟಪ** ಟೊಂಗೆಗಳ **ನಿಕಟಪುಟ** ಸಮೀಪ ಭಾಗಗಳಲ್ಲಿರುವ **ಲತಾಕುಟಲ** ಬಳ್ಳಿಗಳ ಡೊಂಕುಗಳಲ್ಲಿ **ಆರೂಢ** ಹತ್ತಿರುವ **ಸ್ಥಲವಿಹಂಗಮಮಿಥುನೈಃ** ನವಿಲು ಕೋಗಿಲು ಮುಂತಾದವುಗಳ ಜೋಡಿಗಳಿಂದ **ಪ್ಲಾವ್ಯಮಾನಶ್ರುತಿಭಿಃ** ಗಟ್ಟಿಯಾಗಿ ಉಚ್ಚರಿಸುವ ಧ್ವನಿಗಳಿಂದ **ಪ್ರಬೋಧ್ಯಮಾನ** ಎಚ್ಚರಿಸಲ್ಪಡುವ **ಸಲಿಲಕುಕ್ಕುಟ** ನೀರುನಾಯಿ **ಕಾರಂಡವ** ಹಂಸದ ಪ್ರಭೇದವಾದ ಒಂದು ಪಕ್ಷಿ **ಕಲಹಂಸಾದಿಭಿಃ** ರಾಜ ಹಂಸಮೊದಲಾದವುಗಳಿಂದ **ವಿಚಿತ್ರಂ** ಆಶ್ಚರ್ಯಕರವಾಗಿ **ಉಪಕೂಜಿತ** ಧ್ವನಿ ಮಾಡಲ್ಪಟ್ಟ **ಅಮಲಜಲಾಶಯ ಕಮಲಾಕರಂ** ನಿರ್ಮಲವಾದ ಸರೋವರಗಳಲ್ಲಿ ಕಮಲಗಳಿಗೆ ಆಶ್ರಯವಾದ **ತದಾಶ್ರಮೋಪವನಂ** ಆಗ್ನೀಧ್ರನ ಆಶ್ರಮದ ಸಮೀಪವಿರುವ ವನದಲ್ಲಿ **ಉಪಬಭ್ರಾಮ** ಸಂಚರಿಸಿದಳು. ।।೪।।

**ತಸ್ಯಾಃ ಸುಲಲಿತಪದವಿನ್ಯಾಸಗತಿವಿಲಾಸೇನಾನುಪದಂ ಖಣಖಣಾಯಮಾನ ರುಚಿರಚರಣಾಭರಣಸ್ವನಮುಪಾಕರ್ಣ್ಯ ನರದೇವಕುಮಾರಃ ಸಮಾಧಿ ಯೋಗೇನಾಮೀಲಿತನಯನನಲಿನಮುಕುಲಯುಗಲಮೀಷದ್ವಿಕಾಸ್ಯಾಚಷ್ಟ ।।೫।। (ವಿಕಚಯ್ಯ ಎಂದು ಪಾಠಾಂತರ)**

**ತಸ್ಯಾಃ** ಆ ಪೂರ್ವಚಿತ್ತಿಯ **ಸುಲಲಿತ** ಕೋಮಲವಾದ **ಪದವಿನ್ಯಾಸ** ಹೆಜ್ಜೆಗಳುಳ್ಳ **ಗತಿವಿಲಾಸೇನ** ನಡುಗೆಯ ಶೃಂಗಾರದ ಶೋಭೆಯಿಂದ **ಅನುಪದಂ** ಪ್ರತಿಯೊಂದು ಹೆಜ್ಜೆ ಇಡುವಾಗಲೂ **ಖಣಖಣಾಯಮಾನ** ಘಿಲ್ ಘಿಲ್ ಎಂದು ಧ್ವನಿ ಮಾಡುವ **ರುಚಿರ** ಮನೋಹರವಾದ **ಚರಣಾಭರಣಸ್ವನಂ** ನೂಪುರ (ಗೆಜ್ಜೆಗಳ) ಧ್ವನಿಯನ್ನು **ಉಪಾಕರ್ಣ್ಯ** ಕೇಳಿ **ನರದೇವಕುಮಾರಃ** ರಾಜಕುಮಾರನಾದ ಆಗ್ನೀಧ್ರನು **ಸಮಾಧಿ ಯೋಗೇನ** ಸಮಾಧಿಯ ನಿಮಿತ್ತದಿಂದ **ಆಮೀಲಿತ** ಮುಚ್ಚಲ್ಪಟ್ಟ **ನಯನನಲಿನಮುಕುಲಯುಗಲಂ** ಕಣ್ಣುಗಳೆಂಬ ಕಮಲಗಳ ಮೊಗ್ಗುಗಳೆರಡನ್ನು (**ಈಷತ್** ಸ್ವಲ್ಪ) **ವಿಕಾಸ್ಯ** (ವಿರಚಯ್ಯ) ಅರಳಿಸಿ **ಆಚಷ್ಟ** ಸಮೀಪದಲ್ಲಿರುವವಳನ್ನು ನೋಡಿದನು. ।।೫।।

**ತಾಮೇವಾವಿದೂರೇ ವಿಲೋಕ್ಯ ಮಧುಕರೀಮಿವ ಸುಮನಸ ಉಪಜಿಘ್ರಂತೀಂ ದಿವಿಜ ಮನುಜಮನೋನಯನಾಲ್ಹಾದದುಘೈರ್ಗತಿವಿಹಾರ-**

**ವಿನಯವಿಲೋಕನ ಸುಸ್ವರಾಕ್ಷರಾವಯವೈರ್ಮನಸಿ ನೃಣಾಂ ಕುಸುಮಾಯುಧಸ್ಯ ವಿದಧತೀಂ ವಿವರಮ್ ।।೬।।**

**ಮಧುಕರೀಂ ಇವ ಸುಮನಸಃ ಉಪಜಿಘ್ರಂತೀಂ** ದುಂಬಿಯಂತೆ ಪುಷ್ಪಗಳನ್ನು ಆಘ್ರಾಣಿಸುವ (ಹೂಗಳನ್ನು ಮೂಸಿಸುವ) **ದಿವಿಜ** ದೇವತೆಗಳ **ಮನುಜ** ಮನುಷ್ಯರ **ಮನೋನಯನಾಲ್ಹಾದದುಘೈಃ** ಕಣ್ಮನಗಳಿಗೆ ಸಂತೋಷವನ್ನುಂಟುಮಾಡುವ **ಗತಿ** ನಡುಗೆ **ವಿಹಾರ** ಕ್ರೀಡೆ **ವಿನಯ ವಿಲೋಕನ** ನೋಟ **ಸುಸ್ವರಾಕ್ಷರ** ಒಳ್ಳೆಯ ಮಧುರ ಮಾತುಗಳ **ಅವಯವೈಃ** ಸ್ತನಾದಿ ಅವಯವ ಗಳಿಂದ **ನೃಣಾಂ ಮನಸಿ** ಜನರ ಮನಸ್ಸಿನಲ್ಲಿ **ಕುಸುಮಾಯುಧಸ್ಯ ವಿವರಂ ವಿದಧತೀಂ** ಕಾಮುಕ್ಕೆ ಅವಕಾಶ ಮಾಡಿಕೊಡುವ **ತಾಂ** ಪೂರ್ವಚಿತ್ತಿಯನ್ನು **ಅವಿದೂರೇ** ಸಮೀಪದಲ್ಲಿಯೇ **ವಿಲೋಕ್ಯ** ನೋಡಿ. ।।೬।।

**ನಿಜಮುಖವಿಗಲಿತಮದಾಸವಾಮೋದಮದಾಂಧಮಧುಕರನಿಕರೋಪರೋಧೇನ ದ್ರುತಪದವಿನ್ಯಾಸವಲ್ಗುಸ್ಪಂದನಸ್ತನಕಲಶಕಬರಹಾರರಶನಾಂ ದೇವೀಂ ತದವಲೋಕನೇನ ವಿಧೃತಾವಸರಸ್ಯ ಭಗವತೋ ಮಕರಧ್ವಜಸ್ಯ ವಶಮುಪನೀತೋ ಜಡವದಿತಿ ಹೋವಾಚ ।।೭।।**

**ನಿಜಮುಖ** ತನ್ನ ಮುಖದಿಂದ **ವಿಗಲಿತ** ಹೊರಬಂದ **ಮದಾಸವ** ಮದಜನಕ ಮದ್ಯದ **ಆಮೋದ** ಗಂಧದಿಂದ **ಮದಾಂಧ** ಸಂತೋಷದಿಂದ ಕುರುಡಾದ **ಮಧುಕರನಿಕರೋಪರೋಧೇನ** ಭ್ರಮರ ಸಮೂಹದಿಂದಾಗುವ ಆವರಣವನ್ನು ತಪ್ಪಿಸಲು **ದ್ರುತಪದವಿನ್ಯಾಸ** ವೇಗವಾಗಿ ನಡೆಯುವುದರಿಂದ **ವಲ್ಗುಸ್ಪಂದನ** ಸುಂದರ ಅಲ್ಪಚಲನವುಳ್ಳ **ಸ್ತನಕಲಶ** ಕಳಸಗಳಂತಿರುವ ಸ್ತನಗಳು **ಕಬರ** ತುರುಬು **ಹಾರರಶನಾಂ** ವಡ್ಯಾಣವುಳ್ಳ **ದೇವೀಂ** ಪ್ರಕಾಶಮಾನಳಾದ **ಭಗವತೋ ಮಕರಧ್ವಜಸ್ಯ** ಅವಕಾಶವನ್ನು ಪಡೆದ ಕಾಮದೇವನ **ವಶಂ ಉಪನೀತಃ ಜಡವತ್ ಇತಿ ಉವಾಚ** ವಶನಾಗಿ ವಿಚಾರ ಶೂನ್ಯ ಮನುಷ್ಯನಂತೆ ಮುಂದೆ ಹೇಳುವಂತೆ ಮಾತನಾಡಿದನು. ।।೭।।

### ಆಗ್ನೀಧ್ರನ ಅನುನಯ

**ಕಾ ತ್ವಂ ಚಿಕೀರ್ಷಸಿ ಚ ಕಿಂ ಮುನಿವರ್ಯ ಶೈಲೇ**
**ಮಾಯಾಸಿ ಕಿಂ ಭಗವತಃ ಪರದೇವತಾಯಾಃ ।**

 

**ವಿಜ್ಯೇ ಬಿಭರ್ಷಿ ಧನುಷೀ ಸುಹೃದಾತ್ಮನೋಽರ್ಥೇ**
**ಕಿಂ ವಾ ಮೃಗಾನ್ ಮೃಗಯಸೇ ವಿಪಿನೇ ಪ್ರಮತ್ತಾನ್ ॥೮॥**

ವಿಚಾರ ಶೂನ್ಯತೆಯನ್ನೇ ತೋರಿಸುವರು. ಮುನಿವರ್ಯ ಎಂದು ಪುಲ್ಲಿಂಗದಲ್ಲಿ ಸಂಬೋದಿಸಿ ಕಾ ತ್ವಂ ಎಂದು ಸ್ತ್ರೀಲಿಂಗದಲ್ಲಿ ಮಾತಾಡುವುದು ಜಾಡ್ಯದ ಕಾರ್ಯವೇ ಅಲ್ಲವೇ?

**ಹೇ ಮುನಿವರ್ಯ** ಎಲೋ ಋಷಿಶ್ರೇಷ್ಠನೇ **ಕಾ ತ್ವಂ** ನೀನ್ಯಾರು? **ಶೈಲೇ** ಪರ್ವತದಲ್ಲಿ **ಕಿಂ ಚಿಕೀರ್ಷಸಿ** ಏನು ಮಾಡಲಿಚ್ಛಿಸುವಿ **ಭಗವತಃ ಪರದೇವಾತಾಯಾಃ ಮಾಯಾ ಅಸಿ ಕಿಂ** ಸರ್ವೋತ್ತಮನಾದ ಭಗವಂತನ ಮಾಯೇಯೋ? (ಹುಬ್ಬನ್ನು ನೋಡಿ ಹೇಳುವನು) **ಹೇ ಸುಹೃತ್** ಸಖಿಯೇ **ವಿಜ್ಯೇ** ಮೌರ್ವಿ ಇಲ್ಲದ (ಹಗ್ಗವಿಲ್ಲದ) **ಧನುಷೀ** ಎರಡು ಬಿಲ್ಲುಗಳನ್ನು **ಕಿಂ ಆತ್ಮನ ಅರ್ಥೇ** ನಿನ್ನ ರಕ್ಷಣೆಗಾಗಿಯೋ **ಕಿಂ ವಾ** ಅಥವಾ **ಪ್ರಮತ್ತಾನ್** ಅಜಿತೇಂದ್ರಿಯರಾದ **ಮೃಗಾನ್** ಮೃಗಸದೃಶರಾದ ನಮ್ಮಂತವರನ್ನು **ವಿಪಿನೇ** ಅಡವಿಯಲ್ಲಿ **ಮೃಗಯಸೇ** ವಶಮಾಡಿಕೊಳ್ಳಲು **ಬಿಭರ್ಷಿ** ಧರಿಸಿರುವೆಯೋ? ॥೮॥

**ಬಾಣಾವಿಮೌ ಭಗವತಃ ಶತಪತ್ರಪತ್ರೌ**
**ಶಾಂತಾವಪುಂಖರುಚಿರಾವತಿತಿಗ್ಮದಂತೌ ।**
**ಕಸ್ಮೈ ಪ್ರಯುಂಕ್ಷಸಿ ವನೇ ವಿಚರನ್ನವಿದ್ಮಃ**
**ಕ್ಷೇಮಾಯ ನೋ ಜಡಧಿಯಾಂ ತವ ವಿಕ್ರಮೋಽಸ್ತು ॥೯॥**

ಅವಳ ಕಟಾಕ್ಷ ನೋಡಿ ಹೇಳುವನು.

**ವನೇ ವಿಚರನ್** ವನದಲ್ಲಿ ಸಂಚರಿಸುತ್ತ **ಭಗವತಃ** ಪೂಜ್ಯಳಾದ ನಿನ್ನ **ಇಮೌ** ಈ **ಶತಪತ್ರಪತ್ರೌ** ಕಣ್ಣುಗಳೆಂಬ ಕಮಲಗಳೇ ಬತ್ತಳಿಕೆಯಾಗಿವುಳ್ಳ **ಶಾಂತೌ** ಮನೋಹರಗಳಾದ **ಅಪುಂಖರುಚಿರೌ** ರೆಕ್ಕೆಗಳಿಲ್ಲದೇ ಶೋಭಿಸುವ **ಅತಿತಿಗ್ಮದಂತೌ** ಪತ್ರಸ್ಥಾನೀಯವಾದ ಕಣ್ಣಿನ ಕೆಳಭಾಗವನ್ನು ನೋಡುವುದರಿಂದ ಅತ್ಯಂತ ತೀಕ್ಷ್ಣಗಳಾದ ಅಗ್ರಭಾಗವುಳ್ಳ **ಬಾಣೌ** ಕಟಾಕ್ಷವೆಂಬ ಬಾಣಗಳನ್ನು **ಕಸ್ಮೈ ಪ್ರಯುಂಕ್ಷಸಿ** ಯಾರಿಗೆ ಬಿಡುವಿಯೋ **ನ ವಿದ್ಮಃ** ತಿಳಿಯಬಾರೆವು **ಜಡಧಿಯಾಂ** ಮಂದಬುದ್ಧಿಗಳಾದ **ನಃ** ನಮ್ಮ **ಕ್ಷೇಮಾಯ** ಕ್ಷೇಮಕ್ಕೆ **ತವ ವಿಕ್ರಮಃ ಅಸ್ತು** ನಿನ್ನ ಪರಾಕ್ರಮವಿರಲಿ. ನಮ್ಮ ಮೇಲೆ ಬಾಣ ಪ್ರಯೋಗ ಮಾಡಬೇಡವೆಂದು ಭಾವ. ॥೯॥

ಅವಳ ಮುಖದಿಂದ ಬಂದ ಆಸವಗಂಧಲೋಭದಿಂದ ಅನುಸರಿಸುವ ಭ್ರಮರಗಳನ್ನು ನೋಡಿ ಹೇಳುವನು

**ಶಿಷ್ಯಾ ಇಮೇ ಭಗವತಃ ಪರಿತಃ ಪಠಂತಿ**
**ಗಾಯಂತಿ ಸಾಮ ಸರಹಸ್ಯಮಜಸ್ರಮೀಶ ।**
**ಯುಷ್ಮಚ್ಛಿಖಾವಿಲುಲಿತಾಃ ಸುಮನೋಽಭಿವೃಷ್ಟೀಃ**
**ಸರ್ವೇ ಭಜಂತ್ಯೃಷಿಗಣಾ ಇವ ವೇದಶಾಖಾಃ ॥೧೦॥**

**(ಇಲ್ಲಿ ಕೈಯಿಂದ ಹೊಡೆದೋಡಿಸಲು ಬರುವುದರಿಂದ ಶಿಷ್ಯಾಃ ಎಂದಿದ್ದಾರೆ)**

**ಇಮೇ ಶಿಷ್ಯಾಃ** ಈ ಶಿಷ್ಯರು **ಭಗವತಃ ಪರಿತಃ** ನಿಮ್ಮ ಸುತ್ತಲೂ **ಸರಹಸ್ಯಂ ಸಾಮ** ರಹಸ್ಯದಿಂದ ಕೂಡಿದ ಸಾಮವೇದವನ್ನು **ಅಜಸ್ರಂ** ಸಂತತವಾಗಿ **ಪಠಂತಿ** ಕಲಿಯುವರು **ಗಾಯಂತಿ** ಗಾನ ಮಾಡುವರು **ಈಶ** ಸ್ವಾಮಿಯೇ **ಯುಷ್ಮತ್ ಶಿಖಾವಿಲುಲಿತಾಃ** ನಿಮ್ಮ ತುರುಬಿನಿಂದ ಉದುರಿಸಿದ **ಸುಮನೋಽಭಿವೃಷ್ಟೀಃ** ಹೂಗಳನ್ನು **ಸರ್ವೇ** ಎಲ್ಲ **ಋಷಿಗಣಾಃ** ಮುನಿಗಳ ಸಮೂಹಗಳು **ವೇದಶಾಖಾಃ ಇವ** ವೇದಗಳ ಭಾಗಗಳನ್ನು ಸ್ವೀಕರಿಸುವಂತೆ **ಭಜಂತಿ** ಸ್ವೀಕರಿಸುವರು.

ನೂಪುರಧ್ವನಿಯನ್ನು ಕೇಳಿ ಹೇಳುವನು

**ವಾಚಂ ಪರಂ ಚರಣಪಂಕಜತಿತ್ತಿರೀಣಾಂ**
**ಬ್ರಹ್ಮನ್ನರೂಪಮುಖರೀಂ ಶೃಣುಮೋಽದ್ಯ ತುಭ್ಯಂ ।**
**ಲಬ್ಧಾ ಕದಂಬರುಚಿರಂಕವಿಟಂಕಬಿಂಬೇ**
**ಯಸ್ಯಾಮಲಾತಪರಿಧಿಃ ಕ್ವ ಚ ವಲ್ಕಲಾ ತೇ ॥೧೧॥**

**ಹೇ ಬ್ರಹ್ಮನ್** ಎಲೋ ಜ್ಞಾನಿಯೇ **ತುಭ್ಯಂ** ನಿಮ್ಮ **ಅರೂಪಮುಖರೀಂ** ರೂಪವಿಲ್ಲದೇ (ಬಾಯಿಯಿಲ್ಲದೆ) ಪ್ರಕಟವಾದ (ಶಬ್ದಮಾಡುವ) **ಚರಣ ಪಂಕಜತಿತ್ತಿರೀಣಾಂ** ಪಾದ ಕಮಲಗಳಲ್ಲಿರುವ ನೂಪುರದಲ್ಲಿ ರತ್ನಗಳ **ಪರಂ ವಾಚಂ ಅದ್ಯ ಶೃಣುಮಃ** ಕೇವಲ ಶಬ್ದವನ್ನು ಮಾತ್ರ ಕೇಳುವೆವು (ಅದರಿಂದ ವ್ಯಕ್ತವಾದ ಅರ್ಥವನ್ನಲ್ಲವೆಂದುಭಾವ). ನಿತಂಬದಲ್ಲಿರುವ ಪೀತಾಂಬರವನ್ನು ಕದಂಬ ಪುಷ್ಪದ ಕಾಂತಿ ಎಂದು ಕಲ್ಪಿಸಿ ಕೇಳುವನು - **ಅಂಕವಿಟಂಕಬಿಂಬೇ** ತೊಡೆಗಳಿಗೆ ಅಲಂಕಾರವಾದ ನಿತಂಬ ಪ್ರದೇಶದಲ್ಲಿ **ಕದಂಬರುಚಿಃ ಕ್ವ** ಲಬ್ಧಾ ಕದಂಬ ಕುಸುಮದ ಕಾಂತಿಯು ಎಲ್ಲಿ ದೊರೆಯಿತು?




ವಡ್ಯಾಣವನ್ನು ಕೊಳ್ಳಿ ಎಂದು ಕಲ್ಪಿಸಿ ಹೇಳುವನು - **ಯಸ್ಯಾಂ** ಯಾವ ಕಿಂತಿಯಲ್ಲಿ **ಅಲಾತಪರಿಧಿಃ** ಕೊಳ್ಳಿಯಿಂದ ಚಕ್ರದಂತೆ ಸುತ್ತುವರೆದಿದಿಯೋ ಅದು ಎಲ್ಲಿ ದೊರೆಯಿತು?

ನಿತಂಬದಲ್ಲಿ ವಸ್ತ್ರವನ್ನು ಕಾಂತಿ ಎಂದು ಕಲ್ಪಿಸಿದ್ದರಿಂದ ವಸ್ತ್ರವೇ ಇಲ್ಲವೆಂದು ತಿಳಿದು ಪ್ರಶ್ನಿಸುವನು- **ತೇ ವಲ್ಕಲಾ ಕ್ವ** ನಿನ್ನ ನಾರು ಬಟ್ಟೆಯಾದರೂ ಎಲ್ಲಿ. ಮುನಿವರ್ಯ ಎಂದು ಸಂಬೋಧಿಸಿದ್ದರಿಂದ ಅದಕ್ಕನುಗುಣವಾಗಿ ವಲ್ಕಲಾ ಎಂದಿರುವನು. **ವಲ್ಕಂ ವಲ್ಕಲಮಸ್ತ್ರಿಯಾಂ** ಎಂದು ಅಭಿಧಾನವಿದೆ. ಕಾರಣ ಸ್ತ್ರೀಲಿಂಗ ಪ್ರಯೋಗ ಜಾಡ್ಯದಿಂದ ಎಂದು ತಿಳಿಯಬೇಕು. '**ತಿತ್ತಿರಿರ್ನೂಪುರಾಂತಸ್ಥರತ್ನಪಕ್ಷಿ-ವಿಶೇಷಯೋಃ**' ಎಂದು ಅಭಿಧಾನವಿದೆ. ।।೧೧।।

ಸ್ತನಗಳನ್ನು ಪರ್ವತದತುದಿ (ಕೋಡು) ಎಂದು ಕಲ್ಪಿಸಿ ಹೇಳುವನು (ಪಯೊಧರಕ್ಕ ಶೃಂಗ ಎಂದಿದೆ).

**ಕಿಂ ಸಂಭೃತಂ ರುಚಿರಯೋರ್ದ್ವಿಜ ಶೃಂಗಯೋಸ್ತೇ**
**ಮಧ್ಯೇ ಕೃಶೋ ವಹಸಿ ಯತ್ರ ದೃಶೀ ಶ್ರಿತೇ ಮೇ ।**
**ಪಂಕೋಽರುಣಃ ಸುರಭಿರಾತ್ಮವಿಷಾಣ ಈದೃಗ್**
**ಯೇನಾಶ್ರಮಂ ಸುಭಗ ಮೇ ಸುರಭೀಕರೋಷಿ ।।೧೨।।**

**ಹೇ ದ್ವಿಜ** ಎಲೋ ಬ್ರಾಹ್ಮಣನೇ **ತೇ** ನಿನ್ನ **ರುಚಿರಯೋಃ** ಮನೋಹರಗಳಾದ **ಶೃಂಗಯೋಃ** ಪರ್ವತ ಶೃಂಗದಂತೆ ಉನ್ನತಗಳಾದ ಸ್ತನಗಳಲ್ಲಿ **ಕಿಂ ಸಂಭೃತಂ** ಯಾವ ಅಪೂರ್ವ ವಸ್ತು ಪೂರಿತವಾಗಿದೆ (ಚೂಚುಕವೆಂಬ ರತ್ನತುಂಬಿದೆಯೇ) **ಮಧ್ಯೇ ಕೃಶಃ** ಸಣ್ಣನ ನಡುವಿದ್ದರೂ **ವಹಸಿ** ಕಷ್ಟದಿಂದ ಧರಿಸಿರುವಿ **ಮೇ** ನನ್ನ **ದೃಶೀ** ಕಣ್ಣುಗಳು **ಯತ್ರ** ಎಲ್ಲಿ **ಶ್ರಿತೇ** ನೆಟ್ಟಿವೆ ಕಾರಣ ಅಪೂರ್ವ ವಸ್ತು ಇರಲೇಬೇಕು. ಇಲ್ಲವಾದರೆ ನೀನು ಹೊರಡುತ್ತಿರಲಿಲ್ಲ . ನನ್ನ ದೃಷ್ಟಿ ಬೀಳುತ್ತಿರಲಿಲ್ಲವೆಂದು ಭಾವ.

ಸ್ತನಗಳಿಗೆ ಲೇಪಿಸಿದ ಕುಂಕುಮ ಗಂಧವನ್ನು ಕೆಸರೆಂದು ಕಲ್ಪಿಸಿ ಹೇಳುವರು.**ಹೇ ಸುಭಗ** ಹೇ ಸೊಬಗಿನ ತಾಣವೇ **ಯೇನ** ಯಾವುದರಿಂದ **ಮೇ** ನನ್ನ **ಆಶ್ರಮಂ** ಕುಟೀರವನ್ನು **ಸುರಭೀಕರೋಷಿ** ಸುಗಂಧಯುತವಾಗಿಮಾಡುವಿಯೋ **ಈದೃಕ್** ಇಂಥ **ಆತ್ಮವಿಷಾಣೇ** ನಿನ್ನ ಸ್ತನಗಳಲ್ಲಿ **ಸುರಭಿಃ** ಸುಗಂಧವಾದ **ಅರುಣಃ** ಕೆಂಪಾದ **ಪಂಕಃ?** ಕೆಸರು ಇದೆಯೇ.

**ಪಾಠಾಂತರ**

**ಪಂಕೋಽರುಣೇ** ಎಂಬ ಪಾಠದಲ್ಲಿ **ಆತ್ಮನಃ** ನಿನ್ನ **ವಿಷಾಣೇ** ಸ್ತನಗಳು **ಅರುಣೇ** ಕೆಂಪಾದವು **ಈದೃಕ್** ಅತಿಸುಂದರವಾದವುಗಳು ಎಂದರ್ಥ.

**ಲೋಕಂ ಪ್ರದರ್ಶಯ ಸುಹೃತ್ತಮ ತಾವಕಂ ಮೇ**
**ಯತ್ರತ್ಯ ಇತ್ಥಮುರಸಾವಯವಾವಪೂರ್ವೌ ।**
**ಅಸ್ಮದ್ವಿಧಸ್ಯ ಮನ ಉನ್ನಯನೌ ಬಿಭರ್ಷಿ**
**ಬಹ್ವದ್ಭುತಂ ಸಹಸಹಾಸಸುಧಾಂ ಚ ವಕ್ತ್ರೇ ॥೧೩॥**

**ಹೇ ಸುಹೃತ್ತಮ** ಎಲೋ ಗೆಳೆಯನೇ **ಯತ್ರತ್ಯ** ಯಾವ ಲೋಕದಲ್ಲಿರುವ ನೀನು **ಇತ್ಥಂ** ಈ ರೀತಿಯಾಗಿ **ಉರಸಾ** ಎದೆಯಿಂದ **ಅಸ್ಮದ್ವಿಧಸ್ಯ** ಮನ್ಮಥ ಪೀಡಿತರ **ಮನ ಉನ್ನಯನೌ** ಮನಸ್ಸಿಗೆ ಕ್ಷೋಭೆಯುಂಟುಮಾಡುವ **ಅಪೂರ್ವೌ ಅವಯವೌ** ಎಂದೂ ನೋಡದ ಅವಯವಗಳೆರಡನ್ನು (ಸ್ತನಗಳನ್ನು) **ಬಿಭರ್ಷಿ** ಧರಿಸಿರುವಿ ಮತ್ತು **ವಕ್ತ್ರೇ** ಮುಖದಲ್ಲಿ **ಬಹ್ವದ್ಭುತಂ** ಅತಿ ಆಶ್ಚರ್ಯಕರವಾದ **ಸಹಸಹಾಸಸುಧಾಂ ಚ ಬಿಭರ್ಷಿ** ಮಧುರ ಮಾತುಗಳಿಂದ ಕೂಡಿದ ಮಂದಾಹಾಸದಿಂದ ಕೂಡಿದ ಅಧರಾಮೃತವನ್ನು ಧರಿಸಿರುವೆ **ತಂ** ಅಂಥ **ತಾವಕಂ** ನಿನ್ನ **ಲೋಕಂ** ಸ್ಥಾನವನ್ನು **ಮೇ** ನನಗೆ **ಪ್ರದರ್ಶಯ** ತೋರಿಸು. ॥೧೩॥

**ಕಾ ವಾತ್ಮವೃತ್ತಿರದನಾದ್ಬಹಿರಂಗ ಭಾತಿ**
**ವಿಷ್ಣೋಃ ಕಲಾಸ್ಯನಿಮಿಷನ್ಮಕರಸ್ಯ ಕರ್ಣೌ ।**
**ಉದ್ವಿಗ್ನಮೀನಯುಗಲಂ ದ್ವಿಜಪಂಕ್ತಿಶೋಚಿ**
**ಚಾಸನ್ನಭೃಂಗನಿಕರಂ ಸರ ಉನ್ಮುಖಂ ತೇ ॥೧೪॥**

**ಹೇ ಅಂಗ** ಎಲೋ ಪ್ರಿಯನೇ **ಆತ್ಮವೃತ್ತಿಃ ಕಾ** ಜೀವನೋಪಾಯ ಯಾವುದು? **ಅದನಾದ್ ಬಹಿಃ ಭಾತಿ** ಅನ್ನವಂತು ಅಲ್ಲವೆಂದು ತೋರುವುದು (ದುರ್ಗಂಧಾದಿ-ಗಳಿಲ್ಲದಿರುವುದರಿಂದ) ಅನ್ನ ತಿನ್ನದೆಯೇ ಇರಲು ಮತ್ತೊಂದು ಕಾರಣ ಹೇಳುವರು **ಯತಃ** ಯಾವ ಕಾರಣ **ವಿಷ್ಣೋಃ** ಶ್ರೀಹರಿಯ **ಕಲಾ ಅಸಿ** ಅಂಶಳಾಗಿರುವಿ, ವಿಷ್ಣುವಾದರೂ ಅನ್ನ ತಿನ್ನಲಾರನೆಂದು ಭಾವ!

ಮಕರ ಕುಂಡಲ ಧರಿಸಿದ್ದರಿಂದಲೂ ವಿಷ್ಣು ಕಲೆಯಾಗಿರುವಿ ಎಂದು ಹೇಳುವನು **ತವ ಕರ್ಣೌ** ನಿನ್ನ ಕಿವಿಗಳು **ಅನಿಮಿಷನ್ಮಕರೌ** ಕಣ್ಣು ಮುಚ್ಚದಿರುವ (ವಿಷ್ಣುವಿನಂತೆ)




ಮಕರಾಕಾರದ ಕುಂಡಲವುಳ್ಳವು ನೀನು ಲೋಕವಿಲಕ್ಷಣ ಎನ್ನಲು ಕಾರಣ ಹೇಳುವನು **ಉದ್ವಿಗ್ನಮೀನಯುಗಲಂ** ಚಂಚಲವಾದ ಮೀನದಂತಿರುವ ಎರಡು ಕಣ್ಣುಗಳುಳ್ಳ **ದ್ವಿಜಪಂಕ್ತಿಶೋಭಿ** ರಾಜಹಂಸದಂತೆ ಶುಭ್ರವಾದ ಹಲ್ಲುಗಳ ಸಾಲಿನಿಂದ ಶೋಭಿಸುವ **ಆಸನ್ನಭೃಂಗನಿಕರಂ** ಭ್ರಮರಗಳಂತೆ ಇರುವ ಕೇಶ ಪಾಶಗಳುಳ್ಳ **ತೇ ಮುಖಂ** ನಿನ್ನ ಮುಖವು **ಉತ್ ಸರಃ ಭಾತಿ** ಉತ್ಕೃಷ್ಟ ಸರೋವರದಂತೆ ತೋರುವುದು. ।।೧೪।।

**ಯೋಽಸೌ ತ್ವಯಾ ಕರಸರೋಜಹತಃ ಪತಂಗೋ**
**ದಿಕ್ಷು ಭ್ರಮನ್ ಭ್ರಮತ ಏಜಯತೇಽಕ್ಷಿಣೀ ತೇ ।**
**ಯುಕ್ತಂ ನ ತೇ ಸ್ಮ ವರವಕ್ರಜಟಾವರೂಥಃ**
**ಕೃಷ್ಣೋಽನಿಲೋ ಹರತಿ ಲಂಪಟ ಏಷ ನೀವೀಮ್ ।।೧೫।।**

**ತ್ವಯಾ** ನಿನ್ನಿಂದ **ಕರಸರೋಜಹತಃ** ಕೈಗಳೆಂಬ ಕಮಲದಿಂದ ಪುಟಿಸಲ್ಪಟ್ಟ **ಪತಂಗಃ** ಚಂಡು **ದಿಕ್ಷು ಭ್ರಮನ್** ದಿಕ್ಕುಗಳಲ್ಲಿ ತಿರುಗುತ್ತಾ **ಭ್ರಮತಃ** ಚಲಿಸುವ **ತೇ ಅಕ್ಷಿಣೀ** ನಿನ್ನ ಕಣ್ಣುಗಳನ್ನು **ಏಜಯತೇ** ಚಲಿಸುವಂತೆ ಮಾಡುವುದು. **ಯಃ ಅಸೌ** ಯಾವ ಈ **ಲಂಪಟಃ** ಸ್ತ್ರೀ ಅನುರಾಗಿಯಾದ ಆದ್ದರಿಂದಲೇ **ಕೃಷ್ಣಃ (ಕಷ್ಟಃ)** ತಾಮಸನು **ವರವಕ್ರಜಟಾವರೂಥಃ** ಉತ್ತಮವಾದ ಕೂದಲುಗಳ ಸಮೂಹವನ್ನು ವಕ್ರಗೊಳಿಸಿದ **ಏಷಃ ಅನಿಲಃ** ಈ ವಾಯುವು **ತೇ** ನಿನ್ನ **ನೀವೀಂ** ವಸ್ತ್ರಬಂಧವನ್ನು **ಹರತಿ** ಅಪಹರಿಸುವನು **ಸ್ಮ** ಆಶ್ಚರ್ಯವು **ಏತತ್ ನ ಯುಕ್ತಂ** ಇದು ಸರಿಯಲ್ಲ (ಸೀರೆಯ ಗಂಟನ್ನು ಸಡಿಲಗೊಳಿಸುವನು. ಅದು ಸರಿಯಲ್ಲ). ।।೧೫।।

**ರೂಪಂ ತಪೋಧನ ತಪಶ್ಚರತಾಂ ತಪೋಘ್ನಂ**
**ಹ್ಯೇತತ್ತು ಕೇನ ತಪಸಾ ಭವತೇಹ ಲಬ್ಧಂ ।**
**ಚರ್ತುಂ ತಪೋಽರ್ಹಸಿ ಮಯಾ ಸಹ ಮಿತ್ರ ಮಹ್ಯಂ**
**ಕಿಂ ವಾ ಪ್ರಸೀದಸಿ ಸ ವೈ ಭವಭಾವನೋ ಮೇ ।।೧೬।।**

**ಹೇ ತಪೋಧನ** ಎಲೋ ತಪಸ್ವಿಯೇ **ರೂಪಂ** ನಿನ್ನ ಸೌಂದರ್ಯವು **ತಪಶ್ಚರತಾಂ** ತಪಸ್ಸು ಮಾಡುವವರ **ತಪೋಘ್ನಂ** ತಪಸ್ಸಿಗೆ ವಿಘ್ನಕರವು **ಏತತ್** ಈ ರೂಪವು **ಕೇನ ತಪಸಾ** ಯಾವ ತಪಸ್ಸಿನಿಂದ ಇಹ ಭೂಮಿಯಲ್ಲಿ **ಭವತಾ ಲಬ್ಧಂ** ನಿನ್ನಿಂದ ಹೊಂದಲ್ಪಟ್ಟಿತು.

**ಹೇ ಮಿತ್ರ** ಎಲೋ ಗೆಳೆಯನೇ **ಮಯಾ ಸಹ ತಪಃ ಚರ್ತುಂ ಅರ್ಹಸಿ** ನನ್ನೊಡನೆ ತಪಸ್ಸು ಮಾಡಲು ಯೋಗ್ಯಳಾಗಿರುವಿಯೋ **ಕಿಂ ವಾ** ಅಥವಾ ತಪಸ್ಸನ್ನು ಬಿಟ್ಟು **ಮಹ್ಯಂ ಪ್ರಸೀದಸಿ** ನನ್ನ ಮೇಲೆ ಪ್ರಸನ್ನಳಾಗುವಿಯೋ (ಭೋಗಾನುಕೂಲ-ಳಾಗುವಿಯೋ) **ಸಃ** ನೀನು **ಮೇ** ನನಗೆ **ಭವಭಾವನಃ** ಶುಭಾಭಿವೃದ್ಧಿಕರನು, ಸಂಸಾರಾಭಿವೃದ್ಧಿಕರನು **ವೈ** ಪ್ರಸಿದ್ಧವು. ॥೧೬॥

**ನ ತ್ವಾಂ ತ್ಯಜಾಮಿ ದಯಿತಾಂ ದ್ವಿಜ ದೈವದತ್ತಂ**
**ಯಸ್ಮಿನ್ ಮನೋ ದೃಗಪಿ ವಾ ನ ವಿಯಾತಿ ಲಗ್ನಂ ।**
**ಮಾಂ ಚಾರುಶೃಂಗಾರ್ಹಸಿ ನೇತುಮನುವ್ರತಂ ತೇ**
**ಚಿತ್ತಂ ಯತಃ ಪ್ರತಿಸರಂತು ಶಿವಾಃ ಸಚಿವ್ಯಃ ॥೧೭॥**

**ಹೇ ದ್ವಿಜ** ಎಲೋ ಬ್ರಾಹ್ಮಣನೇ **ದೈವದತ್ತಂ** ವಿಧಿಯಿಂದ ಕೊಡಲ್ಪಟ್ಟ **ಯಸ್ಮಿನ್** ಯಾವ ನಿನ್ನಲ್ಲಿ **ಲಗ್ನಂ** ನೆಟ್ಟ (ಸಂಬದ್ಧವಾದ) **ಮನಃ** ಮನಸ್ಸು **ದೃಗಪಿ** ಕಣ್ಣುಗಳಾಗಲಿ **ನ ವಿಯಾತಿ** ಬೇರೆ ಕಡೆಗೆ ಹೋಗಲಾರವೋ **ತಾಂ** ಅಂಥ **ದಯಿತಾಂ** ಪ್ರಿಯಳಾದ **ತ್ವಾಂ** ನಿನ್ನನ್ನು **ನ ತ್ಯಜಾಮಿ** ಬಿಡಲಾರೆನು **ಚಿತ್ತಂ** ನನ್ನ ಮನಸ್ಸು **ತೇ ಅನುವ್ರತಂ** ನಿನ್ನನ್ನು ಅನುಸರಿಸಿರುವುದು ಆದ್ದರಿಂದ **ತ್ವಂ** ನೀನು **ಮಾಂ ನೇತುಂ ಅರ್ಹಸಿ** ನಿನ್ನೊಡನೆ ಕರೆದೊಯ್ಯಲು ಯೋಗ್ಯಳಾಗಿರುವಿ **ಸಚಿವ್ಯಃ** ಅರಣ್ಯದಲ್ಲಿ ಜೊತೆಗೆ ಸಂಚರಿಸುವ **ಶಿವಾಃ** ಹೆಣ್ಣು ನರಿಗಳು **ಪ್ರತಿಸರಂತು** ಪ್ರದಕ್ಷಿಣವಾಗಿ ಹೋಗಲಿ ಎಂದು ತಮ್ಮ ಕಾರ್ಯಸಿದ್ಧಿಗೆ ಶುಭಶಕುನವನ್ನು ಪ್ರಾರ್ಥಿಸುವನು ಅಥವಾ **ಶಿವಾಃ ಸಚಿವ್ಯಃ** ದಾಸಿಯರಂತಿರುವ ಭ್ರಮರಗಳು **ಪ್ರತಿಸರಂತು** ದೂರ ಹೋಗಲಿ. ನಂತರ ನಿನ್ನೊಡನೆ ಸುಖ ಅನುಭವಿಸುವೆನೆಂದು ಭಾವ. ॥೧೭॥

**ಶ್ರೀ ಶುಕ ಉವಾಚ**

**ಇತಿ ಲಲನಾನುನಯಾತಿವಿಶಾರದೋ ಗ್ರಾಮ್ಯವೈದಗ್ಧ್ಯಯಾ ಪರಿಭಾಷಯಾ ತಾಂ ವಿಬುಧವಧೂಮಿತಿ ಸಭಾಜಯಾಮಾಸ ॥೧೮॥**

**ಇತಿ** ಈ ರೀತಿಯಾಗಿ **ಲಲನಾನುನಯಾತಿವಿಶಾರದಃ** ಸ್ತ್ರೀಯನ್ನು ಒಪ್ಪುವಂತೆ ಮಾಡುವ ಮಾತುಗಳಲ್ಲಿ ಅತ್ಯಂತ ನಿಪುಣವಾದ ಆಗ್ನೀಧ್ರರಾಜನು **ಗ್ರಾಮ್ಯವೈದಗ್ಧ್ಯಯಾ** ವಿಷಯ ಭೋಗ ಕಥಾದಲ್ಲಿ ನಿಪುಣತೆಯುಳ್ಳ **ಪರಿಭಾಷಯಾ** ಸಾಂಕೇತಿಕ ಮಾತುಗಳಿಂದ (ತಾನೇ ಕಲ್ಪಿಸಿದ ಮಾತುಗಳಿಂದ) **ವಿಬುಧವಧೂಂ** ಆ ದೇವತಾಸ್ತ್ರೀಯನ್ನು **ಇತಿ ಸಭಾಜಯಾಮಾಸ** ಈ ರೀತಿ ಸತ್ಕರಿಸಿದನು. ॥೧೮॥

## ಅಸಂಬದ್ಧ ಮಾತುಗಳನ್ನೊಳಗೊಂಡ ಈ ಭಾಗವತದ ಭಾಗ ಹೇಗೆ ಪ್ರಮಾಣ?

'ಕಾ ತ್ವಂ' ಎಂದಾರಂಭಿಸಿ ಇದುವರೆಗೆ ಅಸಂಬದ್ಧ ವಾಕ್ಯಗಳನ್ನು ಜ್ಞಾನಿಯಾದ ಆಗ್ನಿಧ್ರನು ಹೇಳಿದನು. ಆ ಮಾತುಗಳನ್ನು ಅನುವಾದಿಸುವ ಭಾಗವತದ ಈ ಭಾಗ ಪ್ರಮಾಣ ಹೇಗೆ ಎಂದು ಶಂಕಿಸಬೇಕಿಲ್ಲ.

ತಾತ್ಪರ್ಯ- ''**ಪರಿಹಾಸಪ್ರಲಾಪಾದಿಷ್ವನರ್ಥಾ ವಾಗ್ಭವೇತ್ ಕ್ವಚಿತ್' ಇತಿ ಶಬ್ದನಿರ್ಣಯೇ**

ಎಂದು ಶಬ್ದನಿರ್ಣಯ ವಾಕ್ಯವಿದ್ದುದರಿಂದ ಹಾಸ್ಯ ವ್ಯವಹಾರಗಳು ಕೆಲವು ಕಡೆ ಕಂಡು ಬರುವವು. ಈಗ ಆಗ್ನಿಧ್ರನು ಕಾಮ ವಶನಾದ್ದರಿಂದ ಈ ಬಗೆಯ ಮಾತು ಸಂಭಾವಿತವೇ. ಅದನ್ನು ಅನುವಾದಿಸುವ ಗ್ರಂಥಕ್ಕೂ ಅಪ್ರಾಮಾಣ್ಯಕ್ಕೆ ಅವಕಾಶವಿಲ್ಲ ಎಂದು ತಾತ್ಪರ್ಯ. ।।೧೮।।

**ಸಾ ಚ ತತಸ್ತಸ್ಯ ವೀರಯೂಥಪತೇರ್ಬುದ್ಧಿಶೀಲರೂಪವಿದ್ಯಾವಯಃ-ಶ್ರಿಯೌದಾರ್ಯೇಣ ಪರಾಕ್ಷಿಪ್ತಮನಾಸ್ತೇನ ಸಹಾಯುತಾಯುತವತ್ಸರೋಪ-ಲಕ್ಷಣಂ ಕಾಲಂ ಜಂಬೂದ್ವೀಪಪತಿನಾ ಭೋಗಾನ್ ಬುಭುಜೇ ।।೧೯।।**

**ತತಃ** ಅನಂತರ **ಸಾ ಚ** ಆ ಅಪ್ಸರೆಯಾದರೂ **ವೀರಯೂಥಪತೇಃ ತಸ್ಯ** ವೀರ ನಾಯಕನಾದ ಆಗ್ನೀಧ್ರನ **ಬುದ್ಧಿಶೀಲರೂಪವಿದ್ಯಾವಯಃಶ್ರಿಯೌದಾರ್ಯೇಣ** ಸ್ವಭಾವ, ರೂಪ, ವಿದ್ಯಾ , ವಯಸ್ಸು, ಸಂಪತ್ತು, ಔದಾರ್ಯಗಳಿಂದ **ಪಾರಾಕ್ಷಿಪ್ತಮನಾ** ಮೋಹಿತಳಾಗಿ **ತೇನ ಜಂಬೂದ್ವೀಪಪತಿನಾ ಸಹ** ಜಂಬೂದ್ವೀಪದ ಒಡೆಯನಾದ ಅವನೊಡನೆ **ಅಯುತಾಯುತವತ್ಸರೋಪಲಕ್ಷಣಂ ಕಾಲಂ** ಹತ್ತಾರು ಸಾವಿರ ವರ್ಷಗಳವರೆಗೆ **ಭೋಗಾನ್ ಬುಭುಜೇ** ವಿಷಯಗಳನ್ನನುಭವಿಸಿದಳು. ।।೧೯।।

**ತಸ್ಯಾಮು ಹ ವಾ ಆತ್ಮಜಾನ್ ಸ ರಾಜವರ್ಯ ಆಗ್ನೀಧ್ರೋ ನಾಭಿಕಿಂಪುರುಷ ಹರಿವರ್ಷೇಲಾವೃತರಮ್ಯಕಹಿರಣ್ಮಯಕುರುಭದ್ರಾಶ್ವಕೇತು-ಮಾಲಸಂಜ್ಞಾನ್ನವ ಭಾವಯಾಂಬಭೂವ ಸಾ ಸೂತ್ವಾ ತು ಪುತ್ರಾನ್ನವಾನುವತ್ಸರಂ ಗೃಹ ಏವಾಪಹಾಯ ಪೂರ್ವಚಿತ್ತಿರ್ಭೂಯ ಏವಾಜಂ ದೇವಮುಪತಸ್ಥೇ ।।೨೦।।**

**ಸಃ ರಾಜವರ್ಯಃ ಆಗ್ನೀಧ್ರಃ** ಆ ರಾಜ ಶ್ರೇಷ್ಠನಾದ ಆಗ್ನೀಧ್ರನು **ತಸ್ಯಾಂ ಉ** ಅವಳಲ್ಲಿಯೇ ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯಕ, ಹಿರಣ್ಮಯ ಕುರು, ಭದ್ರಾಶ್ವ, ಕೇತುಮಾಲ ಎಂಬ **ನವ** ಒಂಭತ್ತು **ಆತ್ಮಜಾನ್** ಮಕ್ಕಳನ್ನು **ಭಾವಯಾಂಬಭೂವ** ಹುಟ್ಟಿಸಿದನು. **ಸಾ ಪೂರ್ವಚಿತ್ತಿಃ** ಪೂರ್ವಚಿತ್ತಿಯು **ಪುತ್ರಾನ್ ಸೂತ್ವಾ** ಮಕ್ಕಳನ್ನು ಹಡೆದು **ಅನುವತ್ಸರಂ** ಮರುವರ್ಷವೇ **ಗೃಹೇ ಏವ** ರಾಜನ ಮನೆಯಲ್ಲಿಯೇ **ಅಪಹಾಯ** ಬಿಟ್ಟು **ಭೂಯಃ** ಮತ್ತೆ **ದೇವಂ ಅಜಂ ಉಪತಸ್ಥೇ** ಬ್ರಹ್ಮದೇವರನ್ನೇ ಸೇವಿಸಿದಳು (ಅವರ ಬಳಿ ಬಂದಳು). ॥೨೦॥

**ಆಗ್ನೀಧ್ರಸುತಾಸ್ತೇ ಮಾತುರನುಗ್ರಹಾತ್ ಔತ್ಪತ್ತಿಕೇನೈವ ಸಂಹನನಬಲೋಪೇತಾಃ ಪಿತ್ರಾ ವಿಭಕ್ತಾತ್ಮತುಲ್ಯನಾಮಾನಿ ಯಥಾಭಾಗಂ ಜಂಬೂದ್ವೀಪವರ್ಷಾಣಿ ಬುಭುಜುಃ ॥೨೧॥**

**ತೇ ಆಗ್ನೀಧ್ರಸುತಾಃ** ಆ ಆಗ್ನೀಧ್ರನ ಮಕ್ಕಳು **ಮಾತುಃ ಅನುಗ್ರಹಾತ್** ತಾಯಿಯ ಆಶೀರ್ವಾದದಿಂದ **ಔತ್ಪತ್ತಿಕೇನೈವ** ಸ್ವಾಭಾವಿಕವಾಗಿಯೇ **ಸಂಹನನಬಲೋಪೇತಾಃ** ದೇಹದ ಪುಷ್ಟಿ ಬಲದಿಂದ ಕೂಡಿದವರಾಗಿ **ಪಿತ್ರಾ** ತಂದೆಯಿಂದ **ವಿಭಕ್ತ** ಹಂಚಿಕೊಡಲ್ಪಟ್ಟ **ಆತ್ಮತುಲ್ಯನಾಮಾನಿ** ತಮ್ಮ ಸಮಾನ ಹೆಸರುಳ್ಳ **ಜಂಬೂದ್ವೀಪವರ್ಷಾಣಿ** ಜಂಬೂದ್ವೀಪದ ಖಂಡಗಳನ್ನು **ಯಥಾಭಾಗಂ ಬುಭುಜೇ** ತಮ್ಮ ಭಾಗಕ್ಕೆ ಬಂದಂತೆ ಅನುಭವಿಸಿದರು, ರಾಜ್ಯಭಾರ ಮಾಡಿದರು. ॥೨೧॥

**ಆಗ್ನೀಧ್ರೋ ರಾಜಪುತ್ರಸ್ತಾಮಪ್ಸರಸಮೇವಾನುದಿನಮಭಿಮನ್ಯಮಾನ-ಸ್ತಸ್ಯಾಃ ಸಲೋಕತಾಂ ಶ್ರುತಿಭಿರವರುಂಧನ್ ಈಜೇ ಯತ್ರ ಪಿತರೋ ಮೋದಯಂತೇ ॥೨೨॥**

**ರಾಜಪುತ್ರಃ** ಪ್ರಿಯವ್ರತ ಪುತ್ರನಾದ **ಆಗ್ನೀಧ್ರಃ** ಆಗ್ನೀಧ್ರನು **ತಾಂ ಅಪ್ಸರಸಮೇವ** ಆ ಪೂರ್ವಚಿತ್ತಿಯನ್ನೇ **ಅಭಿಮನ್ಯಮಾನಃ** ಧ್ಯಾನಿಸುತ್ತ **ಅನುದಿನಂ** ಪ್ರತಿದಿನವು **ಯತ್ರ** ಎಲ್ಲಿ **ಪಿತರಃ** ಪಿತೃಗಳು **ಮೋದಯಂತೇ** ಸಂತೋಷಿಸುವರೋ ಅಂಥ **ತಸ್ಯಾಃ** ಅಪ್ಸರೆಯ **ಸಲೋಕತಾಂ** ಸಮಾನ ಲೋಕವನ್ನೇ (ಅದೇ ಲೋಕವನ್ನು) **ಶ್ರುತಿಭಿಃ ಅವರುಂಧನ್** ವೇದಗಳೆಂಬ ಸಾಧನಗಳಿಂದ ಹೊಂದಲಿಚ್ಛಿಸಿ **ಈಜೇ** ಶ್ರೀಹರಿಯನ್ನು ಉದ್ದೇಶಿಸಿ ಯಜ್ಞ ಮಾಡಿದನು. ॥೨೨॥

**ಸಂಪರೇತೇ ಪಿತರಿ ನವಭ್ರಾತರೋ ಮೇರುದುಹಿತೃ: ಮೇರುದೇವೀಂ ಪ್ರತಿರೂಪಾಂ ಉಗ್ರದಂಷ್ಟ್ರೀಂ ಲತಾಂ ರಾಮಾಂ ಶ್ಯಾಮಾಂ ನಾರೀಂ ಭದ್ರಾಂ ದೇವೀಂ ಇತಿ ಸಂಜ್ಞಾ ನವ ಉದವಹನ್ ।।೨೩।।**

**ಪಿತರಿ** ತಂದೆಯು **ಸಂಪರೇತೇ** ಮೃತನಾದ ಮೇಲೆ **ನವಭ್ರಾತರಃ** ಒಂಭತ್ತು ಸಹೋದರರು **ಮೇರುದುಹಿತೃಃ** ಮೇರುವಿನ ಮಕ್ಕಳಾದ ಮೇರುದೇವಿ, ಪ್ರತಿರೂಪಾ, ಉಗ್ರದೃಷ್ಟಿ, ಲತಾ, ರಾಮಾ, ಶ್ಯಾಮಾ, ನಾರೀ, ಭದ್ರಾ , ದೇವೀ ಸಂಜ್ಞಾ ಎಂಬ ಹೆಸರಿನ **ನವ** ಒಂಭತ್ತು ಜನರನ್ನು **ಉದವಹನ್** ಮದುವೆಯಾದರು. ।।೨೩।।

**।। ಇಲ್ಲಿಗೆ ೨ನೇ ಅಧ್ಯಾಯವು ಮುಗಿಯಿತು।।**

★★★★



## ಎರಡನೇ ಅಧ್ಯಾಯದ ಸಾರ

ಪ್ರಿಯವ್ರತರಾಜರು ಸಂನ್ಯಾಸಿಗಳಾದರು. ತಂದೆಯ ಅಪ್ಪಣೆಗನುಸಾರವಾಗಿ ಆಗ್ನೀಧ್ರರು ಜಂಬೂದ್ವೀಪ ನಿವಾಸಿಗಳನ್ನು ರಾಜಧರ್ಮದಿಂದ ಔರಸಪುತ್ರರಂತೆ ರಕ್ಷಿಸುತ್ತಿದ್ದರು. ಅವರೊಂದುಸಲ ಪಿತೃಲೋಕವನ್ನು ಹೊಂದಬೇಕೆಂದು ಬಯಸಿದರು. ಇದಕ್ಕಾಗಿ ಸಂತಾನವನ್ನು ಪಡೆಯಲು ತಪಸ್ಸಿಗಾಗಿ ಮಂದರ ಪರ್ವತದ ತಪ್ಪಲಿನ ಗುಹೆಯನ್ನು ಸೇರಿದರು. ಆ ಪರ್ವತವು ದೇವತಾಸ್ತ್ರೀಯರ ಕ್ರೀಡಾಸ್ಥಾನ. ಅಲ್ಲಿದ್ದುಕೊಂಡು ಆಗ್ನೀಧ್ರರು ಆರಾಧನೆಗೆ ಬೇಕಾದ ಹೂ ಹಣ್ಣು ಮೊದಲಾದ ಸಾಮಗ್ರಿಗಳನ್ನು ಒದಗಿಸಿಕೊಂಡು ಏಕಾಗ್ರ ಮನಸ್ಸಿನಿಂದ ಪೂಜ್ಯರಾದ ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿ ಆರಾಧಿಸಿದರು. ಬ್ರಹ್ಮಾಂತರ್ಯಾಮಿ ಶ್ರೀಹರಿಯನ್ನೇ ಧ್ಯಾನಿಸುತ್ತಿದ್ದರು. ಬ್ರಹ್ಮದೇವರು ಇವರ ಅಪೇಕ್ಷೆಯನ್ನು ಪೂರೈಸಬೇಕೆಂದು ತಮ್ಮ ಸಭೆಯಲ್ಲಿ ಗಾನ ಮಾಡುತ್ತಿದ್ದ ಪೂರ್ವಚಿತ್ತಿ ಎಂಬ ಅಪ್ಸರೆಯನ್ನು ಕಳುಹಿಸಿಕೊಟ್ಟರು. ಆಗ್ನೀಧ್ರರ ಆಶ್ರಮದಲ್ಲಿ ಅತ್ಯಂತ ರಮಣೀಯಗಳಾದ ವಿವಿಧ ವೃಕ್ಷಗಳು ದಟ್ಟವಾಗಿ ಬೆಳೆದಿದ್ದವು. ಅವುಗಳ ಕೊಂಬೆಗಳ ಸಮೀಪದಲ್ಲಿ ಬಳ್ಳಿಗಳು ಹಬ್ಬಿಕೊಂಡು ಡೊಂಕಾಗಿದ್ದವು. ಅಲ್ಲಿ ಕುಳಿತಿದ್ದ ನವಿಲುಕೋಗಿಲೆ ಮೊದಲಾದ ನೀರ ಹಕ್ಕಿಗಳ ಜೋಡಿಗಳು ಗಟ್ಟಿಯಾಗಿ ಕೇಕೆ ಹಾಕುತ್ತಿದ್ದವು. ಈ ಧ್ವನಿಯನ್ನು ಕೇಳಿ ಎಚ್ಚರಗೊಂಡ ನೀರ್ಗೋಳಿ, ಬಕ, ಹಂಸ ಮೊದಲಾದ ನೀರಹಕ್ಕಿಗಳು ವಿಚಿತ್ರ ಧ್ವನಿಗೈಯ್ಯುತ್ತಿದ್ದವು. ಇವುಗಳಿಂದ ಕೂಡಿದ ನಿರ್ಮಲ ಜಲಾಶಯಗಳಲ್ಲಿ ಕಮಲಗಳು ವನವಾಗಿ ಬೆಳೆದಿದ್ದವು. ಪೂರ್ವಚಿತ್ತಿಯು ಆ ಆಶ್ರಮದ ಸಮೀಪದ ವನದಲ್ಲಿ ಅತ್ತಿತ್ತ ಸಂಚರಿಸುತ್ತ ಬಂದಳು. ಅಪ್ಸರೆಯು ಸುಂದರವಾದ ತನ್ನ ಪಾದಗಳನ್ನು ಇಡುತ್ತಾ ವಿಲಾಸದಿಂದ ನಡೆಯುತ್ತ ಬಂದಳು.




ಹೆಜ್ಜೆ ಹೆಜ್ಜೆಗೂ ಅವಳ ಸುಂದರ ಪಾದಾಭರಣಗಳು ಖಣ ಖಣ ಶಬ್ದ ಮಾಡುತ್ತಿದ್ದವು. ಆ ಶಬ್ದವನ್ನು ಕೇಳಿ ಆಗ್ನೀಧ್ರರು ತಪಸ್ಸಿಗಾಗಿ ಮುಚ್ಚಿದ್ದ ತಮ್ಮ ನೇತ್ರ ಕಮಲಗಳ ಮೊಗ್ಗುಗಳೆರಡನ್ನೂ ಸ್ವಲ್ಪ ಅರಳಿಸಿ ನೋಡಿದರು. ಸಮೀಪದಲ್ಲಿಯೇ ಆ ಅಪ್ಸರೆಯು ಹೆಣ್ಣು ದುಂಬಿಯಂತೆ ಹೂಗಳನ್ನು ಮೂಸಿ ನೋಡುತ್ತಿದ್ದಳು. ಅವಳ ನಡಿಗೆ, ವಿಹಾರ, ವಿನಯ, ನೋಟ, ಮಧುರ ಮಾತು ಶರೀರದ ಅವಯವಗಳು ದೇವತೆಗಳ ಮತ್ತು ಮಾನವರ ಕಣ್ಮನಗಳಿಗೆ ಆನಂದವನ್ನು ಕೊಡುತ್ತಿದ್ದವು. ಇವುಗಳಿಂದ ಅವಳನ್ನು ನೋಡಿದ ಜನರ ಮನಸ್ಸಿನಲ್ಲಿ ಮನ್ಮಥೋದ್ರೇಕಕ್ಕೆ ಅವಕಾಶವಾಗುತ್ತಿತ್ತು . ಅವಳ ಮುಖಾಸವದ ವಾಸನೆಯಿಂದ ಮದಾಂಧಗಳಾದ ದುಂಬಿಗಳು ಮುತ್ತುತ್ತಿರುವುದನ್ನು ತಪ್ಪಿಸಿಕೊಳ್ಳಲು ಆ ಅಪ್ಸರೆಯು ಬೇಗ ಬೇಗ ಹೆಜ್ಜೆ ಹಾಕುತ್ತಿದ್ದಳು. ಆಗ ಅವಳ ಸ್ತನಗಳು ತುರುಬು ಹಾರ ಮತ್ತು ವಡ್ಯಾಣಗಳು ಸ್ವಲ್ಪ ಮಟ್ಟಿಗೆ ಅಲುಗಾಡುತ್ತಿದ್ದವು. ಆಕೆಯನ್ನೇ ನೋಡುತ್ತಿರುವ ಆ ರಾಜಕುವರನನ್ನು ಆಕೆಯ ನೋಟದ ಮೂಲಕ ಅವಕಾಶ ಪಡೆದ ಮನ್ಮಥನು ತನ್ನ ವಶ ಮಾಡಿಕೊಂಡನು. ಹೀಗೆ ಕಾಮವಿಕಾರಕ್ಕೆ ಒಳಗಾದ ರಾಜನಿಗೆ ವಸ್ತು ವಿವೇಚನೆ ಇಲ್ಲವಾಯಿತು. ವಿವೇಕ ಶೂನ್ಯನಂತೆ ಅವನು ಆಕೆಯನ್ನು ಕುರಿತು ಹೇ ಮುನಿವರ್ಯ! ನೀನ್ಯಾರು? ಈ ಪರ್ವತದಲ್ಲಿ ಏನು ಮಾಡಲಿರುವೆ? ಸರ್ವೋತ್ತಮ ದೇವತೆಯಾದ ಭಗವಂತನ ಅವರ್ಣನೀಯ ಮಾಯೆಯೇನು? ನೀನು ಹಗ್ಗವಿಲ್ಲದ ಎರಡು ಧನಸ್ಸುಗಳನ್ನು ಧರಿಸಿರುವುದು ಯಾವನಾದರೂ ಸ್ನೇಹಿತನ ರಕ್ಷಣೆಗಾಗಿಯೋ ಅಥವಾ ನಿನ್ನ ರಕ್ಷಣೆಗಾಗಿಯೋ ಅಥವಾ ಕಾಡಿನಲ್ಲಿ ಮದಿಸಿದ ಮೃಗಗಳನ್ನು ಹುಡುಕುತ್ತಿರುವಿಯಾ? (ಅವುಗಳನ್ನು ಬೇಟೆಯಾಡಲು ಧನುಸ್ಸು ಧರಿಸಿರುವಿಯಾ?) ಕಮಲದ (ಕಣ್ಣುಗಳ) ಗರಿಗಳುಳ್ಳ ಸ್ನೇಹ ಪೂರ್ಣಗಳಾದ ಪುಚ್ಛವಿಲ್ಲದೆ ಸುಂದರವಾಗಿರುವ ಚೂಪಾದ (ಮೊನೆಯಿಂದ) ತುದಿಯುಳ್ಳ ಈ ಎರಡು ಮನ್ಮಥ ಬಾಣ(ಕಟಾಕ್ಷ)ಗಳನ್ನು ಕಾಡಿನಲ್ಲಿ ಸಂಚರಿಸುತ್ತಾ ನೀನು ಯಾರ ಮೇಲೆ ಪ್ರಯೋಗಿಸಬೇಕೆಂದಿರುವೆ? ನಿನ್ನೀ ಪರಾಕ್ರಮವು ಜಡ ಮನಸ್ಕರಾದ ನಮ್ಮ ಕ್ಷೇಮಕ್ಕೆ ಕಾರಣವಾಗಲಿ. ಈಶನೇ! ನಿನ್ನ ಈ ಶಿಷ್ಯರು (ನಿಮ್ಮ ಕೂದಲಿನಿಂದ ಉದರಿದ ಹೂಗಳನ್ನು ಸೇವಿಸುತ್ತಾರೆ). ಬ್ರಹ್ಮಜ್ಞಾನಿಯೇ! ನಿನ್ನ ಸುತ್ತಗಟ್ಟಿ ಯಾವಾಗಲೂ ಋಷಿಗಳು ವೇದಶಾಖೆಗಳನ್ನು ಹೊಂದುವಂತೆ ಈ ಎಲ್ಲ ಶಿಷ್ಯರು ರಹಸ್ಯಯುತವಾದ ಸಾಮವೇದವನ್ನು ಗಾನ ಮಾಡುತ್ತಾರೆ. ನಿನ್ನ ಪಾದಾರವಿಂದದ ನೂಪೂರಗಳ ರತ್ನಗಳ ರೂಪರಹಿತ ಶಬ್ದವನ್ನು ಮಾತ್ರ

ಕೇಳುತ್ತಿದ್ದೇವೆ. ತೊಡೆಗಳಿಗೆ ಅಲಂಕಾರವಾದ ನಿತಂಬ ಮಂಡಲದಲ್ಲಿ ಅಲಾತ ಚಕ್ರವಿರುವೆಡೆಯಲ್ಲಿ ಕೊಳ್ಳಿ ಇರುವ ಸ್ಥಳದಲ್ಲಿ) ಕದಂಬ ಪುಷ್ಪದ ಕಾಂತಿಯು ಎಲ್ಲಿಂದ ಬಂದಿತು. ನಿನ್ನ ನಾರು ಬಟ್ಟೆ (ವಲ್ಕಲ) ಎಲ್ಲಿ ? ಬ್ರಾಹ್ಮಣನೇ! ಸಣ್ಣ ನಡುವುಳ್ಳ ನೀನು ಧರಿಸಿರುವ ಈ ಸುಂದರ ಶೃಂಗಗಳಲ್ಲಿ (ಸ್ತನ) ಯಾವ ಅಪೂರ್ವ ವಸ್ತುಗಳನ್ನು ಶೇಖರಿಸಿಕೊಂಡಿರುವಿ? ನನ್ನ ಕಣ್ಣುಗಳು ಆ ಶೃಂಗಗಳನ್ನೇ ನೋಡುವದರಲ್ಲಿ ಲಗ್ನವಾಗಿವೆ. ಸುಂದರನೇ! ನಿನ್ನ ಕೋಡುಗಳಲ್ಲಿ ಇಷ್ಟೊಂದು ಸುವಾಸನೆಯ ಕಂಪು ಕೇಸರ ಎಲ್ಲಿಯದು? ಯಾವುದರಿಂದ ನೀನು ನನ್ನ ಆಶ್ರಮವನ್ನೇ ಸುವಾಸನೆಗೊಳಿಸುತ್ತಿರುವಿ? ಎಲೈ ಗೆಳೆಯನೇ! ನಿನ್ನ ಲೋಕವನ್ನು ನನಗೆ ತೋರಿಸು. ಅಲ್ಲಿದ್ದುಕೊಂಡು ನೀನು ನಮ್ಮಂತಹ ಜನರ ಮನಸ್ಸನ್ನು ಉತ್ಕಂಠತವಾಗಿ ಮಾಡುವ ಅಪೂರ್ವ ಎರಡು ಅವಯವಗಳನ್ನು (ಸ್ತನ) ಎದೆಯಲ್ಲಿ ಧರಿಸಿರುವಿ. ಮುಖದಲ್ಲಿ ಅತ್ಯಾಶ್ಚರ್ಯಕರವಾದ ಮಂದಹಾಸಕೂಡಿದ ಅಧರಾಮೃತವನ್ನು ಹೊಂದಿರುವಿ. ಮಿತ್ರ ನಿನ್ನ ಜೀವನೋಪಾಯವೇನು? ಅನ್ನವಂತೂ ಅಲ್ಲವೆಂದು ತೋರುತ್ತದೆ. ವಿಷ್ಣುವಿನ ಕಲೆಯೇನು ನೀನು? ನಿನ್ನ ಕಿವಿಗಳು ಕಣ್ಣು ಮುಚ್ಚದಿರುವ ಮೀನುಗಳನ್ನು ಹೊಂದಿವೆ (ಮಕರ ಕುಂಡಲಗಳಿವೆ). ಚಲಿಸುವ ಎರಡು ಮೀನು (ಕಣ್ಣು) ವುಳ್ಳ ಹಕ್ಕಿಗಳ (ಹಲ್ಲುಗಳ) ಸಾಲುಗಳಿಂದ ಶೋಭಿಸುವ ಸಮೀಪದಲ್ಲಿ (ಮುಂಗೂದಲು) ದುಂಬಿಗಳ ಸಮೂಹವುಳ್ಳ ಈ ನಿನ್ನ ಮುಖಸರೋವರವು ಉತ್ಕೃಷ್ಟವಾಗಿದೆ. ಈ ನಿನ್ನ ಕೈಕಮಲದಿಂದ ಹೊಡಿಸಿಕೊಂಡ ಚೆಂಡು ದಿಕ್ಕು ದಿಕ್ಕಿಗೆ ಹೋಗುತ್ತಾ ಅದನ್ನೇ ಹಿಂಬಾಲಿಸುವ ನಿನ್ನ ಕಣ್ಣುಗಳನ್ನು ಚಂಚಲಗೊಳಿಸುತ್ತಿದೆ. ಆದರೆ ಈ ನಿನ್ನ ಕೂದಲನ್ನು ಸುಂದರವಾಗಿಯೂ ವಕ್ರವಾಗಿಯೂ ಮಾಡುವ ಸ್ತ್ರೀಲೋಲುಪನಾದ ತಾಮಸನಾದ ವಾಯುವು ಚೆಂಡಿನ ಜೊತೆಗೆ ನಿನ್ನ ಸೀರೆಯ ಗಂಟನ್ನು ಅಪಹರಿಸುತ್ತಿರುವುದು ಯುಕ್ತವಲ್ಲ. ತಪೋಧನನೇ! ಈ ನಿನ್ನ ರೂಪವು ತಪಸ್ಸು ಮಾಡುತ್ತಿರುವವರ ತಪಸ್ಸನ್ನೇ ಹಾಳುಮಾಡುತ್ತಿದೆ. ಇಂತಹ ಸ್ವರೂಪವನ್ನು ಈ ಲೋಕದಲ್ಲಿ ಈ ದೇಹದಲ್ಲಿ ಯಾವ ತಪಃಫಲವಾಗಿ ನೀನು ಸಂಪಾದಿಸಿದೆ? ಮಿತ್ರ! ನನ್ನೊಡನೇ ತಪಸ್ಸಿಗೆ ಕಾರಣನಾಗು. ನೀನು ನನ್ನ ಸಂಪತ್ಕರನು. ಹೇ ದ್ವಿಜ! ನೀನು ದೇವರಿಂದ ದತ್ತನಾದ ಸ್ನೇಹಿತನು. ನಿನ್ನನ್ನು ನಾನು ಬಿಡುವುದಿಲ್ಲ. ನಿನ್ನಲ್ಲಿ ಸಿಲುಕಿರುವ ನನ್ನ ಮನಸ್ಸಾಗಲಿ ಕಣ್ಣುಗಳಾಗಲಿ ಮತ್ತೊಂದು ಕಡೆಗೆ ಹೋಗುತ್ತಿಲ್ಲ. ಹೇ ಚಾರುಸ್ತನೇ! ನನ್ನ ಮನಸ್ಸು ನಿನ್ನನ್ನೇ ಹಿಂಬಾಲಿಸುತ್ತಿದೆ.ಆದ್ದರಿಂದ ನನ್ನನ್ನೂ ನಿನ್ನೊಡನೆ ಕರೆದುಕೊಂಡು ಹೋಗು.




ಮಂಗಳಕಾರಿಗಳಾದ ಶಕುನಗಳು ಬರಲಿ ಎಂದು ನುಡಿದನು. ಹೀಗೆ ಹೆಂಗಸರನ್ನು ಸ್ವಾಧೀನ ಪಡಿಸಿ ಸಮರ್ಥವಾದ ಸಾಂಕೇತಿಕ ಭಾಷೆಯಿಂದ ಆ ದೇವತಾ ಸ್ತ್ರೀಯನ್ನು ಬಹುಮಾನಿಸಿದನು. ಆಕೆಯಾದರೂ, ಆ ವೀರಾಗ್ರೇಸರನ ಬುದ್ಧಿ, ಶೀಲ, ರೂಪ, ವಿದ್ಯೆ , ವಯಸ್ಸು, ಸಂಪತ್ತು ಮತ್ತು ಔದಾರ್ಯಗಳಿಗೆ ಮಾರುಹೋಗಿ ಆ ಜಂಬೂದ್ವೀಪಾಧಿಪತಿಯೊಂದಿಗೆ ಹತ್ತು ಸಾವಿರ ವರ್ಷಗಟ್ಟಲೆ ಸುಖಪಡುತ್ತಾ ಬಂದಳು. ಆ ರಾಜನು ಆಕೆಯಲ್ಲಿ ನಾಭಿ, ಕಿಂಪುರುಷ, ಮೊದಲಾದ ಒಂಬತ್ತು ಮಕ್ಕಳನ್ನು ಪಡೆದನು. ಮಕ್ಕಳನ್ನು ಹಡೆದು ಆಕೆ ಒಂದು ವರ್ಷದಲ್ಲಿ ಬ್ರಹ್ಮದೇವರನ್ನೇ ಸೇರಿದಳು.

ಆ ಮಕ್ಕಳು ತಾಯಿಯ ಅನುಗ್ರಹದಿಂದ ಸಹಜವಾದ ದೇಹಪುಷ್ಟಿ ಬಲಗಳುಳ್ಳವರಾಗಿ ತಂದೆಯು ಹಂಚಿಕೊಟ್ಟ ತಮಗೆ ಸಮಾನ ಹೆಸರಿನ ಖಂಡಗಳನ್ನು ಈ ಜಂಬುದ್ವೀಪದಲ್ಲಿ ತಮ್ಮ ಭಾಗಕ್ಕೆ ಬಂದಂತೆ ಆಳಿದರು. ಆಗ್ನೀಧ್ರರು ಅಪ್ಸರೆಯನ್ನೇ ಪ್ರತಿದಿನವೂ ಚಿಂತಿಸುತ್ತಾ ಆಕೆಯ ಲೋಕವನ್ನು ವೇದೋಕ್ತ ಸಾಧನಗಳಿಂದ ಹೊಂದಲಪೇಕ್ಷಿಸಿ ಶ್ರೀಹರಿಯನ್ನು ಯಜ್ಞಗಳ ಮೂಲಕ ಸೇವಿಸುತ್ತಾ ಬಂದರು. ಆ ಅಪ್ಸರಲೋಕದಲ್ಲಿಯೇ ಪಿತೃಗಳು ಮೋದಿಸುವರು (ಹೀಗೆ ತಮ್ಮ ಪಿತೃಲೋಕಕಾಮನೆಯನ್ನು ಸಾರ್ಥಕ ಮಾಡಿಕೊಂಡರು). ತಂದೆಯು ತೀರಿಕೊಂಡ ಮೇಲೆ ಈ ಒಂಬತ್ತು ಸಹೋದರರು ಮೇರುಪರ್ವತಾಭಿಮಾನಿದೇವತೆಯ ಮಕ್ಕಳಾದ ಮೇರುದೇವಿ, ಪ್ರತಿರೂಪಾ, ಉಗ್ರದೃಷ್ಟಿ, ಲತಾ, ರಾಮಾ, ಶ್ಯಾಮಾ, ನಾರಿ, ಭದ್ರಾ , ದೇವಿಯರೆಂಬ ಒಂಬತ್ತು ಕನ್ಯೆಯರನ್ನು ಕ್ರಮವಾಗಿ ಮದುವೆಯಾದರು.

**॥ ಇಲ್ಲಿಗೆ ೨ನೇ ಅಧ್ಯಾಯದ ಸಾರ ಮುಗಿಯಿತು ॥**

★★★

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ

# ತೃತೀಯೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಆಗ್ನೀಧ್ರನ ಮಗನಾದ ನಾಭಿರಾಜನ ಚರಿತ್ರೆ ಈ ಅಧ್ಯಾಯದಲ್ಲಿ ಹೇಳುವರು. ಮಕ್ಕಳಿಲ್ಲದ ನಾಭಿಯು ಮಕ್ಕಳಾಗಬೇಕೆಂಬ ಇಚ್ಛೆಯಿಂದ ಶ್ರೀಹರಿಯನ್ನುದ್ದೇಶಿಸಿ ಯಜ್ಞ ಮಾಡುವನು. ಶ್ರೀಹರಿಯು ಪ್ರತ್ಯಕ್ಷನಾಗಲು ಋತ್ವಿಜರು ಭಗವಂತನ ಗುಣಗಾನ ಮಾಡುವರು. ಅವರ ಪ್ರಾರ್ಥನಾನುಸಾರ ನಾಭಿಯ ಹೆಂಡತಿ ಮೇರುದೇವಿಯಲ್ಲಿ ಋಷಭನೆಂಬ ಹೆಸರಿನಿಂದ ಶ್ರೀ ಹರಿಯು ಅವತರಿಸುವನು.

## ನಾಭಿಯ ಚರಿತ್ರೆ

**ಶುಕ ಉವಾಚ -**

**ನಾಭಿರಪತ್ಯಕಾಮೋಽಪ್ರಜಯಾ ಮೇರುದೇವ್ಯಾ ಭಗವಂತಂ ಯಜ್ಞ ಪುರುಷಮವಹಿತಾತ್ಮಾಽಯಜತ್ ॥೧॥**

**ಅಪತ್ಯಕಾಮಃ** ಮಕ್ಕಳನ್ನಪೇಕ್ಷಿಸುವ **ನಾಭಿಃ** ಆಗ್ನೀಧ್ರನ ಮಗನಾದ ನಾಭಿರಾಜನು **ಅಪ್ರಜಯಾ** ಮಗನಿಲ್ಲದ **ಮೇರುದೇವ್ಯಾ** ಮೇರುದೇವೀ ಎಂಬ ತನ್ನ ಹೆಂಡತಿಯಿಂದ ಕೂಡಿಕೊಂಡು **ಅವಹಿತಾತ್ಮಾ** ಸಮಾಧಾನದಿಂದ **ಯಜ್ಞಪುರುಷಂ ಭಗವಂತಂ** ಯಜ್ಞನಿಯಾಮಕನು ಯಜ್ಞಫಲಪ್ರದನೂ ಆದ ಶ್ರೀ ಹರಿಯನ್ನೇ ಉದ್ದೇಶಿಸಿ **ಅಯಜತ್** ಯಜ್ಞ ಮಾಡಿದನು. ॥೧॥




**ತಸ್ಯ ಹವಾವ ಶ್ರದ್ಧಯಾ ವಿಶುದ್ಧಭಾವೇನ ಯಜತಃ ಪ್ರವರ್ಗ್ಯೇಷು ಪ್ರಚರತ್ಸು ದ್ರವ್ಯದೇಶಕಾಲಮಂತ್ರರ್ತ್ವಿಗ್ದಕ್ಷಿಣಾವಿಧಾನಯೋಗೋಪಪತ್ತ್ಯಾ ದುರಧಿಗಮೋಽಪಿ ಭಗವಾನ್ ಭಾಗವತವತ್ಸಲತಯಾ ಪ್ರತೀತ ಆತ್ಮಾನಮ-ಪರಾಜಿತಂ ನಿಜಜನಾಭಿಪ್ರಾಯಾರ್ಥವಿಧಿತ್ಸಯಾ ಗೃಹೀತಹೃದಯೋ ಹೃದಯಂಗಮಂ ಮನೋನಯನಾನಂದನಾಭಿರಾಮಾವಯವಮಾವಿಶ್ಚಕಾರ ॥೨॥**

**ಶ್ರದ್ಧಯಾ** ಆಸ್ತಿಕ್ಯ ಬುದ್ಧಿಯಿಂದ **ವಿಶುದ್ಧಭಾವೇನ** ನಿರ್ಮಲ ಮನಸ್ಸಿನಿಂದ **ಪ್ರವರ್ಗ್ಯೇಷು ಪ್ರಚರತ್ಸು** ಪ್ರವರ್ಗ್ಯವೆಂಬ ಕರ್ಮವಿಶೇಷಗಳು ನಡೆಯುತ್ತಿರಲು **ದ್ರವ್ಯ , ದೇಶ, ಕಾಲ, ಮಂತ್ರ , ಋತ್ವಿಕ್, ದಕ್ಷಿಣಾ, ವಿಧಾನ** ಎಂಬ ಏಳು **ಯೋಗ** ಉಪಾಯಗಳ **ಉಪಪತ್ತ್ಯಾ** ಸಂಪತ್ತಿನಿಂದ **ದುರಧಿಗಮೋಽಪಿ** ಹೊಂದಲು ಅಶಕ್ಯನಾದರೂ **ಭಗವಾನ್** ಶ್ರೀಹರಿಯು **ಭಾಗವತವತ್ಸಲತಯಾ** ಭಕ್ತರಲ್ಲಿ ಸ್ನೇಹಾತಿಶಯ ಉಳ್ಳವನಾದ್ದರಿಂದ **ನಿಜಜನಾಭಿಪ್ರಾಯಾರ್ಥವಿಧಿತ್ಸಯಾ** ತನ್ನ ಭಕ್ತರ ಅಭೀಷ್ಟವನ್ನು ನೆರವೇರಿಸುವುದಕ್ಕಾಗಿ **ಗೃಹೀತಹೃದಯಃ** ಆಕೃಷ್ಟವಾದ ಮನಸ್ಸುಳ್ಳವನಾಗಿ **ಅಪರಾಜಿತಂ** ಸ್ವತಂತ್ರವಾದ ಗರ್ಭವಾಸಾದಿ ದುಃಖಗಳಿಂದ ಪರಾಜಿತನಾಗದ **ಹೃದಯಂಗಮಂ** ಮನೋಹರವಾದ **ಮನೋನಯನಾನಂದ-ನಾಭಿರಾಮಾವಯವಂ** ಕಣ್ಮನಗಳಿಗೆ ಆನಂದವನ್ನೀವ ಸುಂದರ ಅವಯವಗಳುಳ್ಳ **ಆತ್ಮಾನಂ** ತನ್ನನ್ನು **ಯಜತಃ** ಯಜ್ಞ ಮಾಡುವ **ತಸ್ಯ** ನಾಭಿರಾಜನಿಗೆ **ಆವಿಶ್ಚಕಾರ** ವ್ಯಕ್ತಗೊಳಿಸಿದನು. ॥೨॥

**ಅಥ ಹ ತಮಾವಿಷ್ಕೃತಭುಜಯುಗಲದ್ವಯಂ ಪುರುಷವಿಶೇಷಂ ಹಿರಣ್ಮಯಂ ಕಪಿಶಕೌಶೇಯಾಂಬರಧರಮುರಸಿವಿಲಸಚ್ಛ್ರೀವತ್ಸಲಲಾಮಂ ದರವರವನರುಹ-ವನಮಾಲಾ ಸ್ಫೂರ್ಜಾಮೃತಮಣಿಗಣಪ್ರವರಾದಿಭಿರುಪಲಕ್ಷಿತಂ ॥೩॥**

**ಸ್ಫುಟಕಿರಣಪ್ರವರಮಣಿಮಯಮುಕುಟಕಿರೀಟಕುಂಡಲಕಟಕಕಟಿಸೂತ್ರ ಹಾರಕೇಯೂರನೂಪುರಾದ್ಯಂಗಭೂಷಣವಿಭೂಷಿತಂ ಋತ್ವಿಕ್‌ಸದಸ್ಯ ಗೃಹಪತಯೋಽಧನಾ ಇವೋತ್ತಮಂ ಧನಮುಪಲಭ್ಯ ಸಬಹುಮಾನ ಮರ್ಹಣೇನಾವನತಶಿರ್ಷಾಣ ಉಪತಸ್ಥುಃ ॥೪॥**

**ಅಥ** ಅನಂತರ **ಆವಿಷ್ಕೃತಭುಜಯುಗಲದ್ವಯಂ** ಚತುರ್ಭುಜಗಳನ್ನು ತೋರಿಸಿದ **ಪುರುಷವಿಶೇಷಂ** ಪುರುಷೋತ್ತಮನನ್ನು **ಹಿರಣ್ಮಯಂ** ಸುಖಾತ್ಮಕವಾದ (ಸುವರ್ಣಮಯವಾದ) **ಕಪಿಶ** ಹೊಂಬಣ್ಣದ **ಕೌಶೇಯಾಂಬರಧರಂ** ರೇಷ್ಮೆಯ ವಸ್ತ್ರವನ್ನು ಧರಿಸಿದ **ಉರಸಿ** ವಕ್ಷಸ್ಥಳದಲ್ಲಿ **ವಿಲಸತ್** ಶೋಭಿಸುವ **ಶ್ರೀವತ್ಸಲಲಾಮಂ** ಶ್ರೀವತ್ಸ ಚಿನ್ಹೆಯುಳ್ಳ **ದರವರ** ಶಂಖ **ವನರುಹ** ಪದ್ಮ **ವನಮಾಲಾ** ಪಾದಾವಲಂಬಿಯಾದ **ಮಾಲಾಸ್ಫೂರ್ಜಾ** ಶಾಣೆ ಹಿಡಿದ ಯಾವಾಗಲೂ ಹೊಳೆಯುವ **ಅಮೃತಾ** ಅಮೃತತ್ತ್ವವನ್ನು ಕೊಡುವ (ಯಾವುಗಳಿಂದ ಮರಣ ಬರುವುದಿಲ್ಲವೋ ಅಂಥವು) ಕೌಸ್ತುಭ ಚೂಡಾಮಣಿ ಮುಂತಾದ **ಮಣಿಗಣ ಪ್ರವರಾದಿಭಿಃ** ಮಣಿಸಮೂಹ ಶ್ರೇಷ್ಠವಾದವುಗಳಿಂದ **ಉಪಲಕ್ಷಿತಂ** ಕೂಡಿದ ಇತರ ವ್ಯಾವೃತ್ತವಾಗಿ ತಿಳಿಯಲ್ಪಡುವ **ಸ್ಫುಟಕಿರಣಪ್ರವರ** ಶ್ರೇಷ್ಠಗಳಾದ ಸ್ಫುಟವಾದ ಕಿರಣದಿಂದ ಕೂಡಿದ **ಮಣಿಮಯ** ಮಣಿಗಳಿಂದ ಖಚಿತಗಳಾದ **ಮುಕುಟ** ರುಮಾಲು (ಮುಂಡಾಸ) **ಕಿರೀಟಕುಂಡಲ** ಕಿವಿಯ ಆಭರಣ **ಕಟಕ** ಕೈಯಿಗೆ ಹಾಕುವ ಖಡೆ ಮುಂತಾದ ಆಭರಣಗಳು **ಕಟಿಸೂತ್ರ** ಉಡುದಾರ **ಹಾರ** ಮಾಲೆ **ಕೇಯೂರ** ಭುಜದ ಆಭರಣ **ನೂಪುರ** ಕಾಲಗೆಜ್ಜೆ **ಆದಿ** ಮುಂತಾದ **ಅಂಗಭೂಷಣ** ಅವಯವಾಲಂಕಾರಗಳಿಂದ **ವಿಭೂಷಿತಂ** ಅಲಂಕೃತವಾದ **ತಂ** ಪರಮಾತ್ಮನನ್ನು **ಋತ್ವಿಕ್** ಋತ್ವಿಜರು **ಸದಸ್ಯ** ಸಭಿಕರು **ಗೃಹಪತಯಃ** ಯಜಮಾನನೂ **ಅಧನಾಃ** ದರಿದ್ರರು **ಉತ್ತಮಂ ಧನಂ ಉಪಲಭ್ಯ ಇವ** ನಿಧಿಯನ್ನು ಹೊಂದಿದಂತೆ **ಸಬಹುಮಾನಂ** ಗೌರವದಿಂದ **ಅರ್ಹಣೇನ** ಪೂಜಾಸಾಮಾಗ್ರಿಗಳಿಂದ **ಅವನತಶೀರ್ಷಾಣಃ** ತಲೆ ಬಾಗಿಸಿದವರಾಗಿ **ಉಪತಸ್ಥುಃ** ಪೂಜಿಸಿದರು. ॥೩-೪॥

**ಋತ್ವಿಜ ಊಚುಃ -**

**ಅರ್ಹಸಿ ಮುಹುರರ್ಹತ್ತಮಾರ್ಹಣಮಸ್ಮಾಕಮನುಪಥಾನಾಂ ನಮೋ ನಮ ಇತ್ಯೇತಾವತ್ ಸದುಪಶಿಕ್ಷಿತಂ ಕೋಽರ್ಹತಿ ಪುಮಾನ್ ಪ್ರಕೃತಿಗುಣವ್ಯತಿಕರಮತಿರನೀಶ ಈಶ್ವರಸ್ಯ ಪ್ರಕೃತಿಪುರುಷಯೋಃ ಪರಸ್ಯಾರ್ವಾಕ್ತನಮತಿರ್ನಾಮರೂಪಾಕೃತಿನಿರೂಪಣಮ್ ॥೫॥**

**ಹೇ ಅರ್ಹತ್ತಮ** ಅತಿಶಯವಾಗಿ ಪೂಜಾರ್ಹನೇ **ಅನುಪಥಾನಾಂ** ಭೃತ್ಯರಾದ **ಅಸ್ಮಾಕಂ** ನಮ್ಮ **ಅರ್ಹಣಂ** ಪೂಜೆಯನ್ನು **ಅರ್ಹಸಿ** ಸ್ವೀಕರಿಸಲು ಯೋಗ್ಯನಾಗಿರುವಿ **ನಮೋ ನಮಃ ಇತ್ಯೇತಾವತ್** ನಮಸ್ಕಾರವೆಂದಿಷ್ಟೇ ಹೇಳಲು **ಸದುಪಶಿಕ್ಷಿತಂ**

ಸಜ್ಜನರಿಂದ ಕಲಿಸಲ್ಪಟ್ಟಿರುವಿ. ಕರ್ತವ್ಯವೆಂದು ತಿಳಿಸಲ್ಪಟ್ಟಿರುವಿ. ಇದಕ್ಕಿಂತ ಬೇರೆ ಹೆಚ್ಚಿಗೆ ಮಾಡಲು ಯಾರಿಗೆ ಸಾಧ್ಯವೆಂದು ಹೇಳುವರು **ಪ್ರಕೃತಿಗುಣವ್ಯತಿಕರಮತಿಃ** ಸತ್ವಾದಿಗುಣವೈಷಮ್ಯವುಳ್ಳ ಪ್ರಪಂಚದಲ್ಲಿಯೇ ಬುದ್ಧಿಯುಳ್ಳ (ಶಬ್ದಾದಿ ವಿಷಯಗಳಿಂದ ವಿಕ್ಷಿಪ್ತ ಬುದ್ಧಿಯುಳ್ಳ) ಆದ್ದರಿಂದಲೇ **ಅನೀಶ** ಅಸಮರ್ಥನಾದ **ಕಃ ಪುಮಾನ್** ಯಾವ ಮನುಷ್ಯನು **ಪ್ರಕೃತಿಪುರುಷಯೋಃ ಪರಸ್ಯ** ಪ್ರಕೃತಿ ಪುರುಷರಿಗಿಂತ ಉತ್ತಮನಾದ **ಈಶ್ವರಸ್ಯ** ಸರ್ವಸಮರ್ಥನಾದ ನಿನ್ನ **ನಾಮರೂಪಾಕೃತಿಭಿಃ** ನಾಮಗಳ ರೂಪಗಳ ಧರ್ಮಗಳ ಆಕಾರಗಳ ನಿರೂಪಣೆಯನ್ನು **ಅರ್ಹತಿ** ಮಾಡಲು ಯೋಗ್ಯನು? ಯಾರೂ ಇಲ್ಲ ಎಂದರ್ಥ. **ಅರ್ವಾಕ್ತನಮತಿಃ** ನಿನ್ನ ಸ್ವರೂಪವನ್ನು ತಲುಪದಿರುವ ಬುದ್ಧಿಯುಳ್ಳವನು ಯಾವನು ತಾನೇ ಸ್ತುತಿಸಲು ಸಾಧ್ಯ. ||೫||

ಹಾಗಾದರೆ ಭಗವಂತನ ವಿಷಯದಲ್ಲಿ ಮೂಕರಾಗಬೇಕೇ? ಎಂದರೆ ಸಾಕಲ್ಯೇನ ನಿರೂಪಿಸುವುದಾಗದಿದ್ದರೂ ಯೋಗ್ಯತಾನುಸಾರ ಏಕದೇಶ ನಿರೂಪಸಿಬಹುದು ಅದನ್ನು ಅವಶ್ಯ ಮಾಡಬೇಕು ಎಂದು ಹೇಳುವರು.

**ಸಕಲಜನನಿಕಾಯವೃಜಿನನಿರಸನಶಿವತಮಪ್ರವರಗುಣಗಣೈಕದೇಶ-ಕಥನಾದೃತೇ ||೬||**

ಎಲ್ಲ ಜನ ಸಮೂಹದ ಪಾಪ ನಿಮಿತ್ತಕ ದುಃಖವನ್ನು ಕಳೆಯುವ ಪರಮ ಮಂಗಲವಾದ, ಶ್ರೇಷ್ಠವಾದ, ಗುಣ-ನಾಮ-ಆಕೃತಿಗಳ ಏಕದೇಶವನ್ನು ಮಾತ್ರ ಹೇಳುವುದನ್ನು ಬಿಟ್ಟರೆ ಪೂರ್ತಿ ಹೇಳಲು ಯಾವನಿಂದ ಸಾಧ್ಯ? ಸಾಧ್ಯವಿಲ್ಲವೆಂದು ಭಾವ. ಏಕದೇಶನಿರೂಪಣ ಆವಶ್ಯಕವೆಂದು ತಿಳಿಸಲು ಪಾಪ, ದುಃಖನಾಶಕತ್ವಾದಿಗಳನ್ನು ಹೇಳಿದ್ದು.

ಈ ರೀತಿ ಸಂಪೂರ್ಣ ವರ್ಣಿಸಲು ಅಶಕ್ಯನಾದರೂ ಭಕ್ತರಿಗೆ ಸುಖಾರಾಧ್ಯನೆಂದು ಹೇಳುವರು

**ಪರಿಜನಾನುರಾಗವಿರಚಿತಸ್ತವಲವಸಂಶಬ್ದಸಲಿಲಕಿಸಲಯತುಲಸೀ-ದೂರ್ವಾಂಕುರೈರಪಿ ಸಂಭೃತಯಾ ಸಪರ್ಯಯಾ ಕಿಲ ಪರಮ ಪರಿತುಷ್ಯಸಿ ||೭||**

**ಹೇ ಪರಮ** ಶ್ರೀಹರಿಯೇ **ಪರಿಜನ** ಭೃತ್ಯರಿಂದ **ಅನುರಾಗವಿರಚಿತ** ಭಕ್ತಿಯಿಂದ ಮಾಡಿದ **ಸ್ತವಲವ** ಸ್ತೋತ್ರಲೇಶದ **ಸಂಶಬ್ದ** ಕಥನವು **ಸಲಿಲ** ನೀರು **ಕಿಸಲಯ**

ಪಲ್ಲವಗಳು **ತುಲಸೀದೂರ್ವಾಂಕುರ** ಗರಿಕೆಗಳನ್ನು **ಸಂಭೃತಯಾ** ಸಂಪಾದಿತವಾದ **ಸಪರ್ಯಯಾ** ಪೂಜೆಯಿಂದ **ಪರಿತುಷ್ಯಸಿ** ಸಂತೋಷಪಡುವಿ (ಎಂದು ಶ್ರುತ್ಯಾದಿಗಳಲ್ಲಿ ಹೇಳಿದೆ).

**ಅಥಾನಯಾಪಿ ಭಗವತ ಇಜ್ಯಯೋರುಸಂಭಾರಭರಯಾ ನ ಸಮುಚಿತಮರ್ಥ ಮಿಹೋಪಲಭಾಮಹೇ ।।೮।।**

**ಅಥ** ಭಕ್ತಿ ಇಲ್ಲವಾದರೆ **ಉರುಸಂಭಾರಭರಯಾ** ಉತ್ಕೃಷ್ಟ ಸಾಧನ ಸಮೂಹವುಳ್ಳ **ಅನಯಾ** ವೇದೋಕ್ತವಾದ **ಇಜ್ಯಯಾ** ಪೂಜೆಯಿಂದ **ಭಗವತಃ** ಪರಮಾತ್ಮನಿಗೆ **ಸಮುಚಿತಂ ಅರ್ಥಂ** ಹೊಂದಲು ಯೋಗ್ಯವಾದ ಸುಖವನ್ನು **ನೋಪಲಭಾಮಹೇ** (ಶ್ರುತ್ಯಾದಿಗಳಲ್ಲಿ ಕಂಡಿಲ್ಲ). ಭಕ್ತಿ ಇಲ್ಲದಿದ್ದರೆ ಎಷ್ಟು ವೈಭವದಿಂದ ಪೂಜಿಸಿದರೂ ಪರಮಾತ್ಮನಿಗೆ ಸಂತೋಷವಾಗಲಾರದು ಎಂದು ಭಾವ. ।।೮।।

ಭಕ್ತಿಯುಳ್ಳವರು ಮಾಡುವ ಆರಾಧನೆಯಿಂದಲೂ ನಿನಗೇನೂ ಪ್ರಯೋಜನವಿಲ್ಲ ಎಂಬ ಅಭಿಪ್ರಾಯದಿಂದ ಭಗವಂತನಿಗೆ ವಿಶೇಷಣ ಕೊಡುವರು-

**ಆತ್ಮತ ಏವಾನುಸವನಮಂಜಸಾ ವ್ಯತಿರೇಕೇಣಾನುಬೋಭೂಯಮಾನಾ-ಶೇಷಪುರುಷಾರ್ಥಸ್ವರೂಪಸ್ಯ ಕಿಂತು ನಾಥಾಶಿಷ ಆಶಾಸಾನಾಮೇತದಭಿ-ಸಂರಾಧನಮಾತ್ರಂ ಭವಿತುಮರ್ಹತಿ ।।೯।।**

**ಆತ್ಮತ ಏವ** ಸ್ವತಃ ನೇ (ಸ್ವಾಭಾವಿಕವಾಗಿಯೇ) **ಅನುಸವನಂ** ಯಾವಾಗಲೂ **ಅಂಜಸಾ** ಮುಖ್ಯವಾಗಿ **ಅವ್ಯತಿರೇಕೇಣ** ಅಭಿನ್ನವಾಗಿ **ಅನುಬೋಭೂಯಮಾನಃ** ಅತ್ಯಂತ ಅನುಭವಿಸಲ್ಪಡುವ **ಅಶೇಷ** ಪೂರ್ಣವಾದ **ಪುರುಷಾರ್ಥ** ಸುಖವೇ **ಸ್ವರೂಪಸ್ಯ** ಸ್ವರೂಪವಾಗಿವುಳ್ಳ ಭಗವಂತನಿಗೆ ನಮ್ಮ ಪೂಜೆಯಿಂದ ಆಗಬೇಕಾದುದೇನಿಲ್ಲ **ಕಿಂತು** ಆದರೆ **ನಾಥ** ಸ್ವಾಮಿಯೇ **ಆಶಿಷಃ ಆಶಾಸಾನಾಂ ಮಾತ್ರಂ** ಪುರುಷಾರ್ಥಗಳನ್ನು ಅಪೇಕ್ಷಿಸುವರಿಗೆ ಮಾತ್ರ **ಏತತ್** ಭಕ್ತಿಯುತವಾದ ಆರಾಧನೆಯು **ಅಭಿಸಂರಾಧನಂ ಭವಿತುಂ ಅರ್ಹತಿ** ಪುರುಷಾರ್ಥ ಸಾಧನವಾಗುವುದಷ್ಟೇ! ।।೯।।

ಇದನ್ನೇ ದೃಷ್ಟಾಂತದಿಂದ ಉಪಪಾದಿಸುವರು

**ತದ್ಯಥಾ ಬಾಲಿಶಾನಾಂ ಸ್ವಯಮಾತ್ಮನಃ ಶ್ರೇಯಃ ಪರಮವಿದುಷಾಂ ಪರಮಪುರುಷ ಪ್ರಬಲತರಕರುಣಯಾ ಸ್ವಮಹಿಮಾನಂ ಚಾಪವರ್ಗಾಖ್ಯ-ಮುಪಕಲ್ಪಯಿಷ್ಯನ್ ಸ್ವಯತ್ನೋಪಚಿತ ಏವೇತರವದಿಹೋಪಲಕ್ಷಿತಃ ॥೧೦॥**

**ಹೇ ಪರಮಪುರುಷ** ಸರ್ವೋತ್ತಮನಾದ ಶ್ರೀಹರಿಯೇ **ತತ್** ಹಿಂದೆ ಹೇಳಿದ ಪ್ರಮೇಯವು **ಯಥಾ** ಮುಂದೆ ಹೇಳುವ ದೃಷ್ಟಾಂತದಂತಯೇ ತಿಳಿಯಬೇಕು **ಸ್ವಯಂ** ಮತ್ತೊಬ್ಬರ ಅಪೇಕ್ಷೆ ಇಲ್ಲದೆ **ಆತ್ಮನಃ** ತನ್ನ **ಪರಂ ಶ್ರೇಯಃ ಅವಿದುಷಾಂ** ಮುಖ್ಯ ಶ್ರೇಯಸ್ಸನ್ನು ತಿಳಿಯದಿರುವ ಆದ್ದರಿಂದಲೇ **ಬಾಲಿಶಾನಾಂ** ಏವ ಮಕ್ಕಳಂತಿರುವವರಿಗೆ (ಮೂರ್ಖರಿಗೆ) **ಪ್ರಬಲತರಕರುಣಯಾ** ಅತ್ಯುತ್ಕೃಷ್ಟವಾದ ದಯೆಯಿಂದ **ಅಪವರ್ಗಾಖ್ಯಂ** ಮೋಕ್ಷವೆಂಬ **ಸ್ವಮಹಿಮಾನಂ** ಸ್ವರೂಪಾನಂದಾನುಭವವೆಂಬ ಮಾಹಾತ್ಮ್ಯವನ್ನು **ಚ** ಮತ್ತು ಇತರ ಪುರುಷಾರ್ಥಗಳನ್ನು **ಉಪಕಲ್ಪಯಿಷ್ಯನ್** ಕೊಡುವವನಾಗಿ **ಸ್ವಯತ್ನೋಪಚಿತಃ** ಏವ ನಿನ್ನ ಪ್ರೇರಣೆಯಿಂದಲೇ ಪೂಜಿತನಾಗಿ (ನಿನ್ನ ಅನುಗ್ರಹವೆಂಬ ಪ್ರಯತ್ನದ ಅಧೀನರಾಗಿ) **ಇತರವತ್** ಸಾಪೇಕ್ಷರಂತೆ ಪರ ಪ್ರಯತ್ನದಿಂದ ಪೂಜಿತನಾದವನಂತೆ **ಇಹ** ಯಜ್ಞ ಭೂಮಿಯಲ್ಲಿ **ಉಪಲಕ್ಷಿತಃ** ಪ್ರಕಾಶಿತನಾಗಿರುವಿ. ಭಕ್ತಿಯುತ ಆರಾಧನೆಯ ಫಲವೆಂಬುದು ಇಲ್ಲಿಯೇ ಕಂಡಿದೆ ಎಂದು ಭಾವ. ॥೧೦॥

**ಅಥ ಅರ್ಹಯಾಮಃ ಪರಂ ಹಿ ಅರ್ಹತ್ತಮ ಯರ್ಹಿ ಬರ್ಹಿಷಿ ರಾಜರ್ಷೇರ್ವರದರ್ಷಭೋ ಭವಾನ್ ನಿಜಪುರುಷೇಕ್ಷಣವಿಷಯ ಆಸೀತ್ ॥೧೧॥**

**ಅಥ** ಆದ್ದರಿಂದ **ಹೇ ಅರ್ಹತ್ತಮ** ಅತ್ಯಂತ ಪೂಜಾರ್ಹನೇ **ಪರಂ** ಸರ್ವೋತ್ತಮನಾದ ನಿನ್ನನ್ನು **ಪರಂ** ಶ್ರೇಯಸ್ಸಿಗಾಗಿ **ಅರ್ಹಯಾಮಃ** ಪೂಜಿಸುವೆವು **ಯರ್ಹಿ** ಯಾವಕಾರಣ **ಭವಾನ್** ನೀನು **ರಾಜರ್ಷೇಃ** ನಾಭಿರಾಜನ **ಬರ್ಹಿಷಿ** ಯಜ್ಞದಲ್ಲಿ **ನಿಜಪುರುಷೇಕ್ಷಣವಿಷಯಃ ಆಸೀತ್** ನಿನ್ನ ಭಕ್ತರ ದೃಷ್ಟಿಗೆ ವಿಷಯನಾಗಿರುವಿಯೋ ಆದ್ದರಿಂದ ಎಂದನ್ವಯ.

ಈಗ ಯಜ್ಞ ಮಾಡುವ ಮುಖಾಂತರ ನಿನ್ನನ್ನು ಆರಾಧನೆಗೈದದ್ದರಿಂದ ಪ್ರಸನ್ನನಾಗಿ ನಿನ್ನ ದರ್ಶನವೆಂಬ ಫಲವನ್ನಿತ್ತದ್ದರಿಂದ ವಿಶ್ವಾಸಗೊಂಡವರಾಗಿ ಅಭೀಷ್ಟ ಸಿದ್ಧಿಗಾಗಿ ನಾವು ನಿನ್ನನ್ನು ಪೂಜಿಸುವೆವೆಂದು ಭಾವ. ॥೧೧॥

ಯಾವಾಗಲೂ ನಿನ್ನ ಚರಣಾರವಿಂದ ಸ್ಮರಣ ಬರುವುದಕ್ಕಾಗಿ ನಿನ್ನ ನಾಮಸ್ಮರಣವು ಆಪತ್ಕಾಲದಲ್ಲಿಯೂ ಇರಲಿ ಎಂದು ಪ್ರಾರ್ಥಿಸಲು ಭಗವಂತನ ನಾಮೋಚ್ಚಾರಣಮಾಹಾತ್ಮ್ಯ ತಿಳಿಸುವರು.

**ಅಸಂಗನಿಶಿತಜ್ಞಾನಾನಲವಿಧೂತಾಶೇಷಮಲಾನಾಂ ಭಗವತ್ಸ್ವಭಾವಾನಾಂ ಆತ್ಮಾರಾಮಾಣಾಂ ಮುನೀನಾಮನವರತಪರಿಗಣಿತಗುಣಗಣಪರಮ- ಮಂಗಲಾಯತನ ಕಥನೋಽಸಿ ||೧೨||**

**ಹೇ ಅನವರತಪರಿಗಣಿತಗುಣಗಣ** ನಿರಂತರದಲ್ಲಿ ವರ್ಣಿಸುವ ಸದ್ಗುಣಗಳ ಸಮೂಹವುಳ್ಳವನೇ **ಅಸಂಗ** ವೈರಾಗ್ಯದಿಂದ **ನಿಶಿತ** ತೀಕ್ಷ್ಣವಾದ ತನ್ನ ಕಾರ್ಯ ಮಾಡಲು ಸಮರ್ಥವಾದ **ಜ್ಞಾನಾನಲ** ಜ್ಞಾನವೆಂಬ ಅಗ್ನಿಯಿಂದ **ವಿಧೂತ** ನಷ್ಟವಾದ **ಅಶೇಷಮಲಾನಾಂ** ಎಲ್ಲ ರಾಗದ್ವೇಷಾದಿದೋಷಗಳುಳ್ಳ ಆದ್ದರಿಂದಲೇ **ಭಗವತ್ಸ್ವಭಾವಾನಾಂ** ಭಗವಂತನಲ್ಲಿ ತಮಗೆ ಯೋಗ್ಯವಾದ ಭಕ್ತಿಯುಳ್ಳ **ಆತ್ಮಾರಾಮಾಣಾಂ** ಸರ್ವಸ್ವಾಮಿಯಾದ ಪರಮಾತ್ಮನಲ್ಲಿ ಚೆನ್ನಾಗಿ ರತಿಯುಳ್ಳ **ಮುನೀನಾಂ** ಮುನಿಗಳಿಗೆ **ಪರಮಮಂಗಲಾಯತನಕಥನೋಽಸಿ** ಸರ್ವಶ್ರೇಯಃ ಸಂಪಾದಕ ನಾಮೋಚ್ಚಾರಣ ಉಳ್ಳವನಾಗಿರುವಿ. ನೀನು ಭಕ್ತರಿಗೆ ನಾಮೋಚ್ಚಾರಣದಿಂದ ಎಲ್ಲ ಶ್ರೇಯಸ್ಸನ್ನು ಕೊಡುವಿ ಎಂದು ಭಾವ. ||೧೨||

**ಅಥ ಕಥಂಚಿತ್ ಸ್ಖಲನಕ್ಷುತ್ಪತನಜೃಂಭಣದುಃಖ(ದುರವ)ಸ್ಥಾನಾದಿಷು ವಿವಶಾನಾಂ ನಃ ಶ್ರೀ ಮಚ್ಚರಣಾರವಿಂದಸ್ಮರಣಾಯ ಜ್ವರಮರಣ- ದಶಾಯಾಮಪಿ ಸಕಲಕಶ್ಮಲನಿರಸನಾನಿ ತವಗುಣಕೃತನಾಮಧೇಯಾನಿ ವಚನಗೋಚರಾಣಿ ಭವಂತು ||೧೩||**

**ಅಥ** ನಾಮೋಚ್ಚಾರಣವು ಮೇಲೆ ಹೇಳಿದ ಮಾಹಾತ್ಮ್ಯವುಳ್ಳದ್ದಾದ್ದರಿಂದ **ಶ್ರೀಮಚ್ಚರಣಾರವಿಂದಸ್ಮರಣಾಯ ವಿವಶಾನಾಂ** ನಿನ್ನ ಚರಣಾರವಿಂದಗಳನ್ನು ಸ್ಮರಿಸಲು ಅಶಕ್ತರಾದ **ನಃ** ಭಕ್ತರಾದ ನಮಗೆ **ಸ್ಖಲನ** ಎಡವುವುದು **ಕ್ಷುತ್** ಸೀನುವುದು (ಹಸಿವು) **ಪತನ** ಬೀಳುವುದು **ಜೃಂಭಣ** ಆಕಳಿಸುವುದು **ದುಃಖಸ್ಥಾನ** ಪುತ್ರಶೋಕದಿಂದಿರುವುದು (ದುರವಸ್ಥಾನ ಪ್ರವಾಸಾದಿಗಳಲ್ಲಿರುವುದು) **ಆದಿಷು** ಮೊದಲಾದವುಗಳಲ್ಲಿ **ಜ್ವರಮರಣದಶಾಯಾಂ ಅಪಿ** ಜ್ವರ ಬಂದಾಗಲೂ ಮರಣ ಸಮೀಪಿಸಿದಾಗಲೂ **ಸಕಲಕಶ್ಮಲನಿರಸನಾನಿ** ಎಲ್ಲ ಪಾಪಗಳನ್ನು ಕಳೆಯುವ **ತವ** ನಿನ್ನ **ಗುಣಕೃತನಾಮ-**

**ಧೇಯಾನಿ** ಜ್ಞಾನಾನಂದಾದಿಗುಣಗಳು ಕಂಸಸಂಹಾರ ಮುಂತಾದ ಕರ್ಮಗಳನ್ನು ತಿಳಿಸುವ ನಾರಾಯಣಾದಿ ನಾಮುಗಳು **ಕಥಂಚಿತ್** ಸರಿಯಾಗಿಯೋ ಸರಿಯಾಗದೆಯೋ ಹೇಗೋ **ವಚನ ಗೋಚಾರಾಣಿ ಭವಂತು** ಮಾತಿಗೆ ವಿಷಯವಾಗಲಿ (ಬಾಯಿಗೆ ಬರಲಿ ಎಂದು ಭಾವ). ।।೧೩।।

ಮತ್ತೊಂದು ಪ್ರಾರ್ಥನೆಯೂ ಇದೆ ಎಂದು ಹೇಳುವರು

**ಕಿಂಚಾಯಂ ರಾಜರ್ಷಿರಪತ್ಯಕಾಮಃ ಪ್ರಜಾಂ ಭವಾದೃಶೀಮಾಶಾಸಾನಃ ಈಶ್ವರಮಾಶಿಷಾಂ ಸ್ವರ್ಗಾಪವರ್ಗಯೋರಪಿ ಭಗವಂತಮುಪಧಾವತಿ ಪ್ರಜಾಯಾಮರ್ಥ ಪ್ರತ್ಯಯೋ ಧನದಮಿವಾಧನಃ ಫಲೀಕರಣಂ ಕೋಽವಾ ಈಹತೇ ।।೧೪।।**

**ಅಪತ್ಯಕಾಮಃ** ಮಕ್ಕಳನ್ನಪೇಕ್ಷಿಸುವ **ಅಯಂ ರಾಜರ್ಷಿಃ** ಈ ನಾಭಿರಾಜನು **ಭವಾದೃಶೀಂ ಪ್ರಜಾಂ** ನಿನ್ನಂಥ ಮಗನನ್ನು **ಆಶಾಸಾನಃ** ಇಚ್ಛಿಸುವವನಾಗಿ **ಆಶಿಷಾಂ** ಐಹಿಕ ಫಲಗಳಿಗೂ **ಸ್ವರ್ಗಾಪವರ್ಗಯೋಃ** ಆಮುಷ್ಮಿಕಗಳಾದ ಸ್ವರ್ಗ ಮೋಕ್ಷಗಳಿಗೂ **ಈಶ್ವರಂ** ಒಡೆಯನಾದ ಅಂದರೆ ಅವುಗಳನ್ನು ಕೊಡಲು ಸಮರ್ಥನಾದ **ಭಗವಂತಂ** ನಿನ್ನನ್ನು ಕುರಿತು **ಉಪಧಾವತಿ** ಶರಣಾಗುವನು (ಪರಮಪುರುಷಾರ್ಥಪ್ರದನಾದ ಪುರುಷೋತ್ತಮನನ್ನು ಹೊಂದಿ ಬುದ್ಧಿವಂತನಾದ ರಾಜನು ತುಚ್ಛವಾದ ಮಕ್ಕಳೆಂಬ ಫಲವನ್ನೇಕೆ ಕೇಳಿದನು ಎಂದರೆ) **ಪ್ರಜಾಯಾಂ ಅರ್ಥಪ್ರತ್ಯಯಃ** ಮಕ್ಕಳೇ ಪುರುಷಾರ್ಥವೆಂದು ತಿಳಿದಿರುವನು. ಇದಕ್ಕೆ ದೃಷ್ಟಾಂತ **ಅಧನಃ** ದರಿದ್ರನು **ಧನದಂ** ಶ್ರೀಮಂತನನ್ನು **ಫಲೀಕರಣಂ** ಧಾನ್ಯದ ಮೇಲಿನ ಹೊಟ್ಟನ್ನು ಕೇಳುವಂತೆ **ಕೋ ವಾ ಈಹತೇ** ದೊಡ್ಡ ಶ್ರೀಮಂತನನ್ನು ಯಾರು ತಾನೇ ಹೊಟ್ಟು ಕೊಡೆಂದು ಕೇಳುವರು? ಯಾರೂ ಇಲ್ಲ. ಹೀಗೆ ಕೇಳುವುದು ಮೂರ್ಖತನವೇ ಎಂದು ಭಾವ. ।।೧೪।।

ಏಕೆ ಈ ರೀತಿ ತುಚ್ಛ ಫಲವನ್ನು ಇಚ್ಛಿಸುವನು ಎಂದರೆ ಹೇಳವರು

**ಅಪರಾಜಿತಾಪರಾಜಿತಯಾ ಮಾಯಯಾಽನವಸಿತ ಪದವ್ಯಾನಾವ್ಯಾಪೃತ-ಮತಿರ್ವಿಷಮವಿಷಯಾವೃತಪ್ರಕೃತಿರನುಪಾಸಿತಮಹಚ್ಚರಣಃ ।।೧೫।।**

**ಹೇ ಅಪರಾಜಿತ** ಸೋಲಿಲ್ಲದವನೇ **ಅಪರಾಜಿತಯಾ** ನಿನ್ನ ಪ್ರಸಾದವಿಲ್ಲದೇ ವಶಮಾಡಿಕೊಳ್ಳಲಾಗದ **ಮಾಯಯಾ** ಬಂಧಕ ಶಕ್ತಿಯಿಂದ **ಅನುಪಾಸಿತ**

**ಮಹಚ್ಚರಣಃ** ಹಿರಿಯರ ಸೇವೆ ಮಾಡದಿರುವ **ವಿಷಮ** ದುಃಖದಾಯಕಗಳಾದ **ವಿಷಯಾವೃತಪ್ರಕೃತಿಃ** ವಿಷಯಗಳಲ್ಲಿ ಆಸಕ್ತವಾದ ಪ್ರಕೃತಿ ಕಾರ್ಯವಾದ ಅಂತಃಕರಣವುಳ್ಳವನು ಆದ್ದರಿಂದ **ಅನವಸಿತ** ಅನಿಶ್ಚಿತವಾದ **ಪದ** ತತ್ತ್ವದ ಸ್ವರೂಪದ **ಧ್ಯಾನಾವ್ಯಾಪೃತಮತಿಃ** ಧ್ಯಾನದಲ್ಲಿ ಆಸಕ್ತವಾಗದ ಬುದ್ಧಿಯುಳ್ಳವನು ಆದ್ದರಿಂದಲೇ ಮಕ್ಕಳನ್ನಿಚ್ಛಿಸುವನು ಎಂದು ಭಾವ. ।।೧೫।।

ಸಣ್ಣ ಪ್ರಯೋಜನಕ್ಕಾಗಿ ದೊಡ್ಡವರನ್ನು ಆಹ್ವಾನಿಸುವುದು ಅಪರಾಧವೆಂದು ತಿಳಿದು ಮುನಿಗಳು ಭಗವಂತನನ್ನು ಕ್ಷಮೆ ಯಾಚಿಸುವರು

**ಯದು ಹವಾವ ಪುನರದಭ್ರಕರ್ತರಿಹ ಸಮಾಹೂತಃ ತದರ್ಥಧಿಯಾಂ ಮಂದಾನಾಂ ನಸ್ತದ್ದೇವಹೇಲನಂ ದೇವಾರ್ಹಸಿ ಸಾಮ್ಯೇನ ಸರ್ವಾತ್ಮನಾ ಪ್ರತಿವೋಢುಮವಿದುಷಾಮ್ ।।೧೬।।**

**ಹೇ ಅದಭ್ರಕರ್ತಃ** ಅನಲ್ಪಕರ್ತೃವೇ (ಸರ್ವಕರ್ತನೇ) **ಇಹ ಸಮಾಹೂತಃ ಇತಿ ಯತ್** ರಾಜನಿಗೆ ಪುತ್ರಫಲವನ್ನು ಕೊಡುವುದಕ್ಕಾಗಿ ನೀನು ಕರೆಯಲ್ಪಟ್ಟಿರುವಿ ಎಂಬುದು ಏನಿದೆಯೋ **ತತ್** ಅದು **ತದರ್ಥಧಿಯಾಂ** ಅವನಿಗೆ ಆ ಪ್ರಯೋಜನವಾಗಲಿ ಎಂಬ ಬುದ್ಧಿಯುಳ್ಳ **ಮಂದಾನಾಂ** ವಿಷಾಯಾಸಕ್ತರಾದ ಸ್ತುತಿ ಮಾಡಲು ಅಸಮರ್ಥರಾದ **ನಃ** ನಾವು ಮಾಡಿದ **ದೇವಹೇಲನಂ** ದೇವನಾದ ನಿನ್ನ ಅವಮಾನವು **ಹೇ ದೇವ** ಸ್ವಾಮಿಯೇ **ಸಾಮ್ಯೇನ** ಅವರವರ ಯೋಗ್ಯತೆ ತಿಳಿದು **ಅವಿದುಷಾಂ** ಮಹಾತ್ಮರ ಸೇವೆಯಿಂದ ಜ್ಞಾನವನ್ನು ಪಡೆಯದ ನಮ್ಮ ಅಪರಾಧವನ್ನು ಸರ್ವಾತ್ಮನಾ **ಪ್ರತಿವೋಢುಂ ಅರ್ಹಸಿ** ಸಂಪೂರ್ಣ ಕ್ಷಮಿಸಲು ಯೋಗ್ಯನಾಗಿರುವಿ.

**ಇತಿ ನಿಗದೇನಾಭಿಷ್ಟೂಯಮಾನೋ ಭಗವಾನನಿಮಿಷರ್ಷಭೋ ವರ್ಷ ಧಾರಾಭಿವಂದಿತಚರಣಃ ಸದಯಮಿದಮಾಹ ।।೧೭।।**

**ಇತಿ** ಈ ರೀತಿಯಾಗಿ **ನಿಗದೇನ** ಛಂದೋಬದ್ಧವಾದ ಗದ್ಯರೂಪವಾದ ಮಾಹಾತ್ಮ್ಯವನ್ನು ತಿಳಿಸುವ ಸ್ತುತಿ ವಾಕ್ಯಗಳಿಂದ **ಅಭಿಷ್ಟೂಯಮಾನಃ** ಸ್ತುತಿಸಲ್ಪಡುವವನಾಗಿ **ವರ್ಷಧಾರಾಭಿವಂದಿತಚರಣಃ** ಭಾರತ ವರ್ಷಕ್ಕೆ ಅಧಿ ಪತಿಯಾದ ನಾಭಿ ರಾಜನಿಂದ ನಮಸ್ಕೃತವಾದ ಪಾದಗಳುಳ್ಳ **ಅನಿಮಿಷರ್ಷಭಃ** ದೇವಶ್ರೇಷ್ಠನಾದ **ಭಗವಾನ್** ಶ್ರೀಹರಿಯು **ಸದಯಂ** ದಯೆಯಿಂದ **ಇದಂ** ಮುಂದೆ ಹೇಳಿದಂತೆ **ಆಹ** ಹೇಳಿದನು. ।।೧೭।।




**ಋಷಿಗಳು ವಿಷ್ಣುವಿಗೆ ಸಮಾನನಾದ ಮಗನನ್ನು ಯಾಕೆ ಪ್ರಾರ್ಥಿಸಿದರು?**

ಶ್ರೀಹರಿಗೆ ಸಮಾನರು ಬೇರ್ಯಾರೂ ಇಲ್ಲವೆಂದು ತಿಳಿದ ಮುನಿಗಳು ನಿನಗೆ ಸಮಾನನಾದ ಮಗನನ್ನು ರಾಜನು ಇಚ್ಛಿಸುವನು ಎಂದು ಭಗವತ್ಸಮಾನಪ್ರಜೆಯನ್ನು ಹೇಗೆ ಪ್ರಾರ್ಥಿಸಿದರು ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು.

**ತಾತ್ಪರ್ಯ-**

**ನಾಸ್ತಿ ವಿಷ್ಣೋಃ ಸಮ ಇತಿ ಜಾನಂತೋಽಪಿ ಋಷಯಃ ಸದಾ ।**
**ತಜ್ಜ್ಞಾಪನಾಯ ಲೋಕಾನಾಂ ಅನ್ಯೇ ಚ (ಅನ್ಯೇಷಾಂ )ಪ್ರಾರ್ಥಯನ್**
**ಸಮಂ ॥ ಇತಿ ಬ್ರಹ್ಮಾಂಡೇ ।**

ಋಷಿಗಳು ವಿಷ್ಣುವಿಗೆ ಸಮಾನರಿಲ್ಲವೆಂದು ತಿಳಿದವರಾದರೂ ಏಕೆ ಭಗವಂತನಿಗೆ ಸಮಾನನಾದ ಮಗನನ್ನು ಪ್ರಾರ್ಥಿಸಿದರು?

ಋಷಿಗಳು ವಿಷ್ಣುವಿಗೆ ಸಮಾನರಿಲ್ಲವೆಂದು ತಿಳಿದವರಾದರೂ ಬೇರೆ ಜನರಿಗೆ ಅದನ್ನು ತಿಳಿಸಲು ಹಾಗೆ ಪ್ರಾರ್ಥಿಸಿದರು. ಶ್ರೀಹರಿಗೆ ಸಮಾನ ಮಗನಾಗಬೇಕೆಂದು ಋಷಿಗಳು ಕೇಳಿದಾಗ ಭಗವಂತ ತಾನೇ ಅವತಾರಮಾಡಿದ. ಒಂದು ವೇಳೆ ತನಗೆ ಸಮರಾದವರು ಬೇರೆ ಇದ್ದರೆ ಅವರನ್ನೇ ಮಗನಾಗಲು ಭಗವಂತ ಆಜ್ಞೆ ಮಾಡುತ್ತಿದ್ದ. ಆದರೇ, ಅಂಥವರು ಯಾರೂ ಇಲ್ಲ ಎಂದು ತಾನೇ ಅವತಾರ ಮಾಡಿದ. ಇದನ್ನು ಋಷಿಗಳು ಲೋಕಕ್ಕೆ ತಿಳಿಸಬಯಸಿ ತಮಗೆ ತತ್ತ್ವ ತಿಳಿದಿದ್ದರು ಭಗವಂತನಿಗೆ ಹಾಗೆ ಪ್ರಾರ್ಥನೆಮಾಡಿದರು.

**ಅನ್ಯೇ ಚ** ಎಂಬ ಪಾಠದಲ್ಲಿ ಅತ್ರಿ, ಕಶ್ಯಪ, ದಶರಥ ಮುಂತಾದವರೂ ಸಹ ಜನರಿಗೆ ತಿಳಿಸಲು ಶ್ರೀಹರಿಗೆ ಸಮಾನ ಮಗನು ಆಗಬೇಕೆಂದು ಪ್ರಾರ್ಥಿಸಿದರು ಎಂದು ಬ್ರಹ್ಮಾಂಡ ಪುರಾಣದಲ್ಲಿದೆ.

**ಶ್ರೀ ಭಗವಾನುವಾಚ -**

**ಅಹೋ ಬತಾಹಮೃಷಯೋ ಭವದ್ಭಿರವಿತಥಗೀರ್ಭಿರ್ವರಮಸುಲಭ-ಮಭಿಯಾಚಿತೋ ಯದಮುಷ್ಯ ಆತ್ಮಜೋ ಮಯಾ ಸದೃಶೋ ಭೂಯಾದಿತಿ ಮಮಾಹಮೇವಾಭಿರೂಪಃ ಕೈವಲ್ಯಾದಥಾಪಿ ಬ್ರಹ್ಮವಾದೋ ನ ಮೃಷಾ ಭವಿತುಮರ್ಹತಿ ಮಮೈವಹಿ ಮುಖಂ ಯದ್ದ್ವಿಜದೇವಕುಲಮ್ ॥೧೮॥**

**ಮಹಚ್ಚರಣಃ** ಹಿರಿಯರ ಸೇವೆ ಮಾಡದಿರುವ **ವಿಷಮ** ದುಃಖದಾಯಕಗಳಾದ **ವಿಷಯಾವೃತಪ್ರಕೃತಿಃ** ವಿಷಯಗಳಲ್ಲಿ ಆಸಕ್ತವಾದ ಪ್ರಕೃತಿ ಕಾರ್ಯವಾದ ಅಂತಃಕರಣವುಳ್ಳವನು ಆದ್ದರಿಂದ **ಅನವಸಿತ** ಅನಿಶ್ಚಿತವಾದ **ಪದ** ತತ್ತ್ವದ ಸ್ವರೂಪದ **ಧ್ಯಾನಾವ್ಯಾಪೃತಮತಿಃ** ಧ್ಯಾನದಲ್ಲಿ ಆಸಕ್ತವಾಗದ ಬುದ್ಧಿಯುಳ್ಳವನು ಆದ್ದರಿಂದಲೇ ಮಕ್ಕಳನ್ನಿಚ್ಛಿಸುವನು ಎಂದು ಭಾವ. ।।೧೫।।

ಸಣ್ಣ ಪ್ರಯೋಜನಕ್ಕಾಗಿ ದೊಡ್ಡವರನ್ನು ಆಹ್ವಾನಿಸುವುದು ಅಪರಾಧವೆಂದು ತಿಳಿದು ಮುನಿಗಳು ಭಗವಂತನನ್ನು ಕ್ಷಮೆ ಯಾಚಿಸುವರು

**ಯದು ಹವಾವ ಪುನರದಭ್ರಕರ್ತರಿಹ ಸಮಾಹೂತಃ ತದರ್ಥಧಿಯಾಂ ಮಂದಾನಾಂ ನಸ್ತದ್ದೇವಹೇಲನಂ ದೇವಾರ್ಹಸಿ ಸಾಮ್ಯೇನ ಸರ್ವಾತ್ಮನಾ ಪ್ರತಿವೋಢುಮವಿದುಷಾಮ್ ।।೧೬।।**

**ಹೇ ಅದಭ್ರಕರ್ತಃ** ಅನಲ್ಪಕರ್ತೃವೇ (ಸರ್ವಕರ್ತನೇ) **ಇಹ ಸಮಾಹೂತಃ ಇತಿ ಯತ್** ರಾಜನಿಗೆ ಪುತ್ರಫಲವನ್ನು ಕೊಡುವುದಕ್ಕಾಗಿ ನೀನು ಕರೆಯಲ್ಪಟ್ಟಿರುವಿ ಎಂಬುದು ಏನಿದೆಯೋ **ತತ್** ಅದು **ತದರ್ಥಧಿಯಾಂ** ಅವನಿಗೆ ಆ ಪ್ರಯೋಜನವಾಗಲಿ ಎಂಬ ಬುದ್ಧಿಯುಳ್ಳ **ಮಂದಾನಾಂ** ವಿಷಾಯಾಸಕ್ತರಾದ ಸ್ತುತಿ ಮಾಡಲು ಅಸಮರ್ಥರಾದ **ನಃ** ನಾವು ಮಾಡಿದ **ದೇವಹೇಲನಂ** ದೇವನಾದ ನಿನ್ನ ಅವಮಾನವು **ಹೇ ದೇವ** ಸ್ವಾಮಿಯೇ **ಸಾಮ್ಯೇನ** ಅವರವರ ಯೋಗ್ಯತೆ ತಿಳಿದು **ಅವಿದುಷಾಂ** ಮಹಾತ್ಮರ ಸೇವೆಯಿಂದ ಜ್ಞಾನವನ್ನು ಪಡೆಯದ ನಮ್ಮ ಅಪರಾಧವನ್ನು ಸರ್ವಾತ್ಮನಾ **ಪ್ರತಿವೋಢುಂ ಅರ್ಹಸಿ** ಸಂಪೂರ್ಣ ಕ್ಷಮಿಸಲು ಯೋಗ್ಯನಾಗಿರುವಿ.

**ಇತಿ ನಿಗದೇನಾಭಿಷ್ಟೂಯಮಾನೋ ಭಗವಾನನಿಮಿಷರ್ಷಭೋ ವರ್ಷ ಧಾರಾಭಿವಂದಿತಚರಣಃ ಸದಯಮಿದಮಾಹ ।।೧೭।।**

**ಇತಿ** ಈ ರೀತಿಯಾಗಿ **ನಿಗದೇನ** ಛಂದೋಬದ್ಧವಾದ ಗದ್ಯರೂಪವಾದ ಮಾಹಾತ್ಮ್ಯವನ್ನು ತಿಳಿಸುವ ಸ್ತುತಿ ವಾಕ್ಯಗಳಿಂದ **ಅಭಿಷ್ಟೂಯಮಾನಃ** ಸ್ತುತಿಸಲ್ಪಡುವವನಾಗಿ **ವರ್ಷಧಾರಾಭಿವಂದಿತಚರಣಃ** ಭಾರತ ವರ್ಷಕ್ಕೆ ಅಧಿ ಪತಿಯಾದ ನಾಭಿ ರಾಜನಿಂದ ನಮಸ್ಕೃತವಾದ ಪಾದಗಳುಳ್ಳ **ಅನಿಮಿಷರ್ಷಭಃ** ದೇವಶ್ರೇಷ್ಠನಾದ **ಭಗವಾನ್** ಶ್ರೀಹರಿಯು **ಸದಯಂ** ದಯೆಯಿಂದ **ಇದಂ** ಮುಂದೆ ಹೇಳಿದಂತೆ **ಆಹ** ಹೇಳಿದನು. ।।೧೭।।




## ಋಷಿಗಳು ವಿಷ್ಣುವಿಗೆ ಸಮಾನನಾದ ಮಗನನ್ನು ಯಾಕೆ ಪ್ರಾರ್ಥಿಸಿದರು?

ಶ್ರೀಹರಿಗೆ ಸಮಾನರು ಬೇರ್ಯಾರೂ ಇಲ್ಲವೆಂದು ತಿಳಿದ ಮುನಿಗಳು ನಿನಗೆ ಸಮಾನನಾದ ಮಗನನ್ನು ರಾಜನು ಇಚ್ಛಿಸುವನು ಎಂದು ಭಗವತ್ಸಮಾನಪ್ರಜೆಯನ್ನು ಹೇಗೆ ಪ್ರಾರ್ಥಿಸಿದರು ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು.

**ತಾತ್ಪರ್ಯ-**

**ನಾಸ್ತಿ ವಿಷ್ಣೋಃ ಸಮ ಇತಿ ಜಾನಂತೋಽಪಿ ಋಷಯಃ ಸದಾ ।**
**ತಜ್ಜ್ಞಾಪನಾಯ ಲೋಕಾನಾಂ ಅನ್ಯೇ ಚ (ಅನ್ಯೇಷಾಂ )ಪ್ರಾರ್ಥಯನ್ ಸಮಂ ॥ ಇತಿ ಬ್ರಹ್ಮಾಂಡೇ ।**

ಋಷಿಗಳು ವಿಷ್ಣುವಿಗೆ ಸಮಾನರಿಲ್ಲವೆಂದು ತಿಳಿದವರಾದರೂ ಏಕೆ ಭಗವಂತನಿಗೆ ಸಮಾನನಾದ ಮಗನನ್ನು ಪ್ರಾರ್ಥಿಸಿದರು?

ಋಷಿಗಳು ವಿಷ್ಣುವಿಗೆ ಸಮಾನರಿಲ್ಲವೆಂದು ತಿಳಿದವರಾದರೂ ಬೇರೆ ಜನರಿಗೆ ಅದನ್ನು ತಿಳಿಸಲು ಹಾಗೆ ಪ್ರಾರ್ಥಿಸಿದರು. ಶ್ರೀಹರಿಗೆ ಸಮಾನ ಮಗನಾಗಬೇಕೆಂದು ಋಷಿಗಳು ಕೇಳಿದಾಗ ಭಗವಂತ ತಾನೇ ಅವತಾರಮಾಡಿದ. ಒಂದು ವೇಳೆ ತನಗೆ ಸಮರಾದವರು ಬೇರೆ ಇದ್ದರೆ ಅವರನ್ನೇ ಮಗನಾಗಲು ಭಗವಂತ ಆಜ್ಞೆ ಮಾಡುತ್ತಿದ್ದ. ಆದರೇ, ಅಂಥವರು ಯಾರೂ ಇಲ್ಲ ಎಂದು ತಾನೇ ಅವತಾರ ಮಾಡಿದ. ಇದನ್ನು ಋಷಿಗಳು ಲೋಕಕ್ಕೆ ತಿಳಿಸಬಯಸಿ ತಮಗೆ ತತ್ತ್ವ ತಿಳಿದಿದ್ದರು ಭಗವಂತನಿಗೆ ಹಾಗೆ ಪ್ರಾರ್ಥನೆಮಾಡಿದರು.

**ಅನ್ಯೇ ಚ** ಎಂಬ ಪಾಠದಲ್ಲಿ ಅತ್ರಿ, ಕಶ್ಯಪ, ದಶರಥ ಮುಂತಾದವರೂ ಸಹ ಜನರಿಗೆ ತಿಳಿಸಲು ಶ್ರೀಹರಿಗೆ ಸಮಾನ ಮಗನು ಆಗಬೇಕೆಂದು ಪ್ರಾರ್ಥಿಸಿದರು ಎಂದು ಬ್ರಹ್ಮಾಂಡ ಪುರಾಣದಲ್ಲಿದೆ.

**ಶ್ರೀ ಭಗವಾನುವಾಚ -**

**ಅಹೋ ಬತಾಹಮೃಷಯೋ ಭವದ್ಭಿರವಿತಥಗೀರ್ಭಿರ್ವರಮಸುಲಭ-ಮಭಿಯಾಚಿತೋ ಯದಮುಷ್ಯ ಆತ್ಮಜೋ ಮಯಾ ಸದೃಶೋ ಭೂಯಾದಿತಿ ಮಮಾಹಮೇವಾಭಿರೂಪಃ ಕೈವಲ್ಯಾದಥಾಪಿ ಬ್ರಹ್ಮವಾದೋ ನ ಮೃಷಾ ಭವಿತುಮರ್ಹತಿ ಮಮೈವಹಿ ಮುಖಂ ಯದ್ದ್ವಿಜದೇವಕುಲಮ್ ॥೧೮॥**

**ಅಹೋ** ಆಶ್ಚರ್ಯ **ಬತ ಅಹಂ** ನಾನು ಸಂತುಷ್ಟನಾಗಿದ್ದೇನೆ **ಹೇ ಋಷಯಃ** ಎಲೋ ಋಷಿಗಳೇ **ಅವಿತಥಗೀರ್ಭಿಃ** ಸತ್ಯಮಾತಾನಾಡುವ **ಭವದ್ಭಿಃ** ನಿಮ್ಮಿಂದ **ಯತ್** ಯಾವ **ಅಮುಷ್ಯ** ನಾಭಿರಾಜನಿಗೆ **ಮಯಾ ಸದೃಶಃ ಆತ್ಮಜೋ ಭೂಯಾತ್** ನನಗೆ ಸಮಾನನಾದ ಮಗನಾಬೇಕು ಎಂದು **ಅಸುಲಭಂ ವರಂ ಅಭಿಯಾಚಿತಃ** ಸುಲಭವಲ್ಲದ ವರವನ್ನು ಕೇಳಲ್ಪಟ್ಟಿರುವನು ಏಕೆಂದರೆ **ಕೈವಲ್ಯಾತ್** ಸರ್ವೋತ್ತಮನಾದುದರಿಂದ **ಮಮ** ನನಗೆ **ಅಹಮೇವ** ನಾನೇ **ಅಭಿರೂಪಃ** ಸದೃಶನು **ಅಥಾಪಿ** ಆದರೂ **ಯತ್** ಯಾವಕಾರಣ **ದ್ವಿಜದೇವಕುಲಂ** ತ್ರಿವರ್ಣಗಳಲ್ಲಿ ಶ್ರೇಷ್ಠವಾದ ಬ್ರಾಹ್ಮಕುಲವು **ಮಮ ಮುಖಂ** ನನ್ನ ಮುಖದಿಂದ ಜನಿಸಿದುದು ಕಾರಣ **ಬ್ರಹ್ಮವಾದಃ** ಬ್ರಾಹ್ಮಣರ ಮಾತು **ನ ಮೃಷಾಭವಿತುಂ ಅರ್ಹತಿ** ಸುಳ್ಳಾಗಲು ಯೋಗ್ಯವಾದುದಲ್ಲ. ॥೧೮॥

**ತತಃ ಆಗ್ನೀಧ್ರೀಯೇ ಕ್ಷೇತ್ರೇಽಹಂ ಕಲಯಾವತರಿಷ್ಯಾಮಿ ಆತ್ಮತುಲ್ಯ-ಮನುಪಲಭ್ಯಮಾನಃ ॥೧೯॥**

**ತತಃ** ಬ್ರಾಹ್ಮಣರಮಾತು ಸುಳ್ಳಾಗುವುದಿಲ್ಲ ಕಾರಣ **ಆಗ್ನೀಧ್ರೀಯೇ** ಆಗ್ನೀಧ್ರನ **ಕ್ಷೇತ್ರೇ** ಹೆಂಡತಿಯಲ್ಲಿ **ಅಹಂ** ನಾನು **ಆತ್ಮತುಲ್ಯಂ** ನನಗೆ ಸಮಾನರಾದವರನ್ನು **ಅನುಪಲಭ್ಯಮಾನಃ** ಕಾಣದೆ **ಕಲಯಾ** ಒಂದಂಶದಿಂದ **ಅವತರಿಷ್ಯಾಮಿ** ಅವತಾರಮಾಡುವೆನು.

**ಇತಿ ನಿಶಾಮಯಂತ್ಯಾ ಮೇರುದೇವ್ಯಾಃ ಪತಿಂ ಸಮಭಿಧಾಯ ಅಂತರ್ದಧೇ ಭಗವಾನ್ ॥೨೦॥**

**ಇತಿ** ಈ ರೀತಿಯಾಗಿ **ಮೇರುದೇವ್ಯಾಃ ನಿಶಾಮಯಂತ್ಯಾಃ** ಮೇರು ದೇವಿಯು ನೋಡುತ್ತಿರುವಾಗಲೇ **ಪತಿಂ** ನಾಭಿರಾಜನಿಗೆ **ಸಮಭಿಧಾಯ** ಹೇಳಿ **ಭಗವಾನ್** ಶ್ರೀಹರಿಯು **ಅಂತರ್ದಧೇ** ಅದೃಶ್ಯನಾದನು. ॥೨೦॥

**ಬರ್ಹಿಷಿ ತಸ್ಮಿನ್ ಏವಂ ವಿಷ್ಣುರಾತ ಭಗವಾನ್ ಪರಮರ್ಷಿಭಿಃ ಪ್ರಸಾದಿತೋ ನಾಭೇಃ ಪ್ರಿಯಚಿಕೀರ್ಷಯಾ ತದವರೋಧಜನೇ ಮೇರುದೇವ್ಯಾಂ ಚ ಧರ್ಮಾನ್ ದರ್ಶಯಿತುಕಾಮೋ ವಾತರಶನಾನಾಂ ಶ್ರಮಣಾನಾಂ ಋಷೀಣಾಮೂರ್ಧ್ವಮಂಥಿನಾಂ ಶುಕ್ಲಯಾ ತನ್ವಾವತತಾರ ॥೨೦॥**

**ಹೇ ವಿಷ್ಣುರಾತ** ಪರೀಕ್ಷಿತನೇ **ತಸ್ಮಿನ್ ಬರ್ಹಿಷಿ** ಆ ಯಜ್ಞದಲ್ಲಿ **ಏವಂ** ಈ ರೀತಿಯಾಗಿ **ಪರಮಋಷಿಭಿಃ ಪ್ರಸಾದಿತಃ** ಶ್ರೇಷ್ಠ ಮುನಿಗಳಿಂದ ಸಂತೋಷಗೊಳಿಸಲ್ಪಟ್ಟ **ಭಗವಾನ್** ಶ್ರೀಹರಿಯು **ನಾಭೇಃ ಪ್ರಿಯಚಿಕೀರ್ಷಯಾ** ನಾಭಿರಾಜನಿಗೆ ಅಭೀಷ್ಟ ನೆರವೇರಿಸಲು **ತದವರೋಧಜನೇ ಮೇರುದೇವ್ಯಾಂ** ಅವನ ಪತ್ನಿಯಾದ ಮೇರುದೇವಿಯಲ್ಲಿ **ವಾತರಶನಾನಾಂ** ದಿಗಂಬರರಾದ **ಶ್ರಮಣಾನಾಂ** ಪರಮ ಹಂಶಾಶ್ರಮಿಗಳಾದ **ಊರ್ಧ್ವಮಂಥಿನಾಂ** ಬ್ರಹ್ಮಚಾರಿಗಳಾದ **ಋಷೀಣಾಂ** ಜ್ಞಾನಿಗಳ **ಧರ್ಮಾನ್** ಧರ್ಮಗಳನ್ನು **ದರ್ಶಯಿತುಕಾಮಃ** ತಿಳಿಸುವ ಇಚ್ಛೆಯಿಂದ **ಶುಕ್ಲಯಾ ತನ್ವಾ** ಶುದ್ಧವಾದ ದೇಹದಿಂದ **ಅವತತಾರ** ಅವತರಿಸಿದನು.

**।। ಇಲ್ಲಿಗೆ ೩ನೇ ಅಧ್ಯಾಯವು ಮುಗಿಯಿತು ।।**

★★★



## ಮೂರನೇ ಅಧ್ಯಾಯದ ಸಾರ

ನಾಭಿರಾಜರಿಗೆ ಮಕ್ಕಳಾಗಬೇಕೆಂಬ ಆಸೆ. ಮೇರುದೇವಿಗೆ ಮಕ್ಕಳಾಗಲಿಲ್ಲ. ಆಗ ಅವರು ಏಕಾಗ್ರ ಮನಸ್ಸಿನಿಂದ ಹೆಂಡತಿಯೊಡನೆ ಯಜ್ಞಪುರುಷನಾದ ಶ್ರೀಹರಿಯನ್ನು ಕುರಿತು ಯಜ್ಞ ಮಾಡಿದರು. ಶ್ರದ್ಧೆಯಿಂದಲೂ ಅತ್ಯಂತ ಶುದ್ಧ ಮನಸ್ಸಿನಿಂದಲೂ ಶುದ್ಧವಾದ ಕರ್ಮದಿಂದಲೂ ಯಾಗ ಮಾಡುತ್ತಿದ್ದರು. ಪ್ರವರ್ಗ್ಯಗಳೆಂಬ ವಿಶೇಷ ಕರ್ಮಗಳು ನಡೆಯುತ್ತಿದ್ದವು. ದ್ರವ್ಯ, ದೇಶ, ಕಾಲ, ಮಂತ್ರ, ಋತ್ವಿಕ್, ದಕ್ಷಿಣೆ, ವಿಧಾನ ಮತ್ತು ಧ್ಯಾನಗಳ ಸಂಪತ್ತಿನಿಂದ ಶ್ರೀಹರಿಯು ಹೊಂದಲು ಅಸಾಧ್ಯನು. ಆದರೂ ತನ್ನ ಭಕ್ತರಲ್ಲಿ ವಾತ್ಸಲ್ಯವುಳ್ಳವನಾದುದರಿಂದ ಸುಪ್ರೀತನಾದನು. ತನ್ನ ಭಕ್ತರ ಅಭಿಪ್ರಾಯವನ್ನು ನಡೆಸಬೇಕೆಂಬ ಇಚ್ಛೆಯಿಂದ ಆಕರ್ಷಿತ ಮನಸ್ಸುಳ್ಳ ಶ್ರೀಹರಿಯು ಗರ್ಭವಾಸಾದಿ ದುಃಖಗಳಿಂದ ಪರಾಜಿತವಲ್ಲದ ಸ್ವತಂತ್ರವು, ಹೃದಯಂಗಮವೂ, ಕಣ್ಮನಗಳಿಗೆ ಆನಂದಕರವೂ, ಸುಂದರಕರಚರಣಾದಿ ವಿಶಿಷ್ಟವೂ, ಚಿದಾನಂದಾತ್ಮಕವೂ ಆದ ತನ್ನ ರೂಪವನ್ನು ವ್ಯಕ್ತಗೊಳಿಸಿದನು. ನಾಲ್ಕು ತೋಳುಗಳು ಸ್ಪಷ್ಟವಾಗಿದ್ದವು. ಬಂಗಾರದ ಮೈಬಣ್ಣ. ಹಳದಿ ಬಣ್ಣದ ರೇಷ್ಮೆ ಬಟ್ಟೆಯನ್ನು ಧರಿಸಿದ್ದನು. ವಕ್ಷಸ್ಸಿನಲ್ಲಿ ಶ್ರೀವತ್ಸ ಚಿನ್ಹೆ ಪ್ರಕಾಶಿಸುತ್ತಿತ್ತು. ಶ್ರೇಷ್ಠವಾದ ಶಂಖ, ಕಮಲ, ವೈಜಯಂತಿ, ತುಳಸಿ ಮಾಲೆ, ಸಾಣೆ ಹಿಡಿದ ಬೆಳಗಿರುವ ಅಮೃತತ್ತ್ವವನ್ನು ನೀಡುವ ಮಣಿಶ್ರೇಷ್ಠವೆಂದೆನಿಸಿಕೊಂಡ ಕೌಸ್ತುಭ, ಚಕ್ರ ಮತ್ತು ಗದೆಗಳಿಂದ ವಿಶಿಷ್ಟನಾಗಿದ್ದ ಅವನು ಬ್ರಹ್ಮಾದಿಗಳಿಗಿಂತ ಭಿನ್ನನೆಂದು ತೋರುತ್ತಿದ್ದನು.

ಸ್ವಪ್ರಕಿರಣಗಳುಳ್ಳ ಉತ್ತಮ ಮಣಿಗಳಿಂದ ಮಾಡಿದ ತಲೆಯ ಪಾಗು, ಕಿರೀಟ, ಕಿವಿಗೆ ಕುಂಡಲ, ಕಡಗ, ಕಟಿಸೂತ್ರ, ಉದ್ದವಾದ ಹಾರ ಕೇಯೂರ ಮತ್ತು ನೂಪುರಗಳೇ ಮೊದಲಾದ ಶರೀರಾಭರಣಗಳಿಂದ ಭೂಷಿತನಾಗಿದ್ದನು. ಆ




ಸರ್ವೋತ್ತಮನಾದ ಶ್ರೀಹರಿಯ ರೂಪವನ್ನು ಕಂಡ ಪುರೋಹಿತರು, ಸಭಿಕರು, ಯಜಮಾನನೂ ಉತ್ತಮ ಧನವನ್ನು ಕಂಡು ಕಡುಬಡವರಂತೆ ಆನಂದಗೊಂಡು ತಲೆತಗ್ಗಿಸಿ ಬಹುಮಾನ ಪೂರ್ವಕವಾಗಿ ಪೂಜಾಸಾಮಾಗ್ರಿಗಳಿಂದ ಪೂಜಿಸಿದರು.

ಶ್ರೀಹರಿಯೇ! ನೀನು ಪೂಜ್ಯತಮನು. ನಾವು ನಿನ್ನ ಭಕ್ತರು. ನಾವು ಮಾಡುವ ಈ ಅತಿಶಯಪೂಜೆಯನ್ನು ಸ್ವೀಕರಿಸಲು ನೀನು ಅರ್ಹನು. ಸಜ್ಜನರು ಉಪದೇಶಿಸಿದಂತೆ ಪ್ರಶಸ್ತವಾದ ನಮೋ ನಮಃ ಎಂಬುವುದಷ್ಟೇ ನಾವು ಮಾಡುವ ಪೂಜೆ.

ನಮ್ಮ ಬುದ್ಧಿಯು ಪ್ರಕೃತಿ ಗುಣ ವಿಕಾರಗಳಾದ ವಿಷಯಗಳಿಂದ ಆಕರ್ಷಿತವಾಗಿ ಪ್ರಪಂಚದಲ್ಲಿಯೇ ಆಸಕ್ತವಾಗಿದೆ. ನಾವು ಅಸ್ವತಂತ್ರರು. ಹೀಗೆ ಬಾಹ್ಯ ವಿಷಯಾಸಕ್ತಿಯಿಂದ ನಮ್ಮ ಬುದ್ಧಿಯು ನಿನ್ನಲ್ಲಿ ಆಸಕ್ತವಾಗುತ್ತಿಲ್ಲ. ಇಂತಹ ಯಾವ ಅಧಿಕಾರಿ ಚೇತನನು ತಾನೇ ನಿನ್ನ ಎಲ್ಲ ನಾಮಗಳ, ಧರ್ಮಗಳ ಮತ್ತು ಆಕಾರಗಳ ನಿರೂಪಣೆ ಮಾಡಲು ಯೋಗ್ಯನಾದಾನು? ನೀನು ಲಕ್ಷ್ಮೀ ಮತ್ತು ಜೀವ ಸಮುದಾಯಕ್ಕಿಂತ ಉತ್ತಮನು. ಸರ್ವೋತ್ತಮನಾದ ನೀನೇ ಸರ್ವೇಶ್ವರನು. ನಿನ್ನ ಶ್ರೇಷ್ಠಗುಣಸಮೂಹಗಳು ಸಮಸ್ತ ಜನ ಸಮೂಹದ ಪಾಪಗಳನ್ನು, ದುಃಖಗಳನ್ನು ಹೋಗಲಾಡಿಸುವವು. ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುವುದರಿಂದ ಮಂಗಳಕರಗಳು. ಅವುಗಳ ಏಕದೇಶವನ್ನು ಹೇಳಲಾದೀತೇ ಹೊರತು ಎಲ್ಲವನ್ನೂ ಎಂದೂ ಯಾರೂ ಹೇಳಲಾಗುವುದಿಲ್ಲ. ಹೇ ಸರ್ವೋತ್ತಮನೇ! ನಿನ್ನ ಭಕ್ತರು ಭಕ್ತಿಯಿಂದ ಮಾಡುವ ಸ್ತೋತ್ರ, ಹೇಳುವ ಕಥನ, ನೀರು, ಚಿಗುರು, ತುಲಸಿ, ಗರಿಕೆಯ ಅಂಕುರ ಇವುಗಳಿಂದ ಕೂಡಿದ ಪೂಜೆಯಿಂದಲೂ ನೀನು ಸಂತುಷ್ಟನಾಗುವಿಯೆಂದು ಶ್ರುತಿಗಳು ಸಾರುತ್ತವೆ. ಭಕ್ತಿಯಿಲ್ಲದ ಅತಿಶಯ ಸಾಧನ ಸಾಮಾಗ್ರಿಗಳಿಂದ ಪೂರ್ಣವಾದ ಪೂಜೆಯಿಂದಲೂ ನಿನಗೆ ಸಂತೋಷವಾಗುವುದಿಲ್ಲವೆಂದು ಶಾಸ್ತ್ರಗಳಿಂದ ತಿಳಿದು ಬರುತ್ತದೆ. ಭಕ್ತಿಯುಕ್ತವಾದ ಆರಾಧನೆಯಿಂದಲೂ ನಿನಗೆ ಯಾವ ಹೊಸ ಸುಖಾನುಭವವೂ ಇಲ್ಲ. ಯಾವಾಗಲೂ ಸ್ವಾಭಾವಿಕವಾಗಿ ಮುಖ್ಯವಾಗಿ ಅಭಿನ್ನವಾಗಿರುವ ಅತಿಶಯವಾಗಿ ನಿನ್ನ ಅನುಭವಕ್ಕೆ ಸದಾ ಬರುತ್ತಿರುವ ಪೂರ್ಣಸುಖಸ್ವರೂಪನು. ಈ ನಿನ್ನ ಪೂಜೆಯು ಮನೋರಥಗಳನ್ನು ಅಪೇಕ್ಷಿಸುವ ಭಕ್ತರಾದ ನಮಗೆ ಮಾತ್ರ ನಿನ್ನ ಅನುಗ್ರಹ ಸಂಪಾದನೆಗೆ ಒಂದು ಸಾಧನ. ನಮಗೆ ನಮ್ಮ ಉತ್ಕೃಷ್ಟ ಶ್ರೇಯಸ್ಸು ತಿಳಿಯದು.

ಬಾಲಕರಂತೆ ಅಜ್ಞಾನಿಗಳು ನಾವು. ನೀನು ನಮ್ಮಲ್ಲಿ ಅತಿಶಯ ಕರುಣೆ ತೋರಿ ಸಂಸಾರದಿಂದ ನಮ್ಮನ್ನು ಬಿಡುಗಡೆ ಮಾಡಿ ಸ್ವರೂಪಾನಂದಾನುಭವವೆಂಬ ಮೋಕ್ಷ ಮಹಿಮೆಯನ್ನು ಸಂಪಾದಿಸಿಕೊಡುವೆ. ಪರಮ ಪುರುಷನೇ! ನೀನು ನಿನ್ನ ಅನುಗ್ರಹಕ್ಕೆ ಅಧೀನನು. ನಮ್ಮ ಪ್ರಯತ್ನಕ್ಕಲ್ಲ. ಆದರೂ ಪರಪ್ರಯತ್ನಾಪೇಕ್ಷೆಯುಳ್ಳವನಂತೆ ಈ ಯಜ್ಞಭೂಮಿಯಲ್ಲಿ ನಮಗೆ ಪ್ರತ್ಯಕ್ಷನಾಗಿರುವೆ. ಪೂಜ್ಯತಮನೇ! ವರಕೊಡುವವರಲ್ಲಿ ಶ್ರೇಷ್ಠನಾದ ನೀನು ಈ ರಾಜರ್ಷಿಯ ಯಜ್ಞದಲ್ಲಿ ಭಕ್ತರಾದ ನಮಗೆ ಗೋಚರನಾದ್ದರಿಂದಲೇ ಈ ಫಲವನ್ನು ಹೊಂದಿದ ನಾವು ಉತ್ತಮ ಶ್ರೇಯಸ್ಸಿಗಾಗಿ ಉತ್ತಮೋತ್ತಮನಾದ ನಿನ್ನನ್ನು ಪೂಜಿಸುತ್ತೇವೆ.

ವೈರಾಗ್ಯದಿಂದ ಕೂಡಿದ ಜ್ಞಾನವು ವೀರ್ಯವತ್ತರವಾದುದು. ಆ ಜ್ಞಾನಾಗ್ನಿಯಿಂದ ಮನಸ್ಸಿನ ರಾಗಾದಿಮಲಗಳೆಲ್ಲವನ್ನೂ ಹೋಗಲಾಡಿಸಿಕೊಂಡ ಮುನಿಗಳು ಭಗವಂತನಲ್ಲಿ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಭಕ್ತಿ ಮಾಡುತ್ತಾ ಶ್ರೀಹರಿಯಲ್ಲಿಯೇ ರತರಾಗಿ ಆನಂದಪಡುವರು. ಭಗವಂತನಾದ ನಿನ್ನ ಗುಣಗಳನ್ನು ಅವರು ಯಾವಾಗಲೂ ಉಪಾಸಿಸುವರು. ಪರಮ ಮಂಗಳಕರ ಸುಖ ಸ್ವರೂಪನಾದ ನಿನ್ನನ್ನು ಕೀರ್ತಿಸುವರು. ಆದ್ದರಿಂದ ಯಾವಾಗಲೂ ನಿನ್ನ ನಾಮವನ್ನು ಸ್ಮರಿಸಲು ಅಸಮರ್ಥರಾದ ನಮಗೆ ಎಡವಿದಲ್ಲಿ, ಸೀನಿದಲ್ಲಿ, ಬಿದ್ದಲ್ಲಿ, ಆಕಳಿಸಿದಲ್ಲಿ, ಪ್ರವಾಸ, ಪುತ್ರಾದಿಶೋಕ ಒದಗಿದಲ್ಲಿ ರೋಗಬಾಧೆಯಲ್ಲಿ ಮತ್ತು ಸಾಯುವ ಅವಸ್ಥೆಯಲ್ಲಿ ಎಂತಹ ಆಪತ್ಕಾಲಗಳಲ್ಲಿಯಾದರೂ ನಿನ್ನ ಗುಣಕ್ರಿಯಾನಾಮಗಳು ಹೇಗಾದರೂ ನಮ್ಮ ಮಾತಿಗೆ ವಿಷಯಗಳಾಗಲಿ (ನಮ್ಮ ಬಾಯಿಯಿಂದ ಹೊರಡಲಿ). ಅವು ಎಲ್ಲರ ಪಾಪಗಳನ್ನು ಹೋಗಲಾಡಿಸುವವು. ಐಹಿಕ ಆಮುಷ್ಮಿಕ ಫಲಗಳನ್ನು ಕೊಡುವವು. ಮತ್ತೊಂದು ಪ್ರಯೋಜನವನ್ನು ಬೇಡುತ್ತೇವೆ. ಮಕ್ಕಳೇ ಪುರುಷಾರ್ಥವೆಂದು ತಿಳಿದಿರುವ ಈ ರಾಜರ್ಷಿಯು ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ನಿನ್ನನ್ನು ಶರಣು ಹೊಂದಿರುವನು. ನೀನಾದರೋ ಎಲ್ಲ ಆಸೆಗಳನ್ನು ಅಷ್ಟೇ ಏಕೆ ಸ್ವರ್ಗ ಅಪವರ್ಗಗಳನ್ನೂ ಭಕ್ತರಿಗೆ ಕರುಣಿಸುವ ಸರ್ವೋತ್ತಮ ನಿಯಾಮಕನು. ಬಡವನು ಯಾವನಾದರೂ ದಾನಿಯನ್ನು ಹೊಂದಿ ಹುಲ್ಲಿನ ಕಣವನ್ನು ಯಾಚಿಸುವನೇ? ಪುರುಷಾರ್ಥಪ್ರದನಾದ ನಿನ್ನನ್ನು ಹೊಂದಿ ಇವನು ನಿನ್ನಂತಹ ಮಗನನ್ನು ಬೇಡುತ್ತಿರುವನು. ಅಪರಾಜಿತನೇ! ನಿನ್ನ ಅನುಗ್ರಹವಿಲ್ಲದೆ ನಿನ್ನ ಮಾಯೆಯನ್ನು ಯಾರೂ ಗೆಲ್ಲಲಾರರು. ಯಾರು ನಿನ್ನ ಭಕ್ತರನ್ನು ಸೇವಿಸಿರುವುದಿಲ್ಲವೋ ಅವರು ನಿನ್ನೀ




ಬಂಧಕಶಕ್ತಿಗೆ ಸಿಲುಕಿ ನಿನ್ನನ್ನು ಸರಿಯಾಗಿ ತಿಳಿಯದೇ ಇರುವುದರಿಂದ ನಿನ್ನ ಸ್ವರೂಪದ ಧ್ಯಾನದಲ್ಲಿ ಆಸಕ್ತಿ ಇಲ್ಲದ ಮನಸ್ಸಿನವರಾಗುವರು. ಆದಕಾರಣದಿಂದ ವಿಷಮವಿಷಯದಲ್ಲಿಯೇ ಆಸಕ್ತರಾಗುವರು. ಅಂತಹ ಜೀವರು ಮಾತ್ರ ಕ್ಷುದ್ರಫಲಗಳನ್ನು ಅಪೇಕ್ಷಿಸುವರು. ಶ್ರೀಹರಿಯೇ! ನೀನು ಸ್ವಲ್ಪ ಸೇವಿಸಿದರೂ ಬಹುಫಲ ಕೊಡುವವನು. ಇಂತಹ ನಿನ್ನನ್ನು ರಾಜನಿಗೆ ಮಕ್ಕಳಾಗಲಿ ಎಂಬ ಅಲ್ಪ ಪ್ರಯೋಜನಕ್ಕಾಗಿ ಈ ಯಜ್ಞದಲ್ಲಿ ಕರೆದುದು ಅಜ್ಞಾನಿಗಳಾದ ನಾವು ನಿನಗೆ ತೋರಿದ ತಿರಸ್ಕಾರವು. ನೀನು ಆ ಆ ಜೀವರ ಯೋಗ್ಯತೆಯನ್ನು ಅರಿತಿರುವೆ. ಆದ ಕಾರಣ ನಮ್ಮನ್ನು ಕ್ಷಮಿಸಲು ಅರ್ಹನು. ನಾವು ಮಹನೀಯರನ್ನು ಸೇವಿಸದಿದ್ದರಿಂದ ನಿನ್ನನ್ನು ತಿಳಿಯದಾದೆವು.

ಹೀಗೆ ಶ್ರೀಹರಿಯ ಮಹಿಮೆಯನ್ನು ಬಿತ್ತರಿಸುವ ಗದ್ಯಾತ್ಮಕ ಸ್ತೋತ್ರದಿಂದ ಸ್ತುತನಾದ ಶ್ರೀಹರಿಯು ನಾಭಿರಾಜರಿಂದ ವಂದಿತನಾಗಿ ದಯೆಯಿಂದ - ನಿಮ್ಮಿಚ್ಛೆಯು ಆಶ್ಚರ್ಯಕರವಾದುದು. ನಿಮ್ಮ ಯಾಗದಿಂದ ನಾನು ಸಂತುಷ್ಟನಾಗಿದ್ದೇನೆ. ಈ ರಾಜನಿಗೆ ನಿನ್ನಂತಹ ಮಗನಾಗಬೇಕೆಂದು ನೀವು ಕೇಳಿರುವ ವರವು ಸುಲಭತರವಾದುದಲ್ಲ. ನನಗೆ ನಾನೇ ಸದೃಶನು (ಇದನ್ನು ಜನರಿಗೆ ತಿಳಿಸುವುದಕ್ಕಾಗಿಯೇ ಈ ತತ್ತ್ವವನ್ನು ತಿಳಿದಿದ್ದರೂ ಋಷಿಗಳು ಹಾಗೆ ಯಾಚಿಸಿದ್ದು). ಬ್ರಾಹ್ಮಣರಾದ ನಿಮ್ಮ ಮಾತು ಸುಳ್ಳಾಗದು. ಬ್ರಾಹ್ಮಣರು ನನ್ನ ಮುಖದಿಂದ ಜನಿಸಿದವರಲ್ಲವೇ. ಆದ್ದರಿಂದ ನನಗೆ ಸದೃಶವಿಲ್ಲದ ಪ್ರಯುಕ್ತ ನಾನೇ ಒಂದಂಶದಿಂದ ನಾಭಿರಾಜನ ಹೆಂಡತಿಯಿಂದ ಅವತರಿಸುವೆನು ಎಂದು ನಾಭಿರಾಜನಿಗೆ ಹೇಳಿ ಭಗವಂತನು ಅಂತರ್ಧಾನನಾದನು. ಈ ಭಗವಂತನ ಮಾತುಗಳನ್ನು ಮೇರುದೇವಿಯೂ ಕೇಳುತ್ತಿದ್ದಳು. ಪರೀಕ್ಷಿತನೇ! ಹೀಗೆ ಆ ಯಜ್ಞದಲ್ಲಿ ಋಷಿಶ್ರೇಷ್ಠರಿಂದ ಪ್ರಸನ್ನೀಕೃತನಾದ ಶ್ರೀಹರಿಯು ಆ ರಾಜನಿಗೆ ಪ್ರಿಯವಾದುದನ್ನು ಮಾಡುವ ಇಚ್ಛೆಯಿಂದ ದಿಗಂಬರರೂ, ಜ್ಞಾನಿಗಳು, ಊರ್ಧ್ವರೇತಸ್ಕರೂ ಆದ ಪರಮಹಂಸರ ಧರ್ಮಗಳನ್ನು ತಿಳಿಸಿಕೊಡುವ ಬಯಕೆಯಿಂದಲೂ ದುಃಖನಾಶಕವೂ ಜ್ಞಾನದಾಯಕವೂ ಅತ್ಯಂತಸುಖಜ್ಞಾನಾತ್ಮಕವೂ, ಶುಕ್ಲಶೋಣಿತಸಂಬಂಧ ರಹಿತವಾದುದರಿಂದ ಶುದ್ಧವಾದ ದೇಹದಿಂದ ನಾಭಿರಾಜನ ಹೆಂಡತಿ ಮೇರುದೇವಿಯಲ್ಲಿ ಅವತರಿಸಿದನು.

II ★★★ II

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ

# ಚತುರ್ಥೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಈ ಅಧ್ಯಾಯದಲ್ಲಿ ಶ್ರೀಹರಿಯ ಋಷಭಾವತಾರ ಚರಿತ್ರೆ ಹೇಳುವರು. ಋಷಭನಿಗೆ ಜಯಂತಿಯೆಂಬುವವಳಲ್ಲಿ ಭರತ ಮುಂತಾದ ನೂರುಜನ ಮಕ್ಕಳು ಜನಿಸಿದುದು ಮತ್ತು ಋಷಭನ ರಾಜ್ಯಶಾಸನದ ವೈಶಿಷ್ಟ್ಯ ಹೇಳುವರು.

### ಋಷಭ ಚರಿತ್ರೆ

ಋಷಭನಾಮಕ ಶ್ರೀಹರಿಯು ಗಾರ್ಹಸ್ಥ್ಯಧರ್ಮ ತೋರಿಸುವ ನೆಪದಿಂದ ದೇವತೆಗಳೇ ಮುಂತಾದವರು ಭೂಮಿಯಲ್ಲಿ ಅವತರಿಸಿದಾಗ ಅವರನ್ನು ಹೇಗೆ ನಡೆಸುವನು ಎಂದು ತಿಳಿಸುವರು.

### ಋಷಭನಲ್ಲಿ ಜನಾನುರಾಗ

ಮೊದಲಿಗೆ ಋಷಭನ ವಿಷಯದಲ್ಲಿರುವ ಜನಾನುರಾಗ ಹೇಗಿತ್ತೆಂದು ತಿಳಿಸುವರು

**ಅಥ ತಮುತ್ಪತ್ತ್ಯೈವಾಭಿವ್ಯಜ್ಯಮಾನಭಗವಲ್ಲಕ್ಷಣಂ ಸಾಮ್ಯೋಪಶಮ-ವೈರಾಗ್ಯೈಶ್ವರ್ಯ ಮಹಾವಿಭೂತಿಭಿರನುದಿನಮೇಧಮಾನಾನುಭಾವಂ ಪ್ರಕೃತಯಃ ಪ್ರಜಾ ಬ್ರಾಹ್ಮಣಾಃ ದೇವಾತಾಶ್ಚಾವನಿತಲಸಮವನಾಯಾತಿತರಾಂ ಜಗೃಧುಃ ॥೧॥**




**ಅಥ** ಋಷಭಾವತಾರಾನಂತರ **ಉತ್ಪತ್ತ್ಯೈವ** ಹುಟ್ಟಿನಿಂದಲೇ **ಅಭಿವ್ಯಜ್ಯಮಾನ** ಕಾಣಿಸುವ **ಭಗವಲ್ಲಕ್ಷಣಂ** ಪಾದತಲದಲ್ಲಿ ವಜ್ರ ಅಂಕುಶ, ಪದ್ಮ ಚಿನ್ಹೆಗಳುಳ್ಳ **ಸಾಮ್ಯ** ಅವರವರಯೋಗ್ಯತೆ ತಕ್ಕಂತೆ ನೋಡಿಕೊಳ್ಳುವುದು **ಉಪಶಮ** ಭಗವನ್ನಿಷ್ಠೆ **ವೈರಾಗ್ಯ** ವಿಷಯಾಭಿಲಾಷೆ ಇಲ್ಲದಿರುವುದು **ಐಶ್ವರ್ಯ** ಈಶ್ವರ ಸಂಬಂಧಿಯಾದ ನಿಯಾಮಕತ್ವ ಮತ್ತು **ಮಹಾವಿಭೂತಿಭಿಃ** ಮಹಾಸಂಪತ್ತುಗಳಿಂದ **ಅನುದಿನಂ** ಪ್ರತಿನಿತ್ಯವೂ **ಏಧಮಾನಾನುಭಾವ** ವೃದ್ಧಿಯಾಗುತ್ತಿರುವ ಪ್ರಭಾವವುಳ್ಳ **ತಂ** ಋಷಭನನ್ನು **ಪ್ರಕೃತಯಃ** ಮಂತ್ರಿ ಮೊದಲಾದವರು **ಪ್ರಜಾಃ** ಪ್ರಜೆಗಳು **ಬ್ರಾಹ್ಮಣಾಃ** ಬ್ರಾಹ್ಮಣರು **ದೇವತಾಶ್ಚ** ದೇವತೆಗಳೂ ಸಹ **ಅವನಿತಲಸಮವನಾಯ** ಭೂಮಿಯನ್ನು ಚೆನ್ನಾಗಿ ಧಾರ್ಮಿಕವಾಗಿ ರಕ್ಷಿಸಲು **ಅತಿತರಾಂ ಜಗೃಧುಃ** ಇಚ್ಛಿಸಿದರು. ।।೧।।

## ಋಷಭ ಎಂದು ಅನ್ವರ್ಥ ನಾಮಕರಣ

ತಂದೆಯು ಅನ್ವರ್ಥ ನಾಮಕರಣ ಮಾಡಿದನೆಂದು ಹೇಳುವರು

**ತಸ್ಯ ಹವಾ ಇತ್ಥಂ ವರ್ಷ್ಮಣಾ ವರೀಯಸಾ ಬೃಹಚ್ಛ್ಲೋಕೇನೌಜಸಾ ಬಲೇನ ಶ್ರಿಯಾ ಯಶಸಾ ವೀರ್ಯಶೌರ್ಯಾಭ್ಯಾಂ ಚ ಪಿತಾ ಋಷಭ ಇತೀ ಈದೃಕ್ ನಾಮ ಚಕಾರ ।।೨।।**

**ತಸ್ಯ** ಅವತರಿಸಿದ ಶ್ರೀಹರಿಗೆ **ವರೀಯಸಾ** ಅತ್ಯಂತ ಶ್ರೇಷ್ಠವಾದ **ಬೃಹತ್ ಶ್ಲೋಕೇನ** ಯಾವ ದೇಹದ ವಿಷಯದಲ್ಲಿ ಕವಿಗಳ ದೊಡ್ಡ ಪದ್ಯಗಳುಂಟೋ ಅಂಥ **ವರ್ಷ್ಮಣಾ** ದೇಹದಿಂದ **ಓಜಸಾ** ಅವಷ್ಟಂಭ ಶಕ್ತಿಯಿಂದ (ತಡೆಯುವ ಶಕ್ತಿ) **ಬಲೇನ** ಬಲದಿಂದಲೂ **ಶ್ರಿಯಾ** ಕಾಂತಿಯಿಂದಲೂ **ಯಶಸಾ** ಕೀರ್ತಿಯಿಂದಲೂ **ವೀರ್ಯ** ಹಿಡಿದ ಕೆಲಸವನ್ನು ಕೊನೆಗಾಣಿಸುವ ಸಾಮರ್ಥ್ಯದಿಂದಲೂ **ಶೌರ್ಯಾಭ್ಯಾಂ ಚ** ಶತ್ರುಗಳನ್ನು ಗೆಲ್ಲುವ ಉತ್ಸಾಹಗಳಿಂದಲೂ **ಪಿತಾ** ತಂದೆಯಾದ ನಾಭಿರಾಜರು **ಇತ್ಥಂ** ಹೀಗೆಂದು ಆಲೋಚಿಸಿ ಋಷಭನೆಂದು **ಈದೃಕ್** ಅನ್ವರ್ಥವಾದ **ನಾಮ ಚಕಾರ** ಹೆಸರಿಟ್ಟರು.

ಋಷಭಶಬ್ದವು ರೂಢಿಯಿಂದ ಶ್ರೇಷ್ಠ ಎಂಬರ್ಥ ತಿಳಿಸುವುದು. ಯಾವುದರಿಂದ ಶ್ರೇಷ್ಠವೆಂದರೆ ಎಲ್ಲದರಿಂದಲೂ ಶ್ರೇಷ್ಠ ಎಂದು ಹೇಳಿರುವರು. ಯೋಗ್ಯತೆಯ ಬಲದಿಂದ ಬಂದ ಅರ್ಥ ತಿಳಿಸಲು ದೇಹ ಓಜ ಮುಂತಾಗಿ ಹೇಳಿದ್ದು. ಇವೆಲ್ಲವೂ ಋಷಭ ಶಬ್ದಾರ್ಥವಲ್ಲ. ।।೨।।

## ಇಂದ್ರದೇವರ ಸ್ಪರ್ಧೆ - ನಿರ್ಣಯ

**ಯಸ್ಯ ಹೀಂದ್ರಃ ಸ್ಪರ್ಧಮಾನೋ ಭಗವಾನ್ ವರ್ಷೇ ನ ವವರ್ಷ ತದವಧಾರ್ಯ ಭಗವಾನ್ ಋಷಭದೇವೋ ಯೋಗೇಶ್ವರಃ ಪ್ರಹಸ್ಯಾತ್ಮ-ಯೋಗಮಾಯಯಾ ಸ್ವವರ್ಷಮಾಂಜನಾಭಂ ನಾಮಾಭ್ಯವರ್ಷೀತ್ ।।೩।।**

**ಸ್ಪರ್ಧಮಾನಃ** ಋಷಭನೊಡನೆ ಸ್ಪರ್ಧೆ ತೋರುವ **ಭಗವಾನ್ ಇಂದ್ರಃ** ಆಗ ಇಂದ್ರನಾಗಿ ಸ್ವರ್ಗವನ್ನಾಳುತ್ತಿದ್ದ ಯಜ್ಞನಾಮಕನಾದ ಶ್ರೀಹರಿಯು **ತಸ್ಯ ವರ್ಷೇ** ಋಷಭನಾಮಕ ಹರಿಯು ಆಳುತ್ತಿರುವ ಭೂಖಂಡದಲ್ಲಿ **ನ ವವರ್ಷ** ಮಳೆಗರಿಯಲಿಲ್ಲ **ತದವಧಾರ್ಯ** ಅದನ್ನು ತಿಳಿದು **ಯೋಗೇಶ್ವರಃ** ಯೋಗೇಶ್ವರನಾದ **ಭಗವಾನ್** ಷಡ್ಗುಣೈಶ್ವರ್ಯ ಶಾಲಿಯಾದ **ಋಷಭದೇವಃ** ಋಷಭನಾಮಕ ಶ್ರೀಹರಿಯು **ಪ್ರಹಸ್ಯ** ನಕ್ಕು **ಆತ್ಮಯೋಗಮಾಯಯಾ** ತನ್ನ ಸ್ವರೂಪ ಸಾಮರ್ಥ್ಯದಿಂದ **ಆಂಜನಾಭಂ** ಅಂಜನದಂತೆ ಕಾಂತಿಯುಳ್ಳದ್ದರಿಂದ ಆಂಜನಾಭನೆನಿಸುವ **ನಾಮ** ಆ ಹೆಸರಿನ **ಸ್ವವರ್ಷಂ** ತನ್ನ ಖಂಡವನ್ನು **ಅಭ್ಯವರ್ಷೀತ್** ಮಳೆಯಿಂದ ಕೂಡಿದ್ದನ್ನಾಗಿ ಮಾಡಿದನು.

ಋಷಭನೊಡನೆ ಇಂದ್ರನು ಸ್ಪರ್ಧಿಸಿದನು ಎಂಬುದು ಸರಿಯಲ್ಲ. ಸ್ವಾಯಂಭುವ ಮನ್ವಂತರದಲ್ಲಿ ತಾನೇ ಋಷಭಾವತಾರವಾದುದು. ಆಗ ಯಜ್ಞನಾಮಕ ಶ್ರೀಹರಿಯೇ ಇಂದ್ರನು ಕಾರಣ ತಾನೇ ತನ್ನೊಡನೇ ಸ್ಪರ್ಧಿಸುವುದು ಹೇಗೆ ಸಾಧ್ಯ ಎಂಬ ಶಂಕೆಗೆ ಪ್ರಮಾಣದಿಂದ ಉತ್ತರಿಸುವರು.

> ತಾತ್ಪರ್ಯ ''ದುಷ್ಟಾನಾಂ ಮೋಹನಾರ್ಥಾಯ ಯಜ್ಞ ಇಂದ್ರಪದೇ ಸ್ಥಿತಃ ।
> ಪಸ್ಪರ್ಧ ಋಷಭೇಣೈವ ಸ್ವರೂಪೇಣ ಹರಿಃ ಸ್ವಯಂ ।। -ಇತಿ ವಾರಾಹೇ

ಸಾಕ್ಷಾತ್ ಶ್ರೀಹರಿಯ ಸ್ವರೂಪನಾದ ಯಜ್ಞರೂಪಿ ಶ್ರೀ ಪರಮಾತ್ಮನು ಇಂದ್ರನ ಪದವಿಯಲ್ಲಿ ಇದ್ದವನಾಗಿ ದುಷ್ಟರನ್ನು ಮೋಹಿಸುವುದಕ್ಕಾಗಿ ತನ್ನ ಸ್ವರೂಪನಾದ ಋಷಭರೂಪಿ ಪರಮಾತ್ಮನಿಂದಲೇ ಸ್ಪರ್ಧೆಯನ್ನು ತೋರಿಸಿದನು ಎಂದು ವರಾಹ ಪುರಾಣದಲ್ಲಿದೆ. ।।೩।।




## ನಾಭಿಯ ಪ್ರಶಂಸೆ

**ನಾಭಿಸ್ತು ಯಥಾಭಿಲಷಿತಂ ಸುಪ್ರಜಾಸ್ತ್ವಮವರುಧ್ಯ(ಅವಬುಧ್ಯ) ಪ್ರಮೋದಭರವಿಹ್ವಲೋ ಗದ್ಗದಾಕ್ಷರಯಾ ಗಿರಾ ಸ್ವೈರಂ ಗೃಹೀತನರಲೋಕ-ಸಮಾನಧರ್ಮಂ ಭಗವಂತಂ ಪುರಾಣಪುರುಷಂ ಮಾಯಾವಿಲಸಿತಮತಿರ್ವತ್ಸ ತಾತೇತಿ ಸಾನುರಾಗಮುಪಲಾಲಯನ್ ಪರಾಂ ನಿರ್ವೃತಿಮುಪಗತೋ ವಿದಿತಾನುರಾಗಃ ಪೌರಪ್ರಕೃತಿಜನಪದಾನಾಂ ರಾಜಾ ನಾಭಿರಾತ್ಮಜಂ ಸಮಯ-ಸೇತುರಕ್ಷಾಯಾಮಭಿಷಿಚ್ಯ ಬ್ರಾಹ್ಮಣೇಷೂಪನಿಧಾಯ ಸಹ ಮೇರುದೇವ್ಯಾ ವಿಶಾಲಾಯಾಂ ಪ್ರಸನ್ನನಿಪುಣೇನ ತಪಸಾ(ಮನಸಾ) ಸಮಾಧಿಯೋಗೇನ ನರನಾರಾಯಣಾಖ್ಯಂ ಭಗವಂತಂ ವಾಸುದೇವಂ ಉಪಾಸೀನಃ ಕಾಲೇನ ತನ್ಮಹಿಮಾನಮವಾಪ ಯತ್ರ ಹ ಪಾಂಡವ ಶ್ಲೋಕಾವುದಾಹರಂತಿ ॥೪॥**

**ನಾಭಿಃ ತು** ನಾಭಿರಾಜನಾದರೂ **ಯಥಾಭಿಲಷಿತಂ** ತನ್ನ ಇಚ್ಛೆಯಂತೆ **ಸುಪ್ರಜಾಸ್ತ್ವಂ** ಸತ್ಪುತ್ರತ್ವವನ್ನು **ಅವರುಧ್ಯ** ಪಡೆದು (ಅವಬುಧ್ಯ ಎಂಬ ಪಾಠವಿದ್ದಾಗ **ಆತ್ಮನಃ** ಎಂದು ಶೇಷ ಪೂರ್ತಿ ಮಾಡಿ ತನಗೆ ಸತ್ಪುತ್ರತ್ವವನ್ನು ತಿಳಿದು ಎಂದರ್ಥ) **ಪ್ರಮೋದಭರವಿಹ್ವಲಃ** ಬಹು ಸಂತೋಷಪರವಶನಾಗಿ **ಮಾಯಾವಿಲಸಿತಮತಿಃ** ಮೋಹಕ ಶಕ್ತಿಯಿಂದ ತನ್ನ ಮಗನೆಂದುಂಟಾದ ಬುದ್ಧಿಯುಳ್ಳವನಾಗಿ **ಸ್ವೈರಂ** ತನ್ನ ಇಚ್ಛೆಯಿಂದ **ಗೃಹೀತನರಲೋಕಸಮಾನಧರ್ಮಂ** ಮನುಷ್ಯರ ಆಕಾರ ಸದೃಶ ಆಕಾರವನ್ನು ಸ್ವೀಕರಿಸಿದ **ಪುರಾಣಪುರುಷಂ ಭಗವಂತಂ** ಪುರಾತನನಾದ ಅನಾದಿಯಾದ ಪೂರ್ಣಷಡ್ಗುಣನಾದ ಐಶ್ವರ್ಯಶಾಲಿಯಾದ ಋಷಭನನ್ನು **ವತ್ಸ** ಮಗುವೇ **ತಾತ** ಅಪ್ಪಾ **ಇತಿ** ಎಂದು **ಸಾನುರಾಗಂ** ಪ್ರೀತಿಯಿಂದ **ಲಾಲಯನ್** ಲಾಲನೆ ಮಾಡುತ್ತಾ **ಪರಾಂ ನಿರ್ವೃತಿಂ ಉಪಗತಃ** ಬಹುಸಂತೋಷವನ್ನು ಹೊಂದಿದನು. **ಪೌರಪ್ರಕೃತಿಜನಪದಾನಾಂ** ನಾಗರಿಕರ ಮತ್ತು ಮಂತ್ರಿ ಮುಂತಾದವರ (ಜನರ) **ವಿದಿತಾನುರಾಗಃ** ತನ್ನ ಮಗನಲ್ಲಿ ಮಾಡುವ ಪ್ರೀತಿಯನ್ನು ತಿಳಿದು **ರಾಜಾ ನಾಭಿಃ** ನಾಭಿ ರಾಜನು **ಆತ್ಮಜಂ** ಮಗನನ್ನು **ಸಮಯಸೇತುರಕ್ಷಾಯಾಂ** ತನ್ನ ಸಿದ್ಧಾಂತ ಮಾರ್ಗದ ತತ್ತತ್ಕಾಲಾನುಗುಣ ಧರ್ಮಮರ್ಯಾದೆಯ ರಕ್ಷಣೆಗಾಗಿ **ಅಭಿಷಿಚ್ಯ** ಪಟ್ಟಾಭಿಷೇಕ ಮಾಡಿ **ಬ್ರಾಹ್ಮಣೇಷು ಉಪನಿಧಾಯ** ಬ್ರಾಹ್ಮಣರಿಗೆ ಒಪ್ಪಿಸಿ (ರಾಜನು ನೀತಿಯನ್ನು ಬಿಡದಂತೆ ನೋಡಿ ಕೊಳ್ಳಲು ಬ್ರಾಹ್ಮಣರಿಗೆ ಪ್ರಾರ್ಥಿಸಿ) **ಮೇರುದೇವ್ಯಾ ಸಹ** ಹೆಂಡತಿಯೊಡನೆ **ವಿಶಾಲಾಯಾಂ** ಬದರಿಯಲ್ಲಿ **ಪ್ರಸನ್ನಃ** ಸರ್ವೇಂದ್ರಿಯ

ಜಯೋಪೇತವಾದ, ಆದ್ದರಿಂದಲೇ **ನಿಪುಣೇನ** ತನ್ನ ಕಾರ್ಯ ಮಾಡುವುದರಲ್ಲಿ ದಕ್ಷನಾದ **ತಪಸಾ** ತಪಸ್ಸಿನಿಂದ ಕೂಡಿದ **ಸಮಾಧಿಯೋಗೇನ** ಸಮಾಧಿಯೆಂಬ ಉಪಾಯದಿಂದ **ಭಗವಂತಂ ನರನಾರಾಯಣಾಖ್ಯಂ ವಾಸುದೇವಂ** ಭಗವಂತನಾದ ನರನಾರಾಯಣನೆಂಬ ಮುಕ್ತಿಪ್ರದವಾಸುದೇವನನ್ನು **ಉಪಾಸೀನಃ** ಉಪಾಸನೆ ಮಾಡುವನಾಗಿ **ಕಾಲೇನ** ಬಹುಕಾಲಾನಂತರ **ತನ್ಮಹಿಮಾನಂ ಅವಾಪ** ಪರಮಾತ್ಮನ ಧರ್ಮವಾದ ಜನನ ಮರಣ ಜರಾರಾಹಿತ್ಯವನ್ನು ಹೊಂದಿದನು. ।।೪।।

**ಹೇ ಪಾಂಡವೇಯ ಯತ್ರ ಶ್ಲೋಕೌ ಉದಾಹರಂತಿ**

**ಹೇ ಪಾಂಡವೇಯ** ಎಲೋ ಪರೀಕ್ಷಿತನೇ **ಯತ್ರ** ಯಾವನ ವಿಷಯದಲ್ಲಿ **ಶ್ಲೋಕೌ** ಶ್ಲೋಕಗಳು **ಉದಾಹರಂತಿ** ಉದಾಹರಿಸಲ್ಪಡುವವು.

**ಕೋಽನು ತತ್ಕರ್ಮ ರಾಜರ್ಷೇರ್ನಾಭೇರನ್ವಾಚರೇತ್ಪುಮಾನ್ ।**
**ಅಪತ್ಯತಾಮಗಾದ್ಯಸ್ಯ ಹರಿಃ ಶುದ್ಧೇನ ಕರ್ಮಣಾ** ।।೫।।

**ಬ್ರಹ್ಮಣ್ಯೋಽನ್ಯಃ ಕುತೋ ನಾಭೇರ್ವಿಪ್ರಾ ಮಂಗಲಪೂಜಿತಾಃ ।**
**ಯಸ್ಯ ಬರ್ಹಿಷಿ ಯಜ್ಞೇಶಂ ದರ್ಶಯಾಮಾಸುರೋಜಸಾ** ।।೬।।

**ಯಸ್ಯ** ಯಾವ ನಾಭಿರಾಜನ **ಶುದ್ಧೇನ ಕರ್ಮಣಾ** ಅಂತಃಕರಣ ಶುದ್ಧಿಯಿಂದ ಮಾಡಿ ಕರ್ಮದಿಂದ **ಹರಿಃ** ಶ್ರೀಮನ್ನಾರಾಯಣನು **ಅಪತ್ಯತಾಂ ಅಗಾತ್** ಮಗನಾದನೋ ಅಂಥ **ನಾಭೇಃ** ನಾಭಿರಾಜನ **ತತ್** ಪ್ರಸಿದ್ಧವಾದ **ಕರ್ಮ** ಕರ್ಮವನ್ನು **ಅನು** ಅವನ ಅನಂತರ **ಕೋಽನು ಪುಮಾನ್** ಯಾವನು ತಾನೇ **ಆಚರೇತ್** ಮಾಡಿಯಾನು (ಯಾರೂ ಮಾಡಲಾರರು ಎಂದು ಭಾವ). ।।೫।।

**ಯಸ್ಯ** ಯಾವನಿಗೆ **ಮಂಗಲಪೂಜಿತಾಃ ವಿಪ್ರಾಃ** ದಕ್ಷಿಣಾದಿಗಳಿಂದ ಸತ್ಕೃತರಾದ ಬ್ರಾಹ್ಮಣರು **ಬರ್ಹಿಷಿ** ಯಜ್ಞದಲ್ಲಿ **ಯಜ್ಞೇಶಂ** ಪರಮಾತ್ಮನನ್ನು **ಓಜಸಾ** ಮಂತ್ರಬಲದಿಂದ **ದರ್ಶಯಾಮಾಸುಃ** ತೋರಿಸಿದರೂ ಅಂತಹ **ನಾಭೇಃ ಅನ್ಯಃ** ನಾಭಿಯಿಂದ ಬೇರೆ **ಬ್ರಹ್ಮಣ್ಯಃ** ಬ್ರಾಹ್ಮಣ ಭಕ್ತರು **ಕುತಃ** ಯಾರು? (ನಾಭಿಯಂತಹ ಬ್ರಾಹ್ಮಣ ಭಕ್ತರು ಯಾರೂ ಇಲ್ಲ ಎಂದು ಭಾವ). ।।೬।।

## ಋಷಭನ ರಾಜ್ಯ - ಸಂತತಿ

**ಅಥ ಸ ಭಗವಾನ್ ಋಷಭಃ ಸ್ವವರ್ಷಂ ಕರ್ಮಕ್ಷೇತ್ರಮನುಮನ್ಯಮಾನಃ ಪ್ರದರ್ಶಿತ ಗುರುಕುಲವಾಸ ಉಪಲಬ್ಧವರ್ರೈರ್ಗುರುಭಿರನುಜ್ಞಾತೋ ಗೃಹಮೇಧಿನಾಂ ಧರ್ಮಾನನುಶಿಕ್ಷಮಾಣೋ ಜಯಂತ್ಯಾಮಿಂದ್ರದತ್ತಾಯಾ-ಮುಭಯಲಕ್ಷಣಂ ಧರ್ಮಂ ಸಮಾಮ್ನಾಯಾಮ್ನಾತಮಭಿಯುಂಜನ್ನಾ-ತ್ಮಜಾನಾಮಾತ್ಮಸಮಾನಾನಾಂ ಶತಂ ಜನಯಾಮಾಸ ॥೭॥**

**ಅಥ** ನಂತರ **ಭಗವಾನ್ ಋಷಭಃ** ಋಷಭ ನಾಮಕ ಭಗವಂತನು **ಸ್ವವರ್ಷಂ** ತಾನು ಆಳುವ ಖಂಡವನ್ನು **ಕರ್ಮಕ್ಷೇತ್ರಂ** ಕರ್ಮಭೂಮಿ ಎಂದು **ಅನುಮನ್ಯಮಾನಃ** ಸಂಮತಿಸಿದವನಾಗಿ (ತಿಳಿದವನಾಗಿ) **ಪ್ರದರ್ಶಿತಗುರುಕುಲವಾಸಃ** ಎಲ್ಲರೂ ಗುರುಕುಲವಾಸ ಮಾಡಬೇಕೆಂದು ತಿಳಿಸಲು ಗುರುಕುಲವಾಸ ಮಾಡಿ ತೋರಿಸಿ **ಉಪಲಬ್ಧವರ್ರೈಃ** ಗುರು ದಕ್ಷಿಣೆ ಪಡೆದ **ಗುರುಭಿಃ** ಗುರುಗಳಿಂದ **ಅನುಜ್ಞಾತಃ** ಅಪ್ಪಣೆ ಪಡೆದು **ಗೃಹಮೇಧಿನಾಂ ಧರ್ಮಂ** ಗೃಹಸ್ಥಾಶ್ರಮಿಗಳ ಧರ್ಮವನ್ನು **ಅನುಶಿಕ್ಷಮಾಣಃ** ತಿಳಿಸುವವನಾಗಿ **ಇಂದ್ರದತ್ತಾಯಾಂ** ಇಂದ್ರನಿಂದ ಕೊಡಲ್ಪಟ್ಟ **ಜಯಂತ್ಯಾಂ** ಲಕ್ಷ್ಮೀ ಅವತಾರಳಾದ ಹೆಂಡತಿಯಲ್ಲಿ **ಉಭಯಲಕ್ಷಣಂ** ಪ್ರವೃತ್ತ ಮತ್ತು ನಿವೃತ್ತ ಎಂಬ ಎರಡು ವಿಧವಾದ **ಸಮಾಮ್ನಾಯಾಮ್ನಾತಂ** ನಿರ್ದೋಷವಾದ ವೇದದಲ್ಲಿ ವಿಹಿತವಾದ **ಧರ್ಮಂ** ಧರ್ಮವನ್ನು **ಅಭಿಯುಂಜನ್** ಚೆನ್ನಾಗಿ ಮಾಡುತ್ತಾ **ಆತ್ಮಸಮಾನಾನಾಂ** ಶುಭಲಕ್ಷಣಗಳಿಂದ ತನಗೆ ಸಮಾನರಾದ **ಆತ್ಮಜಾನಾಂ ಶತಂ** ನೂರು ಜನ ಮಕ್ಕಳನ್ನು **ಜನಯಾಮಾಸ** ಹುಟ್ಟಿಸಿದನು. ॥೭॥

## ಜ್ಯೇಷ್ಠಪುತ್ರ ಭರತ

**ಯೇಷಾಂ ಖಲು ಸ ಮಹಾಯೋಗೀ ಭರತೋ ಜ್ಯೇಷ್ಠಃ ಶ್ರೇಷ್ಠಗುಣ ಆಸೀದ್ಯೇನೇದಂ ವರ್ಷಂ ಭಾರತಮಿತಿ ವ್ಯಪದಿಶಂತಿ ॥೮॥**

**ಯೇಷಾಂ ಖಲು** ಯಾವ ಈ ನೂರು ಮಂದಿ ಮಕ್ಕಳಲ್ಲಿ **ಮಹಾಯೋಗೀ** ದೊಡ್ಡ ಸಾಧಕನಾದ **ಭರತಃ** ಭರತನು **ಜ್ಯೇಷ್ಠಃ** ಹಿರಿಯನು **ಶ್ರೇಷ್ಠಗುಣಃ** ಉತ್ತಮ ಗುಣವಂತನು **ಯೇನ** ಯಾವ ಭರತನು ಆಳಿದ್ದರಿಂದ **ಇದಂ** ಈ ಖಂಡವನ್ನು **ಭಾರತಂ ಇತಿ ವ್ಯಪದಿಶಂತಿ** ಭಾರತವೆಂದು ಕರೆಯುವರು. ॥೮॥

## ಉಳಿದ 99 ಪುತ್ರರು

**ತಮನು ಕುಶಾವರ್ತ ಇಲಾವರ್ತೋ ಬ್ರಹ್ಮಾವರ್ತ ಆರ್ಯಾವರ್ತೋ ಮಲಯಕೇತುರ್ಭದ್ರಸೇನ ಇಂದ್ರಸ್ಪೃಕ್ ವಿದರ್ಭಃ ಕೀಕಟ ಇತಿ ನವ ನವತಿಪ್ರಧಾನಾಃ ॥೯॥**

ತಂ ಅನು ಭರತನ ನಂತರ **ಕುಶಾವರ್ತ ಇಲಾವರ್ತ ಬ್ರಹ್ಮಾವರ್ತ ಆರ್ಯಾವರ್ತ ಮಲಯಕೇತು ಭದ್ರಸೇನ ಇಂದ್ರಸ್ಪೃಕ್ ವಿದರ್ಭ ಕೀಕಟ ಇತಿ** ಎಂಬ **ನವ** ಒಂಭತ್ತು ಜನ **ನವತಿಪ್ರಧಾನಾಃ** ತೊಂಭತ್ತು ಜನರಿಗಿಂತ ಶ್ರೇಷ್ಠರು ಎಂದರ್ಥ. ॥೯॥

**ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ ಆವಿರ್ಹೋತ್ರೋಽಥ ದ್ರುಮಿಲಶ್ಚಮಸಃ ಕರಭಾಜನ ಇತಿ ಭಾಗವತಧರ್ಮದರ್ಶನಾಃ ನವ ಮಹಾಭಾಗವತಾಃ ತೇಷಾಂ ಸುಚರಿತಂ ಭಗವನ್ಮಹಿಮೋಪಬೃಂಹಿತಂ ವಸುದೇವನಾರದಸಂವಾದರೂಪಂ ಉಪಶಮಾಯಮಾನಂ ಉಪರಿಷ್ಟಾ-ದ್ವರ್ಣಯಿಷ್ಯಾಮಃ ॥೧೦॥**

ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ, ಕರಭಾಜನ **ಇತಿ** ಎಂಬ ಒಂಭತ್ತು ಜನರು **ಭಾಗವತಧರ್ಮದರ್ಶನಾಃ** ಭಾಗವತಧರ್ಮಗಳನ್ನು ತಿಳಿಸುವವರು **ಮಹಾಭಾಗವತಾಃ** ದೊಡ್ಡ ಭಗವದ್ಭಕ್ತರು **ತೇಷಾಂ** ಅವರ **ಸುಚರಿತಂ** ಒಳ್ಳೆಯ ಚರಿತ್ರೆಯನ್ನು **ಭಗವನ್ಮಹಿಮೋಪಬೃಂಹಿತಂ** ಭಗವಂತನ ಮಹಿಮೆಯಿಂದ ಪೂರ್ಣವಾದುದು **ವಸುದೇವನಾರದಸಂವಾದರೂಪಂ** ವಸುದೇವ ನಾರದ ಸಂವಾದ ಮೂಲಕ ತಿಳಿಸಲ್ಪಡುವ **ಉಪಶಮಾಯನಂ** ಭಗವನ್ನಿಷ್ಠೆಯ ಪ್ರಕಾರವನ್ನು ತಿಳಿಸುವುದನ್ನು **ಉಪರಿಷ್ಟಾತ್** ಏಕಾದಶ ಸ್ಕಂದದಲ್ಲಿ **ವರ್ಣಯಿಷ್ಯಾಮಃ** ತಿಳಿಸುವೆವು. ॥೧೦॥

**ಯವೀಯಾಂಸಃ ಏಕಾಶಿತಿರ್ಜಾಯಂತೆಯಾಃ ಪಿತುರಾದೇಶಕರಾಃ ಮಹಾಶಾಲೀನಾಃ ಮಹಾಶ್ರೋತ್ರಿಯಾ ಯಜ್ಞಶೀಲಾಃ ಕರ್ಮಶ್ರದ್ಧಾಃ ಬ್ರಾಹ್ಮಣಾ ಬಭೂವುಃ ॥೧೧॥**

**ಯವೀಯಾಂಸಃ** ಚಿಕ್ಕವರಾದ **ಏಕಾಶೀತಿ** ಎಂಭತ್ತೊಂದು ಜನ **ಜಾಯಂತೇಯಾಃ** ಜಯಂತಿ ಪುತ್ರರು **ಮಹಾಶಾಲೀನಾಃ** ಪ್ರತಿವರ್ಷವೂ ಯಜ್ಞ ಮಾಡುವುದರಿಂದ ಮಹಾಶಾಲೀನರೆಂದೆನಿಸಿದವರು **ಮಹಾಶ್ರೋತ್ರಿಯಾಃ** ಒಳ್ಳೆಯ ವೇದಾಧ್ಯಯನ ಮಾಡಿದವರು **ಯಜ್ಞಶೀಲಾಃ** ಯಜ್ಞ ಮಾಡುವ ಸ್ವಭಾವದವರು **ಕರ್ಮಶ್ರದ್ಧಾಃ** ಕರ್ಮಗಳಲ್ಲಿ ಶ್ರದ್ಧೆಯುಳ್ಳವರು **ಪಿತುಃ ಆದೇಶಕರಾಃ** ತಂದೆಯ ಆಜ್ಞೆಯನ್ನು ನಡೆಸುವವರು **ಬ್ರಾಹ್ಮಣಾ ಬಭೂವುಃ** ವಿಶ್ವಾಮಿತ್ರರಂತೆ ಬ್ರಾಹ್ಮಣರಾದರು. ॥೧೧॥

## ಋಷಭನ ರಾಜ್ಯಭಾರ

**ಭಗವಾನ್ ಋಷಭಸಂಜ್ಞ ಆತ್ಮತಂತ್ರಃ ಸ್ವಯಂ ನಿತ್ಯನಿವೃತ್ತಾನರ್ಥಪರಂಪರಃ ಕೇವಲಾನಂದಾನುಭವ ಈಶ್ವರ ಏವಂ ವಿಪರೀತವತ್ ಕರ್ಮಾಣ್ಯಾರಭಮಾಣಃ ಕಾಲೇನಾನುಗತಂ ಧರ್ಮಮಾಚಾರೇಣೋಪಶಿಕ್ಷಯನ್ ಅತದ್ವಿದ್ವಾಂಸ-ಮುಪಶಾಂತೋ ಮೈತ್ರಃ ಕಾರುಣಿಕೋ ಧರ್ಮಾರ್ಥಯಶಃಪ್ರಜಾನಂದಾ-ಮೃತಾವಿರೋಧೇನ ಗೃಹೇಷು ಲೋಕಾನ್ನಿಯಮಯತ್ (ಅರಮಯತ್) ॥೧೨॥**

**ಭಗವಾನ್ ಋಷಭಸಂಜ್ಞಃ** ಋಷಭನಾಮಕ ಶ್ರೀಹರಿಯು **ಆತ್ಮತಂತ್ರಃ** ಸ್ವತಂತ್ರನು **ಸ್ವಯಂ** ತಾನು ತಾನಾಗಿಯೇ **ನಿತ್ಯನಿವೃತ್ತಾನರ್ಥಪರಂಪರಃ** ಯಾವಾಗಲೂ ಯಾವ ಪಾರತಂತ್ರ್ಯ ದುಃಖ ಮುಂತಾದ ದೋಷ ಪರಂಪರೆ ಇಲ್ಲದವನು **ಕೇವಲಾನಂದಾನುಭವಃ** ಆನಂದ ಜ್ಞಾನಗಳೇ ಸ್ವರೂಪವಾಗಿ ಉಳ್ಳವನು **ಈಶ್ವರಃ** ಸರ್ವಸಮರ್ಥನೂ ಆದವನು **ಏವಂ** ಈ ರೀತಿ **ವಿಪರೀತವತ್** ಪ್ರಾಕೃತ ಜನರಂತೆ **ಕರ್ಮಾಣಿ ಆರಭಮಾಣಃ** ಕರ್ಮಗಳನ್ನು ಮಾಡುವವನಾಗಿ **ಕಾಲೇನ ಅನುಗತಂ** ಕಾಲಕ್ರಮದಿಂದ ಅನೂಚಾನವಾಗಿ ನಡೆದು ಬಂದ **ಧರ್ಮಂ** ಧರ್ಮವನ್ನು **ಆಚಾರೇಣ** ತಾನು ಅನುಷ್ಠಾನ ಮಾಡಿ **ಅತದ್ವಿದ್ವಾಂಸಂ** ಧರ್ಮವನ್ನು ಬ್ರಹ್ಮನನ್ನು ತಿಳಿಯದವರಿಗೆ **ಉಪಶಿಕ್ಷಯನ್** ಕಲಿಸುವವನಾಗಿ **ಕಾರುಣಿಕಃ** ದಯಾಳುವಾಗಿ **ಧರ್ಮಾರ್ಥಯಶಃ** ಧರ್ಮ, ಅರ್ಥ, ಕೀರ್ತಿ, **ಪ್ರಜಾಃ** ಮಕ್ಕಳು **ಆನಂದ** ಭೋಗ **ಅಮೃತ** ಮೋಕ್ಷಗಳಿಗೆ **ಅವಿರೋಧೇನ** ವಿರೋಧವಾಗದಂತೆ **ಗೃಹೇಷು** ಗೃಹಸ್ಥಾಶ್ರಮದಲ್ಲಿದ್ದು **ಲೋಕಾನ್** ಜನರನ್ನು **ನಿಯಮಯತ್** ನಿಯಮಿಸಿದನು (**ಅರಮಯತ್** ಸಂತೋಷಗೊಳಿಸಿದನು). ॥೧೨॥

ತಾನು ಅನುಷ್ಠಾನ ಮಾಡುವುದರಿಂದ ಜನರಿಗೆ ಹೇಗೆ ಕಲಿಸಿದನು ಎಂಬುದನ್ನು ಇಲ್ಲಿ ಉಪಪಾದಿಸುವರು

**ಯಚ್ಛೀರ್ಷಣ್ಯಾಚರಿತಂ ತದನುವರ್ತತೇ ಲೋಕಃ ॥೧೩॥**

**ಶೀರ್ಷಣ್ಯಾಚರಿತಂ** ಶ್ರೇಷ್ಠರಾದವರು ಮಾಡಿದ್ದು **ಯತ್** ಯಾವುದೂ **ತತ್** ಅದನ್ನು **ಲೋಕಃ** ಜನರು **ಅನುವರ್ತತೇ** ಅನುಸರಿಸುವರು. **ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ** ಎಂದು ಸ್ಮೃತಿಯಿದೆ. ॥೧೩॥

**ಯದಪಿ ಸ್ವವಿದಿತಂ ಸಕಲಂ ಧರ್ಮಂ ಬ್ರಾಹ್ಮಂ ಗುಹ್ಯಂ ಬ್ರಾಹ್ಮಣೈ-ರ್ದರ್ಶಿತಮಾರ್ಗೇಣ ಸಾಮಾದಿಭಿರುಪಾಯೈರ್ಜನತಾಮನುಶಶಾಸ ॥೧೪॥**

**ಯದಪಿ** ಯದ್ಯಪಿ **ಬ್ರಾಹ್ಮಂ** ವೇದೋಕ್ತವಾದ **ಗುಹ್ಯಂ** ರಹಸ್ಯವಾದ **ಸಕಲಂ ಧರ್ಮಂ** ಎಲ್ಲ ಧರ್ಮಸ್ವರೂಪವು **ಸ್ವವಿದಿತಂ** ತನ್ನಿಂದ ತಿಳಿಯಲ್ಪಟ್ಟಿದ್ದೇ **ತಥಾಪಿ** ಆದರೂ **ಬ್ರಾಹ್ಮಣೈಃ** ಬ್ರಾಹ್ಮಣರಿಂದ **ದರ್ಶಿತಮಾರ್ಗೇಣ** ತೋರಿಸಿದ ಹಾದಿಯಿಂದ **ಸಾಮಾದಿಭಿಃ ಉಪಾಯೈಃ** ಸಾಮ ದಾನ ಭೇದ ದಂಡಗಳಿಂದ **ಜನತಾಂ** ಜನಸಮೂಹವನ್ನು **ಅನುಶಶಾಸ** ಶಿಕ್ಷಿಸಿದನು. ಬ್ರಾಹ್ಮಣರನ್ನು ಕೇಳಿಯೇ ಶಿಕ್ಷಣವಿತ್ತನು. ॥೧೪॥

**ದ್ರವ್ಯದೇಶಕಾಲವಯಃಶ್ರದ್ಧರ್ತ್ವಿಗ್ ವಿವಿಧೋದ್ದೇಶೋಪಚಿತೈಃ ಸರ್ವೈರಪಿ ಕ್ರತುಭಿಃ ಯಥೋಪದೇಶಂ ಶತಕೃತ್ವ ಇಯಾಜ ॥೧೫॥**

**ದ್ರವ್ಯದೇಶಕಾಲವಯಃ** '**ಯುವೈವ ಧರ್ಮಮನ್ವಿಚ್ಛೇತ್**' ಎಂಬ ನುಡಿಯಂತೆ ಯೌವ್ವನದಲ್ಲಿಯೇ ದ್ರವ್ಯ, ದೇಶ, ಕಾಲ, ಶ್ರದ್ಧೆ, ಋತ್ವಿಜರಿಂದ ಕೂಡಿದ **ವಿವಿಧ ಉಪಚಿತೈಃ** ಬೇರೆ ಬೇರೆ ದೇವತೆಗಳನ್ನುದ್ದೇಶಿಸಿ **ಸರ್ವೈಃ** ಎಲ್ಲ **ಕ್ರತುಭಿಃ** ಯಜ್ಞಗಳಿಂದ **ಯಥೋಪದೇಶಂ** ವಿಧಿಯಲ್ಲಿ ಹೇಳಿದಂತೆ **ಶತಕೃತ್ವಃ** ನೂರು ಬಾರಿ **ಇಯಾಜ** ಯಜ್ಞ ಮಾಡಿದನು. ॥೧೫॥

**ಭಗವತಾ ಋಷಭೇಣ ಪರಿರಕ್ಷಮಾಣ ಏತಸ್ಮಿನ್ ವರ್ಷೇ ನ ಕಶ್ಚನ ಪುರುಷಃ ವಾಂಛತಿ ಅವಿದ್ಯಮಾನಮಿವ ಆತ್ಮನೋಽನ್ಯಸ್ಮಾತ್ ಕಥಂಚನ ಕಿಮಪಿ ಕರ್ಹಿಚಿದಪೇಕ್ಷತೇ ಭರ್ತರ್ಯನುಸವನಂ ವಿಜೃಂಭಿತಸ್ನೇಹಾತಿಶಯ-ಮಂತರೇಣ ॥೧೬॥**

**ಏತಸ್ಮಿನ್ ವರ್ಷೇ** ಈ ಭರತ ಖಂಡದಲ್ಲಿ **ಭಗವತಾ ಋಷಭೇಣ** ಋಷಭ ನಾಮಕ ಪರಮಾತ್ಮನಿಂದ **ಪರಿರಕ್ಷಮಾಣಃ** ಎಲ್ಲ ರೀತಿಯಿಂದ ರಕ್ಷಿಸಲ್ಪಡುವ **ಕಶ್ಚನ ಪುರುಷಃ** ಯಾವನೊಬ್ಬನೂ **ಭರ್ತರಿ** ಸ್ವಾಮಿಯಾದ ಋಷಭನಲ್ಲಿ **ಅನುಸವನಂ** ಪ್ರತಿನಿತ್ಯವೂ **ವಿಜೃಂಭಿತಃ** ಅಭಿವೃದ್ಧವಾದ **ಸ್ನೇಹಾತಿಶಯಮಂತರೇಣ** ಭಕ್ತಿಯ ಉತ್ಕರ್ಷವನ್ನು ಬಿಟ್ಟು **ಕಿಮಪಿ** ಏನನ್ನೂ **ಕರ್ಹಿಚಿತ್** ಯಾವ ಕಾಲದಲ್ಲಿಯೂ **ಕಥಂಚನ** ಯಾವ ರೀತಿಯಿಂದಲೂ **ಆತ್ಮನೋ ಅನ್ಯಸ್ಮಾತ್** ಬೇರೆಯವರಿಂದ **ಅವಿದ್ಯಮಾನಮಿವ ನ ವಾಂಛತಿ** ಇಲ್ಲದಿರುವ ಮೊಲದ ಕೊಂಬನ್ನು ಕೇಳದಿರುವಂತೆ ಕೇಳುವುದಿಲ್ಲ. (ಅಪೇಕ್ಷಿತವಾದುದೇನೂ ಇಲ್ಲವೋ ಎನ್ನುವಂತೆ ಅಪೇಕ್ಷಿಸುತ್ತಿರಲಿಲ್ಲ) ಅಥವಾ ತನ್ನಲ್ಲಿ ಇಲ್ಲದ್ದನ್ನು ಹೇಗೆ ಕೇಳುವನೋ ಹಾಗೆ (ಇದ್ದದ್ದನ್ನು ಕೇಳುವದಿಲ್ಲ) ಹಾಗೆ ಋಷಭನಾಮಕ ಅನುಗ್ರಹದಿಂದ ಎಲ್ಲವನ್ನೂ ಹೊಂದಿದ್ದರಿಂದ ಅಪೇಕ್ಷಿಸುತ್ತಿರಲಿಲ್ಲ ಎಂದು ವ್ಯತಿರೇಕ ದೃಷ್ಟಾಂತವೆಂದು ತಿಳಿಯಬೇಕು. ಅಪೇಕ್ಷಿತವಾದುದು ಸ್ವಾಮಿ ಭಕ್ತಿಯೊಂದೇ ಎಂದು ಭಾವ. ||೧೭||

**ಸ ಕದಾಚಿದಟಮಾನೋ ಭಗವಾನ್ನೃಷಭೋ ಬ್ರಹ್ಮಾವರ್ತಂ ಗತೋ ಬ್ರಹ್ಮರ್ಷಿಪ್ರವರ ಸಭಾಯಾಂ ಪ್ರಜಾನಾಂ ನಿಶಾಮಯಂತೀನಾಂ ಆತ್ಮಜಾನ್ ಅವಹಿತಾತ್ಮನಃ ಪ್ರಶ್ರಯ ಪ್ರಣಯಭರಂ ಸುಯಂತ್ರಿತಾನಪಿ ಉಪಶಿಕ್ಷಯನ್ ಇತಿ ಹೋವಾಚ ||೧೭||**

**ಸಃ ಭಗವಾನ್ ಋಷಭಃ** ಆ ಋಷಭನಾಮಕ ಪರಮಾತ್ಮನು **ಕದಾಚಿತ್** ಒಂದು ಸಲ **ಅಟಮಾನಃ** ಸಂಚಾರ ಮಾಡುತ್ತಾ **ಬ್ರಹ್ಮಾವರ್ತಂ ಗತಃ** ಬ್ರಹ್ಮಾವರ್ತ ದೇಶಕ್ಕೆ ಬಂದವನಾಗಿ **ಬ್ರಹ್ಮರ್ಷಿಪ್ರವರಸಭಾಯಾಂ** ಶ್ರೇಷ್ಠರಾದ ಬ್ರಹ್ಮರ್ಷಿಗಳ ಸಭೆಯಲ್ಲಿ **ಪ್ರಜಾನಾಂ ನಿಶಾಮಯಂತಿನಾಂ** ಪ್ರಜರು ಕೇಳುತ್ತಿರಲು **ಅವಹಿತಾತ್ಮನಃ** ಹೇಳಿದ್ದನ್ನು ಗ್ರಹಣಮಾಡುವುದರಲ್ಲಿ ನಿರತರಾದ **ಪ್ರಶ್ರಯಪ್ರಣಯಭರಂ** ತುಂಬು ವಿನಯ, ಪ್ರೀತಿ ಮುಂತಾದ ಗುಣಗಳಿಂದ **ಸುಯಂತ್ರಿತಾನ್** ಸಂಪೂರ್ಣವಶರಾದ **ಆತ್ಮಜಾನ್** ಮಕ್ಕಳನ್ನು **ಉಪಶಿಕ್ಷಯನ್** ಉಪದೇಶಿಸುತ್ತಾ (ಪ್ರಜರಿಗಾಗಿ) **ಇತಿ** ಮುಂದೆ ಹೇಳುವಂತೆ **ಉವಾಚ ಹ** ಹೇಳಿದನು. ||೧೭||

**|| ಇಲ್ಲಿಗೆ ೪ನೇ ಅಧ್ಯಾಯವು ಮುಗಿಯಿತು ||**

★★★

## ನಾಲ್ಕನೇ ಅಧ್ಯಾಯದ ಸಾರ

ಶ್ರೀಹರಿಯು ಅವತರಿಸಿದ ಮೇಲೆ ಅಮಾತ್ಯರೇ ಮೊದಲಾದ ಪ್ರಜೆಗಳೂ ಬ್ರಾಹ್ಮಣರೂ ದೇವತೆಗಳೂ ಅವನನ್ನು ಧರ್ಮಾನುಗುಣವಾಗಿ ಭೂಪಾಲನೆಗಾಗಿ ಅತಿಶಯವಾಗಿ ಸ್ವೀಕರಿಸಿದರು. ಹುಟ್ಟಿನಿಂದಲೇ ಅವನಲ್ಲಿ ಭಗವಂತನ ಚಿಹ್ನೆಗಳು ವ್ಯಕ್ತವಾಗಿ ಕಾಣುತ್ತಿದ್ದವು. ಜನರ ಯೋಗ್ಯತೆಗೆ ತಕ್ಕಂತೆ ನೋಡಿಕೊಳ್ಳುವುದು, ಭಗವನ್ನಿಷ್ಠೆ, ವಿಷಯಗಳಲ್ಲಿ ಅನಾಸಕ್ತಿ, ನಿಯಾಮಕತೆ ಮತ್ತು ಸಮಸ್ತ ಸಂಪತ್ತುಗಳಿಂದ ನಿತ್ಯವೂ ಅವನ ಸಾಮರ್ಥ್ಯವು ಹೆಚ್ಚುತ್ತಲೇ ಇತ್ತು. ಹೀಗೆ ಅವನಿಗೆ ಜ್ಞಾನಿಗಳಿಂದ ಕೀರ್ತಿತವಾದ ಶ್ರೇಷ್ಠವಾದ ದೇಹವಿದ್ದುದರಿಂದಲೂ ಓಜಸ್ಸು, ಬಲ, ಕಾಂತಿ, ಯಶಸ್ಸು, ವೀರ್ಯ ಮತ್ತು ಶೌರ್ಯಗಳಿಂದಲೂ ಅನ್ವರ್ಥವಾದ ಋಷಭನೆಂಬ ಹೆಸರನ್ನೇ ತಂದೆಯಾದ ನಾಭಿರಾಜರು ಇಟ್ಟರು. ಆಗ ಇಂದ್ರನಾಗಿದ್ದ ಯಜ್ಞನಾಮಕನಾದ ಶ್ರೀಹರಿಯು ಸ್ಪರ್ಧಿಸುವವನಂತೆ ಇವರ ಭೂಖಂಡದಲ್ಲಿ ಮಳೆಸುರಿಸಲಿಲ್ಲ. ಇದನ್ನು ನೋಡಿ ಯೋಗೇಶ್ವರನಾದ ಋಷಭನಾಮಕನಾದ ಭಗವಂತನು ನಕ್ಕು ತನ್ನ ಸ್ವರೂಪ ಸಾಮರ್ಥ್ಯದಿಂದ ತನ್ನ ಅಂಜನಾಭ ಖಂಡದಲ್ಲಿ ಮಳೆಸುರಿಸಿದನು. ನಾಭಿರಾಜರು ತಮ್ಮ ಇಷ್ಟದಂತೆ ಒಳ್ಳೆಯ ಮಗನಾದನೆಂದು ತಿಳಿದು ಬಹುಸಂತಸಗೊಂಡರು. ಸ್ವೇಚ್ಛೆಯಿಂದ ಮಾನವಧರ್ಮಗಳನ್ನು ಸ್ವೀಕರಿಸಿದ್ದ ಆ ಪರಮ ಪುರುಷನಾದ ಋಷಭನನ್ನು ಶ್ರೀಹರಿಯ ಮೋಹಕ ಶಕ್ತಿಗೆ ವಶವಾದ ಬುದ್ಧಿಯುಳ್ಳ ಈ ರಾಜರು ಗದ್ಗದ ಮಾತುಗಳಿಂದ ವತ್ಸ ! ತಾತ ! ಎಂದು ಪ್ರೀತಿಯಿಂದ ಮುದ್ದಿಸುತ್ತ ಅತ್ಯಂತ ಸುಖವನ್ನು ಅನುಭವಿಸುತ್ತಿದ್ದರು. ಪಟ್ಟಣಿಗರ, ಪ್ರಕೃತಿ (ಮಂತ್ರಿ ಮುಂತಾದ) ಮತ್ತು ದೇಶದ ಜನರ ಅನುರಾಗವನ್ನು ಮನಗಂಡು ಆ ರಾಜರು ತಮ್ಮ ಮಗನನ್ನು ಧರ್ಮರಕ್ಷಣೆಗಾಗಿ ರಾಜ್ಯದಲ್ಲಿ ಪಟ್ಟಾಭಿಷೇಕ




ಮಾಡಿದರು. ಬ್ರಾಹ್ಮಣರ ಇಚ್ಛೆಯಂತೆ ನಡೆಯಬೇಕೆಂದು ಮಗನಿಗೆ ಹೇಳಿ ಮೇರುದೇವಿಯೊಂದಿಗೆ ಬದರಿಕಾಶ್ರಮಕ್ಕೆ ತೆರಳಿದರು. ಅಲ್ಲಿ ನರನಿಂದ ಸಹಿತನಾದ ನಾರಾಯಣನೆಂಬ ಶ್ರೀಹರಿಯನ್ನು ಏಕಾಗ್ರಚಿತ್ತತೆಯಿಂದ ಕೂಡಿದ ನಿಪುಣ ತಪಸ್ಸಿನಿಂದ ಪ್ರಸನ್ನೀಕರಿಸಿಕೊಂಡರು. ಅವನನ್ನೇ ಉಪಾಸಿಸುತ್ತಾ ಭಕ್ತ್ಯಾದಿ ಸಾಧನಸಾಮಾಗ್ರಿಗಳನ್ನು ಕಾಲಕ್ರಮದಲ್ಲಿ ಅಭಿವೃದ್ಧಿಮಾಡಿಕೊಂಡು ಶ್ರೀಹರಿಯಂತೆ ಜರಾಮರಣರಹಿತವಾದ ಮೋಕ್ಷಾವಸ್ಥೆಗೆ ಅವಕಾಶ ಮಾಡಿಕೊಂಡರು. ಪರೀಕ್ಷಿತನೇ! ಜ್ಞಾನಿಗಳು ಎರಡು ಶ್ಲೋಕಗಳಿಂದ ನಾಭಿರಾಜರನ್ನು ಹೀಗೆ ಸ್ತುತಿಸುವರು. ನಾಭಿರಾಜರು ಶುದ್ಧವಾದ ಯಾಗವನ್ನು ಮಾಡಿದರು. ಇದಕ್ಕಾಗಿ ಶ್ರೀಹರಿಯು ಅವರ ಮಗನಾಗಲು ಒಪ್ಪಿದನು. ಈ ರಾಜಋಷಿಗಳು ಮಾಡಿದಂತಹ ಕರ್ಮವನ್ನು ಯಾರೂ ಆಚರಿಸುಲಾರರು. ಇವರು ಮಾಡಿದ ಯಜ್ಞಗಳಲ್ಲಿ ದಕ್ಷಿಣೆ ಮೊದಲಾದವುಗಳಿಂದ ಪೂಜಿತರಾದ ಬ್ರಾಹ್ಮಣರು ತಮ್ಮ ತಪಸ್ಸು ಮಂತ್ರಗಳ ಸಾಮರ್ಥ್ಯದಿಂದ ಯಜ್ಞ ನಿಯಾಮಕನಾದ ಶ್ರೀಹರಿಯನ್ನೇ ಪ್ರತ್ಯಕ್ಷ ಮಾಡಿಸಿಕೊಟ್ಟರು. ಆ ನಾಭಿರಾಜರಿಗಿಂತ ಬ್ರಾಹ್ಮಣ ಭಕ್ತರು ಮತ್ತೊಬ್ಬರಿಲ್ಲ.

ಋಷಭದೇವನು ತಾನು ಅವತರಿಸಿದ ಭೂಖಂಡವು ಕರ್ಮಭೂಮಿ ಎಂದು ತಿಳಿದು ಇತರರಿಗೆ ಮಾರ್ಗತೋರಲು ಗುರುಕುಲದಲ್ಲಿ ವಾಸಮಾಡಿದಂತೆ ತೋರಿಸಿದನು. ಗುರುಗಳಿಗೆ ಗುರುದಕ್ಷಿಣೆ ಮೊದಲಾದವನ್ನು ಕೊಟ್ಟು ಅವರಿಂದ ಅನುಜ್ಞೆ ಪಡೆದನು. ಗೃಹಸ್ಥರು ಮಾಡಬೇಕಾದ ಧರ್ಮಗಳನ್ನು ಜನರಿಗೆ ತೋರಿಸಿಕೊಟ್ಟನು. ಇಂದ್ರದೇವರು ಭಕ್ತಿಯಿಂದ ತಂದುಕೊಟ್ಟಿದ್ದ ಜಯಂತೀ ದೇವಿಯಲ್ಲಿ ಲಕ್ಷಣಗಳಿಂದ ತನ್ನನ್ನು ಹೋಲುವ ನೂರು ಮಕ್ಕಳನ್ನು ಪಡೆದನು. ನಿರ್ದೋಷವಾದ ವೇದಗಳಲ್ಲಿ ಹೇಳಿದ ಪ್ರವೃತ್ತಿನಿವೃತ್ತಿಗಳೆಂಬ ಎರಡು ಧರ್ಮಗಳನ್ನು ಆಚರಿಸುತ್ತಿದ್ದನು. ಆ ನೂರು ಮಕ್ಕಳಲ್ಲಿ ಶ್ರೇಷ್ಠಗುಣವಂತರೂ ಮಹಾಯೋಗಿಗಳೂ ಆದ ಭರತರಾಜರೇ ಹಿರಿಯರು. ಇವರಿಂದಾಗಿಯೇ ಈ ಖಂಡವನ್ನು ಭಾರತವೆಂದು ಕರೆಯುವರು. ಇವರ ತಮ್ಮಂದಿರಾದ ಕುಶಾವರ್ತ, ಇಲಾವರ್ತ, ಬ್ರಹ್ಮಾವರ್ತ, ಆರ್ಯಾವರ್ತ, ಮಲಯಕೇತು, ಭದ್ರಸೇನ, ಇಂದ್ರಸ್ಪೃಕ್, ವಿದರ್ಭ, ಕೀಕಟರೆಂಬ ಒಂಭತ್ತು ಜನ ಉಳಿದ ತೊಂಬತ್ತು ಜನರಿಗಿಂತ ಪ್ರಧಾನರು. ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ, ಕರಭಾಜನರೆಂಬ ಒಂಭತ್ತು ಮಂದಿ ಭಗವದ್ಭಕ್ತರ ಧರ್ಮಗಳನ್ನು

ತೋರಿಸುವ ಮಹಾಭಾಗವತರು. ಇವರ ಚರಿತ್ರೆಯು ಮುಂದೆ ಹನ್ನೊಂದನೆ ಸ್ಕಂಧದಲ್ಲಿ ವಸುದೇವ ನಾರದ ಸಂವಾದ ರೂಪದಲ್ಲಿ ಹೇಳಲ್ಪಡುವುದು. ಅದು ಭಗವನ್ಮಾಹಾತ್ಮ್ಯಪೂರ್ಣವೂ ಭಗವನ್ನಿಷ್ಠಾ ಪ್ರಕಾರ ಪ್ರತಿಪಾದಕವೂ ಆಗಿರುವುದು. ಉಳಿದ ಎಂಬತ್ತೊಂದು ಮಂದಿ ಜಯಂತೀದೇವಿಯ ಕಿರಿಯ ಮಕ್ಕಳು ತಂದೆಯ ಅಪ್ಪಣೆಯನ್ನು ಪಾಲಿಸುವವರೂ ಮಹಾಶ್ರೋತ್ರಿಯರು ಪ್ರತಿವರ್ಷ ಯಾಗ ಮಾಡುವ ಸ್ವಭಾವದವರೂ ಕಲಮಾನ್ನ ಭೋಜಿಗಳೂ ಗೃಹಸ್ಥ ಧರ್ಮ ಪ್ರದರ್ಶಕರೂ ಕರ್ಮ ಮಾಡುವುದರಲ್ಲಿ ಶ್ರದ್ಧಾವಂತರೂ ಷಟ್‌ಕರ್ಮನಿರತರಾದ್ದರಿಂದ ಬ್ರಾಹ್ಮಣರೆಂದು ಕರೆಸಿಕೊಳ್ಳುವವರು ಕ್ಷತ್ರಿಯರಾದರೂ ಬ್ರಾಹ್ಮಣ್ಯ ಹೊಂದಿದವರಾಗಿದ್ದರು.

ಸ್ವತಂತ್ರನೂ ಸ್ವಾಭಾವಿಕವಾಗಿಯೇ ಯಾವಾಗಲೂ ಅನರ್ಥ ಪರಂಪರೆಯಿಲ್ಲದವನೂ ಕೇವಲ ಸ್ವರೂಪಾನಂದವನ್ನೇ ಅನುಭವಿಸುವವನೂ ಸರ್ವನಿಯಾಮಕನೂ ಆದ ಋಷಭನಾಮಕನಾದ ಶ್ರೀಹರಿಯು ಮೇಲೆ ತಿಳಿಸಿದಂತೆ ಪ್ರಾಕೃತ ಜನರಂತೆ ಕರ್ಮ ಮಾಡುತ್ತಾ ಧರ್ಮ, ಬ್ರಹ್ಮಜ್ಞಾನವಿಲ್ಲದ ಜನರಿಗೆ ಅನುಷ್ಠಾನ ಪೂರ್ವಕ ಕಾಲಕ್ರಮಾಗತವಾದ ಧರ್ಮವನ್ನು ಉಪದೇಶಿಸುತ್ತಾ ಅತ್ಯಂತ ಭಗವನ್ನಿಷ್ಠನೂ ಯೋಗ್ಯರಲ್ಲಿ ಸ್ನೇಹಪರನೂ ಕರುಣಾಮಯನೂ ಆಗಿ ಧರ್ಮ, ಅರ್ಥ, ಕೀರ್ತಿ, ಮಕ್ಕಳು, ಭೋಗ ಮತ್ತು ಮೋಕ್ಷಗಳಿಗೆ ವಿರೋಧವಾಗದಂತೆ ಗೃಹಸ್ಥಧರ್ಮದಲ್ಲಿಯೇ ಇದ್ದುಕೊಂಡು ಜನರನ್ನು ನಿಯಮಿಸುತ್ತಿದ್ದನು. ದೊಡ್ಡವರು ಆಚರಿಸಿದಂತೆ ಜನರು ಆಚರಿಸುವರು. ವೇದ ಸಂಬಂಧಿಯಾದ ರಹಸ್ಯ ಧರ್ಮವೆಲ್ಲವೂ ಋಷಭದೇವನಿಗೆ ತಿಳಿದೇ ಇದ್ದಿತು.

ಆದರೂ ಬ್ರಾಹ್ಮಣರನ್ನು ಕೇಳಿ ಅವರು ತೋರಿದ ಮಾರ್ಗದಲ್ಲಿ ಸಾಮಾದಿ ಉಪಾಯಗಳಿಂದ ಜನರನ್ನು ಆಳುತ್ತಿದ್ದನು. ವೇದದಲ್ಲಿ ಉಪದಿಷ್ಟವಾದ ರೀತಿಯಲ್ಲಿ ದ್ರವ್ಯ, ದೇಶ, ಕಾಲ, ವಯಸ್ಸು, ಶ್ರದ್ಧೆ, ಋತ್ವಿಜರು ಮತ್ತು ವಿವಿಧ ದೇವತೆಗಳು ಹಾಗೂ ಉದ್ದೇಶಗಳಿಂದ ಸಮೃದ್ಧವೆನಿಸಿದ್ದ ನೂರಾರು ಯಾಗಗಳನ್ನು ಮಾಡಿದನು. ಈ ಭೂಖಂಡದಲ್ಲಿ ಭಗವಾನ್ ಋಷಭದೇವನಿಂದ ಸರ್ವವಿಧದಿಂದಲೂ ರಕ್ಷಿತನಾದ ಯಾವನೊಬ್ಬನೂ ಸ್ವಾಮಿಯಾದ ಋಷಭದೇವನಿಂದ ಸದಾ ಕಾಲವು ಅಭಿವೃದ್ಧಿ ಹೊಂದುತ್ತಿರುವ ಅತಿಶಯ ಭಕ್ತಿಯೊಂದನ್ನು ಬಿಟ್ಟು ತನಗೆ ಅಪೇಕ್ಷಿತವೇನೂ




ಇಲ್ಲವೋ ಎನ್ನುವಂತೆ ಮತ್ತೇನನ್ನೂ ಯಾವ ಕಾಲದಲ್ಲಿಯೂ ಯಾವ ರೀತಿಯಿಂದಲೂ ಬೇರೆ ಯಾರಿಂದಲೂ ಅಪೇಕ್ಷಿಸುತ್ತಿರಲಿಲ್ಲ. ಸಂನ್ಯಾಸಿಯಾಗಬೇಕೆಂದು ಬಗೆದ ಆ ಋಷಭದೇವನೊಂದುದಿನ ಬ್ರಹ್ಮಾವರ್ತಕ್ಕೆ ಬಂದನು. ಅಲ್ಲಿ ಬ್ರಹ್ಮರ್ಷಿಶ್ರೇಷ್ಠರು ಸಭೆ ಸೇರಿದ್ದರು. ಪ್ರಜೆಗಳು ಕೇಳಲು ನೆರೆದಿದ್ದರು. ಏಕಾಗ್ರಮನಸ್ಕರೂ ವಿನಯ ಪ್ರೀತಿಗಳಿಂದ ತುಂಬಿದವರೂ ಸಂಪೂರ್ಣ ತಂದೆಯ ಅಧೀನರೂ ಆಗಿದ್ದ ಆತನ ಮಕ್ಕಳನ್ನು ಪ್ರಜೆಗಳನ್ನೂ ಉಪದೇಶಿಸುತ್ತ ಮುಂದೆ ಹೇಳುವಂತೆ ನುಡಿದನು.

II ★★★ II



# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ

# ಪಂಚಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಶ್ರೀಋಷಭನಾಮಕ ಶ್ರೀಹರಿಯು ಬ್ರಹ್ಮರ್ಷಿಗಳ ಸಭೆಯಲ್ಲಿ ತನ್ನ ಮಕ್ಕಳಿಗೆ ಮೋಕ್ಷಧರ್ಮೋಪದೇಶ ಮಾಡುವನು. ಲೋಕಶಿಕ್ಷಣೆಗಾಗಿ ಸಂನ್ಯಾಸಾಶ್ರಮ ಸ್ವೀಕಾರ ಮಾಡಿ ದೇಶಪರ್ಯಟನ ಮಾಡುವುದನ್ನು ತಿಳಿಸುವರು.

## ಋಷಭನಿಂದ ಮೋಕ್ಷಧರ್ಮೋಪದೇಶ

**ವಿಜಯಧ್ವಜ ಅವತಾರಿಕಾ**

ತನ್ನ ಮಕ್ಕಳಿಗೆ ತತ್ತ್ವೋಪದೇಶ ಮಾಡುವ ನೆಪದಿಂದ, ಸಜ್ಜನರ ಮೇಲೆ ಕೃಪೆಯಿಂದ ಭಗವಂತನಾದ ಋಷಭನು ಸಕಲಸಲ್ಲೋಕಕ್ಕೆ ನಿಶ್ರೇಯಸ್ಸಾಗುವುದಕ್ಕೆ ಎಲ್ಲ ಶಾಸ್ತ್ರದ ಸಾರವಾದ ತತ್ತ್ವವನ್ನು ಈ ಅಧ್ಯಾಯದಲ್ಲಿ ನಿರೂಪಿಸುವನು. ಮೊದಲಿಗೆ ಮೋಕ್ಷಾಪೇಕ್ಷಿಯು ಅವಶ್ಯವಾಗಿ ವಿಷಯಸೇವನೆಯನ್ನು ವರ್ಜಿಸಬೇಕೆಂಬ ಅಭಿಪ್ರಾಯದಿಂದ ಬುದ್ಧಿವಂತನು ವಿಷಯಸೇವನೆ ಬಿಟ್ಟು ತಪಸ್ಸನ್ನೇ ಮಾಡಬೇಕೆಂದು ಹೇಳುವರು.

**ಋಷಭ ಉವಾಚ-**

**ನಾಯಂ ದೇಹೋ ದೇಹಭಾಜಾಂ ನೃಲೋಕೇ**
**ಕಷ್ಟಾನ್ಕಾಮಾನರ್ಹತಿ ವಿಡ್‌ಭುಜಾಂ ಯೇ ।**

 

**ತಪೋ ದಿವ್ಯಂ ಪೋಽರ್ಹಥ ಯೇನ ಸತ್ವಂ**
**ಶುಧ್ಯೇದ್ಯಸ್ಮಾದ್ಬ್ರಹ್ಮಸುಖಂ ಹ್ಯನಂತಮ್ ॥೧॥**

**ನೃಲೋಕೇ** ಮನುಷ್ಯ ಲೋಕದಲ್ಲಿ **ಅಯಂ ದೇಹಃ** ಈ ದೇಹವು **ದೇಹಭಾಜಾಂ** **ನ** ಶರೀರಧಾರಿಗಳಾದ ಜೀವರ ಅಧೀನವಲ್ಲ (ಅಥವಾ ತಪಸ್ಸು ಮಾಡುವುದಕ್ಕಾಗಿ ಇದೆಯೇ ಹೊರತು ಭೋಗಕ್ಕಾಗಿಯಲ್ಲ) **ಯೇ** ಯಾವ ವಿಷಯಭೋಗಗಳು **ವಿಡ್‌ಭುಜಾಂ (ಅಪಿ ಸಂತಿ)** ಅಮೇಧ್ಯ ತಿನ್ನುವ ನಾಯಿ ಹಂದಿಗಳಿಗೂ ಇವೆಯೋ **ತತ್ಕಾಮಾನ್** ಆ ವಿಷಯಗಳನ್ನು **ಕಃ** ಯಾವ ವಿವೇಕಿಯು ತಾನೇ **(ಭೋಕ್ತುಂ)** **ಅರ್ಹತಿ** ಭೋಗಿಸಲರ್ಹನು? ಯಾವ ವಿವೇಕಿಯೂ ಅರ್ಹನಲ್ಲವೆಂದು ಭಾವ!

ಇದರಿಂದ ಕಾಮೋಪಭೋಗವೂ ಪುರುಷಾರ್ಥವಾದ್ದರಿಂದ ಕರ್ತವ್ಯವೆಂಬ ಶಂಕೆಗೆ ಅವು ತುಚ್ಛ ಮತ್ತು ನಾಶವುಳ್ಳವುಗಳಾದ್ದರಿಂದ ಕರ್ತವ್ಯವಲ್ಲ ಎಂದು ಉತ್ತರ ಹೇಳಿದಂತಾಯಿತು. ಏಕೆಂದರೆ ಹೇಳುತ್ತಾರೆ

### ದೇಹಧಾರಣೆಗೆ ತಪವೇ ಪ್ರಯೋಜನ

**ಯೇನ** ಯಾವ ತಪಸ್ಸಿನಿಂದ **ಸತ್ವಂ** ಅಂತಃಕರಣವು **ಶುಧ್ಯೇತ** ಶುದ್ಧವಾಗುವುದೋ **ಯಸ್ಮಾತ್** ಯಾವ ಶುದ್ಧಾಂತಃಕರಣದಿಂದ **ಅನಂತಂ** ದೇಶ, ಕಾಲ, ಗುಣಗಳಿಂದ ಅಂತವಿಲ್ಲದ ಬ್ರಹ್ಮ ಗುಣಪೂರ್ಣನಾದ **ಸುಖಂ** ಪೂರ್ಣಾನಂದಾತ್ಮನೂ ಆದ ಶ್ರೀಹರಿಯು ದೊರೆಯುವನೋ **ತಸ್ಮಾತ್** ಆದ್ದರಿಂದ ಬ್ರಹ್ಮ ಯೋಗ್ಯತಾನುಸಾರ ಪೂರ್ಣವಾದ **ಅನಂತಂ** ಶಾಶ್ವತವಾದ **ಸುಖಂ** ಸ್ವರೂಪಾನಂದದ ಅಭಿವ್ಯಕ್ತಿಯು (ಮೋಕ್ಷವು) ಆಗುವುದೋ ಅಂತಹ **ದಿವ್ಯಂ** ವೈಕುಂಠ ಮೊದಲಾದ ದ್ಯುಲೋಕಗಳಿಗೆ ಸಾಧನವಾದ **ತಪಃ** ತಪಸ್ಸನ್ನು **ಹಿ** ಈ ಕಾರಣದಿಂದ **ಅರ್ಹಥ** ಆಚರಿಸಲು ಯೋಗ್ಯರಾಗಿರುವಿರಿ **ಹಿ** ಪ್ರಸಿದ್ಧವು. ॥೧॥

### ಮಹಾತ್ಮರ ಸೇವೆಯೇ ಮುಕ್ತಿಗೆ ಸೋಪಾನ

ಸಂಸಾರಾಸಕ್ತರಾದವರಿಗೆ ತಪಸ್ಸು ಮಾಡಲು ಹೇಗೆ ಮನಸ್ಸು ಬರುವುದು ಎಂದರೆ ಅದಕ್ಕೆ ಕಾರಣ ತಿಳಿಸುವರು. ಅನರ್ಥ ಕಾರಣವಾದ್ದರಿಂದ ವಿಷಯಭೋಗ ಬಿಡಬೇಕೆಂದು ಅನ್ವಯವ್ಯತಿರೇಕಗಳಿಂದ ದೃಢಪಡಿಸುವರು

**ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇ**
**ಸ್ತಮೋದ್ವಾರಂ ಯೋಷಿತಾಂ ಸಂಗಿಸಂಗಮ್ ।**
**ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾ**
**ವಿಮನ್ಯವಃ ಸುಹೃದಃ ಸಾಧವೋ ಯೇ ॥೨॥**

**ಮಹತ್ಸೇವಾಂ** ಮಹಾತ್ಮರ ಸೇವೆಯು **ವಿಮುಕ್ತೇಃ** ಮೋಕ್ಷಕ್ಕೆ **ದ್ವಾರಂ** ತಪಸ್ಸು ಮಾಡುವುದರ ಮುಖಾಂತರ ಕಾರಣವಾಗಿದೆ **ಯೋಷಿತಾಂ ಸಂಗಿಸಂಗಂ** ನಿಷಿದ್ಧ ಸ್ತ್ರೀಯರ ಸಂಗ ಮಾಡಿದವರ ಸಂಗವು **ತಮೋದ್ವಾರಂ** ಅಧೋಲೋಕಸಾಧನವೆಂದು **ಆಹುಃ** ಹೇಳುವರು. ಮಹಾತ್ಮರು ಯಾರು? ಎಂದರೆ **ಯೇ** ಯಾರು **ಸಮಚಿತ್ತಾಃ** ನಿರ್ದೋಷನಾದ್ದರಿಂದ ಸಮನೆನಿಸಿದ ವಿಷ್ಣುವಿನಲ್ಲಿ ಮನಸ್ಸುಳ್ಳವರೋ, ಅವರವರ ಯೋಗ್ಯತಾನುಸಾರ ಮನಸ್ಸು ಮಾಡುವವರೋ **ಪ್ರಶಾಂತಾಃ** ವಿಶೇಷವಾಗಿ ಶ್ರೀಹರಿನಿಷ್ಠೆಯುಳ್ಳವರೋ **ವಿಮನ್ಯವಃ** ೧.ವಿಶೇಷ ಜ್ಞಾನವುಳ್ಳವರೋ ೨. ಅಸ್ಥಾನದಲ್ಲಿ ಕೋಪಮಾಡದವರೋ **ಸುಹೃದಃ** ಭಗವದ್ಭಕ್ತರಲ್ಲಿ ಸೌಹಾರ್ದ-ವುಳ್ಳವರೋ **ಸಾಧವಃ** ರಾಗಾದಿದೋಷವಿಲ್ಲದವರೋ (ವಿಹಿತಾನುಷ್ಠಾನದಿಂದ ಸದ್ಗುಣವಂತರೋ) **ತೇ** ಅವರೇ **ಮಹಾಂತಃ** ಮಹನೀಯರು.

**ಯೋಷಿತಾಂ** ಎಂಬಲ್ಲಿ **ನಿಷಿದ್ಧ** ಎಂದು ಸೇರಿಸಿಕೊಳ್ಳಬೇಕು. ಇಲ್ಲವಾದರೆ ತನ್ನ ಹೆಂಡತಿಯೂ (ಅನಿಷಿದ್ಧ ವಿಷಯಸುಖವು) ಹೇಯವಾದೀತು. ಅದು ಶಾಸ್ತ್ರಸಮ್ಮತವಲ್ಲ **ನ ಕಾಂಚನ ಸ್ತ್ರಿಯಂ ಪರಿಹರೇತ್** ಎಂಬ ಶ್ರುತಿಯು ಇಷ್ಟಪಟ್ಟು ಬಂದ ತನ್ನ ಹೆಂಡತಿಯನ್ನು ಬಿಡಬಾರದು ಎಂದು ಹೇಳಿದೆ. ವಿಷಯಾಸಕ್ತರ ಸ್ನೇಹವೇ ಅನರ್ಥ ಕಾರಣವೆಂದಮೇಲೆ ವಿಷಯಸ್ನೇಹ ಅನರ್ಥ ಎಂದು ತಿಳಿಸುವ ಮೂಲಕ ಅದನ್ನು ಬಿಟ್ಟು ತಪಸ್ಸುಮಾಡೆಂದು ತಿಳಿಸಿದಂತಾಯಿತು. **(ವಿಜಯಧ್ವಜೀ)**

## ಯೋಷಿತ್ ಶಬ್ದದ ನಿರ್ವಚನ

ಇಲ್ಲಿ ಯೋಷಿತ್ ಶಬ್ದಕ್ಕೆ ಶ್ರೀಹರಿಯ ವಿಷಯದಲ್ಲಿ ಅನ್ಯಥಾಜ್ಞಾನವೆಂದರ್ಥ. ಧರ್ಮವಿವೇಕದಲ್ಲಿ ಹೀಗೆ ಹೇಳಿದೆ

''ಕೇಶವೇ ತ್ವನ್ಯಥಾಬುದ್ಧಿಃ ಸೈವ ಸ್ತ್ರೀ ಸಂಪ್ರಕೀರ್ತಿತಾ ।
ತ್ರಿಕಾಲದುಃಖದತ್ವೇನ ಪುಂಸಾಂ ಸಹ ನಿವಾಸನಾತ್ ॥




ಜುಷ್ಟತ್ವಾದ್ ಯೋಷಿದಿತ್ಯುಕ್ತಾ ವನನಾದ್ ವನಿತೇತಿ ಚ ।
ಪ್ರಮಾದಕರಣತ್ವಾತ್ತು ಪ್ರಮದೇತಿ ಚ ಗೀಯತೇ ॥
ತ್ಯಜೇತ್ ತತ್ಸಂಗಿನಾಂ ಸಂಗಂ ಬುಭೂಷುಃ ಪುರುಷಃ ಸದಾ ।
ನ ತಾದೃಶಃ ಕ್ವಚಿದ್ ದೋಷಃ ಪುರುಷಸ್ಯಾಸುಖಾವಹಃ ॥

ಕೇಶವನನ್ನು ವಿಪರೀತ ತಿಳಿಯುವುದೆಂಬುದೇ ಸ್ತ್ರೀಯೆನಿಸುವುದು. ಮೂರುಕಾಲದಲ್ಲಿ ದುಃಖಕೊಡುವುದರಿಂದ, ಪುರುಷರ ಜೊತೆಯಿರುವುದರಿಂದ, ಸೇವಿತವಾದ್ದರಿಂದ ಯೋಷಿತ್ ಎಂದು, ಭಜಿಸುವುದರಿಂದ ವನಿತಾ ಎಂದು, ಪ್ರಮಾದ ಉಂಟು ಮಾಡುವುದರಿಂದ ಪ್ರಮದಾ ಎಂದು ಹೇಳಲ್ಪಡುವುದು. ಈ ರೀತಿಯಾದ ಅನ್ಯಥಾಬುದ್ಧಿಯುಳ್ಳವರ ಸ್ನೇಹವನ್ನು ಜ್ಞಾನೇಚ್ಛುವು ಯಾವಾಗಲೂ ತ್ಯಜಿಸಬೇಕು. ಮನುಷ್ಯನಿಗೆ ದುಃಖದಾಯಕವಾದ ದೋಷವು ಇದರಂತಹದು ಮತ್ತೊಂದಿಲ್ಲ .

ಕೇಶವನಲ್ಲಿ ಅನ್ಯಥಾ ಬುದ್ಧಿ ಎಂದರೆ ಹೀಗೆ ಹೇಳಿದೆ

ಕೇಶವಸ್ಯ ಸಮೋಽಸ್ತೀತಿ ಕೇಶವೋಽಸ್ಮ್ಯಹಮಿತ್ಯಪಿ ।
ಬ್ರಹ್ಮಾದ್ಯಾಃ ಕೇಶವಾತ್ಮಾನಃ ಶ್ರೀರ್ವಾ ನಿರ್ಗುಣ ಇತ್ಯಪಿ ॥
ಮುಕ್ತಸ್ಯ ತದ್ಭಾವಮತಿರರೂಪತ್ವಮತಿಸ್ತಥಾ ।
ತ್ರಿಗುಣಾತ್ಮಕ ದೇಹೋಽಸ್ಯಾಪ್ಯಸ್ತೀತ್ಯಪಿ ತು ಯಾ ಮತಿಃ ॥
ಜನ್ಮಮೃತ್ಯಾದಿಬುದ್ಧಿರ್ವಾ ದುಃಖಾಜ್ಞಾನಾದಿಬೋಧನಂ ।
ತಸ್ಯಾಪಿ ಪರತಂತ್ರತ್ವವಿಜ್ಞಾನಂ ಚ ತದುತ್ತಮಃ ॥
ಅಸ್ತೀತಿ ಯಾ ಮತಿಸ್ತಸ್ಯ ವಶಾದನ್ಯಸ್ಯ ಕಸ್ಯಚಿತ್ ।
ಅಸ್ತೀತಿ ಭಾವನಾ ಇತ್ಯಾದ್ಯಾ ಅವಜ್ಞಾಃ ಸಂಪ್ರಕೀರ್ತಿತಾಃ ॥

ಕೇಶವನಿಗೆ ಸಮನಾದವನಿದ್ದಾನೆ. ನಾನೇ ಕೇಶವನಾಗಿದ್ದೇನೆ. ಬ್ರಹ್ಮಾದಿಗಳಾಗಲೀ ಲಕ್ಷ್ಮೀದೇವಿಯಾಗಲೀ ಕೇಶವರಾಗಿದ್ದಾರೆ, ಕೇಶವನು ಗುಣರಹಿತನು, ಮುಕ್ತರು ಕೇಶವರೇ ಆಗುವರು, ಕೇಶವನಿಗೆ ರೂಪವಿಲ್ಲ, ಅವನಿಗೂ ತ್ರಿಗುಣಾತ್ಮಕ ದೇಹವಿದೆ, ಜನ್ಮಮರಣಗಳಿವೆ, ದುಃಖ ಅಜ್ಞಾನಗಳಿವೆ, ಪಾರತಂತ್ರ್ಯವಿದೆ, ಅವನಿಗಿಂತ ಉತ್ತಮನಿದ್ದಾನೆ, ಅವನ ಅಧೀನನಾಗದ ಮತ್ತೊಬ್ಬನಿದ್ದಾನೆ ಮುಂತಾಗಿ ತಿಳಿಯುವುದು ಶ್ರೀಹರಿಗೆ ಅವಮಾನ ಮಾಡಿದಂತೆ. ಇದೇ ಅನ್ಯಥಾ ಬುದ್ಧಿಯು. ಮತ್ತು ಯೋಷಿತ್ ಶಬ್ದಕ್ಕೆ ಪ್ರಸಿದ್ಧ ಸ್ತ್ರೀ ಎಂದೇ ಅರ್ಥ

ಇಟ್ಟುಕೊಂಡು ಈ ರೀತಿ ಯೋಜಿಸಬಹುದು. **ಯೋಷಿತಾಂ ಸ್ತ್ರೋತ್ತಮಸ್ತ್ರೀಯರ** ಸಂಗವುಳ್ಳವರ ಸಂಗವು **ತಮೋದ್ವಾರಂ** ಎಂದರೆ ನಿತ್ಯನರಕಕ್ಕೆ ಸಾಧನವೆಂದರ್ಥ.

ಸಾಮಾನ್ಯವಾಗಿ ಸ್ತ್ರೀಸಂಗವನ್ನು ಇಲ್ಲಿ ನಿಷೇಧಿಸುವುದಿಲ್ಲ. ಏಕೆಂದರೆ ಗೃಹಸ್ಥಾಶ್ರಮವು ಮೋಕ್ಷಸಾಧನವಾದುದರಿಂದ ತನ್ನ ಕಾಂತೆಯನ್ನು ಕಾಮಿಸುವುದರಿಂದ ಯಾವ ಪಾಪವೂ ಇಲ್ಲ. ಕಾರಣ ಪರಸ್ತ್ರೀಗಮನವನ್ನೇ ನಿಷೇಧಿಸುತ್ತದೆ. ಇದನ್ನೇ ಧರ್ಮತತ್ತ್ವ ಎಂಬ ಗ್ರಂಥದಲ್ಲಿ ಹೀಗೆ ಹೇಳಿದೆ.

**''ಪರದಾರದೃಶಿಃ ಪ್ರೋಕ್ತಾ ಕ್ಷುದ್ರಪಾತಕಸಂಜ್ಞಿತಾ ।**
**ಉಪಪಾತಕಂ ತದ್ಗತಿಶ್ಚ ವರ್ಣಬಾಹ್ಯೇಷು ಪಾತಕಮ್ ॥**
**ಮಹಾಪಾತಕಸಂಜ್ಞಂ ತು ಪಿತ್ರಾದೇರ್ದಾರಧರ್ಷಣಮ್ ।**
**ದಾರದೃಷ್ಟಿಃ ಸ್ವೋತ್ತಮಾನಾಂ ಮಾನುಷಾಣಾಂ ಸ್ವಭಾವತಃ ॥**
**ಸುಮಹಾಪಾತಕಂ ಪ್ರೋಕ್ತಂ ತದ್ಗತಿಃ ಸುಮಹತ್ ತತಃ ।**
**ಋಷಿದಾರೇಷು ಮನಸೋ ಗತಿರೇವ ತತೋಽಧಿಕಾ ॥**
**ದೇವದಾರಾಭಿಕಾಮಾನಾಂ ಸಂಗಿಸಂಗಸ್ತತೋಽಧಿಕಃ ।**
**ಕಿಮು ವಿಷ್ಣೋಸ್ತತೋ ಯೋಷಿತ್ ಸಂಗಸ್ಯ ವ್ಯತ್ಯಯಸ್ಥಿತೇಃ ॥**
**ನ ಸಮಂ ಪಾತಕಂ ಕ್ವಾಪಿ ನಹಿ ಸ್ವಸ್ತ್ರ್ಯಭಿಕಾಮತಃ ।**
**ಅವಜ್ಞಾತಾ ಮಾಧವಾದೇಸ್ತಸ್ಮಾತ್ ತಂ ದೂರತಸ್ತ್ಯಜೇತ್'' ॥**

ಪರಸ್ತ್ರೀಯನ್ನು ನೋಡುವುದು ಕ್ಷುದ್ರ ಪಾತಕವೆನಿಸುವುದು. ಪರಸ್ತ್ರೀಸಂಗವು ಉಪಪಾತಕವೆನಿಸುವುದು, ವರ್ಣಬಾಹ್ಯಳ ಸಂಗವು ಪಾತಕವೆನಿಸುವುದು. ತಂದೆ ಮುಂತಾದವರ ಸ್ತ್ರೀಸಂಗವು ಮಹಾಪಾತಕವೆನಿಸುವುದು, ತನಗಿಂತ ಉತ್ತಮರಾದ ಮನುಷ್ಯರ ಪತ್ನಿಯರನ್ನು ನೋಡುವುದು ಸುಮಹಾಪಾತಕವೆನಿಸುವುದು. ಅವರ ಸಂಗವು ಅದಕ್ಕಿಂತ ಹೆಚ್ಚು ಪಾತಕವು. ಋಷಿಸ್ತ್ರೀಯರಲ್ಲಿ ಮನಸ್ಸಿಡುವುದೇ ಅತಿಸುಮಹಾಪಾತಕದಕ್ಕಿಂತ ಹೆಚ್ಚು. ಇದಕ್ಕೂ ಹೆಚ್ಚಿನ ಪಾಪ ದೇವತಾಸ್ತ್ರೀಯನ್ನು ಇಚ್ಛಿಸುವರ ಸಂಗ ಮಾಡುವುದು. ಅಂದಮೇಲೆ ವಿಷ್ಣುವಿನ ಸ್ತ್ರೀ ಅಭಿಕಾಮನೆಗೆ ಕೇಳಬೇಕೇ? ಅದಕ್ಕೆ ಸಮಾನ ಪಾತಕ ಮತ್ತೊಂದಿಲ್ಲ. (ತನ್ನ ಸ್ತ್ರೀಕಾಮನೆ ಮಾಡಿದರೆ ಪಾಪವಿಲ್ಲ) ಕಾರಣ ಪರಸ್ತ್ರೀಸಂಗ ಮಾಡಿದವರ ಸಂಗ ದೂರದಿಂದಲೇ ತ್ಯಜಿಸಬೇಕು.

ಮಹಾಂತರ ಲಕ್ಷಣವನ್ನೇ ಮುಂದುವರಿಸುವರು

**ಯೇ ವಾ ಮಯೀಶೇ ಕೃತಸೌಹೃದಾರ್ಥಾ**
**ಜನೇಷು ದೇಹಂಭರವಾರ್ತಿಕೇಷು ।**
**ಗೃಹೇಷು ಜಾಯಾತ್ಮಜರಾತಿರಾಸು**
**ನ ಪ್ರೀತಿಯುಕ್ತಾ ಯಾವದರ್ಥಾಶ್ಚ ಲೋಕೇ ॥೩॥**

ಇಲ್ಲಿ ಚ ಶಬ್ದಾರ್ಥದಲ್ಲಿ ವಾ ಶಬ್ದವಿದೆ. **ಯೇ ಚ** ಯಾರು **ಈಶೇ ಮಯಿ** ಸ್ವಾಮಿಯಾದ ನನ್ನಲ್ಲಿ **ಕೃತಸೌಹೃದಾರ್ಥಾಃ** ಮಾಡಲ್ಪಟ್ಟ ಸೌಹೃದವೇ (ಸ್ನೇಹವೇ, ಭಕ್ತಿಯೇ) ಪ್ರಯೋಜನವಾಗಿವುಳ್ಳವರೋ ಅವರು ಮತ್ತು **ದೇಹಂಭರವಾರ್ತಿಕೇಷು ಜನೇಷು** ದೇಹಕ್ಕೆ ಪೋಷಕಗಳಾದ ವಿಷಯಗಳ ಮಾತೇ ಹೊರತು ಶ್ರೀಹರಿಯಮಾತಾಡದಿರುವ ಜನರಲ್ಲಿ ಮತ್ತು **ಜಾಯಾ** ಹೆಂಡತಿ **ಆತ್ಮಜಾಃ** ಮಕ್ಕಳು **ರಾತಿ** ಮಿತ್ರರು **ರಾಸು** ದ್ರವ್ಯ ಇವುಗಳಲ್ಲಿ ನ **ಪ್ರೀತಿಯುಕ್ತಾ** ಪ್ರೀತಿ ಮಾಡದವರು ಮತ್ತು **ಯೇ** ಯಾರು **ಲೋಕೇ** ಹಿಂದೆ ಹೇಳಿದ ಹೆಂಡತಿ ಮಕ್ಕಳು ಮುಂತಾದ ಜನರವಿಷಯದಲ್ಲಿ **ಯಾವದರ್ಥಾಶ್ಚಃ** ಶರೀರಯಾತ್ರೆ ನಡೆಯಲು ಅನಿವಾರ್ಯವಾದ ಧನಾದಿಗಳುಳ್ಳವರು ಯಾರೋ ಅವರೇ ಮಹಾಂತರು ಎಂದು ಭಾವ. ॥೩॥

**ವಿಷಯಭೋಗಕ್ಕಾಗಿ ಮಾಡಲ್ಪಡುವ ಕರ್ಮ ಬಂಧಕ**

**ಕಸ್ತತ್ಕಾಮಾನ್ ಅರ್ಹತಿ** ಎಂದು ವಿಷಯ ಭೋಗತ್ಯಾಗ ಮಾಡಬೇಕೆಂದು ಹೇಳಿದ್ದನ್ನೇ ಉಪಪಾದಿಸುವರು.

**ನೂನಂ ಪ್ರಮತ್ತಃ ಕುರುತೇ ಕರ್ಮ ದೀನೋ**
**ಯದಿಂದ್ರಿಯಪ್ರೀತಯ ಆವೃಣೋತಿ ।**
**ನ ಸಾಧುಮನ್ಯೇ ಯತ ಆತ್ಮನೋऽಯಂ**
**ಅಸನ್ನಪಿ ಕ್ಲೇಶವ ಆಸ ದೇಹಃ ॥೪॥**

**ಪ್ರಮತ್ತಃ** ಕರ್ತವ್ಯತಾಮೂಢನಾದ ಆದ್ದರಿಂದಲೇ **ದೀನಃ ಅಯಂ** ದಯನೀಯನಾದ ಈ ಮನುಷ್ಯನು **ಯತ್** ಯಾವಾಗ **ಇಂದ್ರಿಯಪ್ರೀತಯೇ** ಇಂದ್ರಿಯಗಳಿಗೆ ಶಬ್ದಾದಿ ವಿಷಯಭೋಗವೆಂಬ ಪ್ರೀತಿಗಾಗಿ (ವಿಷಯ ಸಂಪಾದನೆಗಾಗಿ) **ಕರ್ಮ ಕುರುತೇ** ಕರ್ಮ ಮಾಡುವನೋ **ತದಾ** ಆಗ **ಆತ್ಮಾನಂ**

ತನ್ನನ್ನು **ಆವೃಣೋತಿ** ಆ ಕರ್ಮದಿಂದ ಮತ್ತೆ ಬದ್ಧನನ್ನಾಗಿ ಮಾಡಿಕೊಳ್ಳುವನು **ಯತಃ** ಯಾವ ಕಾರಣ **ಆತ್ಮನಃ** ತನಗೆ **ಅಸನ್ ಅಪಿ** ಅಸ್ವಾಭಾವಿಕವಾದುದರಿಂದ ಇಲ್ಲದಿರುವ (ಅಥವಾ ಅಮಂಗಲವಾದ್ದರಿಂದ) **ಅಯಂ ದೇಹಃ** ಈ ದೇಹವು **ಕ್ಲೇಶದಃ ಆಸ** ದುಃಖದಾಯಕವಾಗುವುದು. ಈ ದೇಹದಲ್ಲಿ ಕರ್ಮ ಮಾಡಿದರೆ ಮತ್ತೆ ದೇಹ ಬರುವುದು. ಮತ್ತೆ ಆ ದೇಹದಲ್ಲಿ ಕರ್ಮಮಾಡಿದರೆ ತನಗೆ ಬಂಧವನ್ನೇ ಸಂಪಾದಿಸಿದಂತಾಗುವುದು. ಆದ್ದರಿಂದ ಇಂದ್ರಿಯಗಳನ್ನು ತೃಪ್ತಿಪಡಿಸುವುದನ್ನು **ನ ಸಾಧುಮನ್ಯೇ** ಒಳ್ಳೆಯದೆಂದು ತಿಳಿಯಲಾರೆ. ಇಂದ್ರಿಯಗಳನ್ನು ತೃಪ್ತಿಪಡಿಸುವುದು ಒಳ್ಳೆಯದಲ್ಲ ಎಂದು ಭಾವ. ||೪||

## ಆತ್ಮತತ್ತ್ವಜಿಜ್ಞಾಸೆ ಇಲ್ಲದವರಿಗೆ ದೇಹಬಂಧ

ಈ ರೀತಿ ದೇಹಾದಿ ಬಂಧವು ಅಧಿಕಾರಿಗಳಿಗೆ ಎಲ್ಲಿಯವರೆಗೆ ಎಂದರೆ ಹೇಳುವರು.

**ಪರಾಭವಸ್ತಾವದಬೋಧಜಾತೋ**
**ಯಾವನ್ನ ಜಿಜ್ಞಾಸತ ಆತ್ಮತತ್ತ್ವಮ್ ।**
**ತಾವತ್ ಕ್ರಿಯಾಸ್ತಾವದಿದಂ ಮನೋ ವೈ**
**ಕರ್ಮಾತ್ಮಕಂ ಯೇನ ಶರೀರಬಂಧಃ** ||೫||

**ಯಾವತ್** ಎಲ್ಲಿಯವರೆಗೆ **ಆತ್ಮತತ್ತ್ವಂ** ಪರಮಾತ್ಮ ಸ್ವರೂಪವನ್ನು **ನ ಜಿಜ್ಞಾಸತೇ** ಶ್ರವಣ, ಮನನ, ನಿದಿಧ್ಯಾಸನರೂಪ ಜಿಜ್ಞಾಸೆಯಿಂದ (ವಿಚಾರದಿಂದ) ತಿಳಿಯುವುದಿಲ್ಲವೋ **ತಾವತ್** ಅಲ್ಲಿಯವರೆಗೆ **ಅಬೋಧಜಾತಃ** ಪರಾಪರ ತತ್ತ್ವಜ್ಞಾನವಿಲ್ಲದ್ದರಿಂದ ಉಂಟಾದ **ಪರಾಭವಃ** ವಿವಿಧ ಸಾಂಸಾರಿಕ ಕ್ಲೇಶವು, ಅಸ್ವಾಭಾವಿಕ ದೇಹಾದಿ ಬಂಧವು ಇರುವುದು **ತಾವತ್** ಅಲ್ಲಿಯವರೆಗೆ ಮಾತ್ರ **ಕ್ರಿಯಾಃ** ಕ್ರಿಯೆಗಳು ಫಲಪ್ರದವಾಗುವವು (ಕ್ರಿಯಾಫಲಗಳೂ ಅಲ್ಲಿಯವರೆಗೆ ಎಂದರ್ಥ) **ಯೇನ** ಯಾವುದರಿಂದ **ಶರೀರಬಂಧಃ** ಶರೀರಬಂಧವು ಬರುವುದೋ **ತತ್** ಆ **ಕರ್ಮಾತ್ಮಕಂ** ಕರ್ಮವಶವಾದ **ಮನಃ** ಮನಸ್ಸು **ತಾವತ್** ತತ್ತ್ವಜ್ಞಾನ ಆಗುವವರೆಗೆ ಮಾತ್ರ ಇರುವುದು.

 

ಇಲ್ಲಿ ಅಪರೋಕ್ಷಜ್ಞಾನಾನಂತರ ಕ್ರಿಯೆಗಳೇ ಇರುವುದಿಲ್ಲ ಎಂದು ತೋರುವುದು. ಅದು ಪ್ರತ್ಯಕ್ಷಾದಿಪ್ರಮಾಣಗಳಿಂದ ಬಾಧಿತವು ಕಾರಣ ವಿವಕ್ಷಿತ ಅರ್ಥ ತಿಳಿಸುವರು

**ತಾತ್ಪರ್ಯ - ''ಕ್ರಿಯಾಫಲಂ ತಾವದೇವ ''।**

**ಕ್ರಿಯಾಫಲಂ** ಕ್ರಿಯಾಫಲವು **ತಾವದೇವ** ಅಲ್ಲಿಯವರೆಗೆ ಎಂದರ್ಥ. ಇದರಿಂದ ಮೂಲದಲ್ಲಿರುವ ಕ್ರಿಯಾಪದಕ್ಕೆ ಕ್ರಿಯಾಫಲಗಳು ಎಂದರ್ಥ ತಿಳಿಯಬೇಕು (ಕ್ರಿಯಾ ಶಬ್ದವು ಕ್ರಿಯಾ ಫಲಕ್ಕೆ ಉಪಲಕ್ಷಕ ಎಂದು ಭಾವ).

**ಕರ್ಮಾತ್ಮಕಂ** ಎಂಬುದಕ್ಕೆ ಕರ್ಮಾಭಿನ್ನವೆಂದರ್ಥವಾಗದಿರಲಿ ಎಂದು ಅರ್ಥ ಹೇಳುವರು

**ತಾತ್ಪರ್ಯ - ''ಕರ್ಮಾತ್ಮಕಂ ಕರ್ಮವಶಂ''**

ಇಲ್ಲಿ ಆತ್ಮ ಶಬ್ದಕ್ಕೆ ಸ್ವಾಮಿ ಎಂದರ್ಥ ಹೇಳುವರು. ಕಾರಣ ಕರ್ಮಾತ್ಮಕ ಎಂದರೆ ಕರ್ಮಸ್ವಾಮಿಕ ಎಂದರ್ಥ. ಕರ್ಮವಶಂ ಎಂಬುದು ತಾತ್ಪರ್ಯಾರ್ಥವೆಂದು ತಿಳಿಯಬೇಕು. ಅಂತೂ ಅಪರೋಕ್ಷಜ್ಞಾನಾನಂತರ ಪ್ರಾರಬ್ಧಕರ್ಮಾನುಸಾರ ನಿಷಿದ್ಧ ಕ್ರಿಯಾ ಮಾಡಿದರೂ ಅದರ ಫಲವಾಗುವುದಿಲ್ಲ ಎಂದು ಭಾವ.

ಇದನ್ನು **ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್** ಎಂಬ ಸೂತ್ರದಲ್ಲಿ **ತದ್ಯಥಾ ಪುಷ್ಕರಪಲಾಶೇऽಪೋ ನ ಶ್ಲಿಷ್ಯಂತಿ ಏವಮೇವಂವಿದಿ ಪಾಪಕರ್ಮ ನ ಶ್ಲಿಷ್ಯತೇ** ಎಂದು ಹೇಳಿದೆ.

ಜ್ಞಾನಿಗಳಿಗೆ ಕ್ರಿಯೆ ಇಲ್ಲ ಎನ್ನುವುದು **ಜ್ಞಾನೀ ತು ಕರ್ಮಾಣಿ ಸದೋದಿತಾನಿ ಕುರ್ಯಾತ್** ಎಂಬ ಪ್ರಮಾಣಬಾಧಿತ ಎಂಬ ಶಂಕೆಗೂ ಜ್ಞಾನಾನಂತರ ಬಂಧಕ ಕರ್ಮಗಳಿಲ್ಲ ಎಂದರ್ಥವೇ ಹೊರತು ನಿತ್ಯನೈಮಿತ್ತಕ ಕರ್ಮಗಳಿಲ್ಲವೆಂದರ್ಥವಲ್ಲ ಎಂದೂ ಹೇಳಿದಂತಾಯಿತು.।।೫।।

ಸಂಸಾರಕ್ಕೂ ಮೋಕ್ಷಕ್ಕೂ ಮೂಲಕಾರಣಾಂತರವನ್ನು ತಿಳಿಸುತ್ತಾ ಉಪಸಂಹಾರ ಮಾಡುವರು.

**ಏವಂ ಮನಃ ಕರ್ಮವಶಂ ಪ್ರಯುಂಕ್ತ**
**ಅವಿದ್ಯಯಾತ್ಮನ್ ವ್ಯವಧೀಯಮಾನೇ ।**
**ಪ್ರೀತಿರ್ನ ಯಾವನ್ಮಯಿ ವಾಸುದೇವೇ**
**ನ ಮುಚ್ಯತೇ ದೇಹಯೋಗೇನ ತಾವತ್ ॥೬॥**

**ಏವಂ** ಹಿಂದೆ ಹೇಳಿದಂತೆ ಆತ್ಮತತ್ತ್ವ ತಿಳಿಯದ ಮನುಷ್ಯನು **ಅವಿದ್ಯಯಾ** ಭಗವಂತನ ಸ್ವಾತಂತ್ರ್ಯಾಜ್ಞಾನದಿಂದ **ಮನಃ** ಮನಸ್ಸನ್ನು **ಕರ್ಮವಶಂ ಪ್ರಯುಂಕ್ತೇ** ಕರ್ಮಾಧೀನವಾಗುವಂತೆ ಯೋಜಿಸುವನು, ಸಂಸಾರಾಸಕ್ತವನ್ನಾಗಿ ಮಾಡುವನು. ಸಂಸಾರಕ್ಕೆ ಮೂಲಕಾರಣ ಅವಿದ್ಯಾ ಎಂದು ಹೇಳಿದಂತಾಯಿತು. ಅಥವಾ ಕರ್ಮಾಧೀನವಾದ ಮನಸ್ಸನ್ನು ವಿಷಯಗಳಲ್ಲಿಯೇ ಯೋಜಿಸುವನು ಎಂದರ್ಥ **ವ್ಯವಧೀಯಮಾನೇ** ಅವ್ಯಕ್ತಸ್ವಭಾವನಾದುದರಿಂದ ವ್ಯವಹಿತನಂತೆ ಇರುವ **ಆತ್ಮನ್** ಅಂತರ್ಯಾಮಿಯಾದ **ಮಯಿ ವಾಸುದೇವೇ** ವಾಸುದೇವನಾದ ನನ್ನಲ್ಲಿ **ಯಾವನ್ನಪ್ರೀತಿಃ** ಎಲ್ಲಿಯವರೆಗೆ ಭಕ್ತಿಯುಂಟಾಗುವುದಿಲ್ಲವೋ **ತಾವತ್** ಅಲ್ಲಿಯವರೆಗೆ **ದೇಹಯೋಗೇನ ನ ಮುಚ್ಯತೇ** ನಾನಾದೇಹ ಸಂಬಂಧರೂಪ ಬಂಧದಿಂದ ಮುಕ್ತನಾಗುವುದಿಲ್ಲ (ಇದರಿಂದ ಭಕ್ತಿಯೇ ಮುಕ್ತಿಗೆ ಕಾರಣವೆಂದು ಹೇಳಿದಂತಾಯಿತು).

ಇಲ್ಲಿ ಅವಿದ್ಯಯಾ ಎಂಬುದಕ್ಕೆ ಆತ್ಮನ್ ವ್ಯವಧೀಯಮಾನೇ ಎಂಬುದರೊಡನೆ ಅನ್ವಯಭ್ರಾಂತಿ ಬರುವುದು. ಕಾರಣ ವಿವಕ್ಷಿತ ತಾತ್ಪರ್ಯ, ಅನ್ವಯ ತಿಳಿಸುವರು

ತಾತ್ಪರ್ಯ - ''ಅವಿದ್ಯಯಾ ಪ್ರಯುಂಕ್ತೇ''

''**ಅವಿದ್ಯಯಾ ಪ್ರಯುಂಕ್ತೇ**'' ಎಂದರೆ ಪರಮಾತ್ಮನು ಸ್ವತಂತ್ರನೆಂಬ ಜ್ಞಾನವಿಲ್ಲದ್ದರಿಂದ ಮನಸ್ಸು ಸಂಸಾರದಲ್ಲಿಯೇ ಆಸಕ್ತವಾಗುವುದು ಎಂದು ಭಾವ. ॥೬॥

ಅವಿದ್ಯೆಯಿಂದ ಮನಸ್ಸು ಕರ್ಮವಶವಾಗುವಂತೆ ಮಾಡುವನೆಂಬುದನ್ನೇ ವಿವರಿಸುವರು

**ಯದಾನುಪಶ್ಯತ್ಯಯಥಾ ಗುಣೇಹಾಂ**
**ಸ್ವಾರ್ಥೇ ಪ್ರಮತ್ತಃ ಸಹಸಾಽವಿಪಶ್ಚಿತ್ ।**




**ಗತಸ್ಮೃತಿರ್ವಿಂದತಿ ತತ್ರ ತಾಪಾನಾಸಾದ್ಯ ಮೈಥುನ್ಯಮಾಗಾರಮಜ್ಞಃ ॥೭॥**

**ಯದಾ** ಯಾವಾಗ **ಅವಿಪಶ್ಚಿತ್** ಅವಿವೇಕಿಯು **ಸ್ವಾರ್ಥೇ** ಮೋಕ್ಷರೂಪ ಪ್ರಯೋಜನಕ್ಕೆ **ಗುಣೇಹಾಂ** ಸತ್ವಾದಿ ಗುಣಗಳ ಚೇಷ್ಟಾವನ್ನು ಅಥವಾ ಶಬ್ದಾದಿ ವಿಷಯೇಚ್ಛಾವನ್ನು **ವಸ್ತುತಃ** ವಾಸ್ತವಿಕವಾಗಿ **ಅಯಥಾ** ವಿಪರೀತವಾದುದನ್ನು **ಅನುಪಶ್ಯತಿ** ಅನುಕೂಲವೆಂದು, ತನಗೆ ವಿಹಿತ ಸಾಧನವೆಂದು ತಿಳಿಯುವನೋ **ತದಾ** ಆಗ **ಸಹಸಾ** ಒಮ್ಮೆಲೆ **ಗತಸ್ಮೃತಿಃ** ಶಾಸ್ತ್ರಾರ್ಥವನ್ನು ಮರೆತವನಾಗಿ, ಆದ್ದರಿಂದಲೇ **ಸ್ವಾರ್ಥೇ ಪ್ರಮತ್ತಃ** ತನ್ನ ಪ್ರಯೋಜನದಲ್ಲಿ ಪ್ರಮಾದವುಳ್ಳವನು ಆದ್ದರಿಂದ **ಅವಿಪಶ್ಚಿತ್** ಅಜ್ಞನು (ಮುಂದೆ ಆಗುವ ಅನರ್ಥವನ್ನು ತಿಳಿಯದ ಪುರುಷನು) **ಮೈಥುನ್ಯಂ** ಸ್ತ್ರೀ ಪುರುಷರ ಸಂಬಂಧಕ್ಕೆ ಯೋಗ್ಯವಾದ **ಆಗಾರಂ** ಮನೆಯನ್ನು **ಆಸಾದ್ಯ** ಹೊಂದಿ **ತತ್ರ** ಮನೆಯಲ್ಲಿ **ತಾಪಾನ್ ವಿಂದತಿ** ದುಃಖವನ್ನು ಹೊಂದುವನು. ॥೭॥

ಮನೆಯನ್ನು ಹೊಂದಿದ ಮಾತ್ರಕ್ಕೆ ತಾಪವೇಕಾಗಬೇಕು ಎಂದರೆ ತಾಪವಾಗುವ ರೀತಿಯನ್ನು ತಿಳಿಸುವರು.

**(ಏತಂ) ಪುಂಸಃ ಸ್ತ್ರಿಯಾ ಮಿಥುನೀಭಾವ ಏಷಃ(ಮೇನಂ)**
**ತಯೋರ್ಮಿಥೋ ಹೃದಯಗ್ರಂಥಿಮಾಹುಃ ।**
**(ಅತೋ) ಯತೋ ಗೃಹಕ್ಷೇತ್ರಸುತಾಪ್ತವಿತ್ತೈ-**
**ರ್ಜನಸ್ಯ ಮೋಹೋಽಯಮಹಂ ಮಮೇತಿ ॥೮॥**

**ಏಷಃ** ಈ **ಪುಂಸಃ** ಪುರುಷನಿಗೆ **ಸ್ತ್ರೀಯಾ ಸಹ** ಹೆಣ್ಣಿನೊಡನೆ **ಮಿಥುನೀಭಾವಃ** ಜೋಡಿಯಾಗುವುದೇನಿದೆಯೋ **ತಂ** ಅದನ್ನು **ತಯೋಃ** ಸ್ತ್ರೀಪುರುಷರ **ಹೃದಯಗ್ರಂಥಿಂ ಆಹುಃ** ಪರಸ್ಪರ ಮಾನಸಿಕವಾದ ಬಂಧಕ ಪಾಶವೆಂದು ಹೇಳುವರು.

**ಮಿಥುನೀಭಾವಮೇನಂ** ಎಂಬ ಪಾಠವಿದ್ದಾಗ **ತಂ** ಎಂದು ಅಧ್ಯಾಹಾರಬೇಕಿಲ್ಲ. ಮನೋಬಂಧದಿಂದಾದರೂ ಏನಾಗುವುದು ಎಂದರೆ ಹೇಳುವರು **ಯತಃ** ಯಾವ ಮನೋಬಂಧಪಾಶದಿಂದ **ಗೃಹ** ಮನೆ **ಕ್ಷೇತ್ರ** ಹೊಲ **ಸುತ** ಮಕ್ಕಳು **ಆಪ್ತ** ಬಂಧುಗಳು **ವಿತ್ತೈಃ** ಹಣದ ನಿಮಿತ್ತದಿಂದ **ಜನಸ್ಯ** ಜನರಿಗೆ **ಅಹಂ ಮಮ ಇತಿ ಮೋಹಃ ಅಯಂ** ನಾನು ನನ್ನದು ಎಂಬೀ ಮೋಹವು ಉಂಟಾಗುವುದು. ಆದ್ದರಿಂದ ತಾಪವಾಗುವುದು ಎಂದು ಭಾವ **ಅಹಂ** ನಾನೇ ಮಾಡುವವನು ಎಂಬ ಕರ್ತೃತ್ವಾಭಿಮಾನ ಮತ್ತು **ಮಮ** ಎಂಬುದು ಸ್ವಾಮಿತ್ವಾಭಿಮಾನ ಇದೇ ಬಂಧಕ, ತಾಪದಾಯಕವೆಂದು ಭಾವ.

### ಅಧಿಕಾರಿಗಳಿಗೆ ತಮ್ಮ ಸ್ತ್ರೀಯರಸಂಗ ಮೋಕ್ಷಪ್ರತಿಬಂಧಕವಲ್ಲ

ಇಲ್ಲಿ ಸ್ತ್ರೀಪುರುಷರು ಜೋಡಿಯಾಗುವುದು ತಾಪಜನಕವೆಂದು ಹೇಳಿದ್ದರಿಂದ ಅಧಿಕಾರಿಗಳಾರೂ ಜೋಡಿಯಾಗಬಾರದೆಂದು ಹೇಳಿದಂತೆ ತೋರುವುದು. ಅದು ಸರಿಯಲ್ಲ. "**ಕುಟುಂಬೀ ಶುಚೌ ದೇಶೇ**" ಮುಂತಾದ ವಾಕ್ಯದಲ್ಲಿ ಗೃಹಸ್ಥನಿಗೂ ಮೋಕ್ಷವಾಗುವುದೆಂದು ಹೇಳಿದೆ. ಕಾರಣ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು

"ಬ್ರಹ್ಮಾದ್ಯಾ ಯಾಜ್ಞವಲ್ಕ್ಯಾದ್ಯಾ ಮುಚ್ಯಂತೇ ಸ್ತ್ರೀಸಹಾಯಿನಃ ।
ಬಧ್ಯಂತೇ ಕೇಚನ್ನೈತೇಷಾಂ ವಿಶೇಷಂ ಚ ವಿದೋ ವಿದುಃ"

-ಇತಿ ಸತ್ಯಸಂಹಿತಾಯಾಮ್ ॥

ಬ್ರಹ್ಮಾದಿದೇವತೆಗಳು, ಯಾಜ್ಞವಲ್ಕ್ಯ ಮುಂತಾದ ಮುನಿಗಳು ಸ್ತ್ರೀಯರೊಡನೇ ಇದ್ದೂ (ಅಹಂಕಾರ ಮಮಕಾರವಿಲ್ಲದೇ) ಮುಕ್ತಿ ಹೊಂದಲು ಯೋಗ್ಯರು. ಆದ ಕಾರಣ ಅವರಿಗೆ ಗಾರ್ಹಸ್ಥ್ಯವು ಬಂಧಕವಲ್ಲ. ಇನ್ನು ಕೆಲವರು ಗೃಹಸ್ಥಾಶ್ರಮದಿಂದ ಬಂಧಿತರಾಗುವರು. ಆದರಲ್ಲಿಯೂ ಮೋಕ್ಷಯೋಗ್ಯನಾಗಿದ್ದರೆ ಸಜ್ಜನರ ಸಮಾಗಮವಾಗದಿದ್ದರೆ ಬಂಧಿತನಾಗುವನು. ಅಯೋಗ್ಯನಾಗಿದ್ದರೆ ಸ್ವಾಭಾವಿಕವಾಗಿಯೇ ಬಂಧಿತನಾಗುವನು. ಇವರಲ್ಲಿ (ಅಧಿಕಾರಿಗಳಲ್ಲಿ) ಯಾರು ಗೃಹಸ್ಥರಾಗಿ ಮುಕ್ತಿ ಹೊಂದುವರು, ಯಾರು ಗೃಹಸ್ಥಾಶ್ರಮ ತ್ಯಜಿಸಿ ಮುಕ್ತಿಗೆ ಹೋಗಲು ಯೋಗ್ಯರೆಂಬುದನ್ನು ಸರ್ವಜ್ಞರಾದವರೇ ತಿಳಿಯುವರು. ಕಾರಣ ಸನ್ಯಾಸಾದಿಗಳಲ್ಲಿ ಪ್ರವೃತ್ತಿ ಹೇಗೆ? ನಮ್ಮ ಸ್ವರೂಪ ನಿರ್ಣಯವಿಲ್ಲವಲ್ಲ ಎಂದು ಶಂಕಿಸಬೇಕಿಲ್ಲ. ಯೋಗ್ಯತಾಭಿಜ್ಞ ಗುರುವಿನಿಂದ ತಿಳಿದು ಪ್ರವರ್ತಿಸಬಹುದು (ಸಂನ್ಯಾಸ ಸ್ವೀಕರಿಸಿ, ನಾನು ಸ್ತ್ರೀಯರೊಡನೆಯೇ ಮುಕ್ತಿಗೆ ಹೋಗಲು ಯೋಗ್ಯನೇ ಅವಳಿಲ್ಲದೆ ಹೋಗಲಾರನೇ ಎಂದು ಶಂಕಿಸಬೇಕಿಲ್ಲ).

ಅಂತು ಇಲ್ಲಿ ಗೃಹಸ್ಥಾಶ್ರಮ ಬಂಧಕವೆಂದು ಹೇಳಿದ್ದು ಯಾರು ಸ್ತ್ರೀಯರೊಡನೆ ಮುಕ್ತಿ ಹೊಂದಲು ಯೋಗ್ಯರಲ್ಲವೋ ಅವರಿಗೆ ಎಂದು ತಿಳಿಯಬೇಕು. ॥೮॥

### ಹೃದಯಗ್ರಂಥಿನಾಶದಿಂದ ದುಃಖನಾಶ

ಈ ವಿಧವಾದ ಪರಿತಾಪ ಹೋಗಲೂ ಯಾವುದು ಕಾರಣ ಎಂದರೇ ಹೃದಯಗ್ರಂಥಿನಾಶವೇ ಎಂಬ ಅಭಿಪ್ರಾಯದಿಂದ ಹೇಳುವರು

 

**ಯದಾತ್ಮನೋ ಹೃದಯಗ್ರಂಥಿರಸ್ಯ**
**ಕರ್ಮಾನುಬಂಧೋ ದೃಢಮಾಶ್ಲಥೇತ ।**
**ತದಾ ಜನಃ ಸಂಪರಿವರ್ತಮಾನೋ**
**ಮುಕ್ತಃ ಪರಂ ಯಾತ್ಯತಿಹಾಯ ಹೇತುಮ್ ॥೯॥**

**ಯದಾ** ಯಾವಾಗ **ಅಸ್ಯ** ಈ ಜೀವನಿಗೆ **ಆತ್ಮನಃ** ತನ್ನ **ಕರ್ಮಾನುಬಂಧಃ** ಕರ್ಮ ಪರಂಪರೆಗೆ ಕಾರಣವಾದ **ಹೃದಯಗ್ರಂಥಿಃ** ಮನಸ್ಸೆಂಬ ಪಾಶದ ತಾಣವಾದ ಲಿಂಗದೇಹವು **ದೃಢಂ** ಮತ್ತೆ ಬಾರದಂತೆ **ಆಶ್ಲಥೇತ** ಸಂಪೂರ್ಣವಾಗಿ ಶಿಥಿಲವಾಗುವುದೋ **ತದಾ** ಆಗ **ಸಂಪರಿವರ್ತಮಾನಃ** ಸಂಸಾರದಲ್ಲಿ ತೊಳಲುತ್ತಿರುವ **ಜನಃ** ಅಧಿಕಾರಿಯು **ಹೇತುಂ** ಸಂಸಾರ ಕಾರಣವಾದ ಅಹಮಭಿಮಾನವನ್ನು **ಅತಿಹಾಯ** ಹೊಗಲಾಡಿಸಿಕೊಂಡು **ಮುಕ್ತಃ ಸನ್** ಎಲ್ಲ ತಾಪಗಳಿಂದ ಬಿಡಲ್ಪಟ್ಟವನಾಗಿ **ಪರಂ ಯಾತಿ** ಶ್ರೀಹರಿಯನ್ನು ಹೊಂದುವನು. ॥೯॥

ಹೃದಯಗ್ರಂಥಿಶೈಥಿಲ್ಯವೇ ಹೇಗಾಗುವುದು ಎಂದರೆ '**ತಪೋ ದಿವ್ಯಂ ಅರ್ಹಥ**' ಎಂದು ಹಿಂದೆ ಹೇಳಿದ್ದನ್ನು ಮತ್ತು ಬೇರೆ ಮೋಕ್ಷಸಾಧನವನ್ನು ಸೇರಿಸಿ ಹೇಳುವರು ನಾಲ್ಕು ಶ್ಲೋಕಗಳಿಂದ

**ಹರೌ ಗುರೌ ಮಯಿ ಭಕ್ತ್ಯಾನುವೃತ್ತ್ಯಾ ವಿತೃಷ್ಣಯಾ ದ್ವಂದ್ವತಿತಿಕ್ಷಯಾ ಚ ।**
**ಸರ್ವತ್ರ ಜಂತೋರ್ವ್ಯಸನಾವಗತ್ಯಾ ಜಿಜ್ಞಾಸಯಾ ತಪಸೇಹಾನಿವೃತ್ತ್ಯಾ ॥**

**ಹರೌ ಗುರೌ** ಹರಿಯೂ ಗುರುವೂ ಆದ **ಮಯಿ** ನನ್ನಲ್ಲಿ ಅಥವಾ ಗುರುವಿನಲ್ಲಿ ಅಂತರ್ಯಾಮಿಯಾಗಿರುವ ಹರಿಯಾದ ನನ್ನಲ್ಲಿ **ಭಕ್ತ್ಯಾ** ಭಕ್ತಿಯಿಂದ **ಅನುವೃತ್ತ್ಯಾ** ನಿರಂತರ ಸೇವೆಯಿಂದಲೂ **ವಿತೃಷ್ಣಯಾ** ಆಸೆಯನ್ನು ಬಿಡುವುದರಿಂದಲೂ **ದ್ವಂದ್ವತಿತಿಕ್ಷಯಾ** ಶೀತೋಷ್ಣ ಮೊದಲಾದ ದ್ವಂದ್ವಗಳನ್ನು ವಿಫಲಗೊಳಿಸುವುದರಿಂದ **ಸರ್ವತ್ರ** ಎಲ್ಲ ಯೋನಿಗಳಲ್ಲಿಯೂ ಇಹ ಪರಗಳಲ್ಲಿಯೂ **ಜಂತೋಃ** ಜೀವನಿಗೆ **ವ್ಯಸನಾವಗತ್ಯಾ** ದುಃಖವಿದೆ ಎಂದು ತಿಳಿದು **ಜಿಜ್ಞಾಸಯಾ** ಬ್ರಹ್ಮ ವಿಷಯಕ ವೇದವಾಕ್ಯ ವಿಚಾರದಿಂದಲೂ **ತಪಸಾ** ಪಂಚಾಗ್ನಿಮಧ್ಯದಲ್ಲಿರುವುದೇ ಮುಂತಾದ ಕಾಯಕ್ಲೇಶ ರೂಪ ತಪಸ್ಸಿನಿಂದಲೂ **ಈಹಾನಿವೃತ್ತ್ಯಾ** ತನಗೆ ವಿಹಿತವಲ್ಲದ ಕರ್ಮವನ್ನು ಬಿಡುವುದರಿಂದ ಅಥವಾ ನಿಷಿದ್ಧಕಾಮ ಪರಿತ್ಯಾಗದಿಂದಲೂ ಎಂದರ್ಥ. ॥೧೦॥

**ಈಹಾನಿವೃತ್ಯಾ** ಎಂಬುದಕ್ಕೆ ಎಲ್ಲ ಕರ್ಮ ಪರಿತ್ಯಾಗದಿಂದ ಎಂದರ್ಥ ತೋರುವುದು ಕಾರಣ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು

**ತಾತ್ಪರ್ಯ -**

**ಆತ್ಮನೋ ವಿಹಿತಂ ಕರ್ಮ ವರ್ಜಯಿತ್ವಾऽನ್ಯಕರ್ಮಣಃ ।**
**ಕಾಮಸ್ಯ ಚ ಪರಿತ್ಯಾಗೋ ನಿರೀಹೇತ್ಯಾಹುರುತ್ತಮಾಃ ॥ ಇತಿ ಚ ।**

ತನಗೆ ವಿಹಿತವಾದ ಕರ್ಮಗಳನ್ನು ಹೊರತುಪಡಿಸಿ ನಿಷಿದ್ಧ ಕರ್ಮಗಳನ್ನು ಬಿಡುವುದು ಮತ್ತು ನಿಷಿದ್ಧ ವಿಷಯಕಾಮನೆ ಬಿಡುವುದನ್ನು ಜ್ಞಾನಿಗಳಾದ ವ್ಯಾಸಾದಿಗಳು **ನಿರೀಹಾ** ಎನ್ನುತ್ತಾರೆ.

ಅಂದರೆ ಈಹಾ ಶಬ್ದಕ್ಕೆ ಚೇಷ್ಟಾ ಎಂದರ್ಥ ಇಟ್ಟುಕೊಂಡರೆ ತನಗೆ ವಿಹಿತವಲ್ಲದ ಕರ್ಮ ಬಿಡುವುದರಿಂದ ಎಂದರ್ಥ. ಇಚ್ಛಾ ಎಂದರ್ಥ ಇಟ್ಟುಕೊಂಡರೆ ನಿಷಿದ್ಧಕಾಮವನ್ನು ಬಿಡುವುದರಿಂದ ಎಂದರ್ಥ. ಅಂತೂ ವಿಹಿತಕರ್ಮ ಮಾಡಬೇಕು ನಿಷಿದ್ದಕರ್ಮಬಿಡಬೇಕು. ಅದರಂತೆ ಅನಿಷಿದ್ಧೇಚ್ಛೆ ಮಾಡಬೇಕು. ನಿಷಿದ್ಧೇಚ್ಛೆ ಮಾಡಬಾರದು ಎಂದು ಭಾವ. ಹೊರತು ಯಾವ ಕರ್ಮ ಮಾಡಬಾರದು ಯಾವ ಇಚ್ಛೆ ಮಾಡಬಾರದು ಎಂದರ್ಥವಲ್ಲ . ಅದು ಸಾಧ್ಯವೂ ಇಲ್ಲ . ॥೧೦॥

**ಮತ್ಕರ್ಮಭಿರ್ಮತ್ಕಥಯಾ ಚ ನಿತ್ಯಂ**
**ಮತ್ಪಾದಸಂಗಾದ್ಗುಣಕೀರ್ತನಾನ್ಮೇ ।**
**ನಿರ್ವೈರಸಾಮ್ಯೋಪಶಮೇನ ಪುತ್ರಾ**
**ಜಿಹಾಸಯಾ ದೇಹಗೇಹಾತ್ಮಬುದ್ಧೇಃ ॥೧೧॥**

**ಮತ್ಕರ್ಮಭಿಃ** ನನ್ನ ಆರಾಧನಾರೂಪ ಕರ್ಮಗಳಿಂದಲೂ **ಮತ್ಪಾದಸಂಗಾತ್** ನನ್ನ ಪಾದಗಳನ್ನು ಸೇವಿಸುವ ಮಹಾತ್ಮರ ಸಂಗದಿಂದ, ನನ್ನ ಸ್ವರೂಪವನ್ನು ಹೃದಯದಲ್ಲಿ ಹೊಂದಿರುವ ಮಹಾತ್ಮರ ಸಹವಾಸದಿಂದಲೂ, ನನ್ನ ಪ್ರತಿಮೆಗಳ ಸೇವೆಯಿಂದಲೂ **ಮೇ ಗುಣಕೀರ್ತನಾತ್** ಕೇಶವ, ನಾರಾಯಣ ಮುಂತಾದ ಗುಣ ಪ್ರತಿಪಾದಕ ನನ್ನ ನಾಮುಗಳನ್ನು ಭಕ್ತಿಯಿಂದ ಹೇಳುವುದರಿಂದಲೂ **ಭೂತೇಷು** ಪ್ರಾಣಿಗಳಲ್ಲಿ **ನಿರ್ವೈರೇಣ** ಹಿಂಸೆ ಮಾಡದಿರುವುದರಿಂದಲೂ **ಸಾಮ್ಯ** ಎಲ್ಲ ಪ್ರಾಣಿಗಳಲ್ಲಿ ಸಮತೆಯಿಂದ ಅಂದರೆ ಯೋಗ್ಯತಾನುಸಾರ ತಿಳಿಯುವುದರಿಂದ

 

**ಉಪಶಮೇನ** ಕ್ಷಮಾಗುಣದಿಂದಲೂ **ಹೇ ಪುತ್ರಾಃ** ಮಕ್ಕಳೇ **ದೇಹಗೇಹಾತ್ಮಬುದ್ಧೇಃ ಜಿಹಾಸಯಾ** ದೇಹದಲ್ಲಿ ನಾನೆಂಬ ಮನೆಯಲ್ಲಿ ನನ್ನದೆಂಬ ಸ್ವಾತಂತ್ರ್ಯಸ್ವಾಮಿತ್ತ್ವಬುದ್ಧಿಯನ್ನು ಬಿಡುವ ಇಚ್ಛೆಯಿಂದಲೂ. ।।೧೧।।

**ಅಧ್ಯಾತ್ಮಯೋಗೇನ ವಿವಿಕ್ತಸೇವಯಾ**
**ಪ್ರಾಣೇಂದ್ರಿಯಾತ್ಮಾಭಿಜಯೇನ ಸಮ್ಯಕ್ ।**
**ಸಚ್ಛ್ರದ್ಧಯಾ ಬ್ರಹ್ಮಚರ್ಯೇಣ ಶಶ್ವ-**
**ದಸಂಪ್ರಮಾದೇನ ಜಯೇನ ವಾಚಾಂ ।।೧೨।।**

**ಅಧ್ಯಾತ್ಮಯೋಗೇನ** ಹೃದಯದಲ್ಲಿರುವ ನನ್ನ ಪದಚಿಂತನೆಯಿಂದ ಅಥವಾ ಅಧ್ಯಾತ್ಮ ಶಾಸ್ತ್ರಾಭ್ಯಾಸದಿಂದ (ಪರಮಾತ್ಮ ವಿಷಯಕ ಶಾಸ್ತ್ರಾಭ್ಯಾಸದಿಂದ) **ವಿವಿಕ್ತಸೇವಯಾ** ಏಕಾಂತ ದೇಶದಲ್ಲಿರುವುದರಿಂದಲೂ **ಪ್ರಾಣೇಂದ್ರಿಯಾತ್ಮಾ-ಭಿಜಯೇನ** ಪ್ರಾಣವಾಯು, ಇಂದ್ರಿಯಗಳು ಮತ್ತು ಮನಸ್ಸಿನ ವಶೀಕರಣದಿಂದಲೂ **ಸಚ್ಛ್ರದ್ಧಯಾ** ನಿರ್ದುಷ್ಟವಾದ ಆಸ್ತಿಕ್ಯಬುದ್ಧಿಯಿಂದಲೂ **ಬ್ರಹ್ಮಚರ್ಯೇಣ** ಬ್ರಹ್ಮಚರ್ಯಪಾಲನದಿಂದಲೂ **ಶಶ್ವತ್** ಯಾವಾಗಲೂ **ಅಸಂಪ್ರಮಾದೇನ** ಇತಿಕರ್ತವ್ಯತೆಗಳನ್ನು ಮರೆಯದಿರುವುದರಿಂದಲೂ **ವಾಚಾಂ ಜಯೇನ** ವಾಗಿಂದ್ರಿಯ ಜಯದಿಂದಲೂ ಅಂದರೆ ಮೌನಧಾರಣದಿಂದಲೂ ಎಂದರ್ಥ. **ಪ್ರಾಣೇಂದ್ರಿ-ಯಾತ್ಮಾಭಿಜಯೇನ** ಎನ್ನುವುದರಿಂದಲೇ ವಾಗಿಂದ್ರಿಯಜಯವನ್ನೂ ಹೇಳಿ ಆಗಿದೆ. ಆದರೂ ದು:ಶಾಸ್ತ್ರಗಳ ಅಭ್ಯಾಸ (ಹಾಳು ಹರಟೆ) ಮಾಡಬಾರದೆಂದು ತಿಳಿಸಲು ಮತ್ತೆ ಪ್ರತ್ಯೇಕವಾಗಿ ವಾಗಿಂದ್ರಿಯ ಜಯವನ್ನು ಹೇಳಿರುವರು ಎಂದು ತಿಳಿಯಬೇಕು. ।।೧೨।।

**ಸರ್ವತ್ರ ಮದ್ಭಾವವಿಚಕ್ಷಣೇನ**
**ಜ್ಞಾನೇನ ವಿಜ್ಞಾನವಿರಾಜಿತೇನ ।**
**ಯೋಗೇನ ಧೃತ್ಯುದ್ಯಮಸತ್ತ್ವಯುಕ್ತೋ**
**ಲಿಂಗಂ ವ್ಯಪೋಹೇತ್ಕುಶಲೋಹಮಾಖ್ಯಮ್ ।।೧೩।।**

**ಸರ್ವತ್ರ** ಎಲ್ಲ ಸ್ಥಳದಲ್ಲಿ **ಮದ್ಭಾವವಿಚಕ್ಷಣೇನ** ನಾನು ಇರುವೆನೆಂಬ ವ್ಯಾಪ್ತಿಯನ್ನು ತಿಳಿಯುವುದರಿಂದ **ವಿಜ್ಞಾನವಿರಾಜಿತೇನ ಜ್ಞಾನೇನ** ಮುಕ್ತಿಗೆ ಕಾರಣವಾದ ವಿಶೇಷ ಗುಣಗಳ ಜ್ಞಾನದಿಂದ ಉತ್ತೇಜಿತವಾದ (ಸಹಿತವಾದ)

ವಿಷ್ಣುಸರ್ವೋತ್ತಮತ್ವ ಜ್ಞಾನದಿಂದ **ಯೋಗೇನ** ಧ್ಯಾನದಿಂದಲೂ **ಧೃತ್ಯುದ್ಭವಸತ್ತ್ವಯುಕ್ತಃ ಧೃತಿ** ವೈಷ್ಣವಸಿದ್ಧಾಂತದಿಂದ ಅಚಲನ **ಉದ್ಭವ** ಉದ್ಭೂತವಾದ(ಸ್ಪಷ್ಟವಾದ) ಸತ್ತ್ವಗುಣ ಇವುಗಳಿಂದ ಕೂಡಿದವನಾಗಿ **ಕುಶಲಃ** ಬುದ್ಧಿವಂತನಾದ ಅಧಿಕಾರಿಯು **ಅಹಮಾಖ್ಯಂ** ಅಹಂಕಾರ ಕಾರ್ಯಗಳಾದ ಭೂತ ಮತ್ತು ಇಂದ್ರಿಯಗಳಿಂದ ಉಪಚಿತವಾದ್ದರಿಂದಲೂ ಅಹಂ ಎಂಬ ಅಭಿಮಾನಕ್ಕೆ ಮುಖ್ಯಕಾರಣವಾದ್ದರಿಂದ ಅಹಂ ಎಂದು ಕರೆಸಿಕೊಳ್ಳುವ **ಲಿಂಗಂ** ಲಿಂಗಶರೀರವನ್ನು **ವ್ಯಪೋಹೇತ್** ಕಳೆದುಕೊಳ್ಳಬೇಕು. ।।೧೩।।

'ದ್ವಾತ್ರಿಂಶಲ್ಲಕ್ಷಣೈರ್ಯುಕ್ತಸ್ತೀಕ್ಷ್ಣದಂಷ್ಟ್ರಶ್ಚ ಸೌಮ್ಯದೃಕ್ ।
ಘೋರದೃಕ್ಚೇತಿ ಪುರುಷಃ ಸ ಸರ್ವಜ್ಞ ಉದಾಹೃತಃ' ।। ಇತ್ಯಧ್ಯಾತ್ಮೇ
ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ ।
ಸಪ್ತಪಾದಶ್ಚತುರ್ಹಸ್ತಃ ಸ ದೇವೈರಪಿ ಪೂಜ್ಯತೇ' ।। ಇತಿ ವಾಯುಪ್ರೋಕ್ತೇ
ನ್ಯಗ್ರೋಧಮಂಡಲೋ ವ್ಯಾಮೋ ಬಾಹೂ ನ್ಯಗ್ರೋಧ ಉಚ್ಯತೇ' ಇತಿ ।।

ಹೇಯವೆಂದು ತಿಳಿಸಲು ಲಿಂಗದೇಹಕ್ಕೆ ಬೇರೆ ವಿಶೇಷಣಗಳನ್ನು ಹೇಳುತ್ತಾ ಲಿಂಗದೇಹ ಭಂಗಾನಂತರ ಸ್ವರೂಪಾನಂದವನ್ನು ಅನುಭವಿಸುವನು ಎಂದು ಹೇಳುವರು

**ಕರ್ಮಾಶಯಂ ಹೃದಯಗ್ರಂಥಿಬಂಧ-**
**ಮವಿದ್ಯಯಾಽಽಸಾದಿತಮಪ್ರಮತ್ತಃ ।**
**ಅನೇನ ಯೋಗೇನ ಯಥೋಪದೇಶಂ**
**ಸಮ್ಯಗ್ ವ್ಯಪೋಹ್ಯೋಪರಮೇತ ಯೋಗಾತ್** ।।೧೪।।

**ಕರ್ಮಾಶಯಂ** ಕರ್ಮಪರಂಪರಾ ಸಂಪಾದಕವಾದ **ಹೃದಯಗ್ರಂಥಿಬಂಧಂ** ಸ್ತ್ರೀ ಪುರುಷರ ಪರಸ್ಪರ ಹೃದಯಗಳ ಅನುರಾಗರೂಪ ಬಂಧಕ್ಕೆ ಕಾರಣವಾದ **ಅವಿದ್ಯಯಾ** ಭಗವಂತನ ಅಜ್ಞಾನದಿಂದ(ಅವನ ಇಚ್ಛೆಯಿಂದ) **ಆಸಾದಿತಂ** ಅನಾದಿಕಾಲದಿಂದ ಪ್ರಾಪ್ತವಾದ ಲಿಂಗದೇಹವನ್ನು **ಅಪ್ರಮತ್ತಃ ಸನ್** ಕರ್ತವ್ಯದಲ್ಲಿ ಜಾಗರೂಕನಾಗಿ **ಅನೇನ** ಹಿಂದೆ ಹೇಳಿದ **ಯೋಗೇನ** ಉಪಾಯದಿಂದ **ವ್ಯಪೋಹ್ಯ** ಕಳೆದುಕೊಂಡು **ಯಥೋಪದೇಶಂ** ತನ್ನ ನಿಯತಗುರುಗಳ ಉಪದೇಶದಂತೆ **ಯೋಗಾತ್** ಅಪರೋಕ್ಷ ಜ್ಞಾನವನ್ನು ಹೊಂದಿ ಅನಂತರ ಮಾಡಿದ ಧ್ಯಾನಾದಿರೂಪ ಉಪಾಯದಿಂದ **ಉಪರಮೇತ್** ಭಗವಂತನ ಸಮೀಪದಲ್ಲಿ ಸ್ವರೂಪಾನಂದವನ್ನು ಅನುಭವಿಸುವನು.




## ಜ್ಞಾನವಿಜ್ಞಾನಶಬ್ದಗಳ ಅರ್ಥಭೇದ

ಹದಿಮೂರನೇ ಶ್ಲೋಕದಲ್ಲಿ **ಜ್ಞಾನೇನ ವಿಜ್ಞಾನ ವಿರಾಜಿತೇನ** ಎಂಬಲ್ಲಿ ಜ್ಞಾನವಿಜ್ಞಾನಗಳನ್ನು ಹೇಳಿರುವರು. ಅಲ್ಲಿಯೇ **ಸರ್ವತ್ರಮದ್ಭಾವವಿಚಕ್ಷಣೇನ** ಎಂದು ವಿಷ್ಣುವಿಷಯಕಜ್ಞಾನವನ್ನು ಪ್ರತ್ಯೇಕ ಹೇಳಿದ್ದರಿಂದ ಜ್ಞಾನವಿಜ್ಞಾನಗಳು ಜಗದ್ವಿಷಯಕ ಸಾಮಾನ್ಯವಿಶೇಷಜ್ಞಾನಗಳೆಂದು ಭ್ರಾಂತಿ ಬರುವುದು. ಅವೂ ಭಗವದ್ವಿಷಯಕವೇ ಎಂದರೆ ಸರ್ವತ್ರ ಎಂಬಲ್ಲಿ ಪ್ರತ್ಯೇಕವಾಗಿ ಜ್ಞಾನಾಂತರ ಹೇಳುವುದು ಅನುಪಪನ್ನ ಕಾರಣ ಪ್ರಮಾಣದಿಂದ ಜ್ಞಾನವಿಜ್ಞಾನಶಬ್ದಗಳ ಅರ್ಥ ತಿಳಿಸುವರು

**ತಾತ್ಪರ್ಯ - ಸರ್ವಸ್ಮಾದುತ್ತಮೋ ವಿಷ್ಣುರಿತಿ ಜ್ಞಾನಮುದಾಹೃತಂ ।**
**ಪ್ರತಿಜೀವಂ ಯೇನ ಮುಕ್ತಿಸ್ತದ್ವಿಜ್ಞಾನಂ ವಿದಾಂ ಮತಂ ॥ ಇತಿ ಚ ।**

ಶ್ರೀಹರಿಯು ಬ್ರಹ್ಮಾದಿಸರ್ವರಿಂದಲೂ ಉತ್ತಮನೆಂದು ತಿಳಿಯುವುದೇನಿದೆಯೋ ಅದು ಜ್ಞಾನವೆನಿಸುವುದು. ಯಾವ ಜ್ಞಾನದಿಂದ ಎಲ್ಲ ಜೀವರಿಗೆ ಮುಕ್ತಿಯಾಗುವುದೋ ಅದು ವಿಜ್ಞಾನವೆನಿಸುವುದು.

**ವಿವರಣೆ** :- ಸರ್ವಸಾಧಾರಣವಾಗಿ ಹರಿಸರ್ವೋತ್ತಮತ್ತ್ವ ಜ್ಞಾನವು ಅವರವರಿಗೆ ಮುಕ್ತಿ ಸಾಧನವು. ಇದು ಜ್ಞಾನಪದದಿಂದ ಇಲ್ಲಿ ಹೇಳಲಾಗಿದೆ. ಇನ್ನು ಯೋಗ್ಯಾಪರೋಕ್ಷಜ್ಞಾನ ಬಿಂಬಜ್ಞಾನಗಳು ವಿಜ್ಞಾನಪದದಿಂದ ಹೇಳಲಾಗಿವೆ. '**ಸರ್ವತ್ರಮದ್ಭಾವವಿಚಕ್ಷಣೇನ**' ಎಂಬಲ್ಲಿ ಶ್ರೀಹರಿಯ ವ್ಯಾಪ್ತತ್ವ ಜ್ಞಾನ ಹೇಳಿದೆ ಕಾರಣ ಅನುಪಪತ್ತಿ ಇಲ್ಲ .

**ಪ್ರಶ್ನೆ** :- ಜ್ಞಾನವಿಜ್ಞಾನಗಳನ್ನು ಭಿನ್ನವಾಗಿ ವ್ಯಾಖ್ಯಾನಿಸಿದರಿಂದ ವಿಜ್ಞಾನದಲ್ಲಿ ಜ್ಞಾನದ ಅರ್ಥವಾದ ಸರ್ವೋತ್ತಮತ್ವ ತೋರುವುದಿಲ್ಲ ಎಂದಂತಾಯಿತು. ಹಾಗಾದರೆ ವಿಜ್ಞಾನವು ಮೋಕ್ಷಜನಕ ಹೇಗಾಗುವುದು? '**ತಮೇವಂ ವಿದ್ವಾನ್ ಅಮೃತ ಇಹ ಭವತಿ**' ಎಂಬ ಉಪನಿಷತ್ತಿನಲ್ಲಿ ಸರ್ವೋತ್ತಮತ್ವ ಜ್ಞಾನವೇ ಮೋಕ್ಷಸಾಧನವೆಂದು ಹೇಳಲಾಗಿದೆಯಲ್ಲ ಎಂಬ ಶಂಕೆಗೆ ಪ್ರಮಾಣಾಂತರದಿಂದ ಉತ್ತರಿಸುವರು

ಜ್ಞಾನಂ ವಿಷ್ಣೋರುತ್ತಮತ್ವೇ ತದೇವ ಪ್ರತಿಪೂರುಷಂ ।
ವಿಶೇಷೇಣ ತು ವಿಜ್ಞಾನಂ ತಚ್ಚ ಜಾನಾತಿ ಸರ್ವವಿತ್ ॥

ವಿಷ್ಣುವಿನ ಸರ್ವೋತ್ತಮತ್ವಜ್ಞಾನವೇ ಜ್ಞಾನವು. ಆ ಸರ್ವೋತ್ತಮತ್ವಜ್ಞಾನವೇ ಮನುಷ್ಯೋತ್ತಮರನ್ನಾರಂಭಿಸಿ ಬ್ರಹ್ಮದೇವರ ಪರ್ಯಂತ ಪ್ರತ್ಯೇಕವಾಗಿ ಅವರವರಿಗೆ ಯೋಗ್ಯವಾದ ಮೋಕ್ಷಾನುಕೂಲ ವಿಶೇಷಸಹಿತವಾದಾಗ ವಿಜ್ಞಾನವೆನಿಸುತ್ತದೆ. ಕಾರಣ ಸರ್ವೋತ್ತಮತ್ವ ಜ್ಞಾನವೇ ವಿಶೇಷವಿಷಯಕವಾದಾಗ ವಿಜ್ಞಾನವಾದುದರಿಂದ ಮೇಲಿನ ಶಂಕೆಗೆ ಅವಕಾಶವಿಲ್ಲ.

## ಸರ್ವಜ್ಞರಾದ ಗುರುಗಳ ಉಪದೇಶದಿಂದ ಉಪಾಸ್ಯಗುಣವಿಶೇಷಗಳ ಜ್ಞಾನ

ಪ್ರತಿಯೊಬ್ಬರಿಗೆ ಉಪಾಸ್ಯವಾದ ಗುಣವಿಶೇಷಗಳನ್ನು ಮೊದಲು ತಿಳಿಯುವುದು ಅಶಕ್ಯವಾದುದರಿಂದ ಉಪಾಸನೆ ಮಾಡುವುದು ಹೇಗೆ ಎಂದರೆ ಹೇಳುವರು **ತಚ್ಚ** ಎಂದು. ಸರ್ವಜ್ಞರಾದ ಗುರುಗಳು ಅದನ್ನು ತಿಳಿಯುವರು. ಅವರ ಉಪದೇಶದಿಂದ ಅಧಿಕಾರಿಗಳಿಗೆ ಪೂರ್ವದಲ್ಲಿಯೇ ತಿಳಿಯುವುದು ಸುಲಭವೆಂದು ಭಾವ.

## ಸರ್ವಜ್ಞಗುರುಗಳ ದೇಹಲಕ್ಷಣಗಳು

ಗುರುವಿನ ಸಾರ್ವಜ್ಞ ತಿಳಿಯುವುದು ಹೇಗೆ ಎಂದರೆ ಅದನ್ನು ತಿಳಿಯುವ ಲಕ್ಷಣಗಳನ್ನು ಪ್ರಮಾಣದಿಂದ ತಿಳಿಸುವರು.

**ದ್ವಾತ್ರಿಂಶಲ್ಲಕ್ಷಣೈರ್ಯುಕ್ತಸ್ತೀಕ್ಷ್ಣದಂಷ್ಟ್ರಶ್ಚ ಸೌಮ್ಯದೃಕ್ ।**
**ಘೋರದೃಕ್ ಚೇತಿ ಪುರುಷಃ ಸರ್ವಜ್ಞ ಉದಾಹೃತಃ ॥ ಇತ್ಯಧ್ಯಾತ್ಮೇ**

ಮೂವತ್ತೆರಡು ಲಕ್ಷಣಗಳಿಂದ ಕೂಡಿದವನು, ದೃಢವಾದ ಸೂಕ್ಷ್ಮ (ಚೂಪಾದ) ಹಲ್ಲುಗಳುಳ್ಳವನು, ಭಕ್ತರಿಗೆ ಸೌಮ್ಯಕಾಂತಿ ತೋರುವವನು, ಅಭಕ್ತರಿಗೆ ಘೋರರೂಪವನ್ನು ತೋರುವವನೂ ಸರ್ವಜ್ಞನೆನಿಸುವನು.

ಚೆನ್ನಾಗಿ ಕೆಂಪಾದ **ಪಾದ** ಪಾದಗಳು **ಕರ** ಕೈಗಳು **ನಖರ** ಉಗುರು **ಜಿಹ್ವಾಗ್ರ** ನಾಲಿಗೆ ತುದಿ **ಅಧರೋಷ್ಠ** ಕೆಳದುಟಿ **ನೇತ್ರ** ಕಣ್ಣುಗಳು, ವಿಶಾಲವಾದ ಎದೆ ದೊಡ್ಡ ಭುಜಗಳು ಶಂಖದಂತೆ ಕುತ್ತಿಗೆ ಮುಂತಾದ ಪುರುಷಲಕ್ಷಣಗಳನ್ನು ತಿಳಿಸುವ ಗ್ರಂಥದಿಂದ ಮೂವತ್ತೆರಡು ಲಕ್ಷಣವನ್ನು ತಿಳಿಯಬೇಕು.

★ ಮೂವತ್ತೆರಡು ಲಕ್ಷಣಗಳಬಗ್ಗೆ ಹೆಚ್ಚಿನ ವಿವರಕ್ಕಾಗಿ ಶ್ರೀನಾರಾಯಣ ಪಂಡಿತಾಚಾರ್ಯರ ಸಂಗ್ರಹರಾಮಾಯಣವನ್ನು ನೋಡಬಹುದು.




ಮತ್ತೊಂದು ಬಗೆಯ ಲಕ್ಷಣ ಹೇಳುವರು

''ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ ।
ಸಪ್ತಪಾದಶ್ಚತುರ್ಹಸ್ತಃ ಸ ದೇವೈರಪಿ ಪೂಜ್ಯತೇ ।'' ಇತಿ ವಾಯುಪ್ರೋಕ್ತೇ
ನ್ಯಗ್ರೋಧಮಂಡಲೋ ವ್ಯಾಮೋ ಬಾಹೂ ನ್ಯಗ್ರೋಧ ಉಚ್ಯತೇ'' ಇತಿ

ಯಾವನು ತನ್ನ ಕಾಲಿನಿಂದ ತಲೆಯವರೆಗೆ (ಅಡಿಯಿಂದ ಮುಡಿಯವರೆಗೆ) ಎತ್ತರವನ್ನು ನೋಡುವಾಗ ತನ್ನ ಬೆರಳುಗಳಿಂದ ೯೬ ಅಂಗುಲ ಅಂದರೆ ೮ ಗೇಣು ಪರಿಮಾಣ ಉಳ್ಳವನೋ, ೪೮ ಅಂಗುಲಗಳಿಂದ ಹೊಟ್ಟೆಯ ಸುತ್ತಳತೆ ಉಳ್ಳವನೋ ಮತ್ತು ಎತ್ತರವನ್ನೇ ಪಾದದಿಂದ ಎಣಿಕೆ ಮಾಡುವಾಗ ಏಳು ಹೆಜ್ಜೆ ಪರಿಮಾಣ ಉಳ್ಳವನೋ ಅಥವಾ ೪ ಮೊಳ ಪರಿಮಾಣ ಉಳ್ಳವನೋ ಅವನು ಸರ್ವಜ್ಞನು. ಇವನು ದೇವತೆಗಳಿಂದಲೂ ಪೂಜಿತನಾಗುವನು ಎಂದು ವಾಯುಪ್ರೋಕ್ತದಲ್ಲಿ ಹೇಳಿದೆ.

ಇಲ್ಲಿ **ನ್ಯಗ್ರೋಧಪರಿಮಂಡಲಃ** ಎನ್ನುವುದರ ಅರ್ಥ ಸುಗಮವಲ್ಲ. ಕಾರಣ ವಿವರಿಸುವರು **ನ್ಯಗ್ರೋಧಮಂಡಲೋ ವ್ಯಾಮಃ** ಎಂದು. ನ್ಯಗ್ರೋಧವೆಂದರೆ ವ್ಯಾಮ (ಮಾರು) ಎಂದರ್ಥ. ನ್ಯಗ್ರೋಧ ಶಬ್ದಕ್ಕೆ ವ್ಯಾಮ ಎಂದು ಅರ್ಥ ಹೇಗೆ ಸಿದ್ಧಿಸುತ್ತದೆ ಎಂದರೆ ಹೇಳುವರು - **ಬಾಹೂ ನ್ಯಗ್ರೋಧ** ಉಚ್ಯತೇ ಎಂದು. **ನ್ಯಗ್ರೋಧ** ಶಬ್ದಕ್ಕೆ ಬಾಹುಗಳು ಎಂದು ಕೋಶದಲ್ಲಿ ಪ್ರಸಿದ್ಧಿ ಇದೆ. **ವ್ಯಾಮ** ಎಂದರೆ ಚಾಚಿದ ಬಾಹುಗಳು ಎಂದು ಅರ್ಥ. ಕಾರಣ ನ್ಯಗ್ರೋಧ ಶಬ್ದದ ಸಮಾನಾರ್ಥವಾದ ಬಾಹುಶಬ್ದಕ್ಕೆ ಸಮಾನಾರ್ಥವಾದ ವ್ಯಾಮವನ್ನು ನ್ಯಗ್ರೋಧಪದದಿಂದ ಇಲ್ಲಿ ಹೆಲಿರುವರೇ ಹೊರತು ನ್ಯಗ್ರೋಧ ಎಂದರೆ ವಟವೃಕ್ಷವಲ್ಲ.

ಕಾರಣ **ನ್ಯಗ್ರೋಧಪರಿಮಂಡಲಃ** ಎಂದರೆ ವ್ಯಾಮಪರಿಮಿತದೈರ್ಘ್ಯ ಉಳ್ಳವನು ಅಂದರೆ ಮಾರುದ್ದ ಅಳತೆ ಉಳ್ಳವನು ಎಂದರ್ಥ. ಕಾರಣ ವಟವೃಕ್ಷ ಸಮಾನ ಪರಿಮಾಣದ ಮನುಷ್ಯ ಇರುವುದು ಅಸಂಭಾವಿತ ಎಂದು ಶಂಕಿಸಬಾರದು. ।।೧೪।।

### ಋಷಭನಿಂದ ಮಕ್ಕಳಿಗೆ ಉಪದೇಶ

ಭಗವಂತನಾದ ಋಷಭನು ಯೋಗಿಯಾದವನು ನನ್ನ ಪ್ರೀತಿಗಾಗಿ ಸಜ್ಜನರಿಗೆ ಉಪದೇಶ ಮಾಡಬೇಕು ಎಂದು ಹೇಳುವನು.

**ಪುತ್ರಾಂಶ್ಚ ಶಿಷ್ಯಾಂಶ್ಚ ಪಿತಾ ಗುರುರ್ವಾ**
**ಮಲ್ಲೋಕಕಾಮೋ ಮದನುಗ್ರಹಾರ್ಥಃ ।**
**ಇತ್ಥಂ ವಿಮನ್ಯುರನುಶಿಷ್ಯಾದತಜ್ಜ್ಞಾನ್**
**ನ ಯೋಜಯೇತ್ ಕರ್ಮಸು ಕರ್ಮಮೂಢಾನ್ ।**
**ಕಂ ಯೋಜಯನ್ ಮನುಜೋಽರ್ಥಂ ಲಭೇತ**
**ನಿಪಾತಯನ್ನಷ್ಟದೃಶಂ ಹಿ ಗರ್ತೇ ॥೧೫॥**

**ಮಲ್ಲೋಕಕಾಮಃ** ನನ್ನ ಲೋಕವನ್ನು ಹೊಂದಬೇಕೆಂದು ಇಚ್ಛಿಸುವ (ಇದು ಮಧ್ಯಮಾಧಿಕಾರಿಗಳ ದೃಷ್ಟಿಯಿಂದ ಹೇಳಿದ್ದು) ಉತ್ತಮಾಧಿಕಾರಿ ದೃಷ್ಟಿಯಿಂದ **ಮದನುಗ್ರಹಾರ್ಥಃ** ನನ್ನ ಅನುಗ್ರಹವೇ ಪ್ರಯೋಜನವಾಗಿವುಳ್ಳ **ಪಿತಾ** ತಂದೆಯಾಗಲಿ **ಗುರುಃ** ಗುರುವಾಗಲಿ **ಪುತ್ರಾನ್** ಮಕ್ಕಳನ್ನು **ಶಿಷ್ಯಾನ್** ಶಿಷ್ಯರನ್ನು **ಇತ್ಥಂ** '**ಹರೌ ಗುರೌ**' ಮುಂತಾಗಿ ಹೇಳಿದ ಭಾಗವತ ಧರ್ಮಾನುಷ್ಠಾನ ಮಾರ್ಗದಿಂದ **ವಿಮನ್ಯುಃ** ಉಪದೇಶ ಮಾಡಿದ ಮೇಲೂ ತಿಳಿಯದ ಅಂಶವನ್ನು ಕೇಳಿದಾಗ ಕೋಪ ಮಾಡದೇ **ಅತದಜ್ಞಾನ್** ಮೋಕ್ಷೋಪಾಯವನ್ನು ತಿಳಿಯದವರನ್ನು **ಅನುಶಿಷ್ಯಾತ್** ಉಪದೇಶಿಸಬೇಕು **ಕರ್ಮಮೂಢಾನ್** ಕಾಮ್ಯಕರ್ಮಗಳೇ ಪರಮಪುರುಷಾರ್ಥ ಸಾಧನವೆಂದು ಭ್ರಾಂತರಾದವರನ್ನು **ಕರ್ಮಸು ನ ಯೋಜಯೇತ್** ಪ್ರವೃತ್ತ ಕರ್ಮದಲ್ಲಿ ಪ್ರೇರಿಸಬಾರದು. (ಕರ್ಮ ಮಾಡೆಂದು ಪ್ರೇರಿಸಿದರೆ ಪ್ರೇರಕರನ್ನು ಗುರುವೆಂದು ಎಲ್ಲರೂ ಪೂಜಿಸುವರು. ಪ್ರೇರಿಸದೇ ಇದ್ದಲ್ಲಿ ಪೂಜಾದಿಗಳ ಲಾಭವಾಗುವುದಿಲ್ಲ ಕಾರಣ ಏಕೆ ಯೋಜಿಸಬಾರದು ಎಂದರೆ) **ಮನುಜಃ** ಜ್ಞಾನಿಯು **ಯೋಜಯನ್** ಕಾಮ್ಯಕರ್ಮದಲ್ಲಿ ಪ್ರೇರಿಸಿ **ಕಂ ಅರ್ಥಂ ಲಭೇತ** ಯಾವ ಪುರುಷಾರ್ಥ ಹೊಂದುವನು? ಯಾವುದನ್ನೂ ಹೊಂದಲಾರ. **ನಷ್ಟದೃಶಂ** ಜ್ಞಾನಚಕ್ಷುಸ್ಸಿಲ್ಲದವನನ್ನು **ಗರ್ತೇ** ಸಂಸಾರ ಕೂಪದಲ್ಲಿ, ನರಕದಲ್ಲಿ **ಪಾತಯನ್** ಬೀಳಿಸಿ ತಾನೂ ನರಕವನ್ನೇ ಹೊಂದುವನು ಎಂದು ಭಾವ. ॥೧೫॥

**ನ ಯೋಜಯೇತ್** ಎಂದು ಹೇಳಿದ್ದನ್ನೇ ಉಪಪಾದಿಸುವರು ಮುಂದಿನ ಮೂರು ಶ್ಲೋಕಗಳಿಂದ

**ಲೋಕಃ ಸ್ವಯಂ ಶ್ರೇಯಸಿ ನಷ್ಟದೃಷ್ಟಿ-**
**ರ್ಯೋಽರ್ಥಾನ್ ಸಮೀಹೇತ ನಿಕಾಮಕಾಮಃ ।**




**ಅನ್ಯೋನ್ಯವೈರಂ ಸುಖಲೇಶಹೇತೋ-**
**ರನಂತದುಃಖಂ ಚ ನ ವೇದ ಮೂಢಃ** ॥೧೬॥

**ಲೋಕಃ** ಜನರು **ಶ್ರೇಯಸಿ** ಪರಮಪುರುಷಾರ್ಥ ಮೋಕ್ಷಸಾಧನ ವಿಷಯದಲ್ಲಿ **ಸ್ವಯಂ** ಸ್ವಾಭಾವಿಕವಾಗಿ (ತಾವಾಗಿಯೇ) **ನಷ್ಟದೃಷ್ಟಿಃ** ತಿಳುವಳಿಕೆ ಇಲ್ಲದವರು **ಯಃ** ಯಾವನು **ನಿಕಾಮಕಾಮಃ** ಅತಿಶಯ ಕಾಮನೆಯುಳ್ಳವನಾಗಿ **ಅರ್ಥಾನ್** ಮೋಕ್ಷೇತರ ಪುರುಷಾರ್ಥಗಳನ್ನು **ಸಮೀಹೇತ್** ಇಚ್ಛಿಸುವನು (ಅರ್ಥೇಚ್ಛೆಯು ಸುಖಕಾರಣ ವಾದುದರಿಂದ ಅದನ್ನಿಚ್ಛಿಸಿದವನು ನಷ್ಟದೃಷ್ಟಿ ಏಕೆ ಎಂದರೆ) **ಸುಖಲೇಶಹೇತೋಃ** ಅಲ್ಪಸುಖಕ್ಕಾಗಿ **ಅನ್ಯೋನ್ಯವೈರಂ** ಪರಸ್ಪರ ವಿರೋಧವನ್ನು **ಅನಂತದುಃಖಂ** ಬಹಳ ದುಃಖಕೊಡುವುದನ್ನು **ಮೂಢಃ** ಮೂರ್ಖನು **ನ ವೇದ** ತಿಳಿಯಲಾರನು. ಅಂದರೆ ಸುಖವು ಸ್ವಲ್ಪ ಅದೂ ಬಹು ದುಃಖದಿಂದ ಕೂಡಿದ್ದು ಎಂದು ತಿಳಿಯದಿರುವುದರಿಂದ ನಷ್ಟದೃಷ್ಟಿ ಎಂದು ಭಾವ. ॥೧೬॥

**ಕಸ್ತಂ ಸ್ವಯಂ ತದಭಿಜ್ಞೋ ವಿಪಶ್ಚಿ-**
**ದವಿದ್ಯಾಯಾಮಂತರೇ ವರ್ತಮಾನಮ್ ।**
**ದೃಷ್ಟ್ವಾ ಪುನಸ್ತಂ ಸಘೃಣಃ ಕುಬುದ್ಧಿಂ**
**ಪ್ರಯೋಜಯೇದುತ್ಪಥಗಂ ಯಥಾಂಧಮ್** ॥೧೭॥

**ತಂ ಕುಬುದ್ಧಿಂ** ಈ ರೀತಿಯಾದ ದುಷ್ಟ ಬುದ್ಧಿಯುಳ್ಳವನ ದೃಷ್ಟಾಂತ ನೋಡಿ **ತದಬಿಜ್ಞಃ** ಪ್ರವೃತ್ತ ನಿವೃತ್ತ ಎಂಬ ಎರಡೂ ಮಾರ್ಗಗಳಿವೆಯೆಂದು ತಿಳಿದ **ವಿಪಶ್ಚಿತ್** ಜ್ಞಾನಿಯು **ಸಘೃಣಃ** ದಯಾಳು ಆದವನು **ಸ್ವಯಂ** ಸ್ವಾಭಾವಿಕವಾಗಿಯೇ **ಅವಿದ್ಯಾಯಾಂ ಅಂತರೇ** ಅಜ್ಞಾನ ನಿಮಿತ್ತಕ ಸಂಸಾರಕೂಪದಲ್ಲಿ **ವರ್ತಮಾನಂ** ಇರುವವನನ್ನು **ಕಃ** ಯಾರುತಾನೇ **ಪುನಃ** ಮತ್ತೆ **ಉತ್ಪಥಗಂ ಅಂಧಂ ಯಥಾ** ಕಣ್ಣಿಲ್ಲದವನು ಹಾದಿಯನ್ನು ಬಿಟ್ಟು ಹೋಗುವಾಗ ದಾರಿಯನ್ನು ತಿಳಿದ ಕೃಪಾಳುವು, ಹೊರಟ ಹಾದಿಯಲ್ಲೇ ಹೋಗು ಎಂದು ಹೇಳದಿರುವಂತೆ **ಪ್ರಯೋಜಯೇತ್** ಪ್ರವೃತ್ತ ಮಾರ್ಗದಲ್ಲಿ ಪ್ರೇರಿಸಿಯಾನು? ಪ್ರೇರಿಸಲಾರನೆಂದರ್ಥ.

ಪ್ರವೃತ್ತ ಮಾರ್ಗದಲ್ಲಿ ಯಾರೂ ಪ್ರವರ್ತಿಸಲಾರರು ಎಂದು ಹೇಳಿದ್ದು ಸರಿಯಲ್ಲ. ಅದರಲ್ಲಿಯೇ ಪ್ರಯೋಜಿಸಿದ ಗುರು ಮೊದಲಾದ ಬಹಳ ಜನ ನಮ್ಮವರೇ ಇದ್ದಾರೆ. ಮತ್ತು ಪ್ರವೃತ್ತಕರ್ಮ ಇಂದ್ರಾದಿ ದೇವತೋದ್ದೇಶಕವೂ

ಆಗಿದೆ. ಕಾರಣ ಏಕೆ ನಿಷೇಧಿಸುವುದು ಎಂದರೆ ಪ್ರವೃತ್ತಿ ಮಾರ್ಗದಲ್ಲಿ ಪ್ರೇರಿಸುವವರು ಗುರುಗಳು, ಸ್ವಜನರು ಅಲ್ಲವೇ ಅಲ್ಲ. ಅಂಥವರನ್ನು ಗುರುಗಳು, ಸ್ವಜನರು ಎಂಬುದಾಗಿ ತಿಳಿಯಬಾರದು ಎಂದು ಹೇಳುವರು.

**ಗುರುರ್ನ ಸಃ ಸ್ಯಾತ್ ಸ್ವಜನೋ ನ ಸಃ ಸ್ಯಾತ್**
**ಪಿತಾ ನ ಸಃ ಸ್ಯಾತ್ ಜನನೀ ನ ಸಾ ಸ್ಯಾತ್ ।**
**ದೈವಂ ನ ತತ್ ಸ್ಯಾನ್ನ ಪತಿಶ್ಚ ಸಃ ಸ್ಯಾ-**
**ನ್ನಮೋಚಯೇದ್ಯಃ ಸಮುಪೇತಮೃತ್ಯುಂ ॥೧೮॥**

**ಯಃ** ಯಾರು **ಸಮುಪೇತಮೃತ್ಯುಂ** ಅಜ್ಞಾನದಿಂದ ಬಂದ ಸಂಸಾರವನ್ನು ನ **ಮೋಚಯೇತ್** ನಿವೃತ್ತಮಾರ್ಗವನ್ನು ಉಪದೇಶಿಸಿ ಬಿಡಿಸುವುದಿಲ್ಲವೋ, ವಿಪರೀತವಾಗಿ ಪ್ರವೃತ್ತಿ ಮಾರ್ಗವನ್ನು ಉಪದೇಶಿಸುವನೋ **ಸಃ** ಅವನು **ಗುರುಃ** ನ ಗುರು ಅಲ್ಲ **ಸಃ ಸ್ವಜನಃ ನ ಸ್ಯಾತ್** ಅವನು ಬಂಧುವಾಗಲಾರ **ಸಃ ಪಿತಾ ನ ಸ್ಯಾತ್** ಅವನು ತಂದೆಯಾಗಲಾರ **ಜನನೀ ನ ಸಾ ಸ್ಯಾತ್** ಅವಳು ತಾಯಿಯಾಗಲಾರಳು **ದೈವಂ ನ ತತ್ ಸ್ಯಾತ್** (ನಮ್ಮ ಕುಲದೇವರು ಒಬ್ಬರಲ್ಲಿ ಪ್ರವೇಶಿಸಿ ಹೀಗೇ ಹೇಳಿದರು ಎಂಬಂತೆ) ಪ್ರವೃತ್ತಕರ್ಮ ಉದ್ದೇಶ್ಯವಾದ ದೇವತೆ ದೇವತೆಯಲ್ಲ **ಪತಿಃ ನ ಸ್ಯಾತ್** ಗಂಡನು ಯಜಮಾನನು ಆಗಲಾರ ಅಂದರೆ ಗುರು, ಬಂಧು, ತಂದೆ, ತಾಯಿ, ದೈವ, ಒಡೆಯ, ಗಂಡ ಎಂದು ಗೌರವಿಸಲು ಪೂಜಿಸಲು ಯೋಗ್ಯರಲ್ಲ ಎಂದು ಭಾವ. ॥೧೮॥

ಆದ್ದರಿಂದ ಗುರು ಮುಂತಾದವರು ಶ್ರೀಹರಿಯ ಸ್ವರೂಪವನ್ನು ಮೋಕ್ಷಸಾಧನವೆಂದು ಉಪದೇಶಿಸಬೇಕು ಎಂದು ಹೇಳುವರು. ಈ ರೀತಿಯಾಗಿ ಎಲ್ಲ ಅಧಿಕಾರಿಗಳಿಗೆ ಸಾಧಾರಣವಾದ ಮೋಕ್ಷಸಾಧನವನ್ನು ತಿಳಿಸಿ ಈಗ ತನ್ನ ಮಕ್ಕಳಲ್ಲಿ ಸ್ಪರ್ಧೆ ಉಂಟಾಗದಿರಲಿ ಎಂಬ ಅಭಿಪ್ರಾಯದಿಂದ ಹಿರಿಯ ಅಣ್ಣನ ಸೇವೆಯು ಮೋಕ್ಷಸಾಧನವೆಂದು ತಿಳಿಸಲು ಅದಕ್ಕೆ ಉಪಯುಕ್ತವಾಗಿ ಮೊದಲಿಗೆ ತನ್ನ ಶರೀರದ ಸ್ಥಿತಿಯನ್ನು ಅವರ ಜನ್ಮವನ್ನು ಹೇಳುವರು

**ಇದಂ ಶರೀರಂ ಮಮ ದುರ್ವಿಭಾವ್ಯಂ**
**ಸತ್ವಂ ಹಿ ಮೇ ಹೃದಯಂ ಯತ್ರ ಧರ್ಮಃ ।**

 

**ಪೃಷ್ಠೇ ಕೃತೋ ಮೇ ಯದಧರ್ಮ ಆರಾ-**
**ದತೋ ಹಿ ಮಾಮೃಷಭಂ ಪ್ರಾಹುರಾರ್ಯಾಃ ॥೧೮॥**

**ಮಮ** ನನ್ನ **ಇದಂ ಶರೀರಂ** ಮನುಷ್ಯ ಶರೀರದಂತೆ ಕಾಣುವ ಈ ಶರೀರವು **ದುರ್ವಿಭಾವ್ಯಂ** ಅಪ್ರಾಕೃತವಾದುದರಿಂದ ಪ್ರಾಕೃತರಿಂದ ತಿಳಿಯಲಶಕ್ಯವಾದುದು. ಏಕೆಂದರೆ **ಹಿ** ಯಾವ ಕಾರಣ (ರಜೋಗುಣ ತಮೋಗುಣಗಳಲ್ಲಿ) **ಸತ್ವಂ** ಸತ್ವಗುಣವೇ **ಹೃದಯಂ** ಪ್ರಿಯವಾದುದು ಆದ್ದರಿಂದಲೇ **ಯತ್ರ** ನನ್ನ ಶರೀರವಿದ್ದಲ್ಲಿ **ಧರ್ಮಃ** ಧರ್ಮವು ಪ್ರವೃತ್ತವಾಗಿರುವುದು **ಅಧರ್ಮಃ** ಅಧರ್ಮವು **ಆರಾತ್** ದೂರದಿಂದಲೇ **ಪೃಷ್ಠೇ ಕೃತಃ** ಹಿಮ್ಮೆಟ್ಟುವುದು (ಇರಲಾರದು) **ಅತಃ** ಆದ್ದರಿಂದಲೇ **ಮಾಂ** ನನ್ನನ್ನು **ಆರ್ಯಾಃ** ಜ್ಞಾನಿಗಳು **ಋಷಭಂ ಪ್ರಾಹುಃ** ಶ್ರೇಷ್ಠನೆಂದು ಕರೆಯುವರು.

**ವಿಜಯಧ್ವಜರ ಪ್ರಕಾರ**

**ಹಿ** ಯಾವ ಕಾರಣ **ಮೇ ಹೃದಯಂ** ನನ್ನ ಹೃದಯವು **ಸತ್ವಂ** ಬಲಜ್ಞಾನ ಸಮಾಹಾರ ರೂಪವಾದುದು **ಯತ್ರ** ಜ್ಞಾನಾತ್ಮಕವಾದ ಹೃದಯದಲ್ಲಿ **ಧರ್ಮಃ** ಧರ್ಮವು ಸ್ಥಿತವಾಗಿದೆ **ಮಯಾ** ನನ್ನಿಂದ **ಅಧರ್ಮಃ** ಅಧರ್ಮವು **ಆರಾತ್ ಪೃಷ್ಠೇ ಕೃತಃ** ದೂರದಿಂದಲೇ ಓಡಿಸಲ್ಪಟ್ಟಿದೆ. ಇದರಿಂದ ಜ್ಞಾನಪೂರ್ವಕ ಮಾಡಿದ ಧರ್ಮವೇ ಫಲಪ್ರದವೆಂದು ತಿಳಿಸಿದಂತಾಯಿತು. ॥೧೯॥

ಹೇಳಿದ ವಿಷಯವನ್ನು ಮುಗಿಸುತ್ತಾ ತಮ್ಮ ಮಕ್ಕಳಿಗೆ ಉಪಾಸನೆಗೆ ಯೋಗ್ಯವಾದ ಗುಣವಿಶಿಷ್ಟ ಶ್ರೀಹರಿಯ ಸ್ವರೂಪವನ್ನು ಉಪದೇಶಿಸುತ್ತಾರೆ

**ತಸ್ಮಾದ್ಭವಂತೋ ಹೃದಯೇನ ಜಾತಾಃ**
**ಸರ್ವೇ ಮಹೀಯಾಂಸಮಮುಂ ಸುನಾಭಂ ।**
**ಅಕ್ಲೃಷ್ಟ (ಅಕ್ಲಿಷ್ಟ) ಬುಧ್ಯಾ ಭರತಂ ಭಜಧ್ವಂ**
**ಶುಶ್ರೂಷಣಂ ತದ್ಭರಣಂ ಪ್ರಜಾನಾಮ್ ॥೨೦॥**

(ಯಾದುಪತ್ಯದ ಪ್ರಕಾರ) **ಭವಂತಃ ಸರ್ವೇ** ನೀವೆಲ್ಲರೂ **ತಸ್ಮಾತ್** ಧರ್ಮಾಭಿವೃದ್ಧಿಜನಕನಾದ ನನ್ನ ಶರೀರದಿಂದ **ಹೃದಯೇನ** ನನ್ನ ಪ್ರೀತಿಗೆ ವಿಷಯವಾದ ಸತ್ವಗುಣದಿಂದ **ಜಾತಾಃ** ಹುಟ್ಟಿರುವಿರಿ (ಇದರಿಂದ ರಾಜಪುತ್ರರಾದ್ದರಿಂದ ನಮಗೂ ರಾಜ್ಯವೇಕೆ ಇಲ್ಲ ಎಂಬ ಸ್ಪರ್ಧೆ ನಿಮಗೆ ಉಚಿತವಲ್ಲ

ಎಂದು ನಿರೂಪಿಸಿದಂತಾಯಿತು) **ಮಹೀಯಾಂಸಂ** ಉತ್ತಮನಾದ **ಅಮುಂ** ನಿಮಗಿಂತ ಹಿರಿಯನಾದ **ಸುನಾಭಂ ಸು** ಶೋಭಿಸುವ **ನಾಭಿಃ** ಸರ್ವಾಶ್ರಯನಾದುದರಿಂದ ನಾಭಿ ಎಂದು ಕರೆಸಿಕೊಳ್ಳುವ ನಾನು ಜನಕನಾಗಿವುಳ್ಳ **ಭರತಂ** ಭರತನನ್ನು **ಅಕ್ಲೃಷ್ಟಬುಧ್ಯಾ** ಸ್ಪರ್ಧೆಯಿಲ್ಲದ ಮನಸ್ಸಿನಿಂದ **ಭಜಧ್ವಂ** ಸೇವಿಸಿರಿ **ಪ್ರಜಾನಾಂ ಭರಣಂ** ಭರತನು ಮಾಡುವ ಪ್ರಜೆಗಳ ಪಾಲನೆಯು **ತತ್** ನಿಮ್ಮ ತಂದೆಯಾದ ನನಗೆ **ಶುಶ್ರೂಷಣಂ** ಸೇವೆಯು. ರಾಜ್ಯವು ಒಂದೇಯಾದುದರಿಂದ ಅಣ್ಣನನ್ನು ಅನುಸರಿಸಿದ ನೀವೂ ರಾಜ್ಯಭಾರ ಮಾಡಿದಂತೆಯೇ ಆಯಿತು. ಆದ್ದರಿಂದ ಭರತನನ್ನು ಸೇವಿಸಿದ ನೀವು ನನ್ನನ್ನು ಸೇವಿಸಿದಂತೆಯೇ ಎಂದು ಭಾವ.

**ವಿಜಯಧ್ವಜ ಪ್ರಕಾರ**

**ಭವಂತಃ ಸರ್ವೇ** ನೀವೆಲ್ಲರೂ **ಮಮ ಹೃದಯೇನ ಜಾತಾಃ** ಧರ್ಮಯುಕ್ತವಾದ ನನ್ನ ಹೃದಯದಿಂದ(ಅಭಿಪ್ರಾಯದಂತೆ) **ಜಾತಾಃ** ಹುಟ್ಟಿದವರು **ಮಹೀಯಾಂಸಂ** ಅತ್ಯುತ್ತಮನಾದ **ಸುನಾಭಂ** ಸರ್ವರಿಗೂ ಆಧಾರನಾದ **ಭರತಂ** ಪ್ರಜಾರಕ್ಷಣದಲ್ಲಿ ನಿರತನಾದ **ಅಮುಂ** ನನ್ನನ್ನು (ನಾನೇ ಆಶ್ರಯವಾಗಿವುಳ್ಳ ಭರತನನ್ನು) **ಅಕ್ಲಿಷ್ಟಬುಧ್ಯಾ** ಕ್ಲೇಶವಿಲ್ಲದ ಮನಸ್ಸಿನಿಂದ **ಭಜಧ್ವಂ** ಸೇವಿಸಿರಿ (ಇದರಿಂದ ಋಷಭನೇ ಆಶ್ರಯನಾಗಿವುಳ್ಳ ಭರತರನ್ನು ಸೇವಿಸಿರಿ ಎಂದು ಸೂಚಿಸಿರುವರು) **ಪ್ರಜಾನಾಂ ಭರಣಂ** ನಿಮ್ಮಿಂದ ಅನುವರ್ತಿತನಾದ ಭರತನು ಮಾಡುವ ಪ್ರಜಾಪಾಲನವು **ತತ್** ಅಲ್ಲಿರುವ ನನಗೆ **ಶೂಶ್ರೂಷಣಂ** ಸೇವೆಯಾಗುವುದು. (ಬಹಳ ಗುಣಭರಿತನಾದ ಭರತನ ಸೇವೆ ನನ್ನ ಸೇವೆ ಆದ್ದರಿಂದ ಪ್ರಜಾರಕ್ಷಣೆಯನ್ನು ಮಾಡಿದಂತಾಗುವುದು ಎಂದು ಭಾವ).

ಸ್ವಾತಂತ್ರ್ಯಾದಿಗುಣಪೂರ್ಣರಾದ್ದರಿಂದ, 'ಭ' ಶಬ್ದ ಪ್ರತಿಪಾದ್ಯರಾದ್ದರಿಂದ, ವಿಷ್ಣುರತರಾದ್ದರಿಂದ, ಹರಿಭಕ್ತಶ್ರೇಷ್ಠರಾದ ಮುಖ್ಯಪ್ರಾಣರನ್ನು ಸೇವಿಸಿರಿ ಎಂದೂ ಅರ್ಥ.

## ಸುನಾಭಿ ಯಾರು?

'**ಸು ನಾಭಿಃ ಯಸ್ಯ ಸಃ ತಂ ಸುನಾಭಂ**' ಎಂದು ವಿಗ್ರಹ ತೋರಿಸುವಮೂಲಕ ಇಲ್ಲಿ ಋಷಭನ ತಂದೆ ನಾಭಿಯಲ್ಲವೆಂದು ತಿಳಿಸಲು 'ನಾಭಿ' ಶಬ್ದವಾಚ್ಯ ಹರಿಯೆಂದು ಪ್ರಮಾಣದಿಂದ ತಿಳಿಸುವರು




ತಾತ್ಪರ್ಯ - ''ನಾಭಿರಿತ್ಯಥ ನಾಮಸ್ಯಾದ್ಧರೇಃ ಸರ್ವಾಶ್ರಯೋ ಯತಃ ।
ಇತಿ ಕೌರ್ಮೇ''। ತತ್ ತಸ್ಯ ಮಮ ಶೂಶ್ರೂಷಣಂ ।

ಸರ್ವಾಶ್ರಯನಾದುದರಿಂದ ಶ್ರೀಹರಿಗೆ ನಾಭಿಯೆಂದೂ ಹೆಸರಿದೆ ಎಂದು ಕೂರ್ಮ ಪುರಾಣದಲ್ಲಿ ಹೇಳಿದೆ. ತತ್ ಎಂಬುದು ಪ್ರಥಮಾಂತವಾದರೆ ಅನನ್ವಿತವಾಗುವುದು. ಕಾರಣ ತಸ್ಯ ಎಂದು ಷಷ್ಟ್ಯಂತವಾಗಿ ವ್ಯಾಖ್ಯಾನಿಸಿರುವರು. ತತ್ ಎಂಬುದು ಅವ್ಯಯವೆಂದು ಭಾವ. ಆ 'ತತ್' ಪದದಿಂದ ಭರತನ ಪರಾಮರ್ಶವಲ್ಲ ಎಂದು ತಿಳಿಸಲು ಮಮ ಎಂದಿದ್ದಾರೆ. ಇದಕ್ಕೆ ಭರಣಪದದಿಂದ ಅನ್ವಯವಲ್ಲ ಎಂದು ತಿಳಿಸಲು ಶೂಶ್ರೂಷಣಂ ಎಂದಿದ್ದಾರೆ.

ಅಂತೂ ಭರತ ಮಾಡುವ ಪ್ರಜಾಭರಣವು ನಿಮ್ಮ ತಂದೆಯಾದ ನನ್ನ ಸೇವೆ. ಕಾರಣ ಭರತನನ್ನು ಸೇವಿಸಿರಿ ಎಂದು ಭಾವ. ।।೨೦।।

## ತಾರತಮ್ಯಜ್ಞಾನ ಮುಕ್ತಿಸಾಧನ

ಜೀವರಲ್ಲಿ ತಾರತಮ್ಯಜ್ಞಾನವೂ ಮುಕ್ತಿ ಸಾಧನವಾದುದರಿಂದ ಅವಶ್ಯ ತಿಳಿಯಬೇಕೆಂಬ ಅಭಿಪ್ರಾಯದಿಂದ ಅದನ್ನು ತಿಳಿಸುತ್ತಾ ಜ್ಞಾನವಿಜ್ಞಾನವಿಷಯವಾದ ಸರ್ವೋತ್ತಮತ್ವವನ್ನು ವಿಸ್ತಾರಗೊಳಿಸುವರು.

**ಭೂತೇಷು ವೀರುದ್ಭ್ಯ ಉದುತ್ತಮಾ ಯೇ**
**ಸರೀಸೃಪಾಸ್ತೇಷು ಸುಬೋಧನಿಷ್ಠಾಃ ।**
**ತತೋ ಮನುಷ್ಯಾಃ ಪ್ರವರಾಸ್ತತೋಽಪಿ**
**ಗಂಧರ್ವಸಿದ್ಧಾವಿಬುಧಾನುಗಾ ಯೇ ।।೨೧।।**

**ಭೂತೇಷು** ಪ್ರಾಣಿಗಳಲ್ಲಿ **ವೀರುದ್ಭ್ಯಃ** ಬಳ್ಳಿಗಳಿಗಿಂತ, ಸ್ಥಾವರ ಪ್ರಾಣಿಗಳಿಗಿಂತ **ಸರೀಸೃಪಾಃ** (ಹಾವು ಮುಂತಾದ)ಜಂಗಮಗಳು **ಉದುತ್ತಮಾಃ** ಅತಿಶಯ ಉತ್ತಮವಾದವು **ತೇಷು** ಆ ಜಂಗಮಗಳಲ್ಲಿಯೂ **ಸುಬೋಧನಿಷ್ಠಾಃ** ಜ್ಞಾನದಿಂದ ಕೂಡಿದ ಸ್ಥಿತಿಯುಳ್ಳ ಪಶುಗಳು **ಉದುತ್ತಮಾಃ** ಉತ್ತಮವಾದವು **ತತಃ** ಪಶುಗಳಿಗಿಂತ **ಮನುಷ್ಯಾಃ** ಮನುಷ್ಯರು **ಪ್ರವರಾಃ** ಉತ್ತಮರು **ತತಃ ಅಪಿ** ಮನುಷ್ಯರಿಗಿಂತ **ವಿಬುಧಾನುಗಾಃ** ದೇವತೆಗಳ ಅನುಚರರಾದ **ಯೇ** ಯಾವ **ಗಂಧರ್ವಸಿದ್ಧಾಃ** ಗಂಧರ್ವರು ಸಿದ್ಧರು ಉಂಟೋ **ತೇ** ಅವರು ಉತ್ತಮರು **ತೇಷಾಂ** ಆ

ಗಂಧರ್ವಾದಿಗಳಿಗಿಂತ **ದಕ್ಷಾದಯಃ** ದಕ್ಷಪ್ರಜಾಪತಿ ಮೊದಲಾದ **ದೇವಾಃ** ದೇವತೆಗಳು **ಉದುತ್ತಮಾಃ** ಅತಿಶಯ ಉತ್ತಮರೆಂದು ಮುಂದಿನ ಶ್ಲೋಕದಿಂದ ಅನ್ವಯ. ॥೨೦॥

**ದೇವಾ ಸುರೇಭ್ಯೋ ಮಘವಾನ್ ಪ್ರಧಾನೋ**
**ದಕ್ಷಾದಯೋ ಬ್ರಹ್ಮಸುತಾಶ್ಚ ತೇಷಾಂ ।**
**ಭವಃ ಪರಃ ಸೋಽಥ ವಿರಿಂಚಿವೀರ್ಯಃ**
**ಸ ಮತ್ಪರೋಽಹಂ ದ್ವಿಜದೇವದೇವಃ ॥೨೨॥**

**ಸುರೇಭ್ಯಃ**(ದಕ್ಷಸನಕಾದಿ) ದೇವತೆಗಳಿಗಿಂತ **ಮಘವಾನ್** ಇಂದ್ರನು **ಪ್ರಧಾನಃ** ಶ್ರೇಷ್ಠನು **ಅಥ** ಇಂದ್ರಾನಂತರ **ಭವಃ** ರುದ್ರದೇವರು **ಪರಃ** ಶ್ರೇಷ್ಠರು, ರುದ್ರದೇವರು ಉತ್ತಮರು ಎಂದರ್ಥ **ಸಃ** ಬ್ರಹ್ಮದೇವರು **ಮತ್ಪರಃ** ನಾನೇ ಉತ್ತಮನಾಗಿವುಳ್ಳವರು ಅಂದರೆ ಅವರಿಗಿಂತ ನಾನು ಉತ್ತಮ ಎಂದರ್ಥ **ಅಹಂ** ತಾರತಮ್ಯದ ಕೊನೆಯಲ್ಲಿ ಇರುವ ನಾನು **ದ್ವಿಜದೇವದೇವಃ** ಬ್ರಾಹ್ಮಣ ಶ್ರೇಷ್ಠರಿಗೆ ಪ್ರಿಯನಾದ ದೇವತೆಯು. (ದ್ವಿಜರಲ್ಲಿ ಶ್ರೇಷ್ಠರಾದವರು ವಿಪ್ರರು) ಕಾರಣ ಬ್ರಾಹ್ಮಣರು ನನ್ನ ಪೂಜಕರಾದ್ದರಿಂದ ಅವರ ಪೂಜೆಯನ್ನು ಕ್ಷತ್ರಿಯರಾದ ನೀವು ಅವಶ್ಯ ಮಾಡಬೇಕು ಎಂದು ಭಾವ. **ದೇವಾ ಸುರೇಭ್ಯಃ** ಎಂಬಲ್ಲಿ ವಿಸರ್ಗ ಲೋಪ ಛಾಂದಸ. **ದ್ವಿಜದೇವದೇವಾ** ಎಂಬಲ್ಲಿ ''**ದ್ವಿಜದೇವಾಃ ದೇವಃ ಯಸ್ಯ ಸಃ**'' ಎಂಬ ಬಹುವ್ರೀಹಿಯು ಬಾಧಿತ ಕಾರಣ ಷಷ್ಠೀ ತತ್ಪುರುಷವೇ ಎಂದು ವಿಗ್ರಹ ತೋರಿಸುವರು ''**ದ್ವಿಜದೇವಾನಾಂ ದೇವಃ**'' ಬ್ರಾಹ್ಮಣರಿಗೆ ದೇವತೆ ಎಂದರ್ಥ. ॥೨೨॥

## ಬ್ರಾಹ್ಮಣರು ದೇವರ ಪೂಜೆಗೆ ಶ್ರೇಷ್ಠ ಅಧಿಷ್ಠಾನ

ಇಲ್ಲಿ ಮೊದಲಿಗೆ ಹೇಳಿದವರಿಗಿಂತ ಮುಂದೆ ಹೇಳಿದವರಲ್ಲಿ ದೇವರ ಸನ್ನಿಧಾನ ಹೆಚ್ಚು ಎಂದು ತಿಳಿಯಬೇಕು. ಬ್ರಾಹ್ಮಣರು ನನ್ನ ಪೂಜೆಗೆ ಅಧಿಷ್ಠಾನರಾದ್ದರಿಂದ ಅವಶ್ಯ ಪೂಜ್ಯರು ಎಂದು ಹೇಳುವನು

**ನ ಬ್ರಾಹ್ಮಣೈಸ್ತುಲಯೇ ಭೂತಮನ್ಯತ್**
**ಪಶ್ಯಾಮಿ ವಿಪ್ರಾತ್ ಕಿಮತಃ ಪರಂ ನು ।**
**ಯಸ್ಮಿನ್ನೃಭಿಃ ಪ್ರಹುತಃ ಶ್ರದ್ಧಯಾಹಮ-**
**ಶ್ನಾಮಿ ಕಾಮಂ ನ ತಥಾಗ್ನಿಹೋತ್ರೇ ॥೨೩॥**




**ಯಸ್ಮಿನ್** ಯಾವ ಬ್ರಾಹ್ಮಣರಲ್ಲಿ **ನೃಭಿಃ** ಅಧಿಕಾರಿಗಳಿಂದ **ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ **ಪ್ರಹುತಂ** ಭಕ್ತಿಪೂರ್ವಕ ಹೋಮ ಮಾಡಿದ್ದನ್ನು **ಯಥಾ** ಹೇಗೆ **ಕಾಮಂ** ತೃಪ್ತಿಯಾಗುವಂತೆ **ಅಶ್ನಾಮಿ** ಸ್ವೀಕರಿಸುವೆನೋ **ತಥಾ** ಹಾಗೆ **ಅಗ್ನಿಹೋತ್ರೇ** ಅಗ್ನಿ ಎಂಬ ಹೋಮಾಧಿಕರಣದಲ್ಲಿ **ನ ಅಶ್ನಾಮಿ** ಸ್ವೀಕರಿಸುವುದಿಲ್ಲ ಅಥವಾ **ಅಗ್ನಿಹೋತ್ರೇ** ಅಗ್ನಿಹೋತ್ರವೆಂಬ ಕರ್ಮದಲ್ಲಿ ಅಗ್ನಿಯಲ್ಲಿ ಹುತವಾದುದನ್ನು **ನ ಅಶ್ನಾಮಿ** ಸ್ವೀಕರಿಸುವುದಿಲ್ಲ **ಅತಃ** ಆದ್ದರಿಂದ **ವಿಪ್ರಾತ್** ಬ್ರಾಹ್ಮಣನಿಗಿಂತ **ಪರಂ ಕಿಂ ನು ಪಶ್ಯಾಮಿ** ಯಾವುದನ್ನು ಕಾಣುವೆನು? ಯಾವುದನ್ನೂ ಕಾಣುವುದಿಲ್ಲ ಎಂದರ್ಥ. ಇಲ್ಲಿ **ಬ್ರಾಹ್ಮಣ್ಯೈಃ ಅನ್ಯತ್ ಭೂತಂ ನ ತುಲಯೇ** ಬೇರೆ ಯಾವ ವಸ್ತುವನ್ನೂ ಬ್ರಾಹ್ಮಣ ಸಮಾನವೆಂದು ಹೇಳಬೇಕಿಲ್ಲ. ಕಾರಣ ನನಗೆ ತೃಪ್ತಿಯನ್ನುಂಟುಮಾಡುವ ಹೋಮಕ್ಕೆ ಅಧಿಕರಣರಾದ್ದರಿಂದ ಅವಶ್ಯ ಪೂಜನೀಯರು ಎಂದೂ ಭಾವ. ।।೨೩।।

ಅಗ್ನಿಗಿಂತ ಬ್ರಾಹ್ಮಣರಿಗೆ ಶ್ರೇಷ್ಠತೆಗೆ ಉಪಪಾದಕವಾದ ಗುಣಗಳನ್ನು ಹೇಳುವರು

**ಧೃತಾಸ್ತನೂರುಶತೀರ್ಮೇ ಪುರಾಣೀರ್ಯೇನೇಹ ಸತ್ವಂ ಪರಮಂ ಪವಿತ್ರಂ ।**
**ಶಮೋ ದಮಃ ಸತ್ವಮನುಗ್ರಹಶ್ಚ ತಪಸ್ತಿತಿಕ್ಷಾನುಭವಶ್ಚ ಯತ್ರ ।।೨೪।।**

**ಇಹ** ಈ ಲೋಕದಲ್ಲಿ **ಯೇನ** ಯಾವ ಬ್ರಾಹ್ಮಣನಿಂದ **ಪುರಾಣೀಃ** ಅನಾದಿ ನಿತ್ಯಗಳಾದ **ಉಶತೀಃ** (ತ್ಯಃ) ನಿರ್ಮಲಗಳಾದ **ತನೂಃ** ಮತ್ಸ್ಯಾದಿಗಳು ಮತ್ತು ವೇದಗಳೆಂಬ ಶರೀರಗಳು **ಧೃತಾಃ** ಧರಿಸಲ್ಪಟ್ಟಿವೆಯೋ **ಯತ್ರ** ಯಾವ ಬ್ರಾಹ್ಮಣನಲ್ಲಿ **ಪರಮಂ ಪವಿತ್ರಂ** ಅತ್ಯಂತ ಶುದ್ಧವಾದ **ಸತ್ವಂ** ಸತ್ವ ಗುಣವು **ಅನುಗ್ರಹಃ** ಚಿಕ್ಕವರಿಗೆ ಅನುಗ್ರಹಮಾಡುವುದು **ಚ** ಮತ್ತು **ತಪಃ** ಕಾಯಕ್ಲೇಶ ರೂಪ ತಪಸ್ಸು **ತಿತಿಕ್ಷಾ** ದ್ವಂದ್ವ ಸಹಿಷ್ಣುತೆ **ಅನುಭವಃ** ಬ್ರಹ್ಮಜ್ಞಾನವು **ಸಂತಿ** ಇರುವವೋ ಇಂಥ ಬ್ರಾಹ್ಮಣನಿಗಿಂತ ಉತ್ತಮವಾದ ಅಧಿಷ್ಠಾನ ಬೇರೆಯಾವುದಿಲ್ಲವೆಂದು ಭಾವ. ।।೨೪।।

ಬ್ರಾಹ್ಮಣರಲ್ಲಿಯೂ ಯಾರು ನಿಸ್ಪೃಹರೋ, ನನ್ನ ಭಕ್ತರೋ, ಅವರು ಅತಿಶಯವಾಗಿ ಪೂಜ್ಯರು ಎಂಬ ಅಭಿಪ್ರಾಯದಿಂದ ಹೇಳುವರು

**ಮತ್ತೋಽಪ್ಯನಂತಾತ್ ಪರತಃ ಪರಸ್ಮಾತ್**
**ಸ್ವರ್ಗಾಪವರ್ಗಾಧಿಪತೇರ್ನ ಕಿಂಚಿತ್ ।**

**ಯೇಷಾಂ ಕಿಮು ಸ್ಯಾದಿತರೇಣ ತೇಷಾ-**
**ಮಕಿಂಚನಾನಾಂ ಮಯಿ ಭಕ್ತಿಭಾಜಾಮ್** ॥೨೫॥

**ಅನಂತಾತ್** ದೇಶ ಕಾಲ ಗುಣಗಳಿಂದ ಕೊನೆಯಿಲ್ಲದ **ಪರತಃ** ಲಕ್ಷ್ಮಿಗಿಂತಲೂ **ಪರಸ್ಮಾತ್** ಉತ್ತಮನಾದ **ಸ್ವರ್ಗಾಪವರ್ಗಾಧಿಪತೇಃ** ಸ್ವರ್ಗಮೋಕ್ಷಗಳನ್ನು ಕೊಡುವ ಸ್ವಾಮಿಯಾದ **ಮತ್ತಃ ಅಪಿ** ನನ್ನಿಂದಲೂ **ಮಯಿ ಭಕ್ತಿಭಾಜಾಂ** ನನ್ನಲ್ಲಿ ಭಕ್ತಿಯುಳ್ಳ **ಯೇಷಾಂ** ಯಾರಿಗೆ **ಅಕಿಂಚನಾನಾಂ** ನಾನೇ ಪ್ರಾರ್ಥನೀಯನಾಗಿ ಉಳ್ಳವರಿಗೆ **ಕಿಂಚಿತ್** ಅಪೇಕ್ಷಿತವಾದುದು ಯಾವುದೂ ನ ಇಲ್ಲವೋ **ತೇಷಾಂ** ಅವರಿಗೆ **ಇತರೇಣ ಕಿಂ ಸ್ಯಾತ್** ಇತರ ಲೌಕಿಕ ಪ್ರಯೋಜನದಿಂದಾಗಲೀ, ರಾಜ ಮೊದಲಾದವರಿಂದಾಗಲಿ ಏನು ತಾನೇ ಆದೀತು? ಏನೂ ಆಗಬೇಕಾದದ್ದಿಲ್ಲ.

ಅನಂತ ಮೊದಲಾದ ವಿಶೇಷಣಗಳಿಂದ ತಾನು ಯಾವಾಗಲೂ ಎಲ್ಲೆಡೆಯಲ್ಲಿಯೂ ಯಾರ ಅಧೀನನೂ ಅಲ್ಲವಾದುದರಿಂದ ಪ್ರಾರ್ಥಿಸಿದುದನ್ನು ಕೊಡುವ ಸಾಮರ್ಥ್ಯವಂತನು ಎಂದು ತಿಳಿಸುವಮೂಲಕ ತನ್ನ ಮಾತಿನಲ್ಲಿ ನಂಬಿಕೆ ಹುಟ್ಟಿಸಿರುವನೆಂದೂ, ಅಕಿಂಚನ ಮುಂತಾದ ವಿಶೇಷಣದಿಂದ ಉತ್ತಮ ಬ್ರಾಹ್ಮಣರಿಗೆ ಭಕ್ತಿ ಬಿಟ್ಟು ಮತ್ತೊಂದು ಅಪೇಕ್ಷಣೀಯವಲ್ಲವೆಂದೂ ಸೂಚಿಸಿರುವರು. ॥೨೫॥

ಈ ರೀತಿ ತನಗೆ ಅಧಿಷ್ಠಾನರಾದುದರಿಂದ ಬ್ರಾಹ್ಮಣರಿಗೆ ವಿಶೇಷವಾಗಿ ಪೂಜ್ಯತೆಯನ್ನು ತಿಳಿಸಿ ಈ ಎಲ್ಲ ಪ್ರಾಣಿಗಳು ನನಗೆ ಅಧಿಷ್ಠಾನರಾದ್ದರಿಂದ ಯೋಗ್ಯತಾನುಸಾರ ಗೌರವಿಸಲ್ಪಡಬೇಕು ಎಂದು ಹೇಳುವರು

**ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿಶ್ಚರಾಣಿ ಭೂತಾನಿ ಸುತಾ ಧ್ರುವಾಣಿ ।**
**ಸಂಭಾವಿತವ್ಯಾನಿ ಪದೇ ಪದೇ ವೋ ವಿವಿಕ್ತದೃಷ್ಟಿಸ್ತದುತಾರ್ಹಣಂ ಮೇ ॥**

**ಹೇ ಸುತಾಃ** ಎಲೇ ಮಕ್ಕಳೇ **ಭವದ್ಭಿಃ** ನಿಮ್ಮಿಂದ **ಚರಾಣಿ** ಜಂಗಮವಾದ **ಧ್ರುವಾಣಿ** ಸ್ಥಾವರವಾದ **ಸರ್ವಾಣಿ** ಎಲ್ಲ **ಭೂತಾನಿ** ಪ್ರಾಣಿಗಳು (ಜೀವರು) **ಮದ್ಧಿಷ್ಣ್ಯತಯಾ** ನನ್ನ ಆವಾಸಸ್ಥಾನವೆಂದು **ಸಂಭಾವಿತವ್ಯಾನಿ** ಯೋಗ್ಯತೆಗನು ಗುಣವಾಗಿ ಗೌರವಿಸಲು ಯೋಗ್ಯವಾದವುಗಳು **ಪದೇ ಪದೇ** ಪ್ರತಿಯೊಂದು ಸ್ಥಾನದಲ್ಲಿ **ವಃ** ನಿಮಗಿರುವ **ವಿವಿಕ್ತದೃಷ್ಟಿಃ** ಜೀವರು ನನ್ನ ಆವಾಸಸ್ಥಾನಗಳೆಂಬ ಯುಕ್ತಿಯಿಂದ ಜೀವೇಶ್ವರರಿಗೆ ಭೇದವನ್ನು ಉಪಪಾದಿಸುವುದೇನಿದೆಯೋ **ತದುತ**

ಅದೇ **ಮೇ ಅರ್ಹಣಂ** ನನ್ನ ಪೂಜೆಯು, ನನ್ನ ಪ್ರೀತಿಜನಕವು. ಕೇವಲ ಭೇದ ತಿಳಿಯುವುದಷ್ಟೇ ಅಲ್ಲ **ಉತ** ಮತ್ತೂ ಯುಕ್ತಿಯಿಂದ ಭೇದವನ್ನು ಉಪಪಾದಿಸುವುದು ಅತಿ ಪ್ರಿಯವಾದುದು ಎಂದು ಭಾವ.

## ವಿವಿಕ್ತದೃಷ್ಟಿ ಎಂದರೆ?

ಇಲ್ಲಿ **ವಿವಿಕ್ತದೃಷ್ಟಿಃ** ಎಂಬುದಕ್ಕೆ ಪ್ರಕೃತ ಸಂಗತವಾದ ಅರ್ಥ ತಿಳಿಸುವರು

ತಾತ್ಪರ್ಯ ''ವಿವಿಕ್ತದೃಷ್ಟಿರ್ಜೀವಾನಾಂ ಧಿಷ್ಣ್ಯತಯಾ ಪರಮೇಶ್ವರಸ್ಯ ಭೇದದೃಷ್ಟಿಃ।

ಭೇದೋಪಪಾದನವು ಹರಿಪ್ರೀತಿಜನಕವೆನ್ನಲು ಎರಡು ಪ್ರಮಾಣಗಳನ್ನು ಪಠಿಸುವರು

''ಉಪಪಾದಯೇತ್ಪರಾತ್ಮಾನಂ ಜೀವೇಭ್ಯೋ ಯಃ ಪದೇ ಪದೇ।
ಭೇದೇನೈವ ನ ಚೈತಸ್ಮಾತ್ ಪ್ರಿಯೋ ವಿಷ್ಣೋಸ್ತು ಕಶ್ಚನ'' ಇತಿ ಪಾದ್ಮೇ ॥
''ಯೋ ಹರೇಶ್ಚೈವ ಜೀವಾನಾಂ ಭೇದವಕ್ತಾ ಹರೇಃ ಪ್ರಿಯಃ'' ಇತಿ ಚ ॥

೧.ವಿವಿಕ್ತ ದೃಷ್ಟಿಯೆಂದರೆ ಪರಮಾತ್ಮನಿಗೆ ಅಧಿಷ್ಠಾನರಾದುದರಿಂದ ಪರಮಾತ್ಮನು ಜೀವರಿಂದ ಭಿನ್ನನೆಂದು ತಿಳಿಯುವುದು.

೨. ಯಾವಾತನು ಪ್ರತಿಸ್ಥಾನದಲ್ಲಿಯೂ ಜೀವರಿಗಿಂತ ಶ್ರೀಹರಿಯು ಭಿನ್ನನೆಂದು ಯುಕ್ತಿಯಿಂದ ಉಪಪಾದಿಸುವನೋ ಇವನಿಗಿಂತ ಶ್ರೀಹರಿಗೆ ಪ್ರಿಯರಾದವರು ಮತ್ತೊಬ್ಬರಿಲ್ಲ ಎಂದು ಪಾದ್ಮ ಪುರಾಣದಲ್ಲಿದೆ.

೩.ಯಾವಾತನು ಶ್ರೀಹರಿಗೂ ಜೀವರಿಗೂ ಪರಸ್ಪರವಾಗಿ ಭೇದವನ್ನು ಉಪಪಾದಿಸುತ್ತಾನೋ ಆತನು ಶ್ರೀಹರಿಗೆ ಪ್ರಿಯನು.

ಅಂದರೆ ಶ್ರೀಹರಿಗೆ ಜೀವನು ಅಧಿಷ್ಠಾನನಾದುದರಿಂದ ಅಧಿಷ್ಠಾನನಾದ ಜೀವನಿಂದ ಅಧಿಷ್ಠೇಯವಾದ ಶ್ರೀಹರಿಯು ಭಿನ್ನ ಎಂದು ತಿಳಿಯುವುದು (ಹರಿಧರ್ಮಿಕ ಜೀವಪ್ರತಿಯೋಗಿಕಭೇದ. ಹಾಗೆ ಅಧಿಷ್ಠಾತೃವಾದ ಹರಿಯಿಂದ ಅಧಿ ಷ್ಠಾನನಾದ ಜೀವನು ಭಿನ್ನನು ಎಂದು ಹರಿಪ್ರತಿಯೋಗಿಕ ಜೀವಧರ್ಮಿಕ ಭೇದ) ಹೀಗೆ ಪರಸ್ಪರಭೇದವೆಂದು ಭಾವ. ॥೨೬॥

**ಯೇಷಾಂ ಕಿಮು ಸ್ಯಾದಿತರೇಣ ತೇಷಾ-**
**ಮಕಿಂಚನಾನಾಂ ಮಯಿ ಭಕ್ತಿಭಾಜಾಮ್** ॥೨೫॥

**ಅನಂತಾತ್** ದೇಶ ಕಾಲ ಗುಣಗಳಿಂದ ಕೊನೆಯಿಲ್ಲದ **ಪರತಃ** ಲಕ್ಷ್ಮಿಗಿಂತಲೂ **ಪರಸ್ಮಾತ್** ಉತ್ತಮನಾದ **ಸ್ವರ್ಗಾಪವರ್ಗಾಧಿಪತೇಃ** ಸ್ವರ್ಗಮೋಕ್ಷಗಳನ್ನು ಕೊಡುವ ಸ್ವಾಮಿಯಾದ **ಮತ್ತಃ ಅಪಿ** ನನ್ನಿಂದಲೂ **ಮಯಿ ಭಕ್ತಿಭಾಜಾಂ** ನನ್ನಲ್ಲಿ ಭಕ್ತಿಯುಳ್ಳ **ಯೇಷಾಂ** ಯಾರಿಗೆ **ಅಕಿಂಚನಾನಾಂ** ನಾನೇ ಪ್ರಾರ್ಥನೀಯನಾಗಿ ಉಳ್ಳವರಿಗೆ **ಕಿಂಚಿತ್** ಅಪೇಕ್ಷಿತವಾದುದು ಯಾವುದೂ ನ ಇಲ್ಲವೋ **ತೇಷಾಂ** ಅವರಿಗೆ **ಇತರೇಣ ಕಿಂ ಸ್ಯಾತ್** ಇತರ ಲೌಕಿಕ ಪ್ರಯೋಜನದಿಂದಾಗಲೀ, ರಾಜ ಮೊದಲಾದವರಿಂದಾಗಲಿ ಏನು ತಾನೇ ಆದೀತು? ಏನೂ ಆಗಬೇಕಾದದ್ದಿಲ್ಲ.

ಅನಂತ ಮೊದಲಾದ ವಿಶೇಷಣಗಳಿಂದ ತಾನು ಯಾವಾಗಲೂ ಎಲ್ಲೆಡೆಯಲ್ಲಿಯೂ ಯಾರ ಅಧೀನನೂ ಅಲ್ಲವಾದುದರಿಂದ ಪ್ರಾರ್ಥಿಸಿದುದನ್ನು ಕೊಡುವ ಸಾಮರ್ಥ್ಯವಂತನು ಎಂದು ತಿಳಿಸುವಮೂಲಕ ತನ್ನ ಮಾತಿನಲ್ಲಿ ನಂಬಿಕೆ ಹುಟ್ಟಿಸಿರುವನೆಂದೂ, ಅಕಿಂಚನ ಮುಂತಾದ ವಿಶೇಷಣದಿಂದ ಉತ್ತಮ ಬ್ರಾಹ್ಮಣರಿಗೆ ಭಕ್ತಿ ಬಿಟ್ಟು ಮತ್ತೊಂದು ಅಪೇಕ್ಷಣೀಯವಲ್ಲವೆಂದೂ ಸೂಚಿಸಿರುವರು. ॥೨೫॥

ಈ ರೀತಿ ತನಗೆ ಅಧಿಷ್ಠಾನರಾದುದರಿಂದ ಬ್ರಾಹ್ಮಣರಿಗೆ ವಿಶೇಷವಾಗಿ ಪೂಜ್ಯತೆಯನ್ನು ತಿಳಿಸಿ ಈ ಎಲ್ಲ ಪ್ರಾಣಿಗಳು ನನಗೆ ಅಧಿಷ್ಠಾನರಾದ್ದರಿಂದ ಯೋಗ್ಯತಾನುಸಾರ ಗೌರವಿಸಲ್ಪಡಬೇಕು ಎಂದು ಹೇಳುವರು

**ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿಶ್ಚರಾಣಿ ಭೂತಾನಿ ಸುತಾ ಧ್ರುವಾಣಿ ।**
**ಸಂಭಾವಿತವ್ಯಾನಿ ಪದೇ ಪದೇ ವೋ ವಿವಿಕ್ತದೃಷ್ಟಿಸ್ತದುತಾರ್ಹಣಂ ಮೇ ॥**

**ಹೇ ಸುತಾಃ** ಎಲೇ ಮಕ್ಕಳೇ **ಭವದ್ಭಿಃ** ನಿಮ್ಮಿಂದ **ಚರಾಣಿ** ಜಂಗಮವಾದ **ಧ್ರುವಾಣಿ** ಸ್ಥಾವರವಾದ **ಸರ್ವಾಣಿ** ಎಲ್ಲ **ಭೂತಾನಿ** ಪ್ರಾಣಿಗಳು (ಜೀವರು) **ಮದ್ಧಿಷ್ಣ್ಯತಯಾ** ನನ್ನ ಆವಾಸಸ್ಥಾನವೆಂದು **ಸಂಭಾವಿತವ್ಯಾನಿ** ಯೋಗ್ಯತೆಗನು ಗುಣವಾಗಿ ಗೌರವಿಸಲು ಯೋಗ್ಯವಾದವುಗಳು **ಪದೇ ಪದೇ** ಪ್ರತಿಯೊಂದು ಸ್ಥಾನದಲ್ಲಿ **ವಃ** ನಿಮಗಿರುವ **ವಿವಿಕ್ತದೃಷ್ಟಿಃ** ಜೀವರು ನನ್ನ ಆವಾಸಸ್ಥಾನಗಳೆಂಬ ಯುಕ್ತಿಯಿಂದ ಜೀವೇಶ್ವರರಿಗೆ ಭೇಧವನ್ನು ಉಪಪಾದಿಸುವುದೇನಿದೆಯೋ **ತದುತ**

ಅದೇ **ಮೇ ಅರ್ಹಣಂ** ನನ್ನ ಪೂಜೆಯು, ನನ್ನ ಪ್ರೀತಿಜನಕವು. ಕೇವಲ ಭೇದ ತಿಳಿಯುವುದಷ್ಟೇ ಅಲ್ಲ **ಉತ** ಮತ್ತೂ ಯುಕ್ತಿಯಿಂದ ಭೇದವನ್ನು ಉಪಪಾದಿಸುವುದು ಅತಿ ಪ್ರಿಯವಾದುದು ಎಂದು ಭಾವ.

## ವಿವಿಕ್ತದೃಷ್ಟಿ ಎಂದರೆ?

ಇಲ್ಲಿ **ವಿವಿಕ್ತದೃಷ್ಟಿಃ** ಎಂಬುದಕ್ಕೆ ಪ್ರಕೃತ ಸಂಗತವಾದ ಅರ್ಥ ತಿಳಿಸುವರು

ತಾತ್ಪರ್ಯ ''ವಿವಿಕ್ತದೃಷ್ಟಿರ್ಜೀವಾನಾಂ ಧಿಷ್ಣ್ಯತಯಾ ಪರಮೇಶ್ವರಸ್ಯ ಭೇದದೃಷ್ಟಿಃ ।

ಭೇದೋಪಪಾದನವು ಹರಿಪ್ರೀತಿಜನಕವೆನ್ನಲು ಎರಡು ಪ್ರಮಾಣಗಳನ್ನು ಪಠಿಸುವರು

''ಉಪಪಾದಯೇತ್ಪರಾತ್ಮಾನಂ ಜೀವೇಭ್ಯೋ ಯಃ ಪದೇ ಪದೇ ।
ಭೇದೇನೈವ ನ ಚೈತಸ್ಮಾತ್ ಪ್ರಿಯೋ ವಿಷ್ಣೋಸ್ತು ಕಶ್ಚನ'' ಇತಿ ಪಾದ್ಮೇ ॥
''ಯೋ ಹರೇಶ್ಚೈವ ಜೀವಾನಾಂ ಭೇದವಕ್ತಾ ಹರೇಃ ಪ್ರಿಯಃ'' ಇತಿ ಚ ॥

೧.ವಿವಿಕ್ತ ದೃಷ್ಟಿಯೆಂದರೆ ಪರಮಾತ್ಮನಿಗೆ ಅಧಿಷ್ಠಾನರಾದುದರಿಂದ ಪರಮಾತ್ಮನು ಜೀವರಿಂದ ಭಿನ್ನನೆಂದು ತಿಳಿಯುವುದು.

೨. ಯಾವಾತನು ಪ್ರತಿಸ್ಥಾನದಲ್ಲಿಯೂ ಜೀವರಿಗಿಂತ ಶ್ರೀಹರಿಯು ಭಿನ್ನನೆಂದು ಯುಕ್ತಿಯಿಂದ ಉಪಪಾದಿಸುವನೋ ಇವನಿಗಿಂತ ಶ್ರೀಹರಿಗೆ ಪ್ರಿಯರಾದವರು ಮತ್ತೊಬ್ಬರಿಲ್ಲ ಎಂದು ಪಾದ್ಮ ಪುರಾಣದಲ್ಲಿದೆ.

೩.ಯಾವಾತನು ಶ್ರೀಹರಿಗೂ ಜೀವರಿಗೂ ಪರಸ್ಪರವಾಗಿ ಭೇದವನ್ನು ಉಪಪಾದಿಸುತ್ತಾನೋ ಆತನು ಶ್ರೀಹರಿಗೆ ಪ್ರಿಯನು.

ಅಂದರೆ ಶ್ರೀಹರಿಗೆ ಜೀವನು ಅಧಿಷ್ಠಾನನಾದುದರಿಂದ ಅಧಿಷ್ಠಾನನಾದ ಜೀವನಿಂದ ಅಧಿಷ್ಠೇಯವಾದ ಶ್ರೀಹರಿಯು ಭಿನ್ನ ಎಂದು ತಿಳಿಯುವುದು (ಹರಿಧರ್ಮಿಕ ಜೀವಪ್ರತಿಯೋಗಿಕಭೇದ. ಹಾಗೆ ಅಧಿಷ್ಠಾತೃವಾದ ಹರಿಯಿಂದ ಅಧಿಷ್ಠಾನನಾದ ಜೀವನು ಭಿನ್ನನು ಎಂದು ಹರಿಪ್ರತಿಯೋಗಿಕ ಜೀವಧರ್ಮಿಕ ಭೇದ) ಹೀಗೆ ಪರಸ್ಪರಭೇದವೆಂದು ಭಾವ. ॥೨೬॥

## ಭಗವಂತನ ಪ್ರೀತಿ ಸಂಪಾದನೆಯಿಂದ ಮೋಕ್ಷ

ಭಗವಂತನ ಪ್ರೀತಿ ಸಂಪಾದನೆಯಿಂದಲಾದರೂ ಏನು ಪ್ರಯೋಜನ ಎಂದರೆ ಅವನ ಸಾಕ್ಷಾತ್ಕಾರ, ಪರಮ ಪ್ರೀತಿಯ ದ್ವಾರಾ ಮುಕ್ತಿಯಾಗುವುದೇ ಫಲ ಎಂದು ಹೇಳುವರು

**ಮನೋವಚೋದೃಕ್ಕರಣೈರ್ಹಿತಸ್ಯ ಸಾಕ್ಷಾತ್ಕೃತಂ ಮೇ ಪರಿಬರ್ಹಣಂ ಹಿ ।**
**ವಿನಾ ಪುಮಾನ್ಯೇನ ಮಹಾವಿಮೋಹಕೃತಾಂತಪಾಶಾನ್ನ ವಿಮೋಕ್ತುಮೀಶಃ ॥**

**ಯೇನ** ಯಾವ ಸಾಕ್ಷಾತ್ಕಾರದಿಂದ **ವಿನಾ** ಇಲ್ಲದೇ **ಪುಮಾನ್** ಅಧಿಕಾರಿಯು **ಮಹಾವಿಮೋಹಕೃತಾಂತಪಾಶಾತ್** ಅಹಂಕಾರ ಮಮಕಾರರೂಪ ಮಹಾಭ್ರಮವೆಂಬ ಯಮಪಾಶದಿಂದ ಅಂದರೆ ಶ್ರೀಹರಿ ಮಾಡಿದ ಸಂಸಾರಬಂಧದಿಂದ **ವಿಮೋಕ್ತುಂ** ತನ್ನನ್ನು ಬಿಡಿಸಿಕೊಳ್ಳಲು **ನ ಈಶಃ** ಸಮರ್ಥನಲ್ಲವೋ **ತತ್** ಅಂಥ **ಮನೋವಚೋದೃಕ್ಕರಣೈಃ** ಮನಸ್ಸು ಮತ್ತು ಮಾತಿನ ವ್ಯಾಪಾರಗಳಾದ, ಅಪರೋಕ್ಷಜ್ಞಾನ ಸಾಧನಗಳಾದ, ಮನನಾದಿಗಳಿಂದ **ಹಿತಸ್ಯ** ಪರಮಪ್ರೇಮಾಸ್ಪದವಾದ **ಮೇ** ನನ್ನ **ಸಾಕ್ಷಾತ್ ಕೃತಂ** ಸಾಕ್ಷಾತ್ಕಾರವು **ಪರಿಬರ್ಹಣಂ** ಪರಮಪ್ರೀತಿಜನಕವು **ಹಿ** ಪ್ರಸಿದ್ಧವು.

**ವಿಜಯಧ್ವಜರೀತ್ಯಾ**

**ಮನೋವಚೋದೃಕ್ಕರಣೈಃ** ಕೆಲವು ಸ್ಥಳಗಳಲ್ಲಿ ಮನಸ್ಸಿನಿಂದ, ಕೆಲವು ಸ್ಥಳಗಳಲ್ಲಿ ಮಾತಿನಿಂದ, ಮತ್ತೆ ಕೆಲವು ಸ್ಥಳಗಳಲ್ಲಿ ದೃಷ್ಟಿಯಿಂದ, ಮತ್ತೊಂದೆಡೆ ಕಾಯಿಕ ವ್ಯಾಪಾರದಿಂದ ಹೀಗೆ ಅನೇಕ ರೀತಿಯಿಂದ **ತಸ್ಯ** ವಿಷ್ಣುವಿಗೆ ಅಧಿಷ್ಠಾನರಾದ ಪ್ರಾಣಿಗಳ **ಪರಿಬರ್ಹಣಂ** ಗೌರವಿಸುವುದೇನಿದೆಯೋ **ತತ್** ಅದು **ಸಾಕ್ಷಾತ್ ಮೇ ಕೃತಂ** ನನಗೇನೇ ಮಾಡಿದಂತೆಯೇ **ಪುಮಾನ್** ಅಧಿಕಾರಿಯು **ಯೇನ ವಿನಾ** ಎಲ್ಲ ಪ್ರಾಣಿಗಳ ಸಮ್ಮಾನನವಿಲ್ಲದೆ **ಮಹಾವಿಮೋಹಕೃತಾಂತಪಾಶಾತ್** ಬಹುಭ್ರಾಮಕವಾದ ಯಮಪಾಶದಂತಿರುವ ಸಂಸಾರದಿಂದ ತನ್ನನ್ನು **ವಿಮೋಕ್ತುಂ** ಬಿಡಿಸಿಕೊಳ್ಳಲು **ನ ಈಶಃ** ಸಮರ್ಥನಲ್ಲವೋ **ತತ್** ಅಂಥ ಸರ್ವಪ್ರಾಣಿಗಳ ಸಮ್ಮಾನನೆಯು ಸರ್ವರಿಂದ ಅವಶ್ಯಾನುಷ್ಠೇಯವು ಎಂದು ಭಾವ. ॥೨೭॥

 

**ಶ್ರೀಶುಕ ಉವಾಚ -**

**ಸ ಏವಮನುಶಾಸ್ಯಾತ್ಮಜಾನ್ ಸ್ವಯಮನುಶಿಷ್ಟಾನಪಿ ಲೋಕಾನುಶಾಸನಾರ್ಥಂ ಮಹಾನುಭಾವಃ ಪರಮಸುಹೃದ್ಭಗವಾನೃಷಭಾಪದೇಶ ಉಪಶಮಶೀಲಾ- ನಾಮುಪರತ ಕರ್ಮಣಾಂ ಮಹಾಮುನೀನಾಂ ಭಕ್ತಿಜ್ಞಾನವೈರಾಗ್ಯಲಕ್ಷಣಂ ಪಾರಮಹಂಸ್ಯಧರ್ಮಮುಪ ಶಿಕ್ಷಮಾಣಃ ಸ್ವತನಯಂ ಶತಜ್ಯೇಷ್ಠಂ ಪರಮಭಾಗವತಂ ಭಗವಜ್ಜನಪರಾಯಣಂ ಭರತಂ ಧರಣೀತಲಪರಿಪಾಲನಾ- ಯಾಭಿಷಿಚ್ಯ ಸ್ವಯಂ ಭವನ ಏವೋರ್ವರಿತ ಶರೀರಮಾತ್ರಪರಿಗೃಹ ಉನ್ಮತ್ತ ಇವ ಗಗನಪರಿಧಾನಃ ಪ್ರಕೀರ್ಣಕೇಶ ಆತ್ಮನ್ಯಾರೋಪಿತಾಹವನೀಯೋ ಬ್ರಹ್ಮಾವರ್ತಾತ್ ಪ್ರವವ್ರಾಜ ॥೨೮॥**

ಏವಂ ಈ ರೀತಿಯಾಗಿ **ಸಃ** ಶ್ರೀಹರಿಯು **ಸ್ವಯಂ ಅನುಶಿಷ್ಟಾನಪಿ** ತಾವಾಗಿಯೇ ಉಪದೇಶ ಪಡೆದವರಾಗಿದ್ದರೂ **ಆತ್ಮಜಾನ್** ಮಕ್ಕಳನ್ನು (ನಿಮಿತ್ತಮಾಡಿ) **ಲೋಕಾನುಶಾಸನಾರ್ಥಂ** ಜನರಿಗೆ ತಿಳಿಸುವುದಕ್ಕಾಗಿ **ಅನುಶಾಸ್ಯ** ಗೃಹಸ್ಥಧರ್ಮವನ್ನು ಉಪದೇಶಿಸಿ **ಮಹಾನುಭಾವಃ** ಮಹಾಸಮರ್ಥನಾದ **ಪರಮಸುಹೃತ್** ಜೀವರಿಗೆ ಅತ್ಯಂತ ಅನಿಮಿತ್ತೋಪಕಾರಕನಾದ (ಸ್ನೇಹಿತನಾದ) **ಋಷಭಾಪದೇಶಃ** ಋಷಭನೆಂಬ ಹೆಸರುಳ್ಳ **ಭಗವಾನ್** ಶ್ರೀಹರಿಯು **ಉಪಶಮಶೀಲಾನಾಂ** ಶಾಂತಿಯೇ ಸ್ವಭಾವವಾಗಿವುಳ್ಳ **ಉಪರತಕರ್ಮಣಾಂ** ಕಾಮ್ಯ ಮತ್ತು ನಿಷಿದ್ಧ ಕರ್ಮಗಳನ್ನು ತೊರೆದ **ಮಹಾಮುನೀನಾಂ** ಪರಮಾತ್ಮನನ್ನೇ ಮನನಮಾಡುವ **ಪಾರಮಹಂಸಧರ್ಮಂ** ಸಂನ್ಯಾಸಿಗಳ ಧರ್ಮಗಳಾದ **ಭಕ್ತಿಜ್ಞಾನವೈರಾಗ್ಯಲಕ್ಷಣಂ** ಭಕ್ತಿ, ಜ್ಞಾನ, ವೈರಾಗ್ಯಗಳನ್ನು **ಉಪಶಿಕ್ಷಮಾಣಃ** ಉಪದೇಶಿಸುವವನಾಗಿ **ಸ್ವತನಯಂ** ತನ್ನ ಮಗನಾದ **ಶತಜ್ಯೇಷ್ಠಂ** ನೂರು ಮಂದಿಯಲ್ಲಿ ಹಿರಿಯನಾದ **ಪರಮಂ ಭಾಗವತಂ** ಮಹಾ ಭಗವದ್ಭಕ್ತನಾದ **ಭಗವಜ್ಜನಪರಾಯಣಂ** ಭಗವದ್ಭಕ್ತರ ಸೇವಕನಾದ **ಭರತಂ** ಭರತನನ್ನು **ಧರಣೀತಲಪರಿಪಾಲನಾಯ** ಭೂತಲರಕ್ಷಣೆಗಾಗಿ **ಅಭಿಷಿಚ್ಯ** ಪಟ್ಟಾಭಿಷೇಕ ಮಾಡಿ **ಸ್ವಯಂ** ತಾನು **ಭವನೇ ಏವ** ಮನೆಯಲ್ಲಿಯೇ ಎಲ್ಲವನ್ನು ಬಿಟ್ಟು **ಉರ್ವರಿತ** ಉಳಿದ **ಶರೀರಮಾತ್ರಪರಿಗ್ರಹಃ** ಕೇವಲ ಶರೀರಸಹಿತನಾಗಿ (ಶರೀರವನ್ನು ಸ್ವೀಕರಿಸಿ) **ಉನ್ಮತ್ತ ಇವ** ಹುಚ್ಚನಂತೆ **ಗಗನಪರಿಧಾನಃ** ಆಕಾಶವೇ ವಸ್ತ್ರವಾಗಿವುಳ್ಳವನಾಗಿ (ದಿಗಂಬರನಾಗಿ) **ಪ್ರಕೀರ್ಣಕೇಶಃ** ಕೂದಲನ್ನು ಹರವಿಕೊಂಡು **ಆತ್ಮನ್ಯಾರೋಪಿತ ಆಹವನೀಯಃ** ಆಹವನೀಯಾಗ್ನಿಯನ್ನು ತನ್ನಲ್ಲಿ

ಸಮಾರೋಪ ಮಾಡಿಕೊಂಡವನಾಗಿ **ಬ್ರಹ್ಮಾವರ್ತಾತ್** ಬ್ರಹ್ಮಾವರ್ತ ದೇಶವನ್ನು ಬಿಟ್ಟು ಪ್ರವವ್ರಾಜ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದನು. ॥೨೮॥

## ಋಷಭನ ಅವಧೂತಚರ್ಯೆ

ಮನೆಯನ್ನು ಬಿಟ್ಟು ಸಂನ್ಯಾಸಿಯಾದ ಋಷಭದೇವನು ಮುಂದೆ ಇದ್ದ ರೀತಿಯನ್ನು ತಿಳಿಸುವರು

**ಜಡಾಂಧಮೂಕಬಧಿರಪಿಶಾಚೋನ್ಮಾದಕವದವಧೂತವೇಷೋऽಭಿಭಾಷ್ಯ-ಮಾಣೋಽಪಿ ಜನಾನಾಂ ಗೃಹೀತಮೌನವ್ರತಸ್ತೂಷ್ಣೀಂ ಬಭೂವ ॥೨೯॥**

**ಜನಾನಾಂ ಭಾಷ್ಯಮಾಣೋऽಪಿ** ಜನರು ಮಾತನಾಡಿಸಿದರೂ **ಗೃಹೀತಮೌನವ್ರತಃ** ಮೌನವ್ರತಧಾರಣ ಮಾಡಿದ ಋಷಭನು **ಅವಧೂತವೇಷಃ** ವೇಷಗಳನ್ನು ತ್ಯಾಗಮಾಡಿದನು **ಜಡ** ಜಡಗಳಂತೆ **ಅಂಧ** ಕುರುಡನಂತೆ **ಮೂಕ** ಮಾತುಬರದವನಂತೆ **ಬಧಿರ** ಕಿವುಡನಂತೆ **ಪಿಶಾಚ** ಪಿಶಾಚಗ್ರಸ್ತನಾದಂತೆ **ಉನ್ಮಾದಕವತ್** ಹುಚ್ಚನಂತೆ **ತೂಷ್ಣೀಂ ಬಭೂವ** ಸುಮ್ಮನಿದ್ದನು. ॥೨೯॥

**ತತ್ರ ತತ್ರ ಪುರಗ್ರಾಮದುರ್ಗಾಕರಖೇಟಖರ್ವಟಶಿಬಿರವ್ರಜ ಘೋಷಸಾರ್ಥಗಿರಿವನಾಶ್ರಮಾದಿಷ್ವನುಪದಮವನಿಚರಾಪಸದೈಃ ಪರಿಭೂಯಮಾನೋ ಮಕ್ಷಿಕಾಭಿರಿವ ವನಗಜಸ್ತರ್ಜನತಾಡನಾವಮೇಹನ-ನಿಷ್ಠೀವನಗ್ರಾವಶಕೃದ್ರಜಃ ಪ್ರಕ್ಷೇಪಣೇऽಸದಪದೇಶ ಅಭಯಾನುಭವ-ಸ್ವರೂಪೇಣ ಸ್ವಮಹಿಮಾವಸ್ಥಾನೇನ ಸಮವರೋಪಿತಾಹಂಮಮಾಭಿಮಾನತ್ವಾದ್ ಅಖಂಡಿತಃ ಪೃಥಿವೀಮೇಕಚರಃ ಪರಿಬಭ್ರಾಮ ॥೩೦॥**

**ತತ್ರ ತತ್ರ** ಅಲ್ಲಲ್ಲಿ ಅಂದರೆ **ಪುರ** ರಾಜರಿರುವ ಪಟ್ಟಣ **ಗ್ರಾಮ** ಬಹಳ ಜನರು ವಾಸಿಸುವ ಉಪ್ಪರಿಗೆ, ಮನೆಗಳಿಲ್ಲದ ಹಳ್ಳಿಗಳು (**ಅಟ್ಟಶೂನ್ಯಾಃ**) **ದುರ್ಗ** ಕೋಟೆ (ನೀರು, ಅಗ್ನಿ ಮುಂತಾದವುಗಳಿಂದ ಸುತ್ತುವರೆದಿರುವುದರಿಂದ ಹೋಗಲಾಗದ ಸ್ಥಳ) **ಆಕರ** ಖನಿ **ಖೇಟ** ಬೇಟೆಗಾರರು (ಬೇಡರು) ಇರುವ ಸ್ಥಳ **ಖರ್ವಟ** ನೇಕಾರರು (ಬಟ್ಟೆಮಾಡುವವರು) ಇರುವ ಸ್ಥಳ **ಶಿಬಿರ** ಸೇನೆ ಇರುವ ಸ್ಥಳ **ಘೋಷ** ಆಳುಗಳಿರುವ ಸ್ಥಳ **ವ್ರಜ** ಗೋಪಾಲಕರಿರುವ ಸ್ಥಳ **ಸಾರ್ಥ** ವ್ಯಾಪಾರಿಗಳಿರುವ ಸ್ಥಳ **ಆಶ್ರಮ** ಋಷಿಗಳಿರುವ ಸ್ಥಳ **ಆದಿಷು** ಇವೇ ಮೊದಲಾದಸ್ಥಳಗಳಲ್ಲಿ **ಅನುಪದಂ** ಮಾರ್ಗದಲ್ಲಿ

**ಅವನಿಚರಾಪಸದೈಃ** ಭೂಮಿಯಲ್ಲಿ ಸಂಚರಿಸುವ ದುಷ್ಟಜನರಿಂದ **ತರ್ಜನ** ಹೆದರಿಸುವುದು **ತಾಡನ** ಹೊಡೆಯುವುದು **ಮೇಹನ** ಇವರ ಮೇಲೆ ಮಲಮೂತ್ರ ವಿಸರ್ಜಿಸುವುದು **ನಿಷ್ಠೀವನ** ಉಗುಳುವುದು **ಗ್ರಾವಾ** ಕಲ್ಲು **ಶಕೃತ್** ಅಮೇಧ್ಯ (ಮಲ) ರಜ ಧೂಳಿಗಳನ್ನು **ಪ್ರಕ್ಷೇಪಣ** ಎರಚುವುದು **ಪೂತಿವಾತ** ಅಪಾನವಾಯುವನ್ನು ಬಿಡುವುದು **ದುರುಕ್ತೈಃ** ಬೈಯ್ಯುವುದು ಇವುಗಳಿಂದ **ಪರಿಭೂಯಮಾನೋಽಪಿ** ಅವಹೇಳನಕ್ಕೆ ಗುರಿಯಾಗುತ್ತಿದ್ದರೂ **ತದವಿಗಣಯನ್ನೇವ** ಅದನ್ನು ಲೆಕ್ಕಿಸದೆ **ವನಗಜಃ** ಕಾಡಾನೆಯು **ಮಕ್ಷಿಕಾಭಿರಿವ** ನೊಣಗಳನ್ನು ಲೆಕ್ಕಿಸದಿರುವಂತೆ **ಅಸತ್ಸಂಸ್ಥಾನೇ** ಅಮಂಗಳಗಳಿಗೆ ಮಲಮೂತ್ರಗಳಿಗೆ ಕ್ಲೇಶಗಳಿಗೆ ತಾಣವಾದ ಕದಾಚಿತ್ ಬರುವ **ಅಸದಪದೇಶೇ** ಅಸ್ವತಂತ್ರ ಜಡ, ಅಸಹಜವಾದ್ದರಿಂದ ಇಲ್ಲವೆಂದು ಕರೆಸಿಕೊಳ್ಳುವ **ದೇಹೋಪಲಕ್ಷಣೇ** ದೇಹವೆಂದು ಕರಿಸಿಕೊಳ್ಳುವ **ಏತಸ್ಮಿನ್** ಈ ಜಡದಲ್ಲಿ **ಸಮಾರೋಪಿತಾಹಂಮಮಾಭಿಮಾನತ್ವಾತ್** ನಾನು ನನ್ನದು ಎಂಬ ಅಭಿಮಾನವನ್ನು ಬಿಟ್ಟುದರಿಂದ **ಅಭಯಾನುಭವಸ್ವರೂಪೇಣ** ಯಾವ ಭಯವೂ ಇಲ್ಲದ, ಜ್ಞಾನ ಸ್ವರೂಪವಾದ **ಸ್ವಮಹಿಮಾವಸ್ಥಾನೇನ** ತನ್ನ ಮಹಿಮೆನ್ನು ತಿಳಿದಿರುವುದರಿಂದ **ಅಖಂಡಿತಃ** ಖಂಡಿತನಾಗದಿರುವುದರಿಂದ **ಏಕಚರಃ** ಏಕಾಂಗಿಯಾಗಿ **ಪರಿಬಭ್ರಾಮ** ಸಂಚರಿಸಿದನು. **ಅಸದಪದೇಶಃ** ಅಸನ್ ಇತಿ ಅಪದೇಶಃ ಯಸ್ಯ ಸಃ ಇವನು ಜಡದೇಹದಲ್ಲಿ ಇಲ್ಲದವನು ಎಂದು ಜನರಿಂದ ವ್ಯವಹರಿಸಲ್ಪಡುವ ಹೀಗೂ ಅರ್ಥ.

ಸಂನ್ಯಾಸಿಗಳ ರೀತಿ ಇದು ಎಂದು ತಿಳಿಸಲು ಋಷಭದೇವರು ತೋರಿಸಿದ ಪರಿಸ್ಥಿತಿಯ ಅನುವಾದವೇ ಹೊರತು ವಸ್ತುತಃ (ಶ್ರೀಹರಿಯ ಅವತಾರನಾದ) ಋಷಭನಿಗೆ ಜಡದೇಹದ ಪ್ರಸಕ್ತಿಯೇ ಇಲ್ಲ. ಈ ವಿಷಯ ಸೂಚಿಸಲೆಂದೇ **ಏಕಚರಃ** ಎಂದಿದ್ದಾರೆ. ಸೃಷ್ಟಿಗೆ ಮೊದಲು ಪ್ರಲಯದನಂತರವೂ ಒಬ್ಬನೇ ಇರುವನು. ಇವನ ದೇಹಕ್ಕೂ ಇವನಿಗೂ ಭೇದವಿಲ್ಲ **ಅಸತ್ಸಂಸ್ಥಾನೇ** ನಾಶರಹಿತನಾದ ಬ್ರಹ್ಮನ ಪೂರ್ಣಸ್ಥಾನವಾದ **ಅಸದಪದೇಶೇ** ಪರಬ್ರಹ್ಮನೆಂದೇ ಕರೆಸಿಕೊಳ್ಳುವ ಎಂದರ್ಥ. ಇದರಿಂದ ಅಭೇದ ತಿಳಿಯುವುದು. ''**ವಿಜ್ಞಾನಮಾನಂದಂ ಬ್ರಹ್ಮ**'' ''**ನೇಹ ನಾನಾಸ್ತಿ ಕಿಂಚನ**'' ಮುಂತಾದ ಶ್ರುತಿಗಳಿಗೆ ವಿರೋಧವಿಲ್ಲ. **ಸಮವರೋಪಿತ ಅಹಂಯಮಾಭಿಮಾನತ್ವಾತ್** ಚೆನ್ನಾಗಿ ತಿಳಿಯಲ್ಪಟ್ಟ ಅಹಂಮಮಾಭಿಮಾನವುಳ್ಳ ತನ್ನನ್ನು, ತನ್ನನ್ನು ತಾನು ಚೆನ್ನಾಗಿ ತಿಳಿದ ''**ಅಹಂ ಬ್ರಹ್ಮಾಸ್ಮೀತಿ ಅವೇತ್**'' ಆದ್ದರಿಂದ **ಅಖಂಡಿತಃ** ಅಪರಿಚ್ಛಿನ್ನನು ಎಂದರ್ಥ. ಶ್ರೀಹರಿಯು ತನ್ನನ್ನು ಸಂಪೂರ್ಣ

ತಿಳಿಯುವುದರಿಂದ ಅವನು ಪರಿಚ್ಛಿನ್ನ ಎಂದು ಶಂಕಿಸಬಾರದು. ಅಪರಿಚ್ಛಿನ್ನನಾದ ತನ್ನನ್ನು ಅಪರಿಚ್ಛಿನ್ನ ಎಂದೇ ತಿಳಿದಾಗ ಪರಿಚ್ಛಿನ್ನತೆಗೆ ಅವಕಾಶವಿಲ್ಲವೆಂದು ಭಾವ. ||||೩೦||

**ಅತಿಸುಕುಮಾರಕರಚರಣೋರಃಸ್ಥಲವಿಪುಲಬಾಹ್ವಂಸಗಲವದನಾದ್ಯವಯವ-ವಿನ್ಯಾಸಃ ಪ್ರಕೃತಿಸುಂದರಃ ಸ್ವಭಾವಹಾಸಸುಮುಖೋ ನವನಲಿನದಲಾಯಮಾನ-ಶಿಶಿರತಾರ ಚಾರ್ವರುಣಾಯತನಯನಸದೃಶಸುಭಗಕಪೋಲಕರ್ಣಕಂಠ-ನಾಸೋ ನಿಗೂಢಸ್ಮಿತವದನ ಮಹೋತ್ಸವೇನ ಪುರವನಿತಾನಾಂ ಮನಸಿ ಕುಸುಮಶರಮುಪದಧಾನಃ ಪರಾಗವಲಂಬಮಾನಕುಟಿಲಜಟಿಲಾಲಕಕಪಿಲ-ಕೇಶಭೂರಿಭಾರೋಽವಧೂತಮಲಿನನಿಜ ಶರೀರೇಣ ಗ್ರಹಗೃಹೀತ ಇವಾದೃಶ್ಯತ ||೩೧||**

**ಅತಿಸುಕುಮಾರ** ಅತ್ಯಂತ ಕೋಮಲವಾದ **ಕರ** ಕೈಗಳು **ಚರಣ** ಕಾಲುಗಳು **ಉರಃಸ್ಥಲ** ಎದೆ **ವಿಪುಲಬಾಹು** ನೀಳವಾದ ತೋಳುಗಳು **ಅಂಸ** ಹೆಗಲು **ಗಲ** ಕುತ್ತಿಗೆ **ವದನ** ಮುಖ (ಬಾಯಿ) **ಆದಿ** ಮುಂತಾದ **ಅವಯವವಿನ್ಯಾಸಃ** ಅವಯವ ವಿಶಿಷ್ಟ ಸನ್ನಿವೇಶವುಳ್ಳ **ಪ್ರಕೃತಿಸುಂದರಃ** ಸ್ವಾಭಾವಿಕವಾಗಿ ಸುಂದರನಾದ **ಸ್ವಭಾವಹಾಸಸುಮುಖಃ** ಸ್ವಾಭಾವಿಕ ನಗೆಯಿಂದ ಶೋಭಿಸುವ ಮುಖವುಳ್ಳ **ನವನಲಿನದಲಾಯಮಾನ** ಹೊಸದಾದ ಕಮಲದ ದಳದಂತಿರುವ **ಶಿಶಿರ** ತಂಪಾದ **ತಾರ** ಕಣ್ಣಿನಗುಡ್ಡೆಯುಳ್ಳ **ಚಾರು** ಸುಂದರವಾದ **ಅರುಣ** ಕೆಂಪಾದ **ಆಯತ** ವಿಶಾಲವಾದ **ನಯನ** ಕಣ್ಣುಗಳು **ಸದೃಶ** ಒಂದರಂತೊಂದಿರುವ (ಹೆಚ್ಚು ಕಡಿಮೆ ಇಲ್ಲದ ) **ಸುಭಗ** ರಮಣೀಯವಾದ **ಕಪೋಲ** ಗಲ್ಲಗಳು **ಕರ್ಣ** ಕಿವಿಗಳು **ಕಂಠ** ಕುತ್ತಿಗೆ **ನಾಸಃ** ಮೂಗುಗಳುಳ್ಳ **ನಿಗೂಢಸ್ಮಿತವದನಮಹೋತ್ಸವೇನ** ಸ್ವಲ್ಪ ಸ್ಪಷ್ಟ ಮುಗುಳು ನಗೆಯಿಂದ ಕೂಡಿದ ಮುಖದ ವಿಲಾಸದಿಂದ **ಪುರವನಿತಾನಾಂ** ಪಟ್ಟಣದ ಯುವತಿಯರಿಗೆ **ಮನಸಿ** ಮನಸ್ಸಿನಲ್ಲಿ **ಕುಸುಮಶರಂ** ಮನ್ಮಥನನ್ನು (ಕಾಮನನ್ನು) **ಉಪದಧಾನಃ** ಉಂಟುಮಾಡುವವನಾಗಿದ್ದರೂ **ಪರಾಗವಲಂಬಮಾನ** ಮುಂದೆ ಜೋತು ಬಿದ್ದಿರುವ **ಕುಟಿಲ** ವಕ್ರವಾದ **ಜಟಿಲ** ಜಡೆಗಟ್ಟಿದ **ಅಲಕ** ಮುಂಗೂದಲು **ಕಪಿಲ** ನಸುಗೆಂಪು **ಕೇಶ** ಕೂದಲು **ಭೂರಿ** ಇವುಗಳ ಬಹಳ **ಭಾರಃ** ಭಾರ ಉಳ್ಳವನಾಗಿ **ಅವಧೂತ** ಆದರಿಸದಿರುವುದರಿಂದ **ಮಲಿನ** ಕೊಳಕಾಗಿ ಕಾಣುವ **ನಿಜಶರೀರೇಣ** ತನ್ನ ದೇಹದಿಂದ **ಗ್ರಹಗೃಹೀತ ಇವ** ಪಿಶಾಚ ಹಿಡಿದವನಂತೆ **ಅದೃಶ್ಯತ** ಕಾಣಿಸಿಕೊಂಡನು.

**ಯರ್ಹಿ ವಾವ ಸ ಭಗವಾನ್ ಲೋಕಮಿಮಂ ಯೋಗಸ್ಯಾದ್ಧಾ ಪ್ರತೀಪಮಿವಾಚಕ್ಷಾಣಸ್ತತ್ ಪ್ರತಿಕ್ರಿಯಾಕರ್ಮ ಬೀಭತ್ಸಿತಮಿತಿ ವ್ರತಮಾಜಗರಮಾಸ್ಥಿತಃ ಶಯಾನ ಏವಾಶ್ನಾತಿ ಪಿಬತಿ ಖಾದತ್ಯವಮೇಹತಿ ಹಸತಿ ಸ ಚೇಷ್ಟಮಾನ ಉಚ್ಚರಿತಾದಿಗ್ಧೋದ್ದೇಶಸ್ತಸ್ಯ ಹ ಯಃ ಪುರೀಷಸುರಭಿಸೌಗಂಧ್ಯೋ ವಾಯುಸ್ತಂ ದೇಶಂ ದಶಯೋಜನಂ ಸಮಂತಾತ್ ಸುರಭೀಚಕಾರ । ಏವಂ ಗೋಮೃಗಕಾಕಚರ್ಯಯಾ ವ್ರಜಂಸ್ತಿಷ್ಠನ್ನಾಸೀನಃ ಶಯಾನಃ ಕಾಕಮೃಗಗೋವಚ್ಚರತಿ ಪಿಬತಿ ಖಾದತ್ಯವಮೇಹತಿ ಸ್ಮ ॥೩೨॥**

**ಯರ್ಹಿ** ಯಾವಾಗ **ಸಃ ಭಗವಾನ್** ಋಷಭದೇವನು **ಇಮಂ ಲೋಕಂ** ಈ ಜನರನ್ನು **ಯೋಗಸ್ಯ** ಧ್ಯಾನಕ್ಕೆ **(ಅ)ಪ್ರತೀಪಮಿವ** ಪ್ರತಿಕೂಲ ಮತ್ತು ಅಪ್ರತಿಕೂಲವೆಂದು **ಅದ್ಧಾ** ಚೆನ್ನಾಗಿ **ಆಚಕ್ಷಾಣಃ** ತಿಳಿದವನಾಗಿ (ಧ್ಯಾನಕ್ಕೆ ಜನರು ಪ್ರತಿಕೂಲರೇ ಕೆಲವರೇ ಅನುಕೂಲರು ಎಂದು ತಿಳಿದು) (**ವಿಜಯಧ್ವಜರೀತ್ಯಾ** ಸಾಕ್ಷಾತ್ ಅಪ್ರತಿಕೂಲದಂತೆ ಅಂದರೆ ಪ್ರತಿಕೂಲವೂ ಎಂದು ತಿಳಿದು) **ತತ್ ಪ್ರತಿಕ್ರಿಯಾಕರ್ಮ** ಪ್ರತಿಕೂಲರಾದವರಿಗೆ ಪ್ರತೀಕಾರ ಮಾಡುವುದು **ಬೀಭತ್ಸಿತಂ** ಪರಮಹಂಸರಿಗೆ ನಿಂದಿತವಾದುದು. ಆದರಂತೆ ಮಲವಿಸರ್ಜನಾದಿಗಳಿಗೆ ಪ್ರಕ್ಷಾಲನಾದಿಗಳು ಯೋಗಶಾಸ್ತ್ರ ನಿಷಿದ್ಧವೆಂದು (ಮತ್ವಾ ) ತಿಳಿದು **ಆಜಗರಂ ವ್ರತಂ** ಅಜಗರಸರ್ಪದ ವ್ರತವನ್ನು **ಆಸ್ಥಿತಃ** ಹೊಂದಿದ್ದನೋ (ಹಾವಿನಂತೆ ಇರುತ್ತಿದ್ದನೋ) (**ತರ್ಹಿ**) ಆಗ **ಶಯಾನಃ** ಏವ ಮಲಗಿಯೇ **ಅಶ್ನಾತಿ** ಉಣ್ಣುವನು **ಪಿಬತಿ** ಕುಡಿಯುವನು **ಖಾದತಿ** ಭಕ್ಷಿಸುತ್ತಿದ್ದನು **ಅವಮೇಹತಿ** ಮಲಮೂತ್ರ ವಿಸರ್ಜಿಸುವನು **ಹಸತಿ** ನಗುವನು **ಚೇಷ್ಟಮಾನಃ ಸಃ** ಹೊರಳಾಡುತ್ತಿದ್ದ ಅವನು **ಉಚ್ಚರಿತಾದಿಗ್ಧೋದ್ದೇಶಃ ಆಸೀತ್** ಮಲ ಮೂತ್ರಗಳು ಚೆನ್ನಾಗಿ ಅಂಟಿಕೊಂಡಿದ್ದ ದೇಹದ ಭಾಗಗಳುಳ್ಳವನಾಗಿದ್ದನು.

**ಯಃ** ಯಾವ ಅವನ **ಪುರೀಷಸುರಭಿಸೌಗಂಧ್ಯೋ ವಾಯುಃ** ಮಲದ ಸುವಾಸನೆಯಿಂದ ಸುಗಂಧಿತವಾದ ಗಾಳಿಯು **ದಶಯೋಜನಂ ತಂ ದೇಶಂ** ಹತ್ತು ಯೋಜನದ ಆ ಪ್ರದೇಶವನ್ನು **ಸಮಂತಾತ್ ಸುರಭೀಚಕಾರ** ಸುತ್ತಲೂ ಸುವಾಸಿತವಾಗಿ ಮಾಡಿತು. ಏವಂ ಇದರಂತೆ **ಗೋ** ಆಕಳು **ಮೃಗ** ಜಿಂಕೆ **ಕಾಕ** ಕಾಗೆಗಳ **ಚರ್ಯಯಾ** ಆಚರಣೆಯಿಂದ **ವ್ರಜನ್** ಹೋಗುತ್ತಾ **ತಿಷ್ಠನ್** ನಿಂತಲ್ಲಿಯೇ **ಆಸೀನಃ** ಕುಳಿತೇ **ಶಯಾನಃ** ಮಲಗಿಯೇ **ಕಾಕಮೃಗಗೋವತ್** ಕಾಗೆ, ಜಿಂಕೆ, ದನದಂತೆ **ಚರತಿ**

ಸಂಚರಿಸುವನು **ಪಿಬತಿ** ಕುಡಿಯುವನು **ಖಾದತಿ** ತಿನ್ನುವನು **ಅವಮೇಹತಿ ಸ್ಮ** ಮಲ ಮೂತ್ರ ವಿಸರ್ಜಿಸುತ್ತಿದ್ದನು. ।।೩೨।।

**ಗೋಮೃಗಕಾಕಚರ್ಯಯಾ** ಎಂಬುದನ್ನು ವಿವರಿಸುವಾಗ **ಕಾಕಮೃಗಗೋವತ್** ಎಂದು ವಿಪರೀತಕ್ರಮ ಹೇಳಿದ್ದರಿಂದ ಈ ವ್ರತದಲ್ಲಿ ಕ್ರಮ ವಿವಕ್ಷಿತವಲ್ಲವೆಂದು ಸೂಚಿಸಿರುವರು. ಹೋಗುತ್ತ ತಿನ್ನುವುದು ಮುಂತಾದುದು ವ್ರತ ವಿವರಣೆ ಎಂದು ತಿಳಿಯಬೇಕು. ।।೩೨।।

**ಇತಿ ನಾನಾಯೋಗಚರ್ಯಾಚರಣೋ ಭಗವಾನ್ ಕೈವಲ್ಯಪತಿ-ರ್ಋಷಭೋಽಧಿಗತಪರಮಮಹಾನಂದಾನುಭವ ಆತ್ಮನಿ ಸರ್ವೇಷಾಂ ಸುತಾನಾಮಾತ್ಮಭೂತೇ ಭಗವತಿ ವಾಸುದೇವೇ ಆತ್ಮನೋಽವ್ಯವಧಾನೇನಾ-ನಂತರೋದರ ಭಾವೇನ ಸಿದ್ಧಸಮಸ್ತಾರ್ಥೈಃ ಪರಿಪೂರ್ಣೋ ಯೋಗೈಶ್ವರ್ಯಾಣಿ ವೈಹಾಯಸಮನೋಜವಾಂತರ್ಧಾನಪರಕಾಯ-ಪ್ರವೇಶದೂರಗ್ರಹಣಾದೀನಿ ಯದೃಚ್ಛಯೋಪಗತಾನಿ ನಾಂಜಸಾ ಹೃದಯೇನಾಭ್ಯನಂದತ್ ।।೩೩।।**

**ಇತಿ** ಈ ರೀತಿಯಾಗಿ **ನಾನಾಯೋಗಚರ್ಯಾಚರಣಃ** ವಿವಿಧ ಯೋಗ ಸ್ಥಿತಿಗಳನ್ನು ಆಚರಿಸುವ **ಭಗವಾನ್** ಸರ್ವೈಶ್ವರ್ಯ ಸಂಪನ್ನನಾದ **ಕೈವಲ್ಯಪತಿಃ** ಮೋಕ್ಷಾಧಿಪತಿಯಾದ **ಅಧಿಗತಪರಮಮಹಾನಂದಾನುಭವಃ** ಯಾವಾಗಲೂ ಸ್ವರೂಪಭೂತವಾದ ಪರಮ ಮಹಾನಂದದ ಅನುಭವವನ್ನು ಹೊಂದಿದ **ಋಷಭಃ** ಋಷಭದೇವನು **ಆತ್ಮನಿ** ಆದಾನಾದಿಕರ್ತೃವಾದ **ಸರ್ವೇಷಾಂ ಸುತಾನಾಂ ಆತ್ಮಭೂತೇ** ಎಲ್ಲರ ಅಂತರ್ಯಾಮಿಯಾದ ಸ್ವಾಮಿಯಾದ **ಭಗವತಿ ವಾಸುದೇವೇ** ವಾಸುದೇವನಲ್ಲಿ **ಆತ್ಮನಃ** ತನ್ನ **ಅವ್ಯವಧಾನೇನ** ವಿಚ್ಛೇದವಿಲ್ಲದ **ಅನಂತರೋದರಭಾವೇನ** ಭೇದ ಶೂನ್ಯವಾದ ದೋಷರಹಿತವಾದ ಮನಸ್ಸಿನಿಂದ (ಬ್ರಹ್ಮಾನುಭವದಿಂದ) **ಸಿದ್ಧಸಮಸ್ತಾರ್ಥೈಃ** ಪ್ರಾಪ್ತವಾದ ಎಲ್ಲ ಪುರುಷಾರ್ಥಗಳಿಂದ ಪರಿಪೂರ್ಣನಾದ ಕಾರಣದಿಂದಲೇ **ಯದೃಚ್ಛಯಾ ಉಪಗತಾನಿ** ಸ್ವೇಚ್ಛೆಯಿಂದ ಇದ್ದಕ್ಕಿದ್ದಹಾಗೆ ಸಿದ್ಧಿಸಿರುವ **ವೈಹಾಯಸ** ಆಕಾಶದಲ್ಲಿ ಸಂಚರಿಸುವುದು **ಮನೋಜವ** ಮನೋವೇಗದಿಂದ ದೇಹದಿಂದ ಹೋಗುವುದು **ಅಂತರ್ಧಾನ** ಯಾರಿಗೂ ಕಾಣದಂತೆ ಇರುವುದು **ಪರಕಾಯಪ್ರವೇಶ** ಮತ್ತೊಬ್ಬರ ದೇಹದಲ್ಲಿ ಪ್ರವೇಶಿಸುವುದು




**ದೂರಗ್ರಹಣಾದೀನಿ** ದೂರದಿಂದಲೇ ವಸ್ತುಗಳನ್ನು ತಿಳಿಯುವುದು ಮುಂತಾದ **ಯೋಗೈಶ್ವರ್ಯಾಣಿ** ಯೋಗ ಸಿದ್ಧಿಗಳನ್ನು **ಅಂಜಸಾ** ಮುಖ್ಯವಾಗಿ ಜನರಿಗೆ ತೋರಿಸಲು **ಹೃದಯೇನ ನ ಅಭ್ಯನಂದತ್** ಮನಸ್ಸಿನಿಂದ ಇಷ್ಟಪಡಲಿಲ್ಲ. ಅವುಗಳನ್ನು ತೋರಿಸುವುದರಿಂದ ಯೋಗಿಯ ಮನಸ್ಸು ಅಲ್ಲಿಯೇ ಆಸಕ್ತವಾಗಿ ಧ್ಯಾನಕ್ಕೆ ವಿರುದ್ಧವಾದ ಕರ್ಮಗಳಲ್ಲಿಯೇ ತೊಡುಗುವುದರಿಂದ ಅನರ್ಥವಾಗುವುದೇ ಹೆಚ್ಚೆಂದು ಲೋಕಕ್ಕೆ ಉಪದೇಶಿಸಲು ಹೀಗೆ ಮಾಡಿದನು(ತೋರಿಸಲಿಲ್ಲವೆಂದು ಭಾವ). ।।೩೩।।

**।। ಇಲ್ಲಿಗೆ 5ನೇ ಅಧ್ಯಾಯವು ಮುಗಿಯಿತು ।।**

★★★



## ಐದನೇ ಅಧ್ಯಾಯದ ಸಾರ

ಮಕ್ಕಳಿಗೆ ಋಷಭದೇವನು ಉಪದೇಶಿಸುವನು. ಮನುಷ್ಯಲೋಕದಲ್ಲಿ ಜೀವರು ಶರೀರವನ್ನು ಹೊಂದಿರುವರು. ಅವರ ಈ ಶರೀರವು ವಿಷಯಭೋಗಕ್ಕಾಗಿ ಅಲ್ಲ. ಅದು ಅವರ ಅಧೀನವಲ್ಲ. ಈ ವಿಷಯಭೋಗಗಳು ನಾಯಿ ಹಂದಿ ಮೊದಲಾದ ಪ್ರಾಣಿಗಳಿಗೂ ಇವೆ. ಇಂತಹ ವಿಷಯ ಸುಖಗಳನ್ನು ಯಾವ ವಿವೇಕಿಯು ಅನುಭವಿಸಲು ಅರ್ಹನು? ಯಾವನೂ ಅರ್ಹನಲ್ಲ. ಕಾರಣ ವಿವೇಕಿಗಳಾದ ನೀವು ಈ ದೇಹದಿಂದ ವೈಕುಂಠ ಮೊದಲಾದ ದ್ಯುಲೋಕಗಳಿಗೆ ಸಾಧನವಾದ ತಪಸ್ಸನ್ನು (ಕಾಯ ಕ್ಲೇಶಾತ್ಮಕವಾದ ಉಪವಾಸಾದಿಗಳನ್ನು ಶಾಸ್ತ್ರವಿಮರ್ಶನಾತ್ಮಕ ಪಠನ ಪಾಠನಾದಿಗಳನ್ನು) ಆಚರಿಸಲು ಅರ್ಹರು. ಆದರಿಂದ ಅಂತಃಕರಣ ಶುದ್ಧವಾಗುವುದು. ಶುದ್ಧವಾದ ಅಂತಃಕರಣದಿಂದ ದೇಶ ಕಾಲಗಳಿಂದ ಅಂತವಿಲ್ಲದ ನಿರ್ದೋಷವೂ ಜ್ಞಾನಾತ್ಮಕವೂ ಆದ ಶರೀರವುಳ್ಳ ಗುಣಪೂರ್ಣನಾದ ಪರಬ್ರಹ್ಮನ ಅಪರೋಕ್ಷಜ್ಞಾನವಾಗುವುದು. ಆದ್ದರಿಂದ ಯೋಗ್ಯತಾನುಸಾರ ಪೂರ್ಣವಾದ ಶಾಶ್ವತವಾದ ಸ್ವರೂಪಾನಂದಾಭಿವ್ಯಕ್ತಿರೂಪ ಮೋಕ್ಷವಾಗುವುದು. ಇದು ಶಾಸ್ತ್ರಸಿದ್ಧವಾದ ಮಾತು. ಹಿಂದಿನವರು ಹೀಗೆ ಸಿದ್ಧಿ ಪಡೆದಿರುವ ಉದಾಹರಣೆಗಳೂ ಸಾಕಷ್ಟಿವೆ. ಜ್ಞಾನಿಗಳು ಮಹನೀಯರ ಸೇವೆಯು ವಿಶಿಷ್ಟ ಮೋಕ್ಷ ಕಾರಣವೆಂದು ಹೇಳುವರು. ನಿಷಿದ್ಧಸ್ತ್ರೀಯರಲ್ಲಿ ವಿಷಯಗಳಲ್ಲಿ ಸ್ನೇಹವುಳ್ಳ ಜನರ ಸಹವಾಸವೂ ಸಹ ತಮಸ್ಸಿಗೆ ಕಾರಣವೆಂದು ಹೇಳುವರು. ಅಂದಮೇಲೆ ಅವುಗಳಲ್ಲಿ ಸ್ನೇಹವು ತಮಸ್ಸಿಗೆ ಹಾದಿ. ಯಾರೂ ಬೇರೆ ಹೇಳಬೇಕಿಲ್ಲ. ಸ್ತ್ರೀಸಂಗ ಮಾಡಬಾರದು ಅಂದರೆ ಭಗವಂತನನ್ನು ವಿಪರೀತವಾಗಿ ತಿಳಿಯಬಾರದು ಎಂದು ಅರ್ಥ. ಭಗವಂತನ ವಿಷಯಕವಾದ ವಿಪರೀತಜ್ಞಾನವನ್ನು ಶಾಸ್ತ್ರಕಾರರು ಸ್ತ್ರೀ ಎಂದು ವ್ಯವಹರಿಸುವರು.




ಅಂಥಹ ಸ್ತ್ರೀಸಂಗಿಗಳ ಅಂದರೆ ವಿಪರೀತಬುದ್ಧಿಯುಳ್ಳವರ ಸಹವಾಸವೂ ತಮಸ್ಸಿಗೆ ಸಾಧನವೆಂದೂ ತಿಳಿಯಬೇಕು. ಯಾರು ನಿರ್ದೋಷನಾದ ಶ್ರೀಹರಿಯಲ್ಲಿ ಮನಸ್ಸುಳ್ಳವರೋ, ಜೀವರ ಯೋಗ್ಯತಾನುಸಾರ ಆ ಆ ಜೀವರಲ್ಲಿ ಅಭಿಮಾನ ಮಾಡುವರೋ, ಅತಿಶಯವಾಗಿ ಶ್ರೀಹರಿಯಲ್ಲಿ ನಿಷ್ಠೆಯುಳ್ಳವರೋ, ವಿಶೇಷಜ್ಞಾನಶೀಲರೋ, ಭಗವದ್ಭಕ್ತರಲ್ಲಿ ಸ್ನೇಹಭಾವವುಳ್ಳವರೋ, ರಾಗಾದಿ ದೋಷರಹಿತರೋ, ವಿಹಿತ ಅನುಷ್ಠಾನ ಮುಂತಾದ ಗುಣವುಳ್ಳವರೋ, ಸರ್ವನಿಯಾಮಕನಾದ ನನ್ನಲ್ಲಿ ಭಕ್ತಿ ಮಾಡುವುದೇ ಪ್ರಯೋಜನವಾಗಿ ಉಳ್ಳವರೋ, ಕೇವಲ ದೇಹಂಭರಣ ಮಾಡುವುದರಲ್ಲಾಗಲಿ, ವಿಷಯವಾರ್ತಾಸಕ್ತರಾದವರಲ್ಲಾಗಲಿ, ಮನೆ ಮಡದಿ ಮಕ್ಕಳಲ್ಲಾಗಲಿ, ಸ್ನೇಹಿತರಲ್ಲಾಗಲಿ, ಧನದಲ್ಲಾಗಲಿ ಪ್ರೀತಿಯಿಲ್ಲದವರೋ ಈ ಜನರಿಂದ, ಹಣದಿಂದ, ಜೀವನ ಯಾತ್ರೆ ಮಾತ್ರವೇ ಪ್ರಯೋಜನವಾಗಿವುಳ್ಳವರೋ ಅವರೇ ಮಹನೀಯರು. ಜನರು ಇಂದ್ರಿಯಗಳನ್ನು ತೃಪ್ತಿಪಡಿಸುವಸಲುವಾಗಿ ಕಾರ್ಯಗಳನ್ನು ಮಾಡುವರು. ಈ ಕಾರಣದಿಂದ ದೀನರೂ ಕರ್ತವ್ಯ ಪರಾಙ್ಮುಖರಾದ ಇವರು ಆ ಕರ್ಮಗಳನ್ನು ತಮ್ಮದೆಂದು ಅನುಭವಿಸುವರು. ಆದ್ದರಿಂದ ಬಂಧಿತರಾಗುವರು. ಕರ್ಮಗಳ ಫಲವಾಗಿಯೇ ಜೀವರಿಗೆ ನಶ್ವರವೂ, ಅಮಂಗಲವೂ, ಜಿಗುಪ್ಸಿತವೂ, ಸಂಸಾರ ಕ್ಲೇಶದಾಯಕವೂ ಆದ ಈ ದೇಹವು ಬಂದಿರುವುದು. ಆದ್ದರಿಂದ ಈ ಬಗೆಯ ದೇಹಗಳಿಗೆ ಕಾರಣವಾದ ಕರ್ಮವು ಶ್ರೇಯಃ ಸಾಧನವಲ್ಲ ಎಂದೇ ನನ್ನ ಅಭಿಪ್ರಾಯ. ಇದು ಮತ್ತೆ ಮತ್ತೆ ಬಂಧಕವೇ ಆಗಿರುವುದು. ಶ್ರೀಹರಿಯ ಸ್ವರೂಪವನ್ನು ಶ್ರವಣ ಮೊದಲಾದ ಜಿಜ್ಞಾಸೆಯಿಂದ ಸಾಧಕನು ಎಲ್ಲಿಯವರೆಗೆ ಕಾಣುವುದಿಲ್ಲವೋ ಅಲ್ಲಿಯವರೆಗೆ ಶ್ರೀಹರಿಯನ್ನು ತಿಳಿಯದಿರುವುದರಿಂದ ಬಂದ ಅಸ್ವಾಭಾವಿಕ ದೇಹಬಂಧಾತ್ಮಕವಾದ ಈ ಸಂಸಾರ ಕ್ಲೇಶವೂ, ನಿಷಿದ್ಧ ಕ್ರಿಯೆಗಳ ಫಲವೂ ಇರುವವು. ಶ್ರೀಹರಿಯ ಅಪರೋಕ್ಷವಾದ ಮೇಲೆ ಶರೀರವು ಬಂಧಕವೂ ಜಡಮನಸ್ಸು ಕಾರ್ಯಕಾರಿಯೂ ಆಗುವುದಿಲ್ಲ. ಪಾಪದ ಲೇಪವೂ ಇರುವುದಿಲ್ಲ. ಜೀವಾಚ್ಛಾದಿಕ ಮತ್ತು ಪರಮಾಚ್ಛಿದಿಕಗಳು ಜೀವನ ಮತ್ತು ಪರಮಾತ್ಮನ ಸ್ವರೂಪವನ್ನು ಜೀವನಿಗೆ ತಿಳಿಯದಂತೆ ಆವರಿಸುವವು. ಅಜ್ಞಾನಿಯಾದ ಜೀವನ ಕರ್ಮವಶವಾದ ಮನಸ್ಸು ಅವನನ್ನು ವಿಷಯಗಳಲ್ಲಿ ಆಸಕ್ತನನ್ನಾಗಿಸುವುದು. ವಾಸುದೇವನಾದ ನನ್ನಲ್ಲಿ ಭಕ್ತಿಯನ್ನು ಮಾಡದೇ ಇರುವವರೆಗೆ ಈ ದೇಹ ಸಂಬಂಧದಿಂದ ಜೀವನಿಗೆ ಮುಕ್ತಿಯಿಲ್ಲ. ಜೀವನು

ಶ್ರೀಹರಿಯು ಸ್ವತಂತ್ರನೆಂಬುದನ್ನು ಅರಿಯದಿರುವುದೇ ಅವಿದ್ಯೆ. ಇದರಿಂದ ಅವನು ಮನಸ್ಸನ್ನು ಕರ್ಮವಶವನ್ನಾಗಿ ಮಾಡುವನು. ಅವ್ಯಕ್ತಸ್ವಭಾವನಾದ ಶ್ರೀಹರಿಯು ವ್ಯವಹಿತನಂತೆ ಇರುವನು. ಈ ಅಂತರ್ಯಾಮಿಯಾದ ವಾಸುದೇವನಲ್ಲಿ (ನನ್ನಲ್ಲಿ) ಮಾಡುವ ಭಕ್ತಿಯಿಂದಲೇ ಮೋಕ್ಷ . ಅವಿದ್ಯೆ ಇರುವಾಗ ಕರ್ಮವು ಮನಸ್ಸನ್ನು ವಿಷಯಗಳಲ್ಲಿ ಪ್ರವರ್ತಿಸುವಂತೆ ಮಾಡುವುದು. ಜೀವನು ಸ್ವಾಭಾವಿಕವಾಗಿ ಜ್ಞಾನ ಸ್ವರೂಪನು. ವಿಷಯಗಳಲ್ಲಿ ಇಂದ್ರಿಯ ಪ್ರವೃತ್ತಿಯು ಅವನ ಸ್ವಾಭಾವಿಕ ಇಷ್ಟಕ್ಕೆ ವಿರುದ್ಧವಾದುದು. ಆದನ್ನೇ ಅನುಕೂಲವೆಂದು ಅವನು ತಿಳಿದಾಗ ಶಾಸ್ತ್ರಾರ್ಥಾನುಸಂಧಾನವು ಇಲ್ಲವಾಗುವುದು. ಶ್ರೀಹರಿಯ ಸ್ಮರಣೆಯು ತಪ್ಪುವುದು. ಇದರಿಂದ ಅವನು ಸ್ವರೂಪಾನಂದಾನುಭವರೂಪ ಮೋಕ್ಷದಲ್ಲಿ ಪ್ರಮತ್ತನಾಗಿ ಅಜ್ಞಾನಿಯೆನಿಸುವನು. ಆಗ ಮಿಥುನೀಭಾವಕ್ಕೆ ಯೋಗ್ಯವಾದ ಮನೆಯನ್ನೋ (ದೇಹವನ್ನೋ) ಹೊಂದಿ ಅಲ್ಲಿ ದುಃಖವನ್ನು ಹೊಂದುವನು. ಅಜ್ಞಾನಿಯು ಮೋಕ್ಷಕ್ಕೆ ವಿರುದ್ಧವಾದ ಪ್ರಾಕೃತ ಶಬ್ದಾದಿ ವಿಷಯೇಚ್ಛೆಯನ್ನು ವಿಹಿತಸಾಧನವೆಂದು ತಿಳಿದಾಗ ದುಃಖಕ್ಕೀಡಾಗುವನು. ಸ್ತ್ರೀ ಪುರುಷರ ಈ ಮಿಥುನೀಭಾವವು ಅವರ ಪರಸ್ಪರ ಮನೋಬಂಧಪಾಶವೆಂದು ಬಲ್ಲವರು ಹೇಳುವರು. (ಅರ್ಥಕ್ರಿಯಾಕಾರಿಯಾದ ಇದು ಎಂದೂ ಸುಳ್ಳಲ್ಲ.) ಈ ಹೃದಯಗ್ರಂಥಿಯಿಂದಲೇ ಗೃಹ, ಕ್ಷೇತ್ರ, ಮಕ್ಕಳು, ಆಪ್ತರು, ಹಣ ಇವುಗಳ ನಿಮಿತ್ತವಾಗಿ ಜೀವನಿಗೆ ನಾನು ನನ್ನದೆಂಬ ಅಭಿಮಾನ, ಅಂಹಕಾರ ಬರುವುದು. ಇದೇ ದುಃಖಕ್ಕೆ ಮೂಲ. (ಗೃಹಸ್ಥರಾಗಿಯೇ ಮುಕ್ತರಾಗುವ ಯೋಗ್ಯತೆಯುಳ್ಳ ಜೀವರಿಗೆ ಸತ್ಸಂಗತಿಯಿಂದ ಬಂಧಮುಕ್ತಿಯಾಗುವುದು ಕಾರಣ ಅವರಿಗೆ ಸ್ತ್ರೀಸಂಗ ನಿಂದಿತವಲ್ಲ). ಜೀವನ ಕರ್ಮಪರಂಪರೆಗೆ ಕಾರಣವಾದ ಲಿಂಗದೇಹವು (ಹೃದಯಗ್ರಂಥಿ) ಮತ್ತೆ ಬಾರದಂತೆ ಪೂರ್ಣವಾಗಿ ಶಿಥಿಲವಾದಾಗ ಸಂಸಾರದಲ್ಲಿ ತೊಳಲುತ್ತಿರುವ ಈ ಚೇತನರು ಸಂಸಾರಕ್ಕೆ ಕಾರಣವಾದ ಅಹಂಮಮಾಭಿಮಾನವನ್ನು (ಹೃದಯಗ್ರಂಥಿಯನ್ನು) ಕಳೆದುಕೊಂಡು ದುಃಖದಿಂದ ಮುಕ್ತರಾಗಿ ಪರಬ್ರಹ್ಮನನ್ನು ಹೊಂದುವರು. ಹರಿಯೂ, ಗುರುವೂ (ಗುರ್ವಂತರ್ಯಾಮಿಯೂ) ಆದ ನನ್ನಲ್ಲಿ ಭಕ್ತಿಪೂರ್ವಕ ಸತತ ಸೇವೆಯಿಂದಲೂ, ವಿಷಯಗಳಲ್ಲಿ ವಿರಕ್ತಿಯಿಂದಲೂ (ಆಸೆಯನ್ನು ಬಿಡುವುದರಿಂದಲೂ) ದ್ವಂದ್ವಗಳನ್ನು ಸಹಿಸುವುದರಿಂದಲೂ, ಇಹಪರಗಳಲ್ಲಿಯೂ, ಎಲ್ಲ ಯೋಗಗಳಲ್ಲಿಯೂ ಜೀವರು ದುಃಖಿಗಳೆಂದು ವಿಚಾರಮಾಡಿ ತಿಳಿಯುವುದರಿಂದಲೂ, ವೇದಾಂತವಾಕ್ಯ




ವಿಚಾರದಿಂದಲೂ, ತಪಸ್ಸಿನಿಂದಲೂ, ನಿಷಿದ್ಧಕರ್ಮ ನಿಷಿದ್ಧಕಾಮುಗಳನ್ನು ಪರಿತ್ಯಜಿಸುವುದರಿಂದಲೂ, ನನ್ನ ಆರಾಧನಾರೂಪಕರ್ಮಗಳನ್ನು ಮಾಡುವುದರಿಂದಲೂ, ನನ್ನ ಕಥಾಶ್ರವಣದಿಂದಲೂ, ನನ್ನನ್ನು ಸೇವಿಸುವ ನನ್ನ ಸ್ವರೂಪವನ್ನು ಹೃದಯದಲ್ಲಿ ಹೊಂದಿರುವ ಮಹಾಂತರ ಸಂಗದಿಂದಲೂ, ನನ್ನ ಪ್ರತಿಮಾದಿಗಳನ್ನು ಪೂಜಿಸುವುದರಿಂದಲೂ, ನನ್ನ ಗುಣಗಳನ್ನು ಹೇಳುವ ನಾಮುಗಳ ಭಕ್ತಿಪೂರ್ವಕ ಉಚ್ಚಾರಣೆಯಿಂದಲೂ, ಪ್ರಾಣಿಗಳಲ್ಲಿ ನಿರ್ವೈರಭಾವದಿಂದಲೂ, ಯೋಗ್ಯತಾನುಸಾರ ಅಭಿಮಾನ ಮಾಡುವುದರಿಂದಲೂ, ಕ್ಷಮಾಗುಣದಿಂದಲೂ, ದೇಹಗೇಹಾದಿಗಳಲ್ಲಿ ನಾನು ನನ್ನದು ಎಂಬ ಅಭಿಮಾನವನ್ನು ಬಿಡುವ ಇಚ್ಛೆಯಿಂದಲೂ, ಹೇ ಮಕ್ಕಳೇ! ನಾಡೀ ಶೋಧನರೂಪ ಆಧ್ಯಾತ್ಮಯೋಗ ದಿಂದಲೂ ಶ್ರೀಹರಿಯನ್ನು ತಿಳಿಸುವ ಶಾಸ್ತ್ರಾಭ್ಯಾಸದಿಂದಲೂ, ಏಕಾಂತವಾಸದಿಂದಲೂ, ಒಳ್ಳೆಯ ಶ್ರದ್ಧೆಯಿಂದಲೂ, ಬ್ರಹ್ಮಚರ್ಯದಿಂದಲೂ, ನಿರಂತರ ತನ್ನ ಕರ್ತವ್ಯವನ್ನು ಮರೆಯದಿರುವುದರಿಂದಲೂ, ಸರ್ವತ್ರ ನನ್ನ ವ್ಯಾಪ್ತಿಯನ್ನು ಅನುಸಂಧಾನ ಮಾಡುವುದರಿಂದಲೂ, ದುಃಶಾಸ್ತ್ರಗಳನ್ನು ಅಭ್ಯಾಸಮಾಡದಿರುವುದರಿಂದಲೂ, ಮೋಕ್ಷಕ್ಕೆ ಕಾರಣವಾದ ಸ್ವಯೋಗ್ಯ ವಿಶೇಷ ಜ್ಞಾನದಿಂದ ಕೂಡಿದ ವಿಷ್ಣು ಸರ್ವೋತ್ತಮತ್ವ ಜ್ಞಾನದಿಂದಲೂ, ಇಂದ್ರಿಯ ಜಯದಿಂದ ಸ್ಪಷ್ಟವಾದ ಸತ್ವಗುಣದಿಂದ ವೈಷ್ಣವ ಸಿದ್ಧಾಂತದಲ್ಲಿ ದಾರ್ಢ್ಯವನ್ನು ಹೊಂದಿ ಉತ್ತಮ ಜನ್ಮ ಮತ್ತು ಸತ್ವಗಳನ್ನು ಹೊಂದಿದವನಾಗಿ ತನಗೆ ಅಜ್ಞಾನನಿಮಿತ್ತವಾಗಿ ಅನಾದಿಯಿಂದ ಬಂದಿರುವ ಈ ಕರ್ಮಪರಂಪರಾ ಸಂಪಾದಕವಾದ (ಶ್ರೀಹರಿಯ ಇಚ್ಛೆಯಂತೆ) ಲಿಂಗದೇಹವನ್ನು ಹೋಗಲಾಡಿಸಿಕೊಳ್ಳಬೇಕು. ಈ ಲಿಂಗದೇಹವೇ ಪರಸ್ಪರ ರಾಗಾನುರಾಗರೂಪ ಬಂಧಕ್ಕೆ ಕಾರಣವಾದುದು. ಇದೇ ಅಹಂ ಎಂದು ಕರೆಸಿಕೊಳ್ಳುವುದು. ಈ ಸಾಧನೋಪಾಯಗಳಿಂದ ಬಿಂಬರಾದ ಗುರುಗಳ ಉಪದೇಶದಂತೆ ಅನುಷ್ಠಾನ ಮಾಡಿ ಶ್ರೀಹರಿಯನ್ನು ಅಪರೋಕ್ಷೀಕರಿಸಿಕೊಂಡು ತದನಂತರ ಮಾಡುವ ಧ್ಯಾನದಿಂದ ಸಂಪೂರ್ಣವಾಗಿ ಲಿಂಗಶರೀರವನ್ನು ಹೋಗಲಾಡಿಸಿಕೊಂಡು ಅಧಿಕಾರಿಯು ಶ್ರೀಹರಿಯ ಸಮೀಪದಲ್ಲಿ ಸ್ವರೂಪಾನಂದವನ್ನು ಅನುಭವಿಸುವವನಾಗಬೇಕು.

ನನ್ನ ಲೋಕವನ್ನು ಅಪೇಕ್ಷಿಸುವ ಮಧ್ಯಮಾಧಿಕಾರಿಯಾಗಲಿ, ಅನುಗ್ರಹವನ್ನೇ ಪ್ರಯೋಜನವೆಂದು ಬಗೆದ ಉತ್ತಮಾಧಿಕಾರಿಯಾಗಲಿ, ಜ್ಞಾನಶೀಲನು,

ಪಾಪರಹಿತನು, ಸಿಟ್ಟಿಲ್ಲದವನೂ ಆದ ತಂದೆಯೋ, ಗುರುವೋ, ಬ್ರಹ್ಮಜ್ಞಾನವಿಲ್ಲದ ಮೋಕ್ಷೋಪಾಯವನ್ನರಿಯದ ಮಗನನ್ನೋ, ಶಿಷ್ಯನನ್ನೋ ಮೇಲೆ ಹೇಳಿದ ರೀತಿಯಲ್ಲಿ ಅನುಶಾಸನ ಮಾಡಬೇಕು. ಕರ್ಮವೇ ಶ್ರೇಯಸ್ಸಾಧನವೆಂದು ಭ್ರಾಂತರಾಗಿರುವವರನ್ನು ಮತ್ತೆ ಪ್ರವೃತ್ತಿ ಕರ್ಮದಲ್ಲಿ ತೊಡಗಿಸಬಾರದು. ಕಣ್ಣಿಲ್ಲದವನನ್ನು ಹಳ್ಳಕ್ಕೆ ತಳ್ಳಿದವನಂತೆ ಮೊದಲೇ ಜ್ಞಾನವಿಲ್ಲದವನನ್ನು ಸಂಸಾರಕ್ಕೆ ಕಾರಣವಾದುದರಲ್ಲಿ ಯೋಜಿಸುವ ಅಜ್ಞಾನಿಯು ಯಾವ ಪುರುಷಾರ್ಥವನ್ನೂ ಹೊಂದಲಾರ. ಅತಿಶಯವಾಗಿ ವಿಷಯಗಳನ್ನು ಬಯಸುವವನು, ಶ್ರೇಯೋಮಾರ್ಗದಲ್ಲಿ ಶಾಸ್ತ್ರಜ್ಞಾನವಿಲ್ಲದವನು, ಸ್ವಾಭಾವಿಕವಾಗಿಯೇ ಮೋಕ್ಷಕ್ಕೆ ಪ್ರತಿಬಂಧಕಗಳಾದ ಲೌಕಿಕ ಪುರುಷಾರ್ಥಗಳನ್ನು ಅಪೇಕ್ಷಿಸುವನು. ಇವನಿಗಾದರೂ ಬರುವುದೇನು? ಅಲ್ಪ ಸುಖಕ್ಕಾಗಿ ಪ್ರಯತ್ನಿಸುವ ಇವನು ಪರಸ್ಪರ ವೈರವು, ಅನಂತ ದುಃಖವೂ ಬರುವುದೆಂಬುದನ್ನು ಅರಿತಿಲ್ಲ. ಮೂಢ ದೃಷ್ಟಿಹೀನ ಸ್ವಯಂ ಪ್ರವೃತ್ತಿ ಕರ್ಮದಿಂದಾಗುವ ಹಾನಿಯನ್ನು ತಿಳಿದಿರುವ ಜ್ಞಾನಿಯು ಯಾವನು ತಾನೇ ಮೊದಲೇ ಅಜ್ಞಾನ ನಿಮಿತ್ತಕ ಸಂಸಾರದಲ್ಲಿ ತೋಳಲುತ್ತಿರುವ ಕರ್ಮಮೂಢನನ್ನು ಕಂಡು ಕನಿಕರಗೊಂಡು ಮತ್ತೆ ಅವನನ್ನು ಅದೇ ಮಾರ್ಗದಲ್ಲಿ ತೊಡಗಿಸಿಯಾನು? ಮೊದಲೇ ತಪ್ಪುದಾರಿ ಹಿಡಿದ ಕುರುಡನನ್ನು ಕಂಡು ಕನಿಕರಗೊಂಡ ಕಣ್ಣುಳ್ಳವನು ಯಾವನು ತಾನೇ ಅವನನ್ನು ಮತ್ತೆ ಅದೇ ದಾರಿಯಲ್ಲಿ ಹೋಗೆಂದು ಹೇಳುವನು? ಅಜ್ಞಾನದಿಂದ ಬಂದಿರುವ ಸಂಸಾರ ಬಂಧವನ್ನು ನಿವೃತ್ತಿ ಮಾರ್ಗೋಪದೇಶದಿಂದ ಹೋಗಲಾಡಿಸದಿರುವ ಗುರುವು ಗುರುವಲ್ಲ, ಸ್ವಜನನು ಸ್ವಜನನಲ್ಲ, ತಂದೆಯು ತಂದೆಯಲ್ಲ, ತಾಯಿಯು ತಾಯಿಯಲ್ಲ, ಉದ್ದಿಷ್ಟ ದೇವತೆಯು ದೇವತೆಯಲ್ಲ, ಪತಿಯು ಪತಿಯಲ್ಲ. ಈ ನನ್ನ ಶರೀರವು ಮನುಷ್ಯ ಶರೀರದಂತೆ ಕಾಣುತ್ತಿದೆ ಆದರೆ ಇದು ಅಪರಿಚ್ಛಿನ್ನವಾದುದು. ಭೌತಿಕವಲ್ಲ, ಜ್ಞಾನಾತ್ಮಕವು. ಇದನ್ನು ಪ್ರಾಕೃತರು ತಿಳಿಯಲಾರರು. ಈ ನನ್ನ ಹೃದಯವು ಬಲ ಮತ್ತು ಜ್ಞಾನಗಳ ಸಮಾವೇಶವಾದ ಸತ್ವಗುಣವನ್ನೇ ವಿಷಯೀಕರಿಸುವುದು. ಆದ್ದರಿಂದ ಈ ದೇಹವು ಅಲೌಕಿಕವಾದುದು. ಇದರಲ್ಲಿ ಧರ್ಮವೇ ಪ್ರವೃದ್ಧವಾಗಿರುವುದು, ಅಧರ್ಮವು ನನ್ನ ಬೆನ್ನಿನಲ್ಲಿದ್ದು ನನ್ನಿಂದ ದೂರವಾಗಿದೆ. ಅದಕ್ಕೆ ನಾನು ಸಿಗುವುದಿಲ್ಲ. ಈ ಕಾರಣದಿಂದ ಶಬ್ದಾರ್ಥತತ್ತ್ವವನ್ನು ತಿಳಿದ ಜ್ಞಾನಿಗಳು ನನ್ನನ್ನು ಋಷಭನೆಂದು ಅನ್ವರ್ಥನಾಮದಿಂದ ಕರೆಯುವರು. ನೀವೆಲ್ಲರೂ ಈ ನನ್ನ ಶರೀರದಿಂದ ಹುಟ್ಟಿದವರು. ನನ್ನ ಇಚ್ಛೆಯಂತೆ

 

ಸ್ಪಷ್ಟರಾಗಿದ್ದೀರಿ. ಸರ್ವೋತ್ತಮನು, ಸರ್ವಾಧಾರನೂ, ಪ್ರಜಾರಕ್ಷಣೆಯಲ್ಲಿ ನಿರತನೂ ಆದ ನನ್ನನ್ನು ಕ್ಲೇಶರಹಿತ ಮನಸ್ಸಿನಿಂದ ಸೇವಿಸಿರಿ. ಸತ್ವಗುಣದಿಂದ ಜನಿಸಿದ ನೀವು ನಿಮ್ಮಲ್ಲಿ ಉತ್ತಮನೂ, ಜ್ಯೇಷ್ಠನೂ, ನಾಭಿಯೆಂಬ ನನ್ನನ್ನು ಜನಕನನ್ನಾಗಿ ಹೊಂದಿರುವವನೂ ಆದ ಭರತನನ್ನು ರಾಜ್ಯಕ್ಕಾಗಿ ಸ್ಪರ್ಧಿಸದೇ ಸೇವಿಸಿರಿ. ಅವನು ಮಾಡುವ ಪ್ರಜಾಪಾಲನೆಯೇ ನೀವು ಮಾಡಿದಂತೆ ಆಗಿ ನನ್ನ ಶುಶ್ರೂಷೆಯೇ ಆಗುವುದು. ಪ್ರಾಣಿಗಳಲ್ಲಿ ಸ್ಥಾವರ ಪ್ರಾಣಿಗಳು, ಅವುಗಳಿಗಿಂತ ಚಲಿಸುವ ಪ್ರಾಣಿಗಳೂ, ಅವುಗಳಲ್ಲಿ ಜ್ಞಾನವುಳ್ಳ ಪಶುಗಳೂ, ಅವುಗಳಿಗಿಂತ ಬ್ರಹ್ಮಪುತ್ರರಾದ ದಕ್ಷ, ಸನಕಾದಿದೇವತೆಗಳೂ, ಅವರಲ್ಲಿ ಇಂದ್ರನೂ, ಇಂದ್ರನಿಗಿಂತ ಬ್ರಹ್ಮಪುತ್ರನಾದ ರುದ್ರನು, ಅವನಿಗಿಂತ ಬ್ರಹ್ಮನೂ ಉತ್ತಮರು. ಬ್ರಹ್ಮನಿಗಿಂತ ಶ್ರೀಹರಿಯಾದ ನಾನೇ ಉತ್ತಮನು. ಹೀಗೆ ಸರ್ವೋತ್ತಮನಾದ ನಾನು ಬ್ರಾಹ್ಮಣರ ಉಪಾಸ್ಯ ದೇವತೆಯು. ಈ ಬ್ರಾಹ್ಮಣರಿಗೆ ಸಮವಾದ(ಪ್ರಾಣಿಯೇ)ವರೇ ಬೇರೊಬ್ಬರು ಈ ಲೋಕದಲ್ಲಿ ಇಲ್ಲ. ಅವನಿಗಿಂತ ಉತ್ತಮವಾದವರೆಲ್ಲಿರಲು ಸಾಧ್ಯ? ಜನರು ಈ ಬ್ರಾಹ್ಮಣರಲ್ಲಿ ಶ್ರದ್ಧೆಯಿಂದ ಭಕ್ತಿಪೂರ್ವಕ ಹೋಮಿಸಿದುದನ್ನು ನಾನು ತೃಪ್ತಿಯಾಗುವಂತೆ ಸ್ವೀಕರಿಸುತ್ತೇನೆ. ಅಗ್ನಿಯಲ್ಲಿ ಅಗ್ನಿಹೋತ್ರಾದಿ ಕರ್ಮಗಳಲ್ಲಿ ಹೋಮಿಸಿದ್ದು, ನನಗೆ ಅಷ್ಟೊಂದು ತೃಪ್ತಿಗೆ ಕಾರಣವಾಗುವುದಿಲ್ಲ. ಅತ್ಯಂತ ಪವಿತ್ರ ಮನಸ್ಸೂ, ಶ್ರೀಹರಿನಿಷ್ಠೆ, ಇಂದ್ರಿಯನಿಗ್ರಹ, ಸತ್ವಗುಣ, ಕಿರಿಯರಲ್ಲಿ ಅನುಗ್ರಹಬುದ್ಧಿ, ತಪಸ್ಸು, ದ್ವಂದ್ವಸಹಿಷ್ಣುತೆ ಮತ್ತು ಬ್ರಹ್ಮಜ್ಞಾನಗಳು ಈ ಲೋಕದಲ್ಲಿ ಬ್ರಾಹ್ಮಣರಲ್ಲಿಯೇ ಇರುವುವು. ಅವರು ಅನಾದಿನಿತ್ಯಗಳೂ, ನಿರ್ಮಲಗಳೂ ಆದ ನನ್ನ ಮತ್ಸ್ಯಮೊದಲಾದ ರೂಪಗಳನ್ನು ನನ್ನ ಪ್ರತಿಮೆಗಳಾದ ವೇದಗಳನ್ನು ಧರಿಸಿರುವರು. ಆ ವೇದಗಳೇ ನನ್ನ ಶರೀರವಿದ್ದಂತೆ. ಅವರಿಗಿಂತ ಉತ್ತಮವಾದ ಅಧಿಷ್ಠಾನ ಮತ್ತೊಂದಿಲ್ಲ. ದೇಶ ಕಾಲ ಗುಣಗಳಿಂದ ಅಂತವಿಲ್ಲದವನೂ, ಲಕ್ಷ್ಮಿಗಿಂತ ಉತ್ತಮನೂ, ಸ್ವರ್ಗ, ಮೋಕ್ಷ ಮುಂತಾದ ಪುರುಷಾರ್ಥಗಳಿಗೆ ಅಧಿಪತಿಯಾದ ನನ್ನಿಂದಲೂ ಬ್ರಾಹ್ಮಣೋತ್ತಮರು ಏನನ್ನೂ ಅಪೇಕ್ಷಿಸುವುದಿಲ್ಲ. ಅವರಿಗೆ ಶ್ರೀಹರಿಯೊಬ್ಬನೇ ಪ್ರಾರ್ಥನೀಯ(ನು)ವಸ್ತುವು. ಹೀಗಿದ್ದರೂ ನನ್ನಲ್ಲಿ ನಿಷ್ಕಾಮಭಕ್ತಿ ಮಾಡುವ ಅವರಿಗೆ ಲೌಕಿಕ ಪುರುಷಾರ್ಥಗಳಿಂದ ಏನು ಪ್ರಯೋಜನವಾದೀತು? ಲೌಕಿಕರಾದ ರಾಜರೇ ಮೊದಲಾದವರಿಂದ ಅವರಿಗೇನು ಪ್ರಯೋಜನ? (ಇಂತಹ ಬ್ರಾಹ್ಮಣರೇ ಅತ್ಯಂತ ಪೂಜ್ಯರು). ಎಲ್ಲ ಪ್ರಾಣಿಗಳೂ, ವಸ್ತುಗಳೂ ನನ್ನ

ನಿವಾಸಸ್ಥಾನಗಳೆಂದು ನಿಶ್ಚಯಿಸಿಕೊಳ್ಳಿ. ಅವುಗಳನ್ನು ಅವುಗಳ ಯೋಗತ್ಯೆಗೆ ತಕ್ಕಂತೆ ಗೌರವಿಸಿರಿ. ಪ್ರತಿಯೊಂದರಲ್ಲಿಯೂ, ಪ್ರತಿಕ್ಷಣದಲ್ಲಿಯೂ, ಜೀವೇಶ್ವರಭೇದಜ್ಞಾನವೇ ನನ್ನ ಪೂಜೆ. ಅಷ್ಟೇ ಅಲ್ಲ, ಮೇಲಿನ ಯುಕ್ತಿಗಳಿಂದ ಜೀವೇಶ್ವರಭೇದ ಪ್ರತಿಪಾದನೆಯೂ ನನ್ನ ಪೂಜೆ. ಅದೇ ನನ್ನ ತೃಪ್ತಿಗೆ ಕಾರಣ. ಕರ್ಮಗಳ ಮೂಲಕ ಮನೋವಾಕ್ಕುಗಳಿಂದ ಈ ಭೇದ ಜ್ಞಾನವುಳ್ಳವನಿಗೆ ಕರ್ಮಗಳೆಲ್ಲವೂ ಮುಖ್ಯವಾಗಿ ಪೂರ್ಣಗಳು. ಹೀಗೆ ಪೂರ್ಣತೆಯನ್ನು ತಂದುಕೊಡುವ ಭೇದಜ್ಞಾನವೇ ನನಗೆ ಉತ್ತಮ ಪೂಜೆ. ಈ ನನ್ನ ಪೂಜೆಗೆ ನನ್ನ ಅಪರೋಕ್ಷವೇ ಫಲ. ಇಂತಹ ಪೂಜೆಯಿಲ್ಲದ ಅಪರೋಕ್ಷವಿಲ್ಲದೆ ಅಧಿಕಾರಿಗೆ ಅಜ್ಞಾನರೂಪವಾದ ಸಂಸಾರ ಬಂಧನವು ಶ್ರೀಹರಿಯ ಇಚ್ಛೆಯಿಂದ ಬಂದಿರುವುದು. (ಆದ್ದರಿಂದ ಶ್ರೀಹರಿಯಾದ ನನ್ನ ಪೂಜೆಗೆ ಮೋಕ್ಷವೇ ಫಲ). ಋಷಭದೇವನು ಮಕ್ಕಳು ಸ್ವಯಂ ಸುಶಿಕ್ಷಿತರೇ ಆದರೂ ಅವರನ್ನು ನಿಮಿತ್ತ ಮಾಡಿಕೊಂಡು ಲೋಕದ ಜನರಿಗೆ ಉಪದೇಶಿಸಿದನು. ಋಷಭದೇವನು ಮಹಾಸಾಮರ್ಥ್ಯವಂತನು. ಜೀವರ ಅತ್ಯಂತ ಸ್ನೇಹಿತನು. ಅವನು ಉಪಶಾಂತಿ ಸ್ವಭಾವದವರೂ, ಕಾಮ್ಯ ಮತ್ತು ನಿಷಿದ್ಧ ಕರ್ಮಗಳನ್ನು ಬಿಟ್ಟವರೂ, ಶ್ರೀಹರಿಯನ್ನೇ ಮನನ ಮಾಡುವವರೂ ಆದ ಪರಮಹಂಸಸಂನ್ಯಾಸಿಗಳ ಧರ್ಮಗಳನ್ನು, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಉಪದೇಶಿಸಿದನು. ನೂರು ಸಹೋದರರಲ್ಲಿ ಹಿರಿಯನೂ, ಅತ್ಯಂತ ಭಗವದ್ಭಕ್ತನೂ, ಭಾಗವತಜನ ಸೇವಾಸಕ್ತನೂ ಆಗಿ ತಮ್ಮ ಮಗನಾದ ಭರತನನ್ನು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ಎಲ್ಲ ಪದಾರ್ಥಗಳನ್ನೂ ಮನೆಯಲ್ಲಿಯೇ ಬಿಟ್ಟು ಉಳಿದ ತನ್ನ ದೇಹವನ್ನು ಮಾತ್ರ ಜೊತೆಗೆ ತೆಗೆದುಕೊಂಡು ಆಹವನೀಯಾಗ್ನಿಯನ್ನು ತನ್ನಲ್ಲಿಯೇ ಆರೋಪಿಸಿಕೊಂಡವನಾಗಿ ಆಕಾಶಾಂಬರನಾಗಿ ಕೂದಲನ್ನು ಹರವಿಕೊಂಡು ಹುಚ್ಚನಂತೆ ಕಾಣುತ್ತಾ ಆ ಬ್ರಹ್ಮಾವರ್ತದಿಂದ ಹೊರಟು ಋಷಭದೇವನು ಸಂನ್ಯಾಸಿಯಾದನು. ಮೌನ ವ್ರತಧಾರಿಯಾದ, ಅವಧೂತ ವೇಷದ (ವೇಷಗಳನ್ನು ತ್ಯಜಿಸಿದ) ಅವನು ಜನರು ಮಾತನಾಡಿಸಿದರೂ ಜಡ, ಕುರುಡ, ಕಿವುಡ, ಮೂಕ, ಪಿಶಾಚಗ್ರಸ್ತನಂತೆ, ಹುಚ್ಚನಂತೆ, ಸುಮ್ಮನಿರುತ್ತಿದ್ದನು. ಪುರ, ಗ್ರಾಮ, ಗಣಿ, ಬೇಟೆಗಾರರ ಹಟ್ಟಿ, ಸಾಲಿಗರ ಬೀದಿ, ಶಿಬಿರಗೊಲ್ಲರ ಕೇರಿ, ಬೆಸ್ತರ ವಸತಿ, ವರ್ತಕರ ಪೇಟೆ, ಬೆಟ್ಟ, ಕಾಡು, ಋಷ್ಯಾಶ್ರಮ, ಎಲ್ಲಿ ಹೋದರೂ ಅಲ್ಲಲ್ಲಿ ತುಂಟರು ಅವನನ್ನು ಗದರಿಸುವುದು, ಉಗಳುವುದು, ಕಲ್ಲೆಸೆಯುವುದು, ಅಮೇಧ್ಯಚೆಲ್ಲುವುದು,

 

ಧೂಳೆರೆಚುವುದು, ಅವನ ಕಡೆಗೆ ಬೆನ್ನು ಮಾಡಿ ಹೂಸು ಬಿಡುವುದು, ಕೆಟ್ಟ ಮಾತುಗಳಿಂದ ಬೈಯ್ಯುವುದು, ಹೀಗೆ ಎಷ್ಟೇ ಅವಹೇಳನ ಮಾಡಿದರೂ ಅದನ್ನು ಲೆಕ್ಕಿಸುತ್ತಿರಲಿಲ್ಲ. ಕಾಡಾನೆ ನೊಣಗಳನ್ನು ಲೆಕ್ಕಿಸುವುದೇ? ಅವನು ಯಾವಾಗಲೂ ತನ್ನ ಮಹಿಮೆಯನ್ನು ವಿಷಯೀಕರಿಸುವ ನಿರ್ಭಯ ಜ್ಞಾನಾನುಭವವನ್ನು ಹೊಂದಿದವನು. ಸಂನ್ಯಾಸಿಗಳು ಅಮಂಗಳವಾದ ಮೂತ್ರಾದಿಗಳಿಗೆ ಆಕರವಾದ, ಅಸ್ವತಂತ್ರವೂ ಜಡವೂ ಅಸ್ವಾಭಾವಿಕವೂ ಆದ ಸಂಸಾರಾವಸ್ಥೆಯಲ್ಲಿ ಬಂದಿರುವ ಜಡ ದೇಹದಲ್ಲಿ, ನಾನು ನನ್ನದು ಎಂಬ ಮಮತೆಯನ್ನು ಬಿಟ್ಟಿರಬೇಕು ಎಂದು ಉಪದೇಶಿಸಲು ಬ್ರಹ್ಮಸ್ವರೂಪವೂ, ಬ್ರಹ್ಮಾವಾಸಸ್ಥಾನವೂ, ತನ್ನಿಂದ ಅಭಿನ್ನವೂ, ಸದಾ ತನಗೆ ಬ್ರಹ್ಮವೆಂದು ಜ್ಞಾನವಿಷಯವೂ ಆದ ದೇಹದಲ್ಲಿ ಮಮತೆ ಇಲ್ಲವೆಂದು ತೋರಿಸುತ್ತಾ ಅಪರಿಚ್ಛಿನ್ನನಾಗಿ ಒಬ್ಬನೇ ಭೂಮಿಯಲ್ಲೆಲ್ಲ ಸಂಚರಿಸಿದನು. ಅವನ ಕೈಗಳೂ, ಕಾಲುಗಳೂ, ವಕ್ಷಸ್ಥಳವೂ, ನೀಳವಾದ ತೋಳುಗಳು, ವಿಸ್ತಾರವಾದ ಭುಜಗಳು, ಕಂಠ, ಮುಖಮೊದಲಾದ ಎಲ್ಲ ಅವಯವಗಳೂ ಅತ್ಯಂತ ಕೋಮಲಗಳಾಗಿದ್ದು ವಿಶಿಷ್ಟರೀತಿಯಲ್ಲಿ ಸನ್ನಿವೇಶಗೊಂಡಿದ್ದವು. ಸ್ವಾಭಾವಿಕವಾಗಿಯೇ ಅವನು ಸುಂದರನು. ಅವನ ಸುಂದರ ಮುಖದಲ್ಲಿ ಸ್ವಾಭಾವಿಕ ನಗೆಯು ಮೂಡಿರುತ್ತಿತ್ತು. ಅವನ ಕಣ್ಣುಗಳು ಹೊಸಕಮಲದಳದಂತೆ ಇದ್ದು ಅವುಗಳ ಕರಿಗುಡ್ಡೆಗಳು ಪಾಪಹಾರಕಗಳಾಗಿದ್ದವು. ಸುಂದರಗಳಾಗಿ ನಸುಗೆಂಪಾಗಿದ್ದವು. ಸುಂದರ ಕಪೋಲ ಕರ್ಣಗಳು ಹೆಚ್ಚು ಕಡಿಮೆಯಿಲ್ಲದೆ ಪರಸ್ಪರ ಹೋಲುತ್ತಿದ್ದವು. ಅವನ ಕುತ್ತಿಗೆ ಮೂಗುಗಳು ರಮಣೀಯವಾಗಿದ್ದವು. ಮಿನುಗುಮುಗುಳುನಗೆ, ಮುಖದ ವಿಲಾಸಗಳಿಂದ ಅವನು ತನ್ನನ್ನು ನೋಡುವ ಪುರವನಿತೆಯರ ಮನದಲ್ಲಿ ಮನ್ಮಥೋದ್ರೇಕವನ್ನುಂಟುಮಾಡುತ್ತಿದ್ದನು. ಹೀಗಿದ್ದರೂ ಮುಂದೆ ಇಳಿಬಿದ್ದ ಮುಂಗುರುಳುಗಳು, ಧೂಮ್ರವರ್ಣದ ತಲೆಗೂದಲು, ಇವುಗಳ ಅತಿಶಯ ಭಾರವುಳ್ಳ ಅವನು ಮಮತೆ ಇಲ್ಲದ್ದರಿಂದ ಮಲಿನವಾದಂತಿದ್ದ ತನ್ನ ಶರೀರದಿಂದ ಪಿಶಾಚಗ್ರಸ್ತನಂತೆ ಜನರಿಗೆ ಕಾಣುತ್ತಿದ್ದನು. ಯೋಗೈಶ್ವರ್ಯ ಸಂಪನ್ನನಾದ ಋಷಭದೇವನು ಈ ಲೋಕವು ಯೋಗೋಪಾಸನೆಗೆ ಅನುಕೂಲವು, ಪ್ರತಿಕೂಲವೂ ಆಗಿರುವುದೆಂದು ತಿಳಿಯುವವನಾಗಿ ಪ್ರತಿಕೂಲ ಜನರಿಗೆ ಪ್ರತೀಕಾರ ಮಾಡುವುದು ಸಂನ್ಯಾಸಿಗಳಿಗೆ ಯೋಗ್ಯವಲ್ಲವೆಂದು ಬಗೆದು ಆ ಜನರ ವೃತ್ತಿಯನ್ನು ತೋರುತ್ತಿದ್ದಾಗ ಮಲಗಿದಂತೆಯೇ ತಿನ್ನುತ್ತಿದ್ದನು. ಕುಡಿಯುತ್ತಿದ್ದನು. ಭಕ್ಷಿಸುತ್ತಿದ್ದನು.

ಮಲ ವಿಸರ್ಜಿಸುತ್ತಿದ್ದನು. ಮತ್ತು ನಗುತ್ತಿದ್ದನು. ಅಲ್ಲಿಯೇ ಹೊರಳಾಡುತ್ತಿದ್ದನು. ಅವನ ಮೈಭಾಗಗಳು ಮೂತ್ರ ಅಮೇಧ್ಯಗಳಿಂದ ಲಿಪ್ತವಾದವು. ಅವನ ಮಲದ ಸುವಾಸನೆಯಿಂದ ಸುಗಂಧಿತವಾದ ಗಾಳಿಯು ಆ ಸುತ್ತಮುತ್ತ ಹತ್ತು ಯೋಜನ ಪ್ರದೇಶವನ್ನು ಸುವಾಸಿತವನ್ನಾಗಿ ಮಾಡುತ್ತಿತ್ತು. ಹೀಗೆಯೇ ಮತ್ತು ಕೆಲವು ವೇಳೆ ಗೋವಿನಂತೆ ಮೃಗದಂತೆ ನಿಂತಿದ್ದಹಾಗೆಯೇ, ಕುಳಿತುಕೊಂಡೇ, ಮಲಗಿದ್ದಂತೆಯೇ (ಮೂತ್ರವಿಸರ್ಜಿಸುವುದು, ಕುಡಿಯುವುದು, ತಿನ್ನುವುದು ಮತ್ತು ಮಲವಿಸರ್ಜನೆ ಮಾಡುವುದು ಇತ್ಯಾದಿ ಕಾರ್ಯಗಳನ್ನು ಮಾಡುತ್ತಿದ್ದನು. (ಅಪ್ರಾಕೃತನಾದ ಅವನಿಗೆ ಇದು ಲೀಲೆಮಾತ್ರ). ಸರ್ವೈಶ್ವರ್ಯ ಸಂಪನ್ನನೂ, ಮೋಕ್ಷಾಧಿಪತಿಯೂ, ಸರ್ವದಾ ಸ್ವರೂಪಾನಂದಾನುಭವುಳ್ಳವನೂ ಆದ ಋಷಭದೇವನು ಹೀಗೆ ಅನೇಕ ಯೋಗಚರ್ಯೆಗಳನ್ನು ಆಚರಿಸುತ್ತಾ ಇದ್ದನು.

ಸ್ವಾಮಿಯಾದ, ಸರ್ವಾಂತರ್ಯಾಮಿಯೂ, ಸರ್ವಾಧಾರನೂ ಆದ ವಾಸುದೇವ ನಾಮಕ ಶ್ರೀಹರಿಯಲ್ಲಿ, ಸಂತತವೂ ಭೇದಶೂನ್ಯವೂ, ದೋಷರಹಿತವೂ ಆದ ಬ್ರಹ್ಮಾನುಭವದಿಂದ ಆ ಋಷಭದೇವನು ಸಮಸ್ತ ಪುರುಷಾರ್ಥಸಿದ್ಧಿಗಳಿಂದ ಪರಿಪೂರ್ಣನೇ ಆಗಿದ್ದನು. ಆದ್ದರಿಂದಲೇ ಸ್ವೇಚ್ಛೆಯಿಂದ ತಾನಾಗಿಯೇ ಸಿದ್ಧಿಸಿದ, ಆಕಾಶಗಮನ, ಮನೋವೇಗದಿಂದ ಸಶರೀರಸಂಚಾರ, ಅದೃಶ್ಯತೆ, ಪರಕಾಯಪ್ರವೇಶ ಮತ್ತು ಬಹುದೂರದರ್ಶನ ಮೊದಲಾದ ಯೋಗಸಿದ್ಧಿಗಳನ್ನು ಜನತೆಗೆ ತೋರಿಸಲು ಮನಸ್ಸು ಮಾಡಲಿಲ್ಲ. ಅದರಲ್ಲೇ ಆಸಕ್ತರಾಗಬಾರದೆಂದು ಉದ್ದೇಶ.

II ★★★ II

 

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ

# ಷಷ್ಠೋऽಧ್ಯಾಯಃ

**ಈ ಅಧ್ಯಾಯದಲ್ಲಿ...**

ಯೋಗಿಜನರ ಶಿಕ್ಷಣೆಗಾಗಿ ಋಷಭದೇವನ ಮನೆ, ಮೈ, ಮಡದಿಗಳಲ್ಲಿ ಅಭಿಮಾನಪರಿತ್ಯಾಗ ಪ್ರದರ್ಶನ, ಅದಕ್ಕಾಗಿಯೇ ಹುಚ್ಚನಂತೆ ಭೂಮಿಯಲ್ಲಿ ಸಂಚರಿಸುವ ಋಷಭದೇವನು ಕುಟಚಾಚಲದಲ್ಲಿ ಕಾಡುಗಿಚ್ಚಿನಲ್ಲಿ ಪ್ರವೇಶ ಮಾಡುವುದು. ಅಗ್ನಿಯನ್ನು ನಿಮಿತ್ತ ಮಾಡಿ ತನ್ನ ತೇಜಸ್ಸಿನಿಂದಲೇ ಕಾಡನ್ನು ಸುಡುವುದು. ಮತ್ತೆ ಅಗ್ನಿಯಿಂದ ಹೊರಬಂದು ವಾಸುದೇವರೂಪದಿಂದ ಸಜ್ಜನರಿಗೆ ಒಳ್ಳೆಯ ತತ್ತ್ವೋಪದೇಶ ಮಾಡುವುದು. ಋಷಭ ಚರಿತ್ರೆಯಿಂದ ಭ್ರಾಂತರಾದ ಆರ್ಹತ, ಕ್ರಮು ಮುಂತಾದವರು ಲೋಕ ವಂಚನೆಗಾಗಿ ಪಾಷಂಡ ಮತವನ್ನು ಪ್ರವರ್ತಿಸುವುದು ಮತ್ತು ಏಕಾಂತ ಭಕ್ತಿಯೋಗದ ಪ್ರಶಂಸೆ ಇಲ್ಲಿ ಇವೆ.

## ಋಷಭನ ಅವಧೂತ ಚರ್ಯೆ

**ವಿಜಯಧ್ವಜ ಅವತಾರಿಕಾ**

ಶುಭಯೋಗಿಜನ ಶಿಕ್ಷಣ ಅಶುಭಯೋಗಿಜನ ಮೋಹನಕ್ಕಾಗಿಯೂ ಆಕಾಲದಿಂದ ಭೇದಾಭೇದಶಾಸ್ತ್ರದ ಪ್ರವೃತ್ತಿಪ್ರಕಾಶಗಳಾದವು ಎಂದು ಋಷಭದೇವಚರಿತದ ನೆಪದಿಂದ ಈ ಅಧ್ಯಾಯದಲ್ಲಿ ನಿರೂಪಿಸುವರು.

ಯೋಗೈಶ್ವರ್ಯಗಳನ್ನು (ಅಣಿಮಾದಿ ಅಷ್ಟೈಶ್ವರ್ಯಗಳನ್ನು) ತೋರಿಸಲು ಸಂತೋಷಿಸಲಿಲ್ಲ ಎಂದು ಹಿಂದಿನ ಅಧ್ಯಾಯದ ಕೊನೆಗೆ ಹೇಳಿತಷ್ಟೇ. ಆ ವಿಷಯದಲ್ಲಿ ರಾಜನು ಶಂಕಿಸುವನು.

ಮಲ ವಿಸರ್ಜಿಸುತ್ತಿದ್ದನು. ಮತ್ತು ನಗುತ್ತಿದ್ದನು. ಅಲ್ಲಿಯೇ ಹೊರಳಾಡುತ್ತಿದ್ದನು. ಅವನ ಮೈಭಾಗಗಳು ಮೂತ್ರ ಅಮೇಧ್ಯಗಳಿಂದ ಲಿಪ್ತವಾದವು. ಅವನ ಮಲದ ಸುವಾಸನೆಯಿಂದ ಸುಗಂಧಿತವಾದ ಗಾಳಿಯು ಆ ಸುತ್ತಮುತ್ತ ಹತ್ತು ಯೋಜನ ಪ್ರದೇಶವನ್ನು ಸುವಾಸಿತವನ್ನಾಗಿ ಮಾಡುತ್ತಿತ್ತು. ಹೀಗೆಯೇ ಮತ್ತು ಕೆಲವು ವೇಳೆ ಗೋವಿನಂತೆ ಮೃಗದಂತೆ ನಿಂತಿದ್ದಹಾಗೆಯೇ, ಕುಳಿತುಕೊಂಡೇ, ಮಲಗಿದ್ದಂತೆಯೇ (ಮೂತ್ರವಿಸರ್ಜಿಸುವುದು, ಕುಡಿಯುವುದು, ತಿನ್ನುವುದು ಮತ್ತು ಮಲವಿಸರ್ಜನೆ ಮಾಡುವುದು ಇತ್ಯಾದಿ ಕಾರ್ಯಗಳನ್ನು ಮಾಡುತ್ತಿದ್ದನು. (ಅಪ್ರಾಕೃತನಾದ ಅವನಿಗೆ ಇದು ಲೀಲೆಮಾತ್ರ). ಸರ್ವೈಶ್ವರ್ಯ ಸಂಪನ್ನನೂ, ಮೋಕ್ಷಾಧಿಪತಿಯೂ, ಸರ್ವದಾ ಸ್ವರೂಪಾನಂದಾನುಭವುಳ್ಳವನೂ ಆದ ಋಷಭದೇವನು ಹೀಗೆ ಅನೇಕ ಯೋಗಚರ್ಯೆಗಳನ್ನು ಆಚರಿಸುತ್ತಾ ಇದ್ದನು.

ಸ್ವಾಮಿಯಾದ, ಸರ್ವಾಂತರ್ಯಾಮಿಯೂ, ಸರ್ವಾಧಾರನೂ ಆದ ವಾಸುದೇವ ನಾಮಕ ಶ್ರೀಹರಿಯಲ್ಲಿ, ಸಂತತವೂ ಭೇದಶೂನ್ಯವೂ, ದೋಷರಹಿತವೂ ಆದ ಬ್ರಹ್ಮಾನುಭವದಿಂದ ಆ ಋಷಭದೇವನು ಸಮಸ್ತ ಪುರುಷಾರ್ಥಸಿದ್ಧಿಗಳಿಂದ ಪರಿಪೂರ್ಣನೇ ಆಗಿದ್ದನು. ಆದ್ದರಿಂದಲೇ ಸ್ವೇಚ್ಛೆಯಿಂದ ತಾನಾಗಿಯೇ ಸಿದ್ಧಿಸಿದ, ಆಕಾಶಗಮನ, ಮನೋವೇಗದಿಂದ ಸಶರೀರಸಂಚಾರ, ಅದೃಶ್ಯತೆ, ಪರಕಾಯಪ್ರವೇಶ ಮತ್ತು ಬಹುದೂರದರ್ಶನ ಮೊದಲಾದ ಯೋಗಸಿದ್ಧಿಗಳನ್ನು ಜನತೆಗೆ ತೋರಿಸಲು ಮನಸ್ಸು ಮಾಡಲಿಲ್ಲ. ಅದರಲ್ಲೇ ಆಸಕ್ತರಾಗಬಾರದೆಂದು ಉದ್ದೇಶ.

II ★★★ II




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ

## ಷಷ್ಠೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಯೋಗಿಜನರ ಶಿಕ್ಷಣೆಗಾಗಿ ಋಷಭದೇವನ ಮನೆ, ಮೈ, ಮಡದಿಗಳಲ್ಲಿ ಅಭಿಮಾನಪರಿತ್ಯಾಗ ಪ್ರದರ್ಶನ, ಅದಕ್ಕಾಗಿಯೇ ಹುಚ್ಚನಂತೆ ಭೂಮಿಯಲ್ಲಿ ಸಂಚರಿಸುವ ಋಷಭದೇವನು ಕುಟಚಾಚಲದಲ್ಲಿ ಕಾಡುಗಿಚ್ಚಿನಲ್ಲಿ ಪ್ರವೇಶ ಮಾಡುವುದು. ಅಗ್ನಿಯನ್ನು ನಿಮಿತ್ತ ಮಾಡಿ ತನ್ನ ತೇಜಸ್ಸಿನಿಂದಲೇ ಕಾಡನ್ನು ಸುಡುವುದು. ಮತ್ತೆ ಅಗ್ನಿಯಿಂದ ಹೊರಬಂದು ವಾಸುದೇವರೂಪದಿಂದ ಸಜ್ಜನರಿಗೆ ಒಳ್ಳೆಯ ತತ್ತ್ವೋಪದೇಶ ಮಾಡುವುದು. ಋಷಭ ಚರಿತ್ರೆಯಿಂದ ಭ್ರಾಂತರಾದ ಆರ್ಹತ, ಕ್ರಮು ಮುಂತಾದವರು ಲೋಕ ವಂಚನೆಗಾಗಿ ಪಾಷಂಡ ಮತವನ್ನು ಪ್ರವರ್ತಿಸುವುದು ಮತ್ತು ಏಕಾಂತ ಭಕ್ತಿಯೋಗದ ಪ್ರಶಂಸೆ ಇಲ್ಲಿ ಇವೆ.

### ಋಷಭನ ಅವಧೂತ ಚರ್ಯೆ

**ವಿಜಯಧ್ವಜಿ ಅವತಾರಿಕಾ**

ಶುಭಯೋಗಿಜನ ಶಿಕ್ಷಣ ಅಶುಭಯೋಗಿಜನ ಮೋಹನಕ್ಕಾಗಿಯೂ ಆಕಾಲದಿಂದ ಭೇದಾಭೇದಶಾಸ್ತ್ರದ ಪ್ರವೃತ್ತಿಪ್ರಕಾಶಗಳಾದವು ಎಂದು ಋಷಭದೇವಚರಿತದ ನೆಪದಿಂದ ಈ ಅಧ್ಯಾಯದಲ್ಲಿ ನಿರೂಪಿಸುವರು.

ಯೋಗೈಶ್ವರ್ಯಗಳನ್ನು (ಅಣಿಮಾದಿ ಅಷ್ಟೈಶ್ವರ್ಯಗಳನ್ನು) ತೋರಿಸಲು ಸಂತೋಷಿಸಲಿಲ್ಲ ಎಂದು ಹಿಂದಿನ ಅಧ್ಯಾಯದ ಕೊನೆಗೆ ಹೇಳಿತಷ್ಟೇ. ಆ ವಿಷಯದಲ್ಲಿ ರಾಜನು ಶಂಕಿಸುವನು.

**ರಾಜೋವಾಚ -**

**ನ ನೂನಂ ಭಗವನ್ನಾತ್ಮಾರಾಮಾಣಾಂ ಯೋಗಸಮೀರಿತಜ್ಞಾನಾವಭರ್ಜಿತ ಕರ್ಮಬೀಜಾನಾಮೈಶ್ವರ್ಯಾಣಿ ಪುನಃ ಕ್ಲೇಶದಾನಿ ಭವಿತುಮರ್ಹಂತಿ ಯದೃಚ್ಛಯೋಪಗತಾನಿ ॥೧॥**

**ಭಗವನ್** ಪೂಜ್ಯರಾದ ಶುಕಾಚಾರ್ಯರೇ **ಯೋಗಸಮೀರಿತ** ಶ್ರೀಹರಿಯ ಧ್ಯಾನರೂಪೋಪಾಸನೆಯಿಂದ ಉತ್ಪನ್ನವಾದ (ಉದ್ದೀಪಿತವಾದ) **ಜ್ಞಾನಾವಭರ್ಜಿತ ಕರ್ಮಬೀಜಾನಾಂ** ಅಜ್ಞಾನದಿಂದ ಹುರಿಯಲ್ಪಟ್ಟ (ಸುಡಲ್ಪಟ್ಟ) ಕರ್ಮಗಳಿಗೆ ಕಾರಣ ವಾದ ರಾಗಾದಿದೋಷಗಳುಳ್ಳ **ಆತ್ಮಾರಾಮಾಣಾಂ** ಪರಮಾತ್ಮನಲ್ಲಿಯೇ ಆಸಕ್ತರಾದವರಿಗೆ **ಯದೃಚ್ಛಯೋಪಗತಾನಿ** ತಾನು ಇಚ್ಛೆ ಪಡದೇ ಕೇವಲ ಶ್ರೀಹರಿಯ ಇಚ್ಛೆಯಿಂದ ಪ್ರಾಪ್ತಗಳಾದ **ಯೋಗೈಶ್ವರ್ಯಾಣಿ** ಯೋಗಸಿದ್ಧಿಗಳು **ಪುನಃ** ಮತ್ತೆ **ನೂನಂ** ನಿಶ್ಚಯವಾಗಿ **ಕ್ಲೇಶದಾನಿ ಭವಿತುಂ ನಾರ್ಹಂತಿ** ದುಃಖದಾಯಕಗಳಾಗಲು ಯೋಗ್ಯವಾಗಲಾರವು. ಜ್ಞಾನೋತ್ತರದಲ್ಲಿ ವಿಕರ್ಮಮಾಡಲು ಸಾಧ್ಯವಿಲ್ಲ ಕಾರಣ ಸಿದ್ಧಿಗಳನ್ನು ಏಕೆ ಅಭಿನಂದಿಸಲಿಲ್ಲ ಎಂದು ಪರೀಕ್ಷಿದ್ರಾಜನ ಪ್ರಶ್ನೆಯ ಅಭಿಪ್ರಾಯ. ॥೧॥

ಅರ್ಧಾಂಗೀಕಾರದಿಂದ ಪರಿಹರಿಸುವರು

**ಶ್ರೀಶುಕ ಉವಾಚ -**

**ಸತ್ಯಮುಕ್ತಂ ಕಿಂತ್ವಿಹ ವಾ ಏಕೇ ಮನಸೋ ವಿಶ್ರಂಭಮನವಸ್ಥಾನಸ್ಯ ಘಟಕಿರಾಟ ಇವ ನ ಸಂಗಚ್ಛಂತಿ (ಸಂಗಚ್ಛಂತೇ) ॥೨॥**

**ಉಕ್ತಂ ಸತ್ಯಂ** ರಾಜನೇ! ನೀನು ಹೇಳಿದ್ದು ನಿಜ (ಆತ್ಮಾರಾಮರಾದ ಯೋಗಿಗಳಿಗೆ ಐಶ್ವರ್ಯಗಳು ದುಃಖದಾಯಕವಲ್ಲವೆಂದು ಹೇಳಿದ್ದು) **ಕಿಂತು** ಆದರೆ **ಏಕೇ** ಕೆಲವು ಜ್ಞಾನಿಗಳು **ಘಟಕಿರಾಟೇ** ಹೊಸಗಡಿಗೆಯಲ್ಲಿರುವ **ಇಹ** ನೀರಿನಂತೆ ಹೊಸ ವಿಷಯಗಳಲ್ಲಿ **ಮನಸಃ** ಮನಸ್ಸಿಗೆ **ಅನವಸ್ಥಾನಸ್ಯ** ಇಲ್ಲದಿರುವಿಕೆಯಲ್ಲಿ (ಆಸಕ್ತಿಯಾಗಲಾರದೆಂಬ) **ವಿಶ್ರಂಭಂ** ವಿಶ್ವಾಸವನ್ನು **ನ ಸಂಗಚ್ಛಂತಿ** ಚೆನ್ನಾಗಿ ಹೊಂದಲಾರರು. ಕಾರಣ ಯೋಗೈಶ್ವರ್ಯ ಪ್ರದರ್ಶನ ಮಾಡಿದರೆ ವಿಷಯಾಸಕ್ತಿಯಿಂದ ವಿಕರ್ಮ ಸಂಭವಿಸಬಹುದೆಂದು ಋಷಭದೇವನು ಸಿದ್ಧಿಗಳನ್ನು ತೋರಿಸಲು ಮನಸ್ಸು ಮಾಡಲಿಲ್ಲವೆಂದು ಭಾವ. ॥೨॥

**ತಥಾ ಚೋಕ್ತಂ**

ಜ್ಞಾನಿಗಳ ಮನಸ್ಸು ವಿಷಯಾಸಕ್ತವಾಗುವುದಿಲ್ಲ ಎಂಬ ವಿಷಯದಲ್ಲಿ ವಿಶ್ವಾಸವಿಲ್ಲ ಎಂಬುವುದಕ್ಕೆ ಪೂರ್ವಾಚಾರ್ಯರ ಸಮ್ಮತಿ ಇದೆ ಎಂದರ್ಥ.

**ನ ಕುರ್ಯಾತ್ಕಸ್ಯಚಿತ್ ಸಖ್ಯಂ ಮನಸಿ ಹ್ಯನವಸ್ಥಿತೇ ।**
**ಯದ್ವಿಸ್ರಂಭಾಚ್ಚಿರಾಚ್ಚೀರ್ಣಂ ಚಸ್ಕಂದ ತಪ ಐಶ್ವರಮ್ ॥೩॥**

**ಅನವಸ್ಥಿತೇ** ಚಂಚಲವಾದ **ಮನಸಿ** ಮನಸ್ಸಿನಲ್ಲಿ **ಕಸ್ಯಚಿತ್** ಯಾವುದೇ ಒಂದು ವಿಷಯದಲ್ಲಿ **ಸಖ್ಯಂ** ವಿಶ್ವಾಸವನ್ನು **ನ ಕುರ್ಯಾತ್** ಮಾಡಬಾರದು. **ಯದ್ವಿಸ್ರಂಭಾತ್** ಯಾವ ಮನಸ್ಸಿನ ಮೇಲಿನ ವಿಶ್ವಾಸದಿಂದ **ಚಿರಾತ್ ಚೀರ್ಣಂ** ಬಹುಕಾಲದಿಂದ ಸಂಪಾದಿಸಿದ **ಐಶ್ವರ್ಯಂ** ಯೋಗೇಶ್ವರರಾದ ಸೌಭರಿ ಮುಂತಾದವರ ಸಂಪತ್ತಾದ **ತಪಃ** ತಪಸ್ಸು **ಚಸ್ಕಂದ** ನಷ್ಟವಾಯಿತು. ॥೩॥

**ನಿತ್ಯಂ ದದಾತಿ ಕಾಮಸ್ಯ ಛಿದ್ರಂ ತಮನು ಯೇಽರಯಃ ।**
**ಯೋಗಿನಃ ಕೃತಮೈತ್ರಸ್ಯ ಪತ್ಯುರ್ಜಾಯೇವ ಪುಂಶ್ಚಲೀ ॥೪॥**

**ಕೃತಮೈತ್ರಸ್ಯ ಯೋಗಿನಃ** ವಿಶ್ವಾಸ ಮಾಡಿದ ಯೋಗಿಯ (**ಮನಃ**) ಮನಸ್ಸು **ಕಾಮಸ್ಯ** ಕಾಮಕ್ಕೂ **ತಮನು** ಅದರ ಹಿಂದೆಯೇ **ಯೇ ಅರಯಃ** ಯಾವ ಕ್ರೋಧಾದಿ ಶತೃಗಳುಂಟೋ **ತೇಷಾಂ** ಅವುಗಳಿಗೂ **ನಿತ್ಯಂ** ಯಾವಾಗಲೂ **ಛಿದ್ರಂ** ಪ್ರವೇಶಾವಕಾಶವನ್ನು **ಕೃತಮೈತ್ರಸ್ಯ** ವಿಶ್ವಾಸ ಮಾಡಿದ **ಪತ್ಯುಃ** ಗಂಡನಿಗೆ **ಪುಂಶ್ಚಲೀ** ಗಂಡನನ್ನು ಬಿಟ್ಟು ಪರಪುರುಷನನ್ನು ಕುರಿತು ಚಲಿಸುವ **ಜಾಯಾ ಇವ** ಹೆಂಡತಿಯು ಗಂಡನಿಗೆ ಶತೃಗಳಾದ ಜಾರರಿಗೆ ಅವಕಾಶ ಕೊಟ್ಟು ಅವರಿಂದ ಪತಿಯನ್ನು ಕೊಲ್ಲಿಸುವಳೋ ಹಾಗೆ **ದದಾತಿ** ಕೊಡುವುದು. ಅವಕಾಶ ಕೊಟ್ಟು ಆ ಕಾಮಕ್ರೋಧಾದಿಗಳಿಂದ ಯೋಗಿಯನ್ನು ಯೋಗಭ್ರಷ್ಟನನ್ನಾಗಿಸುವುದು. ॥೪॥

ಹಿಂದಿನ ಶ್ಲೋಕದಲ್ಲಿ ಹೇಳಿದ ಶತೃಗಳನ್ನು ತಿಳಿಸುವರು

**ಕಾಮೋ ಮನ್ಯುರ್ಮದೋ ಲೋಭಃ ಶೋಕಮೋಹಭಯಾದಯಃ ।**
**ಕರ್ಮಬಂಧಶ್ಚ ಯನ್ಮೂಲಃ ಸ್ವೀಕುರ್ಯಾತ್ ಕೋಽನು ತದ್ಬುಧಃ ॥೫॥**

**ಕಾಮಃ** ವಿಷಯಾಭಿಲಾಷೆಯು **ಮನ್ಯುಃ** ಕೋಪವು **ಮದಃ** ಅಹಂಕಾರವು **ಲೋಭಃ** ಯೋಗ್ಯರು (ಪಾತ್ರರು) ಬಂದಾಗ ಹಣ ಕೊಡಲಿಚ್ಛಿಸದಿರುವುದು **ಶೋಕಃ**

ಹಿಂದಿನ ದುಃಖವನ್ನು ಸ್ಮರಿಸಿದಾಗ ಆಗುವ ಮನಸ್ಸಿನ ಕ್ಷೋಭೆಯು **ಮೋಹಃ** ವಿಪರೀತಜ್ಞಾನವು **ಭಯಾದಯಃ** ಹೆದರಿಕೆ (ಹಿಂದಿನ ಸ್ಥಿತಿಯಿಂದ ಚಲಿಸುವುದು) ಮುಂತಾದವು **ಕರ್ಮಬಂಧಶ್ಚ** ಕರ್ಮಗಳ ಫಲವಾಗಿ ಬಂದ ಸಂಸಾರ ಬಂಧವೂ **ಯನ್ಮೂಲಃ** ಯಾವ ಮನಸ್ಸಿನಿಂದ ಬಂದಿರುವವೋ (ಬರುವವೋ) **ತತ್** ಆ ಮನಸ್ಸನ್ನು ಅಧೀನವೆಂದು **ಕೋऽನು** ಯಾವನು ತಾನೆ **ಸ್ವೀಕುರ್ಯಾತ್** ವಿಶ್ವಾಸ ಮಾಡಿಯಾನು? ಯಾವನು ಮಾಡಲಾರನೆಂದು ಭಾವ. ।।೫।।

## ವಿಕರ್ಮ ಯಾರದ್ದು?

ಹಿಂದಿನ ಅಧ್ಯಾಯದ ಕೊನೆಗೆ '**ನಾಭ್ಯನಂದತ್**' ಎಂದು ಋಷಭನಾಮಕ ಪರಮಾತ್ಮನು ವಿಕರ್ಮಗಳನ್ನು ಮಾಡಬಹುದೆಂಬ ಶಂಕೆಯಿಂದ ಯೋಗೈಶ್ವರ್ಯಗಳನ್ನು ತೋರಿಸಲಿಲ್ಲ ಎಂದು ಹೇಳಿದಾಗ ರಾಜನು ಜ್ಞಾನಿಗಳು ವಿಕರ್ಮ ಮಾಡುವುದು ಅಸಂಭಾವಿತವಲ್ಲ ಎಂದು ಪ್ರಶ್ನಿಸಿದಾಗ, ಜ್ಞಾನಿಗಳಿಗೂ ವಿಕರ್ಮ ಮಾಡುವುದು ಸಂಭಾವಿತ ಎಂದು ಶುಕಾಚಾರ್ಯರು ಉಪಪಾದಿಸಿದರು. ಇಲ್ಲಿ ಕೆಳಗಿನ ಶಂಕೆಗಳಿಗೆ ಅವಕಾಶವಿದೆ. ಇದೆಲ್ಲವೂ ಯಾರನ್ನು ಕುರಿತು ಹೇಳಿದ್ದು?

೧. ಋಷಭನಾಮಕ ಪರಮಾತ್ಮನಿಗೋ ಅಥವಾ ೨. ಇತರ ಜ್ಞಾನಿಗಳಿಗೋ?

### 1. ಋಷಭನಿಗೆ ವಿಕರ್ಮ ಪ್ರಸಕ್ತಿ ಯಿಲ್ಲ

ಋಷಭನು ಸಾಕ್ಷಾತ್ ಭಗವಂತನ ಅವತಾರ. ಕಾರಣ ಅವನಿಗೆ ವಿಕರ್ಮ ಪ್ರಸಕ್ತಿಯ ಶಂಕೆಯೇ ಇಲ್ಲ.

### 2. ಇತರ ಜ್ಞಾನಿಗಳಿಗೆ

ಇತರ ಜ್ಞಾನಿಗಳಿಗೆ ವಿಕರ್ಮ ಸಂಭಾವಿತವೆಂದು ಉಪಪಾದಿಸಿದ್ದು ವ್ಯರ್ಥ್ಯ. ಅವರು ವಿಕರ್ಮ ಮಾಡಿದರೂ ಅದರ ಲೇಪ ಅವರಿಗೆ ಇಲ್ಲವೆಂದು ಹೇಳುವ ವಚನಗಳುಂಟು.

ಈ ಎರಡು ಶಂಕೆಗಳ ನಿರಾಕರಣೆಗಾಗಿ ಈ ಪ್ರಕರಣದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು




ತಾತ್ಪರ್ಯ

''ಮಹೈಶ್ವರ್ಯಸ್ವರೂಪೋ ಹಿ ಭಗವಾನ್ನೃಷಭೋ ಸ್ವರಾಟ್ ।
ನೈಶ್ವರ್ಯಾಣಿ ಸ್ವಕೀಯಾನಿ ಖ್ಯಾಪಯಾಮಾಸ ಸರ್ವವಿತ್ ॥
ಉತ್ತಮಾನಾಂ ಜ್ಞಾಪನಾರ್ಥಂ ಧರ್ಮತತ್ತ್ವಸ್ಯ ಕೇಶವಃ ।
ತೇಷಾಮೈಶ್ವರ್ಯಭೋಗೇ ಹಿ ಮನಃ ಸಕ್ತಂ ವ್ರಜೇದ್ಯದಿ ॥
ಆನಂದೋ ಮುಕ್ತಿಗೋ ಹ್ರಾಸಂ ವಿಕರ್ಮಕರಣಾದ್ವ್ರಜೇತ್ ॥
ಧರ್ಮಾಧರ್ಮವಿಹೀನೋಽಪಿ ಭಗವಾನೃಷಭಸ್ತತಃ ।
ತೇಷಾಂ ಧರ್ಮಸ್ಥಾಪನಾರ್ಥಂ ನಾವಿಶ್ಚಕ್ರೇ ಪರಾಂ ಸ್ಥಿತಿಮ್ ॥
ದೇವಾನಾಂ ನಾಶುಭಾದ್ಧ್ರಾಸಃ ಶುಭಾತ್ ಕಾಚಿತ್ ಸುಖೋನ್ನತಿಃ ।
ಆಕಾರಿಕಜೀವಾನಾಮೇವಮನ್ಯೇಷು ತದ್ದ್ವಯಮ್ ॥
ಅಲ್ಪಾಧಿಕಾರಿಣಾಂ ತತ್ರ ಹ್ರಾಸೋಽಪಿ ಭವತಿ ಧ್ರುವಮ್ ।
ಅಶುಭೇ ಕೃತೇ ನ ಭವತಿ ತಾರತಮ್ಯಾಚ್ಚ ಸ ಸ್ಮೃತಃ ॥
ಪ್ರಜಾಪಾಶ್ಚ ತಥಾ ದೇವಾ ಮಹಾಧೀಕಾರಿಣಃ ಸ್ಮೃತಾಃ ।
ಋಷ್ಯಶೀತಿಸ್ತಥಾ ಸಪ್ತ ಪಿತರೋಽಪ್ಸರಸಾಂ ಶತಮ್ ॥
ಗಂಧರ್ವಾಣಾಂ ತಥಾ ರಾಜ್ಞಾಂ ಏಂಶದನ್ಯಾಸು ಜಾತಿಷು ।
ಅಲ್ಪಾಧಿಕಾರಿಣಃ ಪ್ರೋಕ್ತಾ ಅನಧೀಕಾರಿಣಃ ಪರೇ ॥'' ಇತಿ ಬ್ರಹ್ಮಾಂಡೇ ॥೫॥

ಋಷಭರೂಪಿ ಪರಮಾತ್ಮನು ಮಹೈಶ್ವರ್ಯ ಸ್ವರೂಪನೇ ಆದರೂ ತನ್ನ ಸ್ವಾಭಾವಿಕ ಐಶ್ವೈರ್ಯಗಳನ್ನು ಪ್ರಸಿದ್ಧ ಮಾಡಲಿಲ್ಲ. ಇದು ಏಕೆ ಅಂದರೆ ಉತ್ತಮರಾದ ಜ್ಞಾನಿಗಳು ತಮ್ಮಲ್ಲಿ ಯೋಗೈಶ್ವರ್ಯವಿದ್ದರೂ ಅದನ್ನು ತೋರಿಸಬಾರದು ಎಂಬ ಧರ್ಮದ ಮರ್ಮವನ್ನು ಜೀವರಿಗೆ ತಿಳಿಸಿಕೊಡುವುದಕ್ಕಾಗಿ. ತಮ್ಮಲ್ಲಿದ್ದ ಐಶ್ವೈರ್ಯ ಭೋಗವನ್ನು ಜನರಿಗೆ ತೋರಿಸಿದರೆ ಜ್ಞಾನಿಗಳ ಮನಸ್ಸು ದುರ್ವಿಷಯಗಳಲ್ಲಿ ಆಸಕ್ತವಾಗುವುದು. ಆಗ ವಿರುದ್ಧ ಕರ್ಮಗಳು ಪ್ರಸಕ್ತವಾಗುವುವು. ಜ್ಞಾನಿಗಳು ವಿರುದ್ಧ ಕರ್ಮಗಳನ್ನು ಮಾಡಿದರೆ ಮುಕ್ತಿಯಲ್ಲಿ ಆನಂದ ಹ್ರಾಸವಾಗುವುದು (ಜ್ಞಾನಿಗಳಿಗೆ ವಿಕರ್ಮಲೇಪವಿಲ್ಲ ಎಂದು ಹೇಳುವ ವಚನಗಳಿಗೆ ಅಶುಚಿತ್ವ ಅಸಂಭಾಷ್ಯತ್ವವಿಲ್ಲವೆಂದರ್ಥವೇ ಹೊರತು ಯಾವ ಲೇಪವೂ ಇಲ್ಲವೆಂದಲ್ಲ. ಮುಕ್ತಿಯಲ್ಲಿ ಆನಂದಹ್ರಾಸರೂಪ ಲೇಪ ಉಂಟು ಎಂದು ಭಾವ). ಈ ಕಾರಣದಿಂದ ಋಷಭರೂಪಿ ಪರಮಾತ್ಮನು ಧರ್ಮಾಧರ್ಮಗಳಿಲ್ಲದವನಾದರೂ ಜ್ಞಾನಿಗಳಿಗೆ ವಿಕರ್ಮ ಮಾಡಿದರೆ ಅನರ್ಥವಾಗುವುದರಿಂದ ಜ್ಞಾನಿಗಳು ಧರ್ಮವನ್ನು

ಮಾಡಬೇಕು ವಿಕರ್ಮಗಳನ್ನು ಮಾಡಬಾರದು ಎಂಬ ಧರ್ಮತತ್ತ್ವವನ್ನು ಜನರಿಗೆ ತಿಳಿಸುವುದಕ್ಕಾಗಿ ತಾನು ಧರ್ಮಗಳನ್ನು ಆಚರಿಸುತ್ತ ತನ್ನಲ್ಲಿದ್ದ ಐಶ್ವರ್ಯವನ್ನು ತೋರಿಸಲಿಲ್ಲ.

ದೇವತೆಗಳು ವಿಕರ್ಮಗಳನ್ನು ಮಾಡಿದರೂ ಮುಕ್ತಿಯಲ್ಲಿ ಕ್ಲೃಪ್ತವಾದ ಆನಂದಕ್ಕೆ ಹ್ರಾಸವಿಲ್ಲ. ದೇವತೆಗಳಿಗೆ ಶುಭಕಾರ್ಯಗಳಿಂದ ಕ್ಲೃಪ್ತವಾದ ಆನಂದಕ್ಕೆ ಆಧಿಕ್ಯವೆಂಬ ಸುಖೋನ್ನತಿ ಇಲ್ಲ ಎಂದು ಇತರರು (ದೀಪಿಕಾ ಛಲಾರಿಕಾರರು). (ಆದರೆ ಶುಭಕಾರ್ಯ ವ್ಯರ್ಥವಲ್ಲ ಆದರಿಂದ ಕ್ಲೃಪ್ತವಾದ ಎಲ್ಲ ಸುಖದ ಅಭಿವ್ಯಕ್ತಿ ಎಂಬ ಸುಖೋನ್ನತಿಯುಂಟು ಎಂದು ಯಾದವಾರ್ಯರು).

ಅಧಿಕಾರದಲ್ಲಿರತಕ್ಕ ಜೀವರಿಗೆ ಹಿಂದೆ ಹೇಳಿದ ಪ್ರಕಾರ ಶುಭಕರ್ಮದಿಂದ ಕ್ಲೃಪ್ತಕ್ಕೆ ವೃದ್ಧಿಯೂ ಇಲ್ಲ ಅಶುಭ ಕರ್ಮದಿಂದ ಹ್ರಾಸವೂ ಇಲ್ಲ. ಅಧಿಕಾರದಲ್ಲಿದ್ದ ಜೀವರಿಂದ ಭಿನ್ನರಾದ ಜೀವರಲ್ಲಿ ಕ್ಲೃಪ್ತ ಸುಖಕ್ಕೆ ಹ್ರಾಸವೂ ಕ್ಲೃಪ್ತ ಸುಖಕ್ಕೆ ಉನ್ನತಿಯೂ ಹೀಗೆ ಎರಡೂ ಇರುತ್ತವೆ. ಅಂದರೆ ಅಶುಭರಿಂದ ಕ್ಲೃಪ್ತ ಸುಖಕ್ಕೆ ಹ್ರಾಸ, ಶುಭಕಾರ್ಯದಿಂದ ತನ್ನ ಸಮಾನರಿಗಿಂತ ಅಧಿಕವಾಗಿ ಕ್ಲೃಪ್ತ ಸುಖಾವಿರ್ಭಾವ, ಎರಡೂ ಇವೆ ಎಂದರ್ಥ (ಅಪರೋಕ್ಷಜ್ಞಾನಾನಂತರ ಶುಭಕರ್ಮ ಮಾಡದಿರುವ ಸಮಾನರಿಗಿಂತ ಎಂದರ್ಥ).

ಆಧಿಕಾರಿಕಜೀವರಲ್ಲಿಯೇ ಅಲ್ಪಾಧಿಕಾರಿಗಳು ಅಶುಭವನ್ನು ಮಾಡಿದರೆ ಅದರಿಂದ ಕ್ಲೃಪ್ತಸುಖಕ್ಕೆ ಹ್ರಾಸವು, ಶುಭಕರ್ಮದಿಂದ ಕ್ಲೃಪ್ತ ಸುಖಕ್ಕೆ ಅಭಿವೃದ್ಧಿ ಅಂದರೆ ಸಮಾನರಿಗಿಂತ ಅಧಿಕವಾಗಿ ಅಭಿವ್ಯಕ್ತಿಯೂ ಆಗುವುದು.

ಮಹಾಧಿಕಾರಿಗಳಿಗೂ ಅಶುಭಮಾಡದಿರುವುದರಿಂದ ಉಂಟಾಗುವ ಉನ್ನತಿಯೇನಿದೆಯೋ ಅದು ಅಶುಭವನ್ನು ಮಾಡಿದರೆ ಆಗುವುದಿಲ್ಲ. (ಅಶುಭ ಮಾಡದಿರುವಾಗ ಸಮುದ್ರದಲ್ಲಿ ತೆರೆಗಳಂತೆ ಆನಂದ ಉಕ್ಕುವುದು. ಅದು ಅಶುಭ ಮಾಡಿದರೆ ತೋರುವುದಿಲ್ಲ).

೧. ಅಲ್ಪಾಧಿಕಾರಿಗಳಲ್ಲಿ ಶುಭಕರ್ಮದಿಂದ ಸಮಾನರಿಗಿಂತ ಅಧಿಕ ಸುಖಾಭಿವ್ಯಕ್ತಿಯಾಗುವುದು. ಉದಾಹರಣ ಹರಿಶ್ಚಂದ್ರನು ರಾಜಸೂಯಯಾಗ ಮಾಡಿದ್ದರಿಂದ ವೃದ್ಧಿಯಾದದ್ದು. ''**ಅತಸ್ತ್ರಿಶಂಕುಪುತ್ರಕೋ ನೃಪಾನತೀತ್ಯ ವರ್ತತೇ**'' ಎಂದು ಹೇಳಿದೆ (ಮಹಾಭಾರತ ತಾತ್ಪರ್ಯ ನಿರ್ಣಯ).




೨. ಮಹಾಧಿಕಾರಿಗಳಿಗೆ ಅಶುಭದಿಂದ ಉನ್ನಾಹವಿಲ್ಲ ಎನ್ನಲು ಅರ್ಜುನ ದೃಷ್ಟಾಂತ. ಅರ್ಜುನಾದಿಗಳಿಗೆ ಅತಿಯಾದ ಅಭಿಮಾನದಿಂದ ಮುಕ್ತಿಯಲ್ಲಿ ಉನ್ನಾಹವಿಲ್ಲ. " **ಕದಾಚಿದತಿಮಾನೋಽಪಿ ತ್ರಯಾಣಾಮೇಷು ಜಾಯತೇ । ತಥಾಪಿ ತತ್ಫಲಂ ನೈತತ್ ತಾರತಾಮ್ಯಂ ವಿಮುಕ್ತಿಗಂ**" ಎಂದು ನಿರ್ಣಯದಲ್ಲಿ ಹೇಳಿದ್ದರಿಂದ ಅಶುಭ ಮಾಡಿದ್ದರಿಂದಾಗುವ ಉನ್ನಾಹಾಭಾವ ತಾರತಮ್ಯಾನುಸಾರವಾಗಿ ಆಗುವುದು.

## ಪ್ರಕರಣದ ಸಾರಾಂಶ

೧. ಮಹಾಧಿಕಾರಿಗಳು ೨ ಅಲ್ಪಾಧಿಕಾರಿಗಳು ೩. ಅನಧಿಕಾರಿಗಳು ಹೀಗೆ ಮೂರು ರೀತಿ ಇರುವರು. ಅದರಲ್ಲಿ ಮರೀಚಿ ಮುಂತಾದ ಋಷಿಗಳೂ ದೇವತೆಗಳೂ ಮಹಾಧಿಕಾರಿಗಳು. ಎಂಭತ್ತು ಋಷಿಗಳು, ಏಳು ಪಿತೃಗಳು, ನೂರು ಮಂದಿ ಅಪ್ಸರ ಸ್ತ್ರೀಯರೂ, ನೂರು ಜನ ಗಂಧರ್ವರೂ, ನೂರು ರಾಜರೂ, ಸಿದ್ಧಚಾರಣರಲ್ಲಿ ಇಪ್ಪತ್ತು ಜನ ಇವರು ಅಲ್ಪಾಧಿಕಾರಿಗಳು ಇವರಿಂದ ಭಿನ್ನರು ಅನಧಿ ಕಾರಿಗಳು ಎಂದು ಭಾವ.

ಅಂತೂ ಜ್ಞಾನಿಗಳಿಗೆ ಕಲಿಸಲು ಋಷಭನು ಐಶ್ವರ್ಯ ತೋರಿಸಲಿಲ್ಲ ಎಂದಾಗ ಅವರಿಗೆ ವಿಕರ್ಮ ಪ್ರಸಕ್ತಿಯೇ ಇಲ್ಲ. ಅವರಿಗೆ ಕಲಿಸುವುದೇನು? ಎಂದು ಪ್ರಶ್ನಿಸಿದಾಗ ಜ್ಞಾನಿಗಳಿಗೂ ವಿಕರ್ಮ ಮಾಡುವುದರಿಂದ ಅನಿಷ್ಟ ಉಂಟು, ಕಾರಣ ಅವರಿಗೆ ಕಲಿಸುವುದು ಆವಶ್ಯಕ ಎಂದು ಶುಕಾಚಾರ್ಯರ ಪರಿಹಾರವೆಂದು ಪ್ರಕರಣದ ಸಾರಾಂಶ. ।।೫।।

ಪ್ರಾಸಂಗಿಕವನ್ನು ಹೇಳಿ ಪ್ರಕೃತವನ್ನು ಹೇಳುವರು

**ಅಥೈವಮಖಿಲಲೋಕಪಾಲಲಲಾಮೋ ವಿಲಕ್ಷಣೋ ಜಡವತ್ ಅವಧೂತ-ವೇಷಭಾಷಾಚರಿತ್ರೈರವಿಲಕ್ಷಿತಭಗವತ್ಪ್ರಭಾವೋ ಯೋಗಿನಾಂ ಸಾಂಪರಾಯವಿಧಿ ಮನುಶಿಕ್ಷಯನ್ ಸ್ವಕಲೇವರಂ ಜಿಹಾಸುರಾತ್ಮನ್ಯಾತ್ಮಾನಮಸಂವ್ಯವಹಿತ-ಮನರ್ಥಾಂತರಭಾವೇನಾನ್ವೀಕ್ಷಮಾಣ ಉಪರತಾನುವೃತ್ತಿರುಪರರಾಮ ।।೬।।**

**ಅಥ** ಸಂನ್ಯಾಸಿಯಾದ ನಂತರ **ಅಖಿಲಲೋಕಪಾಲಲಲಾಮಃ** ಎಲ್ಲ ಲೋಕಪಾಲರಿಗೆ ಅಲಂಕಾರನಾದ (ಶ್ರೇಷ್ಠನಾದ) ಆದ್ದರಿಂದ **ವಿಲಕ್ಷಣಃ**

ಜಗದ್ವಿಲಕ್ಷಣನಾದ (ಭಿನ್ನನಾದ) **ಜಡವತ್** ಜಡದಂತೆ **ಅವಧೂತವೇಷಭಾಷಾಚರಿತ್ರೈಃ** ಅವಧೂತರ ವೇಷ - ಭಾಷೆ - ಆಚರಣೆಗಳಿಂದ **ಅವಿಲಕ್ಷಿತಭಗವತ್ಸ್ವಭಾವಃ** ತಾನು ಭಗವಂತನೆಂದು ತಿಳಿಸದಿರುವ ಋಷಭದೇವನು **ಏವಂ** ಈ ರೀತಿ **ಯೋಗಿನಾಂ** ಸಂನ್ಯಾಸಿಗಳ **ಸಾಂಪರಾಯವಿಧಿಂ** ಮೋಕ್ಷಸಾಧನ ಪ್ರಕಾರವನ್ನು **ಅನುಶಿಕ್ಷಯನ್** ಮಾಡಿ ತೋರಿಸುವ ಮೂಲಕ ಕಲಿಸುತ್ತಾ **ಸ್ವಕಲೇವರಂ** ತನ್ನ ಶರೀರವೆನಿಸಿದ ಭೂಮಿಯನ್ನು **ಜಿಹಾಸುಃ** ಬಿಡಲಿಚ್ಛಿಸಿ **ಆತ್ಮನಿ** ಪರಬ್ರಹ್ಮನಲ್ಲಿ **ಆತ್ಮಾನಂ** ತನ್ನ ಸ್ವರೂಪವನ್ನು **ಅನರ್ಥಾಂತರಭಾವೇನ** ಭಿನ್ನವಲ್ಲ ಎಂಬ ಭಾವನೆಯಿಂದ (ಅಭೇದ ಬುದ್ಧಿಯಿಂದ) **ಅಸಂವ್ಯವಹಿತಂ** ನಿರಂತರವಾಗಿ **ಅನ್ವೀಕ್ಷಮಾಣಃ** ತಿಳಿಯುವವನಾಗಿ **ಉಪರರಾಮ** ಸಮೀಪವಿರುವ ಮೂಲರೂಪಸ್ಮರಣ ಮಾಡಿದನು ಎಂದು ಭಾವ. ಇದರಿಂದ ಯೋಗಿಗಳು ಅವತಾರಗಳಿಗೆ ಮೂಲರೂಪದಿಂದ ಐಕ್ಯ ಚಿಂತನೆಯನ್ನು ಮಾಡಬೇಕೆಂದು ತಿಳಿಸಿದಂತಾಯಿತು.

## ಋಷಭನಿಗೆ ದೇಹತ್ಯಾಗವಾಯಿತೇ?

ಮೇಲಿನ ಗದ್ಯದಲ್ಲಿ **ಕಲೇವರಂ ಜಿಹಾಸುಃ** ಎಂದು ಋಷಭನಿಗೆ ದೇಹತ್ಯಾಗ ತಿಳಿದು ಬರುವುದು. ಅದು ಸರಿಯಲ್ಲ. ಅಭಿನ್ನವಾದ ಜ್ಞಾನಾನಂದಾತ್ಮಕ ದೇಹತ್ಯಾಗ ಅಸಂಭಾವಿತ ಕಾರಣ ಕಲೇವರ ಶಬ್ದಾರ್ಥ ಹೇಳುವರು. ಮತ್ತು **ಅನರ್ಥಾಂತರಭಾವೇನ** ಎಂಬುದಕ್ಕೆ **ಅನ್ಯದನರ್ಥಂ ಅನರ್ಥಾಂತರಂ ತಸ್ಯ ಭಾವಃ** ಎಂದು ವಿಗ್ರಹಮಾಡಿ ಅರ್ಥಾಂತರವೆಂದರೆ ಇನ್ನೊಂದು ಅನರ್ಥ ಅರ್ಥಾತ್ ಅನರ್ಥಾಂತರ. ಅದರ ಭಾವ **ಅನಿಷ್ಟಾಂತರತ್ವ** ಎಂದು ಅಪಾರ್ಥವಾಗುವುದು. ಅಥವಾ **ಅರ್ಥಾದನ್ಯೋ ಅರ್ಥಾಂತರಂ ನ ಅರ್ಥಾಂತರಂ** ಹೀಗೆ ವಿಗ್ರಹಮಾಡಿ ಪೃಥಿವ್ಯಾದಿಪದಾರ್ಥಗಳಿಂದ ಅಭೇದವನ್ನು ತಿಳಿಯುವನಾಗಿ ಹೀಗೂ ಅರ್ಥ ತೋರುವುದು. ಕಾರಣ ಪ್ರಮಾಣದಿಂದ ವ್ಯಾಖ್ಯಾನಿಸುವರು

ತಾತ್ಪರ್ಯ - ''ವಿಷ್ಣೋಃ ಕಲೇವರತ್ಯಾಗೋ ಭೂತ್ಯಾಗೋಽನ್ಯೋ ನ ವಿದ್ಯತೇ ।
ಕಲೇವರತ್ಯಾಗೋಽನ್ಯೇಷಾಂ ಪಂಚತ್ವಂ ಸಮುದೀರಿತಮ್ ॥ ಇತಿ ಕೌರ್ಮೇ
''ಅನರ್ಥಾಂತರಭಾವೇನ ಅರ್ಥಾಂತರಂ ನಾಸ್ಮೀತಿ ಮನಸಾ'' ॥

ಶ್ರೀಪರಮಾತ್ಮನ ಅವತಾರಗಳಿಗೆ ಶರೀರತ್ಯಾಗವೆಂದರೆ ಭೂತ್ಯಾಗವೇ (**ತಸ್ಯ ಪೃಥಿವೀ ಶರೀರಂ** ಎಂದು ಭೂಮಿಗೆ ಶರೀರತ್ವ ಹೇಳಿದೆಯಷ್ಟೇ). ಶ್ರೀವಿಷ್ಣು ರಮಾ

ವ್ಯತಿರಿಕ್ತರಾದ ಜೀವರಿಗೆ ಶರೀರತ್ಯಾಗವೆಂದರೆ ಮರಣವೇ (ಪ್ರಾಕೃತ ದೇಹತ್ಯಾಗ) ಎಂದು ಕೂರ್ಮ ಪುರಾಣದಲ್ಲಿ ಹೇಳಿದೆ. **ಅನರ್ಥಾಂತರಭಾವೇನ** ಎಂಬುದಕ್ಕೆ ಮೂಲರೂಪದಿಂದ ನಾನು ಬೇರೆಯಲ್ಲ ಎಂಬ ಬುದ್ಧಿಯಿಂದ ಎಂದರ್ಥ ಹೊರತು ಪೃಥಿವ್ಯಾದಿಗಳಿಂದ ಅಭಿನ್ನ ಎಂದಾಗಲಿ ಅನಿಷ್ಟಾಂತರತ್ವ ಎಂದಾಗಲೀ ಅರ್ಥವಲ್ಲ. ||೬||

ಈಗ ದೇಶಾಂತರಕ್ಕೆ ಹೋಗುವ ರೀತಿಯನ್ನು ತಿಳಿಸುವರು

**ತಸ್ಯ ಹ ವಾ ಏವಂ ಮುಕ್ತಲಿಂಗಸ್ಯ ಭಗವತ ಋಷಭಸ್ಯ ಯೋಗಮಾಯಾವಸಾನೋ ದೇಹ ಇಮಾಂ ಜಗತೀಮಭಿಮಾನಾಭಾಸೇನ ಚಂಕ್ರಮಮಾಣಃ ||೭||**

**ಏಕದಾತು ಕಾಂಕಟಕರ್ಣಾಟಕಾದ್ದಕ್ಷಿಣಕರ್ಣಾಟಕಾನ್ ದೇಶಾನ್ ಯದೃಚ್ಛಯೋಪಗತಃ ಕುಟಚಾಚಲೋಪವನೇ ಆಸ್ಯ ಕೃತಾಶ್ಮಕವಲ ಉನ್ಮಾದ ಇವ ಮುಕ್ತಮೂರ್ಧಜೋಽಸಂವೀತ ಏವ ವಿಚಚಾರ ||೮||**

ತಾತ್ಪರ್ಯ - "ಅಭಿಮಾನಾಭಾಸೇನ ಅಭಿತೋ ಜ್ಞಾನಪ್ರಕಾಶೇನ" ||೭||

**ಏಕದಾ** ಒಂದು ಸಲ **ಏವಂ** ಮೇಲೆ ಹೇಳಿದಂತೆ **ಮುಕ್ತಲಿಂಗಸ್ಯ** ವರ್ಣಾಶ್ರಮಗಳ ಚಿನ್ಹೆಗಳಿಲ್ಲದ ಅಥವಾ ಲಿಂಗದೇಹ ಮೊದಲಾದ ಪ್ರಾಕೃತ ಭೌತಿಕ ದೇಹಗಳಿಲ್ಲದ **ಭಗವತಃ ತಸ್ಯ ಋಷಭಸ್ಯ** ಐಶ್ವರ್ಯಶಾಲಿಯಾದ ಆ ಋಷಭ ದೇವನ **ಯೋಗಮಾಯಾವಸಾನಃ** ಯೋಗಸಾಮರ್ಥ್ಯದ ಅತ್ಯುತ್ತಮ ಅವಧಿಯನ್ನು ಹೊಂದಿದ **ದೇಹಃ** ಜ್ಞಾನಾನಂದಾತ್ಮಕ ದೇಹವು **ಅಭಿಮಾನಾಭಾಸೇನ** ಬ್ರಹ್ಮಾಂಡದ ಹೊರಗೂ ಒಳಗೂ ಜ್ಞಾನ ಪ್ರಕಾಶಾತ್ಮಕವಾದ ಮನಸ್ಸಿನಿಂದ **ಇಮಾಂ ಜಗತೀಂ** ಈ ಜಗತ್ತನ್ನು **ಚಂಕ್ರಮಮಾಣಃ** ಮತ್ತೆ ಮತ್ತೆ ಹೆಜ್ಜೆ ಇಡುತ್ತಾ (ಸಂಚರಿಸುತ್ತಾ) **ಕಾಂಕಟಕರ್ಣಾಟಕಾತ್** ಭೀಮರಥೀ ನದಿಯಿರುವ ಪ್ರದೇಶದಿಂದ **ದಕ್ಷಿಣಕರ್ಣಾಟಕಾನ್** ಸೌರಾಷ್ಟ್ರದಿಂದ ಪ್ರಾರಂಭವಾಗುವ ದಕ್ಷಿಣ ಕರ್ನಾಟಕ **ದೇಶಾನ್** ದೇಶಗಳನ್ನು **ಯದೃಚ್ಛಯಾ** ಸ್ವೇಚ್ಛೆಯಿಂದ **ಉಪಗತಃ** ಸೇರಿ **ಕುಟಚಾಚಲೋಪವನೇ** ನಾಗಪುರ ಗ್ರಾಮದ ಪೂರ್ವಕ್ಕೆ ನದಿಯ ಸಮೀಪವಿರುವ ಕುಟಚಪರ್ವತದ ಕಾಡಿನಲ್ಲಿ **ಉನ್ಮಾದ ಇವ** ಹುಚ್ಚನಂತೆ **ಆಸ್ಯಕೃತಾಶ್ಮಕವಲಃ** (ಮೌನಭಂಗವಾಗಬಾರದೆಂದು) ಬಾಯಿಯಲ್ಲಿ ಕಲ್ಲುಗಳನ್ನು ಆಹಾರವಾಗಿಟ್ಟುಕೊಂಡು **ಮುಕ್ತಮೂರ್ಧಜಃ** ಕೂದಲು

ಹರವಿಕೊಂಡು **ಅಸಂವೀತ** ಏವ ವಸ್ತ್ರವನ್ನುಡದೇ ನಗ್ನನಾಗಿಯೇ **ವಿಚಚಾರ** ಸಂಚರಿಸಿದನು. ।।೮।।

ಕಲ್ಲನ್ನು ಬಾಯಿಯಲ್ಲಿಟ್ಟು ನಾಲಿಗೆಯನ್ನು ಗೆಲ್ಲಬೇಕೆಂದು ಮತ್ತು ನಗ್ನನಾಗಿರುವುದರಿಂದ ಉಪಸ್ಥೇಂದ್ರಿಯ ಜಯವನ್ನು ತಿಳಿಸುವನು ಎಂದು ಭಾವ. ಈಗ ಋಷಭ ದೇವನು ಅಂತರ್ಧಾನನಾಗಿ ಇರುವುದನ್ನು ತಿಳಿಸುವರು

**ಅಥ ಸಮೀರವೇಗವಿಧುತವೇಣುನಿರ್ಘರ್ಷಣಜಾತೋ ದಾವಾನಲ-ಸ್ತದ್ವನಮಾಲೇಲಿಹಾನಃ ಸಹ ತೇನ ದದಾಹ ।।೯।।**

**ಅಥ** ಸಂಚರಿಸಿದ ನಂತರ **ಸಮೀರವೇಗವಿಧುತವೇಣುನಿರ್ಘರ್ಷಣಜಾತಃ** ಗಾಳಿಯ ವೇಗದಿಂದ ಅಲುಗಾಡಿದ ಬಿದುರುಗಳ ಪರಸ್ಪರ ಘರ್ಷಣದಿಂದ ಉತ್ಪನ್ನವಾದ **ದಾವಾನಲಃ** ಕಾಡ್ಗಿಚ್ಚು **ಆಲೇಲಿಹಾನಃ** ಜ್ವಾಲೆ ಎಂಬ ನಾಲಿಗೆಯಿಂದ ಎಲ್ಲವನ್ನು ಆವರಿಸುತ್ತಾ **ತೇನ ಸಹ** ತನ್ನಲ್ಲಿ ಪ್ರವೇಶಿಸಿದ ಋಷಭದೇವನೊಡನೇ **ತದ್ವನಂ** ಆ ಕಾಡನ್ನು **ದದಾಹ** ಸುಟ್ಟಿತು.

ಋಷಭದೇವನ ಪ್ರಭಾವದಿಂದ ಕೂಡಿದ ದಾವಾಗ್ನಿಯು ಆ ಕಾಡಿನಲ್ಲಿರುವ ಎಲ್ಲ ಜಗತ್ತನ್ನು ಸುಟ್ಟಿತೇ ಹೊರತು ಕೇವಲ ತನ್ನ ಸಾಮರ್ಥ್ಯದಿಂದಲ್ಲ ಎಂದು ಭಾವ. ಇದರಿಂದ ಕಾಡ್ಗಿಚ್ಚಿನಲ್ಲಿ ಅದೃಶ್ಯನಾಗಿದ್ದನು ಋಷಭದೇವನು ಎಂದು ತಿಳಿಸಿದಂತಾಯಿತು.

### ಋಷಭದೇಹವು ಅಗ್ನಿಯಿಂದ ಸುಟ್ಟಿತೇ ?

ಇಲ್ಲಿ ಋಷಭದೇಹವು ಅಗ್ನಿಯಿಂದ ಸುಟ್ಟಿತು ಎಂದು ತೋರುವುದು. ಅದು ಹಿಂದಿನ ವಾಕ್ಯಕ್ಕೆ ವಿರುದ್ಧವಾದುದು. ಅಲ್ಲಿ ದೇಹಕ್ಕೆ ಅವನಿಂದ ಅಭೇದ ತಿಳಿದುಬರುವುದು. ಕಾರಣ ಅದರ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು

**ತಾತ್ಪರ್ಯ -**

''ಜ್ಞಾನಾನಂದಾತ್ಮಕೋ ದೇಹೋ ಋಷಭಸ್ಯ ಮಹಾತ್ಮನಃ ।
ತಾದೃಶೇನ್ನೈವ ಮನಸಾ ಕ್ರಮಂಸ್ತು ಕುಟಚಾಚಲೇ ।।
ದಾವಾಗ್ನಿಮನುವಿಶ್ಯಾಥ ತತ್ರಸ್ಥಃ ಪ್ರಾದಹಜ್ಜಗತ್ ।
ಏವಮಗ್ನೇರಭಿವ್ಯಕ್ತಸ್ತತ್ಸ್ಥೋ ವಿಷ್ಣುಃ ಸನಾತನಃ ।।




ಋಷಭತ್ವೇನ ಸಂಗೋಪ್ಯ ಧರ್ಮಾನದ್ಯಾಪಿ ತತ್ರಗಃ ।
ಆಸ್ತೇ ಸ ವಾಸುದೇವಾತ್ಮಾ ವಾಸುದೇವೋಽಹಮಿತ್ಯಜಃ ॥
ಸದಾಸ್ಥಿತಃ ಸ್ಥಿತಿಂ ತಾಂ ತು ಶುಶ್ರಾವಾರ್ಹೋ ದುರಾತ್ಮವಾನ್ ।
ಪೂರ್ವಂತು ಪೌಂಡ್ರಕೋ ನಾಮ ವಾಸುದೇವಃ ಸುದುರ್ಮತಿಃ ॥
ಜಾತಿಸ್ಮರೋ ದ್ವಿಧಾ ಶಾಸ್ತ್ರಂ ಪಾಷಂಡಂ ನಿರ್ಮಮೇ ನೃಪಃ ।
ಕುತ್ಸಿತಂ ವಾಸುದೇವತ್ವ ಪ್ರತಿಪಾದಕಮಾತ್ಮನಃ ॥
ಲೋಕಾರ್ಥಂ ಚಾಪರಮಪಿ ಚಕಾರಾರ್ಹತನಾಮಕಂ ।
ತತ್ಛಿಷ್ಯಃ ಕ್ರಮುರ್ನಾಮ ನ ಜಾನಂಸ್ತನ್ಮತಂ ಪರಮ್ ॥
ವಾಸುದೇವಾತ್ಮತಾಂ ಸರ್ವಜೀವಾನಾಮವದತ್ಕುಧೀಃ ।
ಕುಶಾಸ್ತ್ರಂ ಸರ್ವವೇದಾನಾಂ ವಿರುದ್ಧಂ ತಾಮಸಾಲಯಂ ॥
ತದ್ದೃಷ್ಟ್ವಾಽದ್ಯಾಪಿ ವರ್ತಂತೇ ವರ್ತಿಷ್ಯಂತಿ ಕಲೌ ತಥಾ ।
ಅಶೌಚಾ ಅವ್ರತಾಚಾರಾ ವಾಸುದೇವೋಽಹಮಿತ್ಯಪಿ'' ಇತಿ ಬ್ರಾಹ್ಮೇ ॥೯॥

ಜ್ಞಾನಾನಂದರೂಪವಾದ ದೇಹವುಳ್ಳ ಋಷಭರೂಪಿಯಾದ ಶ್ರೀಹರಿಯು ಜ್ಞಾನಾನಂದಾತ್ಮಕ ಮನಸ್ಸಿನಿಂದಲೇ ಕುಟಚಪರ್ವತದ ಉಪವನದಲ್ಲಿ ಸಂಚರಿಸುತ್ತ ಕಾಡ್ಗಿಚ್ಚನ್ನು ಪ್ರವೇಶ ಮಾಡಿ ಅಗ್ನಿಯಲ್ಲಿದ್ದು ಅಲ್ಲಿರುವ ಜಗತ್ತನ್ನೇ ಸುಟ್ಟನು. (ಕಾಡ್ಗಿಚ್ಚು ತನ್ನಲ್ಲಿ ಪ್ರವಿಷ್ಟನಾದ ಋಷಭನಿಂದ ಕೂಡಿಯೇ ಸುಟ್ಟದ್ದು).

ಹಿಂದೆ ಹೇಳಿದ ಪ್ರಕಾರ ಅಗ್ನಿಯಲ್ಲಿರತಕ್ಕ ಸನಾತನನಾದ ಶ್ರೀಹರಿಯು ಅಗ್ನಿಯಿಂದ ಪುನಃ ಅಭಿವ್ಯಕ್ತನಾಗಿ ತನ್ನ ಋಷಭ ರೂಪವನ್ನು ಮರೆಮಾಡಿ ಈಗಲೂ ಕುಟಚಾಚಲದ ಉಪವನದಲ್ಲಿ ಧರ್ಮಗಳನ್ನು ಮಾಡುತ್ತಾ ಇದ್ದಾನೆ ಮತ್ತು ಸಾಕ್ಷಾತ್ತಾಗಿ ತಾನು ವಾಸುದೇವ ಸ್ವರೂಪನೇ ಆಗಿದ್ದು ನಾನು ವಾಸದೇವನು ಎಂದು ನಿರ್ದಿಷ್ಟ ಉಪದೇಶಮಾಡುತ್ತಿರುವನು.

ಕೆಟ್ಟ ಮನಸ್ಸುಳ್ಳ ಅರ್ಹನಾಮಕ ರಾಜನು 'ಅಗ್ನಿಯಿಂದ ಅಭಿವ್ಯಕ್ತನಾದ ಒಬ್ಬ ಅಲೌಕಿಕ ಪುರುಷನು ನಾನೇ ವಾಸುದೇವನೆಂದು ಪ್ರತಿಪಾದಿಸುತ್ತಾನೆ ಎಂಬುದನ್ನು ಅವನಿಂದ ಉಪದಿಷ್ಟನಾದ ಋಷಿಯ ಮುಖದಿಂದ ಕೇಳಿದನು. (ಅರ್ಹನು ಪೂರ್ವಜನ್ಮದಲ್ಲಿ ಪೌಂಡ್ರಕನೆಂಬ ಅಸುರನು). ವರಾಹಕಲ್ಪದಕ್ಕಿಂತ ಮುಂಚಿನದಾದ ಪದ್ಮಕಲ್ಪದಲ್ಲಿ ನಾನು ವಸುದೇವನಿಂದ ಜನಿಸಿದ್ದರಿಂದ ವಾಸುದೇವನಾಗಿರುತ್ತೇನೆ ಎಂದು ಪೂರ್ವಜನ್ಮದ ಸ್ಮರಣವುಳ್ಳ ದುರ್ಬುದ್ಧಿಯುಳ್ಳ ಪೌಂಡ್ರಕ ವಾಸುದೇವನು

ನಾನೇ ವಾಸುದೇವನೆಂದು ಜೀವಬ್ರಹ್ಮಾಭೇದ ಪ್ರತಿಪಾದಕವಾದ ವಾಸುದೇವ ಎಂಬ ಕುತ್ಸಿತವಾದ ಐಕ್ಯ ಶಾಸ್ತ್ರವನ್ನು, ಜನರಿಗಾಗಿ ಅಹಿಂಸಾ ಮೊದಲಾದ ಧರ್ಮ ಪ್ರತಿಪಾದಕವಾದ ಆರ್ಹತ ಎಂಬ ಶಾಸ್ತ್ರವನ್ನು ಹೀಗೆ ಎರಡು ಪಾಷಂಡ ಶಾಸ್ತ್ರಗಳನ್ನು ನಿರ್ಮಿಸಿದನು. ।।೯।।

ಅರ್ಹರಾಜನ ಪ್ರಶಿಷ್ಯನಾದ ಕ್ರಮು ಎಂಬುವನು ನಾನೇ ಪರಬ್ರಹ್ಮನೆಂದು ಹೇಳಿದ ಅರ್ಹನ ಮತವನ್ನು ತಿಳಿಯದೇ ಕುತ್ಸಿತಬುದ್ಧಿಯುಳ್ಳವನಾಗಿ ಸಮಸ್ತಜೀವರೂ ವಾಸುದೇವರೂಪಿ ಶ್ರೀಹರಿಸ್ವರೂಪರು ಎಂದು ಹೇಳಿದನು. ಅರ್ಹನಾಮಕ ರಾಜನಾದರೂ ತಾನು ವಸುದೇವನಿಂದ ಹುಟ್ಟಿದ್ದರಿಂದ ತಾನೇ ವಾಸುದೇವನೆಂದು ಸ್ಮರಿಸುತ್ತಾ ತಾನು ಭಗವತ್ಸ್ವರೂಪನೆಂದು ಪ್ರತಿಪಾದಿಸಿದನು. ಕ್ರಮುವು ಅದನ್ನು ತಿಳಿಯದೇ ಎಲ್ಲರೂ ಭಗವತ್ಸ್ವರೂಪರೆಂದು ಹೇಳಿದುದರಿಂದ ಕುತ್ಸಿತ ಬುದ್ಧಿಯುಳ್ಳವನು. ಇತರರಿಗೆ ಉಪದೇಶಮಾಡಿದ್ದಲ್ಲದೇ ಜೀವರಿಗೆ ಶ್ರೀಹರಿಯಿಂದಭೇದವಿಲ್ಲವೆಂದು ಸಮಸ್ತವೇದವಿರುದ್ಧವೂ ತಾಮಸರ ಆಗ್ರಹಕ್ಕೆ ವಿಷಯವೂ ಆದ ಕ್ರಮು ಎಂಬ ಕುಶಾಸ್ತ್ರವನ್ನು ಮಾಡಿದನು. ಆ ಶಾಸ್ತ್ರವನ್ನು ತಿಳಿದು ಕಲಿಯುಗದಲ್ಲಿ ಶೌಚ, ಆಚಾರ, ವ್ರತಗಳಿಲ್ಲದವರೂ ನಾನೇ ವಾಸುದೇವನೆಂಬುವವರಾಗಿ ಆ ಮತವನ್ನೇ ಅನುಸರಿಸುವರು ಎಂದು ಬ್ರಹ್ಮ ಪುರಾಣದಲ್ಲಿದೆ. ।।೧೦।। (ಇಲ್ಲಿ ೯ ರಿಂದ ೧೦ ರವರೆಗೆ ತಾತ್ಪರ್ಯ ಹೇಳಿದಂತಾಯಿತು )

## ಋಷಭನಿಂದ ಅಸುರಜನ ಮೋಹನ

ಅಸುರ ಜನರು ಮೋಹಿತರಾದರೆಂದು ಹೇಳುತ್ತಾರೆ

**ಯಸ್ಯ ಕಿಲಾನುಚರಿತಮುಪಾಕರ್ಣ್ಯ ಕಾಂಕಟಕರ್ಣಾಟಕಾನಾಂ ದಕ್ಷಿಣ-ಕರ್ಣಾಟಕಾನಾಂ ರಾಜಾರ್ಹನಾಮಾ ಉಪಶಿಕ್ಷ್ಯ ಕಲಾವಧರ್ಮ ಉತ್ಕೃಷ್ಯಮಾಣೇ ಭವಿತವ್ಯೇನ ವಿಮೋಹಿತಃ ಸ್ವಧರ್ಮಪಥಮಕುತೋಭಯಮಪಹಾಯ ಕುಪಥಂ ಪಾಷಂಡಮಸಮಂಜಸಂ ನಿಜಮನೀಷಯಾ ಮಂದಃ ಸಂಪ್ರವರ್ತಿಷ್ಯತೇ ।।೧೦।।**




**ಯಸ್ಯ** ಮತ್ತೆ ಅಗ್ನಿಯಿಂದ ಹೊರಗೆ ಬಂದ ಯಾವ ಋಷಭನ **ಅನುಚರಿತಂ** ಅಗ್ನಿಯಿಂದ ಬಂದ ಪುರುಷನು ನಾನೇ ಎಂದು ವಾಸುದೇವಾದಿಷ್ಟನಾದ ಋಷಿಯ ಮುಖದಿಂದ ಕೇಳಿ **ಕಲೌ** ಕಲಿಯುಗದಲ್ಲಿ **ಅಧರ್ಮೇ** ಅಧರ್ಮವು **ಉತ್ಕೃಷ್ಯಮಾಣೇ** ಹೆಚ್ಚುತ್ತಿರಲು **ಭವಿತವ್ಯೇನ** ವಿಧಿಯಿಂದ ಅಸುರ ಜನರಿಗೆ ಪಾಪಫಲವನ್ನು ಕೊಡುವ ಶ್ರೀಹರಿಯಿಂದ **ವಿಮೋಹಿತಃ** ಮೋಹಿತನಾದ **ಮಂದಃ** ನಿರ್ಭಾಗ್ಯನಾದ (ಮೋಕ್ಷವಿಲ್ಲದ) ವಾಸುದೇವೋऽಹಂ ಎಂದು ಹೇಳುವ ಶ್ರೀ ಹರಿಯ ತಾತ್ಪರ್ಯವನ್ನರಿಯದ **ಕಾಂಕಟಕರ್ನಾಟಕಾನಾಂ ದಕ್ಷಿಕರ್ನಾಟಕಾನಾಂ** ಎರಡೂ ಕರ್ನಾಟಕಗಳಿಗೆ **ರಾಜಾ** ರಾಜನಾದ **ಅರ್ಹನಾಮಾ** ಅರ್ಹನೆಂಬುವನು **ಉಪಶಿಕ್ಷ್ಯ** ಜನರಿಗೆ ಉಪದೇಶಿಸಿ **ಅಕುತೋಭಯಂ ಸ್ವಧರ್ಮಪಥಂ ಅಪಹಾಯ** ಸಂಸಾರ ಮುಂತಾದ ಯಾವ ಭಯವೂ ಇಲ್ಲದ ವರ್ಣಾಶ್ರಮಧರ್ಮಮಾರ್ಗವನ್ನು ಬಿಟ್ಟು **ಕುಪಥಂ** ದುಷ್ಟಮಾರ್ಗವಾದ **ಪಾಷಂಡಂ** ನಾನೇ ದೇವರೆಂಬ ಅದ್ವೈತ ಮತವನ್ನು **ಅಸಮಂಜಸಂ** ಯುಕ್ತಿ ಇಲ್ಲದ ಜೈನ(ಆರ್ಹತ) ಮತವನ್ನು **ನಿಜಮನೀಷಯಾ** ತನ್ನ ಬುದ್ಧಿಗೆ ತೋರಿದಂತೆ **ಸಂಪ್ರವರ್ತಿಷ್ಯತೇ** ಮುಂದೆ ಪ್ರವರ್ತಿಸುವನು.

ಇದರಿಂದ ಇದು ಋಷಭನ ಅಭಿಪ್ರಾಯವಲ್ಲ. ಅರ್ಹನು ಅಸುರನು ಎಂದು ಹೇಳಿದಂತಾಯಿತು.

**ಕುತ್ಸಿತಶಾಸ್ತ್ರ ಬೆಳೆದು ಬಂದ ರೀತಿ ಹೇಳುವರು**

**ಯೇನ ಹ ವಾ ಕಲೌ ಮನುಜಾಪಸದಾ ದೇವಮಾಯಾವಿಮೋಹಿತಾಃ ಸ್ವವಿಧಿನಿಯೋಗಶೌಚಾಚಾರವಿಹೀನಾ ದೇವಹೇಲನಾದೀನಿ ಅಪವ್ರತಾನಿ ನಿಜೇಚ್ಛಯಾ ಗೃಹ್ಣಾನಾ ಅಸ್ನಾನಾನಾಚಮನಾಶೌಚಕೇಶೋಲ್ಲುಂಠನಾದೀನಿ ಕಲಿನಾऽಧರ್ಮಬಹುಲೇನೋಪಹತಧಿಯೋ ಬ್ರಹ್ಮಬ್ರಾಹ್ಮಣಯಜ್ಞಪುರುಷ-ಲೋಕವಿದೂಷಕಾಃ ಪ್ರಾಯೇಣ ಭವಿಷ್ಯಂತಿ ॥೧೧॥**

**ಯೇನ** ಯಾವ ಈ ಎರಡು ಶಾಸ್ತ್ರಗಳಿಂದ **ಕಲೌ** ಕಲಿಯುಗದಲ್ಲಿ **ದೇವಮಾಯಾ ವಿಮೋಹಿತಾಃ** ದೇವರ ಇಚ್ಛೆಯಿಂದ ಮೋಹಿತರಾದ **ಸ್ವವಿಧಿನಿಯೋಗಶೌಚಾಚಾರ ವಿಹೀನಾಃ** ತಮ್ಮ ವರ್ಣಾಶ್ರಮ ಧರ್ಮಗಳನ್ನು ಹೇಳುವ ವೇದಗಳ ಅಪ್ಪಣೆಗಳಾದ ''ನ ಮಲವದ್ವಾಸಸಾ ಸಂವದೇತ'' (ಕೊಳಕು ಬಟ್ಟೆಯವನೊಡನೆ ಮಾತಾಡಬಾರದು) ಮುಂತಾದ ಶೌಚ (ಶುದ್ಧಿ) ಆಚಾರ (ನಡವಳಿಕೆ)ಗಳಿಲ್ಲದ **ಮನುಜಾಪಸದಾಃ**

ಮನುಷ್ಯಾಧಮರು **ಅಧರ್ಮಬಹುಲೇನ ಕಲಿನಾ** ಅಧರ್ಮವೇ ಹೆಚ್ಚಾಗಿರುವ ಕಲಿಯುಗದ ಪ್ರಭಾವದಿಂದ **ಉಪಹತಧಿಯಃ** ಕುಂಠಿತವಾದ ಬುದ್ಧಿಯುಳ್ಳವರಾಗಿ **ನಿಜೇಚ್ಛಯಾ** ಕೇವಲ ತಮ್ಮ ಇಚ್ಛೆಯಿಂದ (ಪ್ರಮಾಣವಿಲ್ಲದೆ) **ಅಪವ್ರತಾನಿ** ವೇದ ವಿರುದ್ಧ ವ್ರತಗಳಾದ **ದೇವಹೇಲನಾದೀನಿ** ವಿಷ್ಣು ಮೊದಲಾದ ದೇವತೆಗಳ ಅಭೇದ ಅವಜ್ಞಾ ಮೊದಲಾದ **ಅಸ್ನಾನ** ಸ್ನಾನ ಮಾಡದಿರುವುದು **ಅನಾಚಮನ** ಆಚಮನ ಮಾಡದಿರುವುದು **ಅಶೌಚ** ಶುದ್ಧವಾಗಿ ಇರದಿರುವುದು **ಕೇಶೋಲ್ಲುಂಠನಾದೀನಿ** ಕೂದಲು ಕೀಳುವುದೇ ಮೊದಲಾದವುಗಳು **ಗೃಹ್ಣಾನಾಃ** ಕರ್ತವ್ಯಗಳೆಂದು ತಿಳಿಯುವವರಾಗಿ **ಪ್ರಾಯೇಣ** ಬಹಳವಾಗಿ **ಬ್ರಹ್ಮ** ವೇದಗಳನ್ನು **ಬ್ರಾಹ್ಮಣ** ಬ್ರಾಹ್ಮಣರನ್ನು **ಯಜ್ಞಪುರುಷ** ಯಜ್ಞಗಳಿಂದ ಪೂಜ್ಯನಾದ ಶ್ರೀಹರಿಯನ್ನು **ಲೋಕ** ಸಜ್ಜನರನ್ನೂ **ವಿದೂಷಕಾಃ ಭವಿಷ್ಯಂತಿ** ವಿಶೇಷವಾಗಿ ನಿಂದಿಸುವವರಾಗುವರು. ॥೧೧॥

ಅದರ ಫಲವನ್ನು ಹೇಳುವರು

**ತೈರಪಿ ಹ್ಯರ್ವಾಕ್ತನಯಾ ನಿಜಲೋಕಯಾತ್ರಯಾಂಧಪರಂಪರಯಾಽತ ಏವಾನಾಶ್ವಸ್ತಾಸ್ತಮಸ್ಯಂಧೇ ಸ್ವಯಮೇವ ಪ್ರಪತಿಷ್ಯಂತಿ ॥೧೨॥**

**ತೈಃ** ದೇವಹೇಲನಾದಿಗಳಿಂದಲೂ **ಅಪಿ** ನಾನೇ ವಾಸುದೇವನೆಂಬ ಉಪಾಸನೆಯಿಂದಲೂ **ಅರ್ವಾಕ್ತನಯಾ** ಶ್ರುತ್ಯಾದಿ ಪ್ರಮಾಣಗಳಿಲ್ಲದೆ ತಮ್ಮ ಬುದ್ಧಿಯಿಂದ ನಿರ್ಮಿತವಾದುದರಿಂದ ಹೊಸದಾದ **ಅಂಧಪರಂಪರಯಾ** ಕುರುಡು ಪರಂಪರೆಯಾದ **ನಿಜಲೋಕಯಾತ್ರಯಾ** ೧. ತಮ್ಮವರಾದ ಪಾಷಂಡಿಗಳ ದೇಹಯಾತ್ರಾವುಳ್ಳ (ಜೀವನ ವ್ಯವಾಹಾರವುಳ್ಳ ) ೨. ಅಜ್ಞಾನಿಗಳ ಗಮನದಿಂದ, ಸ್ವಪ್ನ ಮನೋರಥಗಳಿಂದ ಕಲ್ಪಿತವಾದ ವ್ಯವಹಾರದಿಂದ **ಅನಾಶ್ವಸ್ತಾಃ** ಎಂದೂ ಲೌಕಿಕ ವ್ಯಾಪಾರವನ್ನು ಬಿಡದ, ಸಚ್ಛಾಸ್ತ್ರದಲ್ಲಿ ನಿಷ್ಠೆಯಿಲ್ಲದ ತಮ್ಮ ಮತವನ್ನೇ ನಂಬಿದ **ತ ಏವ** ಈ ಮತಾನುಯಾಯಿಗಳು **ಸ್ವಯಮೇವ** ತಮ್ಮ ದೋಷದಿಂದಲೇ **ಅಂಧೇ ತಮಸಿ ಪ್ರಪತಿಷ್ಯಂತಿ** ಅಂಧಂತಮಸ್ಸಿನಲ್ಲಿ ಮೇಲೇಳದಂತೆ ಬೀಳುವರು. ॥೧೨॥

## ಋಷಭಚರಿತೆಯು ಸಜ್ಜನರಿಗೆ ಮುಕ್ತಿಪ್ರದವು

ಋಷಭಚರಿತೆಯು ಕೇವಲ ಅಸುರ ಮೋಹಕವಷ್ಟೇ ಅಲ್ಲ ಸಜ್ಜನ ಮುಕ್ತಿಪ್ರದವೂ ಆಗಿದೆ ಎಂದು ಹೇಳುವರು




**ಅಯಮವತಾರೋ ರಜಸೋಪಪ್ಲುತಕೈವಲ್ಯಶಿಕ್ಷಣಾರ್ಥಃ ತಸ್ಯಾನುಗುಣಾನ್ ಶ್ಲೋಕಾನ್ ಗಾಯಂತಿ ||೧೩||**

**ಅಯಂ ಅವತಾರಃ** ಈ ಋಷಭಾವತಾರವು **ರಜಸೋಪಪ್ಲುತಕೈವಲ್ಯಶಿಕ್ಷಣಾರ್ಥಃ** ರಜೋಗುಣ ಕಾರ್ಯವಾದ ಸಂಸಾರದಿಂದ ಉಪದ್ರುತರಾದ ಸಜ್ಜನರಿಗೆ ಮುಕ್ತಿಸಾಧನ ಉಪದೇಶಕ್ಕೂ ಆಗಿದೆ **ತಸ್ಯ ಅನುಗುಣಾನ್ ಶ್ಲೋಕಾನ್ ಗಾಯಂತಿ** ಮುಕ್ತಿ ಸಾಧನೋಪದೇಶಕ್ಕೆ ಅನುಗುಣವಾದ ಶ್ಲೋಕಗಳನ್ನು ಜ್ಞಾನಿಗಳು ಹೇಳುತ್ತಾರೆ. ||೧೩||

**ಅಹೋ ಭುವಃ ಸಪ್ತಸಮುದ್ರವತ್ಯಾ ದ್ವೀಪೇಷು ವರ್ಷೇಷ್ವಧಿಪುಣ್ಯಮೇತತ್ ।**
**ಗಾಯಂತಿ ಯತ್ರತ್ಯಜನಾ ಮುರಾರೇಃ ಕರ್ಮಾಣಿ ಭದ್ರಾಣ್ಯವತಾರವಂತಿ ||**

**ಯತ್ರತ್ಯಜನಾಃ** ಯಾವ ಭರತಖಂಡದಲ್ಲಿರುವ ಜನರು **ಅವತಾರವಂತಿ** ಋಷಭಾದಿ ಅವತಾರಗಳಿಂದ ಕೂಡಿದ **ಭದ್ರಾಣಿ** ಮಂಗಳದಾಯಕಗಳಾದ **ಮುರಾರೇಃ** ಶ್ರೀಹರಿಯ **ಕರ್ಮಾಣಿ** ಚರಿತ್ರೆಗಳನ್ನು **ಗಾಯಂತಿ** ಗಾನ ಮಾಡುವರೋ **ತತ್ ಏತತ್** ಈ ಭರತಖಂಡವು **ಸಪ್ತಸಮುದ್ರವತ್ಯಾಃ** ಏಳು ಸಮುದ್ರಗಳುಳ್ಳ **ಭುವಃ** ಭೂಮಿಯ **ದ್ವೀಪೇಷು** ಏಳು ದ್ವೀಪಗಳಲ್ಲಿ **ವರ್ಷೇಷು** ಒಂಭತ್ತು ಖಂಡಗಳಲ್ಲಿ **ಅಧಿ ಪುಣ್ಯಂ** ಅಧಿಕ ಪುಣ್ಯಜನಕವು. ಉಪಲಕ್ಷಣವಿದು. ಪಾಪಜನಕವೂ ಆಗಿದೆ **ಅಹೋ** ಆಶ್ಚರ್ಯ!

ಇಲ್ಲಿ ಸಪ್ತ ದ್ವೀಪಗಳಲ್ಲಿರುವ ಒಂಭತ್ತು ವರ್ಷಗಳ ಮಧ್ಯದಲ್ಲಿ ಭರತವರ್ಷವು ಅಧಿಕ ಪುಣ್ಯಜನಕವೆಂದು ಹೇಳಿದ್ದರಿಂದ ಭಾರತದಲ್ಲಿ ಪಾಪಾಚರಣೆ ಕಡಿಮೆ ಇತರ ದ್ವೀಪಗಳಲ್ಲಿ ಪುಣ್ಯಾಚರಣ ಕಡಿಮೆ ಪಾಪಾಚರಣೆ ಹೆಚ್ಚು ಎಂದು ವಿಪರೀತ ಜ್ಞಾನ ಬರುವುದು ಅದನ್ನು ನಿರಾಕರಿಸಲು '**ಅಧಿಪುಣ್ಯಂ**' ಎಂದು ಹೇಳಿದ್ದರ ಅಭಿಪ್ರಾಯವನ್ನು ಪ್ರಮಾಣದಿಂದ ಹೇಳುವರು.

ತಾತ್ಪರ್ಯ - ''ವಿಶೇಷಾದ್ಭಾರತೇ ಪುಣ್ಯಂ ಚರೇಯುಃ ಪಾಪಮಪ್ಯಥ ।
ತಥೈವ ಭಗವದ್ಭಕ್ತಿಂ ಪೃಥಿವ್ಯಾಂ ನಾನ್ಯವರ್ಷಗಾಃ || ಇತಿ ಬ್ರಹ್ಮಾಂಡೇ ।

ಅಂದರೆ ಮೂಲದಲ್ಲಿ ಪುಣ್ಯ ಪದವು ಪಾಪಕ್ಕೆ ಉಪಲಕ್ಷಕವು ಎಂದಂತಾಯಿತು. ಭರತಖಂಡದಲ್ಲಿರುವವರು ವಿಶೇಷವಾಗಿ ಪುಣ್ಯವನ್ನೂ, ಪಾಪವನ್ನೂ,

ಭಗವದ್ಭಕ್ತಿಯನ್ನೂ ಮಾಡುವರು. ಇತರ ಖಂಡಗಳಲ್ಲಿ ಪುಣ್ಯಫಲವನ್ನು ಮಾತ್ರ ಅನುಭವಿಸುವರೇ ಹೊರತು ಅಲ್ಲಿ ಪುಣ್ಯಸಂಪಾದನೆ ಇಲ್ಲ. ಆದರಂತೆ ಅಲ್ಲಿ ಜನರು ಪಾಪ ಫಲ ಅನುಭವಿಸುವರು. ಅಲ್ಲಿ ಪಾಪಲೇಪವೂ ಉಂಟು. ಅವು ಭೋಗಭೂಮಿಗಳೇ ಹೊರತು ಸಾಧನಭೂಮಿಗಳಲ್ಲ. ಅಂದಮಾತ್ರಕ್ಕೆ ಇಲ್ಲಿಗಿಂತ ಕಡಿಮೆ ಪುಣ್ಯವಿದೆ ಎಂದರ್ಥವಲ್ಲ. ಹೀಗೆ ಬೇಕಾದರೆ ಹೇಳಬಹುದು. ಭಾರತಭೂಮಿ ಪುಣ್ಯಭೂಮಿ ಎಂದರೆ ಇಲ್ಲಿ ಮಾಡುವ ಕರ್ಮಗಳಿಂದ ಪುಣ್ಯ ಬರುವುದು ಎಂದರ್ಥ. ಉಳಿದವುಗಳು ಪುಣ್ಯನಾಶಕಗಳಾದುದರಿಂದ ಪುಣ್ಯಭೂಮಿಗಳು, ಪುಣ್ಯ ಫಲಭೋಗದಿಂದ ಪುಣ್ಯನಾಶಕವಾಗುವುದರಿಂದ ಇವುಗಳನ್ನು ಭೋಗಭೂಮಿಗಳೆಂದೂ ಕರೆಯುವರು. ।।೧೪।।

**ಅಹೋಽನುವಂಶೋ ಯಶಸಾವದಾತಃ ಪ್ರೈಯವ್ರತೋ ಯತ್ರ ಪುಮಾನ್ ಪುರಾಣಃ । ಕೃತಾವತಾರಃ ಪುರುಷಃ ಸ ಆದ್ಯಶ್ಚಚಾರ ಧರ್ಮಂ ಯದಕರ್ಮಹೇತುಮ್ ।।೧೫।।**

**ಯತ್ರ** ಯಾವ ವಂಶದಲ್ಲಿ **ಪುರಾಣಃ** ಅನಾದಿಯಾದ **ಪುರುಷಃ** ಭಕ್ತರನ್ನು ಗುಣಗಳಿಂದ ತುಂಬುವುದರಿಂದ, ಭಕ್ತರ ದೋಷಗಳನ್ನು ನಾಶ ಮಾಡುವುದರಿಂದ, ಮೋಕ್ಷವೆಂಬ ಪೂರ್ಣಫಲವನ್ನು ಕೊಡುವುದರಿಂದ ಪುರುಷನೆನಿಸುವ ಶ್ರೀಹರಿಯು **ಕೃತಾವತಾರಃ** ಅವತಾರ ಮಾಡಿದವನಾಗಿ **ಆದ್ಯಃ** ಬ್ರಹ್ಮದೇವರಿಗೂ ಕಾರಣನಾದ **ಸಃ** ಅವತರಿಸಿದ ಶ್ರೀಹರಿಯು **ಯತ್** ಯಾವ ಕಾರಣ **ಅಕರ್ಮಹೇತುಂ** ಮೋಕ್ಷಕ್ಕೆ ಕಾರಣವಾದ **ಧರ್ಮಂ** ಧರ್ಮವನ್ನು **ಚಚಾರ** ಲೋಕಶಿಕ್ಷಣಕ್ಕಾಗಿ ಆಚರಿಸಿದನೋ **ತತ್** ಆ ಕಾರಣ **ಸಃ ಪ್ರೈಯವ್ರತಃ ವಂಶಃ** ಆ ಪ್ರಿಯವ್ರತರ ವಂಶವು **ಯಶಸಾ ಅವದಾತಃ** ಕೀರ್ತಿಯಿಂದ ಶುದ್ಧವಾದುದು. ಅಹೋ ಆಶ್ಚರ್ಯ!

''**ಪೂರಣಾತ್ ಸಾದನಾಚ್ಚೈವ ತತೋಽಸೌ ಪುರುಷೋತ್ತಮಃ, ಪುರು ಪೂರ್ಣಫಲಂ ಸನೋತಿ ದದಾತೀತಿ ಪುರುಷಃ** ।।೧೫।।

ಋಷಭನು ಒಬ್ಬ ಯೋಗಿಯು ಹರಿಯಲ್ಲ ಎಂಬ ಶಂಕೆಗೆ ಉತ್ತರಿಸುವರು

**ಕೋ ನ್ವಸ್ಯ ಕಾಷ್ಠಾಮಪರೋಽನುಗಚ್ಛೇ-**
**ನ್ಮನೋರಥೇನಾಪ್ಯಭವಾಯ(ಅಭವಸ್ಯ) ಯೋಗೀ ।**

 

**ಯದ್ಯೋಗಮಾಯಾಂ ಸ್ಪೃಹಯಂತ್ಯುದಸ್ತಾಂ**
**ಮಹತ್ತಮಾ ಯೇನ ಕೃತಪ್ರಯತ್ನಾಃ ॥೧೬॥**

**ಯತ್** ಯಾವ ಕಾರಣ **ಕೃತಪ್ರಯತ್ನಾಃ** ಶ್ರೀಹರಿ ಪ್ರೇರಣೆಯಿಂದ ಶ್ರವಣಾದಿ ರೂಪ ಪ್ರಯತ್ನವುಳ್ಳ, ಆದ್ದರಿಂದಲೇ **ಮಹತ್ತಮಾಃ** ಮಹಾಯೋಗಿಗಳು **ಯೇನ** ಯಾವ ಋಷಭನಿಂದ **ನಿತ್ಯಂ ಉದಸ್ತಾಂ** ಯಾವಾಗಲೂ ಪರಿತ್ಯಕ್ತವಾದ **ಯೋಗಮಾಯಾಂ** ತನ್ನ ಸ್ವರೂಪದಿಂದ ಭಿನ್ನವಾದ ಅಣಿಮಾದಿ ಯೋಗಸಿದ್ಧಿಗಳನ್ನು **ಸ್ಪೃಹಯಂತಿ** ಇಚ್ಛಿಸುವರೋ **ತತ್** ಆ ಕಾರಣ **ಅಪರಃ ಕೋ ನು** ಮತ್ತೊಬ್ಬ ಯಾವ ಯೋಗಿಯು **ಅಭವಾಯ** ಮುಕ್ತಿಗಾಗಿ ತಾನೇ (**ಅಭವಸ್ಯ** ಸಂಸಾರರಹಿತನಾದ, ನಿತ್ಯಮುಕ್ತನಾದ) **ಅಸ್ಯ** ಲೋಕ ಶಿಕ್ಷಣಕ್ಕಾಗಿ ಧರ್ಮಾಚರಣೆ ಮಾಡಿದ ಋಷಭದೇವನ **ಕಾಷ್ಠಾಂ** ಯೋಗೈಶ್ವರ್ಯದ ಉತ್ಕರ್ಷಸ್ಥಿತಿಯನ್ನು **ಮನೋರಥೇನಾಪಿ ಅನುಗಚ್ಛೇತ್** ಮನೋರಥದಿಂದಾದರು ಹೊಂದಿಯಾನು? ಯಾರೂ ಇಚ್ಛೆ ಸಹ ಮಾಡಲಾರರೆಂದರ್ಥ.

ವಿ.ವಿ:- **ಕಾಷ್ಠಾ** ಎಂಬ ಶಬ್ದಕ್ಕೆ ದಿಕ್ಕು ಅಥವಾ ಸೀಮೆ ಎಂದರ್ಥ ಪ್ರಸಿದ್ಧವಾಗಿದೆ. ಆದರೆ ಇಲ್ಲಿ **ಕಾಷ್ಠಾ** ಶಬ್ದಕ್ಕೆ ಉತ್ಕರ್ಷ ಎಂದು ಅರ್ಥ ಹೇಳಲಾಗಿದೆ. ಅದು ಹೇಗೆ ಅಂದರೆ "**ದಿಶಿ ಸ್ಥಿತೌ ತಥೋತ್ಕರ್ಷೇ ಕಾಷ್ಠಾಶಬ್ದೋಭಿಧೀಯತೇ**" ಎಂದು ಉತ್ಪಲಮಾಲಾದಲ್ಲಿ **ಕಾಷ್ಠಾ** ಶಬ್ದಕ್ಕೆ ಉತ್ಕರ್ಷ ಎಂದು ಅರ್ಥ ಹೇಳಿದ್ದರಿಂದ ಇದು ಯುಕ್ತವೇ ಆಗಿದೆ. ॥೧೬॥

### ಋಷಭದೇವನು ತನ್ನ ಯೋಗಶಕ್ತಿಯನ್ನು ತ್ಯಜಿಸಿದನೇ?

ಈ ಶ್ಲೋಕದಲ್ಲಿ ಋಷಭದೇವನು ಯೋಗ ಶಕ್ತಿಯನ್ನು ತ್ಯಜಿಸಿರುವನು ಎಂದು ಹೇಳಿದೆ. ಆದರೆ ಈ ಶಕ್ತಿಯು ಅವನ ಸ್ವರೂಪವಾದ್ದರಿಂದ ಬಿಡಲು ಸಾಧ್ಯವಿಲ್ಲ ಎಂಬ ಶಂಕೆಯನ್ನು ಪರಿಹರಿಸಲು ಯೋಗಮಾಯಾಶಬ್ದಾರ್ಥವನ್ನು ಹೇಳುವರು

ತಾತ್ಪರ್ಯ - "ಯೋಗಮಾಯಾಂ ಯೋಗಮಾಯಾಫಲಂ ಬಾಹ್ಯಂ"

ಯೋಗಮಾಯಾ ಎಂದರೆ ಯೋಗಶಕ್ತಿಯ ಫಲವಾದ ಬಾಹ್ಯ ಅಣಿಮಾದಿ ಐಶ್ವರ್ಯವೆಂದರ್ಥ ।

**ವ್ಯುದಸ್ತಾಂ** ಎಂದದ್ದರಿಂದ ಅವುಗಳ ಪ್ರಸಕ್ತಿ ಬಂತಲ್ಲ ಎಂದರೆ ಅದನ್ನು ಪರಿಹರಿಸುತ್ತ ಪ್ರಮಾಣ ಹೇಳುವರು

**ತಾತ್ಪರ್ಯ - ''ನಿತ್ಯೋದಸ್ತಾ ಯೋಗಶಕ್ತಿರನಪೇಕ್ಷ್ಯಂ ಫಲಂ ಯತಃ ।**
**ನಿತ್ಯಸ್ವರೂಪಭೂತಾಪಿ ಬಹಿಃ ಫಲವಿವರ್ಜನಾತ್ ।**
**ಅಕರ್ಮೇತ್ಯುಚ್ಯತೇ ಯದ್ವನ್ಮೋಕ್ಷಃ ಫಲವಿವರ್ಜನಾತ್ ॥''**

ಯದ್ಯಪಿ ಯೋಗಶಕ್ತಿಯು ನಿತ್ಯ ಸ್ವರೂಪವಾದುದು. ಆದರೂ ಬಾಹ್ಯಯೋಗ ಸಾಧ್ಯವಾದ ಫಲವಿಲ್ಲದಿರುವುದರಿಂದ ಅಪೇಕ್ಷ್ಯವಾದ ಅಣಿಮಾದಿ ಫಲವಿಲ್ಲ. ಆದಕಾರಣ ಯೋಗಶಕ್ತಿಯನ್ನು ನಿತ್ಯೋದಸ್ತಾ ಎಂದುದು (ಸ್ವರೂಪಭೂತ ಅಣಿಮಾದಿ ಐಶ್ವರ್ಯಗಳೂ ಇವೆ). ಹೇಗೆಂದರೆ ಮೋಕ್ಷವನ್ನು ನಿವೃತ್ತಕರ್ಮವೆಂದು ಕರೆಯುಂತೆ ಎಂದು ಭಾವ. ॥೧೬॥

**ವಿ.ವಿ:-** ನಿವೃತ್ತಕರ್ಮ ಸಾಧ್ಯವಾದರೂ ಪ್ರವೃತ್ತಕರ್ಮ ಸಾಧ್ಯವಾಗದಿದ್ದರಿಂದ ಅಕರ್ಮ ಎಂದು ಮೋಕ್ಷಕ್ಕೆ ಕರೆಯುವಂತೆ ಪರಮಾತ್ಮನ ನಿತ್ಯವಾದ ಯೋಗಶಕ್ತಿಗೆ ಸ್ವರೂಪಭೂತ ಅಣಿಮಾದಿ ಐಶ್ವರ್ಯರೂಪಫಲವಿದ್ದರೂ ಭಿನ್ನವಾದ ಅಣಿಮಾದಿ ಫಲವಿಲ್ಲದ್ದರಿಂದ ಯೋಗಶಕ್ತಿಯು ನಿತ್ಯೋದಸ್ತಾ ಎನ್ನಲ್ಪಟ್ಟಿದೆ. ॥೧೬॥

### ಋಷಭಚರಿತ್ರೆಯ ಶ್ರವಣದ ಫಲ

ಉಪಸಂಹಾರ ಮಾಡುತ್ತ ಋಷಭ ಚರಿತ್ರೆಯ ಶ್ರವಣದ ಫಲವನ್ನು ಹೇಳುವರು

**ಇತಿ ಹ ಸ್ಮ ಸಕಲಲೋಕದೇವಬ್ರಾಹ್ಮಣಗವಾಂ ಪರಮಗುರೋರ್ಭಗವತ ಋಷಭಾಖ್ಯಸ್ಯ ವಿಶುದ್ಧಾಚರಿತಂ ಪುಂಸಾಂ ಸಮಸ್ತದುಶ್ಚರಿತಾಭಿಹರಣಂ ಪರಮಮಹಾಮಂಗಲಾಯನಮಿದ ಮನುಶ್ರದ್ಧಯೋಪಚಿತಯಾಽನು-ಶೃಣೋತ್ಯಾಶ್ರಾವಯತ್ಯವಹಿತೋ ಭಗವತಿ ತಸ್ಮಿನ್ವಾಸುದೇವೇ ಏಕಾಂತತೋ ಭಕ್ತಿರನಯೋರಪಿ ಸಮನುವರ್ತತೇ ॥೧೭॥**

**ಇತಿ** ಈ ರೀತಿಯಾಗಿ **ಸಕಲಲೋಕದೇವಬ್ರಾಹ್ಮಣಗವಾಂ** ಎಲ್ಲ (ವೇದಗಳಿಗೂ) ಸಜ್ಜನರಿಗೂ, ಬ್ರಾಹ್ಮಣರಿಗೂ, ದೇವತೆಗಳಿಗೂ, ಗೋವುಗಳಿಗೂ **ಪರಮಗುರೋಃ** ಮುಖ್ಯಗುರುವಾದ **ಋಷಭಾಖ್ಯಸ್ಯ ಭಗವತಃ** ಋಷಭನೆಂಬ ಹರಿಯ **ವಿಶುದ್ಧಾಚರಿತಂ** ನಿರ್ಮಲವಾದ ಚರಿತ್ರೆಯು (ಆಚಾರಣವು), ಇದುವರೆಗೆ ಹೇಳಿದ್ದು




**ಸಮಸ್ತದುಶ್ಚರಿತಾಭಿಹರಣಂ** ಜನರ ಪಾಪಕರ್ಮಗಳ ನಾಶಕವು **ಪರಮಮಹಾ-ಮಂಗಲಾಯನಂ** ಅತ್ಯುತ್ತಮವಾದ ಮಹಾಮಂಗಳವೆಂಬ ಮೋಕ್ಷಕ್ಕೆ ಕಾರಣವು **ಇದಂ** ಇದನ್ನು **ಅನು** ಪ್ರತಿದಿನವೂ **ಉಪಚಿತಯಾ** ಅಭಿವೃದ್ಧವಾಗುವ **ಶ್ರದ್ಧಯಾ** ಶ್ರದ್ಧೆಯಿಂದ **ಅವಹಿತಃ** ಏಕಾಗ್ರ ಚಿತ್ತನಾಗಿ **ಅನುಶ್ರುಣೋತಿ** ಪುನಃ ಪುನಃ ಕೇಳುವನೋ ಮತ್ತು **ಶ್ರಾವಯತಿ** ಕೇಳಿಸುವನೋ (ಹೇಳುವನೋ) **ಅನಯೋಃ** ಇವರಿಬ್ಬರಿಗೂ **ಅಪಿ** ಪಠಿಸುವವನಿಗೂ **ಭಗವತಿ ತಸ್ಮಿನ್ ವಾಸುದೇವೇ** ಪರಮ ಪೂಜ್ಯನಾದ ಆ ವಾಸುದೇವನಲ್ಲಿ **ಏಕಾಂತತಃ** ನಿಶ್ಚಲವಾಗಿ **ಭಕ್ತಿಃ** ಭಕ್ತಿಯು **ಸಮನುವರ್ತತೇ** ಚೆನ್ನಾಗಿ ಮುಂದುವರೆಯುವುದು.

**ವಿ.ವಿ:-** ಇಲ್ಲಿ 'ಹ' 'ಸ್ಮ' ಎಂಬ ನಿಪಾತಗಳು ಹೇಳಿದ ವಿಷಯದಲ್ಲಿ ಅತಿಶಯ ಶ್ರದ್ಧೆ ಹುಟ್ಟಿಸಲು ಪ್ರಯೋಗಿಸಲ್ಪಟ್ಟಿವೆ. ।।೧೭।।

## ಏಕಾಂತಭಕ್ತಿಯ ಮಹತ್ತ್ವ

ಉತ್ಕೃಷ್ಟಭಕ್ತಿ ಇರುವವರಿಗೆ ಮೋಕ್ಷವೂ ಪರಮಪುರುಷಾರ್ಥವೆಂದು ಆದರಣೀಯವಲ್ಲವೆಂದು ಹೇಳುವರು. ಸಕಾಮ ಭಕ್ತಿಗಿಂತ ಏಕಾಂತ ಭಕ್ತಿಗೆ ಹೆಚ್ಚಿನ ಫಲವಾದ್ದರಿಂದ ಅದರಲ್ಲಿ ಆದರ ಹುಟ್ಟಿಸಲು ಹೇಳುವರು

**ಯಸ್ಯಾಮೇವ ಕವಯ ಆತ್ಮಾನಮವಿರತವಿವಿಧವೃಜಿನಸಂಸಾರಪರಿತಾ-ಪೋಪತಪ್ಯಮಾನ ಮನುಸವನಂ ಸ್ನಾಪಯಂತ(ಸ್ಥಾಪಯಂತ)ಸ್ತಯೈವ ಪರಯಾ ನಿರ್ವೃತ್ಯಾ ಹ್ಯಾಪವರ್ಗಿಕಮಾತ್ಯಂತಿಕಂ ಪರಮ ಪುರುಷಾರ್ಥಮಪಿ ಸ್ವಯಮಾಸಾದಿತಂ ನೈವಾದ್ರಿಯಂತೇ ಭಾಗವತತ್ವೇನೈವ ಪರಿಸಮಾಪ್ತ ಸರ್ವಾರ್ಥಾಃ ।।೧೮।।**

ಮೋಕ್ಷಕ್ಕೆ ಬೇರೇ ಸಾಧನಗಳೂ ಇರುವಾಗ ಭಕ್ತಿಯನ್ನೇ ವಿಶೇಷವಾಗಿ ಏಕೆ ಹೇಳುತ್ತೀರಿ ಎಂದಾಶಂಕಿಸಿ ಸಾಮಾನ್ಯ ಮುಕ್ತಿಗಿಂತ ಈ ಭಕ್ತಿಯು ಆನಂದಾತಿಶಯವನ್ನು ಮುಕ್ತಿಯಲ್ಲಿ ನೀಡುವುದೆಂದು ಹೇಳುವರು.

**ಕವಯಃ** ಜ್ಞಾನಿಗಳಾದ ಉತ್ತಮಾಧಿಕಾರಿಗಳು **ಅವಿರತವಿವಿಧವೃಜಿನಸಂಸಾರ ಪರಿತಾಪೋಪತಪ್ಯಮಾನಮನುಸವನಂ** ಯಾವಾಗಲೂ ಅನೇಕ ರೀತಿಯ ಪಾಪಗಳಿಂದ ಬಂದ ಸಂಸಾರ ದುಃಖಗಳಿಂದ ಬಳಲಿ ಬೆಂಡಾದ **ಆತ್ಮಾನಂ** ಮನಸ್ಸನ್ನು

**ಯಸ್ಯಾಂ ಏವ** ಯಾವ ಈ ಭಕ್ತಿಯಲ್ಲಿಯೇ **ಅನುಸವನಂ** ಯಾವಾಗಲೂ **ಸ್ನಾಪಯಂತಃ(ಸ್ಥಾಪಯಂತಃ)** ಸ್ನಾನಮಾಡಿಸುವವರಾಗಿ (ಇರಿಸುವವರಾಗಿ) ಭಗವದ್ಭಕ್ತರು **ತಯೈವ** ಭಕ್ತಿಯಿಂದಲೇ ಅಭಿವ್ಯಕ್ತವಾದ **ಪರಯಾ ನಿರ್ವೃತ್ಯಾ** ಸ್ವಯೋಗ್ಯಸ್ವರೂಪ ಸುಖದ ಉತ್ಕರ್ಷದಿಂದ **ಆತ್ಯಂತಿಕಂ** ಚರಮಪ್ರಸಾದದಿಂದ ಬರುವ **ಆಪವರ್ಗಿಕಂ** ಮೋಕ್ಷ ಸಂಬಂಧಿಯಾದ **ಪರಮಪುರುಷಾರ್ಥಂ ಅಪಿ** ಸ್ವಯೋಗ್ಯವಾದ ಸ್ವರೂಪಸುಖಾನುಭವವನ್ನು **ಭಾಗವತತ್ವೇನೈವ** ಭಗವದ್ಭಕ್ತ-ನಾದುದರಿಂದಲೇ **ಪರಿಸಮಾಪ್ತಸರ್ವಾರ್ಥಾಃ** ಚೆನ್ನಾಗಿ ಅಭಿವ್ಯಕ್ತವಾದ ಸ್ವಯೋಗ್ಯ ಸ್ವರೂಪಸುಖವುಳ್ಳವರು **ಸ್ವಯಮಾಸಾದಿತಂ** ಅಪ್ರಾರ್ಥಿತವಾಗಿ (ತಾನಾಗಿಯೇ) ಬಂದುದನ್ನು **ನ ಆದ್ರಿಯಂತೇ** ಆದರಿಸುವುದಿಲ್ಲ.

## ಏಕಾಂತಭಕ್ತರಿಗೆ ಸ್ವಯೋಗ್ಯ ಮೋಕ್ಷದಲ್ಲಿ ಅನಾದರವೇಕೆ?

ಮೇಲಿನ ಗದ್ಯದಲ್ಲಿ ಸ್ವಯೋಗ್ಯ ಮೋಕ್ಷದಲ್ಲಿ ಅನಾದರವನ್ನು ಹೇಳುತ್ತಾರೆ. ಅದು ಏಕೆ? ಪ್ರಯೋಜನವಿಲ್ಲದೇ ಯಾವ ಬುದ್ಧಿವಂತನೂ ಸಾಧನ ಮಾಡಲಾರನಲ್ಲ? ಎಂದರೆ ಅನಾದರದ ಫಲವನ್ನು ಪ್ರಮಾಣದಿಂದ ಹೇಳುವರು

ತಾತ್ಪರ್ಯ - ''ನಾದ್ರಿಯಂತೇ ತು ಯೇ ಮೋಕ್ಷಂ ಪೂರ್ವಂ ತೇಷಾಂ ಪರಂ ಸುಖಂ ।
ಸ್ವಯೋಗ್ಯಂ ವ್ಯಜ್ಯತೇ ಮುಕ್ತೌ ತಚ್ಚೋಕ್ತಂ ತಾರತಮ್ಯಯುಕ್''
-ಇತಿ ವ್ಯೋಮ ಸಂಹಿತಾಯಾಂ ।

ಯಾವ ಏಕಾಂತ ಭಕ್ತರು ಸಾಧನಾನುಷ್ಠಾನ ಮಾಡುವಾಗ ಪರಮಾತ್ಮನೇ ಮುಖ್ಯ ಪುರುಷಾರ್ಥನೆಂದು ತಿಳಿದು ಮುಕ್ತಿಯನ್ನು ಅಪೇಕ್ಷಿಸುವುದಿಲ್ಲವೋ ಅವರಿಗೆ ತಾರತಮ್ಯಾನುಸಾರ ಮುಕ್ತಿಯಲ್ಲಿ ಸ್ವಯೋಗ್ಯ ಸ್ವರೂಪ ಸುಖವು ಅಧಿಕವಾಗಿ ವ್ಯಕ್ತವಾಗುವುದು ಎಂದು ವ್ಯೋಮಸಂಹಿತೆಯಲ್ಲಿ ಹೇಳಿದೆ. ||೧೮||

## ಸಂಪೂರ್ಣ ಭಕ್ತಿಯೋಗ ಉತ್ತಮಾಧಿಕಾರಿಗಳಿಗೂ ದುರ್ಲಭ

ಏಕಾಂತಭಕ್ತಿಯೋಗವು ಮುಕ್ತಿಗಿಂತ ಅಧಿಕಸುಖಜನಕವಾದ್ದರಿಂದ ಮುಕ್ತಿಗಿಂತ ಹೆಚ್ಚಿನದು ಎಂದು ಹೇಳುವರು. ಸಂಪೂರ್ಣ ಭಕ್ತಿಯೋಗ ಉತ್ತಮಾಧಿಕಾರಿಗಳಿಗೂ ದುರ್ಲಭವೆಂದು ಹೇಳುವರು




**ರಾಜನ್ ಪತಿರ್ಗುರುರಲಂ ಭವತಾಂ ಯದೂನಾಂ**
**ದೇವಪ್ರಿಯಃ ಕುಲಪತಿಃ ಕ್ವ ಚ ಕಿಂಕರೋ ವಃ ।**
**ಅಸ್ತ್ವೇವಮಂಗ ಭಗವಾನ್ ಭಜತಾಂ ಮುಕುಂದೋ**
**ಮುಕ್ತಿಂ ದದಾತಿ ಕರ್ಹಿಚಿತ್ ಸ್ಮ ನ ಭಕ್ತಿಯೋಗಮ್ ॥೧೮॥**

**ರಾಜನ್** ಪರೀಕ್ಷಿತನೇ **ದೇವಪ್ರಿಯಃ** ದೇವತೆಗಳಿಗೆ ಪ್ರಿಯನಾದ ಶ್ರೀಹರಿಯು **ಭವತಾಂ** ಪಾಂಡವರಾದ ನಿಮಗೂ **ಯಾದೂನಾಂ** ಯಾದವರಿಗೂ **ಅಲಂ** ಸಂಪೂರ್ಣವಾಗಿ **ಪತಿಃ** ಪಾಲಕನು **ಗುರುಃ** ಗುರುವು **ಕುಲಪತಿಃ** ಕಾರ್ಯವನ್ನು ನಿಯಂತ್ರಿಸುವವನು. ಬಹಳವೇನು ಹೇಳುವುದು? **ಕ್ವ ಚ** ಕೆಲವು ಸಲ **ವಃ** ನಿಮಗೆ **ಕಿಂಕರಃ** ದಾಸನು **ಕ್ವ** ಆಗುವನೇ? (ಎಂದೂ ಭಾವ) **ಅಂಗ** ಮಗುವೇ **ಅಸ್ತು ಏವಂ** ಈ ರೀತಿ ಪತಿತ್ವಾದಿಗಳಿರಲಿ ಆದರೂ **ಮುಕುಂದಃ** ಮೋಕ್ಷ ಪ್ರದನಾದ **ಭಗವಾನ್** ಶ್ರೀಹರಿಯು **ಭಜತಾಂ** ಸೇವಿಸುವ ಎಲ್ಲರಿಗೂ **ಮುಕ್ತಿಂ ದದಾತಿ** ಮೋಕ್ಷವನ್ನು ಕೊಡುವನು **ಕರ್ಹಿಚಿತ್** ಎಂದೂ **ಭಕ್ತಿಯೋಗಂ** **ನ** ಸಂಪೂರ್ಣ ಭಕ್ತಿಯೋಗವನ್ನು ಬ್ರಹ್ಮದೇವರನ್ನು ಬಿಟ್ಟು ಮಿಕ್ಕವರಿಗೆ ಕೊಡಲಾರನೆಂದರ್ಥ.

## ಭಕ್ತಿಯೋಗವು ನಿರಧಿಕಾರಿಕವೇ?

ಇಲ್ಲಿ ಭಕ್ತಿಯೋಗವು ಕೊಡುವುದಿಲ್ಲ ಎಂದರೆ ಅದು ನಿರಧಿಕಾರಿಕವೆಂದಾಗುವುದು ಕಾರಣ ಅಧಿಕಾರಿಗಳನ್ನು ತಿಳಿಸುತ್ತಾ ಶ್ಲೋಕ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು

ತಾತ್ಪರ್ಯ - ''ಬ್ರಹ್ಮಣೋಽನ್ಯಸ್ಯ ನೋ ಪೂರ್ಣಾಂ ದದ್ಯಾದ್ಭಕ್ತಿಂ ಜನಾರ್ದನಃ ।
ಮುಕ್ತಿಂ ದದಾತಿ ಸರ್ವೇಷಾಂ ಉಚ್ಚಾನಾಂ ಕೊಹ್ಯಧೀಶಿತಾ ॥
-ಇತಿ ಬ್ರಹ್ಮತರ್ಕೇ''

ಎಲ್ಲ ಅಧಿಕಾರಿಗಳಿಗೆ ಭಕ್ತಿ ಮುಂತಾದ ಸಾಧನಗಳು ಮುಕ್ತಿಗಾಗಿ. ಬ್ರಹ್ಮದೇವರಿಗಾದರೋ ಭಕ್ತಿಗಾಗಿಯೇ ಮುಕ್ತಿಯು. ಇಂತಹ ಪೂರ್ಣಭಕ್ತಿಯನ್ನು ಪರಮಾತ್ಮನು ಚತುರ್ಮುಖನಿಗೆ ಮಾತ್ರ ಕೊಡುವನು. ಬೇರೆಯವರಿಗೆ ಕೊಡುವುದಿಲ್ಲ. ಎಲ್ಲರಿಗೂ ಮುಕ್ತಿಕೊಡುವನು. ಉತ್ತಮರಾದ ಮುಕ್ತರಿಗೆ ಮುಕ್ತಿಯಲ್ಲಿಯೂ ಬ್ರಹ್ಮದೇವರೇ ಪ್ರೇರಕರಾಗಿರುವರು ಎಂದು ಬ್ರಹ್ಮತರ್ಕದಲ್ಲಿದೆ. ॥೧೮॥

ಸಂಕ್ಷೇಪವಾಗಿ ಋಷಭಾವತಾರ ಕೃತ್ಯವನ್ನು ಅನುವಾದ ಮಾಡಿ ನಮಸ್ಕರಿಸುವರು

**ನಿತ್ಯಾನುಭೂತಿನಿಜಲಾಭನಿವೃತ್ತತೃಷ್ಣಃ**
**ಶ್ರೇಯಸ್ಯತದ್ರಚನಯಾ ಚಿರಸುಪ್ತಬುದ್ಧೇಃ ।**
**ಲೋಕಸ್ಯ ಯಃ ಕರುಣಯಾ ಭಯಮಾತ್ಮಲೋಕ-**
**ಮಾಖ್ಯಾನ್ನಮೋ ಭಗವತೇ ಋಷಭಾಯ ತಸ್ಮೈ ॥೨೦॥**

**ನಿತ್ಯಾನುಭೂತನಿಜಲಾಭನಿವೃತ್ತತೃಷ್ಣಃ** ಯಾವಾಗಲೂ ಅಪರೋಕ್ಷವಾದ ಸ್ವರೂಪಾನಂದದಿಂದ ದೂರ ಮಾಡಿದ ವಿಷಯಾಭಿಲಾಷೆಯುಳ್ಳ **ಯಃ** ಯಾವ ಋಷಭದೇವನು **ಕರುಣಯಾ** ದಯೆಯಿಂದ **ಶ್ರೇಯಸಿ** ಮೋಕ್ಷಸಾಧನದಲ್ಲಿ **ಅತದ್ರಚನಯಾ** ಮೋಕ್ಷವಿರುದ್ಧ ಕರ್ಮಗಳಿಂದ **ಚಿರಸುಪ್ತಬುದ್ಧೇಃ** ಅನಾದಿಕಾಲದಿಂದ ಅಜ್ಞಾನಾವೃತರಾದ **ಲೋಕಸ್ಯ** ಸಜ್ಜನರಿಗೆ **ಅಭಯಂ** ಭಯಪರಿಹಾರಕವಾದ **ಆತ್ಮಲೋಕಂ** ಶ್ರೀಹರಿಯನ್ನು ಅಪರೋಕ್ಷೀಕರಿಸಿಕೊಳ್ಳುವ ಮುಕ್ತಿಸಾಧನ ಆತ್ಮತತ್ತ್ವಜ್ಞಾನವನ್ನು **ಆಖ್ಯಾತ್** ಹೇಳಿದನೋ **ತಸ್ಮೈ ಭಗವತೇ ಋಷಭಾಯ ನಮಃ** ಅಂತಹ ಋಷಭನಾಮಕ ಭಗವಂತನಿಗೆ ನಮಸ್ಕಾರವು.

**॥ ಇಲ್ಲಿಗೆ ೬ನೇ ಅಧ್ಯಾಯವು ಮುಗಿಯಿತು ॥**

★★★




## ಆರನೇ ಅಧ್ಯಾಯದ ಸಾರ

ಪರೀಕ್ಷಿನ್ಮಹಾರಾಜನು, ಪೂಜ್ಯರೇ! ಶ್ರೀಹರಿಯ ಉಪಾಸನೆಯೇ ಯೋಗವು. ಆದರಿಂದ ಕರ್ಮಬೀಜಗಳಾದ ರಾಗದ್ವೇಷ ಮೊದಲಾದವು ಸುಟ್ಟುಹೋಗಿ ನಿರ್ವೀರ್ಯಗಳಾಗುವುವು. ಈ ಅವಸ್ಥೆಯಲ್ಲಿ ಯೋಗಿಗಳು ಶ್ರೀಹರಿಯಲ್ಲಿಯೇ ರತರಾಗಿ ಆತ್ಮಾರಾಮರೆನಿಸುವರು. ಇವರಿಗೆ ಯೋಗಸಿದ್ಧಿಗಳು ತಾವಾಗಿಯೇ ಸಿದ್ಧಿಸುವುವು. ಅವುಗಳನ್ನು ಉಪಯೋಗಿಸಿಕೊಂಡರೂ ಅವು ಈ ಯೋಗಿಗಳಿಗೆ ಮತ್ತೆ ಕ್ಲೇಶದಾಯಕಗಳಾಗಲಾರವು. ಅಲ್ಲವೇ? ಅಂದಮೇಲೆ ಋಷಭದೇವನು ಅವುಗಳನ್ನು ಅಭಿನಂದಿಸದಿರಲು ಕಾರಣವೇನು ಎಂದು ಪ್ರಶ್ನಿಸಿದನು. ಆಗ ಶುಕಾಚಾರ್ಯರು ರಾಜನೇ! ನೀನು ಹೇಳಿದ್ದು ಸರಿ. ಆದರೆ ಕೆಲವು ಮಹನೀಯರು ಮನಸ್ಸು ಸ್ವಾಧೀನದಲ್ಲಿರುತ್ತದೆ ಎಂಬುದನ್ನು ಒಪ್ಪುವುದಿಲ್ಲ. ಅದು ಸ್ವಾಭಾವಿಕವಾಗಿ ಚಂಚಲ. ಅದನ್ನು ಯೋಗೈಶ್ವರ್ಯಭೋಗದಲ್ಲಿ ತೊಡಗಿಸಿದರೆ ಆಸಕ್ತವಾಗದೇ ಇರುವುದು ಸಾಧ್ಯವಿಲ್ಲ. ಹೊಸಗಡಿಗೆಯಲ್ಲಿ ಇಟ್ಟ ನೀರು ಗಡಿಗೆಯನ್ನು ಆಕ್ರಮಿಸದೇ ಇರುವುದೇ? ಮಹಾಯೋಗಿಗಳಿಗೂ ಈ ಮನಸ್ಸಕ್ತಿಯಿಂದ ಅನರ್ಥವಿದ್ದೇ ಇದೆ. ಚಂಚಲ ಮನಸ್ಸು ತನ್ನ ಅಧೀನವೆಂದು ನಂಬಿ ಸೌಭರಿ ಮೊದಲಾದ ಯೋಗೇಶ್ವರರು ತಾವು ಬಹುಕಾಲದಿಂದ ಸಂಪಾದಿಸಿದ ತಪಸ್ಸನ್ನೇ ಕಳೆದುಕೊಂಡರು.

ಮನಸ್ಸನ್ನು ನಂಬಿದ ಯೋಗಿಯ ಮನಸ್ಸು, ಗಂಡನ ಶತ್ರುಗಳಿಗೆ ವ್ಯಭಿಚಾರಿಣಿಯು ಅವಕಾಶ ಕೊಟ್ಟಂತೆ, ಕಾಮಾದಿ ಅರಿಷಡ್ವರ್ಗಗಳಿಗೆ ಯಾವಾಗಲೂ ಅವಕಾಶ ಕೊಟ್ಟು ಆ ಯೋಗಿಯನ್ನೇ ಯೋಗಭ್ರಷ್ಟನನ್ನಾಗಿ ಮಾಡುತ್ತದೆ. ಕಾಮ, ಕ್ರೋಧ, ಮದ, ಲೋಭ, ಶೋಕ, ಮೋಹ, ಭಯ ಮೊದಲಾದವೂ, ಕರ್ಮದಿಂದ ಬರುವ ಈ ಸಂಸಾರ ಬಂಧವೂ ಮನಸ್ಸಿನ

ಮೂಲಕವೇ ಬರುವುದು. ಅಂತಹ ಮನಸ್ಸನ್ನು ಸಂನ್ಯಾಸಿಯಾದ ಋಷಭದೇವನು ತ್ಯಾಗ ಮಾಡಬಯಸಿದನು. ಅವನು ಎಲ್ಲ ಲೋಕಪಾಲಕರಿಗಿಂತ ಶ್ರೇಷ್ಠನು ಜಗದ್ವಿಲಕ್ಷಣನು. ಜಡರಂತೆ ಅವಧೂತ ವೇಷಭೂಷೆ, ಆಚರಣೆಗಳನ್ನು ತೋರುತ್ತ ತಾನು ಭಗವಂತನೆಂಬುದನ್ನು ತೋರಗೊಡಲಿಲ್ಲ. ಯೋಗಿಗಳಿಗೆ ಮೋಕ್ಷಸಾಧನೆ ಏನೆಂಬುದನ್ನು ತಿಳಿಸಲು ತಾನು ಆಚರಿಸಿ ತೋರಿಸಿದನು. ಪರಬ್ರಹ್ಮನು ತನ್ನ ಸ್ವರೂಪವೇ ಬೇರೇ ಅಲ್ಲವೆಂಬ ಮನಸ್ಸಿನಿಂದ ತನಗೂ ಬ್ರಹ್ಮನಿಗೂ ವ್ಯವಧ್ಯಾನವಿಲ್ಲದಂತೆ ಅನುಭವವುಳ್ಳವನಾಗಿ ನಿತ್ಯಮುಕ್ತನಾದ ಅವನು ವಿಷಯಗಳನ್ನು ಅನುಭವಿಸದೆ ಎಲ್ಲ ವ್ಯಾಪಾರಗಳಿಂದ ವಿರಮಿಸಿದನು. ವರ್ಣಾಶ್ರಮ ಚಿಹ್ನವಾಗಲಿ, ಲಿಂಗದೇಹ ಮುಂತಾದ ಭೌತಿಕದೇಹಗಳು ಅವನಿಗಿರಲಿಲ್ಲ. ಅವನ ದೇಹವು ಯೋಗಸಿದ್ಧಿಗಳ ಪರಾಕಾಷ್ಠೆಯನ್ನು ಹೊಂದಿತ್ತು. ಜ್ಞಾನಪ್ರಕಾಶದಿಂದ ಆ ದೇಹವು ಭೂಮಿಯನ್ನೆಲ್ಲ ಸಂಚರಿಸುತ್ತಿತ್ತು. ಒಂದು ಸಲ ಭೀಮರಥೀ ನದಿ ಪೋಷಿತ ಕಾಂಕಟಕರ್ಣಾಟಕ ದೇಶದಿಂದ ಹೊರಟು ದಕ್ಷಿಣಕರ್ಣಾಟಕ ದೇಶಕ್ಕೆ ಸ್ವೇಚ್ಛೆಯಿಂದ ಬಂದು ಆ ದೇಹವು ಕುಟಚ ಪರ್ವತದ ಕಾಡಿನಲ್ಲಿ ಇದ್ದು, ಹುಚ್ಚು ಹಿಡಿದಾಗ ಮನುಷ್ಯನು ಮಾಡುವಂತೆ ಬಾಯಲ್ಲಿ ಕಲ್ಲುಗಳ ಗ್ರಾಸವನ್ನು ಇಟ್ಟುಕೊಂಡು, ತಲೆಗೂದಲನ್ನು ಹರವಿಕೊಂಡು, ಮೈಮೇಲೆ ಬಟ್ಟೆಯಿಲ್ಲದೆಯೇ ಭೂಮಿಯನ್ನೆಲ್ಲ ಸಂಚರಿಸುತ್ತಿತ್ತು. ಸಚ್ಚಿದಾನಂದಾತ್ಮಕ ದೇಹಕ್ಕೆ ಋಷಭನಿಂದ ಭೇದವಿಲ್ಲದ್ದರಿಂದ ಋಷಭನೇ ಸಂಚರಿಸಿದನೆಂದರ್ಥ. ಸಂಚರಿಸಿದ ನಂತರ ಋಷಭದೇವನು ಕಾಡ್ಗಿಚ್ಚನ್ನು ಪ್ರವೇಶಿಸಿದನು. ಗಾಳಿಯ ವೇಗದಿಂದ ಅಲ್ಲಾಡುತ್ತಿದ್ದ ಬಿದುರುಗಳು ಒಂದಕ್ಕೊಂದು ತಿಕ್ಕುವುದರಿಂದುಂಟಾದ ಕಾಡ್ಗಿಚ್ಚು ಕುಡಿನಾಲಿಗೆಗಳಿಂದ ಅಂತರಿಕ್ಷವನ್ನೂ ಸುತ್ತಮುತ್ತ ಪ್ರದೇಶವನ್ನೂ ಆವರಿಸಿತ್ತು. ಕೇವಲ ಅಗ್ನಿಯೇ ವನವನ್ನು ಸುಟ್ಟಿದೆ ಎಂದಲ್ಲ. ತನ್ನಲ್ಲಿ ಪ್ರವೇಶಿಸಿದ ಋಷಭನ ಸಹಾಯದಿಂದ ವನವನ್ನು ಆ ವನಪ್ರದೇಶದಲ್ಲಿರುವ ಜಗತ್ತನ್ನೂ ಆ ಅಗ್ನಿಯು ಸುಟ್ಟಿತು(ಋಷಭದೇವನೇ ಅಗ್ನಿಯಿಂದ ಸುಟ್ಟನು). ಮುಂದೆ ಮತ್ತೆ ಅಗ್ನಿಯಿಂದ ವ್ಯಕ್ತನಾದ ಋಷಭದೇವನು ತನ್ನನ್ನು ತೋರಿಸಿಕೊಳ್ಳದೇ ತಾನು ವಾಸುದೇವನಾದ್ದರಿಂದ ವಾಸುದೇವನೆಂದು ಹೇಳಿಕೊಂಡನು. ಇದನ್ನು ಇವನ ಶಿಷ್ಯನಿಂದ ಕೇಳಿ ತಿಳಿದ ಕಾಂಕಟ ದಕ್ಷಿಣಕರ್ಣಾಟಕಗಳ ದೊರೆಯಾದ ಅರ್ಹನು ಋಷಭದೇವನ ಅಭಿಪ್ರಾಯ ತಿಳಿಯದೇ ಜನರಿಗೆ ನಾನೇ ದೇವರೆಂಬ ಅದ್ವೈತಮತವನ್ನು ಅಹಿಂಸಾ ಪರಮಧರ್ಮವೆಂದು ತೋರುವ ಅರ್ಹತ ಮತವನ್ನು




ತನ್ನ ಬುದ್ಧಿಗೆ ತೋರಿದಂತೆ ಹರಡಿದನು. ಕಲಿಯುಗದಲ್ಲಿ ಅಧರ್ಮವು ಹೆಚ್ಚುತ್ತಲೇ ಹೋಗುವುದು. ಅಸುರ ಜನರಿಗೆ ಪಾಪಫಲವನ್ನು ಕೊಡುವ ಶ್ರೀಹರಿಯು ಅವರನ್ನೂ ಮೋಸಗೊಳಿಸುವನು. ಈ ಮತಕ್ಕೆ ಪ್ರವರ್ತಕನಾದ ಅರ್ಹನು ಅಸುರನು. ಅವನಿಗೆ ಆನಂದಾತ್ಮಕ ಮೋಕ್ಷವಿಲ್ಲ. ಇವನು ಹಿಂದಿನ ಜನ್ಮದಲ್ಲಿ ಪೌಂಡ್ರಕನೆಂಬ ಅಸುರನು. ಈ ದುಷ್ಟಶಾಸ್ತ್ರಗಳನ್ನನುಸರಿಸಿ ಕಲಿಯುಗದಲ್ಲಿ ದುಷ್ಟಜನರು ವೇದವಿಧಿಗಳಿಂದ ದೂರರಾಗಿ ಶ್ರೀಹರಿ ಇಚ್ಛೆಯಿಂದ ಮೋಹಿತರಾಗಿ ಶೌಚಾಚಾರಗಳಿಲ್ಲದೆ ದೇವತಾತಿರಸ್ಕಾರ ರೂಪಗಳಾದ ವೇದವಿರುದ್ಧ ವ್ರತಗಳನ್ನು ಸ್ವಬುದ್ಧಿಯಿಂದ ಸರಿಯೆಂದು ತಿಳಿಯುವರು. ಅಧರ್ಮ ಭೂಯಿಷ್ಠವಾದ ಕಲಿಯುಗದ ಪ್ರಭಾವದಿಂದ ಇವರ ಬುದ್ಧಿಯೇ ಕುಂಠಿತವಾಗುವುದು. ಸ್ನಾನ, ಆಚಮನ, ಶೌಚಗಳಿಲ್ಲದ ಇವರು ಕೂದಲು ಕೀಳಿಸುವುದೇ ಮೊದಲಾದ ದುಷ್ಟ ವ್ರತಗಳನ್ನಾಚರಿಸುತ್ತ ವೇದಗಳನ್ನು, ಬ್ರಾಹ್ಮಣರನ್ನೂ ಯಜ್ಞಗಳಿಂದ ಪೂಜ್ಯನಾದ ಶ್ರೀಹರಿಯನ್ನೂ, ಸಜ್ಜನರನ್ನೂ ಬಹಳವಾಗಿ ದೂಷಿಸುವರು. ಈ ವ್ರತಗಳ ಫಲವಾಗಿಯೂ ನಾನೇ ವಾಸುದೇವನೆಂಬ ದುಷ್ಟೋಪಾಸನೆಯಿಂದಲೂ ವೇದವಿರುದ್ಧ ನೀಚ ಅಂಧಪರಂಪರೆಯಿಂದ ತಾವೇ ಅನುಸರಿಸುವ ವ್ಯವಹಾರದಿಂದ ಇವರು ಲೌಕಿಕ ವ್ಯಾಪಾರದಲ್ಲಿಯೇ ತೊಡಗುವರು. ಸಚ್ಛಾಸ್ತ್ರ ನಿಷ್ಠೆಯಿಲ್ಲದ ಈ ಆರ್ಹತರು ತಮ್ಮ ಕರ್ಮಗಳ ಫಲವಾಗಿ ನಿತ್ಯವಾದ ಅಂಧಂತಮಸ್ಸನ್ನು ಸೇರುವರು.

ಋಷಭನ ಅವತಾರವು ಕೇವಲ ಅಸುರಜನ ಮೋಹನಕ್ಕೆ ಅಲ್ಲ. ಅವನ ಪಾದಗಳನ್ನು ಆಶ್ರಯಿಸಿದ, ರಜೋಗುಣ ಕಾರ್ಯವಾದ ಜನನ ಮರಣರೂಪ ಸಂಸಾರಕ್ಲೇಶಗಳಿಂದ ನೊಂದ, ಮುಕ್ತಿಯೋಗ್ಯ ಜೀವರ ಮುಕ್ತಿಸಾಧನ ಉಪದೇಶಕ್ಕಾಗಿಯೂ ಆಗಿರುವುದು. ಇದಕ್ಕೆ ಅನುಗುಣವಾದ ಶ್ಲೋಕಗಳನ್ನು ಜ್ಞಾನಿಗಳು ಗಾನ ಮಾಡುವರು. ಸಪ್ತಸಮುದ್ರಗಳಿಂದ ಸುತ್ತುವರೆದ ಸಪ್ತದ್ವೀಪಗಳುಳ್ಳ ಭೂಮಿಯಲ್ಲಿ ಜಂಬೂದ್ವೀಪದ ಒಂಬತ್ತು ವರ್ಷ(ಖಂಡ)ಗಳಲ್ಲಿಯೂ ಭರತ ಖಂಡವೇ ಪುಣ್ಯಪಾಪಾಚರಣೆಗೆ ಯೋಗ್ಯವಾದ ಸಾಧನ ಭೂಮಿ. ಮಿಕ್ಕ ವರ್ಷಗಳು ಭೋಗ ಭೂಮಿಗಳು. ಪುಣ್ಯ ಫಲ ಭೋಗದಿಂದ ಪುಣ್ಯನಾಶವಾಗುವುದು. ಪ್ರಿಯವ್ರತರ ವಂಶದಲ್ಲಿ ಅವತರಿಸಿದ ಶ್ರೀಹರಿಯು ಮೋಕ್ಷಕ್ಕೆ ಕಾರಣವಾದ ಧರ್ಮವನ್ನು ಆಚರಿಸಿ ಜನರಿಗೆ ಉಪದೇಶಿಸಿರುವನು. ಇಂತಹ ಪುರಾಣ ಪುರುಷನು ಅವತರಿಸಿದ ಈ ವಂಶವು ಕೀರ್ತಿಯಿಂದ ವಿಶುದ್ಧವಾದುದು. ಈ ಋಷಭನು,

ಯೋಗಶಕ್ತಿಗಳು ತನ್ನ ಸ್ವರೂಪಗಳೇ ಆಗಿದ್ದರೂ ಅದರಿಂದ ಬಾಹ್ಯವಾದ ಫಲವನ್ನು ಅಪೇಕ್ಷಿಸದಿರುವುದರಿಂದ ಯಾವಾಗಲೂ ಅವುಗಳನ್ನು ಪರಿತ್ಯಜಿಸಿರುವನು. ಇಂತಹ ಯೋಗ ಸಿದ್ಧಿಗಳನ್ನು ಸಾಧನದಲ್ಲಿ ತೊಡಗಿದ ಮಹನೀಯರು ಆಶಿಸುವರು. ಅಂದಮೇಲೆ ಋಷಭದೇವನೊಬ್ಬನನ್ನು ಬಿಟ್ಟು ಯಾವ ಯೋಗಿಯು ತಾನೇ ಆ ಮಹನೀಯನ ಅತ್ಯುತ್ತಮ ಸ್ಥಿತಿಯನ್ನು ಮೋಕ್ಷಕ್ಕಾಗಿ ಮನಸ್ಸಿನಿಂದಲಾದರೂ ಬಯಸಬಲ್ಲನು?

ಶ್ರೀ ಋಷಭದೇವನು ಸಮಸ್ತ ವೇದಗಳಿಗೂ, ಸಜ್ಜನರಿಗೂ, ಬ್ರಾಹ್ಮಣರಿಗೂ, ಗೋವುಗಳಿಗೂ ಗುರುವು. ಅವನ ಚರಿತ್ರೆ ವಿಶುದ್ಧವಾದುದು. ಭಕ್ತರ ಪಾಪಗಳನ್ನು ಹೋಗಲಾಡಿಸುವುದು. ಮಹಾಮಂಗಳಕರವಾದ ಮೋಕ್ಷವನ್ನು ತಂದುಕೊಡುವುದು. ಇದು ಶ್ರೇಯಃಸಾಧನವೆಂದು ದಿನದಿನಕ್ಕೂ ಹೆಚ್ಚು ಭಕ್ತಿಯಿಂದ ಹೇಳುವ ಅಥವಾ ಕೇಳುವ, ಪಠನ ಮಾಡುವ ಅಧಿಕಾರಿ ಚೇತನರಿಗೆ ಶ್ರೀಹರಿಯಲ್ಲಿ ಭಕ್ತಿಯು ದೃಢತರವಾಗಿ ಬೆಳೆಯುವುದು. ಉತ್ತಮಾಧಿಕಾರಿಗಳೂ ಅನೇಕ ಬಗೆಯ ಪಾಪಗಳ ಫಲವಾಗಿ ಸಾಂಸಾರಿಕ ದುಃಖಗಳಿಗೆ ಗುರಿಯಾಗುವರು. ಈ ದುಃಖಗಳಿಂದ ನೊಂದ ಮನಸ್ಸನ್ನು ಅವರು ಯಾವಾಗಲೂ ಭಕ್ತಿಯಲ್ಲಿ ನೆಲೆಸುವಂತೆ ಮಾಡುವರು. ಇದರಿಂದ ಅವರು ಶ್ರೀಹರಿಗೆ ವಿಶೇಷ ಪ್ರಿಯರು. ಇದರಿಂದ ಅವರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಪೂರ್ಣಸುಖವು ಅಭಿವ್ಯಕ್ತವಾಗುವುದು. ಹೀಗೆ ಸ್ವರೂಪ ಸುಖಾನುಭವವುಳ್ಳ ಅವರು ಶ್ರೀಹರಿಯ ಚರಮಪ್ರಸಾದ ಫಲವಾಗಿ ಭಕ್ತರ ಪ್ರಾರ್ಥನೆಯಿಲ್ಲದೇ ಕೊಡುವ ಮುಕ್ತಿಯನ್ನೂ ಅಪೇಕ್ಷಿಸುವುದೇ ಇಲ್ಲ. ಮುಕ್ತಿಯನ್ನು ಬಯಸದೇ ಕೇವಲ ಭಕ್ತಿಗಾಗಿ ಭಕ್ತಿಯನ್ನು ಮಾಡುವ ಏಕಾಂತ ಭಕ್ತರಿಗೆ ಮೋಕ್ಷದಲ್ಲಿ ಆನಂದಾತಿಶಯವಾಗುವುದು ಎಂದು ಶಾಸ್ತ್ರಗಳು ಹೇಳುವುವು. ರಾಜನೇ! ದೇವತೆಗಳಿಗೂ ಪ್ರಿಯವಾದ ಯಾದವ ಕುಲಕ್ಕೆ ಅಧಿಪತಿಯಾದ ಶ್ರೀಹರಿಯು ನಿಮ್ಮನ್ನು ಸರ್ವರೀತಿಯಿಂದಲೂ ಕಾಪಾಡಿರುವನು. ಅರ್ಜುನಾದಿಗಳಿಗೆ ಉಪದೇಶಿಸಿ ನಿಮಗೆ ಗುರುವಾಗಿರುವನು. ಅವನು ನಿಮ್ಮ ಕಿಂಕರನೆಂಬುದು ಎಂದೂ ಒಪ್ಪತಕ್ಕದ್ದಲ್ಲ. ಇರಲಿ. ಮೋಕ್ಷಪ್ರದನಾದ ಶ್ರೀಹರಿಯು ತನ್ನನ್ನು ಭಜಿಸುವ ಮುಕ್ತಿಯೋಗ್ಯ ಜೀವರಿಗೆಲ್ಲರಿಗೂ ಮೋಕ್ಷ ಕೊಡುವನು. ಆದರೆ ಎಂದೂ ಬ್ರಹ್ಮದೇವರನ್ನು ಬಿಟ್ಟು ಮಿಕ್ಕ ಜೀವರಿಗೆ ಸಂಪೂರ್ಣ ಭಕ್ತಿಯನ್ನು ದಯಪಾಲಿಸುವುದಿಲ್ಲ. ಶ್ರೀಹರಿಯ ಅವತಾರವಾದ ಋಷಭದೇವನು ಯಾವಾಗಲೂ ತನ್ನ ಸ್ವರೂಪಭೂತ ಆನಂದದ

 

ಅನುಭವವುಳ್ಳವನು. ಆದ್ದರಿಂದಲೇ ಅವನಿಗೆ ಮತ್ತೊಂದರ ಆಸೆಯಿಲ್ಲ. ಅನಾದಿಯಿಂದ ಅಜ್ಞಾನ ವಿಶಿಷ್ಟರಾದ ಶ್ರೇಯಸ್ಸಿಗೆ ವಿರುದ್ಧ ಕರ್ಮಗಳನ್ನು ಆಚರಿಸುತ್ತಾ ಮೋಕ್ಷಸಾಧನೆಯನ್ನರಿಯದ ಯೋಗಿಜೀವರ ಮೇಲಿನ ಕರುಣೆಯಿಂದ ಅವನು ಆತ್ಮತತ್ತ್ವಜ್ಞಾನವನ್ನು ಉಪದೇಶಿಸಿದನು. ಇದು ಸಂಸಾರ ಭಯವನ್ನು ಹೋಗಲಾಡಿಸಿ ಶ್ರೀಹರಿಯ ಅಪರೋಕ್ಷವನ್ನು ತಂದುಕೊಡುವುದು. ಇಂತಹ ಆತ್ಮತತ್ತ್ವೋಪದೇಶಕನಾದ ಋಷಭರೂಪಿ ಶ್ರೀಹರಿಗೆ ನಮಸ್ಕಾರವು.

|| ★★★ ||



## ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
## ಸಪ್ತಮೋಽಧ್ಯಾಯಃ

**ಈ ಅಧ್ಯಾಯದಲ್ಲಿ ...**

ಈ ಅಧ್ಯಾಯದಲ್ಲಿ ಋಷಭಪುತ್ರನಾದ ಭರತನ ಚರಿತ್ರೆ ಹೇಳುವರು. ಭರತನು ಅನೇಕ ಯಾಗಗಳಿಂದ ಯಜ್ಞೇಶ್ವರನಾದ ವಾಸುದೇವನ ಆರಾಧನ ಮಾಡುವುದು. ನಂತರ ತನ್ನ ಮಕ್ಕಳಿಗೆ ರಾಜ್ಯವನ್ನಿತ್ತು ಪುಲಹಾಶ್ರಮಕ್ಕೆ ಹೋಗಿ ತಪಸ್ಸು ಮಾಡುವುದನ್ನು ಹೇಳುವರು.

### ಭರತನ ಚರಿತ್ರೆ

ಶ್ರೀಹರಿಯಲ್ಲಿ ಸುದೃಢ ಭಕ್ತಿಯನ್ನು ಹುಟ್ಟಿಸಲು ಹರಿಭಕ್ತಶ್ರೇಷ್ಠನಾದ ಭರತ ಚಕ್ರವರ್ತಿಯ ಚರಿತ್ರೆಯನ್ನು ಹೇಳಲಾರಂಭಿಸುವರು.

**ಶ್ರೀಶುಕ ಉವಾಚ-**

**ಭರತಸ್ತು ಮಹಾಭಾಗವತೋ ಯದಾ ಭಗವತಾಽವನಿತಲಪರಿಪಾಲನಾಯ ಸಂಚಿಂತಿತಃ ತದನುಶಾಸನಪರಃ ಪಂಚಜನೀಂ ವಿಶ್ವರೂಪದುಹಿತರಮುಪಯೇಮೇ ॥೧॥**

**ಮಹಾಭಾಗವತಃ** ಪರಮ ಭಗವದ್ಭಕ್ತನಾದ **ಭರತಸ್ತು** ಭರತನಾದರೂ **ಯದಾ** ಯಾವಾಗ **ಭಗವತಾ** ಋಷಭನಾಮಕ ಶ್ರೀಹರಿಯಿಂದ **ಅವನಿತಲಪರಿಪಾಲನಾಯ** ಭೂತಲ ರಕ್ಷಣೆಗಾಗಿ **ಸಂಚಿಂತಿತಃ** ಇತರರೊಡನೆ ಆಲೋಚಿಸಿ ಪಟ್ಟಾಭಿಷೇಕ ಮಾಡಲ್ಪಟ್ಟನೋ ಆಗ **ತದನುಶಾಸನಪರಃ** ಅವನ ಆಜ್ಞಾ ಪರಿಪಾಲನೆ

 

ಮಾಡುವವನಾಗಿ **ವಿಶ್ವರೂಪದುಹಿತರಂ** ವಿಶ್ವರೂಪನಮಗಳಾದ **ಪಂಚಜನೀಂ** ಪಂಚಜನೀ ಎಂಬುವಳನ್ನು **ಉಪಯೇಮೇ** ಮದುವೆಯಾದನು. ||೧||

**ತಸ್ಯಾಮು ಹ ವಾ ಆತ್ಮಜಾನ್ ಕಾರ್ತ್ಸ್ನ್ಯೇನ ಅನುರೂಪಾನ್ ಆತ್ಮನಃ |**
**ಪಂಚ ಜನಯಾಮಾಸ ಭೂತಾದಿರಿವ ಭೂತಸೂಕ್ಷ್ಮಾಣಿ ||೨||**

**ಸುಮತಿಂ ರಾಷ್ಟ್ರಭೃತಂ ಸುದರ್ಶನಮಾವರಣಂ ಧೂಮ್ರಕೇತುಮಿತಿ ಅಂಜನಾಭಂ ನಾಮ್ನೈತದ್ವರ್ಷಂ ಭಾರತಮಿತಿ ಯತ ಆರಭ್ಯ ವ್ಯಪದಿಶಂತಿ ||೩||**

**ತಸ್ಯಾಂ** ಅವಳಲ್ಲಿ **ಕಾರ್ತ್ಸ್ನ್ಯೇನ** ಎಲ್ಲ ಗುಣಗಳಿಂದ **ಆತ್ಮನಃ** ತನಗೆ **ಅನುರೂಪಾನ್** ಸದೃಶರಾದ **ಸುಮತಿಂ ರಾಷ್ಟ್ರಭೃತಂ ಸುದರ್ಶನಂ ಆವರಣಂ ಧೂಮ್ರಕೇತುಂ ಇತಿ** ಸುಮತಿ, ರಾಷ್ಟ್ರಭೃತ, ಸುದರ್ಶನ, ಆವರಣ, ಧೂಮ್ರಕೇತು ಎಂಬ **ಪಂಚ** ಐದು **ಆತ್ಮಜಾನ್** ಮಕ್ಕಳನ್ನು **ಜನಯಾಮಾಸ** ಹುಟ್ಟಿಸಿದನು. ಇದಕ್ಕೆ ದೃಷ್ಟಾಂತ **ಭೂತಾದಿಃ** ತಾಮಸ ಅಹಂಕಾರವು ಶ್ರೀಹರಿಯಿಂದ ಪ್ರೇರಿತವಾಗಿ **ಭೂತಸೂಕ್ಷ್ಮಾಣಿ ಇವ** ಭೂತಸೂಕ್ಷ್ಮಗಳನ್ನು ಹುಟ್ಟಿಸಿದಂತೆ (ಇಲ್ಲಿ ಐದು ಸಂಖ್ಯೆ ಅಥವಾ ಸಂತತಿ ವೃದ್ಧಿಯಲ್ಲಿ ಭೂತವನ್ನಾಗಿ ದೃಷ್ಟಾಂತ. ಚೇತನರಾದ ಭರತರಿಗೆ ಚೇತನ ದೃಷ್ಟಾಂತ ಕೊಡುವುದಾದರೆ ಅಭಿಮಾನಿ ದೇವತೆಗಳನ್ನು ದೃಷ್ಟಾಂತ ಮಾಡಬೇಕು) **ಆಂಜನಾಭಂ ಏತದ್ವರ್ಷಂ** ಅಂಜನ ಕಾಡಿಗೆಯಂತೆ ನೀಲವರ್ಣನಾದ ಋಷಭದೇವನ ಸಂಬಂಧಿಯಾದ್ದರಿಂದ ಆಂಜನಾಭವೆನಿಸಿದ ಈ ಭೂಖಂಡವನ್ನು **ಯತಃ ಆರಭ್ಯ** ಯಾವ ಈ ಭರತರಿಂದ ಆರಂಭಿಸಿ **ಭಾರತಂ ಇತಿ ವ್ಯಪದಿಶಂತಿ** ಭಾರತವೆಂದು ಕರೆಯುವರು.

ತಾಮಸ ಅಹಂಕಾರವು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಮಾತ್ರಾ ಸೂಕ್ಷ್ಮಗಳಿಗೆ ಉಪಚಾಯಕವಾಗಿ ಮಾತ್ರಾಗಳಾಗಿ ಮಾತ್ರಾಗಳಿಂದ ಭೂತಸೂಕ್ಷ್ಮಗಳು ಉಪಚಯ ಹೊಂದಿ ಭೂತಗಳಾಗುವುವು ಎಂದು ತೃತೀಯಸ್ಕಂಧದ ನಿರವಕಾಶ ವಾಕ್ಯಾನುಸಾರ ತಿಳಿಯಬೇಕು. ಭೂತಸೂಕ್ಷ್ಮಗಳೇ ತನ್ಮಾತ್ರಾಗಳಲ್ಲ. ನೋಡಿ ಚಿತ್ರ ೧ ||೩||

**ಸ ಹಿ ಬಹುವಿತ್ ಮಹೀಪತಿಃ ಪಿತೃಪಿತಾಮಹವದುರುವತ್ಸಲತಯಾ ಸ್ವೇ ಸ್ವೇ ಕರ್ಮಣಿ ವರ್ತಮಾನಾಃ ಪ್ರಜಾಃ (ಸ್ವಧರ್ಮಮನುವರ್ತಮಾನಃ) ಪರ್ಯಪಾಲಯತ್ ||೪||**




**ಮಹೀಪತಿಃ** ರಾಜನಾದ **ಸ ಹಿ** ಆ ಭರತನು **ಬಹುವಿತ್** ಎಲ್ಲ ಶಾಸ್ತ್ರಗಳ ರಹಸ್ಯವನ್ನು ತಿಳಿದವನು **ಪಿತೃಪಿತಾಮಹವತ್** ತಂದೆ ತಾತಂದಿರಂತೆ **ಉರುವತ್ಸಲತಯಾ** ಬಹಳ ವಾತ್ಸಲ್ಯದಿಂದ **ಸ್ವೇ ಸ್ವೇ ಕರ್ಮಣಿ ವರ್ತಮಾನಾಃ ಪ್ರಜಾಃ** ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳಲ್ಲಿ ನಿರತರಾದ ಪ್ರಜೆಗಳನ್ನು (**ಸ್ವಧರ್ಮಂ ಅನುವರ್ತಮಾನಃ** ತನ್ನ ಧರ್ಮವನ್ನು ಪರಿಪಾಲಿಸುತ್ತ) **ಪರ್ಯಪಾಲಯತ್** ಎಲ್ಲ ರೀತಿಯಿಂದ ಕಾಪಾಡಿದನು. ।।೪।।

**ಈಜೇ ಚ ಭಗವಂತಂ ಯಜ್ಞಪುರುಷಂ ಕ್ರತುಭಿಃ ಉಚ್ಚಾವಚೈಃ ಶ್ರದ್ಧಯಾಽಹಿತಾಗ್ನಿರಗ್ನಿ ಹೋತ್ರದರ್ಶಪೂರ್ಣಮಾಸಚಾತುರ್ಮಾಸ್ಯ-ಪಶುಸೋಮಾನಾಂ ಪ್ರಕೃತಿವಿಕೃತಿಭಿರನುಸವನಂ ಚಾತುರ್ಹೋತ್ರವಿಧಿನಾ ॥೫॥**

**ಆಹಿತಾಗ್ನಿಃ** ಅಗ್ನಿಯನ್ನು ಪ್ರತಿಷ್ಠಿಸಿದ ಆ ಭರತನು **ಶ್ರದ್ಧಯಾ** ಶ್ರದ್ಧೆಯಿಂದ **ಚಾತುರ್ಹೋತ್ರವಿಧಿನಾ** ನಾಲ್ಕು ಹೋತೃಗಳು ಇರುವ ಕರ್ಮದಲ್ಲಿ ಏನು ವಿಧಿ ಯುಂಟೋ ಆ ಪ್ರಕಾರವಾಗಿ **ಅಗ್ನಿಹೋತ್ರ, ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶುಸೋಮಾನಾಂ** ಪಶುಗಳನ್ನು ಹೋಮಿಸುವ ಮತ್ತು ಸೋಮರಸವನ್ನು ಹೋಮಿಸುವ ಯಾಗಗಳು **ಪ್ರಕೃತಿ** ಎಲ್ಲ ಅಂಗ ವಿಧಾನಗಳಿಂದ ಕೂಡಿದ ಮತ್ತು **ವಿಕೃತಿ** ಕೆಲವು ಅಂಗ ವಿಧಾನಗಳಿಂದ ಹೀನವಾದ ಯಾಗಗಳೆಂಬ **ಉಚ್ಚಾವಚೈಃ ಕ್ರತುಭಿಃ** ದೊಡ್ಡ ಮತ್ತು ಸಣ್ಣ ಯಾಗಗಳಿಂದ **ಅನುಸವನಂ** ಎಲ್ಲಕಾಲವೂ ಅಥವಾ ಆ ಆ ಯೋಗ್ಯಕಾಲದಲ್ಲಿ **ಯಜ್ಞಪುರುಷಂ ಭಗವಂತಂ ಈಜೇ** ಯಜ್ಞನಿಯಾಮಕನಾದ ಶ್ರೀಹರಿಯನ್ನು ಉದ್ದೇಶಿಸಿ ಯಾಗ ಮಾಡಿದನು. ॥೫॥

ಅಗ್ನಿಹೋತ್ರ ಮೊದಲಾದವು ಪ್ರಕೃತಿಯಾಗಗಳೆಂದು, ಪಶುಸೋಮಯಾಗಗಳು ವಿಕೃತಿಯಾಗಗಳೆಂದು ಕೆಲವರು ಹೇಳುವರು. ಅಗ್ನಿಹೋತ್ರಾದಿಗಳೇ ಪ್ರಕೃತಿವಿಕೃತಿಗಳೆಂದು ಎರಡು ವಿಧ ಎಂದು ಕೆಲವರು. ॥೫॥

**ಸಂಪ್ರಚರತ್ಸು ನಾನಾಯಾ(ಯೋ)ಗೇಷು ವಿರಚಿತಾಂಗಕ್ರಿಯೇಷು ಅಪೂರ್ವಂ ಯತ್ ತತ್ ಕ್ರಿಯಾಫಲಂ ಧರ್ಮಾಖ್ಯಂ ಪರಬ್ರಹ್ಮಣಿ ಯಜ್ಞಪುರುಷೇ ಸರ್ವದೇವತಾಲಿಂಗಾನಾಂ ಮಂತ್ರಾಣಾಮರ್ಥನಿಯಾಮಕತಯಾ ಸಾಕ್ಷಾತ್ ಕರ್ತರಿ ಪರದೇವತಾಯಾಂ ಭಗವತಿ ವಾಸುದೇವ ಏವ ಭಾವಯಮಾನೇ (ಭಾವಯಾನ) ಆತ್ಮನೈಪುಣ್ಯಮೃದಿತಕಷಾಯೋ ಹವಿಃಷ್ವಧ್ವರ್ಯುಭಿರ್ಗೃಹ್ಯಮಾಣೇಷು ಸ ಯಜಮಾನೋ ಯಜ್ಞಭಾಜೋ ದೇವಾಂಸ್ತಾನ್ ಪುರುಷಾವಯವೇಷು ಅಧ್ಯಭಾವಯತ್ ॥೬॥**

ವಿರಚಿತ **ಅಂಗಕ್ರಿಯೇಷು** ಅಂಗಕ್ರಿಯೆಗಳನ್ನು ಮಾಡಿದ **ನಾನಾ ಯೋಗೇಷು** ದೇವತಾಧ್ಯಾನ ಮೊದಲಾದ ಉಪಾಯ ಸಾಧ್ಯಗಳಾದ **ಯಾಗೇಷು** ಯಾಗಗಳು (**ಯೋಗೇಷು** ಎಂದೂ ಪಾಠವಿದೆ) **ಸಂಪ್ರಚರತ್ಸು** ಚೆನ್ನಾಗಿ ನಡೆಯುತ್ತಿರಲು **ಯತ್**

ಯಾವ **ಧರ್ಮಾಖ್ಯಂ** ಧರ್ಮವೆಂಬ(ಪುಣ್ಯವೆಂಬ) **ಕ್ರಿಯಾಫಲಂ** ಯಾಗರೂಪಕರ್ಮದ ಫಲವಾದ **ಅಪೂರ್ವಂ** ಅದೃಷ್ಟವೇನಿದೆಯೋ **ತತ್** ಅದನ್ನು **ಸರ್ವದೇವತಾ-ಲಿಂಗಾನಾಂ** ಎಲ್ಲ ದೇವತೆಗಳನ್ನು ತಿಳಿಸುವ ಲಿಂಗ (ಅಸಾಧಾರಣಧರ್ಮ) ಗಳಿಂದ ಕೂಡಿದ **ಮಂತ್ರಾಣಾಂ** ಮಂತ್ರಗಳ **ಅರ್ಥನಿಯಾಮಕತಯಾ** ವಜ್ರಧರತ್ವ, ಐಶ್ವರ್ಯ ಮುಂತಾದ ಪ್ರವೃತ್ತಿ ನಿಮಿತ್ತಗಳಿಗೆ ಪ್ರೇರಕನಾದ್ದರಿಂದ **ಸಾಕ್ಷಾತ್ ಕರ್ತರಿ** ಮುಖ್ಯ ಕರ್ತೃವಾದ **ಪರದೇವತಾಯಾಂ** ಸರ್ವೋತ್ತಮ ದೇವತೆಯಾದ **ಪರಬ್ರಹ್ಮಣಿ** ಪರಬ್ರಹ್ಮನೆನಿಸಿದ **ಯಜ್ಞಪುರುಷೇ** ಯಜ್ಞನಿಯಾಮಕನಾದ **ವಾಸುದೇವೇ ಏವ ಭಾವಯಾನಃ** ವಾಸುದೇವನ ಅಧೀನವೆಂದು ಚಿಂತಿಸಿ ಸಮರ್ಪಿಸಿ **ಆತ್ಮನೈಪುಣ್ಯ** ಈ ರೀತಿ ಅನುಸಂಧಾನ ಮಾಡುವುದೆಂಬ ತಮ್ಮ ಕೌಶಲ್ಯದಿಂದ **ಮೃದಿತ** ನಾಶವಾದ **ಕಷಾಯಃ** ಪಾಪವುಳ್ಳ **ಯಜಮಾನಃ ಸಃ** ಯಜಮಾನನಾದ ಭರತನು **ಅಧ್ವರ್ಯುಷು** ಅಧ್ವರ್ಯುಗಳು (ಅನೇಕ ಯಾಗಾಭಿಪ್ರಾಯದಿಂದ ಬಹುವಚನ) **ಹವಿಸ್ಸು ಗೃಹೀತೇಷು** ಹೋಮಮಾಡಲು ಹವಿಸ್ಸನ್ನು ಸ್ವೀಕರಿಸಿದಾಗ **ಯಜ್ಞಭಾಜಃ** ಹವಿಸ್ಸಿಗೆ ಭಾಗಿಗಳಾದ **ತಾನ್ ದೇವಾನ್** ಸೂರ್ಯಾದಿದೇವತೆಗಳನ್ನು **ಪುರುಷಾವಯವೇಷು ಅಧಿ** ಶ್ರೀಹರಿಯ ಅವಯವಗಳಿಂದ ಜನಿಸಿದವರು ಅವಯವವನ್ನೇ ಆಶ್ರಯಿಸಿ ಇರುವವರು ಸ್ವತಂತ್ರರಲ್ಲ ಎಂದು **ಅಭಾವಯತ್** ಚಿಂತಿಸಿದನು. ಯಜಮಾನ, ಋತ್ವಿಕ್, ದ್ರವ್ಯ, ಮಂತ್ರ, ದೇವತಾ ಮುಂತಾದವುಗಳ ಪ್ರೇರಕನಾದ್ದರಿಂದ ಶ್ರೀಹರಿಯೇ ಮುಖ್ಯ ಕರ್ತನು ನಾನಲ್ಲವೆಂದು ಭಾವಿಸಿದನೆಂದು ಭಾವ. ಯಜ್ಞಭಾಗಿಗಳಾದ ದೇವತೆಗಳನ್ನು ಪೂಜ್ಯರೆಂದು ಚಿಂತಿಸದೇ ಯಜ್ಞವು ಸಾಂಗವಾಗದು ಕಾರಣ ಅವರನ್ನು ಶ್ರೀಹರಿ ಅವಯವಾಶ್ರಿತರೆಂದು ಚಿಂತಿಸಿದನು. ॥೬॥

ಕರ್ಮದಿಂದ ಸಾಧಿಸಿದ ಫಲವನ್ನು ಹೇಳುತ್ತಾರೆ

**ಏವಂ ಕರ್ಮವಿಶುದ್ಧಸತ್ವಸ್ಯಾಂತರ್ಹೃದಯ ಆಕಾಶಶರೀರೇ ಬ್ರಹ್ಮಣಿ ಭಗವತಿ ವಾಸುದೇವೇ ಮಹಾಪುರುಷೋಪಲಕ್ಷಣೈಃ ಶ್ರೀವತ್ಸಕೌಸ್ತುಭವನಮಾಲಾರಿದರ ಗದಾದಿಭಿರುಪಲಕ್ಷಿತೇ ನಿಜಪುರುಷಹೃದುಲ್ಲಿಖಿತೇನಾತ್ಮನಾತ್ಮನಿ ಪುರುಷರೂಪೇಣ ವಿರೋಚಮಾನ ಉಚ್ಚೈಸ್ತರಾಂ ಭಕ್ತಿರನುದಿನಮೇಧಮಾನರಯಾऽಜಾಯತ ॥೭॥**




ಏವಂ ಮೇಲೆ ಹೇಳಿದ ಅನುಸಂಧಾನ ಪೂರ್ವಕ ಮಾಡಿದ **ಕರ್ಮವಿಶುದ್ಧಸತ್ವಸ್ಯ** ಕರ್ಮಗಳ ವಿಶೇಷ ಶುದ್ಧತೆಯಿಂದ ಅತ್ಯಂತ ಶುದ್ಧವಾದ ಮನಸ್ಸುಳ್ಳ **ಅಂತರ್ಹೃದಯೇ** ಹೃದಯದಲ್ಲಿರುವ **ಆಕಾಶಶರೀರೇ** ಸುತ್ತಲೂ ಪ್ರಕಾಶಮಾನವಾದ ಶರೀರದಲ್ಲಿ **ಬ್ರಹ್ಮಣಿ** ಗುಣಪೂರ್ಣನಾದ **ಮಹಾಪುರುಷೋಪಲಕ್ಷಣೈಃ** ಇವನೇ ನಾರಾಯಣನೆಂದು ತಿಳಿಸಿಕೊಡುವ **ಶ್ರೀವತ್ಸ ಕೌಸ್ತುಭ ವನಮಾಲಾ ಅರಿ** ಚಕ್ರ **ದರ** ಶಂಖ **ಗದಾದಿಭಿಃ** ಗದೆ ಮುಂತಾದವುಗಳಿಂದ **ಉಪಲಕ್ಷಿತೇ** ಇತರವ್ಯಾವೃತ್ತವಾಗಿ ತಿಳಿದ **ನಿಜಪುರುಷ-ಹೃದುಲ್ಲಿಖಿತೇನ** ತನ್ನ ಭಕ್ತರು ಹೃದಯದಲ್ಲಿ ಉತ್ಕೃಷ್ಟನೆಂದು ಧ್ಯಾನ ಮಾಡಿದ **ಆತ್ಮನಾ** ಸ್ವರೂಪದಿಂದ **ಆತ್ಮನಿ** ತನ್ನಲ್ಲಿರುವ **ಪುರುಷರೂಪೇಣ ವಿರೋಚಮಾನೇ** ಪುರುಷರೂಪದಿಂದ ತೋರುತ್ತಿರುವ (ಯಾವ ರೀತಿ ಪುರುಷರೂಪವನ್ನು ಭಕ್ತರು ಧ್ಯಾನ ಮಾಡುವರೋ ಅದೇ ರೀತಿಯ ತನ್ನಲ್ಲಿರುವ ರೂಪದಿಂದ ಕಾಣುವ ಎಂದರ್ಥ. ಇದರಿಂದ ಅವರ ಉಪಾಸನೆ ಮಿಥ್ಯಾ ಅಲ್ಲವೆಂದು ತಿಳಿಯುವುದು) **ವಾಸುದೇವೇ ಭಗವತಿ** ವಾಸುದೇವರೂಪಿ ಶ್ರೀಹರಿಯಲ್ಲಿ **ಅನುದಿನಂ** ಪ್ರತಿದಿನವೂ **ಏಧಮಾನರಯಾ** ಹೆಚ್ಚುತ್ತಿರುವ ವೇಗವುಳ್ಳ **ಉಚ್ಚೈಸ್ತರಾಂ** ಅತಿಶಯ ಉತ್ಕೃಷ್ಟವಾದ **ಭಕ್ತಿಃ** ಭಕ್ತಿಯು **ಅಜಾಯತ** ಉಂಟಾಯಿತು. ।।೭।।

ವೈರಾಗ್ಯದಿಂದ ಅರಣ್ಯಕ್ಕೆ ಹೋಗಿದ್ದನ್ನು ಹೇಳುವರು

**ಏವಂ ವರ್ಷಾಯುತಸಹಸ್ರಪರ್ಯಂತಾವಸಾನಾವಸಿತಕರ್ಮನಿರ್ವಾಣಾ-ವಸರೋಽಧಿಭುಜ್ಯಮಾನಂ ಸ್ವತನಯೇಭ್ಯೋ ರಿಕ್ಥಂ ಪಿತೃಪೈತಾಮಹಂ ಯಥಾದಾಯಂ ವಿಭಜ್ಯ ಸ್ವಯಂ ಸಕಲಸಂಪನ್ನಿಕೇತಾತ್ ಸ್ವನಿಕೇತನಾತ್ ಪುಲಹಾಶ್ರಮಂ ಪ್ರವವ್ರಾಜ । ಯತ್ರ ಹ ವಾವ ಭಗವಾನ್ ಹರಿಃ ಅದ್ಯಾಪಿ ತತ್ರತ್ಯಾನಾಂ ನಿಜಜನಾನಾಂ ವಾತ್ಸಲ್ಯೇನ ಸನ್ನಿಧಾಪ್ಯತೇ ಇಚ್ಛಾರೂಪೇಣ ।।೮।।**

ಏವಂ ಈ ರೀತಿಯಾಗಿ **ವರ್ಷಾಯುತಸಹಸ್ರ ಪರ್ಯಂತಾವಸಾನಾವಸಿತ-ಕರ್ಮನಿರ್ವಾಣಾವಸರಃ** ಹತ್ತುಸಾವಿರ ವರ್ಷಗಳ ಸಾವಿರದ ಕೊನೆಯಲ್ಲಿ ಅಂದರೆ ಒಂದುಕೋಟಿ ವರ್ಷದ ನಂತರ ರಾಜ್ಯ ಭೋಗಕ್ಕೆ ಕಾರಣವಾದ ಪ್ರಾರಬ್ಧ ಕರ್ಮನಾಶವಾಗಿದೆ ಎಂಬ ನಿಶ್ಚಯವುಳ್ಳ ಭರತರಾಜನು **ಭುಜ್ಯಮಾನಂ** ಅನುಭವಿಸುತ್ತಿರುವ **ಪಿತೃಪೈತಾಮಹಂ** ತಂದೆ ತಾತಂದಿರ **ರಿಕ್ತಂ** ರಾಜ್ಯರೂಪವಾದ ಧನವನ್ನು **ಸ್ವತನಯೇಭ್ಯಃ** ತಮ್ಮ ಮಕ್ಕಳಿಗೆ **ಯಥಾದಾಯಂ** ಅವರವರಿಗೆ

ಯೋಗ್ಯವಾದ ರೀತಿಯಲ್ಲಿ **ವಿಭಜ್ಯ** ವಿಭಾಗ ಮಾಡಿ ಇತ್ತು **ಸ್ವಯಂ** ತಾವು **ಸಕಲಸಂಪನ್ನಿಕೇತಾತ್** ಎಲ್ಲ ಸಂಪತ್ತುಗಳಿಗೆ ಆಶ್ರಯವಾದ (ಸಮೃದ್ಧವಾದ) **ಸ್ವನಿಕೇತನಾತ್** ತಮ್ಮ ಅರಮನೆಯಿಂದ ಹೊರಟು **ಪುಲಹಾಶ್ರಮಂ** ಶಾಲಿಗ್ರಾಮ ಕ್ಷೇತ್ರವೆಂದು ಪ್ರಸಿದ್ಧವಾದ ಪುಲಹರ ಆಶ್ರಮಕ್ಕೆ **ಪ್ರವವ್ರಾಜ** ಹೊರಟನು **ಯತ್ರ** ಯಾವ ಪುಲಹಾಶ್ರಮದಲ್ಲಿ **ಅದ್ಯಾಪಿ** ಇಂದಿಗೂ **ಭಗವಾನ್ ಹರಿಃ** ಶ್ರೀಹರಿಯು **ತತ್ರತ್ಯಾನಾಂ** ಅಲ್ಲಿರುವ **ನಿಜಜನಾನಾಂ** ಭಕ್ತರ ಮೇಲಿನ **ವಾತ್ಸಲ್ಯೇನ** ವಾತ್ಸಲ್ಯದಿಂದ **ಇಚ್ಛಾರೂಪೇಣ ಸನ್ನಿಧಾಪ್ಯತೇ** ತನ್ನ ಇಚ್ಛೆಗೆ ಬಂದ, ಭಕ್ತರು ಇಚ್ಛಿಸಿದ ರೂಪದಿಂದ ಸನ್ನಿಹಿತನಾಗಿರುವನು. ।।೮।।

**ಯತ್ರಾಶ್ರಮಪದಾನ್ಯುಭಯತೋ ನಾಭಿಭಿರ್ದೃಷಚ್ಚಕ್ರೈಶ್ಚಕ್ರನದೀ ನಾಮ ಸರಿತ್ಪ್ರವರಾ ಸರ್ವತಃ ಪವಿತ್ರೀಕರೋತಿ ।।೯।।**

**ಯತ್ರ ಆಶ್ರಮಪದಾನಿ** ಯಾವ ಈ ಆಶ್ರಮ ಸ್ಥಳಗಳನ್ನು **ಚಕ್ರನದೀ ನಾಮ ಸರಿತ್ ಪ್ರವರಾ** (ಗಂಡಕೀ ಎಂದು ಪ್ರಸಿದ್ಧವಾದ) ಚಕ್ರನದೀ ಎಂಬ ಶ್ರೇಷ್ಠನದಿಯು **ಉಭಯತಃ** ಕೆಳಗೂ ಮೇಲೂ **ನಾಭಿಭಿಃ** ಒಳಗಿರುವ ಚಕ್ರಗಳನ್ನು ನೋಡುವ ದ್ವಾರಗಳ ಉತ್ಪತ್ತಿಸ್ಥಾನಗಳುಳ್ಳ **ದೃಷಚ್ಚಕ್ರೈಃ** ಚಕ್ರಾಂಕಿತ ಶಿಲೆ (ಶಾಲಿಗ್ರಾಮ) ಗಳ ಸಮೂಹಗಳಿಂದ **ಸರ್ವತಃ ಪವಿತ್ರೀಕರೋತಿ** ಎಲ್ಲ ಕಡೆಗೂ ಪವಿತ್ರಗೊಳಿಸುವುದು (ಇದರಿಂದ ಇಚ್ಛಾರೂಪವನ್ನು ವಿವರಿಸಿರುವರು). ।।೯।।

**ತಸ್ಮಿನ್ ವಾವ ಕಿಲ ಸ ಏಕಃ ಪುಲಹಾಶ್ರಮೋಪವನೇ ವಿವಿಧ ಕುಸುಮ-ಕಿಸಲಯತುಲಸಿಕಾಂಬುಭಿಃ ಕಂದಮೂಲಫಲೋಪಹಾರೈಶ್ಚ ಸಮೀಹಮಾನೋ ಭಗವತ ಆರಾಧನಂ ವಿವಿಕ್ತ ಉಪರತವಿಷಯಾಭಿಲಾಷ ಉಪಭೃತೋಪಶಮಃ ಪರಾಂ ನಿರ್ವೃತಿಮವಾಪ ।।೧೦।।**

**ತಸ್ಮಿನ್ ಪುಲಹಾಶ್ರಮೋಪವನೇ** ಆ ಪುಲಹಾಶ್ರಮದ ಸಮೀಪದ ವನದಲ್ಲಿ **ಸಃ ಏಕಃ** ಆ ಭರತರಾಜನೊಬ್ಬನೇ **ವಿವಿಧ** ಅನೇಕ ಬಗೆಯ **ಕುಸುಮ** ಹೂ **ಕಿಸಲಯ** ಚಿಗುರು **ತುಲಸಿಕಾ** ತುಲಸಿ **ಅಂಬುಭಿಃ** ನೀರುಗಳಿಂದ **ಕಂದ** ಗಡ್ಡೆ **ಮೂಲ** ಗೆಣಸು **ಫಲ** ಹಣ್ಣು ಮುಂತಾದ **ಉಪಹಾರೈಃ** ಪೂಜಾದ್ರವ್ಯಗಳಿಂದ **ಭಗವತಃ ಆರಾಧನಂ** ಶ್ರೀಹರಿಯ ಆರಾಧನೆಯನ್ನು **ಸಮೀಹಮಾನಃ** ಮಾಡುವವನಾಗಿ (ಇಚ್ಛಿಸುವವನಾಗಿ) **ವಿವಿಕ್ತೇ** ಏಕಾಂತ ದೇಶದಲ್ಲಿ **ಉಪರತವಿಷಯಾಭಿಲಾಷಃ**

ವಿಷಯಾಭಿಲಾಷೆಯು ಇಲ್ಲದವನಾಗಿ **ಉಪಹೃತೋಪಶಮಃ** ಭಗವನ್ನಿಷ್ಠೆಯನ್ನು ಸಂಪಾದಿಸಿದವನಾಗಿ **ಪರಾಂ** ದುಃಖಸಂಪರ್ಕವಿಲ್ಲದ **ನಿರ್ವೃತಿಂ** ಸುಖವನ್ನು **ಅವಾಪ(ಆಪ)** ಹೊಂದಿದನು. ।।೧೦।।

**(ತಯೇತ್ಥಂ) ತಯ್ಯೈವಮವಿರತಪುರುಷಪರಿಚರ್ಯಯಾ ಭಗವತಿ ಪ್ರವರ್ಧಮಾನಾನುರಾಗಭಾರಹೃತಹೃದಯಶೈಥಿಲ್ಯಃ ಪ್ರಹರ್ಷವೇಗೇನಾ-ತ್ಮನ್ಯುದ್ಭಿದ್ಯಮಾನ ರೋಮಪುಲಕಕುಲಕಃ ಔತ್ಕಂಠ್ಯಪ್ರವೃತ್ತಪ್ರಣಯಭಾಷ್ಪ-ನಿರುದ್ಧಾವಲೋಕನಯನೋಽಭಿರೇಮೇ । ಏವಂ ನಿಜರಮಣಾರುಣ-ಚರಣಾರವಿಂದಾನುಧ್ಯಾನೇನೋಪಚಿತಭಕ್ತಿಯೋಗ ಪರಿಪ್ಲುತಪರಮಾಹ್ಲಾದ-ಗಭೀರಹೃದಯಾವಗಾಢಧಿಷಣಸ್ತಾಂ ವಿಕ್ರಿಯಮಾಣಾಂ ಭಗವತ್ಸಪರ್ಯಾಂ ನ ಸಸ್ಮಾರ ।।೧೧।।**

**ಏವಂ** ಈ ರೀತಿಯಾಗಿ **ತಯಾ** ಭಕ್ತಿಪೂರ್ವಕವಾದ **ಅವಿರತ ಪುರುಷ-ಪರಿಚರ್ಯಯಾ** ಸತತವಾದ ಶ್ರೀಹರಿಯ ಸೇವೆಯಿಂದ **ಭಗವತಿ** ಶ್ರೀಹರಿಯಲ್ಲಿ **ಪ್ರವೃದ್ಧಮಾನ** ಅಭಿವೃದ್ಧಿ ಹೊಂದುತ್ತಿರುವ **ಅನುರಾಗಭಾರಹೃತಹೃದಯಶೈಥಿಲ್ಯಃ** ಭಕ್ತಿಭಾರದಿಂದ ನಷ್ಟವಾದ ಮನಶ್ಚಾಂಚಲ್ಯವುಳ್ಳ **ಪ್ರಹರ್ಷವೇಗೇನ** ಅತಿಶಯ ಸಂತೋಷದ ಭರದಿಂದ **ಆತ್ಮನಿ** ದೇಹದಲ್ಲಿ **ಉದ್ಭಿದ್ಯಮಾನ** ಹೊರಹೊಮ್ಮುತ್ತಿರುವ **ರೋಮಪುಲಕಕುಲಕಃ** ರೋಮಾಂಚನ ಸಮೂಹವುಳ್ಳ **ಔತ್ಕಂಠ್ಯಪ್ರವೃತ್ತ** ಉತ್ಕಂಠತೆಯಿಂದ (ಶ್ರೀಹರಿಯನ್ನು ಕಾಣಬೇಕೆಂಬ ಸಂಕಲ್ಪ ಪೂರ್ವಕ ಇಚ್ಛೆಯಿಂದ) ಹೊರಹೊರಟ **ಪ್ರಣಯಭಾಷ್ಪ** ಆನಂದಭಾಷ್ಪದಿಂದ **ನಿರುದ್ಧ** ತಡೆಯಲ್ಪಟ್ಟ **ಅವಲೋಕನಯನಃ** ದೃಷ್ಟಿಯುಳ್ಳ ಕಣ್ಣುಗಳುಳ್ಳವನಾಗಿ **ಅಭಿರೇಮೇ** ಅತ್ಯಂತ ಸಂತಸಗೊಂಡನು. **ಏವಂ** ಹೀಗೆ **ನಿಜರಮಣಾರುಣಚರಣಾರವಿಂದಾನುಧ್ಯಾನೇನ** ತನಗೆ ಪ್ರೀತಿಯನ್ನು ಕೊಡುವ ಶ್ರೀಹರಿಯ ಕೆಂಪಾದ ಪಾದಕಮಲಗಳ ಸಂತತಧ್ಯಾನದಿಂದ **ಉಪಚಿತ ಭಕ್ತಿಯೋಗಪರಿಪ್ಲುತಃ** ಅಭಿವೃದ್ಧವಾದ ಭಕ್ತಿಯೋಗದಿಂದ ಎಲ್ಲೆಡೆ ವ್ಯಾಪ್ತವಾದ **ಪರಮಾಹ್ಲಾದ** ಅತಿಶಯ ಸಂತೋಷವುಳ್ಳ **ಗಭೀರಹೃದಯಾ(ಹೃದಾ)ವಗಾಢಧಿಷಣಃ** ಗಂಭೀರ ಹೃದಯವುಳ್ಳ ಶ್ರೀಹರಿಯಲ್ಲಿ ಮಗ್ನವಾದ ಬುದ್ಧಿಯುಳ್ಳ ಭರತನು **ವಿಕ್ರಿಯಮಾಣಾಂ** ವಿಶೇಷವಾಗಿ ಮಾಡುತ್ತಿದ್ದ **ಭಗವತ್ಸಪರ್ಯಾಂ** ಶ್ರೀಹರಿಯ ಪೂಜೆಯನ್ನು **ನ ಸಸ್ಮಾರ** ಸ್ಮರಿಸಲಿಲ್ಲ. ಪೂಜಿಸುತ್ತಿರುವೆನೆಂಬುದನ್ನು ಮರೆತುಬಿಟ್ಟನೆಂದು ಭಾವ. ।।೧೧।।

**ಇತ್ಥಂ ಧೃತಭಗವದ್ವ್ರತ ಐಣಾಜಿನವಾಸಸಾನುಸವನಾಭಿಷೇಕಾರ್ದ್ರಕಪಿಶ ಕುಟಿಲಜಟಾಕಲಾಪೇನ ಚ ವಿರೋಚಮಾನಃ ಸೂರ್ಯ ಇವ ಭಗವಂತಂ ಹಿರಣ್ಮಯಂ ಪುರುಷಂ ದದರ್ಶ(ಉಜ್ಜಿಹಾನೇ) ಸೂರ್ಯಮಂಡಲೇಽಪ್ಯುಪ- ತಿಷ್ಠನ್ನೇತದುಹೋವಾಚ ॥೧೨॥**

**ಇತ್ಥಂ** ಈ ರೀತಿಯಾಗಿ **ಧೃತಭಗವದ್ವ್ರತಃ** ಶ್ರೀಹರಿ ಪ್ರೀತಿಕರ ವ್ರತಗಳನ್ನು ಮಾಡುತ್ತಿದ್ದ ಭರತರಾಜನು **ಐಣಾಜಿನವಾಸಸಾ** ಕೃಷ್ಣಾಜಿನವೆಂಬ ಬಟ್ಟೆಯಿಂದಲೂ **ಸವನಾಭಿಷೇಕಾರ್ದ್ರಕಪಿಶಕುಟಿಲಜಟಾಕಲಾಪೇನ ಚ** ಮೂರುಕಾಲಗಳಲ್ಲಿಯೂ ಸ್ನಾನ ಮಾಡುವದರಿಂದ ಒದ್ದೆಯಾಗಿ ಕಂದು ಹಳದಿ ಬಣ್ಣವಾದ ವಕ್ರವಾದ ಜಟೆಗಳ ಸಮೂಹದಿಂದಲೂ **ಸೂರ್ಯ ಇವ** ಸೂರ್ಯನಂತೆ **ವಿರೋಚಮಾನಃ** ಪ್ರಕಾಶಮಾನನಾಗಿ **ಸೂರ್ಯಮಂಡಲೇ** ಸೂರ್ಯಮಂಡಲದಲ್ಲಿಯೂ **ಅಪಿ** ತನ್ನ ಹೃದಯದಲ್ಲಿಯೂ **ಹಿರಣ್ಮಯಂ ಭಗವಂತಂ ಪುರುಷಂ ದದರ್ಶ** ವಿಲಕ್ಷಣ ಸುಖರೂಪನಾದ ಗುಣಪೂರ್ಣನಾದ ಶ್ರೀಹರಿಯನ್ನು ನೋಡಿದನು. **ಉಪತಿಷ್ಠನ್** ಅವನನ್ನು ಸ್ತೋತ್ರ ಮಾಡುತ್ತಾ **ಏತತ್ ಉ** ಮುಂದೆ ಹೇಳುವ ಮಂತ್ರವನ್ನೇ **ಉವಾಚ** ಹೇಳಿದನು. **ಉಜ್ಜಿಹಾನೇ** ಎಂಬ ಪಾಠವಿದ್ದಾಗ **ಉದ್ಗಚ್ಛತಿ ಸೂರ್ಯಮಂಡಲೇ** ಸೂರ್ಯನು ಉದಯಿಸುತ್ತಿರುವಾಗ ಎಂದರ್ಥ. ॥೧೨॥

ಆ ಮಂತ್ರದ ಅರ್ಥವನ್ನು ಈ ಪದ್ಯದಲ್ಲಿ ಹೇಳುವರು

**ಪರೋರಜಃ ಸವಿತರ್ಜಾತವೇದೋ**
**ವೇದಸ್ಯ ಗರ್ಭೋಃ ಮನಸೇದಂ ಜಜಾನ ।**
**ಸ್ವರೇತಸಾದಃ ಪುನರಾವಿಶ್ಯ ಚ(ಸ್ವಂ)ಷ್ಟೇ**
**ಹಂಸಂ ಗೃಧ್ರಾಣಾಮೃಷಭಂ ಸಂಗೃಣೀಮಃ ॥೧೩॥**

**ಹೇ ಪರೋರಜಃ** ಪ್ರಕೃತಿಗಿಂತ ಉತ್ತಮನೇ, ರಜೋಗುಣ ದೂರನೇ, ದೋಷ ವಿದೂರನೇ **ಹೇ ಸವಿತಃ** ಜಗತ್ತನ್ನು ಸೃಷ್ಟಿಸಿದವನೇ **ಜಾತವೇದಃ** ಹುಟ್ಟಿದ್ದನ್ನೆಲ್ಲ ತಿಳಿದವನೇ, ಸರ್ವಜ್ಞನೇ ನೀನು **ವೇದಸ್ಯ ಗರ್ಭಃ** ವೇದಗಳ ಮಗನು ಅಂದರೆ ಗರ್ಭದಂತೆ ವೇದತಾತ್ಪರ್ಯವಿಷಯನೆಂದರ್ಥ **ಇದಂ** ಈ ಜಗತ್ತನ್ನು **ಮನಸಾ** ಇಚ್ಛಾಮಾತ್ರದಿಂದಲೇ (ಯಾವ ಆಯಾಸವಿಲ್ಲದೆ) **ಜಜಾನ** ಸೃಷ್ಟಿಸಿದಿ. **ಪುನಃ** ಮತ್ತೆ ಸೃಷ್ಟಿಸಿದಮೇಲೆ **ಅದಃ** ಈ ಜಗತ್ತನ್ನು **ಸ್ವರೇತಸಾ** ಸ್ವರೂಪಭೂತಶಕ್ತಿಯಿಂದ **ಆವಿಶ್ಯ**

 

ಪ್ರವೇಶಿಸಿ **ಸ್ಥಿತಃ** ಇರುವೆ (**ಚಷ್ಟೇ**) ರಕ್ಷಿಸುವಿ (**ಸ್ವರೇತಸಾ ಇದಂ ಜಜಾನ** ನಿನ್ನ ವೀರ್ಯದಿಂದ ಬ್ರಹ್ಮಾದಿ ಈ ಜಗತ್ತನ್ನು ಹುಟ್ಟಿಸಿದಿ ಎಂದೂ ಮಾಡಬಹುದು) ಆದರೂ **ಹಂಸಂ** ದೋಷಲೇಪವಿಲ್ಲದ, ಭಕ್ತರ ದೋಷಗಳನ್ನು ಹೋಗಲಾಡಿಸುವ **ಸ್ವಂ** ಸ್ವತಂತ್ರನಾದ **ಗೃಧ್ರಾಣಾಂ** ವಿಷಯಾಕಾಂಕ್ಷೆಯುಳ್ಳ ಅಥವಾ ಸಂಸಾರಬಂಧದಿಂದ ಮೋಕ್ಷವನ್ನು ಇಚ್ಛಿಸುವ ಸಜ್ಜೀವರಿಗೆ **ಋಷಭಂ** ಸ್ವಾಮಿಯಾದ **ತ್ವಾಂ** ನಿನ್ನನ್ನು **ಸಂಗೃಣೀಮಃ** ಸ್ತೋತ್ರಮಾಡುವೆವು.

ಈ ಭಾಗವತ ಶ್ಲೋಕ ಶತಾಕ್ಷರ ಗಾಯತ್ರೀ ಅರ್ಥವನ್ನು ಹೇಳುತ್ತದೆ ಕಾರಣ ಆ ಗಾಯತ್ರೀ ಪ್ರತಿಪಾದ್ಯನಾದ ನಾರಾಯಣನೇ ತನ್ನ ಇಷ್ಟ ದೇವತೆ ಎಂದು ತಿಳಿಸಿದಂತಾಯಿತು. ಈ ಶ್ಲೋಕವು ಸುಲಭವಾಗಿ ಅರ್ಥವಾಗುವುದಿಲ್ಲವಾದ್ದರಿಂದ ಪ್ರಮಾಣದಿಂದ ವ್ಯಾಖ್ಯಾನಿಸುವರು.

ತಾತ್ಪರ್ಯ - **''ಪರೋರಜಾಽರಜಸ್ಕತ್ವಾತ್ ತ್ರಯೀಡ್ಯತ್ವಾತ್ ತ್ರಯೀಸುತಃ ।**
**ಗುಣಾತ್ಯಯಾತ್ ತುರೀಯಶ್ಚ ಜಾತವೇದಾಶ್ಚ ಸರ್ವವಿತ್ ॥**
**ಹಂಸೋ ದುಃಖಾದಿಹಾನೇನ ಜೀವೇಶತ್ವಾಚ ಗೃಧ್ರರಾಟ್ ।**
**ಕಾಲಃ ಸರ್ವನಿಯಂತೃತ್ವಾತ್ ಪರಮಾತ್ಮಾ ಪ್ರಕೀರ್ತಿತಃ ॥**
**-ಇತಿ ತಂತ್ರನಿರುಕ್ತೇ ॥೧೩॥**

ಶ್ರೀಹರಿಯು ನಿರ್ದೋಷನಾದುದರಿಂದ ಪರೋರಜಾಃ ಎಂದೂ ಸಮಸ್ತ ವೇದಗಳಿಂದ ತಿಳಿಯಲ್ಪಡುವುದರಿಂದ ತ್ರಯೀಸುತನೆಂದೂ (ವೇದಗರ್ಭ), ಗುಣತ್ರಯ ರಹಿತನಾದ್ದರಿಂದ ತುರೀಯನೆಂದೂ, ಸಮಸ್ತವನ್ನು ತಿಳಿದವನಾದ್ದರಿಂದ ಜಾತವೇದ ಎಂದೂ, ದುಃಖ ಮೊದಲಾದ ಅಶುಭಗಳನ್ನು ಬಿಟ್ಟು ಶುಭವನ್ನೇ ಅನುಭವಿಸುವುದರಿಂದಲೂ ಭಕ್ತರ ದೋಷಗಳನ್ನು ಪರಿಹರಿಸುವುದರಿಂದಲೂ ಹಂಸನೆಂದೂ, ಜೀವರಿಗೆ ನಿಯಾಮಕನಾದ್ದರಿಂದ ಗೃಧ್ರರಾಟ್ ಎಂದೂ, ಸರ್ವರಿಗೂ ಪ್ರೇರಕನಾದ್ದರಿಂದ ಕಾಲನೆಂದೂ ಹೇಳಲ್ಪಡುತ್ತಾನೆ ಎಂದು ತಂತ್ರನಿರುಕ್ತದಲ್ಲಿ ಹೇಳಿದೆ. ॥೧೩॥

**॥ ಇಲ್ಲಿಗೆ ೭ನೇ ಅಧ್ಯಾಯವು ಮುಗಿಯಿತು ॥**

★★★

# ಏಳನೇ ಅಧ್ಯಾಯದ ಸಾರ

ಋಷಭದೇವನ ಮಗನಾದ ಭರತರಾಜನು ಮಹಾಭಗವದ್ಭಕ್ತನು. ಅವನನ್ನು ಋಷಭದೇವನು ಮಂತ್ರಿಗಳೊಡನೆ ಆಲೋಚಿಸಿ ರಾಜ್ಯದಲ್ಲಿ ಭೂಮಂಡಲದ ಪಾಲನೆಗಾಗಿ ಅಭಿಷಿಕ್ತನನ್ನಾಗಿ ಮಾಡಿದ್ದನು. ತಂದೆಯ ಆಜ್ಞೆಯಂತೆ ರಾಜ್ಯಪಾಲನೆಯಲ್ಲಿ ಆಸಕ್ತನಾದ ಭರತನು ವಿಶ್ವರೂಪನ ಪುತ್ರಿಯಾದ ಪಂಚಜನಿಯನ್ನು ಮದುವೆಯಾದನು. ತಾಮಸ ಅಹಂಕಾರವು ಭೂತಸೂಕ್ಷ್ಮಗಳನ್ನು ಹುಟ್ಟಿಸುವಂತೆ ಭರತನು ಪಂಚಜನಿಯಲ್ಲಿ ಎಲ್ಲ ರೀತಿಯಿಂದ ತಮಗೆ ಅನುರೂಪರಾದ ಸುಮತಿ, ರಾಷ್ಟ್ರಭೃತ, ಸುದರ್ಶನ, ಆವರಣ, ಧೂಮ್ರಕೇತುಗಳೆಂಬ ಐದು ಜನ ಮಕ್ಕಳನ್ನು ಪಡೆದನು. ಹಿಂದೆ ಋಷಭದೇವನ ಸಂಬಂಧಿಯಾದುದರಿಂದ ಅಂಜನಾಭವೆಂದು ಪ್ರಸಿದ್ಧವಾದ ಈ ಭೂಖಂಡವು ಈಗ ಭರತರಾಜರಿಂದ ಭಾರತವೆಂದು ಕರೆಯಲ್ಪಡುವುದು. ಬಹಳ ಶಾಸ್ತ್ರಜ್ಞನಾದ ಆ ಭರತರಾಜನು ತಮ್ಮ ತಂದೆ ತಾಂತಂದಿರಂತೆಯೇ ಪ್ರಜೆಗಳನ್ನು ವಾತ್ಸಲ್ಯದಿಂದ ರಕ್ಷಿಸುತ್ತಾ ಬಂದನು. ಪ್ರಜೆಗಳೆಲ್ಲರೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಅನುಸರಿಸುತ್ತಿದ್ದರು. ಆಹಿತಾಗ್ನಿಯಾದ ರಾಜನು ಎಲ್ಲ ಕಾಲಗಳಲ್ಲಿಯೂ ನಾಲ್ಕು ಹೋತೃಗಳನ್ನು ಹೊಂದಿರುವ ಕರ್ಮದ ವಿಧಿಯನ್ನನುಸರಿಸಿ ಪ್ರಕೃತಿವಿಕೃತಿಯಾಗಗಳೆಂಬ ಅಗ್ನಿಹೋತ್ರ, ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಅಶ್ವಮೇಧ ಮೊದಲಾದ ಪಶುಯಜ್ಞ, ಸೋಮಯಾಗ ಮೊದಲಾದ ದೊಡ್ಡ ಚಿಕ್ಕ ಯಾಗಗಳಿಂದ ಶ್ರೀಹರಿಯನ್ನು ಶ್ರದ್ಧೆಯಿಂದ ಪೂಜಿಸುತ್ತಿದ್ದನು. ಅಂಗ ಕರ್ಮಗಳಿಂದ ಕೂಡಿದ ಯಾಗಗಳು, ದೇವತಾಧ್ಯಾನಾದಿ ಅನೇಕ ಉಪಾಯಗಳು ವಿಧ್ಯುಕ್ತವಾಗಿ ನಡೆಯುತ್ತಿರುವಾಗ ಯಜಮಾನನಾದ ಭರತನು ಈ ಕರ್ಮಗಳ ಫಲವಾಗಿ ಬರುವ




ಅಪೂರ್ವವು (ಅದೃಷ್ಟವು) ಶ್ರೀಹರಿಯ ಅಧೀನವೆಂದು ಸಮರ್ಪಿಸುತ್ತಿದ್ದನು. ಎಲ್ಲ ದೇವತೆಗಳನ್ನು ತಿಳಿಸುವ ಮಂತ್ರಗಳ ಅರ್ಥವು ಅನ್ವಯಿಸುವಂತೆ ಆಯಾ ದೇವತೆಗಳಿಗೆ ಅವುಗಳನ್ನು ನಿಯಮಿಸಿದವನು ಶ್ರೀಹರಿಯೇ ಆದ್ದರಿಂದ ಅವನೇ ಈ ಕರ್ಮಗಳಿಗೆಲ್ಲ ಮುಖ್ಯಕರ್ತನೆಂದು ಅರಿತಿದ್ದನು. ಅವನ ಈ ಉಪಾಸನೆಯಿಂದ ಬಂದ ಪುಣ್ಯವು ಪಾಪಗಳನ್ನು ಹೋಗಲಾಡಿಸಿತು. ಈ ಬಗೆಯ ಯಾಗಗಳಲ್ಲಿ ಅಧ್ವರ್ಯುಗಳು ಹೋಮಿಸಲು ಹವಿಸ್ಸನ್ನು ತೆಗೆದುಕೊಂಡಾಗ ಭರತರಾಜನು ಆಯಾ ಹವಿರ್ಭಾಗಕ್ಕೆ ಭಾಗಿಗಳಾದ ದೇವತೆಗಳನ್ನು ಸರ್ವೋತ್ತಮನಾದ ಶ್ರೀಹರಿಯ ಅವಯವಗಳಿಂದ ಉತ್ಪನ್ನರಾಗಿ ಅವಯವಗಳನ್ನೇ ಆಶ್ರಯಿಸಿ ಇರುವರೆಂದೂ ಅವರಾರೂ ಸ್ವತಂತ್ರರಲ್ಲವೆಂದು ಅನುಸಂಧಾನ ಮಾಡುತ್ತಿದ್ದನು. ಹೀಗೆ ಅವನು ಮಾಡಿದ ಕರ್ಮಗಳು ವಿಶುದ್ಧಗಳಾಗಿದ್ದವು. ಇಂತಹ ಕರ್ಮಾಚರಣೆಯಿಂದ ಅವನ ಮನಸ್ಸು ಶುದ್ಧವಾಯಿತು. ಶುದ್ಧಮನಸ್ಕನಾದ ಅವನ ಹೃದಯದಲ್ಲಿ ಅಪರಿಚ್ಛಿನ್ನನೂ ಶ್ರೀವತ್ಸ ಮೊದಲಾದ ಚಿನ್ಹೆಗಳಿಂದ ನಾರಾಯಣನೆಂದು ತಿಳಿಯಲ್ಪಡುವ ಪುರುಷರೂಪದಿಂದ ಪ್ರಕಾಶಿಸುವವನಾದ ಶ್ರೀಹರಿಯು ವಿಶೇಷವಾಗಿ ಪ್ರಕಟವಾದನು. ಆ ವಾಸುದೇವನಾಮಕ ಶ್ರೀಹರಿಯಲ್ಲಿ ಅವನಿಗೆ ಅತಿಶಯ ಭಕ್ತಿಯುಂಟಾಯಿತು. ಅದು ದಿನವೂ ಹೆಚ್ಚುತ್ತಲೇ ಇದ್ದಿತು.

ಹೀಗೆ ಒಂದುಕೋಟಿ ವರ್ಷಗಳಪರ್ಯಂತ ರಾಜ್ಯಭಾರ ಮಾಡಿದನು. ಅಲ್ಲಿಗೆ ಅವರ ಆ ಪ್ರಾರಬ್ಧಕರ್ಮವು ಮುಗಿಯಿತು. ತಮ್ಮ ವಂಶ ಪರಂಪರೆಯಿಂದ ಬಂದಿದ್ದ ರಾಜ್ಯವನ್ನು ತಮ್ಮ ಮಕ್ಕಳಿಗೆ ಸಲ್ಲಬೇಕಾದ ರೀತಿಯಲ್ಲಿ ಹಂಚಿಕೊಟ್ಟನು. ಸಮಸ್ತ ಸಂಪತ್ಸಮೃದ್ಧವಾದ ತಮ್ಮ ಮನೆಯನ್ನು ಬಿಟ್ಟು ಪುಲಹಾಶ್ರಮಕ್ಕೆ ತೆರಳಿದನು. ಇದೇ ಶಾಲಿಗ್ರಾಮಕ್ಷೇತ್ರ. ಇಲ್ಲಿ ಶ್ರೀಹರಿಯು ಇಂದಿಗೂ ಅಲ್ಲಿನ ಭಕ್ತರ ಮೇಲಿನ ವಾತ್ಸಲ್ಯದಿಂದ ತನ್ನ ಇಚ್ಛೆಗೆ ಬಂದ, ಭಕ್ತರು ಉಪಾಸಿಸುವ ರೂಪಗಳಿಂದ ಸನ್ನಿಹಿತನಾಗಿರುವನು. ಎರಡೂ ಕಡೆಯೂ (ಕೆಳಗೂ ಮೇಲೆಯೂ) ಇರುವ ಚಕ್ರಗಳನ್ನು ತೋರಿಸಿಕೊಡುವ ವದನಗಳುಳ್ಳ ಚಕ್ರಾಂಕಿತ (ಚಕ್ರಚಿಹ್ನಿತ) ಶಿಲೆಗಳಾದ ಶಾಲಿಗ್ರಾಮಗಳಿಂದ ಚಕ್ರನದಿಯೆಂದು ಕರೆಸಿಕೊಳ್ಳುವ ಗಂಡಿಕೀ ನದಿಯು ಈ ಆಶ್ರಮಸ್ಥಳವನ್ನು ಪವಿತ್ರಗೊಳಿಸುತ್ತಿರುವುದು.

ಆ ಆಶ್ರಮದ ಸಮೀಪದ ವನದಲ್ಲಿ ಅವನೊಬ್ಬನೇ ಬಗೆಬಗೆಯ ಹೂ, ಚಿಗರು, ತುಲಸಿ, ನೀರುಗಳಿಂದ, ಗಡ್ಡೆಗೆಣಸು, ಹಣ್ಣು ಮುಂತಾದ

ಪೂಜಾಸಾಮಗ್ರಿಗಳಿಂದ ಶ್ರೀಹರಿಯನ್ನು ಆರಾಧಿಸುತ್ತಿದ್ದನು. ಆ ನಿರ್ಜನ ಪ್ರದೇಶದಲ್ಲಿ ವಿಷಯಾಭಿಲಾಷೆಯನ್ನು ತೊರೆದ ಭಗವನ್ನಿಷ್ಠೆಯನ್ನು ಸಂಪಾದಿಸಿಕೊಂಡ ಅವನು ಅತಿಶಯ ಸುಖವನ್ನು ಅನುಭವಿಸುತ್ತಿದ್ದನು. ಅವನ ಈ ಸತತ ಭಕ್ತಿಯುಕ್ತ ಹರಿಯ ಆರಾಧನೆಯಿಂದ ಶ್ರೀಹರಿಯಲ್ಲಿ ಭಕ್ತಿಯು ಮತ್ತಷ್ಟು ಹೆಚ್ಚಿತು. ಹೃದಯದಲ್ಲಿ ಹುದುಗಿದ ಸಂಶಯವು ಹೋಗಿ ಮನಸ್ಸು ಸ್ಥಿರವಾಯಿತು. ಅತಿಯಾದ ಸಂತೋಷದಿಂದ ಮೈರೋಮಾಂಚನವಾಗುತ್ತಿತ್ತು. ಶ್ರೀಹರಿಯನ್ನು ಕಾಣುವ ಉತ್ಕಂಠತೆಯಿಂದ ಆನಂದ ಭಾಷ್ಪಗಳು ಉಕ್ಕಿಬಂದು ಕಣ್ಣು ಕಾಣದಾದವು. ಈ ರೀತಿ ಅವನು ಶ್ರೀಹರಿಯ ಸೇವೆಯಿಂದ ಸುಖಿಸುತ್ತಿದ್ದನು. ಆನಂದ ತುಂಬಿದ ಅವನ ಮನಸ್ಸು ಗಂಭೀರಹೃದಯನಾದ ಶ್ರೀಹರಿಯಲ್ಲಿಯೇ ಮಗ್ನವಾಗಿರುತ್ತಿತ್ತು. ಹೀಗೆ ವಿಶೇಷ ಪೂಜಿಸುತ್ತಿರುವುದನ್ನೂ ಮರೆತುಬಿಡುತ್ತಿದ್ದನು. ಶ್ರೀಹರಿಗೆ ಪ್ರೀತಿಕರ ವ್ರತ ನಿಯಮಗಳನ್ನು ಅನುಸರಿಸುತ್ತಿದ್ದ ಅವನು ಕೃಷ್ಣಾಜಿನವನ್ನೇ ಬಟ್ಟೆಯಾಗಿ ಉಪಯೋಗಿಸುತ್ತಿದ್ದನು. ಮೂರು ಕಾಲಗಳಲ್ಲಿಯೂ ಸ್ನಾನ ಮಾಡುತ್ತಿದ್ದುದರಿಂದ ಒದ್ದೆಯಾಗಿ ಕಂದುಬಣ್ಣಕ್ಕೆ ಬಂದ ಅವನ ಜಟೆಗಳ ಸಮೂಹವು ಕುಟಿಲವಾಗಿತ್ತು. ಸೂರ್ಯನಂತೆ ಪ್ರಕಾಶಿಸುತ್ತಿದ್ದ ಅವನು ಸೂರ್ಯಮಂಡಲದಲ್ಲಿಯೂ ತಮ್ಮ ಹೃದಯದಲ್ಲಿಯೂ ಬಂಗಾರದ ಬಣ್ಣನೂ ಅತಿಶಯ ಮೋಕ್ಷಾದಿಫಲದಾತನೂ ಆದ ಶ್ರೀಹರಿಯನ್ನು ಕಾಣುತ್ತಿದ್ದನು.

ಅವನನ್ನು ಸ್ತುತಿಸುತ್ತಾ ''ಹೇ ಶ್ರೀಹರಿಯೇ, ನೀನು ಪ್ರಕೃತಿಗಿಂತ ಉತ್ತಮನು, ರಜೋಗುಣಾದಿ ರಹಿತನು. ಆದ್ದರಿಂದಲೇ ದೋಷದೂರನು. ನೀನೇ ಜಗತ್ತನ್ನು ಸೃಷ್ಟಿಸುವೆ. ಹುಟ್ಟಿದ ಮತ್ತು ಹುಟ್ಟುವ ಎಲ್ಲವನ್ನೂ ಬಲ್ಲೆ. ವೇದಗಳ ಮಹಾತಾತ್ಪರ್ಯವಿಷಯನು ನೀನೇ. ಆಯಾಸವಿಲ್ಲದೆ ಇಚ್ಛಾ ಮಾತ್ರದಿಂದ ಈ ಜಗತ್ತನ್ನು ಸೃಷ್ಟಿಸಿ, ನಿನ್ನ ಸ್ವರೂಪಶಕ್ತಿಯಿಂದ ಅದನ್ನು ಪ್ರವೇಶಿಸಿ ಆ ಆ ವಸ್ತುಗಳ ಸ್ವಾಭಾವಿಕ ಶಕ್ತಿಗಳನ್ನು ಪ್ರೇರಿಸುತ್ತಿರುವೆ. ದೋಷಲೇಪವಿಲ್ಲದ ನೀನು ಭಕ್ತರ ದೋಷಗಳನ್ನು ಹೋಗಲಾಡಿಸುವೆ. ನೀನೇ ಸ್ವತಂತ್ರನು. ಆಶಿಸುವ ಜೀವರ ಸ್ವಾಮಿ ನೀನು. ಇಂತಹ ನಿನ್ನನ್ನು ಭಕ್ತಿಯಿಂದ ಸ್ತೋತ್ರ ಮಾಡುವೆನು'' ಎನ್ನುತ್ತಾ ಶತಾಕ್ಷರಗಾಯತ್ರೀ ಮಂತ್ರಾರ್ಥವನ್ನೇ ನುಡಿಯುತ್ತಿದ್ದನು.

॥ ★★★ ॥

 

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಅಷ್ಟಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಶ್ರೀಹರಿಯನ್ನು ಬಿಟ್ಟು ಬೇರೆ ಸ್ಥಳದಲ್ಲಿ ದಯೆಯಿಂದ ಮಾಡಿದ ಸಂಗವೂ ಯೋಗಿಗೆ ಅನರ್ಥಕರವೆಂದು ಸೂಚಿಸಲು ಭರತನಿಗೆ ಜಿಂಕೆಮರಿಯ ಸಂಗದಿಂದಾದ ಅನರ್ಥವನ್ನು ಹೇಳಲು ಪ್ರಾರಂಭಿಸುವರು.

**ಭರತನಿಗೆ ಜಿಂಕೆಯ ಸಂಗದಿಂದ ಅನರ್ಥ**

**ಶ್ರೀ ಶುಕ ಉವಾಚ-**

**ಏಕದಾ ತು ಮಹಾನದ್ಯಾಂ ಕೃತಾಭಿಷೇಕನೈಗಮಿಕಾವಶ್ಯಕೋ ಬ್ರಹ್ಮಾಕ್ಷರ-ಮಭಿಗೃಣಾನೋ ಮುಹೂರ್ತತ್ರಯಮುದಕಾಂತಃ ಪ್ರವಿವೇಶ (ಉಪವಿವೇಶ)। ತತ್ರ ತದಾ ರಾಜನ್ ಹರಿಣೀ ಪಿಪಾಸಯಾ ಜಲಾಶಯಾಭ್ಯಾಶಮೇಕೈ-ವೋಪಜಗಾಮ । ತಯಾ ಪೇಪೀಯಮಾನೇ ಉದಕೇ ತಾವದೇವಾವಿದೂರೇಣ ನದತೋ ಮೃಗಪತೇರುರುನಾದೋ ಲೋಕತ್ರಯಭಯಂಕರ ಉದಪತತ್ ॥೧॥**

**ಏಕದಾ ತು** ಒಂದು ದಿನವಾದರೂ **ಮಹಾನದ್ಯಾಂ** ಆ ಗಂಡಿಕೀನದಿಯಲ್ಲಿ **ಕೃತಾಭಿಷೇಕನೈಗಮಿಕಾವಶ್ಯಕಃ** ಸ್ನಾನ ಮತ್ತು ವೇದ ವಿಹಿತವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡಿದವನಾಗಿ (ನೈಯಮಿಕ ನಿತ್ಯ ನೈಮಿತ್ತಿಕ ವಿಧಿ ಪ್ರಾಪ್ತವಾದ ಆವಶ್ಯಕ ಸಂಧ್ಯಾವಂದನಾದಿಗಳನ್ನು ಮಾಡಿ) **ಅಕ್ಷರಂ** ನಾಶರಹಿತನಾದ ಬ್ರಹ್ಮ

ಪರಮಾತ್ಮನನ್ನು **ಅಭಿಗೃಣಾನಃ** ಗಾಯತ್ರೀ ಮುಂತಾದ ಮಂತ್ರಗಳಿಂದ ಸ್ತುತಿಸುತ್ತ **ಮುಹೂರ್ತತ್ರಯಂ** ಮೂರು ಮುಹೂರ್ತದವರೆಗೆ (೪ ೧/೨ ಘಂಟೆ) **ಉದಕಾಂತಂ** ನದೀತೀರದಲ್ಲಿ **ಉಪವಿವೇಶ** ಕುಳಿತನು. **ಅಕ್ಷರಂ** ಅಧಿಕ ದಾನ ಮಾಡುವ ಎಂದೂ ಅರ್ಥ. **ತದಾ** ಆಗ **ತತ್ರ** ಅಲ್ಲಿ **ರಾಜನ್** ಪರೀಕ್ಷಿತನೇ! **ಪಿಪಾಸಯಾ** ನೀರಡಿಕೆಯಿಂದ **ಹರಿಣೀ** ಹೆಣ್ಣು ಜಿಂಕೆಯು **ಏಕಾ ಏವ** ಒಂದೇ **ಜಲಾಶಯಾಭ್ಯಾಶಂ** ನೀರಿನ ಮಡುವಿನ ಸಮೀಪಕ್ಕೆ **ಉಪಜಗಾಮ** ಬಂದಿತು **ತಯಾ** ಆ ಜಿಂಕೆಯಿಂದ **ಉದಕೇ ಪೇಪೀಯಮಾನೇ** ನೀರು ಆಸಕ್ತಿಯಿಂದ ಕುಡಿಯಲ್ಪಡುತ್ತಿರಲು **ತಾವದೇವ** ಅದೇ ಸಮಯದಲ್ಲಿ **ಅವಿದೂರೇಣ** ಸಮೀಪದಲ್ಲಿಯೇ **ನದತಃ** ಗರ್ಜಿಸುವ **ಮೃಗಪತೇಃ** ಸಿಂಹದ **ಲೋಕತ್ರಯಭಯಂಕರಃ** ಮೂರು ಲೋಕಗಳಿಗೂ ಭಯವನ್ನುಂಟು ಮಾಡುವ **ಉರುನಾದಃ ಉದಪತತ್** ದೊಡ್ಡ ಶಬ್ದವು ಹೊರಟಿತು. ।।೧।।

**ತಮುಪಶ್ರುತ್ಯ ಪ್ರಕೃತಿವಿಕ್ಲವಾ ಮೃಗವಧೂಃ ಚಕಿತನಿರೀಕ್ಷಣಾ ಸುತರಾಮಪಿ ಹರಿಭಯಾಭಿನಿವೇಶವ್ಯಗ್ರಹೃದಯಾ ಪಾರಿಪ್ಲವದೃಷ್ಟಿರಗತತೃಷಾತಿಭಯಾತ್ಸ-ಹಸೋಚ್ಚಕ್ರಾಮ ।।೨।।**

**ತಂ** ಆ ಸಿಂಹದ ಗರ್ಜನೆಯನ್ನು **ಉಪಶ್ರುತ್ಯ** ಕೇಳಿ **ಪ್ರಕೃತಿವಿಕ್ಲವಾ** ಸ್ವಾಭಾವಿಕವಾಗಿಯೇ ವ್ಯಾಕುಲವಾದ (ಹೆದರುವ) ಆದ್ದರಿಂದಲೇ **ಚಕಿತನಿರೀಕ್ಷಣಾ** ಭಯಗ್ರಸ್ತವಾದ ನೋಟವುಳ್ಳ **ಚಲಿತಾವಲೋಕನಾ** ಎಂಬ ಪಾಠದಲ್ಲಿ ಚಂಚಲವಾದ ನೋಟವುಳ್ಳ ಎಂದರ್ಥ. **ಮೃಗವಧೂಃ** ಆ ಹೆಣ್ಣು ಜಿಂಕೆಯು **ಸುತರಾಂ** ಇನ್ನು ಹೆಚ್ಚಾಗಿ **ಹರಿಭಯಾಭಿನಿವೇಶವ್ಯಗ್ರಹೃದಯಾ** ಸಿಂಹದ ಭಯದ ಉದ್ವೇಗದಿಂದ ವ್ಯಾಕುಲವಾದ ಮನಸ್ಸುಳ್ಳದ್ದಾಗಿ **ಪಾರಿಪ್ಲವದೃಷ್ಟಿಃ** ಅಸ್ಥಿರವಾದ ಕಣ್ಣುಗಳುಳ್ಳದ್ದಾಗಿ **ಅಗತತೃಷಾ** ಬಾಯಾರಿಕೆಯೂ ಅಡಗದೇ (ಸಾಕಷ್ಟು ನೀರೂ ಕುಡಿಯದೇ) (ಆಕಾರಾಂತ ಶಬ್ದ ತೃಷಾ ಎಂದು) **ಅತಿಭಯಾತ್** ಬಹಳ ಭಯದಿಂದ **ಸಹಸಾ ಉಚ್ಚಕ್ರಾಮ** ತಟ್ಟನೇ ನದಿಯ ಆ ದಡಕ್ಕೆ ಜಿಗಿಯಿತು (ನೆಗೆಯಿತು). ।।೨।।

**ತಸ್ಯಾ ಉತ್ಪತಂತ್ಯಾ ಅಂತರ್ವತ್ನ್ಯಾ ಉರುಭಯವಿಗಲಿತೋ ಯೋನಿನಿರ್ಗತೋ ಗರ್ಭಃ ಸ್ರೋತಸಿ ನಿಪಪಾತ । ತತ್ಪ್ರಸ್ರವಣೋತ್ಸರ್ಪಣಭಯಖೇದಾತುರಾ ಸ್ವಗಣ್ಯೈರ್ವಿಯುಜ್ಯಮಾನಾ ಕಸ್ಯಾಂಚಿದ್ದರ್ಯಾಂ ಕೃಷ್ಣಸಾರಸತೀ ನಿಪಪಾತ ಚಾಥ ಮಮಾರ ।।೩।।**

**ಉತ್ತತಂತ್ಯಾಃ** ಹಾರುತ್ತಿರುವ **ಅಂತರ್ವತ್ನ್ಯಾ** ತುಂಬುಗರ್ಭಿಣಿಯಾದ **ತಸ್ಯಾಃ** ಆ ಜಿಂಕೆಯ **ಗರ್ಭಃ** ಗರ್ಭದಲ್ಲಿಯ ಮರಿಯು **ಉರು** ಬಹಳವಾದ **ಭಯ** ಹೆದರಿಕೆಯಿಂದ **ವಿಗಲಿತಃ** ಸ್ಥಾನದಿಂದ ಚಲಿಸಿದ್ದಾಗಿ **ಯೋನಿನಿರ್ಗತಃ** ಯೋನಿಯಿಂದ ಹೊರಬಂದು **ಸ್ರೋತಸಿ** ಪ್ರವಾಹದಲ್ಲಿ **ನಿಪಪಾತ** ಬಿದ್ದಿತು. **ತತ್ಪ್ರಸವಣ** ಆ ಗರ್ಭಪಾತ **ಉತ್ಸರ್ಪಣ** ಹಾರುವುದು **ಭಯ** ಸಿಂಹದ ಭಯ **ಖೇದಾತುರಾ** ದುಃಖಗಳಿಂದ ನೊಂದುಕೊಂಡ **ಸ್ವಗಣ್ಯೆಃ** ತನ್ನ ಹಿಂಡಿನಿಂದ **ವಿಯುಜ್ಯಮಾನಾ** ದೂರವಾಗಿದ್ದ **ಕೃಷ್ಣಸಾರಸತೀ** ಕೃಷ್ಣಸಾರವೆಂಬ (ಸಾರಂಗ) ಜಿಂಕೆಯ ಹೆಂಡತಿಯಾದ ಈ ಜಿಂಕೆಯು **ಕಸ್ಯಾಂಚಿದ್ದರ್ಯಾಂ** ಯಾವುದೊ ಒಂದು ಹಳ್ಳದಲ್ಲಿ **ನಿಪಪಾತ** ಬಿದ್ದಿತು. **ಅಥ** ನಂತರ **ಮಮಾರ ಚ** ಸತ್ತು ಹೋಯಿತು. ॥೩॥

**ತಂ ತ್ವೇಣಕುಣಕಂ ಕೃಪಣಂ ಸ್ರೋತಸಾ ಚೋಹ್ಯಮಾನಮಭಿವೀಕ್ಷ್ಯಾ-ಪವಿದ್ಧಬಂಧುಂ ಬಂಧುರಿವಾನುಕಂಪಯಾ ರಾಜರ್ಷಿರ್ಭರತಃ ಆದಾಯ ಮೃತಮಾತರಮೇಣಮಾಶ್ರಮಪದಮಾನಯತ್ ॥೪॥**

**ರಾಜರ್ಷಿಃ ಭರತಃ** ರಾಜರ್ಷಿಯಾದ ಭರತನು **ಸ್ರೋತಸಾ** ಪ್ರವಾಹದಿಂದ **ಊಹ್ಯಮಾನಂ** ಕೊಚ್ಚಿಕೊಂಡು ಹೋಗುತ್ತಿದ್ದ **ಮೃತಮಾತರಂ** ತಾಯಿಯೂ ಸತ್ತುಹೋಗಿದ್ದ **ಅಪವಿದ್ಧಬಂಧುಂ** ಪ್ರಿಯಜನರಿಂದ ದೂರವಾಗಿದ್ದ **ಕೃಪಣಂ** ದಯನೀಯವಾದ **ತಂ ಏಣಕುಣಕಂ** ಆ ಜಿಂಕೆಯನ್ನು **ಅಭಿವೀಕ್ಷ್ಯ** ನೋಡಿ **ಅನುಕಂಪಯಾ** ದಯೆಯಿಂದ **ಬಂಧುರಿವ** ಪ್ರಿಯಜನರಂತೆ **ಏಣಂ** ಆ ಜಿಂಕೆಯನ್ನು **ಆಶ್ರಮಪದಂ ಆನಯತ್** ಆಶ್ರಮಕ್ಕೆ ತಂದನು. ॥೪॥

**ತಸ್ಯ ಹ ವಾ ಕುಣಕ ಉಚ್ಚೈಸ್ತರಾಂ ತಸ್ಮಿನ್ ಕೃತನಿಜಾಭಿಮಾನಸ್ಯಾಹರ-ಹಸ್ತತ್ಪೋಷಣ ಪಾಲನಪ್ರೀಣನಲಾಲನಾನುಧ್ಯಾನೇನಾತ್ಮನಿಯಮಾಃ ಸಹಯಮಾಃ ಪುರುಷಪರಿಚರ್ಯಾದಯ ಏಕೈಕಶಃ ಕತಿಪಯಾಹರ್ಗಣೇನ ವಿಯುಜ್ಯಮಾನಾಃ ಕಿಲ ಸರ್ವ ಏವೋದವಸನ್ ॥೫॥**

**ತಸ್ಮಿನ್ ಕುಣಕೇ** ಆ ಜಿಂಕೆಮರಿಯಲ್ಲಿ **ಉಚ್ಚೈಸ್ತರಾಂ** ಅತಿಯಾಗಿ **ಕೃತನಿಜಾಭಿಮಾನಸ್ಯ** ತನ್ನದೆಂದು ಅಭಿಮಾನ ಮಾಡಿದ **ತಸ್ಯ** ರಾಜನ **ಅಹರಹಃ** ಪ್ರತಿದಿನವೂ **ತತ್ಪೋಷಣ** ಹುಲ್ಲು ತಿನ್ನಿಸಿ ರಕ್ಷಿಸುವುದು **ಪಾಲನ** ಕ್ರೂರ ಪ್ರಾಣಿಗಳಿಂದ ರಕ್ಷಿಸುವುದು **ಪ್ರೀಣನ** ತುರಿಸುವುದರಿಂದ ಸಂತೋಷ ಪಡಿಸುವುದು **ಲಾಲನ**

ತೊಡೆಯ ಮೇಲಿಟ್ಟುಕೊಂಡು ಮುದ್ದಿಸುವುದು **ಅನುಧ್ಯಾನೇನ** ಇದು ಹೇಗೆ ಸುಖವಾಗಿದ್ದೀತು ಎಂದು ಚಿಂತಿಸುವುದು ಇವುಗಳಿಂದ **ಏಕೈಕಶಃ** ಒಂದೊಂದಾಗಿ **ಆತ್ಮನಿಯಮಾಃ** ತಮ್ಮ ಸ್ನಾನ ಮುಂತಾದ ನಿಯಮಗಳು **ಸಹಯಮಾಃ** ಅಹಿಂಸಾದಿಗಳಿಂದ ಕೂಡಿಕೊಂಡು **ಪುರುಷಪರಿಚರ್ಯಾದಯಃ** ಶ್ರೀಹರಿಯ ಪೂಜೆ ಮೊದಲಾದವೂ **ಕತಿಪಯಾ ಹರ್ಗಣೇನ ವಿಯುಜ್ಯಮಾನಾಃ** ಬಿಡುತ್ತಾ ಬಂದು ಕೆಲವು ದಿನಗಳಲ್ಲಿ **ಸರ್ವೇ ಏವ** ಎಲ್ಲವೂ **ಉದವಸನ್** ಇಲ್ಲವಾದವು. ।।೫।।

ಅದರಲ್ಲಿ ಆ ರೀತಿ ಆಸಕ್ತಿ ಬರಲು ನಿಮಿತ್ತ ಹೇಳುವರು

**ಅಥೇದಮಾಹ ಅಹೋ ಬತಾಯಂ ಹರಿಣಕುಣಕಃ ಕೃಪಣ ಈಶ್ವರರಥ-ಚರಣ ಪರಿಭ್ರಮಣರಯೇಣ ಸ್ವಗಣಸುಹೃದ್ಬಂಧುಭ್ಯಃ ಪರಿವರ್ಜಿತಃ ಶರಣಂ ಚ ಮೋಪಸಾದಿತೋ ಮಾಮೇವ ಮಾತೃಪಿತೃಭ್ರಾತೃಜ್ಞಾತಿಭ್ಯೋಽಧಿಕಂ ಗೋಪಾಯನಂ ಮನ್ಯಮಾನೋ ನಾನ್ಯಂ ಕಂಚನ ವೇದ ಮಯ್ಯೇವಾತಿ-ವಿಸ್ರಬ್ಧಶ್ಚಾತ ಏವ ಮಯಾ ಮತ್ಪರಾಯಣಸ್ಯ ಪೋಷಣಪಾಲನ ಪ್ರೀಣನ-ಲಾಲನಮಪ್ಯನಸೂಯೇನಾನುಷ್ಠೇಯಂ ಶರಣ್ಯೋಪೇಕ್ಷಾದೋಷವಿದುಷಾ ।।೬।।**

**ಅಥ** ಆಶ್ರಮಕ್ಕೆ ತಂದನಂತರ **ಇದಂ ಆಹ** ಈ ರೀತಿ ಹೇಳಿದನು **ಅಹೋ ಬತ** ಅಯ್ಯೋ ಪಾಪ **ಈಶ್ವರರಥಚರಣಪರಿಭ್ರಮಣರಯೇಣ** ಕಾಲಚಕ್ರದ ತಿರುಗುವ ವೇಗದಿಂದ **ಸ್ವಗಣಸೃಹೃದ್ಬಂಧುಭ್ಯಃ ಪರಿವರ್ಜಿತಃ** ತಮ್ಮ ಗುಂಪು, ಸ್ನೇಹಿತರು, ಬಂಧುಗಳಿಂದ ಬಿಡಲ್ಪಟ್ಟ ಆದ್ದರಿಂದಲೇ **ಕೃಪಣಃ** ದಯನೀಯವಾದ **ಅಯಂ ಹರಿಣಕುಣಕಃ** ಈ ಜಿಂಕೆಯ ಎಳೆಮರಿಯು **ಮಾ** ನನ್ನನ್ನೇ **ಉಪಾಸಾದಿತಃ** ರಕ್ಷಕನನ್ನಾಗಿ ಹೊಂದಿರುವುದು ಮತ್ತು **ಮಾಂ ಏವ** ನನ್ನನ್ನೇ **ಮಾತೃ** ತಾಯಿ **ಪಿತೃ** ತಂದೆ **ಭ್ರಾತೃ** ಸಹೋದರ **ಜ್ಞಾತಿಭ್ಯಃ ಅಧಿಕಂ** ಜ್ಞಾತಿಗಳಿಗಿಂತ ಹೆಚ್ಚಾಗಿ **ಗೋಪಾಯನಂ** ರಕ್ಷಕನೆಂದು **ಮನ್ಯಮಾನಃ** ತಿಳಿದಿರುವುದು **ನಾನ್ಯಂ ಕಂಚನ ವೇದ** ಬೇರಾರನ್ನೂ ತಿಳಿದಿಲ್ಲ **ಮಯಿ ಏವ ವಿಸ್ರಬ್ಧಃ** ನನ್ನಲ್ಲಿಯೇ ಅತ್ಯಂತ ವಿಶ್ವಾಸವನ್ನಿಟ್ಟಿರುವುದು **ಅತಃ ಏವ** ಆದ್ದರಿಂದಲೇ **ಶರಣ್ಯೋಪೇಕ್ಷಾದೋಷವಿದುಷಾ** ಮೊರೆಹೊಕ್ಕವರನ್ನು ಉದಾಸೀನ ಮಾಡುವುದು ದೋಷವೆಂದು ತಿಳಿದ **ಮಯಾ** ನನ್ನಿಂದ **ಮತ್ಪರಾಯಣಸ್ಯ** ನನ್ನನ್ನು ಆಶ್ರಯಿಸಿದ ಇದರ ಪೋಷಣ, ಪಾಲನ,




ಪ್ರೀಣನ, ಲಾಲನೆಯೂ **ಅನಸೂಯೇನ** ಅಸೂಯೆ ಇಲ್ಲದ ನನ್ನಿಂದ **ಅನುಷ್ಠೇಯಂ** ಮಾಡಲ್ಪಡಬೇಕು. ।।೬।।

ಇದರಿಂದ ಭಗವದುಪಾಸನೆಗೆ (ಸ್ವಾರ್ಥಕ್ಕೆ) ಹಾನಿಯಾಗುವುದಲ್ಲ ಎಂದರೆ ಹೇಳುವರು

**ನೂನಂ ಹ್ಯಾರ್ಯಾಃ ಸಾಧವ ಉಪಶಮಶೀಲಾಃ ಕೃಪಣಸುಹೃದ ಏವಂವಿಧಾರ್ಥೇ ಸ್ವಾರ್ಥಾನ್ ಗುರುತರಾನುಪೇಕ್ಷಂತೇ ।।೭।।**

**ಸಾಧವಃ** ಸಜ್ಜನರು **ಉಪಶಮಶೀಲಾಃ** ಶ್ರೀಹರಿಯಲ್ಲಿಯೇ ಆಸಕ್ತರು **ಕೃಪಣ ಸುಹೃದಃ** ದಯನೀಯರಲ್ಲಿ ಅನಿಮಿತ್ತ ಉಪಕಾರ ಮಾಡುವವರೂ ಆದ **ಆರ್ಯಾಃ** ಜ್ಞಾನಿಗಳು **ಏವಂವಿಧಾರ್ಥೇ** ಇಂಥ ವಿಷಯದಲ್ಲಿ (ಪ್ರಸಂಗದಲ್ಲಿ) **ಗುರುತರಾನ್ ಸ್ವಾರ್ಥಾನ್ ನೂನಂ ಉಪೇಕ್ಷಂತೇ** ಬಹುತರವಾದ ಸ್ವಾರ್ಥವನ್ನು ನಿಶ್ಚಯವಾಗಿ ಉದಾಸೀನ ಮಾಡುವರು **ಹಿ** ಪ್ರಸಿದ್ಧ.

**ಇತಿ ಕೃತಾನುಷಂಗ ಆಸನಸ್ನಾನಾಶನಶಯನಾಟನಸ್ಥಾನಾದಿಷು ಸಹ ಮೃಗಜಹುನಾ ಸ್ನೇಹಾನುಬದ್ಧಹೃದಯ ಆಸೀತ್ ।।೮।।**

**ಇತಿ** ಹೀಗೆ ತಿಳಿದುಕೊಂಡು **ಕೃತಾನುಷಂಗಃ** ಅದರಲ್ಲಿ ಸ್ನೇಹಮಾಡಿದವನಾಗಿ **ಆಸನ** ಕುಳಿತಾಗ **ಸ್ನಾನ** ಸ್ನಾನಮಾಡುವಲ್ಲಿ **ಅಶನ** ಊಟಮಾಡುವಾಗ **ಶಯನ** ಮಲಗುವುದರಲ್ಲಿ **ಅಟನಸ್ಥಾನಾದಿಷು** ಓಡಾಡುವ ಸ್ಥಳಗಳಲ್ಲಿ **ಸಹ ಮೃಗಜಹುನಾ** ಆ ಜಿಂಕೆಯ ಮರಿಯೊಡನೆ **ಸ್ನೇಹಾನುಬದ್ಧಹೃದಯಃ ಆಸೀತ್** ಅಭಿಮಾನ ತುಂಬಿದ ಮನಸ್ಸುಳ್ಳವನಾದನು. ।।೮।।

**ಕುಸುಮಕುಶಸಮಿತ್ಪಲಾಶಫಲಮೂಲೋದಕಾದೀನ್ಯಾಹರಿಷ್ಯಮಾಣೋ ವೃಕಸಾಲಾವೃಕಾದಿಭ್ಯೋ ಭಯಮಾಶಂಕಮಾನಃ ಸಹ ಹರಿಣಕುಣಕೇನ ವನಮಾವಿಶತಿ ।।೯।।**

**ಕುಸುಮ** ಹೂ **ಕುಶ** ದರ್ಭ **ಸಮಿತ್** ಅರಳಿ ಕಟ್ಟಿಗೆ **ಪಲಾಶ** ಮುತ್ತಲಕಡ್ಡಿ **ಫಲ** ಹಣ್ಣು **ಮೂಲ** ಗೆಣಸು **ಉದಕಾದೀನಿ** ನೀರು ಮುಂತಾದವನ್ನು **ಆಹರಿಷ್ಯಮಾಣಃ** ತರಲು ಹೊರುಡುತ್ತಾ (ಒಂದನ್ನೇ ಬಿಟ್ಟರೆ) **ವೃಕಸಾಲಾವೃಕಾದಿಭ್ಯಃ** ತೋಳ, ನಾಯಿ ಮುಂತಾದವುಗಳಿಂದ **ಭಯಂ ಆಶಂಕಮಾನಃ** ಭಯವಾಗಬಹುದೆಂದು ಶಂಕಿಸಿ **ಹರಿಣ**

**ಕುಣಕೇನ ಸಹ ವನಂ ಆವಿಶತಿ** ಜಿಂಕೆಯ ಮರಿಯೊಂದಿಗೆ ಅಡವಿಯನ್ನು ಪ್ರವೇಶಿಸುತ್ತಿದ್ದನು. ।।೯।।

**ಪಥಿ ಪಥಿ ಚ ಮುಗ್ಧಭಾವೇನ ತತ್ರ ತತ್ರ ವಿಷಕ್ತಮತಿಪ್ರಣಯ-ಭಾರಹೃದಯಃ ಕಾರ್ಪಣ್ಯಾತ್ ಸ್ಕಂಧೇನೋದ್ವಹತಿ ಏವಮುತ್ಸಂಗೇ ಉರಸಿ ಚಾವಧಾಯೋಪಲಾಲಯನ್ ಪರಮಾಮವಾಪಮುದಮ್ ।।೧೦।।**

**ಪಥಿ ಪಥಿ** ದಾರಿಯುದ್ದಕ್ಕೂ **ಮುಗ್ಧಭಾವೇನ** ಮೂಢಸ್ವಭಾವದಿಂದ **ತತ್ರ ತತ್ರ** ಅಲ್ಲಲ್ಲಿ **ವಿಷಕ್ತಂ** ಎತ್ತೋ ನೋಡುತ್ತಾ ನಿಲ್ಲುತ್ತಿದ್ದ ಅದನ್ನು **ಅತಿಪ್ರಣಯಭಾರ-ಹೃದಯಃ** ಅತ್ಯಂತ ಪ್ರೀತಿ ತುಂಬಿದ ಮನಸ್ಸಿನವನಾಗಿ **ಕಾರ್ಪಣ್ಯಾತ್** ಕನಿಕರದಿಂದ **ಸ್ಕಂಧೇನ ಉದ್ವಹತಿ** ಹೆಗಲಮೇಲೆ ಹೊತ್ತುಕೊಳ್ಳುತ್ತಿದ್ದನು. **ಏವಂ** ಇದೇ ರೀತಿ **ಉತ್ಸಂಗೇ** ತೊಡೆಯಮೇಲೆ **ಉರಸಿ** ಎದೆಯಮೇಲೆ **ಅವಧಾಯ** ಇಟ್ಟುಕೊಂಡು **ಉಪಲಾಲಯನ್** ಮುದ್ದಿಸುತ್ತಾ **ಪರಮಾಂ ಮುದಂ ಅವಾಪ** ಬಹಳ ಸಂತೋಷಪಡುತ್ತಿದ್ದನು. ।।೧೦।।

**ಕ್ರಿಯಾಯಾಂ ನಿರ್ವರ್ತ್ಯಮಾನಾಯಾಂ ಅಂತರಾಲ ಉತ್ಥಾಯೋತ್ಥಾಯ ಯದೈನಮಭಿಚಕ್ಷೀತ ತರ್ಹಿ ವಾವ ಸ ವರ್ಷಪತಿಃ ಪ್ರಕೃತಿಸ್ಥೇನ ಮನಸಾ ತಸ್ಮೈ ಹಾಶಿಷ ಆಶಾಸ್ತೇ ಸ್ವಸ್ತಿ ಸ್ಯಾದ್ವತ್ಸ ತೇ ಸರ್ವತ ಇತಿ ।।೧೧।।**

**ಕ್ರಿಯಾಯಾಂ** ಭಗವಂತನ ಪೂಜೆ ಮೊದಲಾದವು **ನಿರ್ವರ್ತಮಾನಾಯಾಂ** ನಡೆದಾಗ (ಪೂಜೆ ಮುಂತಾದ ಕೆಲಸ ಮಾಡುವಾಗ) **ಅಂತರಾಲೇ** ಮಧ್ಯದಲ್ಲಿ **ಉತ್ಥಾಯ** ಎದ್ದು **ಯದಾ** ಯಾವಾಗ **ಏವಂ** ಇದನ್ನು **ಅಭಿಚಕ್ಷೀತ** ನೋಡುತ್ತಿದ್ದನೋ **ತರ್ಹಿ** ಆಗ **ಸಃ ವರ್ಷಪತಿಃ** ಆ ಭರತ ಖಂಡದ ಅಧಿಪತಿಯು **ಪ್ರಕೃತಿಸ್ಥೇನ ಮನಸಾ** ಸ್ವಭಾವದಲ್ಲಿದ್ದ ಮನಸ್ಸಿನಿಂದ **ವತ್ಸ** ಮಗುವೇ **ತೇ** ನಿನಗೆ **ಸರ್ವತಃ** ಎಲ್ಲ ರೀತಿಯಿಂದ **ಸ್ವಸ್ತಿ ಸ್ಯಾತ್** ಕಲ್ಯಾಣವಾಗಲಿ **ಇತಿ** ಎಂದು **ಆಶಿಷಃ ಆಶಾಸ್ತೇ** ಆಶೀರ್ವಾದ ಮಾಡುತ್ತಿದ್ದನು. ।।೧೧।।

**ಅನ್ಯದಾ ತು ಭೃಶಮುದ್ವಿಗ್ನಮನಾ ನಷ್ಟದ್ರವಿಣ ಇವ ಕೃಪಣಃ ಸಕರುಣಮತಿತರ್ಷೇಣ ಹರಿಣಕುಣಕವಿರಹವಿಹ್ವಲಹೃದಯಸಂತಾಪ-ಸ್ತಮನುಶೋಚನ್ ಕಿಲ ಕಶ್ಮಲಂ ಮಹದಭಿರಂಭಿತ ಇತಿ ಹೊವಾಚ ।।೧೨।।**





**ಅನ್ಯದಾ ತು** ಅದನ್ನು ಕಾಣದಿರುವಾಗಲಾದರೋ **ಭೃಶಂ** ಬಹಳವಾಗಿ **ಉದ್ವಿಗ್ನಮನಾಃ** ಉದ್ವಿಗ್ನ ಮನಸ್ಸುಳ್ಳವನಾಗಿ **ನಷ್ಟದ್ರವಿಣಃ ಇವ** ಹಣವನ್ನು ಕಳೆದುಕೊಂಡವನಂತೆ **ಕೃಪಣಃ** ದೀನನಾಗಿ **ಸಕರುಣಂ** ಕರುಣೆಯಿಂದ **ಅತಿತರ್ಷೇಣ** ಅತ್ಯಂತ ಉತ್ಸುಕತೆಯಿಂದ **ಹರಿಣಕುಣಕವಿರಹವಿಹ್ವಲಹೃದಯಸಂತಾಪಃ** ಜಿಂಕೆಯ ಮರಿಯ ಅಗಲುವಿಕೆಯಿಂದ ಕಾತರಗೊಂಡ ಹೃದಯದಲ್ಲಿ ಸಂತಪ್ತನಾಗಿ **ತಂ ಅನುಶೋಚನ್** ಅದನ್ನು ಕುರಿತು ದುಃಖಿಸುತ್ತಾ **ಮಹತ್ ಕಶ್ಮಲಂ ಅಭಿರಂಭಿತಃ** ಬಹಳ ವಿಷಾದವನ್ನು ಹೊಂದಿದವನಾಗಿ **ಇತಿ ಉವಾಚ ಹ** ಮುಂದೆ ಹೇಳುವಂತೆ ಮಾತಾಡಿಕೊಳ್ಳುತ್ತಿದ್ದನು. ॥೧೨॥

**ಅಪಿ ಬತ ಸ ವೈ ಕೃಪಣೈಣಬಾಲಕೋ ಮೃತಹರಿಣೀಸುತೋಽಹೋ ಮಮಾನಾರ್ಯಸ್ಯ ಶಠಕಿತವಮತೇರಕೃತಸುಕೃತಸ್ಯ ಕೃತವಿಸ್ರಂಭ ಆತ್ಮಪ್ರತ್ಯಯೇನ ತದವಿಗಣಯನ್ ಸ್ವಜನ ಇವ ಆಗಮಿಷ್ಯತಿ ॥೧೩॥**

**ಮೃತಹರಿಣೀಸುತಃ** ಸತ್ತ ಹೆಣ್ಣು ಜಿಂಕೆಯ ಮರಿಯಾದ **ಸಃ ಕೃಪಣಃ ಏಣ ಬಾಲಕಃ** ಆ ದಯಾಪಾತ್ರನಾದ ಜಿಂಕೆಯ ಮರಿಯು **ಶಠಕಿತವಮತೇಃ** ಧೂರ್ತನಂತೆ ವಂಚಕಬುದ್ಧಿಯುಳ್ಳ **ಅಕೃತಸುಕೃತಸ್ಯ** ಪುಣ್ಯ ಮಾಡದಿರುವ **ಅನಾರ್ಯಸ್ಯ ಮಮ** ಆರ್ಯನಲ್ಲದ ನನ್ನ ಮೇಲೆ **ಕೃತವಿಸ್ರಂಭಃ** ವಿಶ್ವಾಸ ಮಾಡಿ **ಆತ್ಮಪ್ರತ್ಯಯೇನ** ತನ್ನ ಮನಃಶುದ್ಧಿಯಿಂದ ಅಥವಾ ನನ್ನ ಪೋಷಕನಿವನೆಂಬ ಬುದ್ಧಿಯಿಂದ **ತತ್** ನನ್ನ ಔದಾಸೀನ್ಯವನ್ನು **ಅವಿಗಣಯನ್** ಲೆಕ್ಕಿಸದೇ (ಮನಸ್ಸಿಗೆ ತರದೇ) **ಸ್ವಜನ ಇವ** ಮಗನಂತೆ **ಅಪಿ ಆಗಮಿಷ್ಯತಿ** ಬಂದೀತೇ **ಬತ** ಅಯ್ಯೋ (ಖೇದ). ॥೧೩॥

**ಅಪಿ ಕ್ಷೇಮೇಣಾಸ್ಮಿನ್ನಾಶ್ರಮೋಪವನೇ ಶಷ್ಪಾಣಿ ಚರಂತಂ ದೇವಗುಪ್ತಂ ದ್ರಕ್ಷ್ಯಾಮಿ ॥೧೪॥**

**ಅಸ್ಮಿನ್ ಆಶ್ರಮೋಪವನೇ** ಈ ಆಶ್ರಮದ ಸಮೀಪದ ವನದಲ್ಲಿ **ಕ್ಷೇಮೇಣ** ಕುಶಲದಿಂದ **ಶಷ್ಪಾಣಿ** ಎಳೆ ಹುಲ್ಲನ್ನು **ಚರಂತಂ** ತಿನ್ನುತ್ತಿರುವ **ದೈವಗುಪ್ತಂ** ದೈವದಿಂದ ರಕ್ಷಿತವಾದ ಆ ಮರಿಯನ್ನು **ಅಪಿ ದ್ರಕ್ಷ್ಯಾಮಿ** ನೋಡುವನೇ? ॥೧೪॥

**ಅಪಿ ನ ವೃಕಃ ಸಾಲಾವೃಕೋಽನ್ಯತಮೋ ವಾ ನೈಕಚರೋ ಜಕ್ಷತಿ ॥೧೫॥**

**ವೃಕಃ** ತೋಳವಾಗಲಿ **ಸಾ(ಶಾ)ಲಾವೃಕಃ** ನಾಯಿಯಾಗಲೀ (**ಶುನಕೋ ಮೃಗದಂಶಶ್ಚ ಬುಧೈಶ್ಶಾಲಾವೃಕೋ ಮತಃ**) **ನೈಕಚರಃ** ಗುಂಪಾಗಿ ಓಡಾಡುವ ಕಾಡುಹಂದಿಯಾಗಲಿ, ಎಂಟು ಕಾಲಿನ (ಶರಭ) ಮೃಗವಾಗಲಿ **ಅನ್ಯತಮೋ ವಾ** ಬೇರೆ ಯಾವುದೋ ಒಂದು ಪ್ರಾಣಿಯಾಗಲಿ **ಅಪಿ ನ ಜಕ್ಷತಿ** ತಿಂದಿರಲಾರದಷ್ಟೇ? ||೧೫||

**ನಿಮ್ಲೋಚತಿ ಭಗವಾನ್ ಸಕಲಜಗತ್ ಕ್ಷೇಮೋದಯಃ ತ್ರಯ್ಯಾತ್ಮಾ (ಸೂರ್ಯಾತ್ಮಾ) (ಸೂರ್ಯಾಸ್ತ್ರಯಾತ್ಮಾ) ಅದ್ಯಾಪಿ ನ ಮಮ ಮೃಗವಧೂನ್ಯಾಸ ಆಗಚ್ಛತಿ ||೧೬||**

**ಸಕಲಜಗತ್ ಕ್ಷೇಮೋದಯಃ** ಎಲ್ಲ ಜಗತ್ತಿಗೆ ಕ್ಷೇಮವನ್ನುಂಟುಮಾಡುವ ಉದಯವುಳ್ಳ **ತ್ರಯ್ಯಾತ್ಮಾ** ವೇದ ಪ್ರತಿಪಾದ್ಯನಾದ **ಸೂರ್ಯಃ ಭಗವಾನ್** ಸೂರ್ಯದೇವನು **ನಿಮ್ಲೋಚತಿ** ಅಸ್ತಂಗತನಾಗುವನು **ಅದ್ಯಾಪಿ** ಈಗಲೂ **ಮಮ** ನನ್ನ **ಮೃಗವಧೂನ್ಯಾಸಃ** ಆ ಹೆಣ್ಣುಜಿಂಕೆಯ ಮರಿಯೆಂಬ ನಿಕ್ಷೇಪವು **ನ ಆಗಚ್ಛತಿ** ಬರುತ್ತಿಲ್ಲ. ||೧೬||

**ಅಪಿಸ್ವಿದಕೃತಸುಕೃತಂ ಮಾಮಾಗತ್ಯ ಸುಖಯಿಷ್ಯತಿ ಹರಿಣರಾಜಕುಮಾರೋ ವಿವಿಧ ರುಚಿರದರ್ಶನೀಯನಿಜಮೃಗದಾರಕವಿನೋದೈರಸಂತೋಷಂ ಸ್ವಾನಾಮಪನುದನ್ ||೧೭||**

**ಹರಿಣರಾಜಕುಮಾರಃ** ಆ ಶ್ರೇಷ್ಠ ಜಿಂಕೆಮರಿಯು **ವಿವಿಧ** ಅನೇಕ ಬಗೆಯ **ರುಚಿರ** ಮನೋಹರವಾದ **ದರ್ಶನೀಯ** ನೋಡಬೇಕಾದ **ನಿಜಮೃಗದಾರಕವಿನೋದೈಃ** ಜಿಂಕೆಮರಿಗಳ ಸ್ವಾಭಾವಿಕ ಕ್ರೀಡೆಗಳಿಂದ **ಸ್ವಾನಾಂ** ತನ್ನವರ **ಅಸಂತೋಷಂ** ದುಃಖವನ್ನು **ಅಪನುದನ್** ಹೋಗಲಾಡಿಸುತ್ತಾ **ಆಗತ್ಯ** ಬಂದು **ಅಕೃತಸುಕೃತಂ** ಪುಣ್ಯಮಾಡದ **ಮಮ ಸುಖಯಿಷ್ಯತಿ** ನನ್ನನ್ನು ಸುಖಪಡಿಸಬಹುದಷ್ಟೇ (ಇಲ್ಲಿ ಎಲ್ಲ ಕಡೆ ಅಪಿ ಶಬ್ದವು ಇದು ಸಂಭವಿಸಬಹುದೇ ಎಂಬರ್ಥದಲ್ಲಿದೆ). ||೧೭||

**ಕ್ಷ್ವೇಲಿಕಯಾ ಮಾಂ ಮುಧಾ ಸಮಾಧಿನಾ ಮೀಲಿತದೃಶಂ ಪ್ರೇಮ-ಸಂರಂಭೇಣ ಚಕಿತಮಾಗತ್ಯ ಪೃಷದಪರುಷವಿಷಾಣಾಗ್ರೇಣ ಲುಠತಿ ||೧೮||**

 

**(ಮೃಷಾ) ಮುಧಾ ಸಮಾಧಿನಾ** ಸುಳ್ಳಾದ (ವ್ಯರ್ಥವಾದ) ಏಕಾಗ್ರತೆಯಿಂದ **ಮೀಲಿತದೃಶಂ** ಕಣ್ಣು ಮುಚ್ಚಿರುವ **ಮಾಂ** ನನ್ನನ್ನು **ಪ್ರೇಮಸಂರಂಭೇಣ** ಪ್ರೀತಿ ಪೂರ್ವಕ ಕೋಪದಿಂದ (ಅತಿಶಯ ಪ್ರೀತಿಯಿಂದ) **ಕ್ಷ್ವೇಲಿಕಯಾ** ಕೂಗುತ್ತಾ ಅಥವಾ ಕ್ರೀಡಿಸುತ್ತಾ **ಆಗತ್ಯ** ಬಂದು **ಚಕಿತಂ** ಭಯಸಹಿತವಾಗಿ **ಪೃಷತ್** ಜಿಂಕೆಯು **ಅಪರುಷವಿಷಾಣಾಗ್ರೇಣ** ಕೋಮಲವಾದ ತನ್ನ ಕೋಡಿನ ತುದಿಯಿಂದ **ಲುಠತಿ** ತಿವಿಯುವುದು (**ಪೃಷತ್** ನೀರಿನ ಬಿಂದು ಆದರಂತೆ **ಅಪರುಷ** ಮೃದುವಾದ ಹೀಗೂ ಅರ್ಥ). ||೧೮||

**ಆಸಾದಿತಹವಿಷಿ ಬರ್ಹಿಷಿ ದೂಷಿತೇ ಮಯೋಪಾಲಬ್ಧೋ ಭೀತಭೀತಃ ಸಪದ್ಯುಪರತರಭಸ ಋಷಿಕುಮಾರವದವಹಿತಕರಣಕಲಾಪ ಆಸ್ತೇ ||೧೯||**

**ಆಸಾದಿತ ಹವಿಷಿ** ಹವಿಸ್ಸನ್ನಿಟ್ಟಿರುವ **ಬರ್ಹಿಷಿ** ದರ್ಭೆಯ ಸಮೂಹವು **ದೂಷಿತೇ** ಜಿಂಕೆಯ ಮರಿಯಿಂದ ತಿನ್ನುವುದರಿಂದ ಅಪವಿತ್ರ ಮಾಡಲ್ಪಡಲು **ಮಯಾ** ನನ್ನಿಂದ **ಉಪಾಲಬ್ಧಃ** ಗದರಿಸಲ್ಪಟ್ಟು **ಭೀತಭೀತಃ** ಭಯಗೊಂಡು **ಸಪದಿ** ಬೇಗನೇ **ಉಪರತರಭಸಃ** ತಿನ್ನುವ ಉತ್ಸಾಹವನ್ನು ಬಿಟ್ಟು **ಅವಹಿತಕರಣಕಲಾಪಃ** ಎಲ್ಲ ಇಂದ್ರಿಯ ವ್ಯಾಪಾರಗಳನ್ನು ಅಡಗಿಸಿಕೊಂಡು (ಅಲಗಾಡದೆ) **ಋಷಿಕುಮಾರವತ್ ಆಸ್ತೇ** ಮುನಿಕುಮಾರನಂತೆ ಇರುವುದು. ||೧೯||

ಈ ರೀತಿ ಬಹುವಾಗಿ ಪ್ರಲಾಪಿಸಿ ಎದ್ದು ಹೊರಗೆ ಹೋಗಿ ಅದರ ಹೆಜ್ಜೆಯನ್ನು ಕಂಡು ಮಾತನಾಡುವನು

**ಕಿಂ ವಾ ಅರೇ ಆಚರಿತಂ ತಪಸ್ತಪಸ್ವಿನ್ಯಾನಯಾ ಯದಿಯಮವನಿಃ ಸವಿನಯಕೃಷ್ಣಸಾರತನಯತನುತರಸುಭಗಶಿವತಮಖರಖುರಪದ-ಪಂಕ್ತಿಭಿರ್ದ್ರವಿಣವಿಧುರಾತುರಸ್ಯ ಕೃಪಣಸ್ಯ ಮಮ ದ್ರವಿಣಪದವೀಂ ಸೂಚಯಂತ್ಯಾತ್ಮಾನಂ ಸರ್ವತಃ ಕೃತಕೌತುಕಂ ದ್ವಿಜಾನಾಂ ಸ್ವರ್ಗಾಪವರ್ಗ-ಕಾಮಾನಾಂ ದೇವಯಜನಂ ಕರೋತಿ ||೨೦||**

**ತಪಸ್ವಿನಾ ಅನಯಾ ಕಿಂ ತಪಃ ಆಚರಿತಂ** ತಪಸ್ಸು ಮಾಡುವ ಸ್ವಭಾವದ ಈ ಭೂಮಿಯಿಂದ ಯಾವ ತಪಸ್ಸು ಮಾಡಲ್ಪಟ್ಟಿದೆ? **ಯತ್** ಏಕೆಂದರೆ **ಇಯಂ ಅವನಿಃ** ಈ ಭೂಮಿಯು **ಸವಿನಯ** ವಿನಯದಿಂದ ಕೂಡಿದ **ಕೃಷ್ಣಸಾರತನಯ** ಜಿಂಕೆಯ

ಮರಿಯ **ತನುತರ** ಅತಿಸೂಕ್ಷ್ಮಗಳಾದ **ಸುಭಗ** ಸುಂದರಗಳಾದ **ಶಿವತಮ** ಮಂಗಳಕರಗಳಾದ **ಖರ** ಕಠಿಣಗಳಾದ **ಖುರ** ಗೊರಸುಗಳ ಹೆಜ್ಜೆಗಳ ಚಿನ್ಹೆಗಳ **ಪಂಕ್ತಿಭಿಃ** ಸಾಲುಗಳಿಂದ **ದ್ರವಿಣವಿಧುರಾತುರಸ್ಯ** ಮೃಗವೆಂಬ ಹಣವನ್ನು ಕಳೆದುಕೊಂಡುದರಿಂದ ದುಃಖಿತನಾದ **ಕೃಪಣಸ್ಯ** ದೀನನಾದ **ಮಮ** ನನಗೆ **ದ್ರವಿಣಪದವೀಂ** ಹಣ(ಜಿಂಕೆ) ಇರುವ ಹಾದಿಯನ್ನು **ಸೂಚಯಂತೀ** ತೋರಿಸುವುದಾಗಿ **ಆತ್ಮಾನಂ** ನನ್ನನ್ನು **ಸರ್ವತಃ ಕೃತಕೌತುಕಂ** ಎಲ್ಲ ಕಡೆಯೂ ಆ ಹೆಜ್ಜೆಗಳಿಂದ ಪವಿತ್ರಗೊಂಡವಳನ್ನು **ಸ್ವರ್ಗಾಪವರ್ಗಕಾಮಾನಾಂ** ಸ್ವರ್ಗ ಮತ್ತು ಮೋಕ್ಷವನ್ನಪೇಕ್ಷಿಸುವ **ದ್ವಿಜಾನಾಂ** ಬ್ರಾಹ್ಮಣರಿಗೆ **ದೇವಯಜನಂ ಕರೋತಿ** ಯಜ್ಞಭೂಮಿಯನ್ನಾಗಿಸುವಳು. ।।೨೦।।

"**ಯಸ್ಮಿನ್ ದೇಶೇ ಮೃಗಃ ಕೃಷ್ಣಃ ತಸ್ಮಿನ್ ಧರ್ಮಾನ್ ನಿಬೋಧತ**" ಎಂಬ ಸ್ಮೃತಿಯು ಜಿಂಕೆಯು ಇರುವ ನೆಲವೇ ಧರ್ಮಾಚರಣೆಗೆ ಯೋಗ್ಯವೆಂದು ಹೇಳುವುದು. ಹೀಗೆ ಭೂಮಿಯು ನನಗೂ ಬ್ರಾಹ್ಮಣರಿಗೂ ಉಪಕಾರಿಯಾದುದರಿಂದ ಏನು ತಪಸ್ಸು ಮಾಡಿರಬಹುದು ಎಂದು ಭಾವ. ।।೨೦।।

ಈಗ ಚಂದ್ರೋದಯವಾದರೂ ಜಿಂಕೆ ಬರದಿರುವುದನ್ನು ಕಂಡು ಭ್ರಾಂತನಾಗಿ ಪ್ರಲಾಪಿಸುವುದನ್ನು ತಿಳಿಸುವರು.

**ಅಪಿಸ್ವಿದಸೌ ಭಗವಾನುಡುಪ ಏನಂ ಮೃಗಪತಿಭಯಾನ್ಮೃತಮಾತರಂ ಮಮ ಮೃಗಬಾಲಕಂ ಸ್ವಾಶ್ರಮಪರಿಭ್ರಷ್ಟಮನುಕಂಪಯಾ ಕೃಪಣಜನವತ್ಸಲಃ ಪರಿಪಾಲಯತಿ । ಏಷ ತೇ ಹರಿಣಕುಣಕೋಪನಿಧಿಃ ಮಯಾಗುಪ್ತಃ ಇತಿ ।।೨೦।।**

**ಅಸೌ** ಕಾಣುತ್ತಿರುವ **ಕೃಪಣಜನವತ್ಸಲಃ** ದೀನ ಜನರಲ್ಲಿ ವಾತ್ಸಲ್ಯವುಳ್ಳ **ಭಗವಾನ್ ಉಡುಪಃ** ಪೂಜ್ಯನಾದ ಚಂದ್ರನು **ಮೃತಮಾತರಂ** ತಾಯಿ ಇಲ್ಲದ **ಏನಂ** ಈ ಜಿಂಕೆಯನ್ನು **ಮಮ** ನನ್ನ **ಮೃಗಬಾಲಕಂ** ಜಿಂಕೆ ಮರಿಯನ್ನೇ **ಮೃಗಪತಿಭಯಾತ್** ಸಿಂಹದ ಭಯದಿಂದ **ಸ್ವಾಶ್ರಮಪರಿಭ್ರಷ್ಟಂ** ತನ್ನ (ವಾಸಸ್ಥಳವಾದ) ಆಶ್ರಮದಿಂದ ತಪ್ಪಿಸಿಕೊಂಡು ಹೋಗಿರುವುದನ್ನು **ಅನುಕಂಪಯಾ** ದಯೆಯಿಂದ **ಅಪಿಸ್ವಿತ್ ಪರಿಪಾಲಯತಿ?** ಕಾಪಾಡುತ್ತಿರುವನೇ? ರಕ್ಷಿಸಿ ನನಗೆ ತಿರುಗಿಕೊಡುವನೇನು? ಎಂದು ಹೇಳುವನು **ಏಷಃ** ಈ **ತೇ** ನಿನ್ನ **ಹರಿಣಕುಣಕೋಪನಿಧಿಃ** ಜಿಂಕೆಮರಿಯೆಂಬ




ನಿಧಿಯು **ಮಯಾ ಗುಪ್ತಃ ಇತಿ ಉಕ್ತ್ವಾ ಅಪಿಸ್ವಿತ್ ದಾಸ್ಯತಿ** ನಾನು ರಕ್ಷಿಸಿದ್ದೇನೆ ಎಂದು ಹೇಳಿ ಕೊಡುವನೇ?

ಮತ್ತೊಂದು ಪ್ರಲಾಪಹೇಳುವರು

**ಕಿಂ ವಾ ಆತ್ಮಜವಿಶ್ಲೇಷಜ್ವರದಾವದಹನಶಿಖಾಭಿರುಪತಪ್ಯಮಾನಹೃದಯ-ಸ್ಥಲನಲಿನಂ ಮಾಮುಪಸ್ಸತಮೃಗೀತನಯಃ ಶಿಶಿರಶಾಂತಾನುರಾಗಗುಣಿತ-ನಿಜವದನಸಲಿಲಾಮೃತ ಮಯಗಭಸ್ತಿಭಿಃ ।।೨೨।।**

**ಆತ್ಮಜಃ** ಮಗನಂತೆ ಇರುವ ಜಿಂಕೆಯ **ವಿಶ್ಲೇಷ** ವಿಯೋಗದಿಂದುಂಟಾದ **ಜ್ವರ** ಜ್ವರವೆಂಬ **ದಾವದಹನಶಿಖಾಭಿಃ** ಕಾಡುಗಿಚ್ಚಿನ ಜ್ವಾಲೆಗಳಿಂದ **ಉಪತಪ್ಯಮಾನ** ಬೆಂದು ಹೋಗುತ್ತಿರುವ **ಹೃದಯ** ಹೃದಯವೆಂಬ **ಸ್ಥಲನಲಿನಂ** ನೆಲಗಮಲ ಉಳ್ಳ **ಮಾಂ** ನನ್ನನ್ನು (ಸಂತಾಪ ತಡೆಯುವುದೆಂದು ಸೂಚಿಸಲು ಸ್ಥಲಪದ್ಮ ಎಂದಿರುವರು) **ಉಪಸ್ಸತಮೃಗೀ ತನಯಃ** ಸಮೀಪಿಸಿದ ಜಿಂಕೆಯ ಮರಿಯು **ಶಿಶಿರಶಾಂತ** ಹಿಮದಂತೆ ತಂಪಾದ **ಅನುರಾಗಗುಣಿತ** ಪ್ರೀತಿಯಿಂದ ಬರುತ್ತಿರುವ **ನಿಜ** ತನ್ನ **ವದನಸಲಿಲ** ಮುಖದಿಂದ ಬರುವನೀರೆಂಬ **ಅಮೃತಮಯಗಭಸ್ತಿಭಿಃ** ಅಮೃತತುಂಬಿರುವ ಚಂದ್ರನ ರಶ್ಮಿಗಳಿಂದ **ಅಪಿಸ್ವಿತ್ ಸ್ವಧಯತಿ?** ಸುಖ ಪಡಿಸೀತೇ? ಎಂದೂ ಅಂದನು. ।।೨೨।।

ಜ್ಞಾನಿಯಾದವನಿಗೆ ಈ ವಿಧವಾದ ಆಸಕ್ತಿಯು ಹೇಗೆ ಎಂಬ ಶಂಕೆಯನ್ನು ಪರಿಹರಿಸುತ್ತ ಆಸಕ್ತಿಯ ಫಲವನ್ನು ಹೇಳುವರು.

**ಇತಿ ಚೈವಮಘಟಮಾನಮನೋರಥಾಕುಲಹೃದಯೋ ಮೃಗದಾರಕಾ-ಭಾಸೇನ ಸ್ವಾರಬ್ಧಕರ್ಮಣಾ ಯೋಗಾರಂಭಣತೋ ವಿಭ್ರಂಶಿತಃ ಸ ಯೋಗತಾಪಸೋ ಭಗವದಾರಾಧನಲಕ್ಷಣಾಚ್ಚ ಕಥಮಿತರಥಾ ಜಾತ್ಯಂತರ ಏಣಕುಣಕೇ ಆಸಂಗಃ ಸಾಕ್ಷಾನ್ನಿಶ್ರೇಯಸಪ್ರತಿಪಕ್ಷತಯಾ ಪ್ರಾಕ್ ಪರಿತ್ಯಕ್ತ-ದುಸ್ತ್ಯಜಹೃದಯಾಭಿಜಾತಸ್ಯ ತಸ್ಯೈವಮಂತರಾಯವಿಹತಯೋಗಾರಂಭಣಸ್ಯ ರಾಜರ್ಷೇರ್ಭರತಸ್ಯ ತಾವನ್ಮೃಗಾರ್ಭಕಪೋಷಣಪಾಲನಪ್ರೀಣನ-ಲಾಲನಾನುಷಂಗೇಣಾವಿಗಣಯತ ಆತ್ಮಾನಮಹಿರಿವಾಖುಬಿಲಂ ದುರತಿಕ್ರಮಃ ಕಾಲಃ ಕರಾಲರಭಸ ಆಪದ್ಯತ ।।೨೩।।**

ಮರಿಯ **ತನುತರ** ಅತಿಸೂಕ್ಷ್ಮಗಳಾದ **ಸುಭಗ** ಸುಂದರಗಳಾದ **ಶಿವತಮ** ಮಂಗಳಕರಗಳಾದ **ಖರ** ಕಠಿಣಗಳಾದ **ಖುರ** ಗೊರಸುಗಳ ಹೆಜ್ಜೆಗಳ ಚಿನ್ಹೆಗಳ **ಪಂಕ್ತಿಭಿಃ** ಸಾಲುಗಳಿಂದ **ದ್ರವಿಣವಿಧುರಾತುರಸ್ಯ** ಮೃಗವೆಂಬ ಹಣವನ್ನು ಕಳೆದುಕೊಂಡುದರಿಂದ ದುಃಖಿತನಾದ **ಕೃಪಣಸ್ಯ** ದೀನನಾದ **ಮಮ** ನನಗೆ **ದ್ರವಿಣಪದವೀಂ** ಹಣ(ಜಿಂಕೆ) ವಿರುವ ಹಾದಿಯನ್ನು **ಸೂಚಯಂತೀ** ತೋರಿಸುವುದಾಗಿ **ಆತ್ಮಾನಂ** ನನ್ನನ್ನು **ಸರ್ವತಃ ಕೃತಕೌತುಕಂ** ಎಲ್ಲ ಕಡೆಯೂ ಆ ಹೆಜ್ಜೆಗಳಿಂದ ಪವಿತ್ರಗೊಂಡವಳನ್ನು **ಸ್ವರ್ಗಾಪವರ್ಗಕಾಮಾನಾಂ** ಸ್ವರ್ಗ ಮತ್ತು ಮೋಕ್ಷವನ್ನಪೇಕ್ಷಿಸುವ **ದ್ವಿಜಾನಾಂ** ಬ್ರಾಹ್ಮಣರಿಗೆ **ದೇವಯಜನಂ ಕರೋತಿ** ಯಜ್ಞಭೂಮಿಯನ್ನಾಗಿಸುವಳು. ।।೨೦।।

''**ಯಸ್ಮಿನ್ ದೇಶೇ ಮೃಗಃ ಕೃಷ್ಣಃ ತಸ್ಮಿನ್ ಧರ್ಮಾನ್ ನಿಬೋಧತ**'' ಎಂಬ ಸ್ಮೃತಿಯು ಜಿಂಕೆಯು ಇರುವ ನೆಲವೇ ಧರ್ಮಾಚರಣೆಗೆ ಯೋಗ್ಯವೆಂದು ಹೇಳುವುದು. ಹೀಗೆ ಭೂಮಿಯು ನನಗೂ ಬ್ರಾಹ್ಮಣರಿಗೂ ಉಪಕಾರಿಯಾದುದರಿಂದ ಏನು ತಪಸ್ಸು ಮಾಡಿರಬಹುದು ಎಂದು ಭಾವ. ।।೨೦।।

ಈಗ ಚಂದ್ರೋದಯವಾದರೂ ಜಿಂಕೆ ಬರದಿರುವುದನ್ನು ಕಂಡು ಭ್ರಾಂತನಾಗಿ ಪ್ರಲಾಪಿಸುವುದನ್ನು ತಿಳಿಸುವರು.

**ಅಪಿಸ್ವಿದಸೌ ಭಗವಾನುಡುಪ ಏನಂ ಮೃಗಪತಿಭಯಾನ್ಮೃತಮಾತರಂ ಮಮ ಮೃಗಬಾಲಕಂ ಸ್ವಾಶ್ರಮಪರಿಭ್ರಷ್ಟಮನುಕಂಪಯಾ ಕೃಪಣಜನವತ್ಸಲಃ ಪರಿಪಾಲಯತಿ । ಏಷ ತೇ ಹರಿಣಕುಣಕೋಪನಿಧಿಃ ಮಯಾಗುಪ್ತಃ ಇತಿ ।।೨೦।।**

**ಅಸೌ** ಕಾಣುತ್ತಿರುವ **ಕೃಪಣಜನವತ್ಸಲಃ** ದೀನ ಜನರಲ್ಲಿ ವಾತ್ಸಲ್ಯವುಳ್ಳ **ಭಗವಾನ್ ಉಡುಪಃ** ಪೂಜ್ಯನಾದ ಚಂದ್ರನು **ಮೃತಮಾತರಂ** ತಾಯಿ ಇಲ್ಲದ **ಏನಂ** ಈ ಜಿಂಕೆಯನ್ನು **ಮಮ** ನನ್ನ **ಮೃಗಬಾಲಕಂ** ಜಿಂಕೆ ಮರಿಯನ್ನೇ **ಮೃಗಪತಿಭಯಾತ್** ಸಿಂಹದ ಭಯದಿಂದ **ಸ್ವಾಶ್ರಮಪರಿಭ್ರಷ್ಟಂ** ತನ್ನ (ವಾಸಸ್ಥಳವಾದ) ಆಶ್ರಮದಿಂದ ತಪ್ಪಿಸಿಕೊಂಡು ಹೋಗಿರುವುದನ್ನು **ಅನುಕಂಪಯಾ** ದಯೆಯಿಂದ **ಅಪಿಸ್ವಿತ್ ಪರಿಪಾಲಯತಿ?** ಕಾಪಾಡುತ್ತಿರುವನೇ? ರಕ್ಷಿಸಿ ನನಗೆ ತಿರುಗಿಕೊಡುವನೇನು? ಎಂದು ಹೇಳುವನು **ಏಷಃ** ಈ **ತೇ** ನಿನ್ನ **ಹರಿಣಕುಣಕೋಪನಿಧಿಃ** ಜಿಂಕೆಮರಿಯೆಂಬ




ನಿಧಿಯು **ಮಯಾ ಗುಪ್ತಃ ಇತಿ ಉಕ್ತ್ವಾ ಅಪಿಸ್ವಿತ್ ದಾಸ್ಯತಿ** ನಾನು ರಕ್ಷಿಸಿದ್ದೇನೆ ಎಂದು ಹೇಳಿ ಕೊಡುವನೇ?

ಮತ್ತೊಂದು ಪ್ರಲಾಪಹೇಳುವರು

**ಕಿಂ ವಾ ಆತ್ಮಜವಿಶ್ಲೇಷಜ್ವರದಾವದಹನಶಿಖಾಭಿರುಪತಪ್ಯಮಾನಹೃದಯ-ಸ್ಥಲನಲಿನಂ ಮಾಮುಪಸೃತಮೃಗೀತನಯಃ ಶಿಶಿರಶಾಂತಾನುರಾಗಗುಣಿತ-ನಿಜವದನಸಲಿಲಾಮೃತ ಮಯಗಭಸ್ತಿಭಿಃ ॥೨೨॥**

**ಆತ್ಮಜಃ** ಮಗನಂತೆ ಇರುವ ಜಿಂಕೆಯ **ವಿಶ್ಲೇಷ** ವಿಯೋಗದಿಂದುಂಟಾದ ಜ್ವರ ಜ್ವರವೆಂಬ **ದಾವದಹನಶಿಖಾಭಿಃ** ಕಾಡುಗಿಚ್ಚಿನ ಜ್ವಾಲೆಗಳಿಂದ **ಉಪತಪ್ಯಮಾನ** ಬೆಂದು ಹೋಗುತ್ತಿರುವ **ಹೃದಯ** ಹೃದಯವೆಂಬ **ಸ್ಥಲನಲಿನಂ** ನೆಲಗಮಲ ಉಳ್ಳ **ಮಾಂ** ನನ್ನನ್ನು (ಸಂತಾಪ ತಡೆಯುವುದೆಂದು ಸೂಚಿಸಲು ಸ್ಥಲಪದ್ಮ ಎಂದಿರುವರು) **ಉಪಸೃತಮೃಗೀ ತನಯಃ** ಸಮೀಪಿಸಿದ ಜಿಂಕೆಯ ಮರಿಯು **ಶಿಶಿರಶಾಂತ** ಹಿಮದಂತೆ ತಂಪಾದ **ಅನುರಾಗಗುಣಿತ** ಪ್ರೀತಿಯಿಂದ ಬರುತ್ತಿರುವ **ನಿಜ** ತನ್ನ **ವದನಸಲಿಲ** ಮುಖದಿಂದ ಬರುವನೀರೆಂಬ **ಅಮೃತಮಯಗಭಸ್ತಿಭಿಃ** ಅಮೃತತುಂಬಿರುವ ಚಂದ್ರನ ರಶ್ಮಿಗಳಿಂದ **ಅಪಿಸ್ವಿತ್ ಸ್ವಧಯತಿ?** ಸುಖ ಪಡಿಸೀತೇ? ಎಂದೂ ಅಂದನು. ॥೨೨॥

ಜ್ಞಾನಿಯಾದವನಿಗೆ ಈ ವಿಧವಾದ ಆಸಕ್ತಿಯು ಹೇಗೆ ಎಂಬ ಶಂಕೆಯನ್ನು ಪರಿಹರಿಸುತ್ತ ಆಸಕ್ತಿಯ ಫಲವನ್ನು ಹೇಳುವರು.

**ಇತಿ ಚೈವಮಘಟಮಾನಮನೋರಥಾಕುಲಹೃದಯೋ ಮೃಗದಾರಕಾ-ಭಾಸೇನ ಸ್ವಾರಬ್ಧಕರ್ಮಣಾ ಯೋಗಾರಂಭಣತೋ ವಿಭ್ರಂಶಿತಃ ಸ ಯೋಗತಾಪಸೋ ಭಗವದಾರಾಧನಲಕ್ಷಣಾಚ್ಚ ಕಥಮಿತರಥಾ ಜಾತ್ಯಂತರ ಏಣಕುಣಕೇ ಆಸಂಗಃ ಸಾಕ್ಷಾನ್ನಿಶ್ರೇಯಸಪ್ರತಿಪಕ್ಷತಯಾ ಪ್ರಾಕ್ ಪರಿತ್ಯಕ್ತ-ದುಸ್ತ್ಯಜಹೃದಯಾಭಿಜಾತಸ್ಯ ತಸ್ಯೈವಮಂತರಾಯವಿಹತಯೋಗಾರಂಭಣಸ್ಯ ರಾಜರ್ಷೇರ್ಭರತಸ್ಯ ತಾವನ್ಮೃಗಾರ್ಭಕಪೋಷಣಪಾಲನಪ್ರೀಣನ-ಲಾಲನಾನುಷಂಗೇಣಾವಿಗಣಯತ ಆತ್ಮಾನಮಹಿರಿವಾಖುಬಿಲಂ ದುರತಿಕ್ರಮಃ ಕಾಲಃ ಕರಾಲರಭಸ ಆಪದ್ಯತ ॥೨೩॥**

**ಇತಿ ಚ** ಇದೇ ರೀತಿಯಾಗಿಯೂ ಮಾತನಾಡಿದನು ಎಂದು ಹಿಂದೆ ಅನ್ವಯ **ಏವಂ** ಈ ರೀತಿಯಾಗಿ **ಅಘಟಮಾನ** ಮನುಷ್ಯನಿಗೆ ಪೂರ್ತಿಯಾಗದ **ಮನೋರಥಾಕುಲಹೃದಯಃ** ಜಿಂಕೆಯ ಮೇಲಿನ ಸ್ನೇಹ, ಅಭಿಮಾನ ವಿಶೇಷದಿಂದ ವ್ಯಾಕುಲವಾದ ಮನಸ್ಸುಳ್ಳ **ಸಃ ಯೋಗತಾಪಸಃ** ತಪಸ್ವಿಯಾದ ಭರತನು **ಮೃಗದಾರಕಾಭಾಸೇನ** ಜಿಂಕೆಯ ಮರಿಯಂತೆ ಕಾಣುವ **ಸ್ವಾರಬ್ಧಕರ್ಮಣಾ** ತನ್ನ ಪ್ರಾರಬ್ಧ ಕರ್ಮದಿಂದ (ಪ್ರಾರಬ್ಧಕರ್ಮದಿಂದಲೇ ಜಿಂಕೆ ಸಹವಾಸವೆಂದು ಭಾವ). **ಯೋಗಾರಂಭಣತಃ** ಯೋಗಾಭ್ಯಾಸದಿಂದಲೂ **ಭಗವದಾರಾಧನಲಕ್ಷಣಾಚ್ಚ** ಶ್ರೀಹರಿಯ ಆರಾಧನವೆಂಬ ಕರ್ಮದಿಂದಲೂ **ವಿಭ್ರಂಶಿತಃ** ಭ್ರಷ್ಟನಾದನು **ಇತರಥಾ** ಪ್ರಾರಬ್ಧ ಕರ್ಮವಿಲ್ಲದಿದ್ದರೆ **ನಿಶ್ರೇಯಸಪ್ರತಿಪಕ್ಷತಯಾ** ಮೋಕ್ಷಕ್ಕೆ ಪ್ರತಿಬಂಧಕ-ವಾದುದರಿಂದಲೇ **ದುಸ್ತ್ಯಜ** ಬಿಡಲಾಗದ **ಹೃದಯಾಭಿಜಾತಸ್ಯ** ಔರಸ ಪುತ್ರರ **ಪ್ರಾಕ್ ಪರಿತ್ಯಕ್ತ** ಅಭಿಮಾನವನ್ನೂ ಮೊದಲೇ ಬಿಟ್ಟ ಭರತನಿಗೆ **ಜಾತ್ಯಂತರ ಏಣಕುಣಕೇ** ಮನುಷ್ಯಜಾತಿಯೂ ಅಲ್ಲದ ಜಿಂಕೆಮರಿಯಲ್ಲಿ **ಸಾಕ್ಷಾತ್ ಆಸಂಗಃ ಕಥಂ** ಮುಖ್ಯವಾದ ಆಸಕ್ತಿ ಹೇಗೆ ಬರುತ್ತಿತು? **ಏವಂ** ಈ ರೀತಿ **ಅಂತರಾಯವಿಹತಯೋಗಾರಂಭಣಸ್ಯ** ವಿಘ್ನದಿಂದ ಕುಂಠಿತವಾದ ಧ್ಯಾನೋಪಕ್ರಮವುಳ್ಳ **ಮೃಗಾರ್ಭಕ** ಜಿಂಕೆ ಮರಿಯ **ಪೋಷಣ ಪಾಲನ ಪ್ರೀಣನ ಲಾಲನಾನುಷಂಗೇಣ** ಪೋಷಿಸುವುದು, ರಕ್ಷಿಸುವುದು, ಪ್ರೀತಿಪಡಿಸುವುದು, ಮುದ್ದಾಡುವುದು ಇವುಗಳಲ್ಲಿಯ ಆಸಕ್ತಿಯಿಂದ **ಆತ್ಮಾನಂ** ಶ್ರೀಹರಿಯನ್ನು ತನ್ನನ್ನೂ **ಅವಿಗಣಯತಃ** ಯೋಚಿಸದಿರುವ **ತಸ್ಯ** ಆ ಭರತರಾಜನಿಗೆ **ಕರಾಲರಭಸಃ** ಭಾರೀ ವೇಗವುಳ್ಳ **ದುರತಿಕ್ರಮಃ** ಯಾರಿಂದಲೂ ಮೀರಲಾಗದ **ಕಾಲಃ** ಮರಣ ಸಮಯವು **ತಾವತ್** ಆಗಲೇ **ಆಖುಬಿಲಂ** ಇಲಿಯ ಹೊರಿಗೆ **ಅಹಿಃ ಇವ** ಹಾವಿನಂತೆ **ಆಪದ್ಯತ** ಬಂದೊದಗಿತು. ।।೨೩।।

**ತದಾನೀಮಪಿ ಪಾರ್ಶ್ವವರ್ತಿನಮಾತ್ಮಜಂ ಬಂಧುಮಿವಾನುಶೋಚಂತ-ಮಭಿವೀಕ್ಷಮಾಣೋ ಮೃಗ ಏವಾಭಿವೇಶಿತಮನಾ ವಿಸೃಜ್ಯ ಲೋಕಮಿಮಂ ಸಹ ಮೃಗೇಣ ಕಲೇವರಂ ಅನುಸ್ಮೃತಜನ್ಮಾನುಸ್ಮೃತಿಃ ಇತರವತ್ ಮೃಗಶರೀರಮವಾಪ (ಕಲೇವರಂ ಮೃತಮನು ನಮೃತಜನ್ಮಾನುಸ್ಮೃತಿಃ ಎಂದು ಪಾಠಾಂತರ) ।।೨೪।।**

**ತದಾನೀಂ ಅಪಿ** ಆ ಮರಣ ಕಾಲದಲ್ಲಿಯೂ **ಅನುಶೋಚಂತಂ** ದುಃಖಪಡುವ ತನ್ನನ್ನು ನೋಡಿ **ದುಃಖಿಸುತ್ತಿದ್ದ ಬಂಧುಮಿವ** ಬಂಧುವಿನಂತೆ **ಪಾರ್ಶ್ವವರ್ತಿನಂ**

ಹತ್ತಿರದಲ್ಲಿದ್ದ **ಆತ್ಮಜಂ** ಇವ ಮಗನಂತೆ ಇದ್ದ **ಮೃಗೇ ಏವ** ಜಿಂಕೆಯ ಮರಿಯಲ್ಲಿಯೇ **ಅಭಿವೇಶಿತ ಮನಾಃ** ಮನಸಿಟ್ಟು **ಅಭಿವೀಕ್ಷಮಾಣಃ** ನೋಡುತ್ತಾ **ಇಮಂ ಲೋಕಂ** ಈ ಭೂಲೋಕವನ್ನು **ಮೃಗೇಣ ಸಹ** ಜಿಂಕೆಯೊಡನೆ ಇರುವ **ಕಲೇವರಂ** ಭರತನೆಂದು ಕರೆಸಿಕೊಳ್ಳುವ ಶರೀರವನ್ನೂ **ವಿಸೃಜ್ಯ** ಬಿಟ್ಟು **ಅನುಸ್ಮೃತಜನ್ಮಾನುಸ್ಮೃತಿಃ** ಪೂರ್ವಜನ್ಮದ ಮತ್ತು ಆಗಿರುವ ಪದಾರ್ಥಗಳ ಸ್ಮರಣವುಳ್ಳವನಾಗಿ **ಇತರವತ್** ಅಜ್ಞಾನಿಯಂತೆ **ಮೃಗಶರೀರಂ ಅವಾಪ** ಕಾಲಂಜನ ಪರ್ವತದಲ್ಲಿ ಜಿಂಕೆಯ ದೇಹವನ್ನು ಪಡೆದನು. **ಮೃತಕಲೇವರಂ ಅನು** ಸತ್ತ ದೇಹದೊಡನೆ **ನಮೃತಜನ್ಮಾನು-ಸ್ಮೃತಿಃ** ನಷ್ಟವಾಗದಿರುವ ಪೂರ್ವಜನ್ಮದ ಸ್ಮರಣವುಳ್ಳ ಎಂದು ಅರ್ಥ. ||೨೭||

**ತತ್ರಾಪಿ ಹ ವಾ ಆತ್ಮನೋ ಮೃಗತ್ವಕಾರಣಂ ಭಗವದಾರಾಧನ-ಸಮೀಹಾನುಭಾವೇನಾನುಸ್ಮೃತ್ಯ ಭೃಶಮನುತಪ್ಯಮಾನಃ ಆಹ ||೨೫||**

**ತತ್ರಾಪಿ** ಆ ಜಿಂಕೆಯ ಜನ್ಮದಲ್ಲಿಯೂ **ಭಗವದಾರಧನಸಮೀಹಾನುಭಾವೇನ** ಶ್ರೀಹರಿಯನ್ನು ಪೂಜಿಸಿದ್ದರ ಪ್ರಭಾವದಿಂದ **ಆತ್ಮನಃ** ತನಗೆ **ಮೃಗತ್ವಕಾರಣಂ** ಆ ಜಿಂಕೆ ಜನ್ಮ ಬರಲು ಕಾರಣವನ್ನು **ಅನುಸ್ಮೃತ್ಯ** ಸ್ಮರಣೆ ಮಾಡಿಕೊಂಡು **ಭೃಶಂ ಅನುತಪ್ಯಮಾನಃ** ಬಹಳ ದುಃಖಪಡುವವನಾಗಿ **ಆಹ** ತನ್ನ ಮನಸ್ಸಿನಲ್ಲಿ ಹೇಳಿಕೊಂಡನು. ||೨೫||

ಏನು ಹೇಳಿಕೊಂಡನೆಂದು ಹೇಳುವರು

**ಅಹೋ ಕಷ್ಟಂ ಭ್ರಷ್ಟೋऽಹಂ ಆತ್ಮವತ್ತಾನುಪಥಾದ್ಯದ್ವಿಮುಕ್ತಸಮಸ್ತಸಂಗಸ್ಯ ವಿವಿಕ್ತ ಪುಣ್ಯಾರಣ್ಯಶರಣಸ್ಯಾತ್ಮವತಃ ಆತ್ಮನಿ ಸರ್ವೇಷಾಮಾತ್ಮನಾಂ ಭಗವತಿ ವಾಸುದೇವೇ ತದನುಶ್ರವಣಮನನಸಂಕೀರ್ತನಾರಾಧನಾನುಸ್ಮರಣಾಭಿ-ಯೋಗೇನಾಶೂನ್ಯಸಕಲಯಾಮೇನ ಕಾಲೇನ ಸಮಾವೇಶಿತಂ ಸಮಾಹಿತಂ ಕಾರ್ತ್ಸ್ನ್ಯೇನ ಮನಸ್ತತ್ತು ಪುನರ್ಮಮಾಬುಧಸ್ಯ ರಾಗಾನ್ಮೃಗಸುತ-ಮನುಪರಿಸುಸ್ರಾವ ||೨೬||**

**ಅಹೋ ಕಷ್ಟಂ** (ಸಖೇದಾಶ್ಚರ್ಯವು) ಅದೇನು ಕಷ್ಟ ಎಂದರೆ **ಆತ್ಮವತ್ತಾನುಪಥಾತ್ ಭ್ರಷ್ಟಃ ಅಹಂ** ಆತ್ಮವಂತರಾದ (ಶ್ರೀಹರಿಯನ್ನು ತಿಳಿದ) ಜ್ಞಾನಿಗಳ ಧರ್ಮಗಳಾದ ಧ್ಯಾನಮೊದಲಾದವುಗಳನ್ನು ಅನುಸರಿಸುವ ಮಾರ್ಗದಿಂದ ಕೆಳಗೆ ಬಿದ್ದ ನಾನು **ಯತ್** ಏಕೆಂದರೆ **ವಿಮುಕ್ತಸಮಸ್ತಸಂಗಸ್ಯ** ಎಲ್ಲ ವಿಷಯ

ಸಂಗವನ್ನೂ ಬಿಟ್ಟು **ವಿವಿಕ್ತಪುಣ್ಯಾರಣ್ಯಶರಣಸ್ಯ** ಜನರಿಲ್ಲದ ಏಕಾಂತ ಸ್ಥಳವಾದ ಪುಣ್ಯಸಾಧನ ಅರಣ್ಯವಾದ ಪುಲಹಾಶ್ರಮವನ್ನೇ ಮನೆಯನ್ನಾಗಿ ಮಾಡಿಕೊಂಡ **ಆತ್ಮವತಃ** ಮನಸ್ಸನ್ನು ವಶದಲ್ಲಿಟ್ಟುಕೊಂಡ ಯಾವನನ್ನು **ಸರ್ವೇಷಾಂ ಆತ್ಮನಿ** ಎಲ್ಲರ ಸ್ವಾಮಿಯಾದ ವಾಸುದೇವನಲ್ಲಿ **ತದನುಶ್ರವಣ** ಅವನ ಚರಿತ್ರೆ ಕೇಳುವುದು **ಮನನ** ಯುಕ್ತಿಯಿಂದ ಚಿಂತಿಸುವುದು **ಸಂಕೀರ್ತನ** ಹೇಳುವುದು **ಆರಾಧನ** ಪೂಜಿಸುವುದು **ಅನುಸ್ಮರಣ** ಪುನಃ ಪುನಃ ಸ್ಮರಿಸುವುದು ಎಂಬ ಕಾರ್ಯಗಳಲ್ಲಿ **ಅಭಿಯೋಗ** ಆಸಕ್ತಿಯಿ(ಆಗ್ರಹದಿ)ಂದ **ಅಶೂನ್ಯಸಕಲಯಾಮೇನ** ಸಫಲವಾದ ಎಲ್ಲ ಜಾವಗಳುಳ್ಳ **ಕಾಲೇನ** ಕಾಲದಿಂದಲೂ **ಕಾರ್ತ್ಸ್ನ್ಯೇನ** ಎಲ್ಲ ರೀತಿಯಿಂದ ಸಂಪೂರ್ಣವಾಗಿ **ಸಮಾವೇಶಿತಂ** ಇಡಲ್ಪಟ್ಟು **ಸಮಾಹಿತಂ** ಸ್ಥಿರಪಡಿಸಲ್ಪಟ್ಟಿತ್ತೋ **ತತ್** ಅಂಥ **ಅಬುಧಸ್ಯ** ಅಜ್ಞಾನಿಯಾದ **ಮಮ** ನನ್ನ **ಮನಃ** ಮನಸ್ಸು **ಪುನಃ** ಮತ್ತೆ **ರಾಗಾತ್** ಅಭಿಮಾನದಿಂದ **ಮೃಗಸುತಂ** ಜಿಂಕೆಯ ಮರಿಯನ್ನು ಕುರಿತು **ಅನುಸುಸ್ರಾವ** ಹರಿದಿರುವುದು. ಆದ್ದರಿಂದ ಭ್ರಷ್ಟನೆಂದು ಅನ್ವಯ. ॥೨೬॥

**ಏವಂ ನಿಗೂಢನಿರ್ವೇದೋ ವಿಸೃಜ್ಯ ಮೃಗೀಂ ಮಾತರಂ ಪುನರ್ಭಗವತ್ಕ್ಷೇತ್ರಂ ಉಪಶಮಶೀಲಮುನಿಗಣದಯಿತಂ ಶಾಲಿಗ್ರಾಮಂ ಪುಲಸ್ತ್ಯಪುಲಹಾಶ್ರಮಂ ಕಾಲಂಜರಾತ್ ಪ್ರತ್ಯಾಜಗಾಮ ॥೨೭॥**

**ಏವಂ** ಈ ರೀತಿ **ನಿಗೂಢನಿರ್ವೇದಃ** ದೃಢತರ ವೈರಾಗ್ಯವುಳ್ಳವನಾಗಿ **ಮಾತರಂ ಮೃಗೀಂ ವಿಸೃಜ್ಯ** ತಾಯಿ ಜಿಂಕೆಯನ್ನು ಬಿಟ್ಟು **ಪುನಃ** ಮತ್ತೆ **ಉಪಶಮಶೀಲ ಮುನಿಗಣದಯಿತಂ** ಭಗವನ್ನಿಷ್ಠರಾದ ಋಷಿಗಳ ಸಮೂಹಕ್ಕೆ ಪ್ರಿಯವಾದ **ಭಗವತ್ಕ್ಷೇತ್ರಂ** ಶ್ರೀಹರಿಯ ಆವಾಸಸ್ಥಾನವಾದ **ಶಾಲಿಗ್ರಾಮಂ** ಶಾಲಿಗ್ರಾಮಗಳಿರುವುದರಿಂದ ಆ ಹೆಸರಿನ **ಪುಲಸ್ತ್ಯಪುಲಹಾಶ್ರಮಂ** ಪುಲಸ್ತ್ಯಪುಲಹರ ಆಶ್ರಮಕ್ಕೆ **ಕಾಲಂಜರಾತ್** ಮೃಗಜನ್ಮ ಬಂದ ಕಾಲಂಜರ ಪರ್ವತದಿಂದ **ಪ್ರತ್ಯಾಜಗಾಮ** ತಿರುಗಿ ಬಂದನು. ॥೨೭॥

**ತಸ್ಮಿನ್ನಪಿ ಕಾಲಂ ಪ್ರತೀಕ್ಷಮಾಣಃ ಸಂಗಾಚ್ಚ ಭೃಶಂ ಉದ್ವಿಗ್ನ ಆತ್ಮಸಹಚರಃ ಶುಷ್ಕಪರ್ಣತೃಣವೀರುಧಾ ವರ್ತಮಾನೋ ಮೃಗತ್ವನಿಮಿತ್ತವಾಸನಾಮೇವ ಗಣಯನ್ ಮೃಗಶರೀರಂ ತೀರ್ಥೋದಕ್ಲಿನ್ನಂ ಉತ್ಸಸರ್ಜ ॥೨೮॥**




**ತಸ್ಮಿನ್ ಅಪಿ** ಆ ಆಶ್ರಮದಲ್ಲಿಯೂ **ಕಾಲಂ ಪ್ರತೀಕ್ಷಮಾಣಃ** ಮರಣ ಸಮಯವನ್ನು ಕಾಯುತ್ತಾ **ಸಂಗಾತ್** ಸಹವಾಸದಿಂದ **ಭೃಶಂ** ಬಹಳವಾಗಿ **ಉದ್ವಿಗ್ನಃ** ಗಾಬರಿಯಾಗಿ **ಆತ್ಮಸಹಚರಃ** ತನ್ನ ದೇಹವು ತನಗೆ ಸಂಗಡಿಗವಾಗಿ, ಏಕಾಂಗಿಯಾಗಿ ಎಂದರ್ಥ **ಶುಷ್ಕ** ಒಣಗಿದ **ಪರ್ಣ** ಎಲೆ **ತೃಣ** ಹುಲ್ಲು **ವೀರುಧಾ** ಬಳ್ಳಿಗಳಿಂದ **ವರ್ತಮಾನಃ** ಜೀವನಸಾಗಿಸುತ್ತಾ **ಮೃಗತ್ವನಿಮಿತ್ತವಾಸನಾಮೇವ ಗಣಯನ್** ಮೃಗವಾಗುವುದಕ್ಕೆ ಕಾರಣವಾದ ಪ್ರಾರಬ್ಧಕರ್ಮ ಮುಗಿಯುವುದನ್ನೇ ಎಣಿಸುತ್ತಾ ಯೋಚಿಸುತ್ತಾ ಕಾಲ ಬಂದಾಗ **ತೀರ್ಥೋದಕಕ್ಲಿನ್ನಂ ಮೃಗಶರೀರಂ ಉತ್ಸಸರ್ಜ** ತೀರ್ಥದಲ್ಲಿ ಮಿಂದು ಒದ್ದೆಯಾದ ಜಿಂಕೆ ದೇಹವನ್ನು ಬಿಟ್ಟನು. ।।೨೮।।

**।। ಇಲ್ಲಿಗೆ ೮ನೇ ಅಧ್ಯಾಯವು ಮುಗಿಯಿತು ।।**

★★★



# ಎಂಟನೇ ಅಧ್ಯಾಯದ ಸಾರ

ಭರತನೊಂದುದಿನ ಪ್ರಾತರ್ವಿಧಿಯನ್ನು ಮುಗಿಸಿ ಮಹಾನದಿಯಲ್ಲಿ ಸ್ನಾನಮಾಡಿ ವೇದೋಕ್ತ ನಿತ್ಯನೈಮಿತ್ತಿಕ ಕರ್ಮಗಳನ್ನು ಮುಗಿಸಿ ಪ್ರಣವ ಗಾಯತ್ರೀ ಅಘಮರ್ಷಣ ಮಂತ್ರಗಳಿಂದ ನಾಶರಹಿತನಾದ ಶ್ರೀಹರಿಯನ್ನು ಸ್ತೋತ್ರ ಮಾಡುತ್ತ ಮೂರು ಮುಹೂರ್ತಗಳವರೆಗೆ ನದೀ ಸಮೀಪದಲ್ಲಿ ಕುಳಿತಿದ್ದನು. ಆಗ ಅಲ್ಲಿಗೆ ಒಂದೇ ಒಂದು ಹೆಣ್ಣು ಜಿಂಕೆಯು ನೀರಡಿಸಿ ನೀರಿನ ಬಳಿಗೆ ಬಂದು ಆಸಕ್ತಿಯಿಂದ ನೀರು ಕುಡಿಯುತ್ತಿರುವಾಗಲೇ ಹತ್ತಿರದಲ್ಲಿ ಗರ್ಜಿಸುತ್ತಿದ್ದ ಸಿಂಹದ ಭಯಂಕರ ಧ್ವನಿಯು ಕೇಳಿ ಬಂದಿತು. ಸ್ವಾಭಾವಿಕವಾಗಿಯೇ ಹೆದರುವ ಚಂಚಲ ದೃಷ್ಟಿಯ ಆ ಜಿಂಕೆಯು ಆ ಶಬ್ದವನ್ನು ಕೇಳಿ ಮತ್ತಷ್ಟು ಹೆದರಿತು. ಸಿಂಹದ ಭಯದಿಂದ ಅದರ ಮನಸ್ಸು ಉದ್ವಿಗ್ನವಾಯಿತು. ನೋಟವೂ ಮತ್ತಷ್ಟು ಅಸ್ಥಿರವಾಯಿತು. ಇನ್ನೂ ಅದರ ಬಾಯಾರಿಕೆ ಅಡಗಿರಲಿಲ್ಲ. ಆದರೂ ನದಿಯ ಮತ್ತೊಂದು ದಡಕ್ಕೆ ನೆಗೆಯಿತು. ತುಂಬುಗರ್ಭದ ಆ ಜಿಂಕೆಯು ಹಾರುತ್ತಿದ್ದಂತಯೇ ಭಯದಿಂದ ಅದರ ಗರ್ಭವು ಸ್ಥಾನದಿಂದ ಚಲಿಸಿ ಯೋನಿಯಿಂದ ಹೊರ ಹೊರಟು ಪ್ರವಾಹದಲ್ಲಿ ಕಳಿಚಿಬಿದ್ದಿತು. ಆಕಸ್ಮಿಕವಾಗಿ ಆ ಪ್ರಸವ, ಜಿಗಿತ, ಭಯ ಮತ್ತು ದುಃಖಗಳಿಂದ ನೋವಿಗೀಡಾಗಿ ಆ ಜಿಂಕೆಯು ತನ್ನ ಗುಂಪಿನಿಂದ ದೂರವಾಗಿದ್ದು ದೊಡ್ಡ ಹಳ್ಳಕ್ಕೆ ಬಿದ್ದುಬಿಟ್ಟಿತು. ಅಲ್ಲಿಯೇ ಸತ್ತು ಹೋಯಿತು. ಋಷಿಗಳಂತಿದ್ದ ಭರತರಾಜನು ಪ್ರವಾಹದಿಂದ ಹೊಡೆದುಕೊಂಡು ಬಂದ ಆ ಜಿಂಕೆ ಮರಿಯನ್ನು ಕಂಡನು. ಬಂಧುಗಳಿಲ್ಲದ ಅದರ ಮೇಲೆ ಬಂಧುವಿನಂತೆ ದಯೆ ತೋರಿದನು. ತಾಯಿಯು ಸತ್ತು ಹೋಗಿದ್ದ ಆ ತಬ್ಬಲಿ ಮರಿಯನ್ನು ತಮ್ಮ ಆಶ್ರಮಕ್ಕೆ ಹೊತ್ತು ತಂದನು. ಅವನಿಗೆ ಅದರ ಮೇಲೆ ತನ್ನದೆಂಬ ಅಭಿಮಾನವು ಹೆಚ್ಚಾಯಿತು. ಪ್ರತಿದಿನವೂ ಅದನ್ನು ಹುಲ್ಲು ತಿನ್ನಿಸಿ ಪೋಷಿಸುತ್ತಿದ್ದನು.




ನಾಯಿ ನರಿ ತೋಳ ಮುಂತಾದವುಗಳಿಂದ ರಕ್ಷಿಸುತ್ತಿದ್ದನು. ದೇಹವನ್ನು ವಸರಿ ಪ್ರೀತಿಪಡಿಸುತ್ತಿದ್ದನು. ತೊಡೆಯ ಮೇಲೆ ಮಲಗಿಸಿಕೊಂಡು ಮುದ್ದಿಸುತ್ತಿದ್ದನು. ಇದನ್ನು ಕ್ಷೇಮದಿಂದ ಇಡುವುದು ಹೇಗೆ? ಎಂಬುದನ್ನು ಅನುಗಾಲವೂ ಯೋಚಿಸುತ್ತಿದ್ದನು. ಇದರಿಂದ ಅವನ ಯಮ ನಿಯಮ ದೇವತಾರಾಧನೆಗಳು ಒಂದೊಂದಾಗಿ ಬಿಟ್ಟು ಹೋಗುತ್ತಾ ಬಂದು ಕೆಲವು ದಿನಗಳಲ್ಲಿಯೇ ಎಲ್ಲವೂ ಇಲ್ಲವಾದವು. ಆ ಮರಿಯ ಮೇಲೆ ಅಭಿಮಾನ ಬೆಳೆದ ಅವನು ಅಯ್ಯೋ ಪಾಪ, ಈ ಜಿಂಕೆಯ ಮರಿಯು ದೀನವಾಗಿದೆ. ಕಾಲಗತಿಯಿಂದ ಇದು ತನ್ನ ಗುಂಪು, ಸ್ನೇಹಿತರು ಮತ್ತು ಬಂಧುಗಳಿಂದ ದೂರವಾಗಿದೆ. ನನ್ನನ್ನೇ ಶರಣು ಹೊಂದಿದೆ. ನನ್ನನ್ನೇ ತಾಯಿ ತಂದೆ ಅಣ್ಣ ಜ್ಞಾತಿಗಳಿಗಿಂತ ಹೆಚ್ಚಾಗಿ ರಕ್ಷಕನೆಂದು ತಿಳಿದು ಕೊಂಡಿದೆ. ಮತ್ತೊಬ್ಬ ರಕ್ಷಕರನ್ನು ಇದು ಅರಿಯದು. ನನ್ನಲ್ಲಿಯೇ ಹೆಚ್ಚು ವಿಶ್ವಾಸವಿಟ್ಟಿದೆ. ಶರಣು ಹೊಂದಿದವರನ್ನು ಉಪೇಕ್ಷಿಸಿದರೆ ಬರುವ ದೋಷವನ್ನು ನಾನು ಬಲ್ಲೆ. ಆದ್ದರಿಂದ ಅಸೂಯೆ ಪಡದೆ ನಾನು ನನ್ನನ್ನೇ ನಂಬಿದ ಇದರ ಪೋಷಣೆ, ಪಾಲನೆ, ಪ್ರೀಣನೆ ಮತ್ತು ಲಾಲನೆಗಳನ್ನು ಮಾಡಲೇ ಬೇಕು. ನಿಜವಾಗಿಯೂ ಶ್ರೇಷ್ಠವಂಶದಲ್ಲಿ ಜನಿಸಿದ ಸಾಧುಗಳು ಇಂತಹ ಸಂದರ್ಭದಲ್ಲಿ ಅತಿಶಯವಾದ ಸ್ವಾರ್ಥವನ್ನು ಉಪೇಕ್ಷಿಸುವರು. ಅವರು ಭಗವನ್ನಿಷ್ಠರು, ದೀನಬಂಧುಗಳು ಎಂದು ಅಂದುಕೊಳ್ಳುತ್ತಿದ್ದನು. ಹೀಗೆ ಯೋಚಿಸುತ್ತಿದ್ದ ಅವನಿಗೆ ಆ ಮರಿಯಲ್ಲಿ ಅಭಿಮಾನ ಬೆಳೆದುಹೋಯಿತು. ಕುಳಿತಾಗ, ಸ್ನಾನ ಮಾಡುವಾಗ, ಊಟ ಮಾಡುವಾಗ, ಮಲಗಿದಾಗ, ಓಡಾಡುವಾಗಲೂ ಅವನ ಮನಸ್ಸು ಮರಿಯ ಮೇಲಿನ ಸ್ನೇಹದಿಂದ ತುಂಬಿದ್ದಿತು. ಹೂ, ದರ್ಭೆ, ಸಮಿತ್ತು, ಹಣ್ಣು, ಗಡ್ಡೆ, ನೀರುಗಳನ್ನು ತರಲಿದ್ದ ಅವನು ಮರಿಗೆ ತೋಳ, ನಾಯಿಗಳಿಂದ ಭಯವನ್ನು ಆಶಂಕಿಸಿ ಅದನ್ನು ಜೊತೆಗೆ ಕರೆದುಕೊಂಡು ಅರಣ್ಯಕ್ಕೆ ಹೋಗುತ್ತಿದ್ದನು. ಏನೂ ಅರಿಯದ ಆ ಮರಿಯು ದಾರಿಯಲ್ಲಿ ಅಲ್ಲಲ್ಲಿ ನಿಂತುಬಿಡುತ್ತಿತ್ತು. ಆಗಲೂ, ತುಂಬು ಪ್ರೀತಿಯ ಮನಸ್ಸಿನ ಭರತರಾಜನು ಕಾರ್ಪಣ್ಯದಿಂದ ಅದನ್ನು ಹೆಗಲ ಮೇಲೆ ಹೊತ್ತುಕೊಳ್ಳುತ್ತಿದ್ದನು. ಹೀಗೆಯೇ ತೊಡೆಯ ಮೇಲೆ, ಎದೆಯ ಮೇಲೆ ಇಟ್ಟು ಅದನ್ನು ಮುದ್ದಿಸುತ್ತ ಅತ್ಯಂತ ಸಂತೋಷ ಪಡುತ್ತಿದ್ದನು. ಕೆಲಸ ಮಾಡುತ್ತಿರುವಾಗ ಮಧ್ಯೇ ಮಧ್ಯೇ ಎದ್ದು ಎದ್ದು ಅದನ್ನು ನೋಡುತ್ತಿದ್ದನು. ಅದು ಕಣ್ಣಿಗೆ ಬಿದ್ದಾಗ ಆ ಭರತ ವರ್ಷದ ಅಧಿಪತಿಯು ತನ್ನ ಸ್ವಭಾವಾನುಸಾರಿ ಮನಸ್ಸಿನಿಂದ ವತ್ಸ ! ನಿನಗೆ ಎಲ್ಲ ರೀತಿಯಿಂದಲೂ ಕ್ಷೇಮವಾಗಲಿ

ಎಂದು ಶುಭ ಹಾರೈಸುತ್ತಿದ್ದನು. ಅದು ಕಾಣದೇ ಇದ್ದಾಗ ಅವನ ಮನಸ್ಸು ಉದ್ವೇಗಗೊಳ್ಳುತ್ತಿತ್ತು. ಹಣವನ್ನು ಕಳೆದುಕೊಂಡವನಂತೆ ಅವನು ದೀನನಾಗುತ್ತಿದ್ದನು. ಒಮ್ಮೆ ಆ ಜಿಂಕೆಯಮರಿಯು ಅರಣ್ಯದಲ್ಲಿ ಕಾಣದೆ ಹೋಯಿತು. ಆಗ ಆ ಭರತಚಕ್ರವರ್ತಿಯು ಅತಿಶಯವಾದ ಮಮತೆಯಿಂದ ಆ ಮರಿಯ ಅಗಲಿಕೆಯಿಂದ ವ್ಯಾಕುಲವಾದ ಮನಸ್ಸಿನಲ್ಲಿ ಸಂತಾಪಗೊಂಡು ಕರುಣೆಯಿಂದ ಅದನ್ನೇ ಕುರಿತು ದುಃಖಿಸುತ್ತಾ ಅತ್ಯಂತ ವಿಷಾದಯುಕ್ತನಾಗಿ ''ಆ ಜಿಂಕೆಯ ಎಳೆ ಮರಿಯು ದಯಾಪಾತ್ರವಾದುದು. ಅದರ ತಾಯಿಯು ಸತ್ತು ಹೋಗಿರುವುದು. ಅದು ಅನಾರ್ಯನೂ, ಶಠನಂತೆ ವಂಚಕ ಬುದ್ಧಿಯವನೂ, ಪುಣ್ಯಹೀನನೂ ಆದ ನನ್ನಲ್ಲಿ ವಿಶ್ವಾಸವಿಟ್ಟಿತ್ತು. ಆದರೆ ನಾನದನ್ನು ಉದಾಸೀನ ಮಾಡಿದೆ. ಈಗಲಾದರೂ ಅದು ಮನಃಶುದ್ಧಿಯಿಂದ ನಾನೇ ರಕ್ಷಕನೆಂಬ ವಿಶ್ವಾಸದಿಂದ ನನ್ನ ದುಷ್ಟತನವನ್ನು ಲೆಕ್ಕಿಸದೆ ಮಗನಂತೆ ನನ್ನ ಬಳಿಗೆ ಬಂದೀತೇ? ಆಶ್ರಮದ ಉಪವನದಲ್ಲಿ ದೈವದಿಂದ ರಕ್ಷಿತವಾಗಿ ಹುಲ್ಲುಮೇಯುತ್ತ ಕ್ಷೇಮದಿಂದಿರುವ ಅದನ್ನು ನಾನು ಕಾಣುವೆನೇ? ತೋಳವೋ, ನಾಯಿಯೋ, ಗುಂಪಾಗಿ ಸಂಚರಿಸುವ ಕಾಡುಹಂದಿಯೋ, ಎಂಟು ಕಾಲಿನ ಮೃಗವೋ, ಮತ್ತಾವುದೋ ಆಗಲಿ ಅದನ್ನು ತಿಂದಿರಲಾರದಲ್ಲವೇ? ಸಕಲ ಜಗತ್ತಿನ ಕ್ಷೇಮಕ್ಕಾಗಿ ಉದಯನಾಗುವ ವೇದಮಯನಾದ ಭಗವಾನ್ ಸೂರ್ಯದೇವನು ಮುಳುಗುತ್ತಿರುವನು. ಇನ್ನೂ ಆ ನನ್ನ ಹೆಣ್ಣು ಜಿಂಕೆಯ ವತ್ತೆಯ ಒಡವೆಯಾದ ಮರಿಯು ಬರಲಿಲ್ಲ. ಆ ಮೃಗರಾಜಕುಮಾರನು ಮನೋಹರಗಳೂ, ಪ್ರೇಕ್ಷಣೀಯಗಳೂ ಆದ ಬಗೆಬಗೆಯ ತನ್ನ ಜಾತಿಯ ಮರಿಗಳ ಆಟಗಳಿಂದ ತನ್ನವರ ದುಃಖ ಕಳೆದು ಬಂದು ಪುಣ್ಯಹೀನನಾದ ನನ್ನನ್ನು ಸುಖಪಡಿಸೀತೇ? ನಾನು ಸುಮ್ಮನೆ ಸಮಾಧಿ ಯಲ್ಲಿದ್ದವನಂತೆ ಕಣ್ಣು ಮುಚ್ಚಿರಲು ಆ ಮೃಗವು ಪ್ರೀತಿಯುತ ಕೋಪದಿಂದ ಜಾತಿಸಹಜಶಬ್ದದಿಂದ ಕೂಗುತ್ತಾ ಭಯದಿಂದ ಬಂದು ಕೋಮಲ ಕೋಡುಗಳ ತುದಿಯಿಂದ ನನ್ನನ್ನು ತಿವಿಯುವುದೇ? ಹವಿಸ್ಸನ್ನಿಟ್ಟಿರುವ ದರ್ಭೆಗಳನ್ನು ಅದು ತಿಂದು ಅಪವಿತ್ರಗೊಳಿಸಿದಾಗ ನಾನದನ್ನು ಗದರಿಸಲು ಹೆದರಿ ಹೆದರಿ ಕೊಡಲೇ ತಿನ್ನುವುದನ್ನು ಬಿಟ್ಟು ಅದು ತನ್ನ ಎಲ್ಲ ಅವಯವಗಳನ್ನು ಮುದರಿಸಿಕೊಂಡು ಋಷಿಕುಮಾರನಂತೆ ನಿಶ್ಚಲವಾಗಿ ಇರುವುದೇ? (ಹೊರಗೆ ಬಂದು ಅದರ ಹೆಜ್ಜೆಗಳನ್ನು ನೋಡಿ) ಈ ತಪಸ್ವಿನಿಯಾದ ಭೂಮಿಯು ಎಂತಹ ತಪಸ್ಸನ್ನು ಮಾಡಿರಬಹುದು? ವಿನಯದಿಂದ




ಕೂಡಿದ ಆ ಜಿಂಕೆಯ ಮರಿಯು ಸಣ್ಣ ಸಣ್ಣ ಸುಂದರ ಪವಿತ್ರ ಕಠಿಣಗೊರಸುಗಳ ಗುರುತಿನ ಸಾಲುಗಳಿಂದ ನನಗೆ ಹಣದಂತೆ ಮಮತೆಗೆ ವಿಷಯವಾದ ಜಿಂಕೆಯನ್ನು ಕಳೆದುಕೊಂಡು ದೀನನಾದವನಿಗೆ ಅದಿರುವ ಸ್ಥಳವನ್ನು ತೋರಿಸುತ್ತಿರುವುದು. ಅಷ್ಟೇ ಅಲ್ಲ ಎಲ್ಲ ಕಡೆಯಲ್ಲಿಯೂ ಆ ಹೆಜ್ಜೆಗಳಿಂದ ಅಲಂಕೃತವಾದ ತನ್ನನ್ನು ಸ್ವರ್ಗಮೋಕ್ಷಗಳನ್ನಪೇಕ್ಷಿಸುವ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಯಜ್ಞಮಾಡಲು ಅರ್ಹವಾದುದೆಂದು ಮಾಡಿಕೊಳ್ಳುವುದು. (ಚಂದ್ರೋದಯವಾದರೂ ಮರಿಯನ್ನು ಕಾಣದೆ) ಈ ಕೃಪಣ ಜನರಲ್ಲಿ ವಾತ್ಸಲ್ಯವುಳ್ಳ ಭಗವಾನ್ ಚಂದ್ರನು ಈ ನನ್ನ ತಬ್ಬಲಿ ಮರಿಯನ್ನು ಆಶ್ರಮದಿಂದ ತಪ್ಪಿಸಿಕೊಂಡು ಬಂದಿದ್ದನ್ನು ಕನಿಕರದಿಂದ ಸಿಂಹದ ಭಯದಿಂದ ರಕ್ಷಿಸುತ್ತಿರುವನೇ? ಇದೋ ಈ ನಿನ್ನ ಮೃಗಜನನಿಯ ನಿಕ್ಷೇಪವನ್ನು ನಾನು ಕಾಪಾಡಿದ್ದೇನೆ ತೆಗೆದುಕೋ ಎಂದು ಹೇಳಿ ಕೊಡುವನೇ? ಮಗನಂತಿರುವ ಆ ಮರಿಯ ವಿಯೋಗಜ್ವರವೆಂಬ ಕಾಡ್ಗಿಚ್ಚಿನ ಜ್ವಾಲೆಗಳಿಂದ ನನ್ನ ಹೃದಯವೆಂಬ ನೆಲಗಮಲವು ಬೆಂದು ಹೋಗಿದೆ. ಒದಗಿ ಬಂದ ಆ ಮರಿಯು ನನ್ನನ್ನು ಸಮೀಪಿಸಿ ಶಿಶಿರ ಋತುವಿನಂತೆ (ಹಿಮದಂತೆ) ತಣ್ಣಗೂ ಅನುರಾಗದಿಂದ ಬಹುತರವೂ ಆದ ತನ್ನ ಬಾಯಿಯ ಜೋಲ್ಲೆಂಬ ಚಂದ್ರ ಕಿರಣಗಳಿಂದ ನೆಕ್ಕಿ ಸಂತೋಷಪಡಿಸೀತೇ? ಮುಂತಾಗಿ ಹಲುಬಿದನು. ಹೀಗೆ ಮಾನವಸಹಜವಲ್ಲದ ಮೃಗದ ಮೇಲಿನ ಅಭಿಮಾನಾತಿಶಯದಿಂದ ಅವನ ಮನಸ್ಸು ವ್ಯಾಕುಲಗೊಂಡಿತ್ತು. ಆ ಯೋಗಿಯೂ ತಾಪಸನೂ ಆದ ಭರತರಾಜನು ಜಿಂಕೆಯ ಮರಿಯನ್ನು ಒದಗಿಸಿ ಅದರ ಮೇಲೆ ಮಮತೆಯನ್ನುಂಟು ಮಾಡಿದ ಪ್ರಾರಬ್ಧ ಕರ್ಮದಿಂದ ಧ್ಯಾನೋಪಕ್ರಮದಿಂದಲೂ ಶ್ರೀಹರಿಯ ಆರಾಧನೆಯಿಂದಲೂ ದೂರನಾದನು. ಇಲ್ಲದಿದ್ದರೆ ಭರತರಾಜರಿಗೆ ಮೋಕ್ಷಕ್ಕೆ ಪ್ರತಿಬಂಧಕವೆಂದು ಬಿಡಲಾಗದ ಔರಸಪುತ್ರನಲ್ಲಿನ ಅಭಿಮಾನವನ್ನು ಮೊದಲೇ ಬಿಟ್ಟಿದ್ದವನಿಗೆ ತನ್ನ ಜಾತಿಯಲ್ಲದ ಜಿಂಕೆಯ ಮೇಲೆ ಇಷ್ಟೊಂದು ಆಸಕ್ತಿಯು ಹೇಗೆ ತಾನೇ ಬಂದೀತು? ಹೀಗಿವನ ಯೋಗೋಪಕ್ರಮವು ಪ್ರಾರಬ್ಧಕರ್ಮವೆಂಬ ವಿಘ್ನದಿಂದ ಕುಂಠಿತವಾಯಿತು. ಜಿಂಕೆಯ ಮರಿಯ ಪೋಷಣಾದಿಗಳಲ್ಲಿನ ಆಸಕ್ತಿಯಿಂದ ತನ್ನನ್ನು ಶ್ರೀಹರಿಯನ್ನೂ ಅವನು ಮರೆತನು. ಈ ವೇಳೆಗೆ ಇಲಿಯ ಬಿಲಕ್ಕೆ ಹಾವು ಬರುವಂತೆ ಅತಿಕ್ರಮಿಸಲಾಗದ ಕರಾಳ ವೇಗವುಳ್ಳ ಮರಣ ಕಾಲವು ಸಮೀಪಿಸಿತು. ಮಗನಂತಿದ್ದ ಆ ಜಿಂಕೆಯು ಪಕ್ಕದಲ್ಲಿಯೇ ಕುಳಿತು ಬಂಧುವಿನಂತೆ ದುಃಖಿಸುತ್ತಿರುವಂತೆ ಸಾಯುವಾಗಲೂ ಅದನ್ನೇ ನೋಡುತ್ತಾ

ಅದರಲ್ಲಿಯೇ ಮನಸ್ಸಿರಿಸಿ ಮೃಗವನ್ನೂ ಈ ಲೋಕವನ್ನೂ ಭರತನೆಂದು ಪ್ರಸಿದ್ಧವಾದ ದೇಹವನ್ನೂ ತ್ಯಜಿಸಿ ಕಾಲಂಚರ ಪರ್ವತದಲ್ಲಿ ಮೃಗಶರೀರವನ್ನು ಹೊಂದಿ ಅಜ್ಞಾನಿಯಂತೆ ಜನಿಸಿದನು. ಆದರೆ ಅವನಿಗೆ ಹಿಂದಿನ ಜನ್ಮದ ಮತ್ತು ಆಗಿನ ವ್ಯಾಪಾರಗಳ ಸ್ಮರಣೆಯು ಹರಿಯ ಕರುಣೆಯಿಂದ ಉಳಿದುಕೊಂಡೇ ಬಂದಿದ್ದಿತು. ಶ್ರೀಹರಿಯ ಪೂಜಾನುಷ್ಠಾನ ಪ್ರಭಾವದಿಂದ ಆ ಮೃಗಜನ್ಮದಲ್ಲಿಯೂ ತಾನು ಮೃಗವಾದುದರ ಕಾರಣವನ್ನು ಸ್ಮರಿಸಿಕೊಂಡು ಬಹಳ ಪಶ್ಚಾತ್ತಾಪಪಟ್ಟನು. ''ಅಯ್ಯೋ! ಬಹಳ ಕಷ್ಟಕ್ಕೊಳಗಾದೆ. ಶ್ರೀಹರಿಯನ್ನೇ ಸ್ವಾಮಿ ಎಂದು ತಿಳಿದು ಅವನನ್ನೇ ಧ್ಯಾನಿಸುವ ಜ್ಞಾನಿಗಳ ಧ್ಯಾನಮಾರ್ಗದಿಂದ ಕಳಚಿಕೊಂಡೆ. ಎಲ್ಲ ವಿಷಯ ಸಂಗವನ್ನು ತ್ಯಜಿಸಿ ಏಕಾಂತವೂ, ಪಾವನವೂ ಆದ ಈ ಪುಲಹಾಶ್ರಮಕ್ಕೆ ಬಂದು ನೆಲೆಸಿದೆ. ಮನಸ್ಸನ್ನು ನನ್ನ ವಶದಲ್ಲಿಟ್ಟುಕೊಂಡಿದ್ದೆ. ಸರ್ವಾಂತರ್ಯಾಮಿಯೂ, ಸರ್ವಪೂಜ್ಯನೂ ಆದ ಶ್ರೀಹರಿಯಲ್ಲಿ ಅವನ ಚರಿತ್ರೆಯ ಶ್ರವಣ ಮನನ, ಸಂಕೀರ್ತನ, ಆರಾಧನ, ಮತ್ತೆ ಮತ್ತೆ ಸ್ಮರಿಸುವುದರಿಂದ ಅದನ್ನು ಆಸಕ್ತಗೊಳಿಸಿದೆ. ಹೀಗೆ ನನ್ನ ಕಾಲವೆಲ್ಲಾ ಸಾರ್ಥಕವಾಗಿತ್ತು. ಮನಸ್ಸು ಎಲ್ಲ ಅಂಗಗಳಿಂದ ಎಲ್ಲ ಕಾಲದಲ್ಲಿಯೂ ಶ್ರೀಹರಿಯಲ್ಲಿ ನಿವಿಷ್ಟವಾಗಿ ಸ್ಥಿರವಾಗಿತ್ತು. ಇಂತಹ ಮನಸ್ಸೇ ನನ್ನ ಅಜ್ಞಾನದಿಂದ ಮತ್ತೆ ಅಭಿಮಾನಕ್ಕೆ ಆಸ್ಪದಕೊಟ್ಟು ಜಿಂಕೆಯ ಮರಿಯತ್ತ ತಡೆಯಿಲ್ಲದೆ ಹರಿಯಿತು'' ಎಂದುಕೊಂಡನು. ಹೀಗೆ ಅವನು ಮನಸ್ಸಿನಲ್ಲಿಯೇ ಮೃಗಜನ್ಮದಲ್ಲಿ ಆಸಕ್ತಿಯಿಲ್ಲದವನಾಗಿ ತಾಯಿ ಜಿಂಕೆಯನ್ನೂ ಬಿಟ್ಟು ಕಾಲಂಚರ ಪರ್ವತದಿಂದ ಹೊರಟು ಶ್ರೀಹರಿಯ ಪುಣ್ಯಕ್ಷೇತ್ರವು, ಉಪಶಾಂತಿಸ್ವಭಾವದ ಮುನಿಗೆಳಿಗೆ ಪ್ರಿಯವೂ ಆದ ಶಾಲಿಗ್ರಾಮವೆಂಬ ಪುಲಸ್ತ್ಯಪುಲಹರ ಆಶ್ರಮಕ್ಕೆ ಬಂದನು. ಅಲ್ಲಿಯೇ ಇದ್ದು ತನ್ನ ಆ ಮೃಗಶರೀರದ ಅವಸಾನ ಕಾಲವನ್ನು ನಿರೀಕ್ಷಿಸುತ್ತಿದ್ದನು. ಈ ಅನುಭವದಿಂದ ಅವನಿಗೆ ಸಂಗವೆಂದರೆ ಭಯವಾಗುತ್ತಿತ್ತು. ತನ್ನ ದೇಹವೇ ತನಗೆ ಸಹಚರವಾಗಿತ್ತು. ಸಿಕ್ಕಿದ ಒಣ ಎಲೆ ಹುಲ್ಲು ಬಳ್ಳಿಗಳಿಂದ ಬದುಕನ್ನು ಸಾಗಿಸುತ್ತಾ ಇದ್ದನು. ಮೃಗಜನ್ಮಕ್ಕೆ ಕಾರಣವಾದ ಪ್ರಾರಬ್ಧಕರ್ಮವು ಮುಗಿಯುವ ಕಾಲವನ್ನೇ ಎಣಿಸುತ್ತಿದ್ದನು. ಅದು ಬಂದೊಡನೆ ತೀರ್ಥೋದಕದಲ್ಲಿ ಮಿಂದು ಒದ್ದೆಯಾಗಿದ್ದ ಆ ಮೃಗದೇಹವನ್ನು ತ್ಯಜಿಸಿದನು.

॥ ★★★ ॥




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ನವಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಒಂಭತ್ತನೇ ಅಧ್ಯಾಯದಲ್ಲಿ ಜಿಂಕೆಯ ದೇಹವನ್ನು ಬಿಟ್ಟನಂತರ ಮೂರನೆಯದಾದ ಬ್ರಾಹ್ಮಣ ಜನ್ಮದಲ್ಲಿ ಹುಟ್ಟಿದ ಭರತನ ಚರಿತ್ರೆ ಹೇಳುವರು. ತನ್ನನ್ನು ದಡ್ಡನಂತೆ ತೋರಿಸಿಕೊಳ್ಳುವ ಇವನನ್ನು ತಮ್ಮಂದಿರು ಹೊಲಕಾಯಲು ಕೂಡಿಸಿದಾಗ ವೀರಾಸನದಲ್ಲಿ ಕುಳಿತ ಇವನನ್ನು ಶೂದ್ರರಾಜನೊಬ್ಬ ಭದ್ರಕಾಳಿಗೆ ಬಲಿಕೊಡಲು ಪುರುಷಪಶುವಾಗಿ ಕರೆದೊಯ್ಯುವುದು. ಕುಪಿತಳಾದ ಕಾಳೀದೇವಿಯು ಅಕಾರ್ಯ ಮಾಡುತ್ತಿರುವ ಶೂದ್ರರ ಶಿರಚ್ಛೇದ ಮಾಡಿದ್ದನ್ನು ವಿವರಿಸುವರು.

ವಿಷಯಸಂಗರಹಿತವಾದ ಉಪಾಸನೆಯಿಂದ ಹರಿತವಾದ ಜ್ಞಾನಾಸಿಯಿಂದ ಅತಿದೃಢವಾದ ಸಂಸಾರ ವೃಕ್ಷವನ್ನು ಕತ್ತರಿಸಿ ಮುಮುಕ್ಷುವು ಮೋಕ್ಷಫಲವನ್ನು ಹೊಂದುವನು ಎಂಬುದನ್ನು ಪ್ರತಿಪಾದಿಸಲು ಭರತನ ವಿರಕ್ತಿಯುಕ್ತ ಉಪಾಸನಾ ಪ್ರಕಾರವನ್ನು ಈ ಅಧ್ಯಾಯದಲ್ಲಿ ತಿಳಿಸುವರು.

### ಜಡಭರತನ ಚರಿತ್ರೆ

**ಶ್ರೀ ಶುಕ ಉವಾಚ**

**ಅಥ ಕಸ್ಯಚಿದ್ ದ್ವಿಜವರಸ್ಯಾಂಗಿರಸಪ್ರವರಸ್ಯ ಶಮದಮತಪಃಸ್ವಾಧ್ಯಾಯಾ-ಧ್ಯಯನ ತ್ಯಾಗಸಂತೋಷತಿತಿಕ್ಷಾಪ್ರಶ್ರಯವಿದ್ಯಾಽನಸೂಯಾತ್ಮಜ್ಞಾನಾನಂದ-ಯುಕ್ತಸ್ಯಾತ್ಮಸದೃಶ ಶ್ರುತಶೀಲಾಚಾರರೂಪೌದಾರ್ಯಗುಣಾ ನವ ಸೌದರ್ಯಾ ಅಂಗಜಾ ಬಭೂವುಃ ಮಿಥುನಂ ಚ ಯವೀಯಸ್ಯಾಂ ಭಾರ್ಯಾಯಾಮ್ ॥೧॥**

**ಅಥ** ಭರತನ ಕಥಾಂತರ ಪ್ರಾರಂಭವಾಗುವುದು **ಕಸ್ಯಚಿತ್** ಒಬ್ಬ **ಆಂಗಿರಸ ಪ್ರವರಸ್ಯ** ಆಂಗಿರಸ ಗೋತ್ರದಲ್ಲಿ ಜನಿಸಿದವರಲ್ಲಿ ಶ್ರೇಷ್ಠನಾದ **ಶಮ** ಭಗವನ್ನಿಷ್ಠೆ **ದಮ** ಇಂದ್ರಿಯ ನಿಗ್ರಹ **ತಪಃ** ಕಾಯಕ್ಲೇಶರೂಪವಾದ ತಪಸ್ಸು **ಸ್ವಾಧ್ಯಾಯಾಧ್ಯಯನ** ವೇದಾಭ್ಯಾಸ **ತ್ಯಾಗ** ದ್ರವ್ಯಾದಿಗಳ ದಾನ **ಸಂತೋಷ** ಅಲಂಬುದ್ಧಿ **ತಿತಿಕ್ಷಾ** ದ್ವಂದ್ವ ಸಹಿಷ್ಣುತೆ **ಪ್ರಶ್ರಯ** ವಿನಯ **ವಿದ್ಯಾ** ಕರ್ಮಾದಿಜ್ಞಾನ **ಅನಸೂಯಾ** ಅಸೂಯೆ ಇಲ್ಲದಿರುವುದು **ಆತ್ಮಜ್ಞಾನ** ಪರಮಾತ್ಮ ಜ್ಞಾನ ಇವುಗಳಿಂದಾಗುವ **ಆನಂದಯುಕ್ತಸ್ಯ** ಆನಂದದಿಂದ ಕೂಡಿದ **ದ್ವಿಜವರಸ್ಯ** ಬ್ರಾಹ್ಮಣ ಶ್ರೇಷ್ಠನಿಗೆ **ಆತ್ಮಸದೃಶ** ತನ್ನ ಗುಣಗಳಿಗೆ ಸದೃಶಗಳಾದ **ಶ್ರುತ** ಶ್ರವಣ **ಶೀಲ** ಸ್ವಭಾವ **ಆಚಾರ** ನಡವಳಿಕೆ **ರೂಪ** ಸೌಂದರ್ಯ **ಔದಾರ್ಯಗುಣಾಃ** ಉದಾರತೆಯೇ ಮುಂತಾದ ಗುಣವುಳ್ಳ **ನವ** ಒಂಭತ್ತು ಜನ **ಸೌದರ್ಯಾಃ** ಸಮಾನೋದರರಾದ (ಒಂದೇ ತಾಯಿಯಲ್ಲಿ ಜನಿಸಿದ) **ಅಂಗಜಾಃ** ಪುತ್ರರು **ಬಭೂವುಃ** ಆದರು **ಯವೀಯಸ್ಯಾಂ ಭಾರ್ಯಾಯಾಂ** ಚಿಕ್ಕ ಹೆಂಡತಿಯಲ್ಲಿ **ಮಿಥುನಂ ಚ ಬಭೂವ** ಒಂದು ಹೆಣ್ಣು ಮತ್ತು ಗಂಡು ಜೋಡಿಯು ಜನಿಸಿತು. ।।೧।।

**ಯಸ್ತು ತತ್ರ ಪುಮಾಂಸ್ತಂ ಪರಮಭಾಗವತಂ ರಾಜರ್ಷಿಪ್ರವರಂ ಭರತಮುತ್ಸೃಷ್ಟಮೃಗಶರೀರಂ ಚರಮಶರೀರೇಣ ವಿಪ್ರತ್ವಂ ಗತಮಾಹುಃ ।।೨।।**

**ತತ್ರ** ಆ ಜೋಡಿಯಲ್ಲಿ **ಯಃ ಪುಮಾನ್** ಯಾವುದು ಗಂಡು ಮಗುವೋ **ತಂ** ಅವನನ್ನು **ಪರಮಭಾಗವತಂ** ಮಹಾಭಗವದ್ಭಕ್ತನೆಂದು **ರಾಜರ್ಷಿಪ್ರವರಂ** ರಾಜ ಋಷಿಗಳಲ್ಲಿ ಶ್ರೇಷ್ಠನು **ಉತ್ಸೃಷ್ಟಮೃಗಶರೀರಂ** ಜಿಂಕೆಯ ದೇಹವನ್ನು ಬಿಟ್ಟವನು **ಚರಮ ಶರೀರೇಣ** ಕೊನೆಯದಾದ ದೇಹದಿಂದ **ವಿಪ್ರತ್ವಂ ಗತಂ** ಬ್ರಾಹ್ಮಣನಾದ **ಭರತಂ ಆಹುಃ** ಭರತನೆಂದು ಹೇಳುವರು. ।।೨।।

**ತತ್ರಾಪಿ ಸ್ವಜನಸಂಗಾಚ್ಚ ಭೃಶಮುದ್ವಿಜಮಾನೋ ಭಗವತಃ ಕರ್ಮಬಂಧ-ವಿಧ್ವಂಸನಶ್ರವಣಸ್ಮರಣಗುಣವಿವರಣೇನ ಚರಣಾರವಿಂದಯುಗಲಂ ಮನಸಾ ವಿದಧತಃ ಆತ್ಮನಃ ಪ್ರತಿಘಾತಮಾಶಂಸಮಾನೋ ಭಗವದನುಗ್ರಹೇಣಾ-ನುಸ್ಮೃತಪೂರ್ವಜನ್ಮಾವಲಿರಾತ್ಮಾನಮುನ್ಮತ್ತಜಡಬಧಿರರೂಪೇಣ ದರ್ಶಯಾಮಾಸ ಲೋಕಸ್ಯ ।।೩।।**

**ತತ್ರಾಪಿ** ಆ ಬ್ರಾಹ್ಮಣ ಜನ್ಮದಲ್ಲಿಯೂ **ಭಗವದನುಗ್ರಹೇಣ** ಶ್ರೀಹರಿಯ ಕೃಪೆಯಿಂದ **ಅನುಸ್ಮೃತಪೂರ್ವಜನ್ಮಾವಲಿಃ** ತನ್ನ ಹಿಂದಿನ ಜನ್ಮಗಳ ಸಾಲಿನ

 

ನೆನಪುಳ್ಳವನಾದ್ದರಿಂದಲೇ **ಸ್ವಜನ ಸಂಗಾತ್** ತಮ್ಮ ಜನರ ಸಹವಾಸದಿಂದ **ಭೃಶಂ ಉದ್ವಿಜಮಾನಃ** ಯೋಗ ಮಾರ್ಗದಿಂದ ಭ್ರಷ್ಟನಾಗುವೆನು ಎಂದು ಬಹಳವಾಗಿ ಹೆದರುವನಾಗಿ **ಕರ್ಮಬಂಧವಿಧ್ವಂಸನ** ಕರ್ಮಬಂಧನಕ್ಕೆ ನಾಶಕವಾದ **ಶ್ರವಣ** ಭಗವಂತನ ಕಥಾ ಶ್ರವಣ **ಸ್ಮರಣ** ಸ್ಮರಣೆ **ಗುಣವಿವರಣೇನ** ಗುಣಗಳನ್ನು ವಿವರಿಸುವುದರಿಂದ **ಭಗವತಃ** ಪರಮಾತ್ಮನ **ಚರಣಾರವಿಂದಯುಗಲಂ** ಪಾದಕಮಲಗಳ ದ್ವಂದ್ವವನ್ನು **ಮನಸಾ ವಿದಧತಃ** ಮನಸ್ಸಿನಿಂದ ಧ್ಯಾನ ಮಾಡುವ **ಆತ್ಮನಃ** ತನಗೆ **ಪ್ರತಿಘಾತಂ** ವಿಘ್ನವನ್ನು **ಆಶಂಸಮಾನಃ** ಶಂಕಿಸುವವನಾಗಿ **ಆತ್ಮಾನಂ** ತನ್ನನ್ನು **ಉನ್ಮತ್ತ** ಹುಚ್ಚ **ಜಡ** ದಡ್ಡ **ಬಧಿರರೂಪೇಣ** ಕಿವುಡರಂತೆ **ಲೋಕಸ್ಯ** ಜನರಿಗೆ **ದರ್ಶಯಾಮಾಸ** ತೋರಿಸಿದನು. ।।೩।।

**ತಸ್ಯಾಪಿ ಹ ವಾಽತ್ಮಜಸ್ಯ ಸ ವಿಪ್ರಃ ಪುತ್ರಸ್ನೇಹಾನುಬದ್ಧಮನಾ ಆಸಮಾವರ್ತನಾತ್ ಸಂಸ್ಕಾರಾನ್ಯಥೋಪದೇಶಂ ವಿದಧಾನ ಉಪನೀತಸ್ಯ ಚ ಪುನಃ ಶೌಚಾಚಮನಾದೀನ್ ಕರ್ಮನಿಯಮಾನನಭಿಪ್ರೇತಾನಪಿ ಸಮಶಿಕ್ಷಯತ್ ಅನುಶಿಷ್ಟೇನ ಹಿ ಭಾವ್ಯಂ ಪಿತುಃ ಪುತ್ರೇಣೇತ್ಯಸದಾಗ್ರಹಃ ।।೪।।**

**ಸಃ ವಿಪ್ರಃ** ತಂದೆಯಾದ ಆ ಬ್ರಾಹ್ಮಣನು **ತಸ್ಯಾಪಿ** ಜಡದಂತೆ ಇದ್ದವನಾದರೂ **ಪುತ್ರಸ್ನೇಹಾನುಬದ್ಧಮನಾಃ** ಮಗನ ಮೇಲಿನ ಪ್ರೀತಿಯಿಂದ ಕೂಡಿದ ಮನಸ್ಸುಳ್ಳವನಾಗಿ (ದಡ್ಡನಂತೆ ಕಾಣುವುದರಿಂದ ವಿವಾಹ ಮಾಡಲಾಗದಕಾರಣ) **ಆಸಮಾವರ್ತನಾತ್** ಸಮಾವರ್ತನದವರೆಗಿರುವ **ಸಂಸ್ಕಾರಾನ್** ಸಂಸ್ಕಾರಗಳನ್ನು **ಯಥೋಪದೇಶಂ ವಿದಧಾನಃ** ವಿಧಿಗನುಸಾರ ಮಾಡುವವನಾಗಿ **ಉಪನೀತಸ್ಯ** ಉಪನಯನ ಮಾಡಿಕೊಂಡ ಮಗನಿಗೆ **ಪುನಃ** ಮತ್ತೆ **ಪುತ್ರೇಣ ಪಿತುಃ ಅನುಶಿಷ್ಟೇನ ಭಾವ್ಯಂ ಇತಿ ಅಸದಾಗ್ರಹಃ** ಮಗನು ತಂದೆಯಿಂದ ಶಿಕ್ಷಿತನಾಗಬೇಕೆಂಬ ಆಗ್ರಹದಿಂದ **ಅನಭಿಪ್ರೇತಾನಪಿ** ಮಗನಿಗೆ ಇಷ್ಟವಿಲ್ಲದಿದ್ದರೂ **ಶೌಚಾಚಮನಾದೀನ್ ಕರ್ಮನಿಯಮಾನ್** ಶುದ್ಧಿ (ಸ್ನಾನಾದಿಗಳು) ಆಚಮನ ಮುಂತಾದ ಕರ್ಮ ನಿಯಮಗಳನ್ನು **ಸಮಶಿಕ್ಷಯತ್** ಕಲಿಸಿದನು. ।।೪।।

'ಹ' 'ವಾ' ಎಂಬ ನಿಪಾತಗಳು ಭರತನು ಅಪರೋಕ್ಷ ಜ್ಞಾನಿಯಾದ್ದರಿಂದ ಕಾಮಚಾರ ದೋಷವಲ್ಲ ಎಂದು ತಿಳಿಸುವವು. ಕಾರಣ ಅಸದಾಗ್ರಹ ಎಂದಿರುವರು. ।।೪।।

**ಸ ಚಾಪಿ ತದುಹ ಪಿತೃಸನ್ನಿಧಾವೇವ ಸಧ್ರೀಚೀನಮಿವ ಕರೋತಿ । ಛಂದಾಂಸ್ಯಧ್ಯಾಪಯಿಷ್ಯನ್ ಸಹವ್ಯಾಹೃತಿಭಿಃ ಸಪ್ರಣವಶಿರಸ್ತ್ರಿಪದೀಂ ಸಾವಿತ್ರೀಂ ಗ್ರೈಷ್ಮವಾಸಂತಿಕಾನ್ ಮಾಸಾನಧೀಯಮಾನಮಪ್ಯಸಮವೇತರೂಪಂ ಗ್ರಾಹಯಾಮಾಸ ॥೫॥**

**ಸಃ ಚ ಅಪಿ** ಆ ಭರತನಾದರೂ **ತತ್** ತಂದೆಯು ಕಲಿಸಿದ್ದನ್ನು **ಪಿತೃಸನ್ನಿಧಾವೇವ** ತಂದೆಯ ಸಮೀಪದಲ್ಲಿಯೇ **ಸಧ್ರೀಚಿನಂ ಇವ** ಚೆನ್ನಾಗಿ ಮಾಡಿದಂತೆ **ಕರೋತಿ** ಮಾಡುವನು(ಮಾಡುವ ಕಾರ್ಯದಲ್ಲಿ ಮನಸ್ಸಿಲ್ಲದಿರುವುದರಿಂದ ಅಸಮೀಚೀನತೆ ತಿಳಿಸಲು ಇವ ಎಂದಿರುವರು. ಯಾವಾಗಲೂ ಶ್ರೀಹರಿಯಲ್ಲಿಯೇ ಮನಸ್ಸಿಟ್ಟವನಾದ್ದರಿಂದ ಹುಚ್ಚನಂತೆ ವರ್ತಿಸುವ ಅವನಿಗೆ ಬಾಹ್ಯಕರ್ಮಲೋಪದೋಷವಿಲ್ಲವೆಂದು ತಿಳಿಯಬೇಕು. ಯೋಗನಿರತನಾದ ಭರತನ ಕರ್ಮಾದಿಚರಣ ಆಶ್ಚರ್ಯಕರವೆಂದು ತಿಳಿಸಲು ಉ, ಹ ಎಂಬ ನಿಪಾತಗಳ ಪ್ರಯೋಗ ಮಾಡಿರುವರು. ಉಪಾಕರಣ ವೇದವ್ರತಾನಂತರದಲ್ಲಿ ಶ್ರಾವಣಾದಿ ಮಾಸಗಳಲ್ಲಿ **ಛಂದಾಂಸಿ** ವೇದಗಳನ್ನು **ಅಧ್ಯಾಪಯಿಷ್ಯನ್** ಕಲಿಸುವದಕ್ಕಾಗಿ ಮೊದಲಿಗೆ **ವ್ಯಾಹೃತಿಭಿಃ ಸಹ** ಭೂಃ ಭುವಃ ಸ್ವಃ ಎಂಬ ವ್ಯಾಹೃತಿಗಳಿಂದ ಸಹಿತವಾಗಿ **ಸಪ್ರಣವಶಿರಃ** ಓಂಕಾರವೆಂಬ ಶಿರಸ್ಸಿನಿಂದ ಸಹಿತವಾದ **ತ್ರಿಪದೀಂ** ಮೂರೂಪಾದ ಉಳ್ಳ **ಸಾವಿತ್ರೀಂ** ಗಾಯತ್ರೀ ಮಂತ್ರವನ್ನು **ಗ್ರೈಷ್ಮವಾಸಂತಿಕಾನ್ ಮಾಸಾನ್** ಚೈತ್ರ ವೈಶಾಖ ಜ್ಯೇಷ್ಠ ಆಷಾಢ ಮಾಸಗಳಲ್ಲಿ **ಅಧೀಯಮಾನಮಪಿ** ಕಲಿತರೂ **ಅಸಮವೇತರೂಪಂ ಗ್ರಾಹಯಾಮಾಸ** ಅಸಂಬದ್ಧ ಸ್ವರವರ್ಣಾದಿಗಳಿಂದ ಯುಕ್ತವಾಗುವಂತೆ ತಿಳಿದನು. ನಾಲ್ಕು ತಿಂಗಳಾದರೂ ಸ್ವರವರ್ಣಸಹಿತವಾಗಿ ವ್ಯಾಹೃತಿಗಾಯತ್ರಿಗಳನ್ನು ಚೆನ್ನಾಗಿ ಉಚ್ಚರಿಸಲಿಲ್ಲವೆಂದು ಭಾವ. ॥೫॥

**ಏವಂ ಸ್ವತನುಜೇ ಆತ್ಮನ್ಯನುರಾಗಾವೇಶಿತಚಿತ್ತಃ ಶೌಚಾಧ್ಯಯನ ವ್ರತನಿಯಮಗುರ್ವನಲಶುಶ್ರೂಷಣಾದ್ಯೌಪಕುರ್ವಾಣಕಾನಿ ಕರ್ಮಾಣಿ ಅತದಭಿಯುಕ್ತಾನ್ಯಪಿ ಸಮನುಶಿಷ್ಟೇನ ಭಾವ್ಯಮಿತ್ಯಸದಾಗ್ರಹಃ ಪುತ್ರಮನುಶಶಾಸ । ಪಿತಾ ಸ್ವಯಂ ತಾವದನಧಿಗತಮನೋರಥಃ ಕಾಲೇನಾಪ್ರಮತ್ತೇನ ಸ್ವಯಂ ಗೃಹೇ ಪ್ರಮತ್ತ ಉಪಸಂಹೃತಃ ॥೬॥**

**ಏವಂ** ಈ ರೀತಿ **ಆತ್ಮನಿ ಸ್ವತನುಜೇ** ''ಆತ್ಮಾವೈ ಪುತ್ರನಾಮಾಸಿ'' ಎಂದು ಶ್ರುತಿ ಇರುವದರಿಂದ ತಾನೇ ಆದ ತನ್ನ ಮಗನಲ್ಲಿ **ಅನುರಾಗಾವೇಶಿತಚಿತ್ತಃ** ಪ್ರೀತಿಯುತ ಮನಸ್ಸುಳ್ಳವನಾಗಿ **ಶೌಚ** ಶುದ್ಧಿ **ಅಧ್ಯಯನ** ಅಭ್ಯಾಸ ಮಾಡುವುದು **ವ್ರತನಿಯಮ** ವ್ರತನಿಯಮಗಳು **ಗುರುಅನಲಶುಶ್ರೂಷಾ** ಗುರುಗಳ ಅಗ್ನಿಯ ಸೇವೆ **ಆದಿ** ಮೊದಲಾದ **ಔಪಕುರ್ವಾಣಕಾನಿ ಕರ್ಮಾಣಿ** ಗೃಹಸ್ಥಾಶ್ರಮ ಸ್ವೀಕಾರಕ್ಕೆ ಯೋಗ್ಯವಾದ ಕರ್ಮಗಳನ್ನು **ಅತದಭಿಯುಕ್ತಾನ್ಯಪಿ** ಅವನಿಗೆ ಅಪೇಕ್ಷಿತವಲ್ಲದಿದ್ದರೂ **ಸಮನುಶಿಷ್ಟೇನ ಭಾವ್ಯಮಿತ್ಯಸದಾಗ್ರಹಃ** ಮಗನು ಸುಶಿಕ್ಷಿತನಾಗಬೇಕೆಂಬ ಆಗ್ರಹದಿಂದ **ಪುತ್ರಂ ಅನುಶಶಾಸ** ಮಗನಿಗೆ ಕಲಿಸಿದನು(ಶಿಕ್ಷಣ ನೀಡಿದನು) **ಅನಧಿಗತಮನೋರಥಃ** ಆದರೆ ಮಗನು ಪಂಡಿತನಾಗಬೇಕೆಂಬ ಮನೋರಥವಿಡೇರದ **ಪಿತಾ** ತಂದೆಯು **ಸ್ವಯಂ** ತಾನೂ **ಅಪ್ರಮತ್ತೇನ ಕಾಲೇನ** ಅಪ್ರಮತ್ತವಾದ ಕಾಲದಿಂದ **ಪ್ರಮತ್ತಃ** ಪ್ರಮತ್ತನಾಗಿ **ಉಪಸಂಹೃತಃ** ಮೃತನಾದನು. (ಉಪಸಂವೃತಃ ಎಂದು ಪಾಠಾಂತರ. ಆಗ ನಾಶಗೊಳಿಸಲ್ಪಟ್ಟನು ಎಂದರ್ಥ) ।।೬।।

**ಅಥ ಯವೀಸಯೀ ದ್ವಿಜಸತೀ ಸ್ವಗರ್ಭಜಾತಮಿಥುನಂ ಸಪತ್ನ್ಯಾಮುಪನ್ಯಸ್ಯ ಸ್ವಯಮನುಸಂಸ್ಥಯಾ ಪತಿಲೋಕಮಗಾತ್ । ಪಿತರ್ಯುಪರತೇ ಭ್ರಾತರ ಏನಮತತ್ಪ್ರಭಾವವಿದಸ್ತ್ರಯ್ಯಾಂ ವಿದ್ಯಾಯಾಮೇವ ಪರ್ಯವಸಿತಮತಯೋ ನ ಪರವಿದ್ಯಾಯಾಂ ಜಡಮತಿರಿತಿ ಭ್ರಾತರಮನುಶಾಸನನಿರ್ಬಂಧಾನ್ನ್ಯವೃತ್ಸಂತ ।।೭।।**

**ಅಥಃ** ಅನಂತರ **ಯವೀಯಸೀ** ಚಿಕ್ಕವಳಾದ **ದ್ವಿಜಸತೀ** ಬ್ರಾಹ್ಮಣ ಪತ್ನಿಯು **ಸ್ವಗರ್ಭಜಾತಮಿಥುನಂ** ತನ್ನ ಉದರದಲ್ಲಿ ಜನಿಸಿದ ಆ ಮಕ್ಕಳೆರಡನ್ನು **ಸಪತ್ನ್ಯಾಂ ಉಪನ್ಯಸ್ಯ** ಸವತಿಯಲ್ಲಿ ಒಪ್ಪಿಸಿ **ಸ್ವಯಂ** ತಾನು **ಅನುಸಂಸ್ಥಯಾ** ಸಹಗಮನ ರೂಪ ಅನುಮರಣದಿಂದ **ಪತಿಲೋಕಂ ಅಗಾತ್** ಗಂಡನ ಲೋಕಕ್ಕೆ ತೆರಳಿದಳು. **ಪಿತರಿ ಉಪರತೇ** ತಂದೆಯು ಮರಣಹೊಂದಿರಲು **ಅತತ್ಪ್ರಭಾವವಿದಃ** ಭರತನ ಸಾಮರ್ಥ್ಯವನ್ನರಿಯದ **ತ್ರಯ್ಯಾಂ ವಿದ್ಯಾಯಾಂ ಏವ ಪರ್ಯವಸಿತಮತಯಃ** ಕರ್ಮ ಪ್ರತಿಪಾದಕ ವೇದಗಳಲ್ಲಿಯೇ ಪರ್ಯವಸಿತವಾದ ಬುದ್ಧಿಯುಳ್ಳ ಅಂದರೆ ಕರ್ಮಸಾಧ್ಯ ಸ್ವರ್ಗಾದಿಗಳಿಗಿಂತ ಉತ್ತಮವಾದ ಬೇರೆ ಶ್ರೇಯಸ್ಸು ಇಲ್ಲವೆಂದು ತಿಳಿದಿರುವ **ನ ಪರವಿದ್ಯಾಯಾಂ** ಬ್ರಹ್ಮ ಪ್ರತಿಪಾದಕ ವಿದ್ಯೆಯಲ್ಲಿ ಪರ್ಯವಸಿತ ಮತಿಗಳಲ್ಲದ **ಭ್ರಾತರಃ** ಇವನ ಅಣ್ಣಂದಿರು **ಏನಂ ಭ್ರಾತರಂ** ಈ ತಮ್ಮನನ್ನು

**ಜಡಮತಿಃ ಇತಿ** ದಡ್ಡನೆಂದು ತಿಳಿದು **ಅನುಶಾಸನನಿರ್ಬಂಧಾತ್ ನ್ಯವೃತ್ಸಂತ** ಇವನಿಗೆ ಶಿಕ್ಷಣ ನೀಡಬೇಕೆಂಬ ಆಗ್ರಹದಿಂದ ನಿವೃತ್ತರಾಗಲಿಚ್ಛಿಸಿದರು ನಿವೃತ್ತರಾದರೆಂದರ್ಥ. ॥೭॥

**ಸ ಚ ಪ್ರಾಕೃತೈರ್ದ್ವಿಪದಪಶುಭಿರುನ್ಮತ್ತಜಡಬಧಿರೇತ್ಯಭಿಭಾಷ್ಯಮಾಣೋ ಯದಾ ತದನುರೂಪಾಣಿ ಪ್ರಭಾಷತೇ ಕರ್ಮಾಣಿ ಚ ಸ ಕಾರ್ಯಮಾಣಃ ಪರೇಚ್ಛಯಾ ಕರೋತಿ। ವಿಷ್ಟಿತೋ ವೇತನತೋ ವಾ ಯಾಂಚಯಾ ವಾ ಯದೃಚ್ಛಯಾ ಚೋಪಸಾದಿತಮಲ್ಪಂ ಬಹುಮೃಷ್ಟಂ ಕದನ್ನಂ ವಾಭ್ಯವಹರತಿ ಪರಂ ನೇಂದ್ರಿಯಪ್ರೀತಿನಿಮಿತ್ತಮ್ ॥೮॥**

**ಸ ಚ** ಆ ಭರತನಾದರೂ **ಯದಾ** ಯಾವಾಗ **ಪ್ರಾಕೃತೈಃ** ನೀಚರಾದ **ದ್ವಿಪದಪಶುಭಿಃ** ಎರಡು ಕಾಲಿನ ಪಶುಗಳಿಂದ ಅಂದರೆ ವಿವೇಕವಿಲ್ಲದ ಜನರಿಂದ **ಉನ್ಮತ್ತ** ಹುಚ್ಚ **ಜಡ** ದಡ್ಡ **ಬಧಿರ** ಕಿವುಡ **ಇತಿ** ಮುಂತಾಗಿ **ಅಭಿಭಾಷ್ಯಮಾಣಃ** ಕರೆಯಲ್ಪಡುವವನೋ **ತದಾ** ಆವಾಗ **ತದನುರೂಪಾಣಿ** ಹುಚ್ಚ ಕಿವುಡ ದಡ್ಡರಂತೆ **ಪ್ರಭಾಷತೇ** ಮಾತಾಡುವನು. **ಸಃ** ಅವನು **ಕರ್ಮಾಣಿ** ಕೆಲಸಗಳನ್ನು **ಕಾರ್ಯಮಾಣಃ** ಬಿಟ್ಟಿಯಾಗಿ(ಸಂಬಳವಿಲ್ಲದೇ) **ವೇತನತಃ** ಕೆಲಸಕ್ಕನುಗುಣ ಸಂಬಳದಿಂದಾ **ಯಾಂಚಯಾ ವಾ** ಅವರ ಪ್ರಾರ್ಥನೆಯಿಂದಲೋ **ಕರೋತಿ** ಮಾಡುವನು. **ಯದೃಚ್ಛಯಾ** ಶ್ರೀಹರಿಯ ಇಚ್ಛೆಯಿಂದ **ಉಪಸಾದಿತಂ** ಪ್ರಾಪ್ತವಾದ **ಅಲ್ಪಂ** ಸ್ವಲ್ಪವೋ **ಬಹು** ಬಹಳವೋ **ಮೃಷ್ಟಂ** ಶುದ್ಧವಾದದನ್ನೋ **ಕದನ್ನಂ** ಕುತ್ಸಿತವಾದ ಅನ್ನವನ್ನೋ **ಅಭ್ಯವಹರತಿ ಕೇವಲಂ** ದೇಹಯಾತ್ರಾ ನಡೆಯಲು ತಿನ್ನುವನಷ್ಟೇ **ಪರಂ ನ ಇಂದ್ರಿಯ ಪ್ರೀತಿ ನಿಮಿತ್ತಂ** ಇಂದ್ರಿಯ ಪ್ರೀತಿಗಾಗಿ ಅಲ್ಲ. ॥೮॥

ಈ ರೀತಿ ಇರಲು ಹೇತುಗರ್ಭವಿಶೇಷಣಗಳೆರಡನ್ನೂ ತಿಳಿಸುವರು

**ನಿತ್ಯನಿವೃತ್ತದುಃಖಸ್ವಸಿದ್ಧವಿಶುದ್ಧಾನುಭವಾನಂತಸ್ವಾತ್ಮಲಾಭಾಧಿಗಮಃ ಸುಖದುಃಖಯೋರ್ದ್ವಂದ್ವನಿಮಿತ್ತಯೋರಸಂಭಾವಿತದೇಹಾಭಿಮಾನಃ ॥೯॥**

**ನಿತ್ಯನಿವೃತ್ತದುಃಖ** ಸರ್ವದಾ ದುಃಖರಹಿತನಾದ **ಸ್ವಸಿದ್ಧ** ಸ್ವಾಭಾವಿಕವಾಗಿರುವ **ವಿಶುದ್ಧ** ನಿರ್ದುಷ್ಟವಾದ **ಅನುಭವ** ಜ್ಞಾನ ಆನಂದ ಇವುಗಳುಳ್ಳ **ಸ್ವಾತ್ಮಾ** ಸ್ವತಂತ್ರನಾದ ಪರಮಾತ್ಮನ **ಲಾಭಾದಿಗಮಃ** ಅನುಭವವನ್ನು ಹೊಂದಿದ **ದ್ವಂದ್ವನಿಮಿತ್ತಯೋಃ** ಮಾನಾಪಮಾನ ಶೀತೋಷ್ಣ ಮುಂತಾದ ದ್ವಂದ್ವಗಳೇ ಕಾರಣವಾಗಿವುಳ್ಳ




**ಸುಖದುಃಖಯೋಃ** ಸುಖದುಃಖಗಳಿಗೆ **ಅಸಂಭಾವಿತದೇಹಾಭಿಮಾನಃ** ದೇಹಾಭಿಮಾನವನ್ನು ಪಡೆಯದವನಾಗಿದ್ದನು. ||೯||

ಆದ್ದರಿಂದಲೇ

**ಶೀತೋಷ್ಣವಾತವರ್ಷೇಷು ವೃಷ ಇವ ಅನಾವೃತಾಂಗಃ ಪೀನಃ ಸಂಹನನಾಂಗಃ ಸ್ಥಂಡಿಲ ಸಂವೇಶನಾನುನ್ಮರ್ದನಾನುನ್ಮಜ್ಜನೇನ ರಜಸಾ ಮಹಾಮಣಿರಿವ ಅನಭಿವ್ಯಕ್ತಬ್ರಹ್ಮವರ್ಚಾಃ ಕರ್ಪಟಾವೃತಕಟಿರುಪವೀತೇನೋ-ರುಮಷಿಣಾ ದ್ವಿಜಾತಿರಿತಿ ಬ್ರಹ್ಮಬಂಧುರಿತಿ ಸಂಜ್ಞಯಾಽ ಜ್ಞಜನಾವಗತೋ ವಿಚಚಾರ ||೧೦||**

**ಶೀತೋಷ್ಣವಾತವರ್ಷೇಷು** ಛಳಿ, ಬಿಸಿಲು, ಗಾಳಿ, ಮಳೆಗಳಲ್ಲಿ **ವೃಷ ಇವ** ಘೂಳಿಯಂತೆ **ಅನಾವೃತಾಂಗಃ** ಏನನ್ನೂ ಹೊದೆದುಕೊಳ್ಳದಿರುವ ದೇಹವುಳ್ಳವನು **ಪೀನಃ** ಪುಷ್ಟನಾದ **ಸಂಹನನಾಂಗಃ** ದೃಢವಾದ ಅವಯವಗಳುಳ್ಳ **ಸ್ಥಂಡಿಲಸಂವೇಶನ** ಶಾರಿಸಿದ ನೆಲದಲ್ಲಿ ಮಲಗುವುದು **ಅನುನ್ಮರ್ದನ** ಎಣ್ಣೆ ಹಚ್ಚಿ ಮೈ ತಿಕ್ಕದಿರುವುದು **ಅನುನ್ಮಜ್ಜನೇನ** ಸ್ನಾನ ಮಾಡದಿರುವುದರಿಂದ **ರಜಸಾ** ಧೂಳಿನಿಂದ **ಮಹಾಮಣಿರಿವ** ರತ್ನದಂತೆ **ಅನಭಿವ್ಯಕ್ತಬ್ರಹ್ಮವರ್ಚಃ** ಕಾಣದಿರುವ ಬ್ರಹ್ಮವರ್ಚಸ್ಸುಳ್ಳ **ಕರ್ಪಟಾವೃತಕಟಿಃ** ಹರಕುಬಟ್ಟೆಯನ್ನು ಟೊಂಕಕೆ ಕಟ್ಟಿದ **ಉರುಮಷಿಣಾ** ಅತಿಯಾಗಿ ಮಲಿನವಾದ **ಉಪವೀತೇನ** ಯಜ್ಞೋಪವೀತದಿಂದ **ದ್ವಿಜಾತಿರಿತಿ** ಬ್ರಾಹ್ಮಣನೆಂದು **ಬ್ರಹ್ಮಬಂಧುರಿತಿ** ಬ್ರಾಹ್ಮಣನು ಬಂಧುವಾಗಿ ಉಳ್ಳವನೆಂದು **ಸಂಜ್ಞಯಾ** ಹೆಸರಿನಿಂದ **ಅಜ್ಞಜನಾವಗತಃ** ಮೂರ್ಖಜನರಿಂದ ತಿಳಿಯಲ್ಪಟ್ಟವನಾಗಿ **ವಿಚಚಾರ** ಸಂಚರಿಸಿದನು. ||೧೦||

**ಯದಾ ತು ಪರತ ಆಹಾರಂ ಕರ್ಮವೇತನತ ಈಹಮಾನಃ ಸ್ವಭ್ರಾತೃಭಿರಪಿ ಕೇದಾರಕರ್ಮಣಿ ನಿರೂಪಿತಸ್ತದಪಿ ಕರೋತಿ । ಕಿಂ ತು ನ ಸಮಂ ವಿಷಮಂ ನ್ಯೂನಮಧಿಕಮಿತಿ ವೇದ । ಕಣಪಿಣ್ಯಾಕಫಲೀಕರಣಕುಲ್ಮಾಷಸ್ಥಾಲೀ-ಪುರೀಷಾದೀನ್ಯಪಿ ಅಮೃತವದಾರೋಚಯತಿ ||೧೧||**

**ಯದಾ ತು ಪರತಃ** ಯಾವಾಗ ಬೇರೆಯವರಿಂದ **ಕರ್ಮವೇತನತಃ** ಕೆಲಸಮಾಡಿದ್ದಕ್ಕೆ ಸಂಬಳ ರೂಪವಾಗಿ **ಆಹಾರಂ** ಆಹಾರವನ್ನು **ಈಹಮಾನಃ** ಇಚ್ಛಿಸುವನೋ **ತದಾ** ಆಗ **ಸ್ವಭ್ರಾತೃಭಿರಪಿ** ತನ್ನ ಅಣ್ಣಂದಿರಿಂದಲೂ **ಕೇದಾರಕರ್ಮಣಿ ನಿರೂಪಿತಃ** ಹೊಲ ಕಾಯಲು ಹೇಳಿದಾಗ **ತದಪಿ ಕರೋತಿ** ಅದನ್ನೂ ಮಾಡುವನು

**ಕಿಂ ತು** ಆದರೆ **ಸಮಂ** ನಾನು ಮಾಡುವ ಕೆಲಸಕ್ಕೆ ಇದು ಸಮಾನವಾದುದು **ಅಧಿಕಂ** ಇದು ಹೆಚ್ಚು **ನ್ಯೂನಂ** ಕಡಿಮೆ **ವಿಷಮಂ** ವಿಷಮವಾದುದು **ಇತಿ** ಎಂದು **ನ ವೇದ** ತಿಳಿದವನಲ್ಲ **ಕಣ** ನುಚ್ಚು **ಪಿಣ್ಯಾಕ** ಎಣ್ಣೆ ತೆಗೆದಮೇಲೆ ಉಳಿಯುವ ಹಿಂಡಿ **ಫಲೀಕರಣ** ಹೊಟ್ಟು **ಕುಲ್ಮಾಷ** ಕೆಟ್ಟು ಹೋದ ಹುಳ ಹಿಡಿದ ಉದ್ದು ಮೊದಲಾದ ಧಾನ್ಯ **ಸ್ಥಾಲೀಪುರೀಷ** ಪಾತ್ರೆಗೆ ಅಂಟಿಕೊಂಡ ಹೊತ್ತಿದ ವಸ್ತುವನ್ನು **ಆದೀನ್** ಜೋಳ ಮುಂತಾದವನ್ನು **ಆರೋಚಯತಿ** ರುಚಿಯಾಗಿ ಸ್ವೀಕರಿಸುವನು. ||೧೧||

ಇದುವರೆಗೆ ಅವನ ವೈರಾಗ್ಯವನ್ನು ತಿಳಿಸಿ ಮರಣ ಬಂದರೂ ಹೆದರದಿರುವ ಮತ್ತೊಂದು ಮಾಹಾತ್ಮ್ಯ ಹೇಳಲಾರಂಭಿಸುವರು ಇಲ್ಲಿ

**ಅಥ ಕದಾಚಿತ್ ಕಶ್ಚಿತ್ ವೃಷಲಪತಿರ್ಭದ್ರಕಾಲ್ಯೈ ಪುರುಷಪಶುಮಾ-ಲಭತಾಪತ್ಯಕಾಮಃ ||೧೨||**

**ಅಥ** ಮಾಹಾತ್ಮ್ಯಾಂತರಾರಂಭವಾಗುವುದು **ಕದಾಚಿತ್** ಒಮ್ಮೆ **ಕಶ್ಚಿತ್** ಒಬ್ಬ **ವೃಷಲಪತಿಃ** ಶೂದ್ರ ರಾಜನು **ಅಪತ್ಯಕಾಮಃ** ಮಗನನ್ನು ಪಡೆಯಲಿಚ್ಛಿಸಿ **ಭದ್ರಕಾಲ್ಯೈ** ಭದ್ರಕಾಳಿಗೆ **ಪುರುಷಪಶುಂ ಆಲಭತ** ಒಂದು ಪುರುಷ ಪಶುವನ್ನು ಬಲಿಕೊಡಲು ಹುಡುಕಲಾರಂಭಿಸಿದನು. ||೧೨||

**ತಸ್ಯ ಹ ದೈವವಿಮುಕ್ತಸ್ಯ ಪಶೋಃ ಪದವೀಂ ತದನುಚರಾಃ ಪರಿಧಾವಂತೋ ನಿಶಿ ನಿಶೀಥಸಮಯೇ ತಮಸಾಽಽವೃತಾಯಾಮನಧಿಗತಪಶವ ಆಕಸ್ಮಿಕೇನ ವಿಧಿನಾ ಕೇದಾರಾನ್ ವೀರಾಸನೇನ ಮೃಗವರಾಹಾದಿಭ್ಯಃ ಸಂರಕ್ಷಮಾಣಂ ಅಂಗಿರಸಪ್ರವರಸುತಂ ಅಪಶ್ಯನ್ ||೧೩||**

**ತದನುಚರಾಃ** ಆ ರಾಜಭಟರು **ತಸ್ಯ** ರಾಜನ **ದೈವವಿಮುಕ್ತಸ್ಯ ಪಶೋಃ** ಅದೃಷ್ಟ ಪ್ರೇರಕ ಶ್ರೀಹರಿಯಿಂದ ಬಂಧನದಿಂದ ಬಿಡುಗಡೆ ಹೊಂದಿದ ಪುರುಷ ಪಶುವಿನ **ಪದವೀಂ** ಮಾರ್ಗವನ್ನು **ಪರಿಧಾವಂತಃ** ಹುಡುಕುತ್ತಿರುವವರಾಗಿ **ತಮಸಾಽಽವೃತಾಯಾಂ** ಕತ್ತಲೆ ಆವರಿಸಿದ **ನಿಶಿ** ರಾತ್ರಿಯಲ್ಲಿ **ನಿಶೀಥಸಮಯೇ** ಅರ್ಧರಾತ್ರಿ ಕಳೆದಮೇಲೆಯೂ **ಅನಧಿಗತಪಶವಃ** ತಾವು ಸಂಕಲ್ಪಿಸಿದ ಪುರುಷಪಶುವನ್ನು ಪಡೆಯದಿರುವವರಾಗಿ **ವೀರಾಸನೇನ** ವೀರಾಸನದಲ್ಲಿದ್ದು **ಕೇದಾರಾನ್** ಭತ್ತದ ಗದ್ದೆಗಳನ್ನು **ಮೃಗವರಾಹಾದಿಭ್ಯಃ** ಹಂದಿ ಮೊದಲಾದ ಪ್ರಾಣಿಗಳಿಂದ ರಕ್ಷಿಸುವ ನರಸಿಂಹ ವರಾಹ ರೂಪಿಹರಿಯಿಂದ ರಕ್ಷಿತನಾದ




**ಆಂಗಿರಸಪ್ರವರಸುತಂ** ಆಂಗಿರಸ ಕುಲದಲ್ಲಿ ಶ್ರೇಷ್ಠನಾದ ಬ್ರಾಹ್ಮಣ ಪುತ್ರನಾದ ಭರತನನ್ನು **ಆಕಸ್ಮಿಕೇನ ವಿಧಿನಾ ಅಪಶ್ಯನ್** ಶ್ರೀಹರಿಯ ಇಚ್ಛೆಯ ಅಧೀನವಾದ ರೀತಿಯಲ್ಲಿ ಕಂಡರು. ||೧೩||

**ಅಥ ತ ಏನಮನವದ್ಯಲಕ್ಷಣಮವಮೃಶ್ಯ ತೇನ ಭರ್ತುಃ ಕರ್ಮನಿಷ್ಪತ್ತಿಂ ಮನ್ಯಮಾನಾ ಬಧ್ವಾ ರಶನಯಾ ಚಂಡಿಕಾಗೃಹಮುಪನಿನ್ಯುರ್ಮುದಾ ವಿಕಸಿತವದನಾಃ ||೧೪||**

**ಅಥ** ನಂತರ **ತೇ** ರಾಜಭಟರು ಏನಂ ಇವನನ್ನು **ಅನವದ್ಯಲಕ್ಷಣಂ** ನಿರ್ದುಷ್ಟವಾದ ಲಕ್ಷಣವುಳ್ಳವನೆಂದು **ಅವಮೃಶ್ಯ** ನಿಶ್ಚಯಿಸಿ **ತೇನ** ಅವನಿಂದ **ಭರ್ತುಃ** ತಮ್ಮರಾಜನ **ಕರ್ಮನಿಷ್ಪತ್ತಿಂ ಮನ್ಯಮಾನಾಃ** ಬಲಿಕೊಡುವ ಕಾರ್ಯ ಪೂರ್ಣವಾಗುವುದೆಂದು ಭಾವಿಸಿ **ರಶನಯಾ ಬಧ್ವಾ** ಅವನನ್ನು ಹಗ್ಗದಿಂದ ಕಟ್ಟಿ **ಮುದಾ** ಸಂತೋಷದಿಂದ **ವಿಕಸಿತವದನಾಃ** ಅರಳಿದಮುಖವುಳ್ಳವರಾಗಿ **ಚಂಡಿಕಾಗೃಹಂ ಉಪನಿನ್ಯುಃ** ಚಂಡಿಕಾ ದೇವಸ್ಥಾನಕ್ಕೆ ಕರೆದೊಯ್ದರು. ||೧೪||

**ಅಥ ಪಣಯಃ ತಂ ಸ್ವವಿಧಿನಾಭಿಷಿಚ್ಯಾಹತೇನ ವಾಸಸಾಽಽಚ್ಛಾದ್ಯ ಭೂಷಣಾನುಲೇಪಸ್ರಕ್ತಿಲಕಾದಿಭಿರುಪಸ್ಕೃತಂ ಭುಕ್ತವಂತಂ ಧೂಪದೀಪ-ಮಾಲ್ಯಲಾಜಕಿಸಲಯಾಂಕುರಫಲೋಪಹಾರೋಪೇತಯಾ ವೈಶಸಸಂಸ್ಥಯಾ ಮಹತಾ ಗೀತಸ್ತುತಿಮೃದಂಗಪಣವಘೋಷೇಣ ಚ ತಂ ಪುರುಷಪಶುಂ ಭದ್ರಕಾಲ್ಯಾಃ ಪುರತಃ ಉಪವೇಶಯಾಮಾಸುಃ ||೧೫||**

**ಅಥ** ನಂತರ **ಪಣಯಃ** ಶೂದ್ರರು (ಕಳ್ಳರು) **ಸ್ವವಿಧಿನಾ** ತಮ್ಮ ಆಗಮದಲ್ಲಿ ಹೇಳಿದಂತೆ **ಅಭಿಷಿಚ್ಯ** ಸ್ನಾನ ಮಾಡಿಸಿ **ಆಹತೇನ** ಛೇದವಿಲ್ಲದಿರುವ (ಆಹತೇನ ಎಂದು ಪದಚ್ಛೇದ ಮಾಡಿದಾಗ ಶುದ್ಧವಾದ ಎಂದರ್ಥ) **ವಾಸಸಾ** ಬಟ್ಟೆಯಿಂದ **ಆಚ್ಛಾದ್ಯ** ಹೊದಿಸಿ **ಭೂಷಣ** ಅಲಂಕಾರ **ಅನುಲೇಪ** ಗಂಧ ಹಚ್ಚುವುದು **ಸ್ರಕ್** ಮಾಲೆ **ತಿಲಕಾದಿಭಿಃ** ಹಣೆಯಲ್ಲಿ ತಿಲಕ ಮುಂತಾದವುಗಳಿಂದ **ಉಪಸ್ಕೃತಂ** ಅಲಂಕರಿಸಲ್ಪಟ್ಟ **ಭುಕ್ತವಂತಂ** ಊಟಮಾಡಿದ **ಧೂಪ ದೀಪ ಮಾಲ್ಯ** ಮಾಲೆ **ಲಾಜ** ಅರಳು **ಕಿಸಲಯ** ಚಿಗುರುಗಳು **ಅಂಕುರ** ಭತ್ತದ ತೆನೆಗಳು **ಫಲ** ಹಣ್ಣುಗಳು **ಉಪಹಾರೋಪೇತಯಾ** ಕಾಣಿಕೆಯಿಂದ ಕೂಡಿದ **ವೈಶಸಸಂಸ್ಥಯಾ** ಹಿಂಸಾವಿಧಾನದಿಂದ **ಮಹತಾ** ದೊಡ್ಡದಾದ **ಗೀತ** ಗಾಯನ **ಸ್ತುತಿ** ಸ್ತೋತ್ರ **ಮೃದಂಗ ಪಣವ** ಇವುಗಳ **ಘೋಷೇಣ**

ಧ್ವನಿಯಿಂದ **ತಂ ಪುರುಷಪಶುಂ** ಆ ಪುರುಪಶುವಾದ ಭರತನನ್ನು **ಭದ್ರಕಾಲ್ಯಾಃ ಪುರತಃ** ಭದ್ರಕಾಳಿಯ ಎದುರಿಗೆ **ಉಪವೇಶಯಾಮಾಸುಃ** ಕೂಡಿಸಿದರು. ॥೧೫॥

**ಅಥ ವೃಷಲರಾಜಪಣಿಃ ಪುರುಷಪಶೋರಸೃಗಾಸವೇನ ದೇವೀಂ ಭದ್ರಕಾಲೀಂ ಯಕ್ಷ್ಯಮಾಣಸ್ತದಭಿಮಂತ್ರಿತಮಸಿಮತಿಕರಾಲಂ ನಿಶಿತಮುಪಾದದೇ ॥೧೬॥**

**ವೃಷಲರಾಜಪಣಿಃ** ಶೂದ್ರ ರಾಜನೆಂಬ ಕಳ್ಳನು **ಪುರುಷಪಶೋಃ** ಪುರುಷ ಪಶುವಿನ **ಅಸೃಕ್** ರಕ್ತವೆಂಬ **ಆಸವೇನ** ಇಂದ್ರಿಯಗಳಿಗೆ ಪ್ರೀತಿಕರವಾದ ದ್ರವ್ಯದಿಂದ **ದೇವೀಂ ಭದ್ರಕಾಲೀಂ** ಭದ್ರಕಾಲೀದೇವಿಯನ್ನು ಉದ್ದೇಶಿಸಿ **ಯಕ್ಷ್ಯಮಾಣಃ** ಯಾಗ ಮಾಡುವವನಾಗಿ **ತದಭಿಮಂತ್ರಿತಂ** ಭದ್ರಕಾಲೀ ಮಂತ್ರದಿಂದ ಜಪಿಸಲ್ಪಟ್ಟ **ಅತಿಕರಾಲಂ** ಭಯಾನಕವಾದ **ನಿಶಿತಂ** ಹರಿತವಾದ **ಅಸಿಂ** ಖಡ್ಗವನ್ನು **ಉಪಾದದೇ** ತೆಗೆದುಕೊಂಡನು. (**ವೃಷಂ** ಧರ್ಮವನ್ನು **ಲುನಂತೀತಿ** ನಾಶಮಾಡುವರು ಕಾರಣ **ವೃಷಲಾಃ** ಅವರಿಗೆ **ರಾಜಾ** ಅವನಿಂದ ಕಲ್ಪಿತರಾದ ಪುರೋಹಿತರು ಪಣಿಗಳು ಹೀಗೂ ಅರ್ಥ). ॥೧೬॥

**ಇತಿ ತೇಷಾಂ ವೃಷಲಾನಾಂ ರಜಸ್ತಮಃಪ್ರಕೃತೀನಾಂ ಧನಮದರಜಸೋತ್ಸಿಕ್ತಮನಸಾಂ ಭಗವತ್ಕಲಾಂಗಿರಸಕುಲಂ ಕದರ್ಥೀಕೃತ್ಯೋತ್ಪಥೇನ ಸ್ವೈರಂ ವಿಹರತಾಂ ಹಿಂಸಾವಿಹಾರಾಣಾಂ ಕರ್ಮಾತಿದಾರುಣಂ ಯದ್ ಬ್ರಹ್ಮಭೂತಸ್ಯ ಸಾಕ್ಷಾದ್ಬ್ರಹ್ಮರ್ಷಿಸುತಸ್ಯ ನಿರ್ವೈರಸ್ಯ ಸರ್ವಭೂತಸುಹೃದಃ ಸೂನಾಯಾಮಪ್ಯನಭಿಮತಸ್ಯಾಲಂಭನಂ ತದುಪಲಭ್ಯ ಬ್ರಹ್ಮತೇಜಸಾಽತಿದುರ್ವಿಷಹೇಣ ದಂದಹ್ಯಮಾನೇನ ವಪುಷಾ ಸಹಸೋಚ್ಚಚಾಲ ಸೈವ ಭದ್ರಕಾಲೀ ॥೧೭॥**

**ಇತಿ** ಈ ರೀತಿಯಾದ **ರಜಸ್ತಮಃಪ್ರಕೃತೀನಾಂ** ರಜೋಗುಣತಮೋಗಣಗಳೇ ಸ್ವಭಾವವಾಗಿವುಳ್ಳ **ಧನಮದರಜಸೊತ್ಸಿಕ್ತಮನಸಾಂ** ಧನಮದದಿಂದುಂಟಾದ ರಾಗದಿಂದ ಬಿಡಲ್ಪಟ್ಟಮರ್ಯಾದೆಯುಳ್ಳ (ಮನಸ್ಸುಳ್ಳ) **ತೇಷಾಂ ವೃಷಲಾನಾಂ** ಆ ಶೂದ್ರರ **ಭಗವತ್ಕಲಾಂಗಿರಸಕುಲಂ** ಭಗವಂತನ ಸನ್ನಿಧಾನ ಪಾತ್ರವಾದ ಆಂಗೀರಸ ಕುಲವನ್ನು **ಕದರ್ಥೀಕೃತ್ಯ** ತುಚ್ಛ ಮಾಡಿ **ಸ್ವೈರಂ** ಮನ ಬಂದಂತೆ **ಉತ್ಪಥೇನ** ದಾರಿಬಿಟ್ಟು **ವಿಹರತಾಂ** ವರ್ತಿಸುವ **ಹಿಂಸಾವಿಹಾರಾಣಾಂ** ಹಿಂಸೆಯೇ




ಕ್ರೀಡೆಯಾಗಿವುಳ್ಳವರ **ಯತ್** ಯಾವ **ಬ್ರಹ್ಮಭೂತಸ್ಯ** ಪರಬ್ರಹ್ಮನಲ್ಲಿ ಮನಸ್ಸಿಟ್ಟಿರುವ **ಬ್ರಹ್ಮರ್ಷಿಸುತಸ್ಯ** ಬ್ರಹ್ಮರ್ಷಿಪುತ್ರನ **ನಿರ್ವೈರಸ್ಯ** ಯಾರಲ್ಲಿಯೂ ದ್ವೇಷವಿಲ್ಲದ **ಸರ್ವಭೂತಸುಹೃದಃ** ಎಲ್ಲ ಪ್ರಾಣಿಗಳಿಗೆ ಅನಿಮಿತ್ತೋಪಕಾರಕನಾದ **ಸೂನಾಯಾ ಅನಭಿಮತಸ್ಯಾಪಿ** ಹಿಂಸೆ ಮಾಡಲೂ ಯಾವ ದೇವತೆಗಳಿಗೂ ಸಮ್ಮತನಲ್ಲದ ಭರತನ **ಆಲಂಭನಂ** ಸಂಹರಿಸುವುದೆಂಬ **ಅತಿದಾರುಣಂ ಕರ್ಮ** ಅತ್ಯಂತ ಕ್ರೂರವಾದ ಕಾರ್ಯವನ್ನು **ತದುಪಲಭ್ಯ** ಅದನ್ನು ಕಂಡು **ದುರ್ವಿಷಹೇಣ** ಸಹಿಸಲಾಗದ **ಬ್ರಹ್ಮತೇಜಸಾ** ಬ್ರಾಹ್ಮಣ ಪುತ್ರನಲ್ಲಿ ಇರುವ ಶ್ರೀಹರಿಯ ಸಾಮರ್ಥ್ಯದಿಂದ **ದಂದಹ್ಯಮಾನೇನ** ಬಹಳವಾಗಿ ಸುಡುತ್ತಿರುವ **ವಪುಷಾ** ದೇಹವುಳ್ಳದ್ದರಿಂದ **ಸೈವ** ಯಾವಳನ್ನು ಕುರಿತು ಬಲಿಕೊಡಹೊರಟಿದ್ದನೋ ಅವಳೇ **ಭದ್ರಕಾಲೀ** ಭದ್ರಕಾಲಿಯು ಸಹಸಾ **ಉಚ್ಚಚಾಲ** ತಟ್ಟನೆ ಪ್ರತಿಮೆಯಿಂದ ಹೊರಬಂದಳು. ॥೧೭॥

ಅವಳ ಕೃತ್ಯ ಹೇಳುವರು

**ಭೃಶಂ ಅಮರ್ಷರೋಷಾವೇಶರಭಸವಿಲಸಿತಭ್ರುಕುಟಿವಿಟಪಕುಟಿಲ ದಂಷ್ಟ್ರಾರುಣೇಕ್ಷಣಾಟೋಪಾತಿಭಯಾನಕವದನಾ ಹಂತುಕಾಮೇವೇದಂ ಸಹಾಟ್ಟಹಾಸಮತಿಸಂರಂಭೇಣ ವಿಮುಂಚತೀ ತತ ಉತ್ಪತ್ಯ ಪಾಪೀಯಸಾಂ ದುರ್ಭಾವನಾಂ ತೇನೈವಾಸಿನಾ ವೃಕ್ಣಶೀರ್ಷ್ಣಾಂ ಗಲಾತ್ ಸ್ರವಂತಂ ಅಸೃಗಾಸವಮತ್ಯುಷ್ಣಂ ಸಹ ಗಣೈರ್ನಿಪೀಯಾತಿಪಾನಮದವಿಹ್ವಲೋಚ್ಚೈ-ಸ್ತರಾಂ ಸ್ವಪಾರ್ಷದೈಃ ಸಹ ಜಗೌ ನನರ್ತ ವಿಜಹಾರ ಚ ಶಿರಃ ಕಂದುಕಲೀಲಯಾ ॥೧೮॥**

**ಭೃಶಂ** ಬಹಳವಾಗಿ **ಅಮರ್ಷ** ಅಪರಾಧ ಅಸಹನೆ **ರೋಷ** ತನ್ನ ದೇಹದಾಹ ಪ್ರಯುಕ್ತ ಕೋಪ ಇವುಗಳ **ಆವೇಶ** ಸಮಾವೇಶದ **ರಭಸ** ವೇಗದಿಂದ **ವಿಲಸಿತ** ಪ್ರಕಾಶಿತವಾದ **ಭೃಕುಟಿವಿಟಪ** ಹುಬ್ಬುಗಂಟಿಕ್ಕುವದೆಂಬ ಟೊಂಗೆ **ಕುಟಿಲದಂಷ್ಟ್ರಾ** ಕೋರೆ ಹಲ್ಲುಗಳು **ಅರುಣೇಕ್ಷಣ** ಕೆಂಪಾದ ಕಣ್ಣುಗಳು ಇವುಗಳ **ಆಟೋಪ** ಸಂಭ್ರಮದಿಂದ **ಅತಿಭಯಾನಕವದನಾ** ಬಹಳ ಭಯಜನಕವಾದ ಮುಖವುಳ್ಳವಳಾಗಿ **ಇದಂ** ಜಗತ್ತನ್ನೇ **ಹಂತುಕಾಮಾ ಇವ** ಕೊಲ್ಲಲಿಚ್ಛಿಸುವಳಂತೆ **ಸಹಾಟ್ಟಹಾಸಂ** ಸಿಂಹನಾದದಿಂದ ಸಹಿತವಾಗಿ **ವಿಮುಂಚತೀ** ನಗೆಯನ್ನು ತೋರುತ್ತ **ತತಃ** ತನ್ನ ಸ್ಥಾನದಿಂದ **ಉತ್ಪತ್ಯ** ಹಾರಿಬಂದು **ಪಾಪೀಯಸಾಂ** ಪಾಪಿಷ್ಠರಾದ **ದುರ್ಭಾವನಾಂ**

ದುಷ್ಟಮನಸ್ಸಿನವರ **ತೇನೈವ ಅಸಿನಾ** ಅದೇ ಖಡ್ಗದಿಂದ **ವೃಕ್ಣಶೀರ್ಷ್ಣಾಂ** ಕತ್ತರಿಸಲ್ಪಟ್ಟ ತಲೆಗಳುಳ್ಳ **ಗಲಾತ್** ಕುತ್ತಿಗೆಯಿಂದ **ಸ್ರವಂತಂ** ಹರಿಯುವ **ಅತ್ಯುಷ್ಣಂ** ಬಿಸಿಯಾದ **ಅಸೃಗಾಸವ** ರಕ್ತಾಸವವನ್ನು **ಗಣೈಃ ಸಹ** ತನ್ನ ಪರಿವಾರದೊಡನೆ **ನಿಪೀಯ** ಕುಡಿದು **ಅತಿಪಾನಮದವಿಹ್ವಲಾ** ಬಹಳಪಾನದ ಸಂತೋಷದಿಂದ ವಿವಶಳಾಗಿ **ಉಚ್ಚೈಸ್ಸರಾಂ** ಗಟ್ಟಿಯಾಗಿ **ಸ್ವಪಾರ್ಷದೈಃ ಸಹ ಜಗೌ** ತನ್ನ ಭೃತ್ಯರೊಡನೆ ಹಾಡಿದಳು **ನನರ್ತ** ಕುಣಿದಳು **ಶಿರಃ ಕಂದುಕಲೀಲಯಾ ವಿಜಹಾರ** ತಲೆಗಳೆಂಬ ಚಂಡಿನಾಟ ಆಡಿದಳು. ||೧೮||

**ಏವಮೇವ ಖಲು ಮಹದಭಿಚಾರಾತಿಕ್ರಮಃ ಕಾರ್ತ್ಸ್ನ್ಯೇನ ಆತ್ಮನೇ ಫಲತಿ ||೧೯||**

**ಏವಂ ಏವ** ಇದೇ ರೀತಿ **ಮಹದಭಿಚಾರಾತಿಕ್ರಮಃ** ದೊಡ್ಡವರಲ್ಲಿ ಮಾಡುವ ಮಾರಣ ಪ್ರಯತ್ನ ರೂಪವಾದ ಅಪರಾಧವು **ಕಾರ್ತ್ಸ್ನ್ಯೇನ** ಎಲ್ಲ ರೀತಿಯಿಂದ **ಆತ್ಮನೇ** ತನಗೇನೇ **ಫಲತಿ** ಫಲಿಸುವುದು **ಖಲು** ನಿಶ್ಚಯ. ||೧೯||

ಮರಣ ಬಂದರೂ ವ್ಯಾಕುಲತೆ ಇಲ್ಲ ಕೊಲ್ಲುವವರ ಮೇಲೆ ಕೋಪವಿಲ್ಲ ಮುಂತಾದುದು ಅಸಂಭಾವಿತ ಎಂದರೆ ಹೇಳುವರು

**ನ ವಾ ಏತದ್ವಿಷ್ಣುರಾತಾದ್ಭುತಂ ಯದಸಂಭ್ರಮಃ ಸ್ವಶಿರಚ್ಛೇದನ ಆಪತಿತೇಽಪಿ ವಿಮುಕ್ತದೇಹಾದ್ಯಾತ್ಮಭಾವಸುದೃಢಹೃದಯಗ್ರಂಥೀನಾಂ ಸರ್ವಸತ್ವಸುಹೃದಾತ್ಮನಾಂ ನಿರ್ವೈರಾಣಾಂ ಸಾಕ್ಷಾದ್ಭಾಗವತ ಅನಿಮಿಷಾರಿ-ವರಾಯುಧೇನಾಪ್ರಮತ್ತೇನ ತೈಸ್ತೈರ್ಭಾವೈರಭಿರಕ್ಷ್ಯಮಾಣಾನಾಂ ತತ್ಪಾದಮೂಲಂ ಅಕುತೋಭಯಮಾಶ್ರಿತಾನಾಂ ಭಾಗವತಪರಮಹಂಸಾನಾಂ ||೨೦||**

**ಹೇ ವಿಷ್ಣುರಾತ** ಪರೀಕ್ಷಿತನೇ **ಸ್ವಶಿರಚ್ಛೇದನ ಆಪತಿತೇ ಅಪಿ** ತನ್ನ ತಲೆ ಕತ್ತರಿಸುವ ಪ್ರಸಂಗ ಬಂದಾಗಲೂ **ಯದಸಂಭ್ರಮಃ** ವ್ಯಾಕುಲತೆಯೇ ಇಲ್ಲ **ಇತ್ಯೇತತ್** ಇದು **ವಿಮುಕ್ತ** ಬಿಡಲ್ಪಟ್ಟ **ದೇಹಾದ್ಯಾತ್ಮಭಾವ** ನಾನೇ ಮಾಡುವವ ಎಂಬ ಸ್ವಾತಂತ್ರ್ಯಾಭಿಮಾನ ರೂಪವಾದ **ಸುದೃಢಹೃದಯಗ್ರಂಥೀನಾಂ** ಅತ್ಯಂತ ದೃಢವಾದ ಹೃದಯಗ್ರಂಥಿ ಉಳ್ಳ **ಸರ್ವಸತ್ವಸುಹೃದಾತ್ಮನಾಂ** ಎಲ್ಲರಲ್ಲಿಯೂ ಇವರು ನನ್ನ ಸುಹೃದಯರು ಎಂಬ ಮನೋಭಾವವುಳ್ಳ **ನಿರ್ವೈರಾಣಾಂ** ದ್ವೇಷಭಾವನೆ ಇಲ್ಲದ





**ಸಾಕ್ಷಾದ್ಭಗವತ** ಮುಖ್ಯ ಭಗವಚ್ಛಬ್ದ ವಾಚ್ಯನಾದ (ತುರೀಯ ಮೂರ್ತಿಯ) **ಅನಿಮಿಷಾರಿ** ದೈತ್ಯರಿಗೆ ಶತ್ರುವಾದ ಶ್ರೀಹರಿಯ **ವರಾಯುಧ** ಕಾಲ ಚಕ್ರವೆಂಬ ಶ್ರೇಷ್ಠ ಆಯುಧದಿಂದ **ತೈಃ ತೈಃ ಭಾವೈಃ** ಸಂಸಾರದಲ್ಲಿ ಕರ್ಮಾಧೀನವಾಗಿ ಬರುವ ಅನಿಷ್ಟಪದಾರ್ಥಗಳಿಂದ **ಅಭಿರಕ್ಷ್ಯಮಾಣಾನಾಂ** ರಕ್ಷಿಸಲ್ಪಡುವ **ಅಕುತೋಭಯಂ** ಯಾರಿಂದಲೂ ಭಯವಿಲ್ಲದ **ತತ್ಪಾದಮೂಲಂ** ಭಗವಂತನ ಪಾದಮೂಲವನ್ನು **ಆಶ್ರಿತಾನಾಂ** ಆಶ್ರಯಿಸಿದ **ಭಾಗವತ ಪರಮಹಂಸಾನಾಂ** ಭಗವದ್ಭಕ್ತರಾದ ಪರಮ ಹಂಸರಿಗೆ **ಅದ್ಭುತಂ ನೈವ** ಆಶ್ಚರ್ಯವೇನಿಲ್ಲ . ॥೨೦॥

**॥ ಇಲ್ಲಿಗೆ ೯ನೇ ಅಧ್ಯಾಯವು ಮುಗಿಯಿತು ॥**

★★★



## ಒಂಬತ್ತನೇ ಅಧ್ಯಾಯದ ಸಾರ

ಶುಕಾಚಾರ್ಯರು ಹೇಳುವರು. ಹೇ ಪರೀಕ್ಷನ್ಮಹಾರಾಜ! ಮೃಗಶರೀರವನ್ನು ಬಿಟ್ಟನಂತರದ ಭರತನ ಕಥೆಯನ್ನು ಕೇಳು. ಅಂಗಿರಸ ಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣ ಶ್ರೇಷ್ಠನೊಬ್ಬನಿದ್ದನು. ಅವನು ಶಮ, ದಮ, ತಪಸ್ಸು, ವೇದಾಧ್ಯಯನ, ದಾನ, ಯಜ್ಞ, ಸಂತೃಪ್ತಿ, ದ್ವಂದ್ವ ಸಹಿಷ್ಣುತೆ, ವಿನಯ, ವಿದ್ಯೆ, ಅನಸೂಯೆ ಮತ್ತು ಶ್ರೀಹರಿಯ ಜ್ಞಾನಗಳ ಸಮೃದ್ಧಿಯಿಂದ ಆನಂದ ಪಡುತ್ತಿದ್ದನು. ಅವನ ಹಿರಿಯ ಹೆಂಡತಿಯ ಉದರದಲ್ಲಿ ಒಂಬತ್ತು ಮಕ್ಕಳು ಹುಟ್ಟಿದರು. ಅವರು ವಿದ್ಯೆ, ನಡೆ, ನುಡಿ, ಆಚಾರ, ರೂಪ, ಔದಾರ್ಯ ಮೊದಲಾದ ಗುಣಗಳಲ್ಲಿ ತಂದೆಯನ್ನು ಹೋಲುತ್ತಿದ್ದರು. ಕಿರಿಯ ಹೆಂಡತಿಯಲ್ಲಿ ಹುಟ್ಟಿದ ಗಂಡು ಶಿಶುವೇ ಪರಮ ಭಗವದ್ಭಕ್ತನೂ ರಾಜರ್ಷಿಶ್ರೇಷ್ಠನೂ ಆದ ಭರತನು. ತನ್ನ ಮೃಗ ಶರೀರವನ್ನು ತೊರೆದು ಬ್ರಾಹ್ಮಣ ಶರೀರವನ್ನು ಹೊಂದಿ ಜನಿಸಿದ್ದರೂ ಅವನಿಗೆ ಶ್ರೀಹರಿಯ ಅನುಗ್ರಹದಿಂದ ಹಿಂದಿನ ಜನ್ಮದ ಸ್ಮರಣೆ ಇತ್ತು. ಸ್ವಜನ ಸಹವಾಸದಿಂದ ತಾನು ಈ ಬ್ರಾಹ್ಮಣಜನ್ಮದಲ್ಲಿ ಯೋಗಮಾರ್ಗಭ್ರಷ್ಟನಾಗಬಹುದೆಂಬ ಭಯ ಅವನಿಗೆ ಇದ್ದೇ ಇತ್ತು. ಕರ್ಮಬಂಧ ನಾಶಕನಾದ ಶ್ರೀಹರಿಯ ಕಥಾ ಶ್ರವಣ, ಸ್ಮರಣ, ಗುಣವಿವರಣೆಗಳಿಂದ ಶ್ರೀಹರಿಯನ್ನು ಸೇವಿಸುತ್ತಿದ್ದ ತನಗೆ ವಿಘ್ನ ಬರುವುದೆಂದು ಶಂಕಿಸುತ್ತಿದ್ದನು. ಈ ಕಾರಣ ಅವನು ಜನರಿಗೆ ತಾನು ಹುಚ್ಚ, ದಡ್ಡ, ಕಿವುಡನೆಂದು ತೋರಿಸುತ್ತಿದ್ದನು. ತಂದೆಗೆ ಮಗನಲ್ಲಿ ತುಂಬಾ ಪ್ರೀತಿ ಇತ್ತು. ಜಡನಾದ ಮಗನಿಗೆ ಮದುವೆಯಂತೂ ಆಗುವಂತಿಲ್ಲ. ಅಲ್ಲಿಯವರೆಗಿನ ಸಂಸ್ಕಾರಗಳನ್ನಾದರೂ ಮಾಡೋಣವೆಂದು ಯೋಚಿಸಿ ಜಾತಕರ್ಮದಿಂದ ಹಿಡಿದು ಸಮಾವರ್ತನದವರೆಗೆ ವೇದದಲ್ಲಿ ಹೇಳಿದ ರೀತಿಯಲ್ಲಿ ಎಲ್ಲ ಸಂಸ್ಕಾರಗಳನ್ನು ಮಾಡಿದನು. ಶ್ರೀಹರಿಯನ್ನೇ




ಧ್ಯಾನಿಸುತ್ತಿದ್ದ ಭರತನಿಗೆ ಇವು ಯಾವುವೂ ಇಷ್ಟವಿರಲಿಲ್ಲ. ಮಗನನ್ನು ಸುಶಿಕ್ಷಿತನನ್ನಾಗಿ ಮಾಡಲೇಬೇಕೆಂಬ ಆಗ್ರಹವುಳ್ಳ ಆ ಬ್ರಾಹ್ಮಣನು ಶೌಚ, ಆಚಮನ ಮೊದಲಾದ ಕರ್ಮ ನಿಯಮಗಳನ್ನು ಭರತನಿಗೆ ಹೇಳಿಕೊಟ್ಟನು. ಅಪರೋಕ್ಷ ಜ್ಞಾನಿಯಾದ ಭರತನಿಗೆ ಇವುಗಳನ್ನು ಬಿಡುವುದರಿಂದ ದೋಷವೇನೂ ಬರುತ್ತಿರಲಿಲ್ಲ. ಈ ದೃಷ್ಟಿಯಿಂದ ತಂದೆಯ ಆಗ್ರಹವು ದುರಾಗ್ರಹವೇ ಸರಿ. ಅವುಗಳಲ್ಲಿ ಅಷ್ಟಾಗಿ ಅಭಿನಿವೇಶವಿಲ್ಲದ ಭರತನು ತಂದೆಯ ಎದುರಿನಲ್ಲಿ ಮಾತ್ರ ಅವುಗಳನ್ನು ಸರಿಯಾಗಿ ಮಾಡುತ್ತಿದ್ದನು. ಅವನ ಮನಸ್ಸು ಶುದ್ಧವಾಗಿತ್ತು. ತಂದೆಯಿಲ್ಲದಿದ್ದಾಗ ತಪ್ಪಾಗಿಯೂ ಆಚರಿಸುತ್ತಿದ್ದನು. ಶ್ರೀಹರಿಯನ್ನೇ ಧ್ಯಾನಿಸುತ್ತಿದ್ದ ಅವನಿಗೆ ಬಾಹ್ಯಕರ್ಮಲೋಪವು ದೋಷಕಾರಿಯಲ್ಲವಾದರೂ ಅಪರೋಕ್ಷಜ್ಞಾನಿಯೂ ಸಹ ವಿಧಿಪ್ರಾಪ್ತ ಆಚಾರವನ್ನು ಬಿಡಬಾರದೆಂಬ ಅಭಿಪ್ರಾಯದಿಂದಲೇ ಅವನು ಅವುಗಳನ್ನು ಆಚರಿಸುತ್ತಿದ್ದನು. ಉಪನೀತನಾದ ಅವನಿಗೆ ತಂದೆಯು ವೇದಗಳನ್ನು ಅಧ್ಯಯನ ಮಾಡಿಸಿದನು. ಮೊದಲು ವ್ಯಾಹೃತಿಗಳೊಂದಿಗೆ ಓಂಕಾರ ಶಿರಸ್ಕವಾದ ಮೂರು ಪಾದಗಳುಳ್ಳ ಗಾಯಿತ್ರಿಯನ್ನು ಉಪದೇಶಿಸಿದನು. ಆ ಮಂತ್ರವು ಸೂರ್ಯಾಂತರ್ಗತ ಲಕ್ಷ್ಮೀನಾರಾಯಣನ ಹಿರಿಮೆಯನ್ನು ತಿಳಿಸುವ ಮಹಾಮಂತ್ರವು. ಉಪಾಕರ್ಮವಾದ ಮೇಲೆ ಚೈತ್ರ ಮೊದಲಾದ ನಾಲ್ಕು ತಿಂಗಳುಗಳ ಕಾಲ ಅವನಿಗೆ ವೇದಗಳನ್ನು ಹೇಳಿಕೊಟ್ಟನು. ಅಷ್ಟು ದಿವಸ ಕಲಿತರೂ ಭರತನು ಸರಿಯಾದ ರೀತಿಯಲ್ಲಿ ಸ್ವರವರ್ಣಗಳನ್ನು ಹೇಳುತ್ತಿರಲಿಲ್ಲ. ಅವನ ಮನಸ್ಸು ಶ್ರೀಹರಿಯಲ್ಲಿ ಲೀನವಾಗಿತ್ತು. ತಂದೆಗ ''**ಆತ್ಮಾ ವೈ ಪುತ್ರನಾಮಾಸಿ**'' ಎಂಬ ಶ್ರುತಿಯಂತೆ ಮಗನು ತನ್ನ ಸದೃಶನು ಎಂಬ ಭಾವನೆಯಿಂದ ಮಗನಲ್ಲಿ ಪ್ರೇಮಪೂರಿತ ಮನಸ್ಸುಳ್ಳವನಾಗಿ ಮದುವೆಯಾಗದ ಆದರೆ ಬ್ರಹ್ಮಚರ್ಯವನ್ನು ಮುಗಿಸದ ಜನರು ಮಾಡಬೇಕಾದ ಶೌಚ, ಅಧ್ಯಯನ, ವ್ರತ, ನಿಯಮ, ಗುರುಸೇವೆ, ಅಗ್ನಿಯಲ್ಲಿ ಹೋಮ ಮೊದಲಾದ ಕರ್ಮಗಳನ್ನು ಮಗನಿಗೆ ಇಷ್ಟವಲ್ಲದವುಗಳನ್ನೂ ಹೇಳಿಕೊಡಲೇಬೇಕೆಂಬ ದೃಢನಿಶ್ಚಯದಿಂದ ತಂದೆ ಹೇಳಿಕೊಟ್ಟನು. ಆದರೆ ಅವರ ಮನೋರಥವು ಸಿದ್ಧಿಸಲಿಲ್ಲ. ತನ್ನ ಸಾವಿನ ಅರಿವಿಲ್ಲದೆ ಗೃಹದಲ್ಲಿರುವ ತಂದೆಯು ಯಾವಾಗಲೂ ತನ್ನ ಕೆಲಸದಲ್ಲಿ ಜಾಗರೂಕವಾದ ಮೃತ್ಯುವಿನಿಂದ ಸಂಹೃತನಾದನು. ಪತಿಯು ಮೃತನಾದ ಮೇಲೆ ಕಿರಿಯ ಹೆಂಡತಿಯು ತನ್ನಿಬ್ಬರ ಮಕ್ಕಳನ್ನೂ ಸವತಿಗೆ ಒಪ್ಪಿಸಿಕೊಟ್ಟು ಸಹಗಮನದಿಂದ ಪತಿಯ ಲೋಕವನ್ನು ಸೇರಿದಳು. ಮಲ ಅಣ್ಣಂದಿರಿಗೆ ಈ ಭರತನ

ಪ್ರಭಾವವು ತಿಳಿಯದು. ವೇದವು ಕರ್ಮ ಪ್ರತಿಪಾದಕವಷ್ಟೇ ಎಂದು ಅರಿತಿದ್ದ ಅವರು ಪರಬ್ರಹ್ಮವಿದ್ಯೆಯಲ್ಲಿ ನಿಶ್ಚಿತ ಮನಸ್ಸಿನವರಾಗಿರಲಿಲ್ಲ. ತಮ್ಮನು ಮಂದಬುದ್ಧಿಯೆಂದು ಬಗೆದ ಅವರು ಭರತನಿಗೆ ಹೇಳಿಕೊಡಲೇಬೇಕೆಂಬ ನಿರ್ಬಂಧದಿಂದ ದೂರಸರಿಯಬಯಸಿದರು. ಆ ಭರತನಾದರೋ ಎರಡು ಕಾಲಿನ ಪಶುಗಳಾಗಿದ್ದ ಪಾಮರ ಜನರು ಅವನನ್ನು ಹುಚ್ಚ, ದಡ್ಡ, ಕಿವುಡ ಎಂದು ಕರೆದಾಗ ಅದಕ್ಕೆ ತಕ್ಕಂತೆಯೇ ಅಸಂಗತ ಮಾತುಗಳನ್ನಾಡುತ್ತಿದ್ದನು. ಕೆಲಸ ಮಾಡಿಸುವ ಜನರ ಇಷ್ಟಕ್ಕೆ ಅನುಗುಣವಾಗಿ ಕೆಲಸ ಮಾಡುತ್ತಿದ್ದನು. ಮೊದಲೇ ಒಪ್ಪಂದ ಮಾಡಿಕೊಳ್ಳದೆ ಅವರಾಗಿಯೇ ಕೊಟ್ಟ ಪ್ರತಿಫಲವಾಗಿಯೋ, ಒಪ್ಪಂದದಂತೆ ಕೊಟ್ಟ ಸಂಬಳವಾಗಿಯೋ, ಯಾಚನೆಯಿಂದಲೋ, ಪ್ರಯತ್ನವಿಲ್ಲದೆಯೇ ದೈವೇಚ್ಛೆಯಿಂದಲೋ ದೊರೆತ ಸ್ವಲ್ಪವೋ ಹೆಚ್ಚೋ ಮೃಷ್ಟಾನ್ನವೋ, ಕದನ್ನವೋ ಅದನ್ನೇ ತಿಂದುಬಿಡುತ್ತಿದ್ದನು. ಇಂದ್ರಿಯತೃಪ್ತಿಗಾಗಿ ಅವನೆಂದೂ ಊಟ ಮಾಡುತ್ತಿರಲಿಲ್ಲ. ಯಾವಾಗಲೂ ದುಃಖವಿಲ್ಲದ ತಮ್ಮ ಸ್ವರೂಪವಾದ ವಿಶುದ್ಧಾನುಭವದ ಆನಂದ ಸ್ವರೂಪಿಯಾದ ಸ್ವತಂತ್ರ ಶ್ರೀಹರಿಯ ಜ್ಞಾನವು ಅವನಿಗಿತ್ತು. ಮಾನಾಪಮಾನ ಮೊದಲಾದ ದ್ವಂದ್ವಗಳಿಂದ ಬರುವ ಸುಖದುಃಖಗಳಿಗೆ ಕಾರಣವಾದ ದೇಹಾಭಿಮಾನವೇ ಅವನಿಗಿರಲಿಲ್ಲ. ಈ ಕಾರಣ ಅವನು ಗೂಳಿಯಂತೆ ಛಳಿ, ಬಿಸಿಲು, ಮಳೆ, ಗಾಳಿಗಳಲ್ಲಿಯೂ ದೇಹಕ್ಕೆ ಹೊದಿಕೆಯೇ ಇಲ್ಲದೇ ಇರುತ್ತಿದ್ದನು. ಆದರೂ ಪುಷ್ಟನಾಗಿ ದೃಢಕಾಯನಾಗಿದ್ದ ಅವನು ಸಾರಿಸಿದ ನೆಲದ ಮೇಲೆಯೇ ಮಲಗಿಬಿಡುತ್ತಿದ್ದನು. ಮೈಯನ್ನು ಉಜ್ಜಿಕೊಳ್ಳುತ್ತಲೇ ಇರಲಿಲ್ಲ. ಸ್ನಾನವನ್ನೇ ಮಾಡುತ್ತಿರಲಿಲ್ಲ. ಧೂಳಿನಿಂದ ಮುಚ್ಚಿದ ಮಹಾರತ್ನದಂತೆ ಅವನ ಬ್ರಹ್ಮವರ್ಚಸ್ಸು ಅವ್ಯಕ್ತವಾಗಿತ್ತು. ತನ್ನ ಸೊಂಟಕ್ಕೆ ಹರಕು ಬಟ್ಟೆಯ ಚೂರನ್ನೇ ಸುತ್ತಿಕೊಳ್ಳುತ್ತಿದ್ದನು. ಯಜ್ಞೋಪವೀತವು ಅತ್ಯಂತ ಕಪ್ಪಾಗಿ ಇದ್ದುದರಿಂದ ಅಜ್ಞಾನಿಗಳು ಬ್ರಾಹ್ಮಣನೆಂದು ತಿಳಿದರೂ ಬ್ರಾಹ್ಮಣಾಧಮನೆಂದು ಬಗೆಯುತ್ತಿದ್ದರು. ಈ ರೀತಿಯಲ್ಲಿ ಅವನು ವಿವಿಧ ರೀತಿಯಲ್ಲಿ ಸಂಚರಿಸುತ್ತಿದ್ದನು. ಆಹಾರಕ್ಕಾಗಿ ಪರಕೀಯರ ಬಳಿಯಲ್ಲಿ ಕೆಲಸ ಮಾಡಿ ಸಂಬಳ ಪಡೆಯುತ್ತಿದ್ದ ಅವನನ್ನು ಅಣ್ಣಂದಿರು ಆಹಾರದ ಆಸೆ ತೋರಿಸಿ ಅವನನ್ನು ತಮ್ಮ ಗದ್ದೆಯ ಕಾವಲು ಕೆಲಸದಲ್ಲಿ ತೊಡಗಿಸಿದರು. ಭರತನು ಅದನ್ನೂ ಮಾಡುತ್ತಿದ್ದನು. ಸಂಬಳವು ಕೆಲಸಕ್ಕೆ ತಕ್ಕದ್ದೇ? ಅಸಂಬದ್ಧವೇ? ಕಡಿಮೆಯೇ? ಹೆಚ್ಚೇ? ಎಂಬುದನ್ನು ಗಮನಿಸುತ್ತಿರಲಿಲ್ಲ. ಕಲ್ಲು ಬೆರೆತ ನಿಚ್ಚಕ್ಕಿಯೋ, ಹಿಂಡಿಯೋ, ಭತ್ತದ

 

ಹೊಟ್ಟೋ, ಹುಳಿತ ಉದ್ದೋ, ಪಾತ್ರೆಗೆ ಅಂಟಿಕೊಂಡ ಹೊತ್ತಿದ್ದೋ, ದೊರೆತದ್ದನ್ನು ರುಚಿಯಾಗಿ ಅಮೃತದಂತೆ ಇದೆಯೆಂದು ಆಸ್ವಾದಿಸುತ್ತಿದ್ದನು. ಹೀಗೆ ವಿರಕ್ತನಾಗಿದ್ದನು. ಅವನ ಮತ್ತೊಂದು ಮಹಿಮೆ ಏನಂದರೆ, ಮಕ್ಕಳಾಗಬೇಕೆಂದು ಬಯಸಿದ ಶೂದ್ರರಾಜನೊಬ್ಬನು ಭದ್ರಕಾಳಿಗೆ ಪುರುಷನೊಬ್ಬನನ್ನು ಪಶುವಾಗಿ ಬಲಿಕೊಡಲು ಹೊರಟನು. ದೈವಿಕವಾಗಿ ತಪ್ಪಿಸಿಕೊಂಡ ಆ ಪಶುವನ್ನು ಹುಡುಕುತ್ತಾ ಅವನ ಆಳುಗಳು ಎಲ್ಲ ಕಡೆಗೆ ಧಾವಿಸಿದರು. ಅರ್ಧರಾತ್ರಿ ಸಮಯ ಎಲ್ಲಿ ನೋಡಿದರೂ ಕತ್ತಲೆ ಕವಿದಿತ್ತು. ಅವರಿಗೆ ಬಲಿ ಕೊಡುವ ಪುರುಷಪಶು ಸಿಗಲಿಲ್ಲ. ಆಕಸ್ಮಾತ್ತಾಗಿ ಶ್ರೀಹರಿಯ ಇಚ್ಛೆಯಿಂದ ಅವರು ಎತ್ತರದಲ್ಲಿ ವೀರಾಸನವನ್ನು ಹಾಕಿಕೊಂಡ ಭತ್ತದ ಗದ್ದೆಗಳಿಗೆ ಮೃಗ, ಹಂದಿ ಮೊದಲಾದವು ನುಗ್ಗದಂತೆ ಕಾಯುತ್ತಿದ್ದ ಈ ಅಂಗಿರಸಕುಲದ ಬ್ರಾಹ್ಮಣೋತ್ತಮನ ಮಗನಾದ ಭರತನನ್ನು ಕಂಡರು. ಇವನನ್ನು ಶ್ರೀಹರಿಯೇ ನರಸಿಂಹ, ವರಾಹ ರೂಪದಿಂದ ಕಾಯುತ್ತಿದ್ದನು. ಅನಂತರ ಆ ಶೂದ್ರರು ಸಲಕ್ಷಣಗಳುಳ್ಳ ಆ ಬ್ರಾಹ್ಮಣಪುತ್ರರಿಂದ ತಮ್ಮ ಸ್ವಾಮಿಯ ಕಾರ್ಯಸಾಧನೆಯಾಗುವುದೆಂದು ಬಗೆದರು. ಸಂತೋಷದಿಂದ ಅವರ ಮುಖಗಳು ಹಿಗ್ಗಿದವು. ಆ ಭರತನನ್ನು ಹಗ್ಗದಿಂದ ಕಟ್ಟಿ ಭದ್ರಕಾಳಿಯ ಗುಡಿಗೆ ಕರೆತಂದರು. ತಮ್ಮ ಆಗಮಗಳಲ್ಲಿ ಹೇಳಿದಂತೆ ಅವರು ಆ ಬ್ರಾಹ್ಮಣ ಪುತ್ರರಿಗೆ ಸ್ನಾನ ಮಾಡಿಸಿ ಶುದ್ಧ ಬಟ್ಟೆಯನ್ನು ಹೊದಿಸಿ ಅಲಂಕರಿಸಿ ಗಂಧವನ್ನು ಬಳಿದು ಹಾರ ಹಾಕಿ ತಿಲಕವಿಟ್ಟರು. ಊಟ ಮಾಡಿಸಿದರು. ಧೂಪ, ದೀಪ, ಹೂವು, ಅರಳು, ಚಿಗರು, ಮೊಳಕೆ, ಹಣ್ಣು ಮೊದಲಾದ ಪೂಜಾ ಸಾಮಗ್ರಿಗಳೊಂದಿಗೆ ಅವನನ್ನು ಕರೆತಂದು ದೇವಿಯ ಎದುರಿನಲ್ಲಿ ಕೂಡಿಸಿದರು. ಬಲಿಕೊಡುವ ವಿಧಾನದಿಂದ ಹಾಡು, ಸ್ತೋತ್ರ, ಡೋಲು, ತಮಟೆಗಳನ್ನು ಬಾರಿಸುತ್ತಿದ್ದರು. ಅನಂತರ ಆ ಕಳ್ಳನಾದ ಶೂದ್ರ ರಾಜನು ಆ ಮನುಷ್ಯನ ರಕ್ತಾಸವದಿಂದ ದೇವಿಯನ್ನು ಪೂಜಿಸಬಯಸಿ ಕಾಳಿಯ ಮಂತ್ರದಿಂದ ತನ್ನ ಕತ್ತಿಯನ್ನು ಅಭಿಮಂತ್ರಿಸಿ ಕೈಗೆ ಅದನ್ನು ತೆಗೆದುಕೊಂಡನು. ಶೂದ್ರರ ಈ ಅಕೃತ್ಯವನ್ನು ದೇವಿಯು ನೋಡಿದಳು. ರಜಸ್ತಮೋಗುಣ ಸ್ವಭಾದವರಾದ ಅವರು ಹಣದ ಮದದಿಂದ ಅಹಂಕಾರಯುಕ್ತರಾಗಿ ತಮ್ಮಿಷ್ಟಬಂದಂತೆ ಮಾಡಿದ್ದರು. ಶ್ರೀಹರಿಯ ಸನ್ನಿಧಾನಯುಕ್ತವಾದ ಆ ಅಂಗಿರಸ ಕುಲವನ್ನೇ ತುಚ್ಛೀಕರಿಸಿದ್ದರು. ಮಾರ್ಗ ಬಿಟ್ಟು ಮನಬಂದಂತೆ ಕೆಲಸ ಮಾಡುತ್ತಿದ್ದರು. ಹಿಂಸೆಯೇ ಅವರಿಗೆ ವಿನೋದವಾಗಿತ್ತು. ಅವರು ಕರೆತಂದ ಬ್ರಾಹ್ಮಣ ಸಾಮಾನ್ಯನಲ್ಲ.

ಶ್ರೀಹರಿಯಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿದ್ದನು. ಸಾಕ್ಷಾತ್ ಬ್ರಹ್ಮಋಷಿಗಳ ಮಗ. ಯಾರಿಗೂ ಶತ್ರುವಾಗದವನು. ಎಲ್ಲ ಪ್ರಾಣಿಗಳಿಗೂ ಸ್ನೇಹಿತನು. ಬ್ರಾಹ್ಮಣರ ಸಂಹಾರವು ಯಾವ ದೇವತೆಗೂ ಅಭಿಪ್ರೇತವಲ್ಲ. ಇಂತಹವರನ್ನು ಆ ಶೂದ್ರರು ಬಲಿಕೊಡಲು ಸಿದ್ಧರಿದ್ದರು. ಇದು ಅತ್ಯಂತ ಕ್ರೂರವಾದ ಕಾರ್ಯ. ಇದನ್ನು ಸಹಿಸಲಾಗಲಿಲ್ಲ ದೇವಿಗೆ. ಸಹಿಸಲಾಗದೆ ಆ ಬ್ರಾಹ್ಮಣನ ತೇಜಸ್ಸಿನಿಂದ ಮೈಸುಡುತ್ತಾ ಬಂತು. ಯಾವ ದೇವಿಯನ್ನು ಬಲಿಯಿಂದ ತೃಪ್ತಿಪಡಿಸಬೇಕಿತ್ತೋ ಅದೇ ದೇವಿಯು ಕೂಡಲೇ ತನ್ನ ಪ್ರತಿಮೆಯಿಂದ ಹೊರಬಂದಳು. ಅವರ ಅಪರಾಧದ ಅಸಹನೆ ತನ್ನ ದೇಹದ ತಾಪದಿಂದ ಕೋಪ ಇವುಗಳ ಆವೇಶದ ವೇಗದಿಂದ ದೇವಿಯು ಹುಬ್ಬು ಗಂಟಿಕ್ಕಿದಳು. ಅವಳ ವಕ್ರವಾದ ಕೋರೆಹಲ್ಲುಗಳು ಕೆಂಪುಗಣ್ಣು ಇವುಗಳ ಸಂಭ್ರಮದಿಂದ ಮುಖವು ಭಯಂಕರವಾಗಿತ್ತು. ಜಗತ್ತನ್ನೇ ಸಂಹರಿಸಲಿರುವಳೋ ಎಂಬಂತೆ ದೊಡ್ಡ ಸಿಂಹನಾದವನ್ನು ಮಾಡಿ ಗಹಗಹಿಸಿ ನಕ್ಕಳು. ಅಲ್ಲಿಂದ ನೆಗೆದು ಆ ಶೂದ್ರನ ಕೈಯಲ್ಲಿ ಕತ್ತಿಯನ್ನೇ ಕಸಿದುಕೊಂಡು ಅದೇ ಕತ್ತಿಯಿಂದ ಅವರೆಲ್ಲರ ತಲೆಗಳನ್ನು ಕತ್ತರಿಸಿದಳು. ಆ ದುಷ್ಟ ಸ್ವಭಾವದ ಪಾಪಿಗಳ ಕೊರಳುಗಳಿಂದ ಬಿಸಿರಕ್ತವು ಹರಿಯುತ್ತಿತ್ತು. ಅದನ್ನೇ ಮದ್ಯವಾಗಿ ಕುಡಿದು ತನ್ನ ಪರಿವಾರಕ್ಕೂ ಕುಡಿಸಿದಳು. ಆ ಅತಿಪಾನದಿಂದ ಮತ್ತು ಏರಿ ಕ್ಷುಬ್ಧಳಾದಳು. ತನ್ನ ಭೃತ್ಯರೊಡನೆ ಹಾಡ ತೊಡಗಿದಳು. ನರ್ತಿಸಿದಳು. ರುಂಡಗಳಿಂದ ಚೆಂಡಾಟವಾಡಿದಳು. ಮಹನೀಯರನ್ನು ಹಿಂಸಿಸುವ ಅಪರಾಧವು ಹೀಗೆ ಅಪರಾಧಿಗಳಿಗೆ ತಪ್ಪದೇ ಬಡಿಯುವುದು. ಪರೀಕ್ಷಿತನೇ! ತಮ್ಮ ತಲೆ ಕಡೆಯಲು ಬಂದಾಗಲೂ ಭಗವದ್ಭಕ್ತರಾದ ಪರಮ ಹಂಸರು ಸ್ವಲ್ಪವೂ ಕಾತುರತೆಯನ್ನು ತೋರದಿರುವದೇನು ಆಶ್ಚರ್ಯವಲ್ಲ. ಅವರು ದೇಹಾದಿಗಳಲ್ಲಿ ನಾನೇ ಕರ್ತಾ ಎಂಬ ಯಾವ ಸ್ವಾತಂತ್ರ್ಯಾಭಿಮಾನವಿದೆಯೋ ಅಂಥಹ ಹೃದಯಗ್ರಂಥಿಯನ್ನು ಸಂಪೂರ್ಣವಾಗಿ ತೊಡೆದುಹಾಕಿದವರು. ಎಲ್ಲ ಪ್ರಾಣಿಗಳಿಗೂ ಸ್ನೇಹಿತರೆಂಬ ಮನಸ್ಸುಳ್ಳವರು. ಆದ್ದರಿಂದಲೇ ಅವರಿಗೆ ಯಾರಲ್ಲಿಯೂ ಶತ್ರುತ್ವವಿಲ್ಲ. ತುರೀಯನಾಮಕ ಶ್ರೀಹರಿಯ ಕಾಲಚಕ್ರವೆಂಬ ಆಯುಧವು ಯಾವಾಗಲೂ ಅಪ್ರಮತ್ತವಾಗಿ ಅವರನ್ನು ಆಯಾ ವಿಪತ್ತುಗಳಿಂದ ಸಂಪೂರ್ಣವಾಗಿ ರಕ್ಷಿಸುವುದು. ಯಾವ ಭಯವೂ ಇಲ್ಲದ ಶ್ರೀಹರಿಯ ಪಾದಗಳನ್ನೇ ಅವರು ಆಶ್ರಯಿಸಿರುವರು.

||★★★||




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ದಶಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ರಹೂಗಣನೆಂಬ ರಾಜನಿಂದ ಪಲ್ಲಕ್ಕಿ ಹೊರಲು ಹೇಳಿದಾಗ ಜಡಭರತನು ಅವನಿಗೆ ತತ್ತ್ವೋಪದೇಶ ಮಾಡಿದ ವಿಷಯ ಹೇಳುವರಿಲ್ಲಿ. ಜಡಭರತನೆಂಬ ಬ್ರಾಹ್ಮಣ ಮತ್ತು ರಹೂಗಣರಾಜನ ಸಂವಾದವನ್ನು ವರ್ಣನೆ ಮಾಡುವ ನೆಪದಿಂದ ಮನೆ, ಮೈ, ಅಹಂ, ಮಮ ಎಂಬ ಭ್ರಮವೇ ಸಂಸಾರದಲ್ಲಿ ಸುತ್ತಲು ಕಾರಣವೆಂಬ ತತ್ತ್ವವನ್ನು ಈ ಅಧ್ಯಾಯದಲ್ಲಿ ತಿಳಿಸುವರು.

**ಜಡಭರತನ ಉಪದೇಶ, ಜಡಭರತ-ರಹೂಗಣ ಸಮಾಗಮ**

**ಶ್ರೀ ಶುಕ ಉವಾಚ**

**ಅಥ ಸಿಂಧುಸೌವೀರಪತೇ ರಹೂಗಣಸ್ಯ ವ್ರಜತ ಇಕ್ಷುಮತ್ಯಾಸ್ತಟೇ ನದ್ಯಾ ಭಗವಂತಂ ಕಪಿಲಋಷಿಂ ದ್ರಷ್ಟುಂ ಕಸ್ಮಿಂಶ್ಚಿದಾಶ್ರಮೇ ಸ್ಥಿತಂ ತತ್ಕುಲಪತಿನಾ ಶಿಬಿಕಾವಾಹಕಪುರುಷಾನ್ವೇಷಣಸಮಯೇ ದೇವೇನೋಪಸಾದಿತಃ ಸಃ ದ್ವಿಜವರಃ ಉಪಲಬ್ಧಃ ಏಷಃ ಪೀವಾ ಯುವಾ ಸಂಹನನಾಂಗಃ ಖರವತ್ ಧುರಂ ವೋಢುಮಲಮಿತಿ ಪೂರ್ವವಿಷ್ಟಿಗೃಹೀತೈಃ ಸಹ ಗೃಹೀತಃ ಪ್ರಸಭಮತದರ್ಹ ಉವಾಹ ಶಿಬಿಕಾಂ ಸ ಹಿ ಮಹಾನುಭಾವಃ ॥೧॥**

ಅಥ ಭರತನ ಮಹಿಮಾಂತರ ಆರಂಭಿಸಲ್ಪಡುವುದು **ಸಃ** ಬ್ರಾಹ್ಮಣಶ್ರೇಷ್ಠನು **ಇಕ್ಷುಮತ್ಯಾಃ ನದ್ಯಾಃ ತಟೇ** ಇಕ್ಷುಮತೀ ಎಂಬ ನದಿಯ ದಡದಲ್ಲಿ **ಕಸ್ಮಿಂಶ್ಚಿದಾಶ್ರಮೇ**

ಯಾವುದೋ ಒಂದು ಆಶ್ರಮದಲ್ಲಿ ಸ್ಥಿತಂ ವಾಸವಾಗಿರುವ **ಭಗವಂತಂ** ಪೂಜ್ಯರಾದ **ಕಪಿಲ ಋಷಿಂ** ಕಪಿಲ ಮುನಿಯನ್ನು **ದ್ರಷ್ಟುಂ** ಕಾಣಲು **ವ್ರಜತಃ** ಹೋಗುತ್ತಿರುವ **ಸಿಂಧುಸೌವೀರಪತೇಃ** ಸಿಂಧು ಮತ್ತು ಸೌವೀರ ದೇಶಗಳಿಗೆ ರಾಜನಾದ **ರಹೂಗಣಸ್ಯ** ರಹೂಗಣನೆಂಬುವವನ **ತತ್ಕುಲಪತಿನಾ** ಮೇನೆ ಹೊರುವವರ ನಾಯಕನಿಂದ **ಶಿಬಿಕಾವಾಹಕಪುರಷಾನ್ವೇಷಣಸಮಯೇ** ಮೇನೆ ಹೊರುವ ಆಳುಗಳನ್ನು ಹುಡುಕುವಾಗ **ದೇವೇನ** ಅದೃಷ್ಟ ಪ್ರೇರಕ ಶ್ರೀಹರಿಯಿಂದ **ಉಪಸಾದಿತಃ ಸನ್** ಹೊಂದಿಸಲ್ಪಟ್ಟು **ಸಃ ದ್ವಿಜವರಃ** ಆ ಬ್ರಾಹ್ಮಣ ಶ್ರೇಷ್ಠನು **ಉಪಲಬ್ಧಃ** ದೊರೆತನು **ಏಷಃ** ಇವನು **ಪೀವಾ** ಪುಷ್ಟನಾಗಿರುವನು **ಯುವಾ** ಯುವಕನು **ಸಂಹನನಾಂಗಃ** ದೃಢವಾದ ಅವಯವವುಳ್ಳವನು **ಖರವತ್** ಕತ್ತೆಯಂತೆ **ಧುರಂ** ಭಾರವನ್ನು **ವೋಢುಂ** ಹೊರಲು **ಅಲಂ** ಸಮರ್ಥನು **ಇತಿ** ಆದಕಾರಣ **ಪೂರ್ವವಿಷ್ಟಿಗೃಹೀತೈಃ ಸಹ** ಮೊದಲೇ ಹಿಡಿಯಲ್ಪಟ್ಟ ಆಳುಗಳಜೊತೆ **ಪ್ರಸಭಂ** ಬಲಾತ್ಕಾರದಿಂದ **ಅತದರ್ಹಃ** ಹೊರಲು ಯೋಗ್ಯನಲ್ಲದಿದ್ದರೂ **ಸಃ ಮಹಾನುಭಾವಃ** ಆ ಭರತನು **ಶಿಬಿಕಾಂ ಉವಾಹ** ಮೇನೆಯನ್ನು ಹೊತ್ತನು. ।।೧।।

**ಯದಾ ಹಿ ದ್ವಿಜವರಸ್ಯ ಯುಗಮಾತ್ರಾವಲೋಕಾನುಗತೇರ್ನ ಸಮಾ ಪುರುಷಗತಿಸ್ತದಾ ವಿಷಮಗತಾಯಾಂ ಸ್ವಶಿಬಿಕಾಯಾಂ ರಹೂಗಣ ಉಪಧಾರ್ಯ ಪುರುಷಾನಧಿವಹತ ಆಹ ಹೇ ವೋಢಾರಃ ಸಾಧ್ವತಿಕ್ರಮತ ಕಿಮಿತಿ ವಿಷಮಮೂಹ್ಯತೇ ಯಾನಮಿತಿ ।।೨।।**

**ಯದಾ** ಯಾವಾಗ **ದ್ವಿಜವರಸ್ಯ** ಬ್ರಾಹ್ಮಣ ಶ್ರೇಷ್ಠನಾದ ಭರತನ **ಯುಗಮಾತ್ರಾವಲೋಕಾನುಗತೇಃ** ನಾಲ್ಕು ಗೇಣು ನೋಡಿ ಇರುವೆ ಮುಂತಾದವುಗಳ ಹಿಂಸೆಯಾಗದಂತೆ ನಡೆಯುವ ನಡಿಗೆಗೆ **ಪುರುಷಗತಿಃ ನ ಸಮಾ** ಉಳಿದ ವಾಹಕರ ನಡಿಗೆ ಸರಿಯಾಗಲಿಲ್ಲವೋ **ತದಾ** ಆಗ **ಸ್ವಶಿಬಿಕಾಯಾಂ ವಿಷಮಗತಾಯಾಂ ಸತ್ಯಾಂ** ತನ್ನ ಮೇನೆಯು ಡೊಂಕು ಡೊಂಕಾಗಿ ಸಾಗುತ್ತಿರಲು **ರಹೂಗಣಃ** ರಾಜನು **ಉಪಧಾರ್ಯ** ವಾಹಕರ ವಿಷಮಗತಿಯ ನಿಮಿತ್ತವೇ ಮೇನೆಯ ಗತಿಯಲ್ಲಿ ವಿಷಮತೆ ಎಂದು ನಿಶ್ಚಯಿಸಿ **ವಹತಃ ಪುರುಷಾನ್ ಅಧಿ** ವಾಹಕ ಪುರುಷರನ್ನು ಕುರಿತು **ಹೇ ವೋಢಾರಃ** ಎಲೋ ವಾಹಕರೇ **ಕಿಮಿತಿ ವಿಷಮಂ ಊಹ್ಯತೇ** ಏಕೆ ವಿಷಮವಾಗಿ ಹೊರುವಿರಿ? **ಸಾಧು ಅತಿಕ್ರಮತ** ಚೆನ್ನಾಗಿ ಹೆಜ್ಜೆ ಹಾಕಿರಿ ಎಂದು **ಆಹ** ಹೇಳಿದನು. ।।೨।।

**ಅಥ ತ ಈಶ್ವರವಚಃ ಸೋಪಾಲಂಭಮುಪಾಕರ್ಣ್ಯ ತುಯೋಗಚ್ಛಂಕಿತ-ಮನಸಸ್ತಂ ವಿಜ್ಞಾಪಯಾಂಬಭೂವುಃ ।।೩।।**

**ಅಥ** ನಂತರವೇ **ತೇ** ಭಟರು **ಸೋಪಾಲಂಭಂ** ಆಕ್ಷೇಪ ಸಹಿತವಾದ **ಈಶ್ವರವಚಃ** ರಾಜನ ಮಾತನ್ನು **ಉಪಾಕರ್ಣ್ಯ** ಕೇಳಿ **ತುರ್ಯಾತ್** ಸಾಮ, ಭೇದ, ದಾನ, ದಂಡಗಳಲ್ಲಿ ನಾಲ್ಕನೆಯದಾದ ದಂಡದಿಂದ **ಶಂಕಿತಮನಸಃ** ಹೆದರಿದವರಾಗಿ **ತಂ** ರಾಜನನ್ನು **ವಿಜ್ಞಾಪಯಾಂಬಭೂವುಃ** ವಿಜ್ಞಾಪನೆ ಮಾಡಿದರು. ।।೩।।

**ನ ವಯಂ ನರದೇವ ಪ್ರಮತ್ತಾಃ ಭವನ್ನಿಯಮಾನುಪಥಾಃ ಸಾಧ್ವೇವ ವಹಾಮಃ ಅಯಮಧುನೈವ ನಿಯುಕ್ತೋಽಪಿ ನ ದ್ರುತಂ ವ್ರಜತಿ ನಾನೇನ ಸಹವೋಢುಮಿಹ ವಯಂ ಪಾರಯಾಮಃ ಇತಿ ।।೪।।**

**ಹೇ ನರದೇವ** ರಾಜನೇ **ನ ವಯಂ ಪ್ರಮತ್ತಾಃ** ನಾವು ಅಪರಾಧ ಮಾಡುತ್ತಿಲ್ಲ. **ಭವನ್ನಿಯಮಾನುಪಥಾಃ** ನಿನ್ನ ಆಜ್ಞಾನುವರ್ತಿಗಳಾಗಿ **ಸಾಧು ಏವ ವಹಾಮಃ** ಚೆನ್ನಾಗಿಯೇ ಹೊರುತ್ತಿರುವೆವು **ಅಯಂ** ಇವನು **ಅಧುನೈವ** ಈಗಲೇ **ನಿಯುಕ್ತೋಽಪಿ** ಹೊರಲು ಹಚ್ಚಿದ್ದರೂ (ನಮ್ಮಂತೆ ಶ್ರಮವಾಗದಿದ್ದರೂ) **ನ ದ್ರುತಂ ವ್ರಜತಿ** ನಮ್ಮ ನಡೆಗೆಗೆ ಸರಿಯಾದ ವೇಗದಿಂದ ನಡೆಯುವುದಿಲ್ಲ. **ಅನೇನ ಸಹ** ಇವನೊಡನೆ **ವೋಢುಂ** ಹೊರಲು **ಇಹ** ಇಲ್ಲಿ **ನ ಪಾರಯಾಮಃ ವಯಂ** ನಾವು ಶಕ್ತರಲ್ಲ **ಇತಿ** ಎಂದು ವಿಜ್ಞಾಪಿಸಿದರು. ।।೪।।

**ಸಾಂಸರ್ಗಿಕೋ ದೋಷ ಏವ ನೂನಮೇಕಸ್ಯಾಪಿ ಸರ್ವೇಷಾಂ ಸಂಸರ್ಗಿಣಾಂ ಭವಿತುಮರ್ಹತೀತಿ ನಿಶಮ್ಯ ಕೃಪಣಂ ವಚೋ ರಾಜಾ ರಹೂಗಣ ಉಪಾಸಿತ-ವೃದ್ಧೋಽಪಿ ನಿಸರ್ಗೇಣ ಬಲಾತ್ಕೃತ ಈಷದುತ್ಥಿತಮನ್ಯುರವಿಸ್ಪಷ್ಟ-ಬ್ರಹ್ಮತೇಜಃಸಂಜಾತವೇದಸಮಿವ ರಜಸಾ ತಮಸಾವೃತಮತಿರಾಹ ।।೫।।**

**ಏಕಸ್ಯ** ಒಬ್ಬನಿಗೆ **ಸಾಂಸರ್ಗಿಕಃ** ಸಂಬಂಧದಿಂದ ಬಂದ **ದೋಷಃ ಏವ** ದೋಷವೇ **ಸರ್ವೇಷಾಂ ಸಂಸರ್ಗಿಣಾಂ ಅಪಿ ಭವಿತುಂ ಅರ್ಹತಿ ನೂನಂ** ಎಲ್ಲ ಅವನ ಸಹವಾಸಿಗಳಿಗೆ ಬರುವುದು ಎಂದು ಈಗ ನಿಶ್ಚಿತವಾಯಿತು **ಕೃಪಣಂ ವಚಃ** ದೀನವಾದ ಆ ವಾಹಕರ ಮಾತುಗಳನ್ನು **ಇತಿ ನಿಶಮ್ಯ** ಹೀಗೆ ಕೇಳಿ **ರಾಜಾ** ರಾಜನಾದ **ರಹೂಗಣಃ** ರಹೂಗಣನು **ಉಪಾಸಿತವೃದ್ಧೋಽಪಿ** ವೃದ್ಧರನ್ನು ಸೇವಿಸಿದವನಾಗಿದ್ದರೂ **ನಿಸರ್ಗೇಣ** ರಾಜರ ಸ್ವಭಾವದಿಂದ **ಬಲಾತ್ಕೃತಂ** ಪರವಶನಾಗಿ **ಈಷದುತ್ಥಿತಮನ್ಯುಃ** ಸ್ವಲ್ಪ

ಯಾವುದೋ ಒಂದು ಆಶ್ರಮದಲ್ಲಿ ಸ್ಥಿತಂ ವಾಸವಾಗಿರುವ **ಭಗವಂತಂ** ಪೂಜ್ಯರಾದ **ಕಪಿಲ ಋಷಿಂ** ಕಪಿಲ ಮುನಿಯನ್ನು **ದ್ರಷ್ಟುಂ** ಕಾಣಲು **ವ್ರಜತಃ** ಹೋಗುತ್ತಿರುವ **ಸಿಂಧುಸೌವೀರಪತೇಃ** ಸಿಂಧು ಮತ್ತು ಸೌವೀರ ದೇಶಗಳಿಗೆ ರಾಜನಾದ **ರಹೂಗಣಸ್ಯ** ರಹೂಗಣನೆಂಬುವವನ **ತತ್ಕುಲಪತಿನಾ** ಮೇನೆ ಹೊರುವವರ ನಾಯಕನಿಂದ **ಶಿಬಿಕಾವಾಹಕಪುರಷಾನ್ವೇಷಣಸಮಯೇ** ಮೇನೆ ಹೊರುವ ಆಳುಗಳನ್ನು ಹುಡುಕುವಾಗ **ದೇವೇನ** ಅದೃಷ್ಟ ಪ್ರೇರಕ ಶ್ರೀಹರಿಯಿಂದ **ಉಪಸಾದಿತಃ ಸನ್** ಹೊಂದಿಸಲ್ಪಟ್ಟು **ಸಃ ದ್ವಿಜವರಃ** ಆ ಬ್ರಾಹ್ಮಣ ಶ್ರೇಷ್ಠನು **ಉಪಲಬ್ಧಃ** ದೊರೆತನು **ಏಷಃ** ಇವನು **ಪೀವಾ** ಪುಷ್ಟನಾಗಿರುವನು **ಯುವಾ** ಯುವಕನು **ಸಂಹನನಾಂಗಃ** ದೃಢವಾದ ಅವಯವವುಳ್ಳವನು **ಖರವತ್** ಕತ್ತೆಯಂತೆ **ಧುರಂ** ಭಾರವನ್ನು **ವೋಢುಂ** ಹೊರಲು **ಅಲಂ** ಸಮರ್ಥನು **ಇತಿ** ಆದಕಾರಣ **ಪೂರ್ವವಿಷ್ಟಿಗೃಹೀತೈಃ ಸಹ** ಮೊದಲೇ ಹಿಡಿಯಲ್ಪಟ್ಟ ಆಳುಗಳಜೊತೆ **ಪ್ರಸಭಂ** ಬಲಾತ್ಕಾರದಿಂದ **ಅತದರ್ಹಃ** ಹೊರಲು ಯೋಗ್ಯನಲ್ಲದಿದ್ದರೂ **ಸಃ ಮಹಾನುಭಾವಃ** ಆ ಭರತನು **ಶಿಬಿಕಾಂ ಉವಾಹ** ಮೇನೆಯನ್ನು ಹೊತ್ತನು. ॥೧॥

**ಯದಾ ಹಿ ದ್ವಿಜವರಸ್ಯ ಯುಗಮಾತ್ರಾವಲೋಕಾನುಗತೇರ್ನ ಸಮಾ ಪುರುಷಗತಿಸ್ತದಾ ವಿಷಮಗತಾಯಾಂ ಸ್ವಶಿಬಿಕಾಯಾಂ ರಹೂಗಣ ಉಪಧಾರ್ಯ ಪುರುಷಾನಧಿವಹತ ಆಹ ಹೇ ವೋಢಾರಃ ಸಾಧ್ವತಿಕ್ರಮತ ಕಿಮಿತಿ ವಿಷಮಮೂಹ್ಯತೇ ಯಾನಮಿತಿ ॥೨॥**

**ಯದಾ** ಯಾವಾಗ **ದ್ವಿಜವರಸ್ಯ** ಬ್ರಾಹ್ಮಣ ಶ್ರೇಷ್ಠನಾದ ಭರತನ **ಯುಗಮಾತ್ರಾವಲೋಕಾನುಗತೇಃ** ನಾಲ್ಕು ಗೇಣು ನೋಡಿ ಇರುವೆ ಮುಂತಾದವುಗಳ ಹಿಂಸೆಯಾಗದಂತೆ ನಡೆಯುವ ನಡಿಗೆಗೆ **ಪುರುಷಗತಿಃ ನ ಸಮಾ** ಉಳಿದ ವಾಹಕರ ನಡಿಗೆ ಸರಿಯಾಗಲಿಲ್ಲವೋ **ತದಾ** ಆಗ **ಸ್ವಶಿಬಿಕಾಯಾಂ ವಿಷಮಗತಾಯಾಂ ಸತ್ಯಾಂ** ತನ್ನ ಮೇನೆಯು ಡೊಂಕು ಡೊಂಕಾಗಿ ಸಾಗುತ್ತಿರಲು **ರಹೂಗಣಃ** ರಾಜನು **ಉಪಧಾರ್ಯ** ವಾಹಕರ ವಿಷಮಗತಿಯ ನಿಮಿತ್ತವೇ ಮೇನೆಯ ಗತಿಯಲ್ಲಿ ವಿಷಮತೆ ಎಂದು ನಿಶ್ಚಯಿಸಿ **ವಹತಃ ಪುರುಷಾನ್ ಅಧಿ** ವಾಹಕ ಪುರುಷರನ್ನು ಕುರಿತು **ಹೇ ವೋಢಾರಃ** ಎಲೋ ವಾಹಕರೇ **ಕಿಮಿತಿ ವಿಷಮಂ ಊಹ್ಯತೇ** ಏಕೆ ವಿಷಮವಾಗಿ ಹೊರುವಿರಿ? **ಸಾಧು ಅತಿಕ್ರಮತ** ಚೆನ್ನಾಗಿ ಹೆಜ್ಜೆ ಹಾಕಿರಿ ಎಂದು **ಆಹ** ಹೇಳಿದನು. ॥೨॥

**ಅಥ ತ ಈಶ್ವರವಚಃ ಸೋಪಾಲಂಭಮುಪಾಕರ್ಣ್ಯ ತುರ್ಯಾಚ್ಛಂಕಿತ-ಮನಸಸ್ತಂ ವಿಜ್ಞಾಪಯಾಂಬಭೂವುಃ ॥೩॥**

**ಅಥ** ನಂತರವೇ **ತೇ** ಭಟರು **ಸೋಪಾಲಂಭಂ** ಆಕ್ಷೇಪ ಸಹಿತವಾದ **ಈಶ್ವರವಚಃ** ರಾಜನ ಮಾತನ್ನು **ಉಪಾಕರ್ಣ್ಯ** ಕೇಳಿ **ತುರ್ಯಾತ್** ಸಾಮ, ಭೇದ, ದಾನ, ದಂಡಗಳಲ್ಲಿ ನಾಲ್ಕನೆಯದಾದ ದಂಡದಿಂದ **ಶಂಕಿತಮನಸಃ** ಹೆದರಿದವರಾಗಿ **ತಂ** ರಾಜನನ್ನು **ವಿಜ್ಞಾಪಯಾಂಬಭೂವುಃ** ವಿಜ್ಞಾಪನೆ ಮಾಡಿದರು. ॥೩॥

**ನ ವಯಂ ನರದೇವ ಪ್ರಮತ್ತಾಃ ಭವನ್ನಿಯಮಾನುಪಥಾಃ ಸಾಧ್ವೇವ ವಹಾಮಃ ಅಯಮಧುನೈವ ನಿಯುಕ್ತೋಽಪಿ ನ ದ್ರುತಂ ವ್ರಜತಿ ನಾನೇನ ಸಹವೋಢುಮಿಹ ವಯಂ ಪಾರಯಾಮಃ ಇತಿ ॥೪॥**

**ಹೇ ನರದೇವ** ರಾಜನೇ **ನ ವಯಂ ಪ್ರಮತ್ತಾಃ** ನಾವು ಅಪರಾಧ ಮಾಡುತ್ತಿಲ್ಲ. **ಭವನ್ನಿಯಮಾನುಪಥಾಃ** ನಿನ್ನ ಆಜ್ಞಾನುವರ್ತಿಗಳಾಗಿ **ಸಾಧು ಏವ ವಹಾಮಃ** ಚೆನ್ನಾಗಿಯೇ ಹೊರುತ್ತಿರುವೆವು **ಅಯಂ** ಇವನು **ಅಧುನೈವ** ಈಗಲೇ **ನಿಯುಕ್ತೋಽಪಿ** ಹೊರಲು ಹಚ್ಚಿದ್ದರೂ (ನಮ್ಮಂತೆ ಶ್ರಮವಾಗದಿದ್ದರೂ) **ನ ದ್ರುತಂ ವ್ರಜತಿ** ನಮ್ಮ ನಡೆಗೆಗೆ ಸರಿಯಾದ ವೇಗದಿಂದ ನಡೆಯುವುದಿಲ್ಲ. **ಅನೇನ ಸಹ** ಇವನೊಡನೆ **ವೋಢುಂ** ಹೊರಲು **ಇಹ** ಇಲ್ಲಿ **ನ ಪಾರಯಾಮಃ ವಯಂ** ನಾವು ಶಕ್ತರಲ್ಲ **ಇತಿ** ಎಂದು ವಿಜ್ಞಾಪಿಸಿದರು. ॥೪॥

**ಸಾಂಸರ್ಗಿಕೋ ದೋಷ ಏವ ನೂನಮೇಕಸ್ಯಾಪಿ ಸರ್ವೇಷಾಂ ಸಂಸರ್ಗಿಣಾಂ ಭವಿತುಮರ್ಹತೀತಿ ನಿಶಮ್ಯ ಕೃಪಣಂ ವಚೋ ರಾಜಾ ರಹೂಗಣ ಉಪಾಸಿತ-ವೃದ್ಧೋಽಪಿ ನಿಸರ್ಗೇಣ ಬಲಾತ್ಕೃತ ಈಷದುತ್ಥಿತಮನ್ಯುರವಿಸ್ಪಷ್ಟ-ಬ್ರಹ್ಮತೇಜಃಸಂಜಾತವೇದಸಮಿವ ರಜಸಾ ತಮಸಾವೃತಮತಿರಾಹ ॥೫॥**

**ಏಕಸ್ಯ** ಒಬ್ಬನಿಗೆ **ಸಾಂಸರ್ಗಿಕಃ** ಸಂಬಂಧದಿಂದ ಬಂದ **ದೋಷಃ ಏವ** ದೋಷವೇ **ಸರ್ವೇಷಾಂ ಸಂಸರ್ಗಿಣಾಂ ಅಪಿ ಭವಿತುಂ ಅರ್ಹತಿ ನೂನಂ** ಎಲ್ಲ ಅವನ ಸಹವಾಸಿಗಳಿಗೆ ಬರುವುದು ಎಂದು ಈಗ ನಿಶ್ಚಿತವಾಯಿತು **ಕೃಪಣಂ ವಚಃ** ದೀನವಾದ ಆ ವಾಹಕರ ಮಾತುಗಳನ್ನು **ಇತಿ ನಿಶಮ್ಯ** ಹೀಗೆ ಕೇಳಿ **ರಾಜಾ** ರಾಜನಾದ **ರಹೂಗಣಃ** ರಹೂಗಣನು **ಉಪಾಸಿತವೃದ್ಧೋಽಪಿ** ವೃದ್ಧರನ್ನು ಸೇವಿಸಿದವನಾಗಿದ್ದರೂ **ನಿಸರ್ಗೇಣ** ರಾಜರ ಸ್ವಭಾವದಿಂದ **ಬಲಾತ್ಕೃತಂ** ಪರವಶನಾಗಿ **ಈಷಮುತ್ಥಿತಮನ್ಯುಃ** ಸ್ವಲ್ಪ

ಕೋಪಗೊಂಡವನಾಗಿ **ರಜಸಾ ತಮಸಾ ಆವೃತಮತಿಃ** ರಜೋಗುಣ ತಮೋಗುಣದಿಂದ ಆವರಿಸಲ್ಪಟ್ಟ ಬುದ್ಧಿಯುಳ್ಳವನಾಗಿ **ಜಾತವೇದಸಮಿವ (ಸ್ಥಿತಂ)** ಕೆಂಡದಂತಿರುವ **ಅವಿಸ್ಪಷ್ಟಂ ಬ್ರಹ್ಮತೇಜಸಂ** ಅವ್ಯಕ್ತವಾದ ಬ್ರಹ್ಮತೇಜಸ್ಸುಳ್ಳ ಭರತನಿಗೆ **ಆಹ** ಅಂದನು. ।।೫।।

**ಅಹೋ ಕಷ್ಟಂ ಭ್ರಾತರ್ವ್ಯಕ್ತಮುರುಪರಿಶ್ರಾಂತೋ ದೀರ್ಘಮಧ್ವಾನಮೇಕ ಏವ ಊಹಿತವಾನ್ ಸುಚಿರಂ ನಾತಿಪೀವಾ ನಾತಿಸಂಹನನಾಂಗೋ ಜರಸೋಪದ್ರುತೋ ಭವಾನ್ ಸಖೇನೋ ಏವಾಪರ ಏತೇ ಸಂಘಟ್ಟಿನಃ ।।೬।।**

**ಹೇ ಭ್ರಾತಃ** ತಮ್ಮನೇ **ಸಖೇ** ಗೆಳೆಯನೇ **ಅಹೋ ಕಷ್ಟಂ** ಬಹಳಕಷ್ಟ ಪಾಪ **ವ್ಯಕ್ತಂ** ಸ್ಪಷ್ಟವಾಗಿ **ಉರುಪರಿಶ್ರಾಂತಃ** ಬಹಳ ಪರಿಶ್ರಮವುಳ್ಳವನಾಗಿರುವೆ **ದೀರ್ಘಂ ಅಧ್ವಾನಂ** ದೂರವಾದ ದಾರಿಯನ್ನು **ಏಕ ಏವ** ನೀನೊಬ್ಬನೇ **ಸುಚಿರಂ** ಬಹುಕಾಲ **ಊಹಿತವಾನ್** ಮೇನೆ ಹೊತ್ತಿರುವಿ **ನಾತಿಪೀವಾ** ಬಹಳದಪ್ಪನಲ್ಲ **ನಾತಿಸಂಹನಾನಾಂಗಃ** ದೃಢಕಾಯನಲ್ಲ (ದೃಢಾಂಗನಲ್ಲ) **ಜರಸಾ ಉಪದ್ರುತಃ** ಮುಪ್ಪಿನಿಂದ ಪೀಡಿತನಾಗಿರುವಿ **ಅಪರೇ ಏತೇ ಸಂಘಟ್ಟಿನಃ** ನ ಈ ಉಳಿದವರೆಲ್ಲರೂ ವಾಹಕರಲ್ಲ.

## ರಹೂಗಣನ ವ್ಯಂಗ್ಯ ಮಾತು

ಮೇಲಿನ ಎಲ್ಲಪದಗಳಿಗೂ ವಿಪರೀತ ಅರ್ಥ. ಲೋಕದಲ್ಲಿ ಸಹೋದರರಿಗೆ ವಿರೋಧ ಕಾರಣ **ಹೇ ಭ್ರಾತಃ** ಎಂದು ಸಂಬೋಧಿಸಿರುವನು. ಸಖೇ ಅಂದರೆ ವಿಪರೀತವಾಗಿ ಶತ್ರುವೇ ಎಂದು ಅರ್ಥ.

ಎಲ್ಲೈ ವಿರೋಧಿಯೇ, ಶತ್ರುವೇ! ನೀನು ಎಲ್ಲರೊಂದಿಗೆ ಮೇನೆಯನ್ನು ಹೊತ್ತಿರುವೆ. ನಿನಗೆ ಸ್ವಲ್ಪವೂ ಶ್ರಮವಾಗಿಲ್ಲ. ಈಗ ತಾನೆ ನಾಲ್ಕು ಹಜ್ಜೆ ದೂರ ಮಾತ್ರ ನಡೆದಿರುವೆ. ಅತಿದಪ್ಪವೂ ದೃಢಾಂಗನೂ ಆದ ನೀನು ಯುವಕನು. ಮಿಕ್ಕವಾಹಕರು ಕೃಶರು, ಮುದುಕರು. ಆದರೂ ನೀನು ಮೇನೆಯನ್ನು ಸರಿಯಾಗಿ ಹೊರುತ್ತಿಲ್ಲ ಎಂದು ಆಕ್ಷೇಪಿಸಿದನೆಂದು ತಿಳಿಯಬೇಕು. ।।೬।।

**ಇತಿ ಬಹುವಿಪ್ರಲಬ್ಧೋಽಪಿ ಅವಿದ್ಯಯಾ ವಿಹಿತದ್ರವ್ಯಗುಣಕರ್ಮಾಶಯ-ಸ್ವಚರಮಕಲೇ ವರ ಅವಸ್ತುನಿ ಸಂಸ್ಥಾನವಿಶೇಷೇ ಅಹಂಮಮೇತ್ಯ-ನಧ್ಯಾರೋಪಿತಮಿಥ್ಯಾಪ್ರತ್ಯಯೋ ಬ್ರಹ್ಮಭೂತಸ್ತೂಷ್ಣೀಂ ಶಿಬಿಕಾಮುವಾಹ ।।**




**ಇತಿ** ಈ ರೀತಿ **ಬಹುವಿಪ್ರಲಬ್ಧೋಽಪಿ** ವಿಪರೀತ ಲಕ್ಷಣದಿಂದ ವಕ್ರ ಮಾತುಗಳಿಂದ ತಿರಸ್ಕೃತನಾದರೂ **ಬ್ರಹ್ಮಭೂತಃ** ಬ್ರಹ್ಮನಲ್ಲಿ ಮನಸ್ಸಿಟ್ಟ **ಅವಿದ್ಯಯಾ** ಶ್ರೀಹರಿಯ ಇಚ್ಛೆಯಿಂದ, ಪ್ರಕೃತಿಯಿಂದ **ವಿಹಿತ** ರಚಿತವಾದ **ದ್ರವ್ಯ** ಪಂಚಭೂತಗಳು **ಗುಣ** ಶಬ್ದಾದಿಗಳು, ಸತ್ವಾದಿಗಳು **ಕರ್ಮ** ಪುಣ್ಯಪಾಪಗಳು **ಆಶಯ** ಅಂತಃಕರಣಗಳುಳ್ಳ ಸ್ವ ತನ್ನ **ಚರಮಕಲೇವರೇ** ಕೊನೆಯ ದೇಹದಲ್ಲಿ **ಅವಸ್ತುನಿ** ಅನಿತ್ಯವಾದ **ಸಂಸ್ಥಾನವಿಶೇಷೇ** ಅವಯವ ವಿನ್ಯಾಸ ವಿಶೇಷವುಳ್ಳ ದೇಹದಲ್ಲಿ **ಅಹಂ ಮಮ ಇತಿ** ನಾನು ನನ್ನದು ಎಂದು **ಅನಧ್ಯಾರೋಪಿತಮಿಥ್ಯಾಪ್ರತಯಃ** ಆರೋಪಿತವಾದ ಕರ್ತೃತ್ವ ವಿಷಯಕ ಭ್ರಾಂತಿ ಇಲ್ಲದ ಇವನು **ತೂಷ್ಣೀಂ** ಸುಮ್ಮನೆ **ಶಿಬಿಕಾಂ ಉವಾಹ** ಮೇನೆಯನ್ನು ಹೊತ್ತನು. ।।೭।।

**ಅಥ ಪುನಃ ಸ್ವಶಿಬಿಕಾಯಾಂ ವಿಷಮಗತಾಯಾಂ ಪ್ರಕುಪಿತ ಉವಾಚ ರಹೂಗಣಃ ಕಿಮರೇ ತ್ವಂ ಜೀವನ್ಮೃತೋಽಸಿ ಮಾಂ ಕದರ್ಥೀಕೃತ್ಯ ಭರ್ತೃಶಾಸನಮತಿಚರಸಿ ಪ್ರಮತ್ತಸ್ಯ ತೇ ಕರೋಮಿ ಚಿಕಿತ್ಸಾಂ ದಂಡಪಾಣಿರಿವ ಜನತಾಯಾಃ ಯಥಾ ಪ್ರಕೃತಿಂ ಸ್ವಾಂ ಭಜಿಷ್ಯಸೀತಿ ।।೮।।**

**ಅಥಃ** ಅನಂತರ **ಪುನಃ** ಮತ್ತೆ **ಸ್ವಶಿಬಿಕಾಯಾಂ** ತನ್ನ ಮೇನೆಯು **ವಿಷಮ ಗತಾಯಾಂ** ಡೊಂಕಾದಾಗ **ಪ್ರಕುಪಿತಃ** ಹೆಚ್ಚುಸಿಟ್ಟಾದ **ರಹೂಗಣಃ** ರಾಜನು **ಅರೇ** ಎಲೋ **ತ್ವಂ** ನೀನು **ಜೀವನ್ಮೃತೋಸಿ ಕಿಂ** ಬದುಕಿದ್ದೂ ಸತ್ತಿರುವೆ ಏನು? **ಮಾಂ** ನನ್ನನ್ನು **ಕದರ್ಥೀಕೃತ್ಯ** ತುಚ್ಛಮಾಡಿ **ಭರ್ತೃಶಾಸನಂ ಅತಿಚರಸಿ** ನನ್ನ ಅಪ್ಪಣೆಯನ್ನು ಮೀರುತ್ತಿರುವಿ **ಯಥಾ** ಹೇಗೆ **ಸ್ವಾಂ ಪ್ರಕೃತಿಂ ಭಜಿಷ್ಯಸಿ** ನಿನ್ನ ಸಮ ಸ್ವಭಾವವನ್ನು (ಪ್ರಮತ್ತನಾಗದಿರುವುದನ್ನು) ಹೊಂದುವಿಯೋ **ತಥಾ** ಹಾಗೆ **ಪ್ರಮತ್ತಸ್ಯ ತೇ** ಮದಿಸಿದ ನಿನಗೆ **ಚಿಕಿತ್ಸಾಂ** ಶಿಕ್ಷೆಯನ್ನು **ದಂಡಪಾಣಿಃ** ಯಮನು **ಜನತಾಯಾಃ** ಜನರಿಗೆ ಇವ ಮಾಡುವಂತೆ **ಕರೋಮಿ** ಮಾಡುವೆನು ಇತಿ ಎಂದು **ಉವಾಚ** ಹೇಳಿದನು. ।।

## ಜಡಭರತನ ಉತ್ತರ

**ಏವಂ ಬಹ್ವಬದ್ಧಮಭಿಭಾಷಮಾಣಂ ನರದೇವಾಭಿಮಾನಿನಂ ರಜಸಾ ತಮಸಾನುವೃದ್ಧೇನ ಮದೇನ ತಿರಸ್ಕೃತಾಶೇಷಭಗವತ್ಪ್ರಿಯನಿಕೇತಂ ಪಂಡಿತ-ಮಾನಿನಂ ಸ ಭಗವಾನ್ ಬ್ರಾಹ್ಮಣೋ ಬ್ರಹ್ಮಭೂತಃ ಸರ್ವಭೂತಸುಹೃದಾತ್ಮಾ-ಯೋಗೇಶ್ವರಚರ್ಯಾಯಾಂ ನಾತಿವ್ಯುತ್ಪನ್ನಮತಿಂ ಸ್ಮಯಮಾನ ಇವ ವಿಗತಸ್ಮಯ ಇದಮಾಹ ।।೯।।**

**ಏವಂ** ಈ ರೀತಿಯಾಗಿ **ಬಹ್ವಬದ್ಧಂ** ಬಹಳ ಅನನ್ವಿತವಾಗಿ **ಅಭಿಭಾಷಮಾಣಂ** ಮಾತನಾಡುವ **ನರದೇವಾಭಿಮಾನಿನಂ** ರಾಜನೆಂದು ಅಭಿಮಾನವುಳ್ಳ **ರಜಸಾ ತಮಸಾ** ರಜೋಗುಣ ತಮೋಗುಣಗಳಿಂದ **ಅನುವೃದ್ಧೇನ** ಅಭಿವೃದ್ಧವಾದ **ಮದೇನ** ಗರ್ವದಿಂದ **ತಿರಸ್ಕೃತಾಶೇಷಭಗವತ್ಪ್ರಿಯನಿಕೇತಂ** ಎಲ್ಲ ಭಗವದ್ಭಕ್ತರಿಗೆ ಆಶ್ರಯನಾದ ಭರತನನ್ನು ತಿರಸ್ಕರಿಸಿದ **ಪಂಡಿತಮಾನಿನಂ** ಪಂಡಿತನೆಂದು ಅಹಂಕಾರವುಳ್ಳ **ಯೋಗೇಶ್ವರ** ಯೋಗೇಶ್ವರರಲ್ಲಿರುವ **ಚರ್ಯಾಯಾಂ** ಅಭಿಮಾನವಿಲ್ಲದೇ ಆಚರಣೆ ಮಾಡುವುದರಲ್ಲಿ **ನಾತಿವ್ಯುತ್ಪನ್ನಮತಿಂ** ಅಭ್ಯಾಸವಿಲ್ಲದ ಬುದ್ಧಿಯುಳ್ಳ ರಾಜನಿಗೆ **ಸರ್ವಭೂತಸುಹೃದಾತ್ಮಾ** ಶ್ರೀಹರಿಯಲ್ಲಿ ಮನಸ್ಸಿಟ್ಟ **ಬ್ರಾಹ್ಮಣಃ** ಬ್ರಹ್ಮಜ್ಞಾನಿಯಾದ **ಭಗವಾನ್** ಪೂಜ್ಯನಾದ **ಸಃ** ಭರತನು **ಸ್ಮಯಮಾನ ಇವ** ಮುಗುಳು ನಗುವಂತೆ ಮುಖವಿಕಾಸವುಳ್ಳವನಾಗಿ **ಇದಂ ಆಹ** ರಾಜನ ಆಕ್ಷೇಪವಚನಗಳಿಗೆ ಉತ್ತರವನ್ನು **ಆಹ** ಹೇಳಿದನು.

### ಜಡಭರತರಿಗೆ ಎಲ್ಲ ಭಗವದ್ಭಕ್ತರ ಆಶ್ರಯತ್ವ ಹೇಗೆ?

ಈ ಶ್ಲೋಕದಲ್ಲಿ ಬ್ರಾಹ್ಮಣಜನ್ಮದಲ್ಲಿರುವ ಭರತನಿಗೆ ಎಲ್ಲ ಭಗವದ್ಭಕ್ತರ ಆಶ್ರಯತ್ವ ಹೇಗೆ ಹೇಳಲ್ಪಡುವುದು? ಅವನು ಬ್ರಾಹ್ಮಣ ಜನ್ಮದಲ್ಲಿ ಯಾರಿಗೂ ಆಶ್ರಯನಾಗಿಲ್ಲ ಎಂಬ ಶಂಕೆಗೆ ಪರಿಹಾರವಾಗಿ ವಿವಕ್ಷಿತ ಅರ್ಥ ಹೇಳುವರು.

**ತಾತ್ಪರ್ಯ - ಅಶೇಷಭಗವತ್ಪ್ರಿಯಾಣಾಂ ನಿಕೇತಃ ಸ ಏವ ಭರತೋ**
**ಮಾನುಷಾಪೇಕ್ಷಯಾ ।**

ಈಗ ಬ್ರಾಹ್ಮಣಜನ್ಮದಲ್ಲಿರುವವನೇ ಹಿಂದಿನಜನ್ಮದಲ್ಲಿ ಭರತನಾಗಿದ್ದಾಗ ಆ ಕಾಲದಲ್ಲಿರುವ ಭಗವದ್ಭಕ್ತರಾದ ಮನುಷ್ಯರಿಗೆಲ್ಲರಿಗೂ ಆಶ್ರಯನಾಗಿದ್ದನೆಂದರ್ಥ. ಈ ರೀತಿ ಭರತನ ಪರವಾಗಿ ಸಂಕೋಚ ಮಾಡಿ ವ್ಯಾಖ್ಯಾನಿಸಬೇಕು ಎನ್ನಲು ನಿಯಾಮಕ ಪ್ರಮಾಣ ಹೇಳುವರು.

**ತಾತ್ಪರ್ಯ - ತತ್ಕಾಲಸ್ಥಿತಭಕ್ತೇಷು ಮಾನುಷೇಷು ಋಷಭಾತ್ಮಜಃ ।**
**ವರೋಽಪಿ ಧಿಕ್ಕೃತೋ ರಾಜ್ಞಾ ಸುಹೃದಾ ವೈಷ್ಣವೇಷ್ವಪಿ ॥ ಇತಿ ಗಾರುಡೇ**

ಆ ಕಾಲದಲ್ಲಿರತಕ್ಕ ಭಗವದ್ಭಕ್ತರಾದ ಮನುಷ್ಯರಲ್ಲಿ ಋಷಭ ಪುತ್ರನಾದ ಭರತನನು ಶ್ರೇಷ್ಠನಾದವನು. ಆದರೂ ತಿಳಿಯದೇ ವೈಷ್ಣವರಲ್ಲಿ ವಿಶ್ವಾಸವಿರುವ




ರಾಜನಿಂದ ಈ ಬ್ರಾಹ್ಮಣಜನ್ಮದಲ್ಲಿ ತಿರಸ್ಕರಿಸಲ್ಪಟ್ಟನು ಎಂದು ಗರುಡ ಪುರಾಣದಲ್ಲಿ ಹೇಳಿದೆ.

**ಹೊರುವವರು ಯಾರು?**

ಬಹಳ ದೂರದವರೆಗೆ ಬಹಳ ಹೊತ್ತು ನೀನೊಬ್ಬನೇ ಮೇನೆ ಹೊತ್ತಿರುವಿ ಎಂದು ವ್ಯಂಗ್ಯವಾಗಿ ನೀನು ಹೊರಲಿಲ್ಲ ನಡೆಯಲಿಲ್ಲ ಎಂದು ರಾಜ ಹೇಳಿದ್ದಕ್ಕೆ ಉತ್ತರಿಸುವನು

**ಬ್ರಾಹ್ಮಣ ಉವಾಚ -**

**ತ್ವಯೋದಿತಂ ವ್ಯಕ್ತಮವಿಪ್ರಲಬ್ಧಂ ಭರ್ತುಃ ಸ ಮೇ ಸಾದ್ಯದಿ ವೀರ ಭಾರಃ ।**
**ಗಂತುರ್ಯದಿ ಸ್ಯಾದಧಿಗಮ್ಯಮಧ್ವಾ ಪೀವೇತಿ ಚಾಸೌ ನ ವಿದಾಂ ಪ್ರವಾದಃ ॥**

**ಹೇ ವೀರ** ರಾಜನೇ! ವಿಚಾರ ಮಾಡಿದರೆ **ಯದಿ** ಒಂದು ವೇಳೆ **ಭರ್ತುಃ** ಹೊರುವ **ಮೇ** ನನಗೆ **ಭಾರಃ ಸ್ಯಾತ್** ಹೊರುವಿಕೆ ಇದ್ದರೆ ಸರಿಯಾಗುತ್ತಿತ್ತು ಅದೇ ಇಲ್ಲ ಅಂದರೆ ಭರಣಕರ್ತೃತ್ವ ನನಗೆ ಇಲ್ಲವೇ ಇಲ್ಲ **ಗಂತುಃ** ನಡೆಯುವ ನನಗೆ **ಗಮ್ಯಂ ಅಧಿ** ಗಮ್ಯವನ್ನು ಕುರಿತು **ಅಧ್ವಾ** ಮಾರ್ಗಗಮನವು **ಯದಿ ಸ್ಯಾತ್** ಒಂದು ವೇಳೆ ಇದ್ದರೆ ಸರಿ. ಅದೇ ಇಲ್ಲ ಹಾಗಿದ್ದಲ್ಲಿ ನಿನ್ನ ಆಕ್ಷೇಪವಚನ ಸುಳ್ಳಾಗುತ್ತಿತ್ತು. ಶ್ರೀಹರಿಯೇ ಸ್ವತಂತ್ರ ಭರಣಾದಿಕರ್ತಾ ಕಾರಣ **ತ್ವಯಾ ಉದಿತಂ** ನೀನು ಹೇಳಿದ್ದು **ಅವಿಪ್ರಲಬ್ಧಂ** ಸತ್ಯವೇ ಆಗಿದೆ ಇನ್ನು **ನಾತಿಪೀವಾ** ಎಂದು ನಾನು ಪುಷ್ಟ ಎಂದೇನು ಹೇಳಿದೆ ಅದು **ವಿದಾಂ ಪ್ರವಾದೋ ನ** ಜ್ಞಾನಿಗಳಾಡುವ ಮಾತಲ್ಲ ಚೇತನನಿಗೆ ಸ್ಥೌಲ್ಯಾದಿವಿಕಾರಗಳಿಲ್ಲ ಎಂದರ್ಥ.

**ಹೊರುವವರಿಗೆ ಭರಣವಿಲ್ಲವೇ ?**

ಇಲ್ಲಿ ಹೊರುವ ಜಡಭರತನಿಗೆ ಭರಣವಿಲ್ಲವೆಂಬುದು ವ್ಯಾಹತವಾಗಿ ಕಾಣುವುದು ಕಾರಣ ಹೇಳುವರು.

ತಾತ್ಪರ್ಯ - ಭರಣಾದಿಕೃದ್ಧರಿರಿತಿ ಚಿಂತಯನ್ನೃಪಮಬ್ರವೀತ್ ಇತಿ ಚ ।

ಸ್ವತಂತ್ರಭರಣಗಮನಕರ್ತಾ ಹರಿಯೆಂದು ಚಿಂತಿಸುತ್ತಾ ರಾಜನಿಗೆ ಹೇಳಿದ ಎಂದು ಗಾರುಡದಲ್ಲಿದೆ.

**ವ್ಯಕ್ತಂ** - ''**ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ**'' ''**ಯ ಉ ತ್ರಿಧಾತು ಪೃಥಿವೀಮುತ ದ್ಯಾಂ**'' ಮುಂತಾದ ಶ್ರುತಿಗಳಲ್ಲಿ ಭರಣ ಮೊದಲಾದವು ಸ್ವತಂತ್ರವಾಗಿ ಶ್ರೀಹರಿಗೆ ಎಂದು ಸ್ಪಷ್ಟವಾಗಿ ಹೇಳಿದೆ. ಅಸ್ವತಂತ್ರ ಕರ್ತೃತ್ವ ಇದ್ದರೂ ಇಲ್ಲದಂತೆಯೇ ಕಾರಣ ಹೀಗೆ ಹೇಳಿದ್ದು ವ್ಯಾಹತವಲ್ಲ. ।।೧೦।।

**ಸ್ಥೌಲ್ಯಂ ಕಾರ್ಶ್ಯಂ ವ್ಯಾಧಯ ಆಧಯಶ್ಚ ಕ್ಷುತ್ತೃಡ್‌ಭಯಂ ಕಲಿರಿಚ್ಛಾ ಜರಾ ಚ ।**
**ನಿದ್ರಾ೭ರತಿರ್ಮನ್ಯುರಹಂ ಮದಶ್ಚ ದೇಹೇನ ಜಾತಸ್ಯ ಹಿ ಮೇ ನ ಸಂತಿ ।।೧೧।।**

**ಸ್ಥೌಲ್ಯಂ** ದಪ್ಪನಾಗಿರುವುದು **ಕಾರ್ಶ್ಯಂ** ಸಣ್ಣಗಿರುವುದು **ವ್ಯಾಧಯಃ** ಶಾರೀರಿಕ ರೋಗಗಳು **ಆಧಯಃ** ಮಾನಸಿಕ ರೋಗಗಳು **ಕ್ಷುತ್** ಹಸಿವೆ **ತೃಟ್** ನೀರಡಿಕೆ **ಭಯಂ** ಹೆದರಿಕೆ **ಕಲಿಃ** ಕಲಹವು (ಜಗಳ) **ಇಚ್ಛಾ** ಅದು ಬೇಕು ಇದು ಬೇಕು ಎಂಬ ಕಾಮನೆಯು **ಜರಾ** ಮುಪ್ಪು **ನಿದ್ರಾ** ನಿದ್ರೆಯು **ಅರತಿಃ** ದುಃಖವು **ಮನ್ಯು** ಕೋಪವು **ಅಹಂ** ಅಹಂಕಾರವು **ಮದಃ** ಸೊಕ್ಕು ಇವೆಲ್ಲವೂ **ದೇಹೇನ ಜಾತಸ್ಯ ಏವ ಸಂತಿ** ದೇಹಾಭಿಮಾನ ಇದ್ದವಗೆ ಮಾತ್ರ ಇರುವವು (ಆಕ್ಷೇಪ ಪೂರ್ವಕ ಹೇಳಿದಾಗ ಚಿತ್ತ ವಿಕ್ಷೇಪಗಳಾಗುವವು) **ಮೇ ನ ಸಂತಿ** ದೇಹಾಭಿಮಾನವಿಲ್ಲದ ನನಗೆ ಇಲ್ಲಿ ಚಿತ್ತವಿಕ್ಷೇಪಗಳಿಲ್ಲವೆಂದು ಭಾವ.

### ಜಡಭರತ ದೇಹದ ಜೊತೆ ಹುಟ್ಟಲಿಲ್ಲವೇ?

ಇಲ್ಲಿ ಸ್ಥೌಲ್ಯಾದಿಗಳು ದೇಹದ ಜೊತೆಗೆ ಹುಟ್ಟಿದವನಿಗೆ ಇವೆ ನನಗೆ ಇಲ್ಲ ಎಂದು ಹೇಳಿದರೆ ತಾನು ದೇಹ ಸಹಿತನಾಗಿಲ್ಲ ಎಂದು ತೋರುವುದು. ಅದು ಸರಿಯಲ್ಲ. ತಾನು ದೇಹದ ಜೊತೆಗೆ ಹುಟ್ಟಿದವನೇ ಕಾರಣ ಇಲ್ಲಿ ಯೋಗ್ಯವಾದ ದೇಹ ಶಬ್ದಾರ್ಥ ತಿಳಿಸುವರು.

ತಾತ್ಪರ್ಯ - ದೇಹೇನ ಜಾತಸ್ಯ ದೇಹಾಭಿಮಾನಿನಃ ।

ಈ ವಿಷಯದಲ್ಲಿ ಪ್ರಮಾಣ ಹೇಳುವರು

ತಾತ್ಪರ್ಯ - ದೇಹಮಾನೀ ದೇಹಜಾತೋ ವಿದೇಹೂ ಮಾನವರ್ಜಿತಃ ಇತಿ ಚ ।

ದೇಹೇನ ಜಾತ ಎಂದರೆ ದೇಹಾಭಿಮಾನವುಳ್ಳವನೆಂದರ್ಥ. ದೇಹಾಭಿಮಾನವುಳ್ಳವನು ದೇಹಜಾತನೆಂದು, ಅಭಿಮಾನ ಇಲ್ಲದವನು ವಿದೇಹ (ದೇಹವಿಲ್ಲದವ)ನೆಂದು ಕರೆಸಿಕೊಳ್ಳುವನು ಎಂದೂ ಪ್ರಮಾಣವಾಕ್ಯವಿದೆ. ।।೧೧।।

ಜೀವನ್ಮೃತನಾಗಿದ್ದಿ ಎಂದುದಕೆ ಉತ್ತರಿಸುವನು

**ಜೀವನ್ಮೃತತ್ವಂ ನಿಯಮೇನ ರಾಜನ್ನಾದ್ಯಂತವದ್ಯದ್ವಿಕೃತಸ್ಯ ದೃಷ್ಟಂ ।**
**ಸ್ವಸ್ವಾಮಿಭಾವೋಽಧ್ರುವ ಏಷ ಯತ್ರ**
**ತರ್ಹ್ಯಚ್ಯುತೇಽಸಾವಿತಿ ಕೃತ್ಯಯೋಗಃ ॥೧೨॥**

**ರಾಜನ್** ರಾಜನೇ **ಯತ್** ಯಾವುದು **ಆದ್ಯಂತವತ್** ಉತ್ಪತ್ತಿವಿನಾಶವುಳ್ಳದ್ದೋ **ತಸ್ಯ** ಅಂತಹ **ವಿಕೃತಸ್ಯ** ಪ್ರತಿಕ್ಷಣವೂ ವಿಕಾರಗೊಳ್ಳುವ ಜಡವಾದ ದೇಹಕ್ಕೆ **ನಿಯಮೇನ** ತಪ್ಪದೇ **ಜೀವನ್ಮೃತತ್ವಂ** ಬದುಕಿದ್ದೂ ಸತ್ತಿದೆ ಎಂಬ ವ್ಯವಹಾರವು ದೃಷ್ಟಂ ಕಂಡಿದೆ ಚೇತನನಾದ ನನಗಲ್ಲವೆಂದರ್ಥ **ಮಾಂ ಕದರ್ಥೀಕೃತ್ಯ ಭರ್ತೃಶಾಸನಮತಿಚರಸಿ** ಎಂದು ಆಕ್ಷೇಪಿಸಿದ್ದಕ್ಕೆ ಉತ್ತರಿಸುವನು **ಯತ್ರ** ಒಂದು ವೇಳೆ **ಏಷಃ** ಈ **ಸ್ವಸ್ವಾಮಿಭಾವಃ** ನಾನು ರಾಜನು ನೀನು ಭೃತ್ಯನು ಎಂಬ ಭಾವವು (ಸ್ವಾಮಿತ್ವಭೃತ್ಯತ್ವಗಳು) **ಧ್ರುವಃ** ಮುಖ್ಯ ನಿಯತವು ಸತ್ಯವು ಎಂದು ನಿನ್ನ ಅಭಿಪ್ರಾಯವಾದರೆ **ತರ್ಹಿ** ಆಗ **ಅಸೌ** ಈ ಸ್ವಾಮಿತ್ತ್ವವು **ಅಚ್ಯುತೇ** ಶ್ರೀಹರಿಯಲ್ಲಿ **ಧ್ರುವಃ** ಮುಖ್ಯವು ನಿಯತವು ಸತ್ಯವು. ''**ಏಷ ಸರ್ವೇಶ್ವರ**'' ಎಂಬ ಶ್ರುತಿಯು ಶ್ರೀಹರಿಯನ್ನೇ ಸರ್ವೇಶ್ವರನೆಂದು ಕರೆದಿದೆ. ನಿನ್ನನ್ನಲ್ಲ. ನೀನು ನಮ್ಮಂತೆ ಭೃತ್ಯನೇ. **ಇತಿ** ''ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ'' ಎಂಬ ಸ್ಮೃತಿಯಲ್ಲಿ ಹೇಳಿದಂತೆ ಶ್ರೀಹರಿಯು ಸರ್ವಸ್ವಾಮಿ ಎಂಬ **ಕೃತ್ಯಯೋಗಃ** ಇತಿಕರ್ತವ್ಯತಾರೂಪ ಉಪಾಸನೆಯು ಜನರಿಗೆ ವಿಹಿತವಾಗಿದೆ **ಇತಿ** ಈ ಕಾರಣ ನಿನ್ನಲ್ಲಿ **ಕೃತೇಃ** ಶಾಸನ ಮಾಡುವಿಕೆಯ **ಅಯೋಗಃ** ಯೋಗ್ಯತೆ ಇಲ್ಲ. ಅಂದಮೇಲೆ ನಾನು ಅದನ್ನು ಮೀರುವದೆಲ್ಲಿ? ನನ್ನನ್ನು ಶಾಶಿಸುವವರು ಕೇವಲ ಮುಖ್ಯಸ್ವಾಮಿಯಾದ ಭಗವಂತ ಹಾಗೂ ಅಮುಖ್ಯಸ್ವಾಮ್ಯವುಳ್ಳ ದೇವತೆಗಳು ಮಾತ್ರ. ನಿನಗೆ ಆ ಯೋಗ್ಯತೆ ಇಲ್ಲ ಎಂದು ಅಭಿಪ್ರಾಯ.

ದೇಹಸಂಬಂಧವೆಂಬ ಜನ್ಮ ದೇಹವಿಯೋಗವೆಂಬ ಮರಣ ಇವುಗಳನ್ನು ಬಿಟ್ಟು ಚೇತನರಿಗೆ ಬೇರೆ ವಿಕಾರವಿಲ್ಲ. ಆದ್ದರಿಂದ ಆದ್ಯಂತವಂತನಲ್ಲ. ''**ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ**'' ''**ದೇಹಸ್ಯ ಸರ್ವಥಾ ನಾಶಾವನಾಶಾಚ್ಚೇತನಸ್ಯ ಚ**'' ಎಂಬ ಶ್ರುತಿಸ್ಮೃತಿಗಳು ಈ ಅರ್ಥವನ್ನು ಸ್ಪಷ್ಟಪಡಿಸುವವು. ಆದ್ದರಿಂದಲೇ ಹಿಂದಿನ ಶ್ಲೋಕದಲ್ಲಿ **ದೇಹೇನ ಜಾತಸ್ಯ** ಎಂದು ಹೇಳಿರುವುದು.

ಇನ್ನು ಶರೀರಾಭಿಪ್ರಾಯದಿಂದ ಹೇಳಿದ್ದಾದರ ಅದು ಶರೀರಗಳಿಗೆಲ್ಲ ಸಾಧಾರಣವಾದ್ದರಿಂದ ನನ್ನ ದೇಹಕ್ಕೆ ಮಾತ್ರವಲ್ಲ. ಕಾರಣ ಆಕ್ಷೇಪವಾಗುವುದಿಲ್ಲವೆಂದು ಉತ್ತರಿಸಿದಂತಾಯಿತು.

## ಜೀವನ್ಮೃತ ಶಬ್ದಾರ್ಥ

ಇಲ್ಲಿ ಯಾವುದು ಹುಟ್ಟುವುದು, ಸಾಯುವುದೋ ಅದು ಜೀವನ್ಮೃತ ಎನಿಸುವುದು ಎಂಬ ನಿಯಮಕ್ಕೆ ಘಟಾದಿಗಳಲ್ಲಿ ವ್ಯಭಿಚಾರ ಬರುವುದು. ಶರೀರರೂಪ ಜಡಾಭಿಪ್ರಾಯಕ ಎಂದರೂ ಬದುಕಿರುವುದಕ್ಕೆ ಮರಣ ಅಸಂಭಾವಿತ ಕಾರಣ ವ್ಯಾಹತಿ ಬರುವುದು. ಆದ್ದರಿಂದ ವ್ಯಾಹತಿ ಬರದಂತೆ ಜೀವನ್ಮೃತ ಶಬ್ದಾರ್ಥವನ್ನು ಪ್ರಮಾಣದಿಂದ ತಿಳಿಸುವರು.

ತಾತ್ಪರ್ಯ - ಪ್ರಾಣಯುಕ್ತೇರರತ್ಯಾ ಚ (ರಯುಕ್ತ್ಯಾ ಚ) ಜಡಂ
ಜೀವನ್ಮೃತಂ ಸ್ಮೃತಂ ॥ ಇತಿ ಚ

ಶರೀರರೂಪವಾದ ಜಡವು ಪ್ರಾಣಸಂಬಂಧವಿದ್ದುದರಿಂದ ಜೀವಂತ ಎಂದೂ ಬಹಳ ದುಃಖ ಸಂಬಂಧದಿಂದಾ ಮೃತವೆಂದು ಅನಿಸಿಕೊಳ್ಳುವುದು. ಮೃತಶಬ್ದ ಶರೀರದಲ್ಲಿ ಗೌಣ. ಕಾರಣ ವ್ಯಾಹತಿಯಿಲ್ಲ.

**ಉತ್ತರಾರ್ಧದ ತಾತ್ಪರ್ಯ**

ದೇವತೆಗಳಲ್ಲಿ ನಿಯತ ಅಮುಖ್ಯಸ್ವಾಮಿತ್ವ. ಮನುಷ್ಯರಾಜರಲ್ಲಿ ವ್ಯವಹಾರಮಾತ್ರ.

''ಸ್ವಾಮಿತ್ವಂ ತು ಹರೇರೇವ ಮುಖ್ಯಮನ್ಯತ್ರ ಭೃತ್ಯತಾ ।
ದೇವೇಷು ತನ್ನಿಯತ್ಯಾ ಚ ತ್ವದಾದೇರ್ವ್ಯಾವಹಾರಿಕಮ್ ।
ಮಾನುಷೇಷು ವಿಶೇಷಃ ಕೋ ವ್ಯವಹಾರಮೃತೇ ವದ ।
ವ್ಯತ್ಯಾಸಾನ್ನ ಹಿ ದೇವೇಷು ವ್ಯತ್ಯಾಸಃ ಸ್ವಾಮಿತಾಂ ಗತಃ'' ಇತಿ ಚ ॥೧೨॥

ಶ್ರೀಹರಿಗೇನೇ ಮುಖ್ಯ ಸ್ವಾಮಿತ್ವವು. ಮಿಕ್ಕ ಚೇತನರಲ್ಲಿ ಭೃತ್ಯತ್ವವು ಮುಖ್ಯವು. ದೇವತೆಗಳಲ್ಲಿರತಕ್ಕ ಸ್ವಾಮಿತ್ವವು ಶ್ರೀಹರಿಯ ಪ್ರೇರಣೆಯಿಂದ ನಿಯತವಾಗಿದೆ( ಮುಖ್ಯವಲ್ಲ). ನಿನ್ನಂತವರಿಗೆ ಸ್ವಾಮಿತ್ವವು ವ್ಯವಹಾರ ಮಾತ್ರ. ಮನುಷ್ಯರಾಜರಲ್ಲಿ ವ್ಯವಹಾರ ಬಿಟ್ಟು ನಿಯತವಾದ ಅಮುಖ್ಯವಾದ ಸ್ವಾಮಿತ್ವವು ಯಾವುದೂ ಇಲ್ಲವೇ




ಇಲ್ಲ. ಏಕೆಂದರೆ ಶ್ರೀಹರಿಯೇ ಅವರವರ ಕರ್ಮಾನುಸಾರ ಪ್ರಭುವನ್ನು ಭೃತ್ಯನನ್ನಾಗಿ ಭೃತ್ಯನನ್ನು ಪ್ರಭುವನ್ನಾಗಿಯೂ ಮಾಡುತ್ತಾನೆ. ಹೀಗೆ ಸ್ವಾಮಿಭೃತ್ಯಭಾವಕ್ಕೆ ವ್ಯತ್ಯಾಸವಿದೆ. ದೇವತೆಗಳಲ್ಲಿರತಕ್ಕ ಸ್ವಾಮಿತ್ವಕ್ಕೆ ವ್ಯತ್ಯಾಸವಿಲ್ಲದಿರುವುದರಿಂದ ದೇವತೆಗಳಲ್ಲಿ ಸ್ವಾಮಿತ್ವವು ನಿಯತವಾಗಿ ಅಮುಖ್ಯವಾದುದು. ||೧೨||

ಹಾಗಾದರೆ ಇವನು ಈ ದೇಶದ ಸ್ವಾಮಿ ಎಂದು ತಿಳಿದಿರುವುದಕ್ಕೆ ಏನು ಗತಿ ಎಂದರೆ ವ್ಯವಹಾರ ಮಾತ್ರ ಎಂದದ್ದನ್ನೇ ವಿವರಿಸುವರು

**ವಿಶೇಷ ಬುದ್ಧೇರ್ವಿವರಂ ಮನಾಕ್ ಕ್ವ**
**ಪಶ್ಯಾಮಿ ಯತ್ರ ವ್ಯವಹಾರತೋಽನ್ಯತ್।**
**ಕ ಈಶ್ವರಸ್ತತ್ರ ಕಿಮೀಶಿತವ್ಯ**
**ಮಥಾಪಿ ರಾಜನ್ ಕರವಾಮ ಕಿಂ ತೇ** ||೧೩||

**ವಿಜಯಧ್ವಜೀಯ ಪ್ರಕಾರ** - '**ಏಕೋ ರುದ್ರೋ ನ ದ್ವಿತಿಯೋಽವತಸ್ಥೇ**' ಇದೇ ಮುಂತಾದ ಶ್ರುತಿಗಳಿಂದ ರುದ್ರಾದಿ ದೇವತೆಗಳಿಗೆ ಸ್ವಾಮಿತ್ವವು ತೋರುವುದಿಲ್ಲ ಎಂದರೆ ಹೇಳುತ್ತಾರೆ **ವಿಶೇಷಬುದ್ಧೇಃ** ರುದ್ರಾದಿಗಳಲ್ಲಿ ಸ್ವಾಮಿತ್ವವು ಮುಖ್ಯವೆಂಬ ಜ್ಞಾನಕ್ಕೆ **ವಿವರಂ** ಅವಕಾಶವನ್ನು (ಸ್ವಾಮಿಶಬ್ದ ಪ್ರವೃತ್ತಿ ನಿಮಿತ್ತವನ್ನು) **ಮನಾಕ್** ಸ್ವಲ್ಪವನ್ನು **ಕ್ವ ಪಶ್ಯಾಮಿ** ಎಲ್ಲಿ ಕಾಣುವೆನು? ಕಾಣುತ್ತಿಲ್ಲ (ಭರತನು ಅಪರೋಕ್ಷ ಜ್ಞಾನಿಯಾದ್ದರಿಂದ ಕೈಯಲ್ಲಿಯ ನೆಲ್ಲಿಕಾಯಿಯಂತೆ ಎಲ್ಲ ಶಬ್ದಪ್ರವೃತ್ತಿನಿಮಿತ್ತವನ್ನು ಕಾಣುವುದರಿಂದ ಪಶ್ಯಾಮಿ ಎಂದಿರುವರು). ಶ್ರುತಿಯಲ್ಲಿ ಹೇಳಿದ್ದನ್ನು ಒಪ್ಪದಿರುವುದು ಹೇಗೆ ಎಂದರೆ **ಯತ್ರ** ಯಾವ ರುದ್ರಾದಿದೇವತೆಗಳಲ್ಲಿ ತೋರುತ್ತಿರುವ ಸ್ವಾಮಿತ್ವವು **ವ್ಯವಹಾರತಃ** ಅಜ್ಞ ಜನರ ರೂಢಿಯನ್ನು ಬಿಟ್ಟು **ಅನ್ಯತ್** ಬೇರೆಯಾದದುನ್ನು ನೋಡಲಾರೆ. ಅದು ಅಜ್ಞರೂಢಿಯೇ ಹೊರತು ಮುಖ್ಯವಲ್ಲ. ಇದರಿಂದ ದೇವತೆಗಳಲ್ಲಿರುವ ಸ್ವಾಮಿತ್ವವು ಶ್ರೀಹರಿಯಿಂದ ನಿಯತವಾದುದೆಂದೇ ಹೇಳಿದಂತಾಯಿತು. ಇದನ್ನೇ ''**ದೇವೇಷು ತನ್ನಿಯತ್ಯಾ**'' ಎಂಬ ಪ್ರಮಾಣ ತಿಳಿಸುವುದು.

**ಯಾದುಪತ್ಯವಿಶೇಷ**

ಅಥವಾ ಯಾದುಪತ್ಯದಂತೆ ಮೇಲಿನ ಅವತಾರಿಕಾ ಪ್ರಕಾರ **ಯತ್ರ** ಯಾವ ನಿನ್ನ ವಿಷಯ ತಿಳಿಯುವುದಕ್ಕೆ ಅವಕಾಶವು **ವ್ಯವಹಾರತಃ ಅನ್ಯತ್** ಅಜ್ಞಾನಿಗಳು

ವ್ಯವಹರಿಸುವುದನ್ನು ಬಿಟ್ಟು ಬೇರೆಯದನ್ನು **ಮನಾಕ್** ಸ್ವಲ್ಪವು ಕಾಣುತ್ತಿಲ್ಲ. ಸಾಕು ಅಷ್ಟೇ ಎಂದರೆ **ತತ್ರ** ಶ್ರೀಹರಿಯಲ್ಲಿ ಮುಖ್ಯ ಸ್ವಾಮಿತ್ವ, ದೇವತೆಗಳಲ್ಲಿ ತಾರತಮ್ಯಾನುಗುಣವಾದ ಸ್ವಾಮಿತ್ವ ಮನುಷ್ಯರಲ್ಲಿ ಇರುವ ಸ್ವಾಮಿತ್ವ ಇವುಗಳು ವ್ಯತ್ಯಾಸವಾಗುವುದರಿಂದ ಸ್ವಾಮಿಭೃತ್ಯಭಾವದಲ್ಲಿ ವಿಶೇಷತೆ ಏನೂ ಇಲ್ಲ. ಲೋಕದಲ್ಲಿ ಸ್ವಾಮಿಭೃತ್ಯವ್ಯವಹಾರವು ಪ್ರಾಮಾಣಿಕವೂ ಅಲ್ಲ. ಇಂದು ಭೃತ್ಯನಾದವನು ನಾಳೆ ಸ್ವಾಮಿಯಾಗಬಹುದು. ಇಂದು ಸ್ವಾಮಿಯಾದವನು ನಾಳೆ ಭೃತ್ಯನಾಗಬಹುದು. ಆದ್ದರಿಂದ ಈ ಪಕ್ಷದಲ್ಲಿ **ಕಃ ಈಶ್ವರಃ** ಯಾರು ಸ್ವಾಮಿ? **ಕಿಂ ಈಶಿತವ್ಯಂ** ಯಾವುದು ಅವನ ಶಾಸನಕ್ಕೆ ಒಳಗಾಗುವುದು? ಯಾವುದೂ ಇಲ್ಲವೆಂದು ಭಾವ. ''**ಮಾನುಷೇಷು ವಿಶೇಷಃ ಕಃ ವ್ಯವಹಾರಮೃತೇ ವದ । ವ್ಯತ್ಯಾಸಾತ್**'' ಎಂಬ ಪ್ರಮಾಣದಿಂದ ಈ ಅರ್ಥವನ್ನು ತಿಳಿಸುವುರು. ಅಥವಾ **ಕಃ ಈಶ್ವರಃ** ಎಂಬುದಕ್ಕೆ ಶ್ರೀಹರಿಯಲ್ಲಿಯೂ ದೇವತೆಗಳಲ್ಲಿಯೂ ಮುಖ್ಯವಾಗಿ ಯಥಾಕ್ರಮವಾಗಿ ಸ್ವಾಮಿತ್ವವಿರುವಾಗ ಅವರನ್ನು ಬಿಟ್ಟು ಯಾವ ಮತ್ತೊಬ್ಬ ಮನುಷ್ಯನು ಸ್ವಾಮಿಯು ಎಂದರ್ಥ. ಹೀಗೆ ವಿಚಾರ ಮಾಡಿದಾಗ ನಿನಗೆ ನಿಯತವಾದ ಅಮುಖ್ಯ ಸ್ವಾಮಿತ್ವವೂ ಇಲ್ಲವಾಗಿದೆ. ಕರ್ಮ ವಶದಿಂದ ಇಂದು ನೀನು ರಾಜನಾದರೂ ಮುಂದೆ ಭೃತ್ಯನಾಗಬಹುದು. ನಾನು ಇಂದು ಭೃತ್ಯನಾದರೂ ಮುಂದೆ ರಾಜನಾಗಬಹುದು. ಹೀಗಿದ್ದರೂ ನೀನು ಸ್ವಾಮಿ ಎಂದು ಒಪ್ಪಿಕೊಂಡು **ಅಥಾಪಿ** ಅಂದರೆ ನಿನಗೆ ನಿಯತ ಸ್ವಾಮಿತ್ವವಿಲ್ಲದಿದ್ದರೂ ಅನಿಯತ ಸ್ವಾಮಿತ್ವ ಒಪ್ಪಿಕೊಂಡು ಹೇಳುವಿಯಾದರೆ **ರಾಜನ್** ರಾಜನೇ **ತೇ** ನಿನಗಾಗಿ **ಕಿಂ ಕರವಾಮ** ಏನು ಮಾಡಬೇಕು ಹೇಳು. ಅದನ್ನು ಯಥಾ ಶಕ್ತಿ ಮಾಡುವೆನು ಎಂದು ಭಾವ. ॥೧೩॥

## ಸ್ವಭಾವ ಶಿಕ್ಷೆಯಿಂದ ಹೋಗಲಾರದು

ಪ್ರಮತ್ತನಿಗೆ ಚಿಕಿತ್ಸೆ ಮಾಡುವೆನು ಎಂಬುದಕ್ಕೆ ಉತ್ತರಿಸುವನು

**ಉನ್ಮತ್ತಮತ್ತಜಡವತ್ ಸ್ವಸಂಸ್ಥಾಂ ಗತಸ್ಯ ಮೇ ವೀರ ಚಿಕಿತ್ಸಿತೇನ ।**
**ಅರ್ಥಃ ಕಿಯಾನ್ ಭವತಾ ಶಿಕ್ಷಿತೇನ ಸ್ತಬ್ಧಪ್ರಮತ್ತಸ್ಯ ಚ ಪಿಷ್ಟಪೇಷಃ ॥**

**ಉನ್ಮತ್ತಮತ್ತಜಡವತ್ ಸ್ಥಿತಸ್ಯ** ಹುಚ್ಚ, ಮದ ಬಂದವ, ದಡ್ಡನಂತಿರುವ ಅಂದರೆ ದೇಹಾಭಿಮಾನವಿಲ್ಲದಿರುವ ಆದ್ದರಿಂದಲೇ **ಸ್ವಸಂಸ್ಥಾಂ ಗತಸ್ಯ** ಮನಸ್ಸಿನಿಂದ ನನ್ನ ಸ್ವರೂಪ ಸ್ಥಿತಿಯನ್ನು, ಸ್ವತಂತ್ರನಾದ ಶ್ರೀಹರಿಯಲ್ಲಿ ಸ್ಥಿತಿಯನ್ನು ಪಡೆದ **ಮೇ** ನನಗೆ

 

**ವೀರ** ರಾಜನೇ **ಚಿಕಿತ್ಸಿತೇನ** ನೀನು ಮಾಡುವ ಶಿಕ್ಷೆಯಿಂದ, ನಿಷ್ಠುರ ಮಾತಿನಿಂದ **ಕಿಯಾನ್ ಅರ್ಥಃ** ಏನು ಪ್ರಯೋಜನ? ಯಾವುದೂ ಇಲ್ಲ. ದೇಹಾಭಿಮಾನ-ವಿಲ್ಲದ್ದರಿಂದ ನನಗೇನೂ ವ್ಯಥೆಯಾಗಲಾರದು ಎಂದು ಭಾವ.

ನೀನು ದೇಹಾಭಿಮಾನಶೂನ್ಯನಲ್ಲ ಸ್ವಾಭಾವಿಕ ಉನ್ಮತ್ತ ಕಾರಣ ನನ್ನ ಶಿಕ್ಷೆ ಸಾರ್ಥಕ ಎಂದರೆ ಆಗಲೂ ವ್ಯರ್ಥ ಎಂದು ಹೇಳುವರು. **ಸ್ತಬ್ಧಪ್ರಮತ್ತಸ್ಯ** ಸ್ವಾಭಾವಿಕವಾಗಿಯೇ ಯಾರು ಪ್ರಮತ್ತರೋ, ಸ್ತಬ್ಧರೋ ಅವರಿಗೆ **ಶಿಕ್ಷಿತೇನ ಕಿಯಾನ್ ಅರ್ಥಃ** ಏನು ಪ್ರಯೋಜನ **ಪಿಷ್ಟಪೇಷಃ** ಅದು ಹಿಟ್ಟನ್ನು ಕುಟ್ಟುವಂತೆ ವ್ಯರ್ಥವೆಂದು ಭಾವ. ಸ್ವಭಾವ ಶಿಕ್ಷೆಯಿಂದ ಹೋಗಲಾರದಷ್ಟೇ. ||೧೪||

**ಶ್ರೀ ಶುಕ ಉವಾಚ -**

**ಏತಾವದನುವಾದಪರಿಭಾಷಯಾ ಪ್ರತ್ಯುದೀರ್ಯ ಮುನಿವರ ಉಪಶಮಶೀಲ ಉಪರತಾನಾತ್ಮ್ಯನಿಮಿತ್ತಮುಪಭೋಗೇನ ಕರ್ಮಾರಬ್ಧಂ ವ್ಯಪನಯನ್ ರಾಜಯಾನಮಪಿ ತಥೋವಾಹ ||೧೫||**

**ಅನುವಾದಪರಿಭಾಷಯಾ** ಹೇಳಿದ್ದನ್ನೇ ಮತ್ತೆ ಹೇಳುವ ಪರಿಪಾಟಿಯಿಂದ **ಏತಾವತ್** ಇಷ್ಟು ಮಾತ್ರ **ಪ್ರತ್ಯುದೀರ್ಯ** ಪ್ರತ್ಯುತ್ತರ ನೀಡಿ **ಉಪಶಮಶೀಲಃ** ಶ್ರೀಹರಿಯಲ್ಲಿಯೇ ಮನಸ್ಸಿಡುವ ಸ್ವಭಾವದ **ಮುನಿವರಃ** ಮನನ ಶೀಲರಲ್ಲಿ ಶ್ರೇಷ್ಠನಾದ ಭರತನು **ಉಪರತ ಅನಾತ್ಮ್ಯನಿಮಿತ್ತಂ** ಜಡವಾದ ದೇಹ ಸಂಬಂಧಿಯಾದ ಸುಖದುಃಖಾದಿಗಳಿಗೆ ಕಾರಣವಾದ ಅಹಂಮಮಾಭಿಮಾನವಿಲ್ಲದ **ಆರಬ್ಧಂ ಕರ್ಮ** ಪ್ರಾರಬ್ಧ ಕರ್ಮವನ್ನು **ಭೋಗೇನ** ಅನುಭವಿಸಿಯೇ **ವ್ಯಪನಯನ್** ಕಳೆದು ಕೊಳ್ಳುವವನಾಗಿ **ರಾಜಯಾನಮಪಿ ತಥಾ ಉವಾಹ** ರಾಜನ ಮೇನೆಯನ್ನು ಮೊದಲಿನಂತೆ ಹೊತ್ತು ಹೊರಟನು. ||೧೫||

**ಸ ಚಾಪಿ ಪಾಂಡವೇಯ ಸಿಂಧುಸೌವೀರಪತಿಸ್ತತ್ತ್ವಜಿಜ್ಞಾಸಾಯಾಂ ಸಮ್ಯಕ್ ಶ್ರದ್ಧಯಾಽಧಿಕೃತಾಧಿಕಾರಃ ತದ್ಧ್ರುದಯಗ್ರಂಥಿವಿಮೋಚನಂ ದ್ವಿಜವಚ ಆಶ್ರುತ್ಯ ಬಹುಯೋಗಗ್ರಂಥಮತಂ ತ್ವರಯಾಽವರುಹ್ಯ ಶಿರಸಾ ಪಾದಮೂಲ-ಮುಪಗತಃ ಕ್ಷಮಾಪಯನ್ ವಿಗತನರದೇವಸ್ಮಯ ಉವಾಚ ರಹೂಗಣಃ ||೧೬||**

**ಹೇ ಪಾಂಡವೇಯ** ಎಲೋ ಪರೀಕ್ಷಿತನೇ! **ಸಿಂಧುಸೌವೀರಪತಿಃ** ಎರಡು ದೇಶಕ್ಕೂ ರಾಜನಾದ **ರಹೂಗಣಃ** ರಹೂಗಣನು **ತತ್ತ್ವಜಿಜ್ಞಾಸಾಯಾಂ** ತತ್ತ್ವವನ್ನು ತಿಳಿಯಬೇಕೆಂಬಲ್ಲಿ **ಸಮ್ಯಕ್ ಶ್ರದ್ಧಯಾ** ಒಳ್ಳೆ ಶ್ರದ್ಧೆಯಿಂದ **ಅಧಿಕೃತ** ಪ್ರಕಟ ಮಾಡಿದ **ಅಧಿಕಾರಃ** ತತ್ತ್ವಜ್ಞಾನ ಯೋಗ್ಯತೆಯುಳ್ಳವನಾಗಿ **ಹೃದಯಗ್ರಂಥಿವಿಮೋಚನಂ** ಅಹಂಮಮಾಭಿಮಾನ ನಾಶಕವಾದ **ಬಹುಯೋಗಗ್ರಂಥಮತಂ** ಅನೇಕ ಯೋಗ ಪ್ರತಿಪಾದಕ ಗ್ರಂಥಗಳಿಗೆ ಸಮ್ಮತವಾದ **ದ್ವಿಜವಚಃ** ಬ್ರಾಹ್ಮಣನ ಮಾತನ್ನು **ಆಶ್ರುತ್ಯ** ಕೇಳಿ **ವಿಗತನರದೇವಸ್ಮಯಃ** ನಾನು ರಾಜನೆಂಬ ಗರ್ವವಿಲ್ಲದವನಾಗಿ **ತ್ವರಯಾ** ಬೇಗನೇ **ಅವರುಹ್ಯ** ಮೇನೆಯಿಂದಿಳಿದು **ಕ್ಷಮಾಪಯನ್** ಕ್ಷಮೆಯಾಚಿಸುತ್ತಾ **ಶಿರಸಾ ಪಾದಮೂಲಂ ಉಪಾಗತಃ** ತಲೆಬಾಗಿ ಪಾದಗಳಿಗೆರಗಿ **ಉವಾಚ** ಮಾತನಾಡಿದನು. ॥೧೬॥

**ರಹೂಗಣ ಉವಾಚ -**

**ಕಸ್ತ್ವಂ ನಿಗೂಢಶ್ಚರಸಿ ದ್ವಿಜಾನಾಂ ಬಿಭರ್ಷಿ ಸೂತ್ರಂ ಕತಮೋಽವಧೂತಃ ।**
**ಕಸ್ಯಾಸಿ ಕುತ್ರತ್ಯ ಇಹಾಪಿ ಕಸ್ಮಾತ್ ಕ್ಷೇಮಾಯ ನಶ್ಚೇದಸಿ ನೋತ ಶುಕ್ಲಃ ॥**

**ತ್ವಂ** ನೀನು **ಕಃ** ಯಾರು? **ನಿಗೂಢಃ ಚರಸಿ** ರಹಸ್ಯವಾಗಿ ಸಂಚರಿಸುವಿ **ಯತಃ ಸೂತ್ರಂ ಬಿಭರ್ಷಿ** ಯಾವ ಕಾರಣ ಯಜ್ಞೋಪವೀತ ಧರಿಸಿರುವಿ **ದ್ವಿಜಾನಾಂ ಮಧ್ಯೇ** ಬ್ರಾಹ್ಮಣರಾದ ಅವಧೂತರಲ್ಲಿ **ಕತಮಃ ಅವಧೂತಃ** ಯಾವ ಅವಧೂತೆಯಾಗಿರುವಿ? **ಕಸ್ಯಾಸಿ** ಯಾರ ಮಗನು **ಕುತ್ರತ್ಯಃ** ಎಲ್ಲಿ ವಾಸಿಸುವವನು **ಇಹಾಪಿ ಕಸ್ಮಾತ್** ಈ ಪ್ರದೇಶಕ್ಕೆ ಏಕೆ ಬಂದಿರುವಿ **ನಃ ಕ್ಷೇಮಾಯ ಚೇತ್** ನಮ್ಮ ಕಲ್ಯಾಣಕ್ಕೆ ಬಂದದ್ದಾರೆ **ಶುಕ್ಲಃ ನ ಅಪಿ ಉತ** ಶುದ್ಧನಾದ ಕಪಿಲನೇ ಅಲ್ಲವಷ್ಟೇ? ಎಂದು ವಿತರ್ಕ. ॥೧೭॥

ನೀನು ಬ್ರಾಹ್ಮಣನೇ ಆಗಿದ್ದರೆ ನಿನ್ನ ಅವಮಾನದಿಂದ ನನಗೆ ದೊಡ್ಡ ಅನರ್ಥವೇ ಆಗುವುದು ಎಂದು ಹೇಳುವನು

**ನಾಹಂ ವಿಶಂಕೇ ಸುರರಾಜವಜ್ರಾನ್ನತ್ರ್ಯಕ್ಷಶೂಲಾನ್ನ ಯಮಸ್ಯ ದಂಡಾತ್ ।**
**ನಾಗ್ನ್ಯರ್ಕಸೋಮಾನಿಲವಿತ್ತಪಾಸ್ತ್ರಾಚ್ಛಂಕೇ ಭೃಶಂ ಬ್ರಹ್ಮಕುಲಾವಮಾನಾತ್ ॥**

**ಅಹಂ** ನಾನು **ಸುರರಾಜವಜ್ರಾತ್** ದೇವೇಂದ್ರನ ವಜ್ರಾಯುಧದಿಂದ **ತ್ರ್ಯಕ್ಷಶೂಲಾತ್** ಮುಕ್ಕಣ್ಣನ ತ್ರಿಶೂಲದಿಂದ **ಯಮಸ್ಯ ದಂಡಾತ್** ಯಮನ

ದಂಡದಿಂದ **ಅಗ್ನಿ** ಅಗ್ನಿ **ಅರ್ಕ** ಸೂರ್ಯ **ಸೋಮ** ಚಂದ್ರ **ಅನಿಲ** ವಾಯು **ವಿತ್ತಪ** ಕುಬೇರ ಇವರುಗಳ **ಅಸ್ತ್ರಾತ್** ಅಸ್ತ್ರಗಳಿಂದ **ನ ಶಂಕೇ** ಭಯಪಡಲಾರೆ **ಬ್ರಹ್ಮಕುಲಾವಮಾನಾತ್** ಬ್ರಾಹ್ಮಣ ಕುಲದ ಅವಮಾನದಿಂದ **ಭೃಶಂ ಶಂಕೇ** ಬಹಳ ಹೆದರುವೆ. ।।೧೮।।

**ತದ್ಬ್ರೂಹ್ಯಸಂಗೋ ಜಡವನ್ನಿಗೂಢವಿಜ್ಞಾನವೀರ್ಯೋ ವಿಚರಸ್ಯಪಾರಃ।**
**ವಚಾಂಸಿ ಯೋಗಗ್ರಥಿತಾನಿ ಸಾಧೋ ನ ನಃ ಕ್ಷಮಂತೇ ಮನಸಾ ವಿಭೇತ್ತುಂ ।।**

**ತತ್** ಆದಕಾರಣ **ಬ್ರೂಹಿ** ನನ್ನ ಪ್ರಶ್ನೆಗಳಿಗೆ ಉತ್ತರ ನೀಡು. ನಾನೊಬ್ಬ ಹುಚ್ಚ ದಡ್ಡನಂತೆ ತಿರಗುವೆ ಎಂದರೇ ಸರ್ವಥಾ ಅಲ್ಲ ಯೋಗೇಶ್ವರ ನೀನು ಎಂದು ಹೇಳುವನು **ಅಸಂಗಃ** ವಿಷಾಯಾಸಕ್ತಿ ಇಲ್ಲದವನು **ನಿಗೂಢವಿಜ್ಞಾನವೀರ್ಯಃ** ಅತ್ಯಂತ ಮುಚ್ಚಲ್ಪಟ್ಟ ವಿಜ್ಞಾನ ಸಾಮರ್ಥ್ಯವುಳ್ಳವನು **ಅಪಾರಃ** ಅಪರಿಮಿತ ಮಹಿಮೆಯುಳ್ಳವನು **ಹೇ ಸಾಧೋ** ಎಲೋ ಸಾಧುವೇ **ಯೋಗಗ್ರಥಿತಾನಿ** ಉಪಾಯಗಳನ್ನು ಹೆಣೆದ **ವಚಾಂಸಿ** ಮಾತುಗಳು **ನಃ ಮನಸಾ ವಿಭೇತ್ತುಂ** ಮನಸ್ಸಿನಿಂದ ವಿಶ್ಲೇಷಿಸಿ ತಿಳಿಯಲು **ನ ಕ್ಷಮಂತೇ** ಶಕ್ಯವಾಗಲಾರವು. ಕಾರಣ ನೀನು ಹುಚ್ಚನಲ್ಲ. ।।೧೯।।

ದೇಶಾಂತರಕ್ಕೆ ಹೊರಟ ನಿನಗೆ ನನ್ನ ಸ್ವರೂಪ ತಿಳಿಯುವುದರಿಂದೇನು ಪ್ರಯೋಜನ ಎಂದರೆ ನಾನೇನು ವ್ಯರ್ಥವಾಗಿ ದೇಶಾಂತರಕ್ಕೆ ಹೋಗುತ್ತಿಲ್ಲ. ತತ್ತ್ವಜಿಜ್ಞಾಸೆಯಿಂದ ಹೊರಟಿರುವೆ ಎಂದು ಹೇಳುವನು.

**ಅಹಂ ಚ ಯೋಗೇಶ್ವರಮಾತ್ಮತತ್ತ್ವ**
**ವಿದಾಂ ಮುನೀನಾಂ ಕಪಿಲಂ ಗುರುಂ ವೈ ।**
**ಪ್ರಷ್ಟುಂ ಪ್ರವೃತ್ತಃ ಕಿಮಿಹಾರಣಂ ಯತ್**
**ಸಾಕ್ಷಾದ್ಧರಿಂ ಜ್ಞಾನಕಲಾವತೀರ್ಣಮ್** ।।೨೦।।

**ಅಹಂ ಚ** ನಾನಾದರೂ **ಆತ್ಮತತ್ತ್ವವಿದಾಂ** ಪರಮಾತ್ಮ ಸ್ವರೂಪವನ್ನರಿತ **ಮುನೀನಾಂ** ಋಷಿಗಳಿಗೆ **ಗುರುಂ** ಉಪದೇಶಕನಾದ **ಜ್ಞಾನಕಲಯಾ ಅವತೀರ್ಣಂ** ಜ್ಞಾನ ವಿಸ್ತಾರಕ್ಕೆ ಅವತರಿಸಿದ, ಜ್ಞಾನರೂಪ ಅಂಶದಿಂದ ಅವತರಿಸಿದ, ವಿಜ್ಞಾನಕ್ಕಾಗಿ ಸ್ವರೂಪಾಂಶದಿಂದ ಅವತರಿಸಿದ **ಸಾಕ್ಷಾತ್ ಹರಿಂ** ನಿಜವಾದ ಶ್ರೀಹರಿಯಾದ **ಕಪಿಲಂ**

ಕಪಿಲ ದೇವರನ್ನು **ಇಹ** ಸಂಸಾರದಲ್ಲಿ **ಅರಣಂ** ರಕ್ಷಕವಾದುದು **ಯತ್** ಯಾವುದು **ತತ್** ಅದು **ಕಿಂ ಪ್ರಷ್ಟುಂ** ಏನು ಎಂದು ಕೇಳಲು **ವೈ** ಎಂದೇ **ಪ್ರವೃತ್ತಃ** ಹೊರಟವನು. ಬೇರೆ ಯಾವ ಪ್ರಯೋಜನಕ್ಕೂ ಅಲ್ಲ. ।।೨೦।।

ಕಪಿಲನೇನೋ ಅಲ್ಲವೋ ಎಂದು ಮಾಡಿದ ವಿತರ್ಕವನ್ನೇ ವಿವರಿಸುವನು

**ಸ ವೈ ಭವಾನ್ ಲೋಕನಿರೀಕ್ಷಣಾರ್ಥಮವ್ಯಕ್ತಲಿಂಗೋ ವಿಚರತ್ಯಪಿಸ್ವಿತ್ ।**
**ಯೋಗೇಶ್ವರಾಣಾಂ ಗತಿಮಲ್ಪಬುದ್ಧಿಃ ಕಥಂ ವಿಚಕ್ಷೀತ ಗೃಹಾನುಬದ್ಧಃ ॥**

**ಸ ವೈ** ಆ ಕಪಿಲನೇ ಆದ **ಭವಾನ್** ತಾವು **ಲೋಕನೀರಿಕ್ಷಣಾರ್ಥಂ** ಸಾಧು ಅಸಾಧು ಜನರನ್ನು ಪರೀಕ್ಷಿಸಲು **ಅವ್ಯಕ್ತಲಿಂಗಃ** ಚಿನ್ಹೆಗಳು ಕಾಣದಂತೆ **ವಿಚರತಿ ಅಪಿಸ್ವಿತ್** ಸಂಚರಿಸುತ್ತಿರುವಿ ಏನು? **ಗೃಹಾನುಬದ್ಧಃ** ಮನೆ ಮಡದಿಗಳಲ್ಲಿ ಆಸಕ್ತನಾದ **ಅಲ್ಪಬುದ್ಧಿಃ** ಮಂದಮತಿಯು **ಯೋಗೇಶ್ವರಾಣಾಂ ಗತಿಂ** ಯೋಗಿಗಳ ಸ್ಥಿತಿಯನ್ನು **ಕಥಂ ವಿಚಕ್ಷೀತ** ಹೇಗೆ ತಿಳಿದಾನು? ।।೨೦।।

ಈ ರೀತಿ ಅವನ ಸ್ವರೂಪವನ್ನು ಕೇಳಿ ಅವನು ಹೇಳಿದ ಉತ್ತರಗಳನ್ನೇ ಆಕ್ಷೇಪಿಸುವನು.

**ಪರಮಾತ್ಮನೇ ಭರಣಗಮನಕರ್ತೃವೇ?**

**ದೃಷ್ಟಃ ಶ್ರಮಃ ಕರ್ಮತ ಆತ್ಮನೋ ವೈ**
**ಭರ್ತುರ್ಗಂತುರ್ಭವತಶ್ಚಾದ್ಯ ಮನ್ಯೇ ।**
**ಯಥಾ ಶ್ರುತೋದಾನಯನಾದಿಭಾವಾಃ**
**ಸಮೂಲದೃಷ್ಟೋ ವ್ಯವಹಾರಮಾರ್ಗಃ** ।।೨೨।।

ಪರಮಾತ್ಮನೇ ಭರಣಗಮನಕರ್ತೃ ಎಂದು ಹೇಳಿದ್ದನ್ನು ಆಕ್ಷೇಪಿಸುವನು **ಯಥಾ** ಹೇಗೆ **ಆತ್ಮನಃ** ನನಗೆ **ಕರ್ಮತಃ** ಯುದ್ಧಾದಿಗಳನ್ನು ಮಾಡುವುದರಿಂದ **ಶ್ರಮಃ ದೃಷ್ಟಃ** ಶ್ರಮ ಕಂಡಿದೆಯೋ **ತಥಾ** ಹಾಗೆಯೇ **ಭರ್ತುಃ** ಭಾರಹೊರುವ **ಗಂತುಃ** ಹಾದಿಯಲ್ಲಿ ನಡೆಯುವ **ಭವತಃ** ನಿನಗೆ **ಅದ್ಯ** ಈ ಕ್ರಿಯೆಗಳನ್ನು ಕಾಣುವ ಈ ಕಾಲದಲ್ಲಿ **ಮನ್ಯೇ** ಯುಕ್ತಿಯಿಂದ ತಿಳಿಯುವೆನು. ಅಂದಮೇಲೆ ಅನುಮಿತಶ್ರಮಾನ್ಯಥಾನುಪಪತ್ತಿಯಿಂದ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಬೇಕು. ವೇದೋದಿತಕರ್ಮ ಮಾಡುವುದರಿಂದಲೂ ನಿನಗೆ ಕರ್ತೃತ್ವವನ್ನು ಅಂಗೀಕರಿಸಬೇಕು ಎಂದು ಹೇಳುವನು. **ಶ್ರುತೋದಾನ-**

 

**ಯಸಾದಿಭಾವಾಃ** **ಶ್ರುತ** ವೇದವಿಹಿತವಾದ **ಉದ** ಕರ್ಮಗಳ **ಆನಯನ** ಚೆನ್ನಾಗಿ ಮುಗಿಸುವುದೇ ಮೊದಲಾದ **ಭಾವಾಃ** ಪದಾರ್ಥಗಳು **ಅಂಗೀಕಾರ್ಯಾಃ** ಅಂಗೀಕಾರಮಾಡಲ್ಪಡಬೇಕು, ಅಂತಹ ಪದಾರ್ಥಗಳನ್ನು ಅಂಗೀಕರಿಸಲೇಬೇಕು ಎಂದು ತಾತ್ಪರ್ಯ. ಇಲ್ಲವಾದರೆ ವೇದ ಅಪ್ರಮಾಣವಾಗಬೇಕಾಗುವುದು. **ತಸ್ಮಾತ್** ಆದ್ದರಿಂದ **ವ್ಯವಹಾರಮಾರ್ಗಃ** ಲೌಕಿಕ ವೈದಿಕ ವ್ಯವಹಾರ ವಿಷಯವಾದ ಜೀವಕರ್ತೃತ್ವವು **ಸಮೂಲದೃಷ್ಟಃ** ಯುಕ್ತಿ ಸಹಿತ ಪ್ರತ್ಯಕ್ಷಾದಿ ಸಿದ್ಧವಾಗಿದೆ*. ಕಾರಣ ಅಂಗೀಕರಿಸಬೇಕು ಎಂದು ಭಾವ.

* ಆ ಯುಕ್ತಿಗಳು ಈ ಕೆಳಗಿನಂತಿವೆ

೧. ಜೀವಃ ಶ್ರಮವಾನ್ ಭರಣಗಮನಕರ್ತೃತ್ವಾತ್ ।

೨. ಜೀವಃ ಕರ್ತಾ ಶ್ರಮವತ್ತ್ವಾತ್

**ಯದಿ ಕರ್ತೃತ್ವಂ ನ ಸ್ಯಾತ್ ತರ್ಹಿ ಶ್ರಮೋಽಪಿ ನ ಸ್ಯಾತ್**

ಶ್ರುತಿಗಳಲ್ಲಿ ಜೀವರಿಗೆ ಕರ್ಮಗಳನ್ನು ವಿಧಾನಮಾಡುವುದರಿಂದ ಶ್ರುತಿವಿಧಾನಾನ್ಯಥಾನುಪಪತ್ತ್ಯಾ ಜೀವರಿಗೆ ಕರ್ತೃತ್ವವಿದೆ ಎಂದು ತಿಳಿಯುವುದು. ಕರ್ತೃತ್ವವಿಲ್ಲದಿದ್ದರೆ ಆ ವಿಧಾನವು ಅನುಪಪನ್ನವಾಗುವುದು. ಕಾರಣ ಜೀವರಿಗೆ ಕರ್ತೃತ್ವವಿದೆ ಎಂದು ಸಿದ್ಧಿಸುವುದು ಎಂದು ಭಾವ. ।।೨೨।।

ದೇಹಾಭಿಮಾನವಿಲ್ಲದ ನನಗೆ ದೇಹಧರ್ಮಗಳಾದ ಸ್ಥೌಲ್ಯಾದಿಗಳು ಚಿತ್ತವಿಕ್ಷೇಪಕರಗಳಲ್ಲ ಎಂದು ಹೇಳಿದ್ದನ್ನು ದೂಷಿಸುವನು

**ಸ್ಥಾಲ್ಯಗ್ನಿತಾಪಾತ್ಪಯಸೋ ಹಿ ತಾಪಸ್ತತ್ತಾಪತಸ್ತಂಡುಲಗರ್ಭರಂಧಿಃ ।**
**ದೇಹೇಂದ್ರಿಯಾಸ್ವಾಶಯಸನ್ನಿಕರ್ಷಾತ್ತತ್ಸಂಸೃತಿಃ ಪುರುಷಸ್ಯಾನುರೋಧಾತ್ ।।**

**ಸ್ಥಾಲ್ಯಗ್ನಿತಾಪಾತ್** ಪಾತ್ರೆಗೆ ಅಗ್ನಿಯ ಬಿಸಿ ತಾಕಿದರೆ **ಪಯಸಃ ತಾಪಃ** ಅದರಲ್ಲಿರುವ ನೀರಿಗೆ ತಾಕುವುದು **ತತ್ತಾಪತಃ** ನೀರು ಬಿಸಿಯಾಗುವುದರಿಂದ **ತಂಡುಲಗರ್ಭರಂಧಿಃ** ಅಕ್ಕಿಯ ಸಾರ ಭಾಗ ಬೇಯುವುದು. ಅಂದರೆ ಆಶ್ರಯತಾಪದಿಂದ ಆಶ್ರಿತತಾಪ ಹೇಗಾಗುವುದೋ **ತಥಾ** ಹಾಗೆ **ದೇಹ, ಇಂದ್ರಿಯ, ಅಸು** ಪ್ರಾಣಗಳು **ಆಶಯ** ಅಂತಃಕರಣ ಇವುಗಳ **ಸನ್ನಿಕರ್ಷಾತ್** ಸಂಬಂಧದಿಂದ ದೇಹೇಂದ್ರಿಯ ಧರ್ಮಗಳಾದ ಸ್ಥೌಲ್ಯಾದಿಗಳಿಂದ **ಪುರುಷಸ್ಯ** ದೇಹೇಂದ್ರಿಯಗಳಲ್ಲಿ

ಪ್ರವಿಷ್ಟನಾದ ಮನುಷ್ಯನಿಗೆ **ಸಂಸೃತಿಃ** ಮನೋವಿಕ್ಷೇಪ ರೂಪ ಸಂಸಾರವು **ಅನುರೋಧಾತ್** ಯೋಗ್ಯತೆ ಹಾಗೂ ಕರ್ಮಗಳ ಅನುಸಾರವಾಗಿ ಆಗುವುದು.

ಸ್ಥೂಲತೆ, ಕೃಶತೆ, ಜಡ್ಡು(ವ್ಯಾಧಿ), ಮುಪ್ಪು ಇವು ದೇಹ ಧರ್ಮಗಳು. ಇಂದ್ರಿಯ ಉಪರಮವೇ ನಿದ್ರೆಯು. ಹಸಿವು ನೀರಡಿಕೆಗಳು ಪ್ರಾಣ ಧರ್ಮಗಳು. ಆಧಿ (ಮನೋವ್ಯಥೆ), ಸಂಕಲ್ಪ ಮುಂತಾದವು ಅಂತಃಕರಣಧರ್ಮಗಳು. ಅವೆಲ್ಲವು ತಮಗೆ ಆಶ್ರಯವಾದ ದೇಹಾದಿಸಂಬಂಧದಿಂದ ಜೀವನಿಗೆ ದುಃಖಾದಿರೂಪ ಸಂಸಾರಕ್ಕೆ ಕಾರಣವಾಗುವುವು. ಆಧ್ಯಾತ್ಮಿಕಾದಿ ತಾಪದಿಂದ ದೇಹವು ತಪ್ತವಾದಾಗ ಇಂದ್ರಿಯಗಳಿಗೆ ತಾಪ. ಅದರಿಂದ ಪ್ರಾಣ ಮನಸ್ಸುಗಳಿಗೆ. ಅದರಿಂದ ಜೀವನಿಗೆ. ಹೀಗೆ ಪರಂಪರೆಯಾಗಿ ತಾಪವು ದಾರ್ಷ್ಟಾಂತಿಕದಲ್ಲಿಯೂ ವಿವಕ್ಷಿತವೆಂದು ಹೇಳುವರು.

## ಅಭಿಮಾನವೇ ತಾಪಕ್ಕೆ ಕಾರಣ

ಯದ್ಯಪಿ ಮೇಲೆ ತಿಳಿಸಿದ ದೇಹೇಂದ್ರಿಯಸಂಬಂಧಗಳು ಅಭಿಮಾನ ಇದ್ದ ಜೀವರಿಗೆ ಮಾತ್ರ ಸಂಸಾರಾಪಾದಕಗಳು ಅಭಿಮಾನಶೂನ್ಯನಾದ ನನಗೆ ಅಲ್ಲ ಎಂಬ ವಾಕ್ಯಕ್ಕೆ ಅಭಿಪ್ರಾಯ ತಿಳಿಯದೆ ಆಪಾತಾರ್ಥಕ್ಕೆ ಅನುಗುಣವಾಗಿ ನಿನಗೂ ದೇಹೇಂದ್ರಿಯ ಸಂಬಂಧವಿರುವುದರಿಂದ ಸಂಸಾರ ಅಪರಿಹಾರ್ಯ ಎಂದು ಹೇಳಿರುವನೆಂದು ತಿಳಿಯಬೇಕು. ॥೨೩॥

ಸ್ವಸ್ವಾಮಿಭಾವವು ಮನುಷ್ಯರಲ್ಲಿ ನಿಯತವಲ್ಲ ಮತ್ತು ಸ್ತಬ್ಧರಿಗೆ ಶಿಕ್ಷಣ ಪಿಷ್ಟಪೇಷಣ ಎಂದು ಹೇಳಿದ್ದಕ್ಕೆ ಉತ್ತರಿಸುವನು

**ಶಾಸ್ತಾಽಧಿಗೋಪ್ತಾ ನೃಪತಿಃ ಪ್ರಜಾನಾಂ**
**ಯಃ ಕಿಂಕರೋ ವೈ ನ ಪಿನಷ್ಟಿ ಪಿಷ್ಟಂ ।**
**ಸ್ವಧರ್ಮಮಾರಾಧನಮಚ್ಯುತಸ್ಯ**
**ಯದೀಹಮಾನೋ ವಿಜಹಾತ್ಯಘೌಘಮ್ ॥೨೪॥**

**ಯಃ** ಯಾವನು **ನೃಪತಿಃ** ಮನುಷ್ಯ ರಾಜನೋ ಅವನು **ಪ್ರಜಾನಾಂ** ತನ್ನ ಆಳ್ವಿಕೆಯ ಕಾಲದಲ್ಲಿ ಉನ್ಮತ್ತರಾದ ಪ್ರಜೆಗಳಿಗೆ **ಶಾಸ್ತಾ** ಶಾಸನೆ ಮಾಡುವವನು **ಅಧಿ ಗೋಪ್ತಾ** ಸಜ್ಜನರ ರಕ್ಷಕನು ಮತ್ತು **ಕಿಂಕರಃ** ಸೇವಕನೂ ಆಗುವನೋ ಅವನು ನ

 

**ಪಿಷ್ಟಂ ಪಿನಷ್ಟಿ** ಹಿಟ್ಟನ್ನು ಕುಟ್ಟಿದವನಲ್ಲ ಅಂದರೆ ಅವನ ಶಾಸನಾದಿಗಳು ವ್ಯರ್ಥವಲ್ಲ ಏಕಂದರೆ **ಯತ್** ಯಾವಕಾರಣ **ಅಚ್ಯುತಸ್ಯ ಆರಾಧನಂ ಸ್ವಧರ್ಮಂ ಈಹಮಾನಃ** ಶ್ರೀಹರಿಯ ಆರಾಧನರೂಪವಾದ ತನ್ನ ಧರ್ಮ ಮಾಡುವವನಾಗಿ **ಅಘೌಘಂ ವಿಜಹಾತಿ** ದುಷ್ಟರ ಶಾಸನ ಮಾಡದಿರುವುದರಿಂದ ಬರುವ ಪಾಪಸಮೂಹವನ್ನು ಕಳೆದುಕೊಳ್ಳುವನು.

ಆದ್ದರಿಂದ ಅನಿಯತ ಸ್ವಾಮಿತ್ವವಿದ್ದರೂ ರಾಜನು ಸ್ತಬ್ಧತೆ ಮುಂತಾದ ಸ್ವಭಾವದವರನ್ನು ಶಾಸನ ಮಾಡಲೇ ಬೇಕು. ಹಾಗೆ ಶಾಸನ ಮಾಡುವುದರಿಂದ ಪಾಪ ಬರುವುದಿಲ್ಲ. ಮಾಡದಿದ್ದರೆ ಪಾಪಬರುವುದು. ಅಷ್ಟೇ ಅಲ್ಲ ತನಗೆ ವಿಹಿತವಾದ ಪ್ರಜಾಶಿಕ್ಷಣಾದಿಗಳನ್ನು ಪಾಪ ಪರಿಹಾರಕ್ಕಾಗಿ ಮಾಡಲೇಬೇಕು. ।।೨೪।।

**ತನ್ಮೇ ಭವಾನ್ನರದೇವಾಭಿಮಾನ-**
**ಮದೇನ ತುಚ್ಛೀಕೃತಸತ್ತಮಸ್ಯ ।**
**ಕೃಷೀಷ್ಟ ಮೈತ್ರೀಂ ದೃಶಮಾರ್ತಬಂಧೋ**
**ಯಯಾ ತರೇಯಂ ಸದವಧ್ಯಾನಮಂಹಃ ।।೨೫।।**

**ತಸ್ಮಾತ್** ಈ ರೀತಿ ನೀನು ಹೇಳಿದ್ದು ನನಗೆ ವಿಪರೀತ ಕಾಣುವುದು. ನೀನಾದರೋ ಅಗಾಧವಾದ ಅಭಿಪ್ರಾಯವುಳ್ಳ ಜ್ಞಾನಿಯು. ಪ್ರಮಾಣ ಬಾಧಿತವಾದುದನ್ನು ಹೇಳಲಾರೆ. **ತತ್** ಆದಕಾರಣ **ನರದೇವಾಭಿಮಾನಮದೇನ** ನಾನು ರಾಜನೆಂಬ ಅಭಿಮಾನದಿಂದ ಬಂದ ಮದದಿಂದ **ತುಚ್ಛೀಕೃತಸತ್ತಮಸ್ಯ** ತಿರಸ್ಕರಿಸಲ್ಪಟ್ಟ ಸಜ್ಜನ ಶ್ರೇಷ್ಠನುಳ್ಳ ಅಂದರೆ ನಿನ್ನನು ತಿರಸ್ಕರಿಸಿದ **ಮೇ** ನನ್ನಲ್ಲಿ **ಮೈತ್ರೀಂ** ಸ್ನೇಹವನ್ನು **ಕೃಷೀಷ್ಟ** ಮಾಡು **ಹೇ ಆರ್ತಬಂಧೋ** ದುಃಖಿತರಿಗೆ ಬಂಧುವೇ **ಸದವಧ್ಯಾನಂ ಅಂಹಃ** ಸಜ್ಜನರಿಗೆ ಮಾಡಿದ ಅವಜ್ಞಾನ (ತಿರಸ್ಕಾರ) ನಿಮಿತ್ತವಾದ ಪಾಪವನ್ನು **ಯಯಾ** ಯಾವುದರಿಂದ **ತರೇಯಂ** ದಾಟುವೆನೋ(ಪರಿಹರಿಸಿಕೊಳ್ಳುವೆನೋ) **ದೃಶಂ** ಅಂತಹ ಹರಿಜ್ಞಾನವನ್ನು **ಕೃಷೀಷ್ಟ** ಮಾಡು (ಜ್ಞಾನಜನಕ ಉಪದೇಶವನ್ನು ಮಾಡು ಎಂದರ್ಥ). ।।೨೫।।

ನೀನು ಮಾಡಿದ ತಿರಸ್ಕಾರದಿಂದ ನನಗೆ ಯಾವ ವಿಕಾರವಾಗಿಲ್ಲ ಅಂದಮೇಲೆ ನಿನಗೆ ಪಾಪ ಪ್ರಸಕ್ತಿಯೇ ಇಲ್ಲ. ಯಾವುದರ ಪರಿಹಾರಕ್ಕೆ ಮೈತ್ರ್ಯಾದಿಗಳ ಪ್ರಾರ್ಥನೆ ಎಂದರೆ ಹೇಳುವರು

**ನ ವಿಕ್ರಿಯಾ ವಿಶ್ವಸುಹೃತ್ಸಖಸ್ಯ**
**ಸಾಮ್ಯೇನ ವೀತಾಭಿಮತೇಸ್ತವಾಪಿ ।**
**ಮಹದ್ವಿಮಾನಾತ್ ಸ್ವಕೃತಾದ್ಧಿಮಾದೃಗ್**
**ಧಕ್ಷ್ಯತ್ಯದೂರಾದಪಿ ಶೂಲಪಾಣಿಃ ॥೨೬॥**

**ಅಪಿ** ಯದ್ಯಪಿ **ವಿಶ್ವಸುಹೃತ್ ಸಖಸ್ಯ** ಪ್ರಪಂಚಕ್ಕೆ ಅನಿಮಿತ್ತೋಪಕಾರಕನಾದ ಶ್ರೀಹರಿಯೇ ಸಖನಾಗಿವುಳ್ಳ **ತವ** ನಿನಗೆ **ಸಾಮ್ಯೇನ** ಮಾನಾಪಮಾನಗಳಲ್ಲಿ ಸಮನಾಗಿರುವ **ವೀತಾಭಿಮತೇಃ** ಅಭಿಮಾನವಿಲ್ಲದಿರುವ **ತವ** ನಿನಗೆ **ವಿಕ್ರಿಯಾ** ಮನೋವಿಕಾರವು ನ ಇಲ್ಲ ಆದರೂ ಶ್ರೀಹರಿಯ ಅವಜ್ಞೆಯಿಂದ ಚಿತ್ತವಿಕಾರವಿಲ್ಲದಿದ್ದರೂ ಅವಮಾನ ಮಾಡುವವನಿಗೆ ಪಾಪದಿಂದ ದಾಹವಾಗುವುದು. ಅದರಂತೆ ನಾನು ಕೂಡ ನಿನ್ನ ಅವಮಾನ ಮಾಡುವುದರಿಂದ ಪಾಪಿಯು ದಗ್ಧನು ಆಗಿರುವೆ. ಏಕೆಂದರೆ ಕೈಮುತ್ಯ ಹೇಳುವರು **ಶೂಲಪಾಣಿಃ ಅಪಿ** ಸರ್ವಸಂಹಾರಕರಾದ ರುದ್ರದೇವರೂ ಸಹ **ಸ್ವಕೃತಾತ್** ತಾವು ಮಾಡಿದ **ಮಹದ್ವಿಮಾನಾತ್** ದೊಡ್ಡವರ ಅವಮಾನದಿಂದ **ಅದೂರಾತ್** ಶೀಘ್ರದಲ್ಲಿ **ಹಿ** ಯಾವ ಕಾರಣ **ಧಕ್ಷತಿ** ಸುಟ್ಟುಹೋಗುವರೋ ಅಂದಮೇಲೆ **ಮಾದೃಕ್** ನನ್ನಂತಹವನು **ಧಕ್ಷ್ಯತೀತಿ ಕಿಂ** ಮಹದವಜ್ಞೆಯಿಂದ ಸುಡುವನೆಂದೇನು ಹೇಳುವುದು?

**ರುದ್ರದೇವರು ಜಡಭರತನ ಅವಮಾನದಿಂದ ಸುಟ್ಟುಹೋಗುವರೇ?**

ಇಲ್ಲಿ **ಶೂಲಪಾಣಿಃ ಮಹದ್ವಿಮಾನಾತ್** ಅಂದರೆ ಪ್ರಕೃತ ಜಡಭರತನ ಅವಮಾನದಿಂದ ಎಂದರ್ಥ ತೋರುವುದು. ಕಾರಣ ವಿವಕ್ಷಿತ ಅರ್ಥ ಹೇಳುವರು

ತಾತ್ಪರ್ಯ - ಸ್ವತೋ ಮಹದವಜ್ಞಾನಾದ್ರುದ್ರೋऽಪ್ಯಾತ್ಮಾನಮಾದಹೇದಿತಿ ಚ ।

ತಾನು ಮಾಡಿದ ದೊಡ್ಡವರ ಅಪಮಾನದಿಂದ ರುದ್ರದೇವರೂ ಭಸ್ಮ ಆಗುವರು ಎಂದು ತಾತ್ಪರ್ಯವೇ ಹೊರತು ಜಡಭರತನ ಅಪಮಾನದಿಂದ ರುದ್ರದೇವರು ಸುಟ್ಟು ಹೋಗುವರು ಎಂದರ್ಥವಲ್ಲ.

**॥ ಇಲ್ಲಿಗೆ ೧೦ನೇ ಅಧ್ಯಾಯವು ಮುಗಿಯಿತು ॥**

★★★




# ಹತ್ತನೇ ಅಧ್ಯಾಯದ ಸಾರ

ಈ ಅಧ್ಯಾಯದಲ್ಲಿ ಜಡಭರತನ ಮತ್ತೊಂದು ಮಹಿಮೆಯನ್ನು ಹೇಳುವರು. ಸಿಂಧು, ಸೌವೀರ ದೇಶಗಳ ರಾಜನಾದ ರಹೂಗಣನು ಇಕ್ಷುಮತೀ ನದಿಯ ತೀರದ ಆಶ್ರಮವೊಂದರಲ್ಲಿ ವಾಸಿಸುತ್ತಿದ್ದ ಕಪಿಲ ಋಷಿಗಳನ್ನು ನೋಡಲು ಮೇನೆಯಲ್ಲಿ ಹೊರಟನು. ಅವನ ಪ್ರಧಾನ ಭಟನು ಮೇನೆಯನ್ನು ಹೊರಲು ಒಬ್ಬನಿಗಾಗಿ ಹುಡುಕುತ್ತಿದ್ದನು. ಅದೃಷ್ಟ ಪ್ರೇರಕ ಶ್ರೀಹರಿಯ ಇಚ್ಛೆಯಿಂದ ಈ ಭರತನು ಅವನ ಕಣ್ಣಿಗೆ ಬಿದ್ದನು. ದಪ್ಪನಾಗಿ ಯುವಕನಾಗಿ ದೃಢಾಂಗನಾಗಿದ್ದ ಈತನು ಕತ್ತೆಯಂತೆ ಭಾರ ಹೊರಲು ಸಮರ್ಥನೆಂದು ಬಗೆದು ಬಲಾತ್ಕಾರವಾಗಿ ಇವನನ್ನು ವಾಹಕರೊಂದಿಗೆ ಸೇರಿಸಿದನು. ಭರತನು ವಾಹಕನಾಗಲು ಯೋಗ್ಯನಾದವನಲ್ಲ. ಮಹಾಪ್ರಭಾವಶಾಲಿಯಾಗಿದ್ದನು. ಆದರೂ ಮೇನೆಯನ್ನು ಹೊತ್ತನು. ಇರುವೆ ಮುಂತಾದ ಕ್ರಿಮಿಗಳಿಗೆ ತೊಂದರೆಯಾಗದಂತೆ ಎರಡು ಹೆಜ್ಜೆಯಷ್ಟು ಪ್ರದೇಶವನ್ನು ನೋಡಿಕೊಂಡು ಹೆಜ್ಜೆ ಹಾಕುತ್ತಿದ್ದನು. ಮಿಕ್ಕವರ ಹೆಜ್ಜೆಗೆ ಇದು ಅನುಗುಣವಾಗಿರಲಿಲ್ಲ. ರಹೂಗಣನ ಮೇನೆಯು ಏರುಪೇರಾಯಿತು. ಒಳಗಿದ್ದ ರಾಜನು ಮೇನೆಯ ವಿಷಮಸ್ಥಿತಿಗೆ ವಾಹಕರ ವಿಷಮಗತಿಯೇ ಕಾರಣವೆಂದು ನಿಶ್ಚಯಿಸಿಕೊಂಡು ವಾಹಕರನ್ನು ಕುರಿತು 'ವಾಹಕರೇ! ಸರಿಯಾಗಿ ಹೆಜ್ಜೆ ಹಾಕಿರಿ ಏಕೆ ಹೀಗೆ ಮಾಡುತ್ತೀರಿ' ಎಂದು ಗದರಿಸಿದನು. ರಾಜನ ಬೆದರಿಕೆಯ ಮಾತುಗಳನ್ನು ಕೇಳಿ ಹಿಂದಿನ ವಾಹಕರು ತಮಗೆ ಶಿಕ್ಷೆಯಾಗುವುದೆಂದು ಹೆದರಿ 'ರಾಜನೇ! ನಾವೇನೂ ನಮ್ಮ ಕೆಲಸದಲ್ಲಿ ಉದಾಸೀನರಾಗಿಲ್ಲ. ನಿನ್ನ ನಿಯಮಕ್ಕನುಗುಣವಾಗಿ ಸರಿಯಾಗಿಯೇ ಹೋಗುತ್ತಿದ್ದೇವೆ. ನಮಗೇನೂ ಆಯಾಸವಾಗಿಲ್ಲ. ಈಗತಾನೇ ಹೊರಲು ನಿಯುಕ್ತನಾದ ಈತನು ನಮ್ಮಂತೆ ಹೆಜ್ಜೆ ಹಾಕುತ್ತಿಲ್ಲ. ಇವನೊಂದಿಗೆ

ಮೇನೆಯನ್ನು ಹೊರಲು ನಮಗೆ ಸಾಧ್ಯವಾಗುತ್ತಿಲ್ಲ' ಎಂದು ರಾಜನಿಗೆ ವಿಜ್ಞಾಪಿಸಿದರು. ಒಬ್ಬನ ಸಂಗದಿಂದ ಎಲ್ಲರಿಗೂ ದೋಷ ಬರಲು ಸಾಧ್ಯವೆಂಬುದು ಈಗ ನನ್ನ ಅನುಭವಕ್ಕೆ ಬಂದಂತಾಗಿದೆ ಎಂದು ತಿಳಿದ ರಹೂಗಣನು ಆ ವಾಹಕರ ದೈನ್ಯ ಮಾತುಗಳನ್ನು ಕೇಳಿದನು. ವೃದ್ಧರನ್ನು ಸೇವಿಸಿದ್ದವನೇ ಇವನು ಆದರೂ ಹೊಸದಾಗಿ ಹೊರುತ್ತಿದ್ದ ಆ ಬ್ರಾಹ್ಮಣನನ್ನು ದುಷ್ಟನೆಂದೇ ಬಗೆದನು. ರಾಜರಿಗೆ ಸಹಜವಾದ ಸ್ವಭಾವದಿಂದ ಆತನಿಗೆ ತಾನು ಸಿಂಧು ದೇಶದ ಅಧಿಪತಿಯೆಂಬ ಅಹಂಕಾರವು ಪೂರ್ಣವಾಗಿತ್ತು. ಆದಕ್ಕೆ ಪರವಶನಾದ ಆತನಿಗೆ ರಾಜಸ ಸ್ವಭಾವವೇ ಬೆಳೆಯಿತು. ಆತನ ಬುದ್ಧಿಯು ರಜಸ್ತಮೋಗುಣಗಳಿಂದ ಆವೃತವಾಯಿತು. ತೇಜಸ್ಸು ಪ್ರಕಟವಾಗದಂತೆ ಬೂದಿ ಮುಚ್ಚಿದ ಕೆಂಡದಂತಿದ್ದ ಬ್ರಹ್ಮವರ್ಚಸ್ವೀಯಾದ ಭರತನನ್ನು ಅಣಕದಿಂದ ಆಕ್ಷೇಪಿಸಲಾರಂಭಿಸಿದನು. 'ಸಹೋದರ, ಸ್ನೇಹಿತ, ತುಂಬ ಕಷ್ಟ, ಅಯ್ಯೋ! ನೀನು ಬಹಳ ಶ್ರಾಂತನಾಗಿರುವೆ. ಇಷ್ಟೊಂದು ದೀರ್ಘಮಾರ್ಗದುದ್ದಕ್ಕೂ ನೀನೊಬ್ಬನೇ ಮೇನೆಯನ್ನು ಬಹುಕಾಲ ಹೊತ್ತಿರುವೆ. ಬಹು ದಪ್ಪನಲ್ಲ . ಅತಿದೃಢಾಂಗನಲ್ಲ. ಮುಪ್ಪಿನ ಬಾಧೆಗೆ ಒಳಗಾಗಿರುವೆ. ಈ ಉಳಿದ ವಾಹಕರು ಇದಕ್ಕೆ ವಿರುದ್ಧವಾಗಿರುವರು ಎಂದು ವಿಪರೀತಾರ್ಥದಲ್ಲಿ ನುಡಿದನು. ಇಷ್ಟೊಂದು ನಿಷ್ಠುರವಾಗಿ ಆಕ್ಷಿಪ್ತನಾದರೂ ಭರತನು ಏನೊಂದೂ ಉತ್ತರ ಕೊಡದೆ ಮೇನೆಯನ್ನು ಹೊರುತ್ತಲೇ ಇದ್ದನು. ಅವನಿಗೆ ಹೇಯವಾದ ದೇಹದಲ್ಲಿ ನಾನು, ನನ್ನದು ಎಂಬ ಅಭಿಮಾನವೇ ಇರಲಿಲ್ಲ. ಆ ದೇಹವು ಅವನ ಕೊನೆಯ ಭೌತಿಕ ದೇಹವಾಗಿತ್ತು. ಶ್ರೀಹರಿಯ ಇಚ್ಛೆಯಿಂದ ಪ್ರೇರಿತವಾದ ಪ್ರಕೃತಿ ನಿರ್ಮಿತಗಳಾದ ಪಂಚಭೂತಗಳು, ಸತ್ವಾದಿಗುಣಗಳು, ಪುಣ್ಯಾಪಾಪಾತ್ಮಕಕರ್ಮಗಳು ಮತ್ತು ಅಂತಃಕರಣ ಇವುಗಳ ಸಮೂಹವೇ ಆ ದೇಹವೆಂದೂ, ಆದ್ದರಿಂದಲೇ ಅನಿತ್ಯವೆಂದೂ ಆ ಕಾರಣದಿಂದಲೇ ಹೇಯವೆಂದೂ ಅವನು ಅರಿತಿದ್ದನು. ಅವನ ಮನಸ್ಸು ಶ್ರೀಹರಿಯಲ್ಲೇ ಆಸಕ್ತವಾಗಿತ್ತು. ಮತ್ತೊಮ್ಮೆ ಮೇನೆ ಮೇಲೆಕೆಳಗಾಯಿತು. ರಾಜನಿಗೆ ಕೋಪವು ಹೆಚ್ಚಿತು. 'ಎಲೋ! ನೀನು ಬದುಕಿದ್ದೂ ಸತ್ತಿರುವಿ ಏನು? ರಾಜನಾದ ನನ್ನನ್ನು ತುಚ್ಛೀಕರಿಸಿರುವೆ. ನನ್ನ ಅಪ್ಪಣೆಯನ್ನು ಮೀರಿ ನಡೆಯುತ್ತಿರುವೆ. ದಂಡಧಾರಿಯಾದ ಯಮನು ಜನರನ್ನು ಶಿಕ್ಷಿಸುವಂತೆ ನಿನ್ನನ್ನು ನಾನು ಶಿಕ್ಷಿಸುತ್ತೇನೆ. ಆಗ ನೀನು ನಿನ್ನ ಮುಗ್ಧತೆಯನ್ನು ಬಿಡುವಿ' ಎಂದು ಹೂಂಕರಿಸಿದನು. ರಹೂಗಣರಾಜನ ಅಸಂಬದ್ಧ ಪ್ರಲಾಪವನ್ನು ಆ ಬ್ರಾಹ್ಮಣನು ಕೇಳಿದನು. ನಾನೇ ರಾಜನೆಂಬ ಅಭಿಮಾನ ತುಂಬಿದ

 

ಎಂದು ತಿಳಿದನು. ರಜಸ್ತಮೋಗುಣಯುಕ್ತನಾಗಿ ಮದದಿಂದ ಆ ರಾಜನು ಆ ಕಾಲದ ಭಗವದ್ಭಕ್ತರಲ್ಲಿ ಉತ್ತಮನಾದ ಭರತನನ್ನು ಹೀಯಾಳಿಸಿದ್ದನು. ತಾನೇ ಪಂಡಿತನೆಂದು ಗರ್ವಗೂಂಡಿದ್ದನು. ಯೋಗೇಶ್ವರರ ವ್ಯವಹಾರದಲ್ಲಿ ಆತನಿಗೆ ಅಷ್ಟೊಂದು ಪರಿಚಯವಿರಲಿಲ್ಲ. ಭರತನಾದರೊ ಬ್ರಹ್ಮಜ್ಞಾನಿಯು. ಶ್ರೀಹರಿಯಲ್ಲಿ ನಿಷ್ಠನು. ಎಲ್ಲ ಪ್ರಾಣಿಗಳ ಸ್ನೇಹಿತರಾದ ವೈಷ್ಣವರಲ್ಲಿಯೇ ಮನಸ್ಸುಳ್ಳವನು. ಅವನಿಗೆ ಸ್ವಲ್ಪವಾದರೂ ಅಹಂಕಾರವಿರಲಿಲ್ಲ. ಸ್ವಾಭಾವಿಕ ಮಂದಹಾಸದಿಂದ ವಿಕಾಸಗೊಂಡ ಮುಖವುಳ್ಳವನಾಗಿ ಆ ರಾಜನ ಮಾತುಗಳಿಗೆ ತಕ್ಕ ಉತ್ತರ ಕೊಟ್ಟನು. 'ರಾಜನೇ! ನೀನು ವೀರ. ವಿಚಾರ ಮಾಡಿ ನೋಡಿದರೆ ನಾನು ಹೊರುವವನಲ್ಲ. ನನಗೆ ಭಾರವೂ ಇಲ್ಲ. ಮಾರ್ಗವೂ ಇಲ್ಲ. ಎಲ್ಲಕ್ಕೂ ಶ್ರೀಹರಿಯೇ ಸ್ವತಂತ್ರಕರ್ತನು. ಅಸ್ವತಂತ್ರ ಕರ್ತೃತ್ವವು ನಮ್ಮಲ್ಲಿದೆಯಾದರೂ ಇಲ್ಲದಂತೆಯೇ ಸರಿ. ಹೀಗಿರುವಾಗ ನೀನು ಹೇಳಿದ ಬಹುದೂರ ಹೊತ್ತಿರುವೆ ಎಂಬ ಆಕ್ಷೇಪವು ಹೇಗೆ ತಾನೇ ಆಕ್ಷೇಪವಾದೀತು? ಅದು ಸತ್ಯವೇ. ಶ್ರೀಹರಿಯು ಭಾರ ಹೊರುವವ, ಸ್ವತಂತ್ರ ಕರ್ತೃನೆಂಬುದು ಶ್ರುತಿಸಿದ್ಧವಾದವಿಷಯವೇ. ಪಂಚಭೂತಗಳಿಂದ ಆದ ದೇಹವು ಪರಿಣಾಮಹೊಂದುವ ಸ್ವಭಾವವುಳ್ಳದ್ದಾದ್ದರಿಂದ ದಪ್ಪನೆಂಬ ಮಾತನ್ನು ಜ್ಞಾನಿಗಳು ಒಪ್ಪುವುದಿಲ್ಲ. ಚೇತನನಾದರೂ ಪರಿಣಾಮವಿಲ್ಲದವನು. ಆದ್ದರಿಂದ ದಪ್ಪ, ಸಣ್ಣ ಆಗಲಾರನೆಂದು ಭಾವ. ದಪ್ಪ, ಕೃಶ, ಶರೀರವ್ಯಾಧಿಗಳು, ಹಸಿವು, ಬಾಯಾರಿಕೆ, ಭಯ, ಕಲಹ, ಆಸೆ, ಮುಪ್ಪು, ನಿದ್ರೆ, ಆಲಸ್ಯ, ಕೋಪ, ಅಹಂಕಾರ, ಮದ ಇವೆಲ್ಲವೂ ದೇಹಾಭಿಮಾನವುಳ್ಳವನಿಗೆ ಇರುವವು. ದೇಹಾಭಿಮಾನವಿಲ್ಲದ ನನಗೆ ಇವು ಇಲ್ಲ. ರಾಜನೇ! ಉತ್ಪತ್ತಿ ವಿನಾಶವುಳ್ಳ, ಕ್ಷಣಕ್ಷಣಕ್ಕೂ ವಿಕಾರ ಹೊಂದುವ ಜಡವಾದ ದೇಹಕ್ಕೆ ಜೀವನ್ಮೃತವೆಂಬ ವ್ಯವಹಾರವು ನಿಯಮದಿಂದ ಕಂಡು ಬಂದಿದೆ (ಪ್ರಾಣ ಸಂಯೋಗ ವಿದ್ದಾಗ ಜೀವತ್, ಇಲ್ಲದಾಗ ಮೃತ ಎಂದು ವ್ಯವಹಾರವಿರುವುದು). ಚೇತನನಾದ ನನಗೆ ಈ ಅವಸ್ಥೆಗಳಿಲ್ಲದ್ದರಿಂದ ಜೀವನ್ಮೃತವೆಂಬ ವ್ಯವಹಾರವಿಲ್ಲ. ಇನ್ನು ನಾನು ರಾಜ ನೀನು ಭೃತ್ಯ ಎಂಬುದು ಮುಖ್ಯ ನಿಯತ ಮತ್ತು ಸತ್ಯವಾದುದು ಶ್ರೀಹರಿಯಲ್ಲಿ ಮಾತ್ರ. ಆದ್ದರಿಂದಲೇ ಶ್ರೀಹರಿಯು ಸ್ವಾಮಿ ಎಂಬ ಉಪಾಸನೆಯು ಸಂಧ್ಯೋಪಾಸನೆಯಂತೆ ವಿಹಿತವಾಗಿದೆ. ನಿನ್ನಲ್ಲಿರುವ ಸ್ವಾಮಿತ್ವವು ಅನಿಯತವಾದುದರಿಂದ ನಿನಗೆ ಶಾಸನ ಮಾಡುವ ಯೋಗ್ಯತೆ ಇಲ್ಲ. ರುದ್ರಾದಿಗಳಲ್ಲಿರುವ ಜಗನ್ನಿಯಾಮಕತ್ವವು ಮುಖ್ಯವೆನ್ನಲೂ

ಅವಕಾಶವೇ ಕಾಣುತ್ತಿಲ್ಲ. ಅವರಲ್ಲಿರುವ ವ್ಯವಹಾರವು ಅಜ್ಞಜನರ ರೂಢಿಯೇ ಹೊರತು ಮುಖ್ಯವಾದುದಲ್ಲ. ದೇವತೆಗಳಲ್ಲಿರುವ ಸ್ವಾಮಿತ್ವವು ಶ್ರೀಹರಿಯಿಂದ ನಿಯತವಾದುದರಿಂದ ಅಮುಖ್ಯವಾದದ್ದೇ. ನಿನ್ನನ್ನು ಸಿಂಧುದೇಶದ ರಾಜನೆಂದು ಕರೆಯುತ್ತಿರುವ ವ್ಯವಹಾರವೂ ಅಜ್ಞಜನರದ್ದೇ. ಆದ್ದರಿಂದ ಸ್ವಾಮಿತ್ವ ಶ್ರೀಹರಿಯಲ್ಲಿ ಮುಖ್ಯ. ದೇವತೆಗಳಲ್ಲಿ ತಾರತಮ್ಯಾನುಗುಣವಾಗಿ ಅಮುಖ್ಯ. ಆದರೆ ನಿಯತ. ಮನುಷ್ಯರಲ್ಲಿ ಅದು ವ್ಯತ್ಯಾಸವಾಗುತ್ತಿರುವುದು ಕಾರಣ ಅಮುಖ್ಯ ಅನಿಯತ. ಆದ್ದರಿಂದ ಸ್ವಾಮಿ ಯಾರು? ಅವನಿಂದ ಶಾಸನಕ್ಕೆ ಅರ್ಹವಾದ ವಸ್ತುವಾದರೂ ಯಾವುದು? ಕರ್ಮವಶದಿಂದ ಇಂದು ಭೃತ್ಯನೆಂದು ಒಪ್ಪಿಕೋ ಎನ್ನುವದಾದರೆ ನಿನಗಾಗಿ ಏನು ಮಾಡಲಿ ಹೇಳು ಯಥಾಶಕ್ತಿ ಮಾಡುವೆನು. ವೀರನೇ! ಉನ್ಮತ್ತನಂತೆ ಜಡನಂತೆ ನಾನು ಸ್ಥಿತಿಯನ್ನು ಹೊಂದಿರುವೆನು. ಸ್ವತಂತ್ರನಾದ ಶ್ರೀಹರಿಯಲ್ಲೇ ಸ್ಥಿತನಾಗಿರುವೆನು. ನನಗೆ ನಿನ್ನ ಚಿಕಿತ್ಸೆ (ಶಿಕ್ಷೆ)ಯಿಂದ ಏನಾದೀತು? ನಿನ್ನ ನಿಷ್ಠುರ ಮಾತುಗಳಿಂದ ಎಷ್ಟು ಮಾತ್ರ ಪ್ರಯೋಜನವಾದೀತು? ಸ್ವಾಭಾವಿಕವಾಗಿ ಸ್ತಬ್ಧನು, ಪ್ರಮತ್ತನೂ ಆಗಿರುವ ನನಗೆ ಹಿಟ್ಟನ್ನು ಕುಟ್ಟಿದಂತೆ ನಿನ್ನ ಚಿಕಿತ್ಸೆ ನಿಷ್ಪ್ರಯೋಜಕ' ಎಂದು ಆ ಬ್ರಾಹ್ಮಣನು ರಾಜನನ್ನು ಕುರಿತು ಹೇಳಿದ್ದನ್ನು ಅನುವಾದ ಮಾಡುವ ರೀತಿಯಲ್ಲಿ ಪ್ರತ್ಯುತ್ತರ ನೀಡಿದನು. ಅವನ ಮನಸ್ಸು ಸ್ವಾಭಾವಿಕವಾಗಿ ಶ್ರೀಹರಿಯ ಸಮೀಪದಲ್ಲಿಯೇ ಇರುತ್ತಿತ್ತು.

ಅವನಿಗೆ ದೇಹಾಭಿಮಾನವಿರಲಿಲ್ಲ. ಶ್ರೀಹರಿಯ ಮನನಶೀಲರಲ್ಲಿ ಅವನು ಉತ್ತಮನು. ಅವನ ಕರ್ಮವು ಮುಂದಿನ ದೇಹಕ್ಕೆ ಕಾರಣವಾಗದಂತೆ ಮುಗಿದಿತ್ತು. ಅದೇ ಅವನ ಕೊನೆಯ ಭೌತಿಕ ದೇಹ. ಅದಕ್ಕೆ ಕಾರಣವಾದ ಪ್ರಾರಬ್ಧ ಕರ್ಮವನ್ನು ಅನುಭವಿಸಿ ಕಳೆದು ಕೊಳ್ಳುವುದರಲ್ಲಿದ್ದನು. ಈ ದೇಹಸಂಬಂಧಿಯಾದ ಸುಖದುಃಖಗಳ ಪರಿವೇ ಅವನಿಗಿರಲಿಲ್ಲ. ಹಿಂದಿನಂತೆಯೇ ಮತ್ತೆ ರಾಜನ ಮೇನೆಯನ್ನು ಹೊತ್ತನು. ಪರೀಕ್ಷಿದ್ರಾಜನೇ! ಸಿಂಧುಸೌವೀರಾಧಿಪತಿಯಾದ ರಹೂಗಣನು ಒಳ್ಳೆಯ ಶ್ರದ್ಧಾವಂತ. ತತ್ತ್ವ ವಿಚಾರದಲ್ಲಿ ಆತನಿಗಿರುವ ಅಧಿಕಾರವು ವ್ಯಕ್ತವಾಗಿದ್ದಿತು. ಉಪದೇಶಿಸಿದ ಜ್ಞಾನವನ್ನು ಗ್ರಹಿಸುವ ಸಾಮರ್ಥ್ಯವನ್ನು ಪಡೆದಿದ್ದನು. ಆ ಬ್ರಾಹ್ಮಣನ ಮಾತನ್ನು ಮನಃ ಪೂರ್ವಕ ಕೇಳಿದನು. ಅದು ಅನೇಕ ಯೋಗ ಶಾಸ್ತ್ರಸಿದ್ಧವಾದ ಮಾತಾಗಿತ್ತು. ಅಹಂಕಾರ ಮಮಕಾರ ರೂಪ ಬಂಧವನ್ನು ಹೋಗಲಾಡಿಸುವಂತಹದಾಗಿತ್ತು. ರಾಜನು ಕೂಡಲೇ ಮೇನೆಯಿಂದ ಕೆಳಗಿಳಿದು ಆ

ಬ್ರಾಹ್ಮಣನ ಪಾದಕ್ಕೆರಗಿ ಕ್ಷಮೆ ಕೇಳಿದನು. ಅವನಿಗೆ ತಾನು ರಾಜನೆಂಬ ಅಹಂಕಾರ ಬಿಟ್ಟು ಹೋಗಿತ್ತು. ತಾವು ಯಾರಿಗೂ ಗೊತ್ತಾಗದಂತೆ ಸಂಚರಿಸುತ್ತಿರುವಿರಿ. ತಾವು ಯಾವ ಜಾತಿಯವರು? ಬ್ರಾಹ್ಮಣರ ಚಿನ್ಹೆಯಾದ ಯಜ್ಞೋಪವೀತ ಧರಿಸಿರುವಿರಿ. ತಾವು ಯಾವ ಯೋಗೀಂದ್ರರು? ಯಾವ ಯೋಗೀಂದ್ರರ ವಂಶದಲ್ಲಿ ಜನಿಸಿದವರು? ಈ ದೇಶಕ್ಕೆ ಬಂದ ಕಾರಣವೇನು? ನಮ್ಮ ಕ್ಷೇಮಕ್ಕಾಗಿಯೇ ಬಂದಿರುವಿರಾದರೆ ತಾವು ಆ ಶುದ್ಧರಾದ ಕಪಿಲರೇ ಅಥವಾ ಅಲ್ಲವೇ? ಸ್ವಾಮೀ! ನಾನು ಇಂದ್ರನ ವಜ್ರಾಯುಧಕ್ಕಾಗಲಿ, ಮುಕ್ಕಣ್ಣನ ತ್ರಿಶೂಲಕ್ಕಾಗಲಿ, ಯಮನ ದಂಡಕ್ಕಾಗಲಿ, ಅಗ್ನಿ ಸೂರ್ಯ, ಚಂದ್ರ, ವಾಯು, ಕುಬೇರರ ಅಸ್ತ್ರಗಳಿಗಾಗಲಿ ಹೆದರುವುದಿಲ್ಲ. ಬ್ರಾಹ್ಮಣ ವಂಶಕ್ಕೆ ಮಾಡಿದ ಅಪರಾಧದಿಂದ ಬಹಳ ಹೆದರುತ್ತೇನೆ. ಆದ್ದರಿಂದ ನನಗೆ ಉತ್ತರ ಕೊಡಿ. ತಾವು ಜಡರಂತೆ ಸಂಗರಹಿತರು. ನಿಮ್ಮ ವಿಶಿಷ್ಟ ಜ್ಞಾನದ ಸಾಮರ್ಥ್ಯವು ಅತ್ಯಂತ ಗೂಢವಾಗಿದೆ. ನಮ್ಮಂತಹವರಿಗೆ ತಿಳಿಯಲಾಗದವರು ತಾವು. ಸಾಧುಗಳೇ! ತಾವು ಹೀಗೆ ಸಂಚರಿಸುತ್ತಿರುವಿರಿ. ತಮ್ಮ ಮಾತುಗಳು ಅಧ್ಯಾತ್ಮ ವಿಷಯಗಳಿಂದ ತುಂಬಿವೆ. ಅವುಗಳನ್ನು ಬಿಡಿಸಿ ತಿಳಿಯಲು ನಮ್ಮ ಮನಸ್ಸು ಸಮರ್ಥವಾಗಿಲ್ಲ. ನಾನಾದರೊ ಗುರುಗಳಾದ ಕಪಿಲರನ್ನು ಕೇಳಿ ತಿಳಿಯುವುದಕ್ಕೆ ಹೊರಟಿದ್ದೇನೆ. ಅವರು ಜ್ಞಾನ ಪ್ರವರ್ತಿಸಲು ಅವತರಿಸಿದವರು. ಸಾಕ್ಷಾತ್ ಹರಿಯ ಜ್ಞಾನರೂಪ ಅಂಶರು. ಆತ್ಮತತ್ತ್ವಜ್ಞಾನಿಗಳಾದ ಮುನಿಗಳಿಗೆ ಗುರುಗಳು. ಈ ಸಂಸಾರದಲ್ಲಿ ದುಃಖಪಡುತ್ತಿರುವವರಿಗೆ ರಕ್ಷಕವಾದುದು ಯಾವುದು ಎಂದು ತಿಳಿಯಲು ಹೊರಟಿರುವೆನು. ಆ ಕಪಿಲ ಋಷಿಗಳೇ ಆದ ತಾವು ಸಾಧು ಅಸಾಧು ಜನರನ್ನು ಪರೀಕ್ಷಿಸುವುದಕ್ಕಾಗಿ ಲಕ್ಷಣಗಳನ್ನು ಮರೆಮಾಡಿಕೊಂಡು ಸಂಚರಿಸುತ್ತಿರುವಿರೇನು? ಸಂಸಾರದಲ್ಲಿಯೇ ಆಸಕ್ತನು, ಆದ್ದರಿಂದಲೇ ಹಿರಿಯರನ್ನು ಅರಿಯಲು ಅಸಮರ್ಥನು ಆದ ನಾನು ಯೋಗೀಶ್ವರರ ಪರಿಸ್ಥಿತಿಯನ್ನು ಹೇಗೆ ತಾನೇ ತಿಳಿಯಬಲ್ಲೆ? ಭಾರವನ್ನು ಹೊರುವ, ದಾರಿಯನ್ನು ನಡೆವ ನನಗೆ ಹೊರುವುದರಿಂದ ಭಾರವು ಕ್ರಿಯೆಯಿಂದ ಶ್ರಮವೂ ಸಾಕ್ಷಿಸಿದ್ಧವಾಗಿದೆ. ಅದರಂತೆ ತಮಗೂ ಅವು ಇವೆಯೆಂದು ಕ್ರಿಯಾ ಕಾಣುವ ಈ ಕಾಲದಲ್ಲಿ ನಾನು ಊಹಿಸಿದ್ದೇನೆ. ಇದು ಸರ್ವಾನುಭವಸಿದ್ಧ. ನೀರನ್ನು ತರುವ ತಂಬಿಗೆ ಮೊದಲಾದ ಪದಾರ್ಥಗಳು, ಕ್ರಿಯೆಗಳು ಶ್ರಮಜನಕಗಳೆಂದು ಕೇಳಿಬಂದಿದೆ. ಇವು ಸತ್ಯಗಳಾದ್ದರಿಂದ ಬೇಡ ಬೇಕು ಎಂಬ ವ್ಯವಹಾರ ಪದ್ಧತಿಯು ಪ್ರಾಮಾಣಿಕವೆಂದು ಸಾಕ್ಷಿಸಿದ್ಧ. ಇದರಂತೆ ಲೌಕಿಕ ವೈದಿಕ ವ್ಯವಹಾರ ಮಾರ್ಗವು

ಅದಕ್ಕೆ ಬೇಕಾದ ಜೀವ ಕರ್ತೃತ್ವವು ಯುಕ್ತಿಯುಕ್ತ ಪ್ರತ್ಯಕ್ಷಸಿದ್ಧ. ಅಗ್ನಿಯ ಕಾವಿನಿಂದ ಪಾತ್ರೆಯು ಕಾದು ಅದರಿಂದ ಪಾತ್ರೆಯೊಳಗಿನ ನೀರು ಅದರಿಂದ ನೀರಿನಲ್ಲಿರುವ ಅಕ್ಕಿ ಸಾರಾಂಶ ಹೀಗೆ ಪರಂಪರೆಯಿಂದ ಕಾವೇರಿ ಅನ್ನವಾಗುವಂತೆ ದೇಹ, ಇಂದ್ರಿಯ, ಪ್ರಾಣ, ಅಂತಃಕರಣ ಇವುಗಳ ಸಂಯೋಗದಿಂದ ಸ್ಥೌಲ್ಯ ಮೊದಲಾದ ಸಂಸಾರವು ಪುರುಷನಿಗೆ ಅಭಿಮಾನ ಮತ್ತು ಕರ್ಮವನ್ನು ಅನುಸರಿಸಿ ಆಗುವುದು. ರಾಜನು ದುಷ್ಟಶಿಕ್ಷಕನೂ ಶಿಷ್ಟರ ರಕ್ಷಕನೂ, ದೇವ ಬ್ರಾಹ್ಮಣ ಮತ್ತು ಮುನಿಗಳ ಕಿಂಕರನೂ, ಸ್ವಧರ್ಮದ ಆಚರಣೆ ಶ್ರೀಹರಿಯ ಆರಾಧನೆ ಎಂದು ತಿಳಿದು ಮಾಡುವವನೂ ಆಗಬೇಕು. ಅವನು ಮಾಡುವ ಕೆಲಸವು ಪಿಷ್ಟಪೇಷಣವಲ್ಲ. ಕರ್ತವ್ಯನಿರ್ವಹಣೆಯಿಂದ ಅವನು ದುಃಖ ಸಮೂಹಾತ್ಮಕ ಸಂಸಾರವನ್ನೇ ಕಳೆದುಕೊಂಡು ಮುಕ್ತನಾಗುವನು. ಹೀಗೆ ನನ್ನ ಅಭಿಪ್ರಾಯ ತಮ್ಮ ಅಭಿಪ್ರಾಯಕ್ಕಿಂತ ವಿರುದ್ಧವಾದುದು. ಜ್ಞಾನಿಗಳಾದ್ದರಿಂದ ತಾವು ಹೇಳುವುದೇ ಸರಿ. ರಾಜನೆಂಬ ಬಹುದುರಭಿಮಾನದಿಂದ ಸಜ್ಜನೋತ್ತಮರಾದ ತಮ್ಮನ್ನು ನಾನು ತಿರಸ್ಕರಿಸಿದೆ. ದುಃಖಿತರಿಗೆ ಜ್ಞಾನವನ್ನು ಕೊಟ್ಟು ರಕ್ಷಿಸುವ ಬಂಧುಗಳು ತಾವು. ನನ್ನಲ್ಲಿ ಸ್ನೇಹ ಮಾಡಿರಿ. ಶ್ರೀಹರಿಜ್ಞಾನವನ್ನು ಬೆಳಗಿರಿ. ಅದರಿಂದ ನಾನು ಸಜ್ಜನ ತಿರಸ್ಕಾರದಿಂದ ಬಂದ ಪಾಪವನ್ನು ಕಳೆದುಕೊಳ್ಳುವನು. ತಾವು ಸರ್ವಸುಹೃತ್ತಾದ ಶ್ರೀಹರಿಯನ್ನೇ ಸ್ನೇಹಿತನನ್ನಾಗಿ ಹೊಂದಿರುವಿರಿ. ತಮಗೆ ದೇಹಾಭಿಮಾನವಿಲ್ಲ. ಮಾನಾಪಮಾನಗಳು ಶ್ರೀಹರಿಯ ಅಧೀನಗಳೆಂದು ತಿಳಿದ ತಮಗೆ ಅವುಗಳಿಂದ ಹಿಗ್ಗುಕುಗ್ಗುಗಳಿಲ್ಲ. ಅಂದಮೇಲೆ ತಮಗೆ ನನ್ನ ತಿರಸ್ಕಾರದಿಂದ ಮನೋವಿಕಾರವೂ ಸಂಭಾವಿತವಲ್ಲ. ಆದರೂ ನಾನು ಮಾಡಿದ ಈ ಮಹಾತಿರಸ್ಕಾರವು ನನ್ನನ್ನು ಕೂಡಲೇ ಸುಡುವುದು. ಹೆಚ್ಚೇನು? ಉತ್ತಮರಾದ ರುದ್ರ ದೇವರೂ ತಮಗಿಂತ ಉತ್ತಮರಲ್ಲಿ ಮಾಡಿದ ತಿರಸ್ಕಾರದಿಂದ ಕೂಡಲೇ ತಮ್ಮನ್ನು ಸುಟ್ಟುಕೊಳ್ಳುವರು. ಅಂದಮೇಲೆ ನನ್ನ ಪಾಡೇನು? ಎಂದು ರಾಜನು ಬಿನ್ನವಿಸಿಕೊಂಡನು ಎಂದು ಭಾವ.

II ★★★II




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಏಕಾದಶೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಪಶ್ಚಾತ್ತಾಪ ಬುದ್ಧಿಯಿಂದ ರಹೂಗಣನು ಜಡಭರತನಿಗೆ ಶರಣಾದಾಗ ಒಳ್ಳೆ ತತ್ವಗಳನ್ನು ಕೇಳಬೇಕು, ತಿಳಿಯಬೇಕೆಂಬ ಉತ್ಸಾಹವುಳ್ಳ ರಾಜನಿಗೆ ಜಡಭರತನು ಸತ್ತತ್ತ್ವೋಪದೇಶ ಮಾಡುವುದನ್ನು ಇಲ್ಲಿ ಹೇಳುವರು. ತನ್ನ ಪಾದಗಳಿಗೆರಗಿದ ರಹೂಗಣನ ಉದ್ಧಾರಕ್ಕಾಗಿ ಜಡಭರತನು ಮಾಡಿದ ದಾರುಣವಾದ ಸಂಸಾರ ಸ್ವರೂಪ ನಿರೂಪಣೆ ಮತ್ತು ಸಂಸಾರ ನಿವರ್ತಕ ಸಾಧನಗಳ ವರ್ಣನೆಯನ್ನು ಈ ಅಧ್ಯಾಯದಲ್ಲಿ ಮಾಡುವರು.

### ಜಡಭರತನ ತತ್ತ್ವೋಪದೇಶ

ಮೊದಲಿಗೆ ರಾಜನಿಗೆ ತತ್ತ್ವಗ್ರಹಣ ಮಾಡಲು, ಪ್ರತಿಬಂಧಕವಾದ ಅಹಂಕಾರಾದಿ ಅಭಿಮಾನಗಳನ್ನು ನಿರಾಕರಿಸಲು, ದಯೆಯಿಂದ ತತ್ತ್ವೋಪದೇಶ ಮಾಡಲು ಮೊದಲಿಗೆ ಅವನು ಹೇಳಿದ್ದನ್ನು ದೂಷಿಸುವನು

**ಬ್ರಾಹ್ಮಣ ಉವಾಚ-**

**ಅಕೋವಿದಃ ಕೋವಿದವಾದವಾದಾನ್ವದಸ್ಯಥೋ ನಾತಿವಿದಾಂ ವರಿಷ್ಠಃ ।**
**ನ ಸೂರಯೋ ಹಿ ವ್ಯವಹಾರಮೇನಂ ತತ್ತ್ವಾವಮರ್ಶೇನ ಸಹಾಮನಂತಿ ॥**

**ಅಕೋವಿದಃ** ನೀನು ಪಂಡಿತನಲ್ಲ **ಕೋವಿದವಾದವಾದಾನ್ ವದಸಿ** ಪಂಡಿತರ ಮಾತಿನಂತೆ ತೋರುವ ಮಾತುಗಳನ್ನಾಡುವಿ **ಅಥೋ** ಆದ್ದರಿಂದ **ಅತಿವಿದಾಂ ವರಿಷ್ಟಃ**

ನ ಚೆನ್ನಾಗಿ ತಿಳಿದವರಲ್ಲಿ ಶ್ರೇಷ್ಠನಲ್ಲ (ಅಂಗೈಯಲ್ಲಿರುವ ಸ್ವಚ್ಛನೀರನ್ನು ನೋಡುವಂತೆ ನಿರ್ದುಷ್ಟವಾದ ಎಲ್ಲ ತತ್ತ್ವಗಳನ್ನರಿತವರ ಮಧ್ಯದಲ್ಲಿ ಗಣನೀಯನಾದ ಶ್ರೇಷ್ಠನಲ್ಲ) **ಹಿ** ಏಕೆಂದರೆ **ಸೂರಯಃ** ಹರಿಸ್ವರೂಪ ತಿಳಿದ ತತ್ವಜ್ಞಾನಿಗಳು **ಏನಂ ವ್ಯವಹಾರಂ** ಲೌಕಿಕ ವ್ಯವಹಾರಾದಿಗಳಿಂದ ಸ್ಥಿರವಾದ ಶ್ರೀಹರಿಯ ಅಧೀನವಾದ ಭರಣಾದಿ ಕರ್ತೃತ್ವವನ್ನು **ತತ್ವಾವಮರ್ಶೇನ ಸಹ** ಶ್ರೀಹರಿಯೇ ಎಲ್ಲದಕ್ಕೂ ಸ್ವತಂತ್ರಕರ್ತಾ ಎಂಬ ತತ್ವದ ವಿಚಾರದೊಡನೆ **ನ ಆಮನಂತಿ** ಹೇಳಲಾರರು (ಶ್ರೀಹರಿಯೇ ಸ್ವತಂತ್ರಕರ್ತಾ ಎಂಬ ವಿಚಾರ ನಡೆದಾಗ ಜೀವನೂ ಅವನ ಅಧೀನಕರ್ತಾ ಎಂದು ಹೇಳುವುದಿಲ್ಲ . ಪರಾಧೀನವಾದ ಅಲ್ಪವಾದ ಕರ್ತೃತ್ವ ಇದ್ದರೂ ಇಲ್ಲದಿದ್ದಂತೆಯೇ. ನೀನಾದರೂ ಆ ರೀತಿ ವ್ಯವಹರಿಸಿರುವೆ ಕಾರಣ ಕೋವಿದನಲ್ಲ. ।।೧।।

ವೇದೋಕ್ತ ಕರ್ಮ ಮಾಡುವುದರಿಂದಲೂ ಕರ್ತೃತ್ವ ಅಂಗೀಕರಿಸಬೇಕು ಎಂದುದಕ್ಕೆ ಉತ್ತರಿಸುವರು

**ತಥೈವ ರಾಜನ್ನುರುಗಾರ್ಹಮೇಧವಿತಾನವಿದ್ಯೋರುವಿಜೃಂಭಿತೇಷು ।**
**ನ ವೇದವಾದೇಷು ಹಿ ತತ್ತ್ವವಾದಃ ಪ್ರಾಯೇಣ ಶುದ್ಧೋ ನು ಚಕಾಸ್ತಿ ಸಾಧು।।**

**ರಾಜನ್** ರಾಜನೇ **ಉರು** ಬಹಳವಾದ **ಗಾರ್ಹ** ಗೃಹಸಂಬಂಧಿಯಾದ **ಮೇಧ** ಯಜ್ಞಗಳ **ವಿತಾನ** ವಿಸ್ತಾರ ವಿಷಯಕವಾದ **ವಿದ್ಯಾ** ಕಲ್ಪಸೂತ್ರಾದಿಗಳಿಂದ **ವಿಜೃಂಭಿತೇಷು** ಕರ್ಮಪರವಾಗಿ ಉದ್ದೀಪಿತಗಳಾದ **ವೇದವಾದೇಷು** ''**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ**'' ಮುಂತಾದ ವೇದಗಳ ಮೇಲೆತೋರುವ ಅರ್ಥಗಳಲ್ಲಿ **ತತ್ತ್ವವಾದಃ** ಶ್ರೀಹರಿಯೇ ಸರ್ವಯಜ್ಞಭೋಕ್ತಾ, ಯಜಮಾನ ಮುಂತಾದವರಲ್ಲಿದ್ದು ಮಾಡಿಸುವವನು, ಜೀವರು ಅವನ ಅಧೀನರು, ಸ್ವತಂತ್ರ ಕರ್ತೃಗಳಲ್ಲ, ಶ್ರೀಹರಿಯು ಇತ್ತ ಫಲವನ್ನು ಹೊಂದುವವರು, ಅವನ ಪ್ರೀತಿಗಾಗಿಯೇ ಕರ್ಮಾದಿಗಳು ವೇದಗಳಿಂದ ಹೇಳಲ್ಪಡುವುವು ಇದೇ ಮೊದಲಾದ **ಶುದ್ಧಃ** ಸತ್ಸಂಪ್ರದಾಯಾಗತವಾದ **ಸಾಧು** ಉಪಕ್ರಮಾದ್ಯನುಗುಣವಾದ ಪದಸಮನ್ವಯ ಮತ್ತು ವಾಕ್ಯಸಮನ್ವಯ ರೂಪವಾದುದು **ಪ್ರಾಯೇಣ** ಬಹುಶಃ **ನ ಚಕಾಸ್ತಿ** ತೋರಲಾರದು **ನು** ನಿಶ್ಚಿತ **ತಥಾ** ಹಾಗೆಯೇ ಶ್ರುತಿಯಲ್ಲಿ ಹೇಳಿದ ಕರ್ಮ ಮಾಡುವುದರಿಂದ ಸಿದ್ಧವಾದ, ಜೀವರಿಗೆ ಇದೆ ಎಂದು ತೋರುವ ಕರ್ತೃತ್ವವು ಬಾಧಿತವಾದ್ದರಿಂದ ಸ್ವತಂತ್ರವಾದುದಲ್ಲ. ಶ್ರೀಹರಿಯ ಅಧೀನವಾದ ಕರ್ತೃತ್ವವಿದೆಯಾದರೂ ಇಲ್ಲದಿದ್ದಂತೆಯೇ ಎಂದು ಭಾವ. ।।

 

ಈ ಶ್ಲೋಕದಲ್ಲಿ ಪ್ರಾಯೇಣ ಎಂದದ್ದರಿಂದ ಕೆಲವು ವೇದೋಕ್ತಕರ್ಮ ಮಾಡುವವರಿಗೆ **ತತ್ತ್ವವಾದ** ತೋರುವುದು ಎಂದು ಹೇಳಿದಂತಾಯಿತು. ಅವರು ಯಾರು ಎಂದರೆ ಪ್ರಮಾಣದಿಂದ ತಿಳಿಸುವರು -

ತಾತ್ಪರ್ಯ - ''ನ ವೇದೇಷ್ವಲ್ಪಬುದ್ಧೀನಾಂ ಬ್ರಹ್ಮತತ್ತ್ವಂ ಸಮೀಕ್ಷ್ಯತೇ ।
ಮಹಾಬುದ್ಧಿಸ್ತು ವೇದೇಷು ಪಶ್ಯೇದ್ ಬ್ರಹ್ಮೈವ ಕೇವಲಂ'' ॥ ಇತಿ ಚ ॥

ವೇದವಾದಗಳಲ್ಲಿ ಅಲ್ಪ ಬುದ್ಧಿಗಳಿಗೆ ಸತ್ಸಂಪ್ರದಾಯವನ್ನು ತಿಳಿದ ಗುರುಗಳಿಂದ ಅಶಿಕ್ಷಿತರಾದವರಿಗೆ ಬ್ರಹ್ಮತತ್ತ್ವವು ತಿಳಿಯುವುದಿಲ್ಲ. ತಿಳಿದ ಜ್ಞಾನಿಗಳಿಂದ ಶಿಕ್ಷಿತವಾದ ಬುದ್ಧಿಯುಳ್ಳವರೇ ವೇದಗಳಲ್ಲಿ ಮುಖ್ಯವಾಗಿ ಪರಬ್ರಹ್ಮನೇ ಪ್ರತಿಪಾದ್ಯನೆಂದು ಪದ ಸಮನ್ವಯ ವಾಕ್ಯಸಮನ್ವಯಗಳಿಂದ ತಿಳಿಯುವರು. ॥೨॥

ಅಪೌರುಷೇಯವಾದ ವೇದಗಳು ಎಲ್ಲರಿಗೂ ಒಂದೇ ಆದುದರಿಂದ ಕೆಲವರಿಗೆ ಸತ್ಸಂಪ್ರದಾಯದಿಂದ ತತ್ತ್ವಜ್ಞಾನ ಕೆಲವರಿಗೆ ಇಲ್ಲಾ ಹೀಗಾಗಲು ಏನು ಕಾರಣ ಎಂದರೆ ಹೇಳುವರು

**ನ ತಸ್ಯ ತತ್ತ್ವಗ್ರಹಣಾಯ ಸಾಕ್ಷಾತ್**
**ವರೀಯಸೀರಪಿ ವಾಚಃ ಸಮಾಸನ್ ।**
**ಸ್ವಪ್ನೇ ನಿರುಕ್ತ್ಯಾ ಗೃಹಮೇಧಸೌಖ್ಯಂ**
**ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾತ್** ॥೩॥

**ಯಸ್ಯ** ಯಾವನಿಗೆ **ಗೃಹಮೇಧಸೌಖ್ಯಂ** ಗೃಹಸಂಬಂಧಿ ಯಜ್ಞಾದಿ ಕರ್ಮಜನ್ಯ ಸುಖವನ್ನು **ಸ್ವಪ್ನೇ ನಿರುಕ್ತ್ಯಾ** ಸ್ವಪ್ನದಲ್ಲಿ (ಕನಸಿನಲ್ಲಿ) ಆಗುವ ಸುಖದೃಷ್ಟಾಂತದಿಂದ ಅಸ್ಥಿರತ್ವ ಮೊದಲಾದ ಹೇತುಗಳಿಂದ **ಸ್ವಯಂ** ತನ್ನ ಬುದ್ಧಿಯಿಂದಲೇ (ಬಲಾತ್ಕಾರದಿಂದಲ್ಲ) **ಹೇಯಾನುಮಿತಂ ನ ಸ್ಯಾತ್** ಹೇಯವೆಂದು ತಿಳಿಯುವುದಿಲ್ಲವೋ **ತಸ್ಯ** ಅವನಿಗೆ **ವರೀಯಸೀಃ** ಅಪೌರುಷೇಯಗಳಾದುದರಿಂದ ದೋಷ ಶಂಕೆಗೆ ಅವಕಾಶವಿಲ್ಲದ **ವಾಚಃ** ವೇದವಾಕ್ಯಗಳು **ತತ್ತ್ವಗ್ರಹಣಾಯ** ತನಗೆ ಅಭಿಪ್ರೇತ ಅರ್ಥಜ್ಞಾನ ಮಾಡಿಕೊಡಲು **ನ ಸಾಕ್ಷಾತ್ ಸಮಾಸನ್** ಮತ್ತೊಬ್ಬರ ಅಪೇಕ್ಷೆಯಿಲ್ಲದೆ ಸಮರ್ಥವಾಗಲಾರವು. ಇದರಿಂದ ವೈರಾಗ್ಯವಿಲ್ಲದ್ದರಿಂದ ಎಲ್ಲರಿಗೂ ಸತ್ಸಂಪ್ರದಾಯಿಕ ವೇದಾರ್ಥಜ್ಞಾನವಾಗುವುದಿಲ್ಲ ಎಂದಂತಾಯಿತು.

**ಜಾಗ್ರತ್ಕಾಲೀನಂ ಗೃಹಮೇಧಿಸುಖಂ ಹೇಯಂ ಆಶುತರವಿನಾಶಿತ್ವಾತ್ ಸ್ವಪ್ನಪ್ರತೀತಪದಾರ್ಥವತ್** ಎಂದು ಅನುಮಾನ.

ಜಾಗ್ರತ್ಕಾಲದಲ್ಲಿ ಅನುಭವಿಸುವ ಸಂಸಾರಸುಖವು ಹೇಯವಾಗಿದೆ ಸ್ವಪ್ನದಲ್ಲಿ ತೋರುವ ಪದಾರ್ಥಗಳಂತೆ ಶೀಘ್ರದಲ್ಲಿ ನಾಶವಾಗುವುದರಿಂದ ಎಂದು ಈ ಯುಕ್ತಿಯ ಅಭಿಪ್ರಾಯ. ।।೩।।

ಈ ರೀತಿ ಅನುಮಾನ ಮಾಡಿಕೊಳ್ಳದಿರಲು ಏನು ಕಾರಣ ಎಂದರೆ ದುಷ್ಟವಾದ ವಿಷಯಾಸಕ್ತ ಮನಸ್ಸೇ ಎಂಬ ಅಭಿಪ್ರಾಯದಿಂದ ಸಂಸಾರವು ಮನೋನಿಮಿತ್ತಕ ಎಂದು ತಿಳಿಸುವರು

**ಯಾವನ್ಮನೋ ರಜಸಾ ಪುರುಷಸ್ಯ ಸತ್ತ್ವೇನ ವಾ ತಮಸಾ ವಾನುರುದ್ಧಂ ।**
**ಚೇತೋಭಿರಾಕೂತಿಭಿರಾತನೋತಿ ನಿರಂಕುಶಃ ಕುಶಲಂ ಚೇತರಂ ವಾ ।।೪।।**

**ಪುರುಷಸ್ಯ** ಜೀವನ **ಯಾವತ್** ಎಲ್ಲಿಯವರೆಗೆ **ಮನಃ** ಮನಸ್ಸು **ರಜಸಾ ಸತ್ತ್ವೇನ ತಮಸಾ ವಾ** ರಜೋಗುಣ ತಮೋಗುಣ ಸತ್ವಗುಣಗಳಿಂದ **ಅನುರುದ್ಧಂ** ವಶೀಕರಿಸಲ್ಪಟ್ಟು **ಚೇತೋಭಿಃ** ಬುದ್ಧಿ ಮೊದಲಾದ ತನ್ನ ವೃತ್ತಿಗಳಿಂದ **ಆಕೂತಿಭಿಃ** ವಿಷಯೇಚ್ಛಾಗಳಿಂದ **ನಿರಂಕುಶಂ** ವಿಧಿನಿಷೇಧರೂಪ ಅಂಕುಶವಿಲ್ಲದೇ **ಕುಶಲಂ** ಧರ್ಮವನ್ನು **ಇತರಂ ವಾ** ಅಧರ್ಮವನ್ನು **ಆತನೋತಿ** ಮಾಡುತ್ತದೆ, ಜೀವನಿಂದ ಮಾಡಿಸುತ್ತದೆ ಎಂದರ್ಥ. **ಕರಣೇ ಕರ್ತೃತ್ವೋಪಚಾರಃ** ಎಂಬ ನಿಯಮದಂತೆ ವಸ್ತುತಃ ಕರ್ತೃವಾದವನು ಪುರುಷನಾದರೂ ಕರಣಗಳೂ ಔಪಚಾರಿಕವಾಗಿ ಕರ್ತೃಗಳಾಗುತ್ತವೆ ಎನ್ನುವ ವಿವಕ್ಷೆಯಿಂದ ಇಲ್ಲಿ **ಮಾಡಿಸುತ್ತದೆ** ಎಂದು ಹೇಳಲು ಔಪಚಾರಿಕವಾಗಿ **ಮಾಡುತ್ತದೆ** ಎಂದು ಹೇಳಿರುವುದು.

ಧರ್ಮ, ಅಧರ್ಮಗಳಿಂದ ಏನು ಸಂಪಾದಿಸುವುದು ಎಂದು ಹೇಳುವರು.

**ಸ ವಾಸನಾತ್ಮಾ ವಿಷಯೋಪರಕ್ತೋ**
**ಗುಣಪ್ರವಾಹೋ ವಿಕೃತಃ ಷೋಡಶಾತ್ಮಾ ।**
**ಚಿತ್ರಂ ಪೃಥಙ್ನಾಮಭೀ ರೂಪಭೇದ-**
**ಮಂತರ್ಬಹಿಷ್ಟ್ವಂ ಸ್ವಪುರೈಸ್ತನೋತಿ** ।।೫।।




**ಸಃ** ಆ **ವಾಸನಾತ್ಮಾ** ಅನೇಕ ಕರ್ಮವಾಸನಾಮಯವಾದ **ವಿಷಯೋಪರಕ್ತಃ** ಬಾಹ್ಯವಿಷಯಾಸಕ್ತವಾದ **ಗುಣಪ್ರವಾಹಃ** ಸತ್ವಾದಿ ಗುಣಗಳ ಕಾರ್ಯ ಪರಂಪರೆಯುಳ್ಳ ಆದ್ದರಿಂದಲೇ **ವಿಕೃತಃ** ವಿಕಾರ ಹೊಂದಿದ (ಪ್ರಾಕೃತವಾದ) **ಷೋಡಶಾತ್ಮಾ** ಹತ್ತು ಇಂದ್ರಿಗಳು, ಐದು ಪ್ರಾಣಗಳು, ಮನುಸ್ಸು ಹೀಗೆ ಹದಿನಾರು ಬಗೆಯಾದ ಲಿಂಗ ಶರೀರದಲ್ಲಿ ಪ್ರಧಾನವಾಗಿ ಪ್ರವಿಷ್ಟವಾದ **ಮಾಯಾರಚಿತಾಂತರಾತ್ಮಾ** ಈಶ್ವರೇಚ್ಛೆಯಿಂದ ಪ್ರಕೃತಿಯ ವಿಕಾರವಾದ ಮನಸ್ಸು **ಅಂತಬರ್ಹಿಷ್ಠಃ** ವಾಸನಾರೂಪವಾಗಿ ಒಳಗೆ ಚಕ್ಷುರಾದಿದ್ವಾರಾ ಬಾಹ್ಯವಿಷಯಾಸಕ್ತವಾಗಿ ಹೊರಗೂ ಇದ್ದು (ಸ್ವಪ್ನಾವಸ್ಥೆಯಲ್ಲಿ ಒಳಗೂ ಜಾಗ್ರದವಸ್ಥೆಯಲ್ಲಿ ಹೊರಗೂ ಇದ್ದು) **ಪೃಥಙ್ನಾಮಭಿಃ** ಬೇರೆ ಬೇರೆ ಹೆಸರುಗಳಿಂದ **ಸ್ವಪುರೈಃ** ಜೀವನ ಧರ್ಮಾಧರ್ಮಗಳಿಂದ ಸಂಪಾದಿತವಾದ ಸುರನರತಿರ್ಯಗಾದಿ ದೇಹಗಳಿಂದ **ಚಿತ್ರಂ** ಬಹುವಿಧವಾದ **ರೂಪಭೇದಂ** ಆಯಾ ಜಾತಿ ವಿಶೇಷಗಳನ್ನು **ತನೋತಿ** ಮಾಡುತ್ತದೆ. ವಾಸನಾರೂಪದಿಂದ ಒಳಗಿದ್ದು ಸ್ವಪ್ನಶರೀರಗಳಿಂದ ಸ್ವಪ್ನದಲ್ಲಿ ನಾನಾ ಬಗೆಯ ನಾಮರೂಪಗಳನ್ನು ಉಂಟು ಮಾಡುವುದು. ಕಣ್ಣು ಮೊದಲಾದ ಇಂದ್ರಿಯಗಳ ಮೂಲಕ ಬಾಹ್ಯವಿಷಯಾಸಕ್ತವಾಗಿ ಹೊರಗಿದ್ದು ಜಾಗ್ರದವಸ್ಥೆಯಲ್ಲಿ ನಾನಾವಿಧ ನಾಮರೂಪಗಳನ್ನು ಉಂಟುಮಾಡುತ್ತದೆ. ಅಂದರೆ ಈ ಎರಡೂ ಅವಸ್ಥೆಗಳಲ್ಲಿಯೂ ಧರ್ಮಾಧರ್ಮಗಳ ಸಹಿತವಾಗಿ ಆ ಆ ಶರೀರದಲ್ಲಿ ಆವಿಷ್ಟರಾದ ಜೀವರಿಗೆ ನಾಮಜಾತಿ ಭೇದಗಳನ್ನು ತಂದುಕೊಡುವುದೆಂದು ಅಭಿಪ್ರಾಯ.॥೫॥

ಇಲ್ಲಿ **ಸಃ** ಎಂಬುವ ಸರ್ವನಾಮಪದವು ಹಿಂದೆ ಬಂದ ಮನಃಪರಾಮರ್ಶಕವಲ್ಲ. ಪುಲ್ಲಿಂಗವಾದ್ದರಿಂದ. ಕಾರಣ ಮುಂದಿನ ಶ್ಲೋಕದಲ್ಲಿ ಹೇಳಲಿರುವ **ಮಾಯಾರಚಿತಾಂತರಾತ್ಮಾ** ಎಂಬುದಕ್ಕೆ ಪರಾಮರ್ಶಕ ಎಂದು ಹೇಳುವರು.

ತಾತ್ಪರ್ಯ - ''ಸ ಮಾಯಾರಚಿತ ಅಂತರಾತ್ಮಾ ಮನಃ''

ಷಷ್ಠೀ ತತ್ಪುರುಷವಲ್ಲವೆಂದು ತಿಳಿಸಲು **ರಚಿತಃ** ಎಂದು ಭೇದ ತೋರಿಸಿರುವರು.

ಐದನೇ ಶ್ಲೋಕದಲ್ಲಿ **ಸಃ** ಎಂದು ಪುರುಷಪರಾಮರ್ಶಕವಲ್ಲ. ಮನಸ್ಸಿನ ಪರಾಮರ್ಶಕವೇ ಆದಾದರೂ **ಯಾವನ್ಮನೋ ಪುರುಷಸ್ಯ** ಎಂದು ಹಿಂದಿನ ಶ್ಲೋಕದಲ್ಲಿ ಮನಸ್ಸು ನಪುಂಸಕ ಲಿಂಗದಿಂದ ಪ್ರಕೃತವಾಗಿದೆ. ಆದರೂ ಮುಂದಿನ ಶ್ಲೋಕದಲ್ಲಿ **ಮಾಯಾರಚಿತಾಂತರಾತ್ಮಾ** ಎಂದು ಪುಲ್ಲಿಂಗ ಪ್ರಯೋಗ ಮಾಡಿದ್ದರಿಂದ

ಆದರ ಪ್ರಕಾರ **ಸಃ** ಎಂದು ನಿರ್ದೇಶ ಮಾಡಿರುವರು. ಅಂತರಾತ್ಮಾ ಪದದಿಂದ ಮನಸನ್ನೇ ಹೇಳಿದ್ದರಿಂದ ಮನಸ್ಸಿನ ಪರಾಮರ್ಶಕವೇ ಇದು. **ಸಃ** ಎಂದರೆ ಭಗವದಿಚ್ಛೆಯಿಂದ ಪ್ರೇರಿತವಾದ ಪ್ರಕೃತಿನಿರ್ಮಿತವಾದ ಮನಸ್ಸು ಎಂದರ್ಥ. ||೫-೬||

ನಾಮ ಜಾತಿ ಭೇದ ಸಂಪಾದನದಿಂದಲಾದರೂ ಏನು ಫಲ ಎಂದರೆ ಹೇಳುವರು

**ದುಃಖಂ ಸುಖಂ ವ್ಯತಿಮಿಶ್ರಂ ಚ ತೀವ್ರಂ ಕಾಲೋಪಪನ್ನಂ ಫಲಮಾವ್ಯನಕ್ತಿ ।**
**ಆಲಿಂಗ್ಯ ಮಾಯಾರಚಿತಾಂತರಾತ್ಮಾ ಸ್ವದೇಹಿನಂ ಸಂಸೃತಿಚಕ್ರಕೂಟಮ್ ॥೬॥**

**ಚ** ಮತ್ತು **ಸಂಸೃತಿಚಕ್ರಕೂಟಂ** ಚಕ್ರದಂತೆ ಮತ್ತೆ ಮತ್ತೆ ಸುತ್ತುವ ಸಂಸಾರದ ರಾಶಿಯುಳ್ಳ **ಸ್ವದೇಹಿನಂ** ತನ್ನಿಂದ ಪ್ರಾರಬ್ಧವಾದ ದೇಹವುಳ್ಳ ಜೀವನನ್ನು **ಆಲಿಂಗ್ಯ** ವಶ ಮಾಡಿಕೊಂಡು ಲಿಂಗಶರೀರರೂಪದಲ್ಲಿ ಸಂಬಂಧಿಸಿ **ಕಾಲೋಪಪನ್ನಂ** ಕಾಲರೂಪೀ ಶ್ರೀಹರಿಯಿಂದ ಒದಗಿಸಲ್ಪಟ್ಟ **ತೀವ್ರಂ** ಅತಿಶಯವಾದ (ತೀವ್ರಕಾಲವೆಂಬ ಪಾಠದಲ್ಲಿ ತಡೆಯಲಾಗದ ಕಾಲ ಎಂದರ್ಥ) **ದುಃಖಂ** ದುಖವನ್ನೋ **ಸುಖಂ** ಸುಖವನ್ನೋ **ವ್ಯತಿಮಿಶ್ರಂ** ಸುಖಮಿಶ್ರ ದುಃಖವನ್ನೋ, ದುಃಖಮಿಶ್ರ ಸುಖವನ್ನೋ **ಫಲಂ** ಫಲವಾಗಿ **ಆವ್ಯನಕ್ತಿ** ವ್ಯಕ್ತಗೊಳಿಸುವುದು (ಹುಟ್ಟಿಸುವುದು). ವ್ಯನಕ್ತಿ ಎಂದು ಮುಕ್ತಿತಪಸ್ಸುಗಳಲ್ಲಿನ ಸುಖದುಃಖಗಳ ಅಭಿಪ್ರಾಯದಿಂದ ಹೇಳಿದ್ದು. ||೬||

**ತಾವಾನಯಂ ವ್ಯವಹಾರಃ ಸದಾ ವೈ**
**ಕ್ಷೇತ್ರಜ್ಞಸಾಕ್ಷ್ಯೋರ್ಭವತಿ ಸ್ಥೂಲಸೂಕ್ಷ್ಮಃ ।**
**ತಸ್ಮಾನ್ಮನೋಲಿಂಗಮದೋ ವದಂತಿ**
**ಗುಣಾಗುಣಸ್ಯಾಸ್ಯ ಪರಾವರಸ್ಯ ॥೭॥**

**ತಾವಾನ್** ಎಲ್ಲಿಯವರೆಗೆ ನಾನು ನನ್ನದು ಎಂಬ ಅಭಿಮಾನವಿರುವುದೋ ಅಲ್ಲಿಯವರೆಗೆ **ಸ್ಥೂಲಸೂಕ್ಷ್ಮಃ** ಸ್ಥೂಲದೇಹ ಸೂಕ್ಷ್ಮದೇಹ ವಿಷಯಕವಾದ ಜಾಗ್ರತ್ ಮತ್ತು ಸ್ವಪ್ನ ಪದಾರ್ಥವಿಷಯಕವಾದ **ಅಯಂ ವ್ಯವಹಾರಃ** ಸುಖದುಃಖ ರೂಪವಾದ ಸಾಂಸಾರಿಕ ವ್ಯವಹಾರವು ಆಗುವುದು. ತಿಳಿಯುವುದು, ಮಾತನಾಡುವುದು,

 

ವೈಷಯಿಕ ಸುಖ, ಅಹೇಯತ್ವ ಮೊದಲಾದುದು **ಸದಾ** ಯಾವಾಗಲೂ **ಕ್ಷೇತ್ರಜ್ಞಸಾಕ್ಷ್ಯೋಃ ಸಕಾಶಾತ್** ಶ್ರೀಮನ್ನಾರಾಯಣ ಮತ್ತು ಮುಖ್ಯಪ್ರಾಣ ದೇವರಿಂದ ಪ್ರೇರಿತವಾದ ಮನಸ್ಸಿನಿಂದ **ಭವತಿ ವೈ** ಆಗುವುದಷ್ಟೇ! **ತಸ್ಮಾತ್** ಶ್ರೀಹರಿವಾಯುಗಳ ಕಟಾಕ್ಷದಿಂದ ವೀಕ್ಷಿತವಾದ ಮನಸ್ಸು ಸಂಸಾರಕ್ಕೆ ಕಾರಣವಾದುದರಿಂದ **ಅದಃ ಮನಃ** ಈ ಮನಸ್ಸನ್ನು **ಪರಾವರಸ್ಯ** ಉತ್ತಮಾನುತ್ತಮ ಜೀವ ಸಮುದಾಯದ **ಗುಣಾಗುಣಸ್ಯ** ಗುಣ ಸಂಬಂಧವಿರುವ ಸಂಸಾರಕ್ಕೂ, ತ್ರಿಗುಣ ಸಂಬಂಧವಿಲ್ಲದ ಮೋಕ್ಷಕ್ಕೂ **ಲಿಂಗಂ ವದಂತಿ** ಕಾರಣವೆಂದು ಹೇಳುವರು. ''**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ**'' ಎಂದು ಆಗಮವಿದೆ. **ಪರಂ** ಯಾವನು ಉತ್ತಮ ಜೀವನೋ - ಮೋಕ್ಷಯೋಗ್ಯನೋ ಅವನಿಗೆ ಮನಸ್ಸು ಸಜ್ಜನ ಸಂಗವಿಲ್ಲದಾಗ ಸಂಸಾರ ಕಾರಣವಾಗಿ ಸತ್ಸಂಗವಾದಾಗ ಮೋಕ್ಷಕ್ಕೆ ಕಾರಣವಾಗುವುದು. ಅಸುರರು ಎರಡು ವಿಧ. ನಿತ್ಯ ಸಂಸಾರಿಗಳು ತಮೋಯೋಗ್ಯರು ಎಂದು. ನಿತ್ಯ ಸಂಸಾರಿಗಳಿಗೆ ಯಾವಾಗಲೂ ಸಂಸಾರ ಕಾರಣವಾಗುವುದು. ತಮೋಯೋಗ್ಯರಿಗೆ ದುಷ್ಟಸಂಗದಿಂದ ಹರಿದ್ವೇಷಾಭಿವೃದ್ಧಿಯಾದಾಗ ತಮಸ್ಸಿಗೆ ಕಾರಣವಾಗುವುದು. ಅದೇ ಅವರಮೋಕ್ಷ. ॥೭॥

ಮೇಲಿನ ಶ್ಲೋಕದಲ್ಲಿ ಕ್ಷೇತ್ರಜ್ಞ ಹಾಗೂ ಸಾಕ್ಷಿ ಶಬ್ದಗಳ ಪ್ರಕೃತಸಂಗತವಾದ ಅರ್ಥವನ್ನು ಪ್ರಮಾಣದಿಂದ ತಿಳಿಸುವರು.

ತಾತ್ಪರ್ಯ ''**ಕ್ಷೇತ್ರವಿತ್ತು ಹರಿಃ ಪ್ರಾಣಃ ಸಾಕ್ಷೀ ತಾಭ್ಯಾಂ ಪುಮಾನ್ ಸರೇತ್**'' **ಇತಿ ಚ**

ಶ್ರೀಹರಿಯೇ ಕ್ಷೇತ್ರ ತಿಳಿದವನು ಎನಿಸುತ್ತಾನೆ. ಪ್ರಾಣನು ಸಾಕ್ಷಿಯೆನಿಸುತ್ತಾನೆ. ಅವರಿಬ್ಬರಿಂದ ಜೀವನು ಸಂಚರಿಸುವನು ಎಂದರ್ಥ. ॥೭॥

ಒಂದೇ ಮನಸ್ಸು ವಿರುದ್ಧವಾದ ಸಂಸಾರ ಮೋಕ್ಷಗಳಿಗೆ ಕಾರಣ ಹೇಗಾಗುವುದು ಎಂಬ ಶಂಕೆಯನ್ನು ಪರಿಹರಿಸಲು ವಿವರಿಸಿರುವರು

**ಗುಣಾನುರಕ್ತಂ ವ್ಯಸನಾಯ ಜಂತೋಃ**
**ಕ್ಷೇಮಾಯ ನೈರ್ಗುಣ್ಯಮಥೋ ಮನಃ ಸ್ಯಾತ್ ।**
**ಯಥಾ ಪ್ರದೀಪೋ ಘೃತವರ್ತಿಮಾಸ್ಥಿತೋ**
**ಸ್ಥಿತಿಂ ಸಧೂಮಾಂ ಭಜತಿ ಹ್ಯನ್ಯದಾ ಸ್ವಮ್ ॥೮॥**

**ಜಂತೋಃ** ಜೀವನ **ಮನಃ** ಮನಸ್ಸು **ಗುಣಾನುರಕ್ತಂ** ಶಬ್ದಾದಿ ವಿಷಯಾಸಕ್ತವಾದುದು **ವ್ಯಸನಾಯ ಭವತಿ** ಸಾಂಸಾರಿಕ ಕ್ಲೇಶಕ್ಕೆ ಕಾರಣವಾಗುವುದು. **ನೈರ್ಗುಣ್ಯಂ** (೧) ವಿಷಯ ಸಮೂಹಗಳಿಂದ ದೂರನಾದ ಬ್ರಹ್ಮ ಸಂಬಂಧಿಯಾದ (೨) ಸತ್ವಾದಿಗುಣರಹಿತ ಬ್ರಹ್ಮಸಂಬಂಧಿಯಾದ (೩) ಭಗವತ್ಕಥಾಮೃತ ಪಾನದಿಂದ ವಿಷಯಾಸಕ್ತಿಯಿಲ್ಲದ ಮನಸ್ಸು **ಕ್ಷೇಮಾಯ ಅಥ** ಮೋಕ್ಷಕ್ಕೂ ಕಾರಣವಾಗುವುದು. ಈ ವಿಷಯದಲ್ಲಿ ಲೌಕಿಕ ದೃಷ್ಟಾಂತ ಕೊಡುವರು **ಯಥಾ** ಹೇಗೆ **ಘೃತವರ್ತಿಂ** ತುಪ್ಪದಿಂದ ಸಹಿತವಾದ ಬತ್ತಿಯನ್ನು **ಆಸ್ಥಿತಃ** ಆಶ್ರಯಿಸಿ ಉರಿಯುವ **ಪ್ರದೀಪಃ** ದೀಪವೂ **ಸಧೂಮಾಂ ಸ್ಥಿತಿಂ** ಹೊಗೆಯಿಂದ ಕೂಡಿದ ಜ್ವಾಲೆಯನ್ನು **ಭಜತಿ** ಹೊಂದುವುದು **ಅನ್ಯದಾ** ತುಪ್ಪದ ಬತ್ತಿಯಿಲ್ಲದಿರುವಾಗ **ಸ್ವಂ ಸ್ಥಿತಿಂ ಭಜತಿ ಹಿ** ಕೇವಲ ತೇಜಸ್ಸೆಂಬ ತನ್ನ ಸ್ವರೂಪವನ್ನು ಹೊಂದುವುದು. ಹೊಗೆಯಿಲ್ಲದೆ ಜ್ವಲಿಸುವುದು ಎಂದು ಭಾವ. ।।೮।।

**ಪದಂ ತಥಾ ಗುಣಕರ್ಮಾನುಬದ್ಧಂ**
**ಬಹಿರ್ಮನಃ ಶ್ರಯತೇಽನ್ಯತ್ರ ತತ್ತ್ವಮ್ ।**
**ಏಕಾದಶಾಸನ್ಮನಸೋಽಸ್ಯ ವೃತ್ತೀ-**
**ರಾಕೂತಯಃ ಪಂಚ ಧಿಯೋಽಭಿಮಾನಾಃ ।।೯।।**

**ತಥಾ** ಹಾಗೆಯೇ **ಗುಣಕರ್ಮಾನುಬದ್ಧಂ** ಸತ್ತ್ವ ಮೊದಲಾದ ಗುಣಗಳಿಂದಲೂ ಹಿಂದೆ ಶೇಖರಿಸಿದ ಕರ್ಮಗಳಿಂದಲೂ ಯುಕ್ತವಾದ (ಗುಣಕರ್ಮಾನುಸಾರ ಇರುವ ಕಾಮಾದಿಗಳಿಂದ ಯುಕ್ತವಾದ) **ಮನಃ** ಮನಸ್ಸು **ಬಹಿಃ** ಹೊರಗೆ **ಪದಂ** ಹೊಂದಲಾಗುವ ಶಬ್ದ ಮುಂತಾದ ವಿಷಯಗಳನ್ನು **ಶ್ರಯತೇ** ಸೇವಿಸುವುದು ಮತ್ತೆ ಮತ್ತೆ ಹುಟ್ಟಿ ಬೆಳೆದ ರಾಗಾದಿದೋಷದಿಂದ ಕುರುಡಾದ ಮನಸ್ಸು ವಿಷಯವೇ ಶ್ರೇಯಸ್ಕರ ಮತ್ತೊಂದಲ್ಲವೆಂದು ನಿಶ್ಚಯಿಸಿ ಇರುವುದು ಎಂದರ್ಥ **ಅನ್ಯತ್ರ** ವಿಷಯ ಸಂಪರ್ಕವನ್ನು ತುಚ್ಛೀಕರಿಸಿದಾಗ ಅಂದರೆ ರಾಗಾದಿ ದೋಷಗಳು ಇಲ್ಲದಿರುವಾಗ **ತತ್ತ್ವಂ** ಅನಾರೋಪಿತವಾದ, ಸರ್ವದಾ ಏಕ ಪ್ರಕಾರವಾದ ಪರಬ್ರಹ್ಮ ಸ್ವರೂಪವನ್ನು **ಶ್ರಯತೇ** ಆಶ್ರಯಿಸುವುದು. ರಾಗಾದಿದೋಷಗಳಿಲ್ಲದೇ ನಿರ್ಮಲವಾದ ಮನಸ್ಸು **ಅನಾದಿಮತ್ ಪರಂ ಬ್ರಹ್ಮ** ಎಂಬ ಸ್ಮೃತಿಯಂತೆ ಪರಬ್ರಹ್ಮನೇ ಜನನಮರಣ ರಹಿತನು, ಶಾಶ್ವತನು ಉಳಿದುದೆಲ್ಲ ನಶ್ವರ ಮತ್ತು ದುಃಖಜನಕವೆಂದು ನಿಶ್ಚಯಿಸಿ ಆ ಪರಬ್ರಹ್ಮನಲ್ಲಿಯೇ ನಿಷ್ಠೆಯುಳ್ಳದ್ದಾಗಿ ಆಗುವುದು ಎಂದು ಭಾವ. ಹೀಗೆ

ವಿವರಿಸಿದ್ದರಿಂದ ವಿರುದ್ಧವಾದುದರಿಂದ ಒಂದೇ ಮನಸ್ಸಿಗೆ ಎರಡೂ ಕಡೆ (ವಿಷಯ ಮತ್ತು ಬ್ರಹ್ಮ ಎರಡರಲ್ಲೂ) ಪ್ರವೃತ್ತಿ ಕೂಡುವುದಿಲ್ಲವೆಂಬ ಶಂಕೆಯನ್ನು ಪರಿಹರಿಸಿದಂತಾಯಿತು. ಮೇಲಿನ ಉದಾಹರಣೆಯಿಂದ ಶಬ್ದಾದಿವಿಷಯಕ ವೃತ್ತಿ (ಜ್ಞಾನ) ಜನಕಸ್ಥಿತಿಯು ಮನಸ್ಸಿಗೆ ಅಸ್ವಭಾವಿಕವು ತತ್ತ್ವವಿಷಯಕ ವೃತ್ತಿ ಜನಕಸ್ಥಿತಿಯು ಸ್ವಾಭಾವಿಕವೆಂದೂ ತಿಳಿಯಬೇಕು ಎಂದಂತಾಯಿತು.

ಚಕ್ಷುರಾದಿ ಇಂದ್ರಿಯಗಳು ಇರುವಾಗ ಮನಸ್ಸಿಗೆ ಪ್ರಾಧಾನ್ಯ ಹೇಗೆ ಎಂದರೆ ಆ ಆ ಇಂದ್ರಿಯಗಳ ದ್ವಾರಾ ಆ ಆ ವಿಷಯಗಳಲ್ಲೆಲ್ಲ ಮನಸ್ಸು ಪ್ರವರ್ತಿಸುವುದರಿಂದ ಎಂಬ ಅಭಿಪ್ರಾಯದಿಂದ ಹೇಳುವರು.

**ಅಸ್ಯ ಮನಸಃ** ಈ ಮನಸ್ಸಿಗೆ **ವೃತ್ತೀಃ** ವೃತ್ತಿಗಳು (ವ್ಯಾಪಾರಗಳು) **ಏಕಾದಶ ಆಸನ್** ಹನ್ನೊಂದು ಇರುವವು. ಕಣ್ಣು ಮುಂತಾದ ಜ್ಞಾನೇಂದ್ರಿಯಗಳೈದು, ವಾಕ್ ಮೊದಲಾದ ಕರ್ಮೇಂದ್ರಿಯಗಳೈದು, ಮನಸ್ಸು ಒಂದು, ಹೀಗೆ ಹನ್ನೊಂದು ಇಂದ್ರಿಯಗಳು. ಇವುಗಳ ದ್ವಾರಾ ಸಾಕ್ಷಾತ್ತಾಗಿ ಒಟ್ಟು ಹನ್ನೊಂದು ಜ್ಞಾನಕರ್ಮ ರೂಪಗಳಾದ ಕಾರ್ಯಗಳು. ಮನಸ್ಸಿಗೆ ಹತ್ತು ಇಂದ್ರಿಯಗಳೇ ದ್ವಾರಗಳು. ಛತ್ರಿನ್ಯಾಯೇನ ಏಕಾದಶೇಂದ್ರಿಯಗಳೆಂದಿದ್ದಾರೆ.

ಇಲ್ಲಿ ಹೀಗೆ ವಿವೇಕವನ್ನು ತಿಳಿಯಬೇಕು. ಮನಸ್ಸು ಸಾಕ್ಷಾತ್ತಾಗಿ 'ಮಮ', 'ಅಹಂ' ಎಂಬ ಅಭಿಮಾನರೂಪ ವೃತ್ತಿಯನ್ನುಂಟುಮಾಡುವುದು. ಶ್ರೋತ್ರಮುಂತಾದ ಹತ್ತು ಇಂದ್ರಿಯಗಳನ್ನೆಲ್ಲ ಪ್ರವೇಶಿಸಿ ಅವುಗಳ ದ್ವಾರಾ ಶಬ್ದಾದಿಜ್ಞಾನಕ್ರಿಯಾರೂಪ ವೃತ್ತಿಗಳನ್ನು ಹುಟ್ಟಿಸುವುದು. ಆದ್ದರಿಂದ ಶಬ್ದ, ಸ್ಪರ್ಶ, ರೂಪ, ರಸ, ಸುಗಂಧಗಳ ಅನುಭವಗಳು ಐದು ವೃತ್ತಿಗಳು. ಮಾತನಾಡುವುದು, ನಡೆಯುವುದು, ಕೆಲಸ ಮಾಡುವುದು, ವಿಸರ್ಗ ಎರಡು ಹೀಗೆ ಐದು ಕರ್ಮರೂಪ ವೃತ್ತಿಗಳು. ಅಭಿಮಾನರೂಪವಾದುದು ಒಂದು ಹೀಗೆ ಸಾಕ್ಷಾತ್ ಪರಂಪರಯಾ ಮನಸ್ಸಿಗೇನೇ ಉಂಟಾಗುವ ವೃತ್ತಿಗಳು ಹನ್ನೊಂದು. ಹೀಗೆ ಮೂಲಾಭಿಪ್ರಾಯ.

ಇನ್ನು ಸಾಕ್ಷಾತ್ತಾಗಿಯೇ ಮನೋವೃತ್ತಿಗಳು ಹನ್ನೊಂದು ಇವೆ ಎಂಬ ಅಭಿಪ್ರಾಯದಿಂದ '**ಆಕೂತಯಃ ಪಂಚ ಧಿಯೋಭಿಮಾನಾಃ**' ಎಂಬ ಮೂಲ. ಅದರ ಅಭಿಪ್ರಾಯ ಹೀಗೆ- **ಧಿಯಃ** ಜ್ಞಾನೇಂದ್ರಿಯ ವೃತ್ತಿಗಳ **ಆಕೂತಯಃ** ನಾನು ಶಬ್ದವನ್ನು ಕೇಳಬಯಸುವೆನು, ರೂಪವನ್ನು ನೋಡಲಿಚ್ಛಿಸುವೆನು, ಗಂಧವನ್ನು

ಆಘ್ರಾಣಿಸುವೆನು, ರಸವನ್ನು ಆಸ್ವಾದಿಸುವೆನು, ಮನೋಹರವಾದುದನ್ನು ನೋಡುವೆನು ಮುಂತಾದ ಅಭಿಮಾನಗಳು ಹೀಗೆ ಐದು ಐದು **ಧಿಯಃ ಚ** ಮನಸ್ಸಿಗೆ ವಿಷಯಗಳಾದ ಸ್ಮೃತಿ ಮೊದಲಾದವುಗಳಲ್ಲಿ ಬರುವ ಅಭಿಮಾನ ಒಂದು ಹೀಗೆ ಹನ್ನೊಂದು ಮನಸ್ಸಿನ ವ್ಯಾಪಾರಗಳು. ।।೯।।

ಈ ಶ್ಲೋಕದಲ್ಲಿಯ ಪದಂ ಎಂಬುದಕ್ಕೆ ಪ್ರಕೃತ ಸಂಗತ ಅರ್ಥ ತಿಳಿಸುವರು

**ತಾತ್ಪರ್ಯ - ''ಪದಂ ವಿಷಯಂ''**

ಪದಂ ಎಂದರೆ ವಿಷಯವನ್ನು ಎಂದು ಅರ್ಥ.

**ಬಹಿಃ ಪದಂ ಶ್ರಯತೇ** ಎಂಬುದನ್ನು ವಿಶದಪಡಿಸುವರು

**ತಾತ್ಪರ್ಯ - ''ಏಕಾದಶೇಂದ್ರಿಯದ್ವಾರಾ ಸ್ಯುರೇಕಾದಶವೃತ್ತಯಃ ।**
**ಶಬ್ದಾದ್ಯಾಸ್ತದಭೀಮಾನಾಸ್ತದಿಚ್ಛಾಶ್ಚೈವ ಪಂಚಶಃ ॥''**
**''ಸ್ಪರ್ಶಾಂತರ್ಭಾವತಃ ಕರ್ಮಖಾನಾಂ ನೈವ ಪೃಥಗ್ಗತಿಃ ।।೯।।**

ಕಿವಿ ಮೊದಲಾದ ಇಂದ್ರಿಯಗಳು ಹತ್ತು, ಮನಸ್ಸು ಒಂದು ಹೀಗೆ ಹನ್ನೊಂದು ಇಂದ್ರಿಯಗಳು. ಅವುಗಳ ದ್ವಾರಾ ಜ್ಞಾನ, ಕರ್ಮ, ಅಭಿಮಾನರೂಪ ಹನ್ನೊಂದು ವೃತ್ತಿಗಳು (ಕಾರ್ಯಗಳು). ಐದು ರೀತಿಯಾಗಿ ಇರುವ ಶಬ್ದಾದಿಗಳಲ್ಲಿ ಐದು ರೀತಿಯಾದ ಅಹಂಕಾರ ಮಮಕಾರಗಳಿವೆ ಅವುಗಳ ಇಚ್ಛೆಯು ಐದು ವಿಧವು.

ಇಲ್ಲಿ ಕರ್ಮೇಂದ್ರಿಯ ವೃತ್ತಿಗಳಿಗೂ ನಾನು ವಿಸರ್ಜಿಸುವೆನು, ನಡೆಯುವೆನು, ಸುಖ ಅನುಭವಿಸುವೆನು, ಮಾತಾಡುವೆನು, ಕೆಲಸ ಮಾಡುವೆನು ಮುಂತಾದ ಇಚ್ಛೆಗಳು ಹಾಗೂ ಅಭಿಮಾನಗಳನ್ನು ಹೇಳಲು ಬರುವಾಗ ಪ್ರತ್ಯೇಕ ಹೇಳಬೇಕಿತ್ತು ಎಂದರೆ ಕರ್ಮೇಂದ್ರಿಯಗಳಿಗೂ ಮತ್ತು ತ್ವಗಿಂದ್ರಿಯಕ್ಕೂ ಒಂದೇ ಅಧಿ ಷ್ಠಾನವಾದುದರಿಂದ ತ್ವಗಿಂದ್ರಿಯವನ್ನು ಹೇಳುವುದರಿಂದ ಕರ್ಮೇಂದ್ರಿಯಗಳನ್ನೂ ಹೇಳಿದಂತಾಯಿತು ಎಂಬ ಅಭಿಪ್ರಾಯದಿಂದ ಐದು ಇಚ್ಛೆಗಳನ್ನು ಐದು ಅಭಿಮಾನಗಳನ್ನು ಹೇಳಿರುವರು. ।।೯।।

ಈ ರೀತಿ ಏಕಾದಶ ಮನೋವೃತ್ತಿಗಳನ್ನು ಎರಡು ರೀತಿ ತಿಳಿಸಿ ಏಕಾದಶೇಂದ್ರಿಯ ದ್ವಾರಾ ಎಂದು ಹೇಳಿದ ಮೊದಲನೆ ಪಕ್ಷದಲ್ಲಿ ಏಕಾದಶ ವೃತ್ತಿಗಳ ವಿಷಯಗಳನ್ನು ತಿಳಿಸುವರು ಮೂಲದಲ್ಲಿ

**ಮಾತ್ರಾಣಿ ಕರ್ಮಾಣಿ ಪುರಂ ಚ ತಾಸಾಂ ವದಂತಿ ಹ್ಯೆಕಾದಶ ವೀರ ಭೂಮಿಂ ।।೧೧।।**

**ಮಾತ್ರಾಣಿ** ಮೀಯಂತೇ ಇತಿ ಮಾತ್ರಾಣಿ ಎಂದರೆ ಕಿವಿ ಮುಂತಾದ ಜ್ಞಾನೇಂದ್ರಿಯ ವಿಷಯಗಳಾದ ಶಬ್ದಾದಿಗಳೈದು **ಕರ್ಮಾಣಿ** ವಾಗಾದಿ ಕರ್ಮೇಂದ್ರಿಯ ವಿಷಯಗಳಾದ ಮಾಡುವುದೇ ಮುಂತಾದ ವ್ಯಾಪಾರಗಳು ಐದು **ಪುರಂ** ಅಭಿಮಾನ ವಿಷಯವಾದ ಶರೀರವು ಇವು ಹನ್ನೊಂದು **ತಾಸಾಂ** ಇಂದ್ರಿಯ ವೃತ್ತಿಗಳಿಗೆ **ಭೂಮಿಂ** ಅಧಿಷ್ಠಾನವಾದ ಗೋಲಕಗಳನ್ನು **ಏಕಾದಶ ವದಂತಿ** ಹನ್ನೊಂದು ಎಂದು ಹೇಳುವರು.

ತಾತ್ಪರ್ಯ - **''ಏಕಾದಶೈವ ಚೇಷ್ಟಾಸ್ಯುರಿಂದ್ರಿಯಾಣಾಂ ಪೃಥಕ್ ಪೃಥಕ್ ।**
**ಗೋಲಕಾಸ್ತದಧಿಷ್ಠಾನಂ ಚೈಕಾದಶ ನಿಗದ್ಯತೇ ।''**

ಇಂದ್ರಿಯಗಳಿಂದುಂಟಾದ ವೃತ್ತಿಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಇರುವ ಇಚ್ಛಾ ವಿಷಯಗಳು ಹನ್ನೊಂದು ಆಗುವುವು. ಇಂದ್ರಿಯಗಳಿಗೆ ಕಿವಿ ಮುಂತಾದವು ಹತ್ತು ಗೋಲಕಗಳು, ಮನಸ್ಸಿನ ಅಧಿಷ್ಠಾನವಾದ ಶರೀರದೊಳಗೆ ಇರುವ ಹೃದಯ ರೂಪವಾದದ್ದು ಒಂದು ಹೀಗೆ ಹನ್ನೊಂದು ಇಂದ್ರಿಯಗಳ ಸ್ಥಾನವು. ।।೧೧।।

ಸಂಸಾರ ಕಾರಣಗಳ ಸಂಖ್ಯೆಯನ್ನು ಮತಭೇದದಿಂದ ತಿಳಿಸಲು ಹೇಳುವರು.

**ಗಂಧಾಕೃತಿಸ್ಪರ್ಶರಸಶ್ರವಾಂಸಿ ವಿಸರ್ಗಗತ್ಯಾರ್ತ್ಯಭಿಜಲ್ಪಶಿಲ್ಪಾಃ ।**
**ಏಕಾದಶಂ ಸ್ವೀಕರಣಂ ಮಮೇತಿ ಮಾಯಾಮಹಂ ದ್ವಾದಶಮೇಕಮಾಹುಃ ।।**

**ಹೇ ವೀರ** ಜ್ಞಾನವನ್ನು ಸಂಪಾದಿಸಬೇಕೆಂಬ ಇಚ್ಛಾರೂಪ ಕಾರ್ಯವನ್ನು ಕೊನೆಗಾಣಿಸುವ ರಹೂಗಣನೇ **ಗಂಧ, ಆಕೃತಿ, ರೂಪ, ಸ್ಪರ್ಶ ರಸ, ಶ್ರವ** ಶಬ್ದ **ವಿಸರ್ಗ** ಮಲವಿಸರ್ಜನೆ **ಗತಿ** ನಡಿಗೆ **ಆರ್ತಿ** ಸಂಭೋಗ **ಅಭಿಜಲ್ಪ** ಮಾತು **ಶಿಲ್ಪಾಃ** ಕೈಗಾರಿಕೆ, ಕುಶಲಕಲೆ ಇವು ಕ್ರಮವಾಗಿ **ಘ್ರಾಣ, ಚಕ್ಷು, ತ್ವಕ್, ಜಿಹ್ವೆ, ಶ್ರೋತ್ರ, ಪಾಯು, ಪಾದ, ಉಪಸ್ಥ, ವಾಕ್ ಮತ್ತು ಪಾಣಿಗಳೆಂಬ** ಹತ್ತು ಇಂದ್ರಿಯಗಳ ವೃತ್ತಿಗಳಿಗೆ ಆಶ್ರಯಗಳು **ಏಕಾದಶಂ** ಹನ್ನೊಂದನೆಯ ಅಧಿಷ್ಠಾನವನ್ನು **ಮಮೇತಿ ಸ್ವೀಕರಣಂ ಇತಿ** ನನ್ನದು ಎಂದು ಈ ವಿಷಯ ದಶಕವನ್ನು ತಿಳಿಯುವುದೆಂಬ ಅಭಿಮಾನವು ಎಂದು ಹೇಳುವರು **ಅಹಂ** ನಾನು **ಏಷಾಂ** ಇವುಗಳ **ಕರ್ತಾ** ಕರ್ತೃವು

ಎಂದು **ಸ್ವೀಕರಣಂ** ಅಭಿಮಾನವು **ದ್ವಾದಶಂ** ಹನ್ನೆರಡನೆಯದು ಎಂದು ಹೇಳುವರು. **ತಥಾ** ಹಾಗೂ **ಮಾಯಾಂ** ಸಂಸಾರಾಂತರಂಗ ಕಾರಣವೆಂದು ಹೇಳುವರು.

**ತಾತ್ಪರ್ಯ – ''ಏಷ ಸಂಸೃತಿಸಂಭಾರೋ ದ್ವಾದಶೈವಾಥವಾ ಭವೇತ್ ।**
**ದಶಕಂ ವಿಷಯಾಣಾಂ ಚ ಮಮಾಹಮಿತಿ ಚ ದ್ವಯಂ ।**
**ದ್ವಯಮೇವ ಮಮಾಹಂ ವಾ ಸಂಸೃತಿಸ್ತ್ವಹಮೇವ ವಾ ॥**
**'ಆರ್ತಿಃ (ಅತ್ತಿಃ) ಉಪಸ್ಥವಿಷಯಃ' ಇತಿ ಚ ॥**

ಮನೋವೃತ್ತಿ ವಿಷಯಾದಿರೂಪವಾದ ಹನ್ನೆರಡು ವಿಷಯಗಳು ಸಂಸಾರಕ್ಕೆ ಅಂತರಂಗ ಕಾರಣವು. ಬಾಹ್ಯೇಂದ್ರಿಯಕ್ಕೆ ವಿಷಯಗಳಾದ ಶಬ್ದಾದಿಗಳು ಹತ್ತು. ಅವುಗಳಲ್ಲಿ ಇವುಗಳು ನನ್ನವು, ಇವುಗಳ ಕರ್ತೃ ನಾನು ಎಂಬೀ ಅಭಿಮಾನಗಳೆರಡು ಹೀಗೆ ಹನ್ನೆರಡು ಆಗುವುವು. ಅಥವಾ ನಾನು, ನನ್ನದು ಎಂಬೀ ಎರಡು ವೃತ್ತಿಗಳೇ ಸಂಸಾರಕ್ಕೆ ಕಾರಣಗಳು. ಅಥವಾ ನಾನೇ ಕರ್ತಾ ಎಂದು ಜೀವರಿಗೆ ಸ್ವತಂತ್ರ ಕರ್ತೃತ್ವ ಭ್ರಮರೂಪವಾದ ಮನೋವೃತ್ತಿ ಒಂದೇ ವಿಶೇಷವಾಗಿ ಸಂಸಾರ ಕಾರಣವು.

ಆರ್ತಿಃ ಎಂದರೆ ಗುಹ್ಯೇಂದ್ರಿಯ ವಿಷಯವು.

**ಸಂಸಾರ ಕಾರಣಗಳು ಯಾವುವು?**

೧) ವಿಷಯ ದಶಕ ಅಭಿಮಾನ ದ್ವಯ ಹೀಗೆ ಈ ದ್ವಾದಶ ಸಂಸಾರಕ್ಕೆ ಕಾರಣ.

೨) ವಿಷಯ ದಶಕಗಳು ಅಭಿಮಾನವಿಲ್ಲದೆ ಬಂಧಕವಾಗಲಾರವು ಕಾರಣ ಅಭಿಮಾನಗಳೆರಡೇ ಸಂಸಾರ ಕಾರಣ ಎಂಬುದು ಎರಡನೆಯ ಪಕ್ಷ.

೩) ಮಮ ಎಂಬ ಅಭಿಮಾನವು ಅಹಮೇವ ಕರ್ತಾ ಎಂಬ ಅಭಿಮಾನದಲ್ಲಿ ಸೇರುವುದರಿಂದ ಒಂದೇ ಸಂಸಾರ ಕಾರಣ ಎಂಬುದು ಮೂರನೇ ಪಕ್ಷ ಎಂದು ತಿಳಿಯಬೇಕು.

ಮೂಲದಲ್ಲಿ **ಆರ್ತಿ** (ಅತ್ತಿ ಎಂದು ಪಾಠಾಂತರ) ಶಬ್ದದಿಂದ ಯಾವ ಕರ್ಮೇಂದ್ರಿಯ ವಿಷಯ ಹೇಳಿದೆ ಎಂದು ತಿಳಿಯುವುದಿಲ್ಲ ಕಾರಣ **ಆರ್ತಿ ಉಪಸ್ಥವಿಷಯ** ಎಂದಿರುವರು ಆಚಾರ್ಯರು. ಆರ್ತಿಃ ಎಂದರೆ ಸಂಭೋಗ. ಇದು ಗುಹ್ಯೇಂದ್ರಿಯ ವಿಷಯವೆಂದು ಭಾವ (ರೇಫದಲ್ಲಿ ಅಕಾರ ಲೋಪ ಛಾಂದಸ). ॥೧೧॥

ಹನ್ನೊಂದು ಇಂದ್ರಿಯಗಳಿಂದ ಉಂಟಾಗುವ ಹನ್ನೊಂದು ವೃತ್ತಿಗಳು ಯಾವ ನಿಮಿತ್ತಗಳಿಂದ ಯಾವ ಉಪಾದಾನದಿಂದ ಯಾವ ಕರ್ತೃವಿನಿಂದ ಯಾರಿಗೆ ತಿಳಿಸುವುವು ಎಷ್ಟು ರೀತಿ ಹುಟ್ಟುವವು ಎಂದರೆ ಹೇಳುವರು

**ದ್ರವ್ಯಸ್ವಭಾವಾಶಯಕರ್ಮಕಾಲೈರೇಕಾದಶಾಮೀ ಮನಸೋ ವಿಕಾರಾಃ ।**
**ಸಹಸ್ರಶಃ ಶತಶಃ ಕೋಟಿಶಶ್ಚ ಕ್ಷೇತ್ರಜ್ಞತೋ ನ ಮಿಥೋ ನ ಸ್ವತಃ ಸ್ಯುಃ ॥೧೨॥**

**ದ್ರವ್ಯ** ದೇಹೇಂದ್ರಿಯಗಳು **ಸ್ವಭಾವ** ಜೀವನ ಅನಾದಿಯೋಗ್ಯತೆ **ಆಶಯ** ಸಂಸ್ಕಾರ **ಕರ್ಮ** ಜನ್ಮಾಂತರದಲ್ಲಿ ಮಾಡಿದ ಪುಣ್ಯ ಪಾಪಗಳೆಂಬ ಅದೃಷ್ಟ **ಕಾಲೈಃ** ಇವುಗಳು ಫಲಿಸುವಂತೆ ಮಾಡುವ ಸಮಯ ಇವುಗಳಿಂದ **ಅಮೀ** ಮೇಲೆ ಹೇಳಿದ ಈ **ಏಕಾದಶ** ಹನ್ನೊಂದು **ಮನಸೋ ವಿಕಾರಾಃ** ಮನಸಿನ ವಿಕಾರಗಳು **ಜೀವಸ್ಯ** ಜೀವನಿಗೆ **ಕ್ಷೇತ್ರಜ್ಞತಃ** ಜೀವಾಂತರ್ಯಾಮಿಯಾದ ಹರಿಯಿಂದ **ಶತಶಃ** ನೂರೂಗಟ್ಟಲೆ **ಸಹಸ್ರಶಃ** ಸಾವಿರಗಟ್ಟಲೆ **ಕೋಟಿಶಶ್ಚ** ಕೋಟಿಗಟ್ಟಲೆ **ಚ** ಇದಕ್ಕೂ ಹೆಚ್ಚು ಸಂಖ್ಯೆಯಲ್ಲಿ ಆಗುವವು **ಮಿಥಃ** ಪರಸ್ಪರಾಪೇಕ್ಷೆಯಿಂದ **ನ ಸ್ಯುಃ** ಆಗಲಾರವು **ಸ್ವತಃ ನ ಸ್ಯುಃ** ತಾವಾಗಿಯೇ ಆಗಲಾರವು ॥೧೨॥

ಇಲ್ಲಿ ದ್ರವ್ಯ ಸ್ವಭಾವ ಶಬ್ದಗಳ ಪ್ರಕೃತ ಸಂಗತ ಅರ್ಥ ಹೇಳುವರು

ತಾತ್ಪರ್ಯ - ''ದ್ರವ್ಯಂ ದೇಹಾದಿಃ ಸ್ವಭಾವೋ ಯೋಗ್ಯತಾ ।''

**ಕ್ಷೇತ್ರಜ್ಞತಃ** ಎಂಬುದಕ್ಕೆ ಅವ್ಯವಹಿತವಾದ ನ ಎಂಬ ಪದದಿಂದ ಅನ್ವಯ ಮಾಡಿದರೆ ಕ್ಷೇತಜ್ಞನಿಂದ ಆಗುವುದಿಲ್ಲ ಪರಸ್ಪರವೂ ಆಗುವುದಿಲ್ಲ ಕಿಂತು ಸ್ವತಃ ಆಗುವುದು. ಹೀಗೆ ಅರ್ಥ ತೋರುವುದು ಕಾರಣ ಅದು ಸರಿಯಲ್ಲ ಎಂದು ತಿಳಿಸಲು ಅನ್ವಯ ಹೇಳುವರು

''ಜೀವಸ್ಯ ಕ್ಷೇತ್ರಜ್ಞತಃ ಸ್ಯುಃ । ಮಿಥಃ ಸ್ವತಶ್ಚ ನ ಸ್ಯುಃ ॥''

ದ್ರವ್ಯ ಎಂದರೆ ಜೀವನ ದೇಹೇಂದ್ರಿಯಗಳು. ಸ್ವಭಾವ ಎಂದರೆ ಅನಾದಿ ಯೋಗ್ಯತೆಯು. ಜೀವರಿಗೆ ಶ್ರೀಹರಿಯ ಅನುಗ್ರಹದಿಂದ ಏಕಾದಶ ವೃತ್ತಿಗಳು ಆಗುತ್ತವೆ. ಜೀವರಿಗೆ ಪರಸ್ಪರ ಆಗುವುದಿಲ್ಲ. ತನ್ನಿಂದ ತನಗೂ ಆಗುವುದಿಲ್ಲ ಎಂದು ಭಾವ.

ಹೀಗೆ ಮೂರು ಶ್ಲೋಕಗಳಿಂದ **ಬಹಿಃ ಪದಂ ಶ್ರಯತೇ** ಗುಣಕರ್ಮಾನು-ಬದ್ಧವಾದ ಮನಸ್ಸು ಬಾಹ್ಯವಿಷಯಕವಾದ ಶಬ್ದಾದಿವೃತ್ತಿಗಳನ್ನು ಹುಟ್ಟಿಸುತ್ತದೆ ಎಂಬುದನ್ನು ಉಪಪಾದಿಸಿ ಈಗ ಶ್ರೀಹರಿಗೆನೇ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಉಪಪಾದಿಸುತ್ತ **ಅನತ್ರ ತತ್ವಂ ಶ್ರಯತೇ** ಎಂದು ಹೇಳಿದ ತತ್ತ್ವವನ್ನು ಉಪದೇಶಿಸುವರು.

**ಕ್ಷೇತ್ರಜ್ಞ ಏತಾ ಮನಸೋ ವಿಭೂತೀರ್ಜೀವಸ್ಯ ಮಾಯಾರಚಿತಾ ಅನಿತ್ಯಾ ।**
**ಆವಿರ್ಹಿತಾಃ ಕ್ವಾಪಿ ತಿರೋಹಿತಾಶ್ಚ ಶುದ್ಧೋ ವಿಚಷ್ಟೇ ಹ್ಯವಿಶುದ್ಧಕರ್ತುಃ ॥೧೩॥**

**ಶುದ್ಧಃ** ಅವುಗಳನ್ನು ನೋಡಿದರೂ ಯಾವ ವಿಕಾರವಿಲ್ಲದ **ಕ್ಷೇತ್ರಜ್ಞಃ** ಜೀವದೇಹಾಂತರ್ಯಾಮಿ ಶ್ರೀಹರಿಯು **ಏತಾಃ** ಮೇಲೆ ಹೇಳಿದ ಈ **ಮಾಯಾರಚಿತಾಃ** ಪ್ರಕೃತಿ ನಿರ್ಮಿತಗಳಾದ ತನ್ನ ಇಚ್ಛೆಯಿಂದ ನಿರ್ಮಿತಗಳಾದ **ಅನಿತ್ಯಾಃ** ನಶ್ವರಗಳಾದ **ಕ್ವಾಪಿ** ಜಾಗ್ರತ್ ಸ್ವಪ್ನಾವಸ್ಥೆಗಳಲ್ಲಿ ಕೆಲವು ದೇಹಗಳಲ್ಲಿ ಅಥವಾ ಉಪಾದೇಯ ವಿಷಯಗಳಲ್ಲಿ ಉಂಟಾದ ವೃತ್ತಿಗಳಲ್ಲಿ **ಆವಿರ್ಹಿತಾಃ** 'ಇದಂ ಅಹಂ ಜಾನಾಮಿ' 'ಇದನ್ನು ನಾನು ತಿಳಿದಿದ್ದೇನೆ' ಎಂದು ಅನುವ್ಯವಸಿತವಾದ **ಕ್ವಾಪಿ** ಕೆಲವೊಂದೆಡೆ ತೃಣಾದಿವಿಷಯಗಳಲ್ಲಿ **ತಿರೋಹಿತಾಃ** ಅನುವ್ಯವಸಿತವಾಗದಿರುವ (ಜಾಗ್ರತ್ ಸ್ವಪ್ನಗಳಲ್ಲಿ ಆವಿರ್ಹಿತಾಃ ಸುಪ್ತಿಯಲ್ಲಿ ತಿರೋಹಿತಾಃ) **ಅವಿಶುದ್ಧಕರ್ತುಃ** ಅವುಗಳ ಸಂಬಂಧದಿಂದ ವಿಕಾರಗೊಳ್ಳುವ ಕರ್ತನಾದ **ಜೀವಸ್ಯ** ಅನುಭವಿಸಲಿರುವ ಜೀವನ ಮನಸ್ಸಿನ **ವಿಭೂತೀಃ** ವಿವಿಧ ರೀತಿಯ ವೃತ್ತಿಗಳನ್ನು **ವಿಚಷ್ಟೇ** ಸಾಕ್ಷಿಯಾಗಿ ನೋಡುವನು. ಅನುಭವಿಸುವುದಿಲ್ಲ. ಇದರಿಂದ ಕ್ಷೇತ್ರಜ್ಞನು ಜೀವಭಿನ್ನನೇ ಎಂಬುದೇ ತತ್ತ್ವ ಎಂದು ಹೇಳಿದಂತಾಯಿತು. ॥ ೧೩ ॥

**ಕ್ಷೇತ್ರಜ್ಞ ಆತ್ಮಾ ಪುರುಷಃ ಪುರಾಣಃ**
**ಸಾಕ್ಷಾತ್ ಸ್ವಯಂಜ್ಯೋತಿರಜಃ ಪರೇಶಃ ।**
**ನಾರಾಯಣೋ ಭಗವಾನ್ವಾಸುದೇವಃ**
**ಸ್ವಮಾಯಯಾಽಽತ್ಮನ್ಯವಧೀಯಮಾನಃ ॥೧೪॥**

**ಆತ್ಮಾ** ಸರ್ವತ್ರವ್ಯಾಪ್ತನು, ಜೀವಾಂತರ್ಯಾಮಿಯು **ಪುರುಷಃ** ದೇಹಗಳಲ್ಲಿ ನೆಲೆಸಿರುವವನು **ಪುರಾಣಃ** ಅತೀತಾನಾಗತಗಳನ್ನು ತಿಳಿದವನು **ಸಾಕ್ಷಾತ್** ಮುಖ್ಯವಾಗಿ ಪರಾಪೇಕ್ಷೆಯಿಲ್ಲದೇ **ಸ್ವಯಂಜ್ಯೋತಿಃ** ಸ್ವಪ್ರಕಾಶನು **ಅಜಃ**

 

ಉತ್ಪತ್ತಿರಹಿತನು **ಪರೇಶಃ** ಉತ್ತಮರಾದ ಬ್ರಹ್ಮಾದಿಗಳಿಗೆ ನಿಯಾಮಕನು **ನಾರಾಯಣಃ** ವೇದಪ್ರತಿಪಾದ್ಯನು ನೀರೇ ಆಶ್ರಯವಾಗಿವುಳ್ಳವನು ಮುಂತಾದ ಅನೇಕ ಕಾರಣಗಳಿಂದ ನಾರಾಯಣ ಶಬ್ದ ವಾಚ್ಯನು **ಭಗವಾನ್** ದೇವತೆಗಳ ಷಡ್ಗುಣಗಳು ನಿಯಮ್ಯವಾಗಿವುಳ್ಳವನು (**ಐಶ್ವರ್ಯಾದಿಗುಣೈಃ ಷಡ್ಭಿಃ ಸಾಮಗ್ರ್ಯಾತ್ ಸರ್ವದೇವತಾಃ ಭಗವಚ್ಛಬ್ದವಾಚ್ಯಾಶ್ಚ ಸಾಕ್ಷಾತ್ತು ಭಗವಾನ್ ಹರಿಃ । ನಿರಪೇಕ್ಷಂತು ಸಾಮರ್ಥ್ಯಂ ತಸ್ಯ ಸರ್ವಾಧಿಕಂ ಯತಃ**) **ವಾಸುದೇವಃ** ಎಲ್ಲಾ ಭೂತಗಳಲ್ಲಿ ವಾಸಿಸುವ ಕ್ರೀಡಾದಿಗುಣವಿಶಿಷ್ಟನಾದ **ಕ್ಷೇತ್ರಜ್ಞಃ** ಕ್ಷೇತ್ರಜ್ಞನೆಂದು ಕರೆಸಿಕೊಳ್ಳುವ ಶ್ರೀಹರಿಯು **ಸ್ವಮಾಯಯಾ** ತನ್ನ ಇಚ್ಛೆಯಿಂದಲೇ **ಆತ್ಮನ್ ಏವ** ತನ್ನಲ್ಲಿಯೇ **ಆಶ್ರಿತಃ** ಆಶ್ರಿತನಾಗಿರುವನು **ವ್ಯವಧೀಯಮಾನಃ** ಜೀವನದೃಷ್ಟಿಗೆ ಕಾಣದೆ ಇರುವನು.

ಜ್ಞಾತೃತ್ವಾದಿ ವಿಶಿಷ್ಟನಾದವನೇ ಶುದ್ಧತತ್ತ್ವ ಹೊರತು ನಿರ್ಗುಣನಲ್ಲ ಎಂದು ತಿಳಿಸಲು ಈ ವಿಶೇಷಣಗಳನ್ನು ಹೇಳಿರುವರು.

'**ಯಚ್ಚಾಪ್ನೋತಿ ಯದಾದತ್ತೇ**' '**ಮಹಾಂತಂ ವಿಭುಮಾತ್ಮಾನಂ**' ಮುಂತಾದ ಶ್ರುತಿಗಳಲ್ಲಿ ಆತ್ಮನೆಂದರೆ ವ್ಯಾಪ್ತ ಎಂಬರ್ಥ ಹೇಳಲಾಗಿದೆ. ವ್ಯಾಪ್ತವಸ್ತುವು ರೂಪವಿಲ್ಲದ ಆಕಾಶದಂತೆ ಆದರೆ ತಿಳಿಯಲು ಸಾಧ್ಯವಾಗದು ಕಾರಣ **ಪುರುಷಃ** ಎಂದಿದ್ದಾರೆ. '**ಸಹಸ್ರಶೀರ್ಷಾ ಪುರುಷಃ**' ಎಂಬಲ್ಲಿ ಪುರುಷನಾಮಕನಾದ ಶ್ರೀಹರಿಗೆ ಆಕಾರವನ್ನು (ರೂಪವನ್ನು) ಹೇಳಿದೆ. ದೇಹದಲ್ಲಿ ಇರುವವನು ಪುರುಷ ಎಂದರೆ ದೇಹಪರಿಣಾಮದಿಂದ ಅದರಲ್ಲಿರುವ ಅವನಿಗೂ ಪರಿಣಾಮ ಬರಬೇಕಾದೀತು ಎಂದರೆ **ಪುರಾಣಃ** ಎಂದಿರುವರು '**ಶಾಶ್ವತೋಽಯಂ ಪುರಾಣಃ**' ಎಂಬ ಶ್ರುತಿಯು ಶಾಶ್ವತತೆಯನ್ನು ತಿಳಿಸುವುದು. ಕೆಲವು ದಿವಸ ಕಳೆದರೂ ಪುರಾಣ ಆಗಬಹುದು ಕಾರಣ **ಸಾಕ್ಷಾತ್** ಎಂದಿರುವರು. ಮುಖ್ಯವಾಗಿ ಎಂದರ್ಥ. ಅನಾದಿಯಾದ್ದರಿಂದ ಪ್ರಕೃತಿಯು ಸಾಕ್ಷಾತ್ ಪುರಾಣ ಆಗಬಹುದು ಕಾರಣ **ಸ್ವಯಂಜ್ಯೋತಿ** ಎಂದಿರುವರು. '**ಆಶ್ರಯಂ ಪುರುಷಃ ಸ್ವಯಂಜ್ಯೋತಿಃ ಭವತಿ**' ಎಂದು ಶ್ರುತಿಯುಂಟು. ಇದಕ್ಕೂ ಜೀವನಂತೆ ಜನನವೇಕಾಗಬಾರದು ಎಂದರೆ **ಅಜಃ** ಎಂದಿರುವರು. '**ಅಜೋ ನಿತ್ಯಃ**' ಎಂದು ಶ್ರುತಿ. ಈ ಅಜ ಬ್ರಹ್ಮನೇಕಾಗಬಾರದು ಎಂದರೆ **ಪರೇಶಃ** ಎಂದಿರುವರು. '**ಯೋ ಬ್ರಹ್ಮಾಣಂ ವಿಧಧಾತಿ ಪೂರ್ವಂ**' '**ಬ್ರಹ್ಮಣೋ ಅಧಿಪತಿಃ**' ಎಂಬ ಶ್ರುತಿಗಳು ಇದನ್ನು ತಿಳಿಸುವವು. ಇವನು ಪಶುಪತಿ ಎಂಬ ಸಂದೇಹ ಬರದಿರಲು **ನಾರಾಯಣ** ಎಂದು ಹೇಳಿದ್ದು.

ನರರಸಮೂಹಕ್ಕೆ ನಾರವೆಂದು ಹೆಸರು. ಅದಕ್ಕೆ ಆಶ್ರಯ ನಾರಾಯಣ. ಈ ಯೌಗಿಕಾರ್ಥ ಗ್ರಾಮಾಧಿಪತಿಗೂ ಬರಬಹುದು. ಅದಕ್ಕಾಗಿ **ಭಗವಾನ್** ಎಂಬ ವಿಶೇಷಣ **'ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಂ ಆಗತಿಂ ಗತಿಂ । ವೇತ್ತಿ ವಿದ್ಯಾಂ ಅವಿದ್ಯಾಂ ಚ ಸ ವಾಚ್ಯೋ ಭಗವಾನಿತಿ'** ಎಂದು ಹೇಳಿರುವ ಅರ್ಥವು ತ್ರಿಕಾಲದರ್ಶಿಯಾದ ಋಷಿಗೂ ಬರಬಹುದು ಇದಕ್ಕಾಗಿ **ವಾಸುದೇವಃ** ಎಂದು ವಿಶೇಷಣ ಹೀಗೆ ನ್ಯಾಯ ರೀತಿಯಿಂದ ಇಲ್ಲದಿದ್ದರೂ ಪೌರಾಣಿಕ ರೀತಿಯಿಂದ ವಿಶೇಷಣ ಪ್ರಯೋಜನವನ್ನೂ ವಿಜಯಧ್ವಜರು ತೋರಿಸಿ ಉಪಹಾಸ ಮಾಡಲಾಗದು ಎಂದಿರುವರು.

## ಸ್ವಮಾಯಯಾ ಎಂದರೆ ಅನಿರ್ವಾಚ್ಯ ಅವಿದ್ಯೆಯೇ?

ಇಲ್ಲಿ ಸ್ವಮಾಯಯಾ ಎಂದರೆ ಅನಿರ್ವಾಚ್ಯ ಅವಿದ್ಯೆಯಿಂದ ತನಗೆ ತಿಳಿಯದಿರುವ ಎಂಬ ವಿಪರೀತ ಅರ್ಥವಾಗದಿರಲು ತಾತ್ಪರ್ಯ ಹೇಳುವರು

''ಸ್ವಮಾಯಯಾಽಽತ್ಮನ್ ವ್ಯವಧೀಯಮಾನಃ ಸ್ವೇಚ್ಛಯಾ ಸ್ವಸ್ಮಿನ್ನೇವ
ತಿರೋಹಿತತ್ವೇನ ಸ್ಥಿತಃ''

ಪ್ರಮಾಣ ಹೇಳುವರು

'ಸ್ವಾತ್ಮಾಧಾರಃ ಸ್ವೇಚ್ಛಯೈವ ಜೀವದೃಷ್ಟೇಸ್ತಿರೋಹಿತಃ ।
ಕ್ಷೇತ್ರಜ್ಞೇತ್ಯುಚ್ಯತೇ ವಿಷ್ಣುಃ ಜೀವಸ್ಥಃ ಪುರುಷೋತ್ತಮಃ ॥

**ಸ್ವಮಾಯಯಾತ್ಮನ್ವ್ಯಧೀಯಮಾನ** ಎಂಬುದಕ್ಕೆ ತನ್ನ ಇಚ್ಛೆಯಿಂದಲೇ ತನ್ನಲ್ಲಿಯೇ ಜೀವನಿಗೆ ತಿರೋಹಿತನಾಗಿರುವವನೆಂದರ್ಥ. ಜೀವನಲ್ಲಿರುವ ಪುರುಷೋತ್ತಮನು ತನ್ನ ಇಚ್ಛೆಯಿಂದಲೇ ತಾನೇ ಆಧಾರನಾಗಿ ಜೀವನಿಗೆ ತಿರೋಹಿತನಾಗಿರುವುದರಿಂದ ಕ್ಷೇತ್ರಜ್ಞನೆನಿಸುತ್ತಾನೆ.

ಇದರಿಂದ ಭಗವಂತ ಜೀವಾಂತರ್ಯಾಮಿಯಾದರೆ ಜೀವನು ಭಗವಂತನಿಗೆ ಆಶ್ರಯನಾಗಬೇಕಾಗುವುದು ಜೀವನಿಗೆ ಕಾಣಬೇಕಾಗುವುದು ಎಂಬ ಶಂಕೆಗಳನ್ನು ಪರಿಹರಿಸಿದಂತಾಯಿತು. ॥೧೪॥

ಭಗವಂತನು ಜೀವಾಂತರ್ಯಾಮಿಯಾದರೆ ಅವನಲ್ಲಿಯ ಪಾಪಾದಿಗಳ ಸಂಬಂಧವಾಗಬೇಕಾಗುವುದು ಎಂಬ ಶಂಕೆಯನ್ನು ದೃಷ್ಟಾಂತದಿಂದ ಪರಿಹರಿಸುವರು




**ಯಥಾನಿಲಃ ಸ್ಥಾವರಜಂಗಮಾನಾಮಾತ್ಮಸ್ವರೂಪೇಣ ನಿವಿಷ್ಟ ಈಷ್ಟೇ ।**
**ಏವಂ ಪರೋ ಭಗವಾನ್ವಾಸುದೇವಃ ಕ್ಷೇತ್ರಜ್ಞ ಆತ್ಮೇದಮನುಪ್ರವಿಷ್ಟಃ ॥೧೫॥**

**ಯಥಾ** ಹೇಗೆ **ಅನಿಲಃ** ಮುಖ್ಯವಾಯುವು **ಸ್ಥಾವರಜಂಗಮಾನಾಂ** (ಚೇತನಾಚೇತನಗಳಲ್ಲಿ) **ಆತ್ಮಸ್ವರೂಪೇಣ** ಪ್ರಾಣರೂಪದಿಂದ (ಸ್ಥಿರಚರಜೀವರಲ್ಲಿ) **ನಿವಿಷ್ಟಃ** ಪ್ರವೇಶ ಮಾಡಿ **ಈಷ್ಟೇ** ಪ್ರೇರಿಸುವನು ಅಂದ ಮಾತ್ರಕ್ಕೆ ಅವನಿಗೆ ಅವುಗಳಲ್ಲಿ ದುಃಖಲೇಪವಾಗುವುದಿಲ್ಲ **ಏವಂ** ಅದರಂತೆ **ಪರಃ** ಸರ್ವೋತ್ತಮನಾದ **ಭಗವಾನ್** ಐಶ್ವರ್ಯಶಾಲಿಯಾದ **ವಾಸುದೇವಃ ಕ್ಷೇತ್ರಜ್ಞಃ** ಶ್ರೀಹರಿಯು **ಆತ್ಮಾ ಸನ್** ಅಂತರ್ಯಾಮಿಯಾಗಿ **ಇದಂ** ಸ್ಥಾವರ ಜಂಗಮಾತ್ಮಕ ಜಗತ್ತನ್ನು **ಅನುಪ್ರವಿಷ್ಟಃ** ಪ್ರವೇಶ ಮಾಡಿ **ಈಷ್ಟೇ** ಪ್ರೇರಿಸುವನು. ಶ್ರೀಹರಿಗಿಂತ ಕಡಿಮೆಯಾದ ವಾಯುವಿಗೆ ಲೇಪವಿಲ್ಲ ಅಂದಮೇಲೆ ಶ್ರೀಹರಿಗೆ ಲೇಪ ಹೇಗೆ ಸಾಧ್ಯವೆಂದು ಭಾವ. ॥೧೫॥

ಹೀಗೆ ಸಂಸಾರ ಕಾರಣವನ್ನು, ಶ್ರೀಹರಿತತ್ವವನ್ನು ಉಪದೇಶಮಾಡಿ ಈ ವಿಧ ಸಂಸಾರದಲ್ಲಿ ಜೀವನು ಎಲ್ಲಿಯವರೆಗೆ ತಿರುಗುವನು ಎಂದರೆ ಅವಧಿ ಹೇಳುವನು

**ನ ಯಾವದೇತಾಂ ತನುಭೃನ್ನರೇಂದ್ರ**
**ವಿಧೂಯ ಮಾಯಾಂ ವಯುನೋದಯೇನ ।**
**ವಿಮುಕ್ತಸಂಗೋ ಜಿತಷಟ್ಸಪತ್ನೋ**
**ವೇದಾರ್ಥತತ್ವಂ ಭ್ರಮತೀಹ ತಾವತ್ ॥೧೬॥**

**ಹೇ ನರೇಂದ್ರ** ರಾಜನೇ **ತನುಭೃತ್** ಮೋಕ್ಷಯೋಗ್ಯನಾದ ದೇಹಧಾರಿಯು **ವಯುನೋದಯೇನ** ಪರೋಕ್ಷಜ್ಞಾನ ಹುಟ್ಟುವುದರಿಂದ **ಯಾವತ್** ಎಲ್ಲಿವರೆಗೆ **ಏತಾಂ ಮಾಯಾಂ** ವಿಷಯಗಳಲ್ಲಿ ಅಹಂ ಮಮ ಎಂಬ ಅಭಿಮಾನವನ್ನು **ವಿಧೂಯ** ಕಳೆದುಕೊಂಡು **ವಿಮುಕ್ತಸಂಗಃ** ಸ್ತ್ರೀಪುತ್ರಾದಿಸ್ನೇಹರಹಿತನಾಗಿ **ಜಿತಷಟ್ಸಪತ್ನಃ** ಕಾಮಕ್ರೋಧಾದಿ ಆರು ಶತ್ರುಗಳನ್ನು ಅಥವಾ ಆರು ಇಂದ್ರಿಯಗಳನ್ನೂ ಗೆದ್ದವನಾಗಿ **ಅರ್ಥತತ್ವಂ** ವೇದಾರ್ಥಸಾರನಾದ ಪರಬ್ರಹ್ಮನನ್ನೂ **ನ ವೇದ** ಅಪರೋಕ್ಷವಾಗಿ ತಿಳಿಯುವುದಿಲ್ಲವೋ **ತಾವತ್** ಅಲ್ಲಿಯವರೆಗ **ಇಹ** ಸಂಸಾರದಲ್ಲಿ **ಭ್ರಮತಿ** ತಿರುಗುವನು. ॥೧೬॥

ಅಪರೋಕ್ಷ ಜ್ಞಾನಿಗಳಿಗೂ ಸಂಸಾರ ಕಂಡಿದೆ ಕಾರಣ ಇದು ಹೇಗೆ ಎಂದರೆ ಜೀವನ್ಮುಕ್ತರಿಗೆ ಮನಸ್ಸಿನಲ್ಲಿ ಮಮತೆ ಹುಟ್ಟದಿರುವ ಕೊನೆ ಅವಧಿಯನ್ನು ಹೇಳುವನು

**ನ ಯಾವದೇತನ್ಮನ ಆತ್ಮಲಿಂಗಂ**
**ಸಂಸಾರತಾಪಾವಪನಂ ಜನಸ್ಯ ।**
**ಯಚ್ಛೋಕಮೋಹಾಮಯಸಂಗಲೋಭ**
**ವೈರಾನುಬಂಧಂ ಮಮತಾಂ ವಿಧತ್ತೇ ॥೧೭॥**

**ಯಾವತ್** ಎಲ್ಲಿಯವರೆಗೆ **ಜನಸ್ಯ** ಮುಕ್ತಿಯೋಗ್ಯ ಜೀವರ **ಯತ್ ಏತತ್** ಯಾವ ಈ **ಆತ್ಮಲಿಂಗಂ** ಜೀವನ ಯೋಗ್ಯತೆಯನ್ನು ತಿಳಿಸುವ **ಶೋಕ** ದುಃಖ **ಮೋಹ** ಭ್ರಾಂತಿ **ಆಮಯ** ರೋಗ **ಸಂಗ** ಅಭಿಮಾನ **ಲೋಭ ವೈರ** ಇವುಗಳ **ಅನುಬಂಧಂ** ಮುಂದುವರೆಯಲು ಕಾರಣವಾದ **ಸಂಸಾರ ತಾಪಾವಪನಂ** ಸಂಸಾರದುಃಖಕ್ಕೆ ಕಾರಣವಾದ **ಮನಃ** ಮನಸ್ಸು **ಮಮತಾಂ** ನಾನು ನನ್ನದು ಎಂಬ ಅಭಿಮಾನವನ್ನು ಸಂಪೂರ್ಣವಾಗಿ **ನ ವಿಧತ್ತೇ** ಹುಟ್ಟಿಸುವುದಿಲ್ಲವೋ ಅಲ್ಲಿಯವರೆಗೆ ಸಂಸಾರದಲ್ಲಿರುವನು.

ಎಲ್ಲಿಯವರೆಗೆ ಹುಟ್ಟಿಸುವುದೋ ಅಲ್ಲಿಯವರೆಗೆ ಸಂಸಾರದಿಂದ ನಿವರ್ತನಾಗುವುದಿಲ್ಲ. ಹೀಗೂ ಅರ್ಥ. ॥೧೭॥

ಹಿಂದಿನ ಶ್ಲೋಕದಲ್ಲಿ ಜ್ಞಾನೋದಯದಿಂದ ಅಭಿಮಾನವನ್ನು ಕಳೆದುಕೊಳ್ಳಬೇಕೆಂದು ಹೇಳಿದ್ದನ್ನೇ ವಿವರಿಸುತ್ತ ಸಂಸಾರ ನಿವೃತ್ತಿ ಸಾಧನವಾದ ಜ್ಞಾನವನ್ನು ನೀನೂ ಸಂಪಾದಿಸು ಎಂದು ಹೇಳುವನು

**ಭ್ರಾತೃವ್ಯಮೇನಂ ತ್ವಮದಭ್ರವೀರ್ಯ-**
**ಮುಪೇಕ್ಷಯಾಽಪ್ಯೇಧಿತಮಪ್ರಮತ್ತಃ ।**
**ಗುರೋರ್ಹರೇಶ್ಚರಣೋಪಾಸನಾಸ್ತ್ರೋ**
**ಜಹಿ ವ್ಯಲೀಕಂ ಸ್ವಯಮಾತ್ಮಮೋಹಮ್ ॥೧೮॥**

**ತ್ವಂ** ನೀನು **ಅಪ್ರಮತ್ತಃ** ಸಾವಧಾನನಾಗಿ(ಪ್ರಮಾದ ಇಲ್ಲದವನಾಗಿ) **ಸ್ವಯಂ** ಏವ ಸ್ವಾಭಾವಿಕವಾಗಿಯೇ **ಅದಭ್ರವೀರ್ಯಂ** ಬಹಳ ಸಾಮರ್ಥ್ಯವುಳ್ಳ **ಉಪೇಕ್ಷಯಾಪಿ ಏಧಿತಂ** ಅಧಿಕಾರಿಯು ಉದಾಸೀನ ಮಾಡಿದರೂ ಪ್ರತಿದಿನ ಅಭಿವೃದ್ಧವಾದ **ವ್ಯಲೀಕಂ** ಅನೃತಾರ್ಥವಿಷಯಕವಾದ **ಭ್ರಾತೃವ್ಯಂ** ಶತ್ರುವಾದ (ಶ್ರೇಯಸ್ಸಿಗೆ ಪ್ರತಿಬಂಧಕವಾದ) ಏನಂ ಈ ಮನಸ್ಸಿನಿಂದ ಹುಟ್ಟಿದ **ಆತ್ಮಮೋಹಂ**




ನಾನು ನನ್ನದು ಎಂಬ ಅಭಿಮಾನ ರೂಪವಾದ ಭ್ರಾಂತಿಯನ್ನು **ಗುರೋಃ** ಗುರುಗಳ **ಹರೇಃ** ಶ್ರೀಹರಿಯ **ಚರಣೋಪಾಸನಾಸ್ತ್ರಃ** ಪಾದಸೇವನೆ ಎಂಬ ಅಸ್ತ್ರವುಳ್ಳವನಾಗಿ **ಜಹಿ** ಹೋಗಲಾಡಿಸು. ಹರಿ ಗುರುಗಳ ಉಪಾಸನೆಯಿಂದ ಜ್ಞಾನವನ್ನು ಸಂಪಾದಿಸಿಕೊಂಡು ಅಭಿಮಾನವನ್ನು ಕಳೆದುಕೋ ಎಂದರ್ಥ **ಉಪೇಕ್ಷಯಾ ಅಪಿ** ಉದಾಸೀನತೆಯಿಂದ, ಗರ್ಹಿತ(ನಿಂದಿತ)ವಾದ ಪಾಪದಿಂದ ಅಭಿವೃದ್ಧವಾದ ಹೀಗೂ ಅರ್ಥ.

ಇಲ್ಲಿ **ಉಪಾಸನಯಾ** ಎಂಬುದರಿಂದ **ವಯುನ** ಎಂಬುದರ, **ಜಹಿ** ಎಂಬುದರಿಂದ **ವಿಧೂನನದ**, **ಆತ್ಮಮೋಹಂ** ಎಂಬುದರಿಂದ **ಮಾಯಾಂ** ಎಂಬುದರ ವಿವರಣ ಮಾಡಿದಂತಾಯಿತು. ಕಳೆದುಕೊಳ್ಳಲು ಯೋಗ್ಯವೆಂದು ತಿಳಿಸಲು **ಭ್ರಾತೃವ್ಯ** ಮುಂತಾದ ವಿಶೇಷಣ ಕೊಟ್ಟಿರುವರು.

ಇಲ್ಲಿ **ದೇಹೇನ ಜಾತಸ್ಯ ಹಿ ಮೇ ನ ಸಂತಿ** ಎಂದು ಬ್ರಾಹ್ಮಣ ಹೇಳಿದಾಗ ಅವನ ಅಭಿಪ್ರಾಯ ತಿಳಿಯದೇ ಮೇಲೆ ತೋರುವ ಅರ್ಥ ಇಟ್ಟುಕೊಂಡು **ಸ್ಥಾಲ್ಯಗ್ನಿತಾಪಾತ್** ಮುಂತಾಗಿ ರಾಜನು ನಿನಗೂ ದೇಹೇಂದ್ರಿಯ ಸನ್ನಿಕರ್ಷ ಇರುವುದರಿಂದ ಸಂಸಾರ ತಾಪ ಬಿಡಲಾಗದ್ದು ಎಂದು ಹೇಳಿದ್ದಕ್ಕೆ ಪರಿಹಾರ ಈ ಪ್ರಕರಣದಿಂದ ಏನು ಹೇಳಿದಂತಾಗಲಿಲ್ಲ ಎಂದು ಶಂಕಿಸಿದರೆ ಹೇಳಿದಂತಾಗಿದೆ ಎಂದು ಹೇಳುವರು ಆಚಾರ್ಯರು

**ತಾತ್ಪರ್ಯ** - ''ಅಭಿಮಾನಾದೇವ ಸಂಸಾರೋಽನ್ಯಥಾ ನೇತಿ ಪರಿಹಾರಃ''

ಬ್ರಾಹ್ಮಣನ ಮಾತಿನ ಅರ್ಥ ತಿಳಿಯದೇ ರಾಜನು ಶಂಕಿಸಿದಾಗ **ದೇಹೇನ ಜಾತಸ್ಯ** ಎಂಬ ತನ್ನ ವಾಕ್ಯಕ್ಕೆ ಅಭಿಮಾನದಿಂದಲೇ ಸಂಸಾರ ಇಲ್ಲದಿದ್ದರೆ ಇಲ್ಲ ಎಂದು ಏನು ಅಭಿಪ್ರಾಯವೋ ಅದನ್ನು ಪ್ರಕಟಿಸಲು ಪ್ರವೃತ್ತವಾದ ಈ ಪ್ರಕರಣದಿಂದ ಪರಿಹಾರ ಹೇಳಿಯೇ ಇದೆ ಎಂದು ಭಾವ. ।।೧೮।।

**।। ಇಲ್ಲಿಗೆ ೧೧ನೇ ಅಧ್ಯಾಯವು ಮುಗಿಯಿತು ।।**

★★★

## ಹನ್ನೊಂದನೇ ಅಧ್ಯಾಯದ ಸಾರ

ಜಡಭರತನು - ರಾಜನೇ! ನೀನು ಜ್ಞಾನಿಯಲ್ಲ. ಆದರೂ ಜ್ಞಾನಿಗಳಂತೆ ಮಾತಾಡುತ್ತಿರುವಿ. ಆದ್ದರಿಂದ ಬಲ್ಲವರ ಮಧ್ಯದಲ್ಲಿ ನೀನು ಉತ್ತಮನೆಂದು ಗಣನೆಗೆ ಬರಲು ಅರ್ಹನಲ್ಲ. ಶಬ್ದತತ್ತ್ವವನ್ನರಿತ ಜ್ಞಾನಿಗಳು ಈ ನಿನ್ನ ವ್ಯವಹಾರವನ್ನು ಒಪ್ಪುವುದಿಲ್ಲ. ಅವರು ವಸ್ತುವಿನ ಯಥಾರ್ಥ ಸ್ವರೂಪವನ್ನೇ ವಿಚಾರ ಮಾಡುವರು. ನೀನಾದರೂ ನಿನ್ನ ಮಾತಿನ ಅರ್ಥವನ್ನೇ ಅರಿಯದೇ ಮಾತನಾಡಿರುವೆ. ಅಪರೋಕ್ಷಜ್ಞಾನಿಗಳು ಶ್ರೀಹರಿಯ ಅಧೀನವಾದ ತಮ್ಮಲ್ಲಿರುವ ಅಲ್ಪಕರ್ತೃತ್ವವನ್ನಿಟ್ಟುಕೊಂಡು ಎಂದೂ ವ್ಯವಹರಿಸುವುದಿಲ್ಲ. ಶ್ರೀಹರಿಯ ಸ್ವತಂತ್ರ ಕರ್ತೃತ್ವವನ್ನೇ ಮುಖ್ಯವಾಗಿ ವ್ಯವಹರಿಸುವರು. ಗೃಹಸ್ಥರು ಮಾಡಬೇಕಾದ ಅನೇಕ ಯಜ್ಞಕರ್ಮಗಳ ವಿಸ್ತಾರವನ್ನು ತಿಳಿಸುವ ಕಲ್ಪಸೂತ್ರಗಳ ಸಹಾಯದಿಂದ '**ವೇದಗಳು ಕೇವಲ ಕರ್ಮ ಪರಗಳು**' ಎಂದು ಹೇಳುವ ವೇದವಾದಗಳಲ್ಲಿಯೂ ಕರ್ಮಬ್ರಹ್ಮಪರವಾಕ್ಯಗಳಿಗೆ ಏಕವಾಕ್ಯತೆಯನ್ನು ತಿಳಿಸುವ ಪರಬ್ರಹ್ಮಸಿದ್ಧಾಂತವು ಚೆನ್ನಾಗಿ ಪ್ರಕಾಶಿತವಾಗುವುದಿಲ್ಲ. ಈ ವೇದವಾದಗಳೂ ನಿನ್ನ ವಾದಗಳಂತೆಯೇ ಜ್ಞಾನಿ ಸಮ್ಮತಗಳಲ್ಲ. ಅಲ್ಪಬುದ್ಧಿಗಳೇ ಹೆಚ್ಚಾದ್ದರಿಂದ ತತ್ತ್ವಾರ್ಥವು ಎಲ್ಲರಿಗೂ ತೋರುವುದಿಲ್ಲವೆಂಬುದು ನಿಶ್ಚಿತ. ಸ್ವಪ್ನಪದಾರ್ಥಗಳು ಅನಿತ್ಯವಾಗಿರುವಂತೆ ಗೃಹಸ್ಥರು ಅನುಭವಿಸುವ ವಿಷಯ ಸುಖಗಳೂ ಅನಿತ್ಯ. ಆದ್ದರಿಂದ ಇವು ಹೇಯ ಎಂದು ಅಧಿಕಾರಿ ಚೇತನನು ತಾನೇ ಊಹಿಸಿಕೊಳ್ಳಬೇಕು. ಹಾಗೆ ಊಹಿಸಿಕೊಳ್ಳದ ಅವನಿಗೆ ವೇದಗಳೂ ಅಪೌರುಷೇಯಗಳಾಗಿ ದೋಷರಹಿತಗಳಾಗಿದ್ದರಿಂದ ಅತ್ಯಂತ ಶ್ರೇಷ್ಠಗಳಾಗಿದ್ದರೂ ತತ್ತ್ವವೆನಿಸಿದ ಬ್ರಹ್ಮನ ಜ್ಞಾನವನ್ನು ಉಂಟು ಮಾಡಲು ಸಮರ್ಥವಾಗಲಾರವು. ಚೇತನನ ಮನಸ್ಸು ಎಲ್ಲಿಯವರೆಗೆ ಸತ್ತ್ವರಜಸ್ತಮೋ




ಗುಣಗಳಿಗೆ ವಶವಾಗಿರುವುದೋ ಅಲ್ಲಿಯವರೆಗೆ ಶಾಸ್ತ್ರವಿಧಿಯನ್ನು ಉಲ್ಲಂಘಿಸಿದ ಈ ಚೇತನನು ಬುದ್ಧಿವ್ಯಾಪಾರಗಳಿಂದ ವಿಷಯಾಭಿಲಾಷೆಗಳಿಂದ ಹಿಂದಿನ ಸಂಸ್ಕಾರಗಳಿಂದ ಧರ್ಮಾಧರ್ಮಗಳಲ್ಲಿ ಒಂದನ್ನು ಮಾಡುತ್ತಲೇ ಇರುವನು. ಹೀಗೆ ಮನಸ್ಸು ಕರ್ಮವಾಸನಾಮಯವಾಗಿರುವುದು. ಆದ್ದರಿಂದಲೇ ಬಾಹ್ಯವಿಷಯಾಸಕ್ತವಾಗಿ ಪ್ರಾಕೃತ ಗುಣಗಳ ಕಾರ್ಯಪರಂಪರೆಯಲ್ಲಿ ತೊಡಗುವನು. ಹೀಗೆ ವಿಕಾರಹೊಂದಿ **ಹತ್ತು ಇಂದ್ರಿಯ, ಐದು ಪ್ರಾಣ** ಮತ್ತು **ಮನಸ್ಸು** ಎಂದು ಹದಿನಾರು ಬಗೆಯಾಗಿ ಲಿಂಗ ಶರೀರದಲ್ಲಿ ಪ್ರಧಾನವಾಗಿ ಈಶ್ವರೇಚ್ಛೆಯಿಂದ ಪ್ರಕೃತಿ ನಿರ್ಮಿತವಾದ ಮನಸ್ಸು ಸಂಸ್ಕಾರ ರೂಪವಾಗಿ ಒಳಗೂ, ವಿಷಯರೂಪವಾಗಿ ಹೊರಗೂ ಇರುವುದು. ಸ್ವಪ್ನಾವಸ್ಥೆಯಲ್ಲಿ ಒಳಗೆ ಜಾಗ್ರದವಸ್ಥೆಯಲ್ಲಿ ಹೊರಗೆ ಕೆಲಸ ಮಾಡುವನು. ದುಃಖವನ್ನು, ಇದರ ಫಲವಾಗಿಯೇ ತನ್ನ ಕರ್ಮಾನುಗುಣವಾಗಿ ದೇವ, ಮಾನುಷ, ಪಶು ಮೊದಲಾದ ದೇಹಗಳನ್ನು ಹೊಂದುವನು. ಅವುಗಳಿಗೆ ಬೇರೆ ಬೇರೆ ಹೆಸರುಗಳು, ಅನೇಕ ರೂಪಗಳು ಹೀಗೆ ಜನ್ಮಗಳಿಗೆ ಕಾರಣವಾದ ಮನಸ್ಸೇ ಸಂಸಾರದಲ್ಲಿ ಸುತ್ತಾಡುವ ಜೀವನನ್ನು ಲಿಂಗ ಶರೀರ ರೂಪದಿಂದ ಸಂಬಂಧಿಸಿ ವಶಮಾಡಿಕೊಂಡು, ಕಾಲರೂಪಿಯಾದ ಶ್ರೀಹರಿಯು ಕರ್ಮಫಲವಾಗಿ ಆಯಾ ಕಾಲದಲ್ಲಿ ಕೊಟ್ಟ ಸುಖ, ದುಃಖ ಮತ್ತು ಮಿಶ್ರಫಲಗಳನ್ನು ಅನುಭವಕ್ಕೆ ತಂದುಕೊಡುವುದು. ಮುಕ್ತಿಯಲ್ಲಿ ಸ್ವರೂಪಾನಂದವನ್ನು, ತಮಸ್ಸಿನಲ್ಲಿ ಸ್ವರೂಪ ದುಃಖವನ್ನೂ ವ್ಯಕ್ತಗೊಳಿಸುವುದು. ಈ ಬಗೆಯ ನಾನು, ನನ್ನದು ಎಂಬ ಸ್ವಾತಂತ್ರ್ಯಾಭಿಮಾನವಿರುವವರೆಗೂ ಸ್ಥೂಲಸೂಕ್ಷ್ಮ ದೇಹಗಳ ಸಂಬಂಧಿಯಾದ ಸುಖ ದುಃಖಾನುಭವ ರೂಪ ಸಂಸಾರವು ಶ್ರೀಹರಿವಾಯುಗಳಿಂದ ಪ್ರೇರಿತವಾದ ಮನಸ್ಸಿನ ಮೂಲಕ ಯಾವಾಗಲೂ ನಡೆಯುತ್ತಲೇ ಇರುವುದು. ಆದ್ದರಿಂದ ಈ ಮನಸ್ಸು ಉತ್ತಮ ಮತ್ತು ಅಧಮ ಜೀವನ ಸಮುದಾಯಕ್ಕೆ ಸೇರಿದ ಸದಾಕಾಲ ಇರುವ ಸ್ವತಃ ಸತ್ವಾದಿ ಪ್ರಾಕೃತ ಗುಣಗಳಿಲ್ಲದ ಮುಖ್ಯ ಕರ್ತನಾದ ಶ್ರೀಹರಿಯ ಪ್ರವೃತ್ತಿಯಲ್ಲಿ ಅಪ್ರಧಾನನಾದ ಜೀವನ ಗುಣ ಸಂಬಂಧಿಯಾದ ಬಂಧನಕ್ಕೂ ಅಪ್ರಾಕೃತಮೋಕ್ಷಕ್ಕೂ ಕಾರಣವೆಂದು ಹೇಳುವರು. ಶಬ್ದಾದಿ ವಿಷಯಗಳಲ್ಲಿ ಆಸಕ್ತವಾದ ಮನಸ್ಸು ಜೀವನ ಸಂಸಾರಕ್ಕೆ ಕಾರಣ. ಇದೇ ವಿಷಯಸಂಗ ರಹಿತವಾಗಿ ಅಪ್ರಾಕೃತ ಶ್ರೀಹರಿಯ ಕಥಾಸಕ್ತವಾದಲ್ಲಿ ಮೋಕ್ಷಕ್ಕೆ ಕಾರಣವಾಗುವುದು. ತುಪ್ಪದಿಂದ ಕೂಡಿದ ಬತ್ತಿಯನ್ನು ಗ್ರಹಿಸುವ ದೀಪವು ಹೊಗೆಯಿಂದ ಕೂಡಿದ ಜ್ವಾಲೆಯನ್ನೂ ತುಪ್ಪವಿಲ್ಲದಿದ್ದ ಕಾಲದಲ್ಲಿ

ಹೊಗೆಯಿಲ್ಲದ ಜ್ವಾಲೆಯನ್ನೂ ಹುಟ್ಟಿಸುವದಷ್ಟೇ. ಇದರಂತೆ ಗುಣಕರ್ಮಸಹಿತವಾದ ಮನಸ್ಸು ಬಾಹ್ಯ ವಿಷಯಗಳನ್ನೂ ವಿಷಯಸುಖಾಸಕ್ತಿಯಿಲ್ಲದ ಮನಸ್ಸು ತತ್ತ್ವವೆನಿಸುವ ಶ್ರೀಹರಿಯನ್ನೂ ಆಶ್ರಯಿಸುವುದು. ಈ ಮನಸ್ಸಿನ ವ್ಯಾಪಾರಗಳು ಹನ್ನೊಂದು. ನಾನು ಶಬ್ದವನ್ನು ಕೇಳಬಯಸುವೆನು ಎಂಬೀ ಬಗೆಯ ಐದು ವಿಷಯಗಳ ಇಚ್ಛೆಗಳು, ಐದು ನಿಶ್ಚಯಕ್ಕೆ ಆಶ್ರಯವಾದ ಬುದ್ಧಿ, ನಾನು ಮಧುರವಾದ ಶಬ್ದವನ್ನು ಕೇಳುತ್ತಿದ್ದೇನೆ ಎಂಬ ಐದು ಬಗೆಯ ವಿಷಯಗಳ ಕುರಿತ ಐದು ಮನಸ್ಸಿನ ವಿಷಯಗಳಾದ ಸ್ಮರಣೆ ಮೊದಲಾದವುಗಳಲ್ಲಿ ಬರುವ ಅಭಿಮಾನ ಒಂದು. ರಹೂಗಣ ರಾಜ! ಜ್ಞಾನೇಂದ್ರಿಯಗಳ ವಿಷಯಗಳಾದ ಶಬ್ದ ಮೊದಲಾದವೂ ವಾಗಾದಿಯಾದ ಕರ್ಮೇಂದ್ರಿಯಗಳ ವಿಷಯಗಳಾದ ವ್ಯವಹಾರ ಮೊದಲಾದವು ಅಭಿಮಾನಕ್ಕೆ ವಿಷಯವಾದ ಶರೀರ ಹೀಗೆ ಹನ್ನೊಂದು ಅಧಿಷ್ಠಾನಗಳನ್ನು ಆ ಇಂದ್ರಿಯ ವ್ಯಾಪಾರಗಳಿಗೆ ಪ್ರಾಜ್ಞರು ಹೇಳುವರು. ಇಂದ್ರಿಯ ಸಮೂಹಗಳೂ, ಇವುಗಳ ಅಧಿಷ್ಠಾನಗಳೇ ಗಂಧ, ರೂಪ, ರಸ, ಸ್ಪರ್ಶ, ಶಬ್ದ, ಮಲವಿಸರ್ಜನೆ, ನಡಿಗೆ, ಸಂಭೋಗ, ಮಾತು, ಕುಶಲಕಲೆ ಇವು ಕ್ರಮವಾಗಿ ಘ್ರಾಣ, ಚಕ್ಷು, ತ್ವಕ್, ಜಿಹ್ವಾ, ಶ್ರೋತ್ರ, ಪಾಯು,ಪಾದ,ಉಪಸ್ಥ, ವಾಕ್ ಮತ್ತು ಪಾಣಿಗಳ ವೃತ್ತಿಗಳಿಗೆ ಆಶ್ರಯಗಳು. ಹನ್ನೊಂದನೇ ಆಶ್ರಯವೇ ನನ್ನದು ಎಂಬ ಅಭಿಮಾನಕ್ಕೆ ಯೋಗ್ಯವಾದ ಇಂದ್ರಿಯಗಣ. ನಾನು ಎಂಬ ಸ್ವಾತಂತ್ರ್ಯಾಭಿಮಾನಕ್ಕೆ ಆಸ್ಪದವಾದ ನಾನಾಧಿಷ್ಠಾನ ಭೂತನಾಡಿಯನ್ನೂ ಹನ್ನೆರಡನೆಯ ಅಧಿಷ್ಠಾನವೆಂದು ಕೆಲವರು ಹೇಳುವರು. ಹೀಗೆ ಹನ್ನೆರಡು ಸಂಖ್ಯೆಯುಳ್ಳದ್ದೆಂದು ಹೇಳಲಾದ ಅಹಂ ಎಂಬ ವೃತ್ತಿಯಿಂದ ಕೂಡಿದ ಅಂತಃಕರಣ ಒಂದೇ ಈ ಸಂಸಾರಕ್ಕೆ ಕಾರಣ. ಇಂದ್ರಿಯಗಳು ಜೀವನ ಯೋಗ್ಯತೆ ಪೂರ್ವಾನುಭವದಿಂದ ಬಂದ ಸಂಸ್ಕಾರ, ಜನ್ಮಾಂತರದಲ್ಲಿ ಮಾಡಿದ ಕರ್ಮ, ಇವುಗಳನ್ನು ಪಕ್ವಗೊಳಿಸುವ ಕಾಲ, ಈ ನಿಮಿತ್ತಗಳಿಂದ ಉದ್ಬೋಧಿತಗಳಾದ ಈ ಹನ್ನೊಂದು ಮನೋವಿಕಾರಗಳೂ ಜೀವನ ಅಂತರ್ಯಾಮಿಯಾದ ಕ್ಷೇತ್ರಜ್ಞನಾಮಕ ಶ್ರೀಹರಿಯಿಂದ ಪ್ರೇರಿತಗಳಾಗಿ ನೂರು, ಸಾವಿರ, ಕೋಟಿಗಟ್ಟಲೇ ಮತ್ತು ಅದಕ್ಕೂ ಹೆಚ್ಚು ಸಂಖ್ಯೆಯಲ್ಲಿ ಜೀವನಿಗೆ ಉಂಟಾಗುವುವು. ಪರಸ್ಪರಾಪೇಕ್ಷೆಯಿಂದಾಗಲಿ ತಾವಾಗಿಯೇ ಆಗಲಿ ಉಂಟಾಗುವುದಿಲ್ಲ. ಈ ವಿವಿಧ ಮನೋವಿಕಾರಗಳು ಪ್ರಕೃತಿ ನಿರ್ಮಿತಗಳು. ಶ್ರೀಹರಿಯ ಇಚ್ಛೆಯಿಂದ ಬಂದವು, ನಶ್ವರಗಳು. ಜಾಗ್ರತ್ ಸ್ವಪ್ನಾವಸ್ಥೆಯಲ್ಲಿ ತೃಣಾದಿ

 

ದೇಹಗಳಲ್ಲಿ ಪ್ರಕಟವಾಗಿರುವವು ನಿದ್ರಾವಸ್ಥೆಯಲ್ಲಿ ತೃಣಾದಿ ದೇಹದಲ್ಲಿ ಅಪ್ರಕಟವಾಗಿರುವವು.

ಇವುಗಳಿಂದ ಅಮುಖ್ಯಕರ್ತೃವಾದ ಜೀವನು ವಿಕಾರಕ್ಕೀಡಾಗುವನು. ಆದರೇ ಕ್ಷೇತ್ರಜ್ಞನಾದ ಶ್ರೀಹರಿಯು ಇವುಗಳಿಂದ ವಿಕಾರಗೊಳ್ಳುವುದಿಲ್ಲ. ಆದ್ದರಿಂದ ಶುದ್ಧನಾದ ಶ್ರೀಹರಿಯು ಸಾಕ್ಷಿಯಾಗಿ ಅವುಗಳನ್ನು ನೋಡುವನು. ಈ ಕ್ಷೇತ್ರಜ್ಞನು ಸರ್ವತ್ರ ವ್ಯಾಪ್ತನು, ಜೀವರ ಅಂತರ್ಯಾಮಿಯು. ಆಕಾರವಿಶಿಷ್ಟದೇಹಗಳಲ್ಲಿ ನೆಲೆಸಿರುವವನು, ಪರಿಣಾಮರಹಿತ, ಎಲ್ಲ ವಿಷಯಗಳನ್ನೂ ಬಲ್ಲ, ಮುಖ್ಯವಾಗಿ ಸ್ವಯಂಪ್ರಕಾಶ, ಉತ್ಪತ್ತಿಶೂನ್ಯ, ಬ್ರಹ್ಮದೇವರಿಗೂ ನಿಯಾಮಕ, ನಾರಾಯಣಶಬ್ದ ವಾಚ್ಯ, ಉತ್ಪತ್ಯಾದಿಗಳನ್ನೂ ಬಲ್ಲವನು, ಎಲ್ಲೆಡೆಯಲ್ಲಿ ವಾಸಿಸಿದರೂ ತತ್ಕೃಯುಕ್ತ ದೋಷವಿಲ್ಲದೇ ಕ್ರೀಡಿಸುವವನು. ಇವನಿಗೆ ಇವನೇ ಆಶ್ರಯ. ತನ್ನ ಇಚ್ಛೆಯಿಂದಲೇ ಜೀವನ ದೃಷ್ಟಿಗೆ ಕಾಣದಂತಿರುವನು. ಸಂಗವಿಲ್ಲದ ಮುಖ್ಯವಾಯುದೇವರು ಪ್ರಾಣವಾಗಿ ಸ್ಥಾವರ ಮತ್ತು ಜಂಗಮ ಪ್ರಾಣಿಗಳೊಳಗೆ ಪ್ರವೇಶಿಸಿ ಅವುಗಳ ಚೇಷ್ಟಾರೂಪ ನಿಯಮನ ಮಾಡಿದರೂ ಆ ದೇಹದ ಸುಖದುಃಖಾನುಭವವಿಲ್ಲದೇ ಇರುವರು. ಇದರಂತೆಯೇ ಸರ್ವೋತ್ತಮನೂ, ಕ್ಷೇತ್ರಜ್ಞನೂ, ಭಗವಂತನೂ ಆದ ವಾಸುದೇವನು ಅಂತರ್ಯಾಮಿಯಾಗಿ ಈ ಸ್ಥಾವರ ಜಂಗಮ ಪ್ರಾಣಿಗಳನ್ನು ಪ್ರವೇಶಿಸಿ ಮನೋವಿಕಾರಗಳನ್ನು ಪ್ರೇರಿಸಿ ನೋಡುತ್ತಿದ್ದರೂ ತತ್ಕೃಯುಕ್ತ ಸುಖದುಃಖಾನುಭವವಿಲ್ಲದೆಯೇ ಇರುವನು (ವಾಯುವಿಗೇ ಇಲ್ಲದಿರುವಾಗ ಅವರಿಗೂ ಉತ್ತಮನಾದ ಶ್ರೀಹರಿಗೆ ಎಲ್ಲಿಯದು?). ನರೇಂದ್ರ! ಮುಕ್ತಿಯೋಗ್ಯ ದೇಹಿಯು ವಿರಕ್ತನಾಗಿ ನಿವೃತ್ತಿ ಕರ್ಮಮಾಡುವವನಾಗಿ ಕಾಮಕ್ರೋಧಾದಿಗಳನ್ನೂ ಜಯಿಸುವುದರಮೂಲಕ ಆರು ಇಂದ್ರಿಯಗಳನ್ನು ಜಯಿಸಿ ಈ ಮನಸ್ಸಿನಲ್ಲಿ ರೂಢವಾಗಿರುವ, ನಾನು ನನ್ನದು ಎಂಬ ಅಭಿಮಾನರೂಪ ಭ್ರಾಂತಿಯನ್ನೂ ಶಾಸ್ತ್ರಶ್ರವಣದಿಂದ ಬಂದ ಪರೋಕ್ಷಜ್ಞಾನದಿಂದ ಇದು ಭ್ರಾಂತಿಯೆಂದು ನಿಶ್ಚಯಿಸಿಕೊಂಡು ಹೋಗಲಾಡಿಸಿ, ಸಕಲ ವೇದ ವಿಷಯನಾದ ಶ್ರೀಹರಿಯನ್ನು ಅಪರೋಕ್ಷದಿಂದ ಕಾಣಬೇಕು. ಹಾಗೆ ಕಾಣದಿರುವವರೆಗೂ ಅವನು ಸಂಸಾರದಲ್ಲಿ ತೊಳಲಾಡುತ್ತಿರುವನು. ಈ ಮನಸ್ಸು ಜೀವನ ಯೋಗ್ಯತೆಯನ್ನೂ ತಿಳಿಸುವುದು. ಶೋಕ, ಮೋಹ, ರೋಗ, ಅಭಿಮಾನ, ಲೋಭ, ವೈರಗಳನ್ನೂ ಬೆಳೆಸುವುದು. ಸಂಸಾರತಾಪ ಮುಂದುವರೆಯಲು ಕಾರಣವಾಗುವುದು. ನಾನು ನನ್ನದು ಎಂಬ

ಅಭಿಮಾನ ಹುಟ್ಟಿಸಿ ಸಂಸಾರದಲ್ಲಿ ಇರುವಂತೆ ಮಾಡುವುದು. ಅದು ಅಭಿಮಾನವನ್ನು ಹುಟ್ಟಿಸದಂತೆ ಆಗುವವರೆಗೂ ಜೀವನಿಗೆ ಸಂಸಾರ ತಪ್ಪಿದ್ದಲ್ಲ. ರಾಜನೇ! ನೀನು ನಿನ್ನ ಕರ್ತವ್ಯ ವಿಮುಖನಾಗದೆ ಗುರುಗಳ ಮತ್ತು ಶ್ರೀಹರಿಯ ಪಾದೋಪಾಸನೆಯನ್ನು ಮಾಡು. ಈ ಅಸ್ತ್ರವನ್ನು ಹಿಡಿದು ನೀನು ಈ ನಾನು ನನ್ನದು ಎಂಬ ಅಭಿಮಾನವೆಂಬ ಭ್ರಾಂತಿಯನ್ನು ಹೋಗಲಾಡಿಸಿಕೊ. ಈ ಭ್ರಾಂತಿಯು ಅತಿ ಸಮರ್ಥವಾದುದು. ಉಪೇಕ್ಷೆಯಿಂದಲೂ, ನಿಂದಿತವಾದ ಪಾಪದಿಂದಲೂ ವಿವಿಧ ಅನ್ಯತಾರ್ಥ ವಿಷಯವಾಗಿ ಶತ್ರುವಾಗಿರುವುದು. ಅದನ್ನು ಕಳೆದುಕೋ.

II ★★★ II






# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ದ್ವಾದಶೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಈ ಹನ್ನೆರಡನೆಯ ಅಧ್ಯಾಯದಲ್ಲಿ ಮತ್ತೆ ರಹೂಗಣನಿಂದ ಪ್ರಶ್ನಿಸಲ್ಪಟ್ಟ ಜಡಭರತರಿಂದ ತತ್ತ್ವೋಪದೇಶ, ಪೂರ್ವಜನ್ಮದಲ್ಲಿ ತಮಗೆ ಜಿಂಕೆಜನ್ಮ ಬಂದದ್ದನ್ನು ತಿಳಿಸುತ್ತಾ ವೈಷಯಿಕ ವ್ಯಾಮೋಹ ಸರ್ವತ್ಯಾಜ್ಯ ಎಂದು ಹೇಳುವರು.

ಅನಿರತ ಸಾಧಾರಣ ಸದ್ಗುಣಗಳಿಗೆ ಸಾಗರನಾದ ಶ್ರೀಹರಿಯ ಜಗಜ್ಜನ್ಮಾದಿ ಕಾರಣತ್ವೋಪಾಸನಾ ಮಾಡದೇ ಸಜ್ಜನರಿಗೆ ಜನನ, ಮರಣ, ನರಕ ಮುಂತಾದ ಕ್ಲೇಶಮಯ ಸಂಸಾರ ನಿರಾಸವಾಗಲಾರದು ಎಂಬ ಅಭಿಪ್ರಾಯದಿಂದ ''**ಓಂ ಜನ್ಮಾದ್ಯಸ್ಯ ಯತಃ ಓಂ**'' ಎಂಬಲ್ಲಿ ಹೇಳಿದ ಜಗಜ್ಜನ್ಮಾದಿ ಕಾರಣತ್ವ ಶ್ರೀಹರಿಗೇನೇ ಬೇರೆಯವರಿಗೆ ಅಲ್ಲ ಎಂದು ಸಯುಕ್ತಿಕವಾಗಿ ನಿರೂಪಿಸುವರು ಈ ಅಧ್ಯಾಯದಲ್ಲಿ.

### ಜಡಭರತನಿಂದ ತತ್ತ್ವೋಪದೇಶ

ಮೊದಲಿಗೆ ರಹೂಗಣನು ಬ್ರಹ್ಮಾದಿಸ್ತೋತ್ರ ಮಾಡುವ ನೆಪದಿಂದ ಅಂತರ್ಯಾಮಿಯಾದ ಶ್ರೀಹರಿಯನ್ನು ಸ್ತುತಿಸುವನು

**ರಹೂಗಣ ಉವಾಚ-**

**ನಮೋ ನಮಃ ಕಾರಣವಿಗ್ರಹಾಯ**
**ಸ್ವರೂಪತುಚ್ಛೀಕೃತವಿಗ್ರಹಾಯ ।**

**ನಮೋಽವಧೂತದ್ವಿಜಬಂಧುಲಿಂಗ-**
**ನಿಗೂಢನಿತ್ಯಾನುಭವಾಯ ತುಭ್ಯಮ್** ॥೧॥

ಮುಂದೆ ಕೇಳುವ ತನ್ನ ಪ್ರಶ್ನೆಗೆ ಉತ್ತರ ಕೊಡಲು ಬ್ರಾಹ್ಮಣನನ್ನು ಸ್ತುತಿಸುತ್ತ ವಂದಿಸುವನು - ಇಲ್ಲಿ **ನಮಃ** ಎಂದು ಮೂರು ಬಾರಿ ಹೇಳಿದ್ದು ಆದರ ತೋರಿಸಲು. **ಕಾರಣ ವಿಗ್ರಹಾಯ** ಪ್ರಾರಬ್ಧಕರ್ಮವೆಂಬ ಕಾರಣದಿಂದಲೇ ದೇಹವುಳ್ಳ ಅರ್ಥಾತ್ ಜೀವನ್ಮುಕ್ತನಾದ ಲೋಕಾನುಗ್ರಹ ಕಾರಣದಿಂದ ದೇಹವುಳ್ಳ **ಸ್ವರೂಪತುಚ್ಛೀಕೃತ ವಿಗ್ರಹಾಯ** ಸ್ವರೂಪಾಪರೋಕ್ಷಜ್ಞಾನದಿಂದ ತನ್ನ ಸ್ವರೂಪಾನಂದಾನುಭವದಿಂದ ತುಚ್ಛೀಕರಿಸಲ್ಪಟ್ಟ ಪಾಂಚಭೌತಿಕ ದೇಹವುಳ್ಳ, ದೇಹಾಭಿಮಾನವನ್ನು ತೊರೆದ ಎಂದರ್ಥ. **ಅವಧೂತ** ವಿರಕ್ತರಾದ **ದ್ವಿಜ** ಬ್ರಾಹ್ಮಣರೇ **ಬಂಧು** ಬಂಧುಗಳಾಗಿ ಉಳ್ಳವರ **ಲಿಂಗೇನ** ಚಿನ್ಹದಿಂದ ಅಥವಾ **ಹೇ ಅವಧೂತ** ವಿರಕ್ತನೇ! **ದ್ವಿಜಬಂಧುಲಿಂಗೇನ** ಬ್ರಾಹ್ಮಣಾಭಾಸ ಚಿನ್ಹದಿಂದ **ನಿಗೂಢನಿತ್ಯಾನುಭವಾಯ** ಮರೆಯಾದ ಸ್ವರೂಪಸಾಮರ್ಥ್ಯವುಳ್ಳ ಅಥವಾ ಮರೆಯಾದ, ನಿತ್ಯನಾದ ಪರಮಾತ್ಮನ ಜ್ಞಾನವುಳ್ಳ **ತುಭ್ಯಂ** ನಿನಗೆ, ನಿನ್ನ ಅಂತರ್ಯಾಮಿಯಾದ ಶ್ರೀಹರಿಗೆ **ನಮಃ** ನಮಸ್ಕಾರವು ॥೧॥

ಅವನ ಮಾತುಗಳನ್ನು ಸ್ತುತಿಸುವನು

**ಜ್ವರಾಮಯಾರ್ತಸ್ಯ ಯಥಾಗದಂ ಸನ್**
**ನಿದಾಘದಗ್ಧಸ್ಯ ಯಥಾ ಹಿಮಾಂಭಃ ।**
**ಕುದೇಹಮಾನಾಹಿಸುದಷ್ಟ (ವಿನಷ್ಟ)ದೃಷ್ಟೇ**
**ಬ್ರ್ಹಮನ್ ವಚಸ್ತೇಽಮೃತಮೌಷಧಂ ಮೇ** ॥೨॥

**ಹೇ ಬ್ರಹ್ಮನ್** ಎಲೋ ಬ್ರಾಹ್ಮಣನೇ **ಜ್ವರಾಮಯಾರ್ತಸ್ಯ** ಜ್ವರವೆಂಬ ರೋಗದಿಂದ ಪೀಡಿತನಾದವನಿಗೆ **ಸತ್** ನಿರ್ದುಷ್ಟವಾದ ಅಥವಾ ಸಿಹಿಯಾದ **ಅಗದಂ ಯಥಾ** ಔಷಧದಂತೆ **ನಿದಾಘದಗ್ಧಸ್ಯ** ಬಿಸಿಲಿನ ಬೇಗೆಯಿಂದ ಬೆಂದವನಿಗೆ **ಹಿಮಾಂಭಃ ಯಥಾ** ತಣ್ಣಗಿನ ನೀರಿನಂತೆ **ಕುದೇಹಮಾನಾಹಿಸುದಷ್ಟದೃಷ್ಟೇಃ** ಕುತ್ಸಿತವಾದ ದೇಹಾಭಿಮಾನವೆಂಬ ಸರ್ಪದಿಂದ ಚೆನ್ನಾಗಿ ಕಚ್ಚಲ್ಪಟ್ಟ ಜ್ಞಾನವೆಂಬ ಕಣ್ಣುಳ್ಳ, (ವಿನಷ್ಟ ಎಂಬ ಪಾಠದಲ್ಲಿ ದೇಹಾಭಿಮಾನವೆಂಬ ಸರ್ಪದಿಂದ ವಿಶೇಷವಾಗಿ ನಾಶಮಾಡಲ್ಪಟ್ಟ ತತ್ತ್ವಜ್ಞಾನವುಳ್ಳ) **ಮೇ** ನನಗೆ **ತೇ** ನಿನ್ನ **ವಚಃ** ಮಾತು **ಅಮೃತವಮೌಷಧಂ** ಅಮೃತದಂತಹ ಔಷಧವು, ಜ್ಞಾನೋಜ್ಜೀವನಕರವೆಂದರ್ಥ. ॥೨॥




**ತಸ್ಮಾದ್ಭವಂತಂ ಮಮ ಸಂಶಯಾರ್ಥಂ**
**ಪೃಚ್ಛಾಮಿ ಪಶ್ಚಾದಧುನಾ ಸುಬೋಧಂ ।**
**ಅಧ್ಯಾತ್ಮಯೋಗಗ್ರಥಿತಂ ಪುರೋಕ್ತ(ತ್ವಯೋಕ್ತಂ)**
**ಮಾಖ್ಯಾಹಿ ಕೌತೂಹಲಚೇತಸೋ ಮೇ ॥೩॥**

**ತಸ್ಮಾತ್** ನಿನ್ನ ವಚನಾಮೃತವು ಘೋರ ಸಂಸಾರ ರೋಗನಾಶಕವಾದುದರಿಂದ **ಅಧುನಾ** ಈಗ, ಮೊದಲು **ಮಮ** ನನ್ನ **ಸಂಶಯಾರ್ಥಂ** ಸಂದೇಹ ನಿವಾರಣೆಗಾಗಿ **ಪೃಚ್ಛಾಮಿ** ಕೇಳುವೆನು **ಪಶ್ಚಾತ್** ನಂತರ **ಸುಬೋಧಂ** ಚೆನ್ನಾಗಿ ತಿಳಿಯುವಂತೆ **ಅಧ್ಯಾತ್ಮಯೋಗಗ್ರಥಿತಂ** ಪರಮಾತ್ಮನ ಧ್ಯಾನಾದಿಗಳನ್ನು ಪ್ರತಿಪಾದಿಸುವ ಗ್ರಂಥಗಳಲ್ಲಿರುವ **ಪುರೋಕ್ತಂ** ಹಿಂದೆ ನೀನು ಹೇಳಿರುವುದನ್ನೇ(ಕೇಳುತ್ತೇನೆ) **ಕೌತೂಹಲ ಚೇತಸಃ** ಕುತೂಹಲ ಯುಕ್ತಮನಸ್ಸುಳ್ಳ **ಮೇ** ನನಗೆ **ಆಖ್ಯಾಹಿ** ಹೇಳು. ॥೩॥

**ಯದಾಹ ಯೋಗೇಶ್ವರ ದೃಶ್ಯಮಾನಂ**
**ಕ್ರಿಯಾಫಲಂ ಸದ್ವ್ಯವಹಾರಮೂಲಮ್ ।**
**ನ ಹ್ಯಂಜಸಾ ತತ್ತ್ವ ವಿಮರ್ಶನಾಯ**
**ಭವಾನಮುಷ್ಮಿನ್ ಭ್ರಮತೇ ಮನೋ ಮೇ ॥೪॥**

**ಹೇ ಯೋಗೇಶ್ವರ** ಯೋಗಿಶ್ರೇಷ್ಠನೇ! **ಭವಾನ್** ನೀನು **ದೃಶ್ಯಮಾನಂ** ಪ್ರತ್ಯಕ್ಷಾದಿಗಳಿಂದ ತಿಳಿದು ಬರುವ **ಕ್ರಿಯಾಫಲಂ** ಭರಣಗಮನರೂಪಕ್ರಿಯಾ-ಫಲವಾದ ಶ್ರಮಾದಿಗಳು(ಲೌಕಿಕವಾದವು), **ಅಪಾಮ ಸೋಮಮಮೃತಾ ಅಭೂಮ** ಮುಂತಾಗಿ ಹೇಳಿದ ಸೋಮಪಾನಾದಿಗಳಿಂದುಂಟಾದ ಅಮೃತತ್ವಾದಿ ವೈದಿಕ ಫಲಗಳು **ಸದ್ವ್ಯವಹಾರಮೂಲಂ** ಅಬಾಧಿತ ಅರ್ಥಕ್ರಿಯಾ ಕಾರಣಗಳಾಗಿವೆ ಕಾರಣ ಸತ್ಯವಾಗಿವೆ **ಅಂಜಸಾ** ಮುಖ್ಯವೃತ್ತಿಯಿಂದ **ತತ್ತ್ವವಿಮರ್ಶನಾಯ ನ ಹಿ** ತತ್ತ್ವನಿರ್ಣಯಕ್ಕೆ ಕಾರಣವಲ್ಲ ಎಂದು **ನ ಸೂರಯೋ ಹಿ ವ್ಯವಹಾರಮೇನಂ ತತ್ತ್ವಾವಮರ್ಶೇನ ಸಹಾಮನಂತಿ** ಎಂದು **ಯತ್ ಆಹ** ಏನು ಹೇಳಿದೆಯೋ **ಅಮುಷ್ಮಿನ್** ಈ ಮಾತಿನಲ್ಲಿ **ಮೇ ಮನಃ** ನನ್ನ ಮನಸ್ಸು **ಭ್ರಮತೇ** ಸಂದಿಗ್ಧವಾಗಿದೆ. ಅಂದರೆ ಶ್ರೀಹರಿಯೇ ಭಾರಹೊರುವವನು, ಓಡಾಡುವವನು ಜೀವನಲ್ಲ ಎಂದೇನು ನಿನ್ನ ಅಭಿಪ್ರಾಯವಿದೆ ಅದರ ನಿಶ್ಚಯ ನನಗಾಗಿಲ್ಲ. ಆದ್ದರಿಂದ ತಿಳಿಯುವಂತೆ ವಿಸ್ತಾರವಾಗಿ ಹೇಳು ಎಂದು ಭಾವ. ॥೪॥

**ಪರಂಪರಯಾ ಮುಖ್ಯಾಶ್ರಯವಿವಕ್ಷಯಾ ಎಲ್ಲ ವ್ಯವಹಾರ**

**ಬ್ರಾಹ್ಮಣ ಉವಾಚ**

**ಅಯಂ ಜನೋ ನಾಮ ಚಲನ್ಪೃಥಿವ್ಯಾಂ**
**ಯಃ ಪಾರ್ಥಿವಃ ಪಾರ್ಥಿವ ಕಸ್ಯ ಹೇತೋಃ ।**
**ತಸ್ಯಾಪಿ ಚಾಂಘ್ರ್ಯೋರಧಿ ಗುಲ್ಫಜಂಘಾ-**
**ಜಾನೂರುಮಧ್ಯೋರಶಿರೋಧರಾಂಸಾಃ ॥೫॥**

**ಹೇ ಪಾರ್ಥಿವ** ಎಲೋ ರಾಜನೇ(ಪೃಥಿವೀಶರೀರವುಳ್ಳವನೇ)! **ಪರಂಪರಯಾ** ಮುಖ್ಯಾಶ್ರಯದ ವಿವಕ್ಷಾ ಇಲ್ಲವಾದರೆ **ಪಾರ್ಥಿವಃ** ಪೃಥಿವ್ಯಾದಿ ಭೂತವಿಕಾರವಾದ **ಅಯಂ ಜನಃ** ಈ ವಾಹಕದೇಹವು(ಜನಿಸುವುದರಿಂದ ದೇಹವು ಜನ ಎಂದೆನಿಸಿಕೊಳ್ಳುವುದು) **ಕಸ್ಯ ಹೇತೋಃ ಪೃಥಿವ್ಯಾಂ ಚಲನ್ ನಾಮ?** ಯಾವಕಾರಣದಿಂದ ಭೂಮಿಯಲ್ಲಿ ಚಲಿಸುವುದು ಎಂಬ ವ್ಯವಹಾರ ವಿಷಯವಾಗುವುದು? ಯಾವಕಾರಣದಿಂದಲೂ ಅಲ್ಲ. ಅಂದರೆ ಪೃಥಿವಿಯಲ್ಲಿ ದೇಹವು ಚಲಿಸುವುದು ಎಂಬ ವ್ಯವಹಾರ ಇಲ್ಲದೇಹೋಗಬೇಕಾದೀತು. ವ್ಯವಹಾರವಂತೂ ಆ ರೀತಿ ಇದೆ. ಆದ್ದರಿಂದ ಪರಂಪರಯಾ ಮುಖ್ಯಾಶ್ರಯವಿವಕ್ಷಾ ಇದೆ ಎಂದು ತಿಳಿಯುವುದು.

ಪೃಥಿವಿಗೇನೇ ಪರಂಪರಯಾ ಮುಖ್ಯಾಶ್ರಯತ್ವ ಸಾಕ್ಷಾತ್ ಏಕಿಲ್ಲ ಎಂದರೆ ಹೇಳುವರು

**ತಸ್ಯಾಪಿ** ಪೃಥಿವಿಯಲ್ಲಿದೆ ಎಂದು ವ್ಯವಹರಿಸುವ ವಾಹಕದೇಹಕ್ಕೆ **ಚ** ಪಾದಗಳು **ಅಂಘ್ರ್ಯೋಃ ಅಧಿ** ಪಾದಗಳ ಮೇಲೆ **ಗುಲ್ಫಾ** ಕಾಲಿನ ಗಂಟುಗಳು ಅವುಗಳ ಮೇಲೆ **ಜಂಘೇ** ಮೀನಗಂಡಗಳು ಅವುಗಳ ಮೇಲೆ **ಜಾನುನೀ** ಮೊಳಕಾಲುಗಳು ಅವುಗಳ ಮೇಲೆ **ಊರೂ** ತೊಡೆಗಳು ಅದರ ಮೇಲೆ **ಮಧ್ಯಂ** ಟೊಂಕವು ಅದರ ಮೇಲೆ **ಉರಃ** ಎದೆ ಅದರ ಮೇಲೆ **ಶಿರೋಧರಾ** ಕುತ್ತಿಗೆ ಅದಕ್ಕೆ **ಅಂಸೌ** ಭುಜಗಳೂ ಮುಂತಾದ ಅವಾಂತರ ಆಧಾರಗಳು ಇದ್ದೇ ಇವೆ. ಇವು ಪ್ರಾಮಾಣಿಕವಾದ್ದರಿಂದ ಭೂಮಿಯಲ್ಲಿ ಚಲಿಸುವನು ಎಂಬಂತೆ ಕಾಲುಗಳಲ್ಲಿ ಚಲಿಸುವನು ಮುಂತಾಗಿ ವ್ಯವಹಾರವೇಕೆ ಇಲ್ಲಾ? ಹೀಗೆ ವ್ಯವಹಾರವಿಲ್ಲದಿರುವುದೇ ಮೂಲ ಆಶ್ರಯ ಒಂದಿದೆ ಎಂದು ಅಂಗೀಕರಿಸಬೇಕು ಎಂದು ತಿಳಿಸಿಕೊಡುವುದು. ಇಲ್ಲವಾದರೆ ಪೃಥಿವಿಯಲ್ಲಿ




ಚಲಿಸುವನೆಂಬ ವ್ಯವಹಾರ ಹೋಗಬೇಕಾಗುವುದು. ಆದ್ದರಿಂದ ಪರಂಪರಾ ಮುಖ್ಯಾಶ್ರಯವೇ ಅಭಿಪ್ರೇತವು. ಇದರಂತೆ ಶ್ರೀಹರಿಯೇ ಮುಖ್ಯಭರಣ ಕರ್ತೃವೆಂದು ಸಿದ್ಧಿಸುವುದು ಎಂದು ಭಾವ.

**ವಿಷ್ಣುವು ಮೂಲಕಾರಣ ಎಂದು ನಿರೂಪಿಸುವುದು ಅಸಂಗತವೇ?**

ಈ ಪ್ರಕರಣದಲ್ಲಿ ಮುಂದೆ ಹೇಳುವಂತೆ ಪ್ರಕೃತಿಯೇ ಪೃಥಿವ್ಯಾದಿಗಳಿಗೆ ಕಾರಣ. ಆ ಪ್ರಕೃತಿಗೂ ವಿಷ್ಣುವು ಕಾರಣ ಎಂದು ಎಲ್ಲದಕ್ಕೆ ಮೂಲಕಾರಣ ವಿಷ್ಣು ಎಂದು ಹೇಳುತ್ತದೇ ಹೊರತು ಮುಖ್ಯಭರಣಾದಿಕರ್ತೃ ಅವನೇ ಎಂದು ಉಪಪಾದಿಸುವುದಿಲ್ಲ. ಕಾರಣ ಅಸಂಗತ ಎಂದು ಶಂಕಿಸಿದಾಗ ವಿಷ್ಣುವೇ ಮುಖ್ಯಭರಣಾದಿಕರ್ತಾ ಎಂಬ ಪ್ರಕೃತ ಪ್ರಮೇಯ ಸಮರ್ಥನೆ ಮಾಡಲೆಂದೇ ವಿಷ್ಣುವಿಗೆ ಮೂಲ ಕಾರಣತ್ವ ಇಲ್ಲಿ ಹೇಳಲ್ಪಟ್ಟಿದೆ. ಕಾರಣ ಅಸಂಗತವಲ್ಲ ಎಂಬ ಅಭಿಪ್ರಾಯದಿಂದ ಈ ಪ್ರಕರಣದ ಅಭಿಪ್ರಾಯ ಹೇಳುವರು ಆಚಾರ್ಯರು

ತಾತ್ಪರ್ಯ - ''ಯಸ್ಮಾನ್ಮೂಲಕಾರಣಭೂತೋ ವಿಷ್ಣುರೇವ । ಅತೋ ಮುಖ್ಯಂ ಸರ್ವಕಾರಣತ್ವಂ ತಸ್ಯೈವ । ಮೂಲಾಶ್ರಯವಿವಕ್ಷಾ ಯದಿ ನ ಸ್ಯಾತ್ ಕುತಃ ಪೃಥಿವ್ಯಾಂ ಚಲತೀತಿ ವ್ಯವಹಾರಃ ? ಯತೋಽವಾಂತರಾಶ್ರಯಾ ಬಹವಃ ಸಂತಿ ಅಂಘ್ರ್ಯಾದ್ಯಾಃ ।।೫।।

ಯಾವ ಕಾರಣ ಎಲ್ಲ ಕಾರ್ಯಗಳಿಗೆ ಮೂಲಕಾರಣನು ವಿಷ್ಣುವೋ ಆ ಕಾರಣ ವಿಷ್ಣುವೇ ಮುಖ್ಯವಾಗಿ ಪೋಷಣ, ಗಮನ ಮೊದಲಾದ ಎಲ್ಲಾ ಕಾರ್ಯಗಳನ್ನೂ ಮಾಡುವವನು ಎಂದು ಈ ಪ್ರಕರಣದ ಭಾವ. ।।೫।।

ಮುಖ್ಯ ಆಶ್ರಯವಾದ ಎಂದು ವಿವಕ್ಷಾಮಾಡದಿದ್ದರೆ ಪೃಥಿವಿಯಲ್ಲಿ ವಾಹಕದೇಹವು ಸಂಚರಿಸುವುದು ಎಂಬ ವ್ಯವಹಾರವು ಹೇಗೆ ಕೂಡುವುದು? ಏಕೆಂದರೆ ಅಂಘ್ರಿ ಮೊದಲಾದ ಅವಾಂತರ ಆಶ್ರಯಗಳು ಬಹಳ ಇವೆ ಎಂದು ಭಾವ.

ಮೇಲೆ ಹೇಳಿದಂತೆ ಪೃಥಿವಿಯಲ್ಲಿ ರಾಜ ಸಂಚರಿಸುವ ಎಂಬುದಕ್ಕೂ ಮೂಲಾಶ್ರಯ ವಿವಕ್ಷಾ ಉಪಪಾದಿಸಬೇಕು ಎಂದು ಹೇಳುವರು

**ಅಂಸೇ ಚ ದಾರ್ವೀ ಶಿಬಿಕಾ ಚ ಯಸ್ಯಾಂ**
**ಸೌವೀರರಾಜೇತ್ಯಪದೇಶ ಆಸ್ತೇ ।**

**ಯಸ್ಮಿನ್ ಭವಾನ್ ರೂಢನಿಜಾಭಿಮಾನೋ**
**ರಾಜಾಸಿ ಸಿಂಧುಷ್ವಿತಿ ದುರ್ಮದಾಂಧಃ ।।೬।।**

**ಅಂಸೇ ಚ** ಹೆಗಲ ಮೇಲಾದರೂ **ದಾರ್ವೀ** ಕಟ್ಟಿಗೆಯಿಂದ ನಿರ್ಮಿತವಾಗಿದೆಯೆಂದು ಕರೆಸಿಕೊಳ್ಳುವ **ಶಿಬಿಕಾ** ಮೇನೆಯು **ಯಸ್ಯಾಂ** ಯಾವುದರಲ್ಲಿ **ಸೌವೀರರಾಜ ಇತಿ ಅಪದೇಶಃ** ಸೌವೀರರಾಜ ಎಂಬ ಶಬ್ದಮಾತ್ರವು ಯಾವ ದೇಹಕ್ಕೆ **ಆಸ್ತೇ** ಇರುವುದೋ ಅಂಥ **ಯಸ್ಮಿನ್** ಯಾವ ದೇಹದಲ್ಲಿ **ಭವಾನ್** ನೀನು **ರೂಢನಿಜಾಭಿಮಾನಃ** ನನ್ನದೆಂಬ ಅಭಿಮಾನವನ್ನೂ ಮಾಡುವಿಯೋ **ಸಿಂಧುಷು ರಾಜಾಸ್ಮಿ** ಸಿಂಧುದೇಶದ ರಾಜನಾಗಿರುವೆ ಎಂದು **ದುರ್ಮದಾಂಧಃ** ದುಷ್ಟಮದದಿಂದ ಕುರುಡನಾಗಿರುವಿ. ಈ ವ್ಯವಹಾರದಲ್ಲಿಯೂ ಪರಂಪರೆಯಿಂದ ನೀನು ಪೃಥಿವೀ ಸಂಬಂಧವುಳ್ಳವನಾಗಿರುವೆ. ಆದರೂ ಮೂಲಾಶ್ರಯನಾದ ನಿನ್ನ ವಿವಕ್ಷೆಯಿಂದ ಈ ವ್ಯವಹಾರವು ಎಂದು ಭಾವ. ।।೬।।

ದುರ್ಮದಾಂಧನಾದ್ದರಿಂದ ನಿನಗೆ ಅನರ್ಥವಾಗುವುದು ಎಂದು ಹೇಳುವನು

**ಶೋಚ್ಯಾನಿಮಾಂಸ್ತಾನಧಿಕಸ್ತವಾಧಿ (ಸಮಾಧಿ)**
**ರ್ವಿಷ್ಟ್ಯಾನಿಗೃಹ್ಣನ್ನಿರನುಗ್ರಹೋಽಸಿ ।**
**ಜನಸ್ಯ ಗೋಪ್ತೇತಿ ವಿಕತ್ಥಮಾನೋ**
**ನ ಶೋಭಸೇ ವೃದ್ಧಸಭಾಸು ದುಷ್ಟಃ ।।೭।।**

**ಶೋಚ್ಯಾನ್** ಶೋಚನೀಯರಾದ **ತಾನ್ ಇಮಾನ್** ಈ ವಾಹಕರನ್ನು **ವಿಷ್ಟ್ಯಾ ನಿಗೃಹ್ಣನ್** ಕೂಲಿಯಿಲ್ಲದೆ ನಿರ್ಬಂಧದಿಂದ ನಿಯಮನ ಮಾಡುತ್ತ ಅಥವಾ ಕೂಲಿಕೊಡುವೆನೆಂದು ನಿಯಮಿಸುತ್ತ **ನಿರನುಗ್ರಹಃ ಅಸಿ** ದಯೆಯಿಲ್ಲದವನಾಗಿರುವಿ **ಜನಸ್ಯ** ಜನರ **ಗೋಪ್ತಾ** ರಕ್ಷಕನೆಂದು **ವಿಕತ್ಥಮಾನಃ** ಹೊಗಳಿಕೊಳ್ಳುವ **ದುಷ್ಟಃ** ಸಜ್ಜನನಲ್ಲದ ನೀನು **ವೃದ್ಧಸಭಾಸು** ಜ್ಞಾನಿಗಳ ಸಭೆಯಲ್ಲಿ **ನ ಶೋಭಸೇ** ಶ್ಲಾಘ್ಯನಲ್ಲ ಕಾರಣ **ತವ** ನಿನಗೆ **ಅಧಿಕಃ ಆಧಿಃ** ಈ ಲೋಕದಲ್ಲಿ, ಪರಲೋಕದಲ್ಲಿಯೂ ಮನೋವ್ಯಥೆಯು ಹೆಚ್ಚಾಗುವುದು. **ಸಮಾಧಿಃ** ಎಂಬ ಪಾಠದಲ್ಲಿ ಈ ವಾಹಕರಿಗೇನು ಉತ್ತರಿಸುವಿ ಎಂಥರ್ಥ. ಮೇನೆಯನ್ನು ಹೊರುವುದು ನನ್ನ ಅಂತರ್ಯಾಮಿಯಲ್ಲಿ ಹೇಗೆ ಮುಖ್ಯವೋ, ಹಾಗೆಯೇ ಜನರನ್ನು ರಕ್ಷಿಸುವುದು ನಿನ್ನ ಅಂತರ್ಯಾಮಿಯಾದ ಮೂಲ ರಕ್ಷಕ ಶ್ರೀಹರಿಯಲ್ಲಿ ಮುಖ್ಯವೆಂದು ಭಾವ. ।।೭।।




## ಮೂಲರಕ್ಷಕ ಶ್ರೀಹರಿಯೇ

ತಾತ್ಪರ್ಯ - 'ಏವಂ ಮೂಲಗೊಪ್ತೃತ್ವಂ ಚ ವಿಷ್ಣೋರೇವ' ॥೭॥

ನಾನು ಮುಖ್ಯಹೊರುವವನಲ್ಲ ಹೇಗೆಯೋ ಹಾಗೆ ನೀನು ಮುಖ್ಯಪೋಷಕನೂ ಅಲ್ಲ ಶ್ರೀಹರಿಯೇ ಮೂಲ ರಕ್ಷಕನೆಂದು ಭಾವ. ॥೭॥

**ಯದಿ ಕ್ಷಿತಾವೇವ ಚರಾಚರಸ್ಯ**
**ವಿದಾಮ ನಿಷ್ಠಾಂ ಪ್ರಭವಂ ಚ ನಿತ್ಯಮ್ ।**
**ತನ್ನಾಮತೋಽನ್ಯದ್ವ್ಯವಹಾರಮಾತ್ರಂ**
**ನಿರೂಪ್ಯತಾಂ ತತ್ ಕ್ರಿಯಯಾನುಮೇಯಮ್(ತಿಷ್ಠನ್) ॥೮॥**

ಹೀಗೆ ವ್ಯವಹಾರವನ್ನು ಅನುಸರಿಸಿ ತರ್ಕದ ವಿಪರ್ಯಯಪರ್ಯವಸಾನ ಮಾಡಿದಾಗ ಪೃಥಿವಿಯೇ ಮೂಲಾಶ್ರಯವೆಂದಾಗುವುದು ವಿಷ್ಣುವಲ್ಲ ಅಂದಮೇಲೆ ಪ್ರಕೃತ ಅಸಂಗತವು ಎಂದು ಶಂಕೆಬಂದರೆ, ಇದು ಕೇವಲ ಶಾಖಾಚಂದ್ರನ್ಯಾಯದಿಂದ (ಚಂದ್ರನನ್ನು ತೋರಿಸುವಾಗ ಕೊಂಬೆಯ ಕಡೆಗೆ ತೋರಿಸಿ ಅಲ್ಲಿ ಚಂದ್ರನಿದ್ದಾನೆ ಎಂದು ಹೇಳುವುದುಂಟು. ಆದರೆ ಚಂದ್ರನು ಕೊಂಬೆಯಲ್ಲಿಲ್ಲ. ಆ ಕೊಂಬೆಯ ಕಡೆಗೆ ನೋಡಿದಾಗ ಆ ದಿಕ್ಕಿನಲ್ಲಿರುವ ಚಂದ್ರನು ಕಣ್ಣಿಗೆ ಬೀಳುವನು. ಇದನ್ನು ಶಾಖಾಚಂದ್ರನ್ಯಾಯ ಎಂದು ಕರೆಯುವರು ಅದರಂತೆ) ಈ ವ್ಯವಹಾರವನ್ನು ಉದಾಹರಿಸಿದ್ದು. ವಿಚಾರ ಮಾಡಿದರೆ ಪೃಥಿವೀ ಶಬ್ದದ ಮುಖ್ಯಾರ್ಥ ವಿಷ್ಣುವೇ. ಭೂತದಲ್ಲಿ ವ್ಯವಹಾರ ಮಾತ್ರ ಎಂದು ಉತ್ತರಿಸುವರು. ಇಲ್ಲಿ **ಕ್ಷಿತೌ ಏವ** ಭೂಮಿಯಲ್ಲಿಯೇ **ಚರಾಚರಸ್ಯ** ಪ್ರಕೃತರಾದ ವಾಹಕ ಮತ್ತು ಶಿಬಿಕಾದಿಗಳಿಗೆ **ನಿಷ್ಠಾ** ಸ್ಥಿತಿಯನ್ನು **ಪ್ರಭವಂ** ಉತ್ಪತ್ತಿಯನ್ನು ಅದಕ್ಕೆ ಉಪಪಾದಕವಾದ ಮೂಲ ಕಾರಣತ್ವವನ್ನೂ **ನಿತ್ಯಂ** ನಿಯತವಾಗಿ ಪ್ರವಾಹತಃ ಇರುವುದಾಗಿ **ವಿದಾಮಃ** ತಿಳಿಯುವೆವು ವಿಷ್ಣುವಿನಲ್ಲಿ ಅಲ್ಲ ಕಾರಣ ಅಸಂಗತ ಎಂದು ಹೇಳುವದಾದರೆ **ತನ್ನಾಮತಃ** ಕ್ಷಿತಿಶಬ್ದದಿಂದ ಪ್ರಸಿದ್ಧವಾದ ಭೂಮಿಯಿಂದ ಭಿನ್ನನಾದ ವಿಷ್ಣುವನ್ನೇ **ನಿರೂಪ್ಯತಾಂ** ತಿಳಿಯಿರಿ (ಪ್ರತಿಪಾದಿಸಿದ ಕಾರಣ ಅಸಂಗತವಲ್ಲ). ಅದು ಹೇಗೆ ಎಂದರೆ **ತತ್ಕ್ರಿಯಯಾನುಮೇಯಂ** ಕ್ಷಿತಿಶಬ್ದದ ನಿರ್ವಚನದಿಂದ(ಯೋಗದಿಂದ) ತಿಳಿಯಿರಿ. **ಅನು** ವಿದ್ವದ್ರೂಢಿಗನುಸರಿಸಿ **ಮೇಯ** ತಿಳಿಯಲ್ಪಡಬೇಕು. ಅಂದರೆ ಮಹಾಯೋಗ ವಿದ್ವದ್ರೂಢಿಗಳಿಂದ ಶ್ರೀಹರಿಯೇ ತಿಳಿಯಲ್ಪಡಬೇಕು ಎಂದರ್ಥ.

ಆದರೆ ಬೇರೆ ಕಡೆ (ಪೃಥಿವ್ಯಾದಿಗಳಲ್ಲಿ) ರೂಢಿ ಇದೆಯಲ್ಲಾ ಎಂದರೆ **ವ್ಯವಹಾರಮಾತ್ರಂ** ಭೂಮಿಯಲ್ಲಿ ಇರುವನು ಎಂಬುದು ವ್ಯವಹಾರವಷ್ಟೇ. ವಿಷ್ಣುವಿನಂತೆ ಪರಮಮುಖ್ಯವ್ಯವಹಾರವಲ್ಲ. ಅದು ಅಜ್ಞರೂಢಿ ಎಂದು ಭಾವ.

## ಶ್ರೀಹರಿಯೇ ಕ್ಷಿತಿಶಬ್ದವಾಚ್ಯ

**ತಾತ್ಪರ್ಯ** – **'ಆಶ್ರಯತ್ವಾತ್ ಕ್ಷಿತಿರಿತಿ ನಿರ್ವಚನೇ ಕ್ಷಿತಿಶಬ್ದೋಽಪಿ ತಸ್ಮಿನ್ ಏವ**

**'ಕ್ಷಿ ನಿವಾಸಗತ್ಯೋಃ'** ಎಂಬ ಧಾತು ವ್ಯಾಖ್ಯಾನದಿಂದ ಸರ್ವರಿಗೂ ಆಶ್ರಯನಾಗಿರುವುದರಿಂದ ಶ್ರೀಹರಿಯು ಕ್ಷಿತಿ ಎನಿಸುತ್ತಾನೆ ಎಂದು ನಿರ್ವಚನ ಮಾಡುವಾಗ ಕ್ಷಿತಿಶಬ್ದವು ಶ್ರೀಪರಮಾತ್ಮನಲ್ಲಿಯೇ ಮುಖ್ಯವಾದುದು. ॥೮॥

ಕ್ಷಿತಿ ಶಬ್ದ ನಿರ್ವಚನ ಮಾಡಿ ಮೂಲಾಶ್ರಯ ವಿವಕ್ಷೆಯಿಂದ ಪೃಥಿವ್ಯಾಂ ಚಲತಿ ಎಂಬ ವ್ಯವಾಹಾರ ಮಾಡುವುದಾದರೆ ಪೃಥಿವಿಗೆ ಕಾರಣವೆಂದು ತೋರುವ ಪರಮಾಣುಗಳಿಗೇನೆ ಆಶ್ರಯತ್ವ ಬಂದೀತೇ ಹೊರತು ವಿಷ್ಣುವಿಗಲ್ಲ ಎಂದರೆ ಹೇಳುವರು. (**ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೊ ಯಂ ಪೃಥವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವ್ಯಾಮಂತರೋ ಯಮಯತಿ ಏಷ ತೇ ಆತ್ಮಾಽಂತರ್ಯಾಮ್ಯಮೃತತರಃ, ಪ್ರಥಿತತ್ವಾತ್ ಪೃಥುತ್ವಾದ್ವಾ ಪೃಥಿವೀ** ಮುಂತಾದ ಶ್ರುತಿ ಸ್ಮೃತಿ ಪ್ರತಿಪಾದಿಸಿದ ರೀತಿಯಿಂದ ಪೃಥಿವೀಶಬ್ದವಾಚ್ಯತ್ವ ಶ್ರೀಹರಿಯಲ್ಲಿಯೇ ಎಂದು ನಿರ್ಣಯಿಸುವಂತೆ **ಆಶ್ರಯತ್ವಾತ್ ಕ್ಷಿತಿಃ** ಎಂಬ ನಿರ್ವಚನದಿಂದ ಕ್ಷಿತಿ ಶಬ್ದ ವಾಚ್ಯತ್ವವೂ ಶ್ರೀಹರಿಗೆ ಎಂದು ನಿರ್ಣಯಿಸಲ್ಪಡುವುದು ಎಂದು ಹೇಳುವರು

**ಏವಂ ನಿರುಕ್ತಂ ಕ್ಷಿತಿಶಬ್ದವೃತ್ತ-**
**ಮಸನ್ನಿಧಾನಂ ಪರಮಾಣವೋ ಯೇ ।**
**ಅವಿದ್ಯಯಾ ಮನಸಾ ಕಲ್ಪಿತಾಸ್ತೇ ಯೇಷಾಂ**
**ಸಮೂಹೇನ ಕೃತೋ ವಿಶೇಷಃ** ॥೯॥

**ಯೇಷಾಂ ಸಮೂಹೇನ** ಯಾವುಗಳ ಸಮೂಹದಿಂದ **ವಿಶೇಷಃ ಕೃತಃ** ಪೃಥವಿಯು ಉತ್ಪಾದಿತವಾಯಿತೋ **ತೇ ಪರಮಾಣವಃ ಅಪಿ** ಆ ಪರಮಾಣುಗಳೂ ಕೂಡ **ಅವಿದ್ಯಯಾ** ಅಕಾರವಾಚ್ಯನಾದ ಶ್ರೀಹರಿಯ ಪ್ರಜ್ಞಾದಿಂದ **ಮನಸಾ** ಇಚ್ಛಾಮಾತ್ರದಿಂದಲೇ **ಧಾರಕತ್ವೇನ** ಮೂಲಕಾರಣವಾಗಿ **ಕಲ್ಪಿತಾಃ** ಸಂಕಲ್ಪಿಸಲ್ಪಟ್ಟವೆ




ಅಂದಮೇಲೆ ಪರಮಾಣ್ವಾರಂಭವಾದಿಗಳ ಮತದಲ್ಲಿಯೂ ಪರಮಾಣುಗಳಿಗೆ ಮೂಲಕಾರಣತ್ವವು ಶ್ರೀಹರಿಯ ಅಧೀನವೇ ಹೊರತು ಸ್ವತಃ ಅಲ್ಲ, ಕಾರಣ ಶ್ರೀಹರಿಯೇ ಮೂಲಕಾರಣ, ಆಶ್ರಯ, ಎಲ್ಲವೂ ಅವನೇ.

ಪೂರ್ವಾರ್ಧದ ಅರ್ಥ - **ಏವಂ** ಈ ರೀತಿ **ನಿರುಕ್ತಂ** ನಿರ್ವಚನ ಲಭ್ಯವಾದ **ಕ್ಷಿತಿಶಬ್ದವೃತ್ತಂ(ವೃತ್ತಿಃ ಯಸ್ಮಿನ್ ತತ್)** ಕ್ಷಿತಿಶಬ್ದವಾಚ್ಯವಾದ **ಸನ್ನಿಧಾನಂ** ಮೂಲಾಶ್ರಯರೂಪ ವಸ್ತುವಾದ ಯಾವ ಪರಮಾಣುಗಳೊ **ತೇ** ಅವು ನ ಅಲ್ಲ ಎಂದರೆ ಪರಮಾಣುಪುಂಜರೂಪ ಪೃಥಿವಿಗೆ ಮೂಲಾಶ್ರಯತ್ವವು '**ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ**' ಎಂದು ಹೇಳಿದ ಪ್ರಕಾರ ಅಯುಕ್ತವಾಗಿದೆ.

ತಾತ್ಪರ್ಯ - ''**ಪರಮಾಣುಮಾತ್ರಾಯಾ ಪೃಥಿವ್ಯಾಃ ಅಯುಕ್ತತ್ವಾತ್ ಪರಮಾಣವೋಽಪ್ಯಸ್ಯಾ ವಿದ್ಯಯೈವಾಧಾರತ್ವೇನ ಕಲ್ಪಿತಾಃ ॥**''

ಪಾರ್ಥಿವ ಪರಮಾಣುಗಳ ಪುಂಜರೂಪವಾದುದು ಪೃಥಿವಿ ಎಂಬ ಪಕ್ಷವು ಅಯುಕ್ತವಾದುದರಿಂದ ಆ ಪಕ್ಷವನ್ನು ಬಿಟ್ಟು ಪರಮಾಣುಗಳಿಂದ ಪೃಥಿವಿಯು ಹುಟ್ಟುತ್ತದೆ ಎಂಬ ಪಕ್ಷ ಇಟ್ಟುಕೊಂಡರೂ ಪೃಥಿವಿಗೆ ಪರಮಾಣುಗಳು ಕಾರಣವೆಂಬ ಪಕ್ಷವೂ ಕೂಡ ಅಯುಕ್ತವಾದುದರಿಂದ ಅಕಾರವಾಚ್ಯ ಶ್ರೀಹರಿಯ ಪ್ರಜ್ಞೆಯಿಂದಲೇ ಆಧಾರಗಳಾಗಿ, ಮೂಲಕಾರಣಗಳಾಗಿ, ಸಂಕಲ್ಪಿತಗಳಾಗಿವೆ. ಕಾರಣ ಈ ಪಕ್ಷದಲ್ಲಿಯೂ ಪರಮಾಣುಗಳಿಗೆ ಮೂಲಾಶ್ರಯತ್ವ, ಮೂಲಕಾರಣತ್ವವೂ ಶ್ರೀಹರಿಯ ಅಧೀನವೇ ಸ್ವತಃ ಅಲ್ಲ. ಶ್ರೀಹರಿಯೇ ಮೂಲಕಾರಣ.

**ವಿಜಯಧ್ವಜ ಪ್ರಕಾರ**

**ಏವಂ** ಹೀಗೆ ಪ್ರಥಿತನಾದ್ದರಿಂದ ಪೃಥಿವೀ ಶಬ್ದ ಮುಖ್ಯವಾಚ್ಯನು ಶ್ರೀಹರಿ ಎಂದು ನಿರ್ಣಯಿಸಿದ ರೀತಿಯಲ್ಲಿ **ಕ್ಷಿತಿಶಬ್ದವೃತ್ತಂ** ಆಶ್ರಯನಾದ್ದರಿಂದ ಕ್ಷಿತಿ ಶಬ್ದ ಪ್ರವೃತ್ತಿ ನಿಮಿತ್ತವನ್ನೂ ಶ್ರೀಹರಿಯಲ್ಲಿಯೇ **ನಿರುಕ್ತಂ** ನಿರ್ಣಯಿಸಲಾಗಿದೆ. ಕ್ಷಿತಿಶಬ್ದ ನಿರ್ವಚನದಿಂದ ಶ್ರೀಹರಿಯಲ್ಲಿಯೇ ಇದು ಮುಖ್ಯಾರ್ಥವುಳ್ಳದ್ದೆಂದು ತಿಳಿಸಲಾಗಿದೆ ಎಂದರ್ಥ. ಪ್ರತ್ಯಕ್ಷ ಕಂಡ ಭೂಮಿಯ ಆಶ್ರಯತ್ವವನ್ನು ಅಲ್ಲಗಳೆಯುವುದಕ್ಕೆ ಏನುಬಾಧಕವನ್ನು ಕಂಡಿರಿ? ಎಂದರೆ ಪರಮಾಣು ಮಾತ್ರವಾಗಿರುವ ಪೃಥಿವಿಗೆ ಆಧಾರವಾಗುವದಕ್ಕೆ ಯೋಗ್ಯತೆ ಇಲ್ಲದಿರುವುದೇ ಬಾಧಕವೆಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ಅವಿದ್ಯಯಾ** ಅಜ್ಞಾನದಿಂದ **ಮನಸಾ** ತಮ್ಮ ಮನಸ್ಸಿಗೆ ಬಂದಂತೆ **ಕಲ್ಪಿತಾಃ** ಚರಾಚರಗಳಿಗೆ ಆಧಾರವೆಂದು ಕಲ್ಪಿಸಲ್ಪಟ್ಟ **ಯೇ** ಯಾವ **ಪರಮಾಣವಃ** ಪೃಥಿವೀ ಪರಮಾಣುಗಳುಂಟೋ **ಯೇಷಾಂ** ಯಾವ ಈ ಪರಮಾಣುಗಳ **ಸಮೂಹೇನ** ಗುಂಪಿನಿಂದ **ವಿಶೇಷಃ** ಪೃಥಿವೀ ಎಂಬ ಪದಾರ್ಥವು **ಕೃತಃ** ಉಂಟಾಗಿದೆಯೋ **ತೇ** ಆ ಪರಮಾಣುಗಳು ಚರಾಚರಗಳಿಗೆ ಆಶ್ರಯವೆಂಬುದು **ಅಸನ್ನಿಧಾನಂ** ದೂರವಾದುದು (ಯುಕ್ತವಲ್ಲ). ಇದರಿಂದ ಅಜ್ಞಾನದಿಂದ ಪೃಥಿವಿಯನ್ನು ಆಧಾರವೆಂದು ಹೇಳಿದ್ದೇ ಹೊರತು ಅದು ಮುಖ್ಯಾಧಾರವಲ್ಲವೆಂದು ಉತ್ತರಕೊಟ್ಟಂತಾಯಿತು.

ಒಂದೊಂದೇ ಪರಮಾಣುಗಳು ಆಧಾರಗಳೇ ಒಟ್ಟಿಗೆ ಸೇರಿಯೇ? ಎಂಬೀ ಎರಡು ಪ್ರಶ್ನೆಗಳಿಗೂ ಇದೇ ಉತ್ತರ - **ಅವಿದ್ಯಯಾ** ಶ್ರೀಹರಿಯ ಇಚ್ಛೆಯಿಂದ ಕೂಡಿದ ಶ್ರೀಹರಿಯ ಪ್ರಜ್ಞೆಯಿಂದ **ಮನಸಾ** ಇಚ್ಛೆಯಿಂದ ನಿಯತವಾದ ಪ್ರಕೃತಿಯಿಂದ ಪರಮಾಣುಗಳು ಆಧಾರವೆಂದು ಸಂಕಲ್ಪಿತವಾಗಿವೆ ಸ್ವತಂತ್ರವಲ್ಲ ಎಂದು ಭಾವ. ಆದ್ದರಿಂದ **ಯೇ** ಯಾವ ಪೃಥಿವೀ ಪರಮಾಣುಗಳುಂಟೋ ಅವುಗಳ **ನಿಧಾನಂ** ಸ್ವತಂತ್ರ ಧಾರಣೆಯು **ಅಸತ್** ಅಯುಕ್ತವು. ಇನ್ನು ಯಾವ ಪರಮಾಣುಗಳ ಸಮೂಹದಿಂದ **ವಿಶೇಷಃ** ಅವಯವಿಯು **ಕೃತಃ** ಆಗಿರುವುದೋ ಅವುಗಳಿಗೂ **ಅಸನ್ನಿಧಾನಂ** ಸಾಮರ್ಥ್ಯವಿಲ್ಲ, ಶ್ರೀಹರಿಯ ನಿಯಮನಕ್ಕೆ ಒಳಗಾದ ಸ್ವಭಾವವಿಲ್ಲದ ಸಾಮರ್ಥ್ಯವಿಲ್ಲ. ಅಥವಾ **ಯೇಷಾಂ** ಯಾವ ಯಾವ ವಾದಿಗಳುಂಟೋ ಅವರೆಲ್ಲರ ಪಕ್ಷದಲ್ಲಿಯ ಯಾವ ಪರಮಾಣುಗಳೋ ಅವುಗಳಿಂದ ಆದ ಯಾವ ವಿಶೇಷವೋ ಅದಕ್ಕೂ ಚರಾಚರಧಾರಣೆಯು **ಅಸನ್ನಿಧಾನಂ** ದೂರವೇ.

ಎರಡು ಪರಮಾಣು ಸೇರಿ ದ್ವ್ಯಣುಕ. ಇವುಗಳು ಸೇರಿ ತ್ರ್ಯಣುಕ. ಹೀಗೆ ಸ್ಥೂಲಪೃಥಿವಿಯಾಗುವುದೆಂದು ಹೇಳುವರು. ಪರಮಾಣುರಾಶಿಯೇ ಪೃಥಿವೀ ಎಂದು ಬೌದ್ಧರು. ಅವಿದ್ಯಯಾ ಎಂಬ ಪದದಿಂದ ಇದಕ್ಕೆ ಉತ್ತರವಿತ್ತಂತಾಯಿತು. ॥೯॥

ಬೇರೆ ವಾದಿಗಳು ಹೇಳುವಂತೆ ಮೂಲಾಶ್ರಯತ್ವಾದಿಗಳು ಚತುರ್ಮುಖನಿಗೋ ಪ್ರಕೃತಿಗೋ ಬರಬಹುದಲ್ಲ ಎಂಬ ಶಂಕೆಗೆ ಬ್ರಹ್ಮಪ್ರಕೃತಿಗಳಿಗೂ ಮೂಲಾಶ್ರಯತ್ವವು ಶ್ರೀಹರಿಯಿಂದಲೇ ಸಂಕಲ್ಪಿತವು ಹೊರತು ಸ್ವತಃ ಅಲ್ಲ ಎಂದು ಹೇಳುವರು ಎರಡು ಶ್ಲೋಕಗಳಿಂದ

 

**ಏವಂ ಕೃಶಂ ಸ್ಥೂಲಮಣುರ್ಬೃಹದ್ಯದ-**
**ಸಚ್ಚ ಸಜ್ಜೀವಮಜೀವಮನ್ಯತ್ ॥**
**ದ್ರವ್ಯಸ್ವಭಾವಾಶಯಕಾಲಕರ್ಮ-**
**ನಾಮ್ನಾ್ಯಽಜಯಾಽವೈಹಿ ಕೃತಂ ದ್ವಿತೀಯಂ ॥೧೦॥**

**ಜ್ಞಾನಂ ವಿಶುದ್ಧಂ ಪರಮಾರ್ಥಮೇಕ-**
**ಮನಂತರಂ ನ ಬರ್ಹಿಬ್ರಹ್ಮ ಸತ್ಯಂ ।**
**ಪ್ರತ್ಯಕ್ ಪ್ರಶಾಂತಂ ಭಗವಚ್ಛಬ್ದವಾಚ್ಯಂ**
**ಯದ್ವಾಸುದೇವಂ ಕವಯೋ ವದಂತಿ ॥೧೧॥**

**ಕೃಶಂ** ತೆಳ್ಳಗಾಗಿರುವ **ಸ್ಥೂಲಂ** ದಪ್ಪವಾಗಿರುವ **ಅಣು** ಚಿಕ್ಕದಾದ **ಬೃಹತ್** ದೊಡ್ಡದಾದ **ಅಸತ್** ಕಾರಣವಾದ ಅಥವಾ ವಾಯು, ಆಕಾಶಗಳೆಂಬ ರೂಪರಹಿತ ಅಮೂರ್ತ ವಸ್ತುಗಳು **ಸತ್** ಕಾರ್ಯವಾದ ಪೃಥಿವೀ, ನೀರು, ತೇಜಸ್ಸುಗಳೆಂಬ ರೂಪವುಳ್ಳ ಮೂರ್ತಪದಾರ್ಥಗಳು **ಜೀವ** ಚೇತನವಾದ **ಅನ್ಯತ್** ಸ್ವಾತಂತ್ರ್ಯವಿಲ್ಲದ **ಅಜೀವಂ** ಜಡವಾದ ಹೆಚ್ಚೇನು **ಅನ್ಯತ್** ಪರಸ್ಪರ ಮತ್ತು ಶ್ರೀವಿಷ್ಣುವಿನಿಂದ ಭಿನ್ನವಾದ ಜಗತ್ತೆಲ್ಲವೂ **ಏವಂ** ಹೀಗೆ ಶ್ರೀಹರಿಂದ **ಕೃತಂ** ಮಾಡಲ್ಪಟ್ಟಿದ್ದು **ಧೃತಂ** ಧರಿಸಲ್ಪಟ್ಟಿದ್ದು ಆಗಿದೆಯೋ ಹಾಗೆಯೇ **ದ್ರವ್ಯ** ಪಂಚಭೂತಗಳು **ಸ್ವಭಾವ ಆಶಯ** ಅಂತಃಕರಣ **ಕಾಲಕರ್ಮನಾಮ್ನಾ್ಯ** ಇವುಗಳ ಅಭಿಮಾನಿಯಾದ್ದರಿಂದ ಎಲ್ಲ ಹೆಸರಿನಿಂದ ಕರೆಸಿಕೊಳ್ಳುವ **ಅಜಯಾ** ಶ್ರೀಹರಿಯಿಂದ ನಿಯತವಾದ ದ್ರವ್ಯಾದ್ಯಾತ್ಮಕ ಜಡಪ್ರಕೃತಿಯಿಂದ **ದ್ವಿತೀಯಂ ಕೃತಂ** ಎರಡನೇ ಅಮುಖ್ಯ ಕೃತ ಮತ್ತು ಧೃತವೆಂದು **ಅವೈಹಿ** ತಿಳಿ. ಅಥವಾ ಏವಂ ಹೇಗೆ ಪರಮಾಣುಗಳಿಗೆ ಮೂಲ ಕಾರಣತ್ವ ಮುಂತಾದವು ಸ್ವತಃ ಇಲ್ಲವೋ ಹಾಗೆಯೇ ಕೃಶ ಮೊದಲಾದ **ಅನ್ಯತ್** ಪಮಾತ್ಮನಿಂದ ಭಿನ್ನವಾದ **ದ್ವಿತೀಯಂ** ಎರಡನೇ ವಸ್ತುವು ದ್ರವ್ಯಾದಿನಾಮವುಳ್ಳ ಪ್ರಕೃತಿಯಿಂದ ಕೃತವಾದುದು ಎಂದು **ಅವೈಹಿ** ತಿಳಿ. ಸ್ವತಃ ಅಲ್ಲ ಎಂದು ಅನ್ವಯ. ॥೧೦॥

ಪ್ರಕೃತಿಯೇ ಮೊದಲಾದ ಎಲ್ಲಾ ಜಗತ್ತಿಗೂ ಪ್ರವರ್ತಕನಾದ ಶ್ರೀಹರಿಯ ಸ್ವರೂಪ ಹೇಗಿದೆ? ಜಗತ್ತಿನಲ್ಲಾದರೂ ಆದರಿಂದ ದೋಷಲೇಪವಿಲ್ಲ ವಲ್ಲ ಎಂದರೆ ಹೇಳುವರು

**ಜ್ಞಾನಂ** ಜ್ಞಾನಾತ್ಮಕ ಶರೀರವುಳ್ಳವನು **ವಿಶುದ್ಧಂ** ಜಡಾಮಿಶ್ರವಾದ ಪ್ರಾಕೃತ ವಿಷಯ ಸಂಬಂಧರಹಿತವಾದ್ದರಿಂದ ಅತಿಶುದ್ಧವಾದ (ವಿಷಯ ಸಂಸರ್ಗ ಇದ್ದರೂ ಅದರಿಂದ ಸ್ವಲ್ಪವೂ ದೋಷವಿಲ್ಲದ **ಪರಮಾರ್ಥಂ** ಸರ್ವೋತ್ತಮವಾದ ಉತ್ತಮಾರ್ಥರೂಪವಾದ **ಏಕಂ** ಸಮಾಧಿಕರಹಿತವಾದ ತನ್ನ ಅನಂತ ಗುಣ,ಕರ್ಮ ರೂಪಗಳಿಂದ ಭೇದವಿಲ್ಲದ **ಅನಂತರಂ** ಅಂತಃಪ್ರವೇಶಕರೊಬ್ಬರಿಲ್ಲದ ಸ್ವಗತಭೇದವಿಲ್ಲದ **ನ ಬಹಿಃ** ಹೊರಗೂ ಪ್ರೇರಕರಿಲ್ಲದ ಎಲ್ಲ ದೇಹಗಳೊಳಗೂ ಇರುವ **ಬ್ರಹ್ಮ** - ೧) ಬ್ರಹ್ಮನೆಂದು ಕರೆಸಿಕೊಳ್ಳುವ ದೊಡ್ಡದಾದ ೨) ನಿರುಪಚರಿತ ಪೂರ್ಣವಾದ **ಸತ್ಯಂ** ನಿತ್ಯಸಾಧುಗುಣಪೂರ್ಣನಾದ, ಮುಕ್ತಾಮುಕ್ತರನ್ನೂ ನಿಯಮಿಸುವ **ಪ್ರತ್ಯಕ್** ಎಲ್ಲರ ಹೃದಯದಲ್ಲಿರುವ **ಪ್ರಶಾಂತಂ** ಕ್ರೋಧವಿಲ್ಲದ, ಉತ್ಕೃಷ್ಟ ಸುಖಪೂರ್ಣನಾದ **ಭಗವಚ್ಛಬ್ದವಾಚ್ಯಂ** ಭಗವಚ್ಛಬ್ದ ಮುಖ್ಯಾರ್ಥನಾದ **ಯತ್** ಯಾವನನ್ನು **ಕವಯಃ** ಜ್ಞಾನಿಗಳು **ವಾಸುದೇವಂ** ೧) ಕ್ರೀಡೆಯಿಂದ ಎಲ್ಲಕಡೆಯಲ್ಲಿ ವಾಸಿಸುವ ೨) **ವ** - ಬಲಜ್ಞಾನಾನಂದಾದಿಗಳು **ಅಸು** ಶತ್ರುನಿರಾಸಕ ವೀರ್ಯ, ಶೌರ್ಯ, ಔದಾರ್ಯ, ಕ್ರೀಡಾ, ವಿಜಿಗೀಷಾ, ಕಾಂತಿ ಮೊದಲಾದವುಗಳಿಂದ ಪೂರ್ಣನಾದ ೨) ಜ್ಞಾನರೂಪ ಪ್ರಾಣ ಪೂಜ್ಯನಾದವನೆಂದು **ವದಂತಿ** ಹೇಳುವರು **ತತ್** ಅದನ್ನೇ ಪ್ರಕೃತ್ಯಾದಿ ಪ್ರೇರಕವೆಂದು ತಿಳಿ. ।।೧೧।।

ಈ ಎರಡೂ ಶ್ಲೋಕಗಳ ತಾತ್ಪರ್ಯ ಆಚಾರ್ಯರು ತಿಳಿಸುವರು

ತಾತ್ಪರ್ಯ - ''ಏವಂ ಸರ್ವಂ ತಥಾ ಪ್ರಕೃತ್ಯೈವ ಕಲ್ಪಿತಂ ವಿಷ್ಣೋರನ್ಯತ್ । ಏವಂ ಪ್ರಕೃತ್ಯಾಧಾರ: ಸ್ವಯಂ ಅನನ್ಯಾಧಾರೊ ವಿಷ್ಣುರೇವ । ಅತಃ ಸರ್ವಶಬ್ದಾಶ್ಚ ತಸ್ಮಿನ್ ಏವ ।

ತಾತ್ಪರ್ಯ ಹೇಳಿ ಸಂವಾದಿ ಪ್ರಮಾಣ ಹೇಳುವರು

''ರಾಜಾ ಗೋಪ್ತಾऽऽಶ್ರಯೋ ಭೂಮಿಃ ಶರಣಂ ಚೇತಿ ಲೌಕಿಕಃ ।
ವ್ಯಹಾರೋ ನ ತತ್ಸತ್ಯಂ ತಯೋರ್ಬ್ರಹ್ಮಾಶ್ರಯೋ ವಿಭುಃ ।।
ಗೋಪ್ತಾ ಚ ತಸ್ಯ ಪ್ರಕೃತಿಸ್ತಸ್ಯಾ ವಿಷ್ಣುಃ ಸ್ವಯಂ ಪ್ರಭುಃ ।
ತವ ಗೋಪ್ತ್ರೀ ತು ಪೃಥಿವೀ ನ ತ್ವಂ ಗೋಪ್ತಾ ಕ್ಷಿತೇಃ ಸ್ಮೃತಃ ।।
ಅತಃ ಸರ್ವಾಶ್ರಯಶ್ಚೈವ ಗೋಪ್ತಾ ಚ ಹರಿರೀಶ್ವರಃ ।
ಸರ್ವಶಬ್ದಾಭಿಧೇಯಶ್ಚ ಶಬ್ದವೃತ್ತೇರ್ಹಿಕಾರಣಂ ।।




ಸರ್ವಾಂತರಃ ಸರ್ವಬಹಿರೇಕ ಏವ ಜನಾರ್ದನಃ ।
ಶಿರ ಆಧಾರತಾ ಯದ್ವತ್ ಗ್ರೀವಾಯಾಸ್ತದ್ವದೇವ ತು ।
ಆಶ್ರಯತ್ವಂ ಚ ಗೋಪ್ತೃತ್ವ ಮನ್ಯೇಷಾಮುಪಚಾರತಃ ।। ಇತಿ ಚ ।।

ಪರಮಾಣ್ವಾದಿಗಳು ಸ್ವತಃ ಮೂಲ ಕಾರಣಗಳು ಹೇಗೆ ಆಗುವುದಿಲ್ಲವೋ ಹಾಗೆಯೇ ಶ್ರೀಹರಿಯಿಂದ ಬೇರೆಯಾದ ಚರಾಚರ ವಸ್ತುಗಳೆಲ್ಲವೂ ಚೇತನಾಚೇತನ ಪ್ರಕೃತಿಯಿಂದಲೂ ಮೂಲಕಾರಣನಾದ ಶ್ರೀಹರಿಯಿಂದ ನಿರ್ಮಿಸಲ್ಪಟ್ಟಿದ್ದು.

ಹೀಗೆ ದ್ರವ್ಯ, ಸ್ವಭಾವ, ಆಶಯ, ಕಾಲ ಎಂದು ಹೆಸರುಳ್ಳ ಪರಮಾತ್ಮನು ಚಿತ್ ಪ್ರಕೃತಿಯಿಂದಲೂ, ಉಪಾದಾನವಾದ ಜಡಪ್ರಕೃತಿಯಿಂದಲೂ ಚೇತನಾಚೇತನಾತ್ಮಕ ಜಗತ್ತನ್ನು ಸೃಷ್ಟಿಸುತ್ತಾನೆ ಎಂದ ಮೇಲೆ ಶ್ರೀಹರಿಯೇ ಚೇತನಾಚೇತನಪ್ರಕೃತಿಗಳಿಗೆ ಆಧಾರನೆಂದೂ, ತನಗೆ ಇನ್ನೊಬ್ಬನು ಆಧಾರವಲ್ಲವೆಂದು ಸಿದ್ಧವಾಯಿತು. ಆದ ಕಾರಣ ರಾಜಾ, ಗೋಪ್ತಾ, ಪೃಥಿವೀ ಮೊದಲಾದ ಎಲ್ಲ ಶಬ್ದಗಳು ಆ ಶ್ರೀಹರಿಯಲ್ಲಿಯೇ ಇರುತ್ತವೆ(ಅಂದರೆ ಅವನೇ ಮೂಲ ಕಾರಣ ಎಂಬ ವಿವಕ್ಷೆಯಿಂದ ಪ್ರಯೋಗಿಸುವರು).

ರಾಜನು ರಕ್ಷಕನು, ಭೂಮಿಯು ಆಶ್ರಯವು, ಕಾರಣವು ಇತ್ಯಾದಿ ರೂಪವಾದ ಲೌಕಿಕ ವ್ಯವಹಾರವೇನಿದೆಯೋ ಅದಕ್ಕೆ ರಾಜಾದಿಗಳು ಮುಖ್ಯವಾಗಿ ವಾಚ್ಯರಾಗುವುದಿಲ್ಲ. ಏಕೆಂದರೆ ರಾಜ, ಭೂಮಿಗಳಿಗೆ ಚತುರ್ಮುಖನು(ಬ್ರಹ್ಮ) ಆಶ್ರಯನು, ರಕ್ಷಕನು. ಆ ಬ್ರಹ್ಮನಿಗೆ ಚಿತ್ ಪ್ರಕೃತಿಯು ರಕ್ಷಕಳು, ಆಶ್ರಯಳು. ಚಿತ್ಪ್ರಕೃತಿಗೆ ಶ್ರೀಹರಿಯೇ ಸಾಕ್ಷಾತ್ತಾಗಿ ರಕ್ಷಕನು, ಆಶ್ರಯನು.

ರಹೂಗಣ ರಾಜನೇ! ನಿನಗೆ ಪೃಥಿವಿಯು ರಕ್ಷಕಳು, ಆಶ್ರಯಳು, ಆಗಿರುವಳು. ನೀನು ಭೂಮಿಯನ್ನು ಮುಖ್ಯತಃ ರಕ್ಷಿಸುವವನಲ್ಲ. ಆದ ಕಾರಣ ಶ್ರೀಹರಿಯೇ ಸರ್ವರಿಗೂ ಆಶ್ರಯನು, ಸರ್ವ ರಕ್ಷಕನು. ರಾಜ ಮೊದಲಾದ ಸಮಸ್ತ ಶಬ್ದಗಳಿಗೂ ವಾಚ್ಯನು. ನೀನು ರಕ್ಷಣಾದಿಗಳನ್ನು ಮಾಡುವವನಲ್ಲವಾದ್ದರಿಂದ ಶ್ರೀಹರಿಯೇ ಇತರರಲ್ಲಿ ಇರುವ ಶಬ್ದಗಳ ಪ್ರವೃತ್ತಿ ನಿಮಿತ್ತಗಳಿಗೆ ಮುಖ್ಯ ಕಾರಣನು. ಶ್ರೀಪರಮಾತ್ಮನೊಬ್ಬನೇ ಸರ್ವರ ಒಳಗೂ ಹೊರಗೂ ಇರುವವನು. ಕುತ್ತಿಗೆಯು ಹೇಗೆ ಶಿರಸ್ಸಿಗೆ ಆಧಾರವೋ ಹಾಗೆಯೇ ಶ್ರೀಹರಿಯಿಂದ ಭಿನ್ನರಾದವರು ಅಮುಖ್ಯವಾಗಿ ಆಶ್ರಯರೆಂದು ರಕ್ಷಕರೆಂದೂ ಅನಿಸಿಕೊಳ್ಳುವರು.

ಈ ವಿಧವಾದ ಜ್ಞಾನವು ಜ್ಞಾನಿಗಳ ಸೇವೆ ಮಾಡದೇ ದೊರಯಲಾರದು ಎಂದು ಹೇಳುವರು

**ರಹೂಗಣೈತತ್ತಪಸಾ ನ ಯಾತಿ**
**ನ ವಿದ್ಯಯಾ ನಿರ್ವ್ಯಸನಾದ್ಗೃಹಾದ್ವಾ ।**
**ನ ಛಂದಸಾ ನೋಽತ ಜಲಾಗ್ನಿಸೂರ್ಯೈರ್-**
**ವಿನಾ ಮಹತ್ಪಾದರಜೋಭಿಷೇಕಮ್ ॥೧೨॥**

**ಹೇ ರಹೂಗಣ!** ಎಲೋ ರಹೂಗಣ ರಾಜನೇ! **ಏತತ್** ಜ್ಞಾನಾದಿರೂಪನಾದ ಬ್ರಹ್ಮನು **ತಪಸಾ** ಕೃಛ್ರಚಾಂದ್ರಾಯಣಾದಿಕಾಯಕ್ಲೇಶರೂಪತಪಸ್ಸಿನಿಂದ **ವಿದ್ಯಯಾ** ಸಂಪ್ರದಾಯಾಭಿಜ್ಞರಾದ ಗುರುಗಳಿಲ್ಲದೆ (ವ್ಯಾಖ್ಯಾತೃ) ಪೌರುಷೇಯ ವಿದ್ಯೆಯಿಂದ **ಗೃಹಾತ್ ನಿರ್ವ್ಯಸನಾತ್** ಮನೆಬಿಟ್ಟು ವನವಾಸ ಮಾಡುವುದರಿಂದ ಸಂನ್ಯಾಸದಿಂದಾಗಲಿ **ಛಂದಸಾ** ಸಂಪ್ರದಾಯ ತಿಳಿದವರಿಂದ ವ್ಯಾಖ್ಯಾತವಾದ ವೇದದಿಂದಾ **ಉತ** ಮತ್ತು ಜಲ ಭಾಗೀರಥ್ಯಾದಿಸ್ನಾನದಿಂದ **ಅಗ್ನಿ** ಅಗ್ನಿಹೋತ್ರಾದಿಗಳಿಂದ **ಸೂರ್ಯೇಣ** ಸೂರ್ಯೋಪಾಸನೆಯಿಂದಾಗಲಿ **ಮಹತ್ಪಾದರಜೋಭಿಷೇಕಂ ವಿನಾ** ಜ್ಞಾನಿಗಳಾದ ಮಹಾತ್ಮರ ಪಾದಧೂಳಿಯ ಸೇವನೆ ಇಲ್ಲದೇ **ನ ಯಾತಿ** ತಿಳಿಯಲಾರನು. ॥ ೧೨ ॥

ಇದನ್ನೇ ಉಪಪಾದಿಸುವರು

**ಯತ್ರೋತ್ತಮಶ್ಲೋಕಗುಣಾನುವಾದಃ**
**ಪ್ರಸ್ತೂಯತೇ ಗ್ರಾಮ್ಯಕಥಾವಿಘಾತಃ ।**
**ನಿಷೇವ್ಯಮಾಣೋಽನುದಿನಂ ಮುಮುಕ್ಷೋ-**
**ರ್ಮತಿಂ ಸತೀಂ ಯಚ್ಛತಿ ವಾಸುದೇವೇ ॥೧೩॥**

**ಯತ್ರ** ಯಾವ ಬಿಂಬ ಜ್ಞಾನಿಗಳಾದ ಮಹಾತ್ಮರ ಹತ್ತಿರ **ಗ್ರಾಮ್ಯಕಥಾವಿಘಾತಃ** ಲೌಕಿಕ ಕಥೆಗಳಿಗೆ ಪ್ರತಿಬಂಧಕವಾದ (ನಾಶಕವಾಶ) **ಉತ್ತಮಶ್ಲೋಕಗುಣಾನುವಾದಃ** ಶ್ರೀಹರಿಯ ಗುಣಗಳ ಅನುವಾದವು **ಪ್ರಸ್ತೂಯತೇ** ನಡೆಯುವುದೋ ಚೆನ್ನಾಗಿ ಸ್ತುತಿಸಲ್ಪಡುವುದೋ (ಸ ಚ ಅದು) ಅನುದಿನಂ ಪ್ರತಿನಿತ್ಯದಲ್ಲಿ **ನಿಷೇವ್ಯಮಾಣಃ** ಶ್ರದ್ಧೆಯಿಂದ ಕೇಳಲ್ಪಡುವುದಾಗಿ **ಮುಮುಕ್ಷೋಃ** ಮೋಕ್ಷೇಚ್ಛುಗಳಿಗೆ **ವಾಸುದೇವೇ**




ಬಿಂಬರೂಪಿಯಾದ ಶ್ರೀಹರಿಯಲ್ಲಿ **ಸತೀಂ ಮತಿಂ** ತನಗೆ ಯೋಗ್ಯವಾದ ಒಳ್ಳೆಯ ಭಕ್ತಿಯಿಂದ ನಿಶಿತವಾದ ಜ್ಞಾನವನ್ನು **ಯಚ್ಛತಿ** ಕೊಡುವುದು. ||೧೩||

ಮುಮುಕ್ಷುವು ವಿಷಯಸಂಗವನ್ನು ಸಂಪೂರ್ಣವಾಗಿ ಬಿಡಬೇಕು ಎಂದು ಸೂಚಿಸುತ್ತ ತನಗೆ ಆಪ್ತತ್ವವನ್ನು ತಿಳಿಸಲು ನೀನ್ಯಾರು? ಗೂಢವಾಗಿ ಸಂಚರಿಸುವೆಯಲ್ಲ ಎಂಬ ಪ್ರಶ್ನೆಗೆ ಉತ್ತರವಾಗಿ ತನ್ನ ಹಿಂದಿನ ವೃತ್ತಾಂತವನ್ನು ಎರಡು ಶ್ಲೋಕಗಳಿಂದ ಹೇಳುವನು.

**ಅಹಂ ಪುರಾ ಭರತೋ ನಾಮ ರಾಜಾ**
**ವಿಮುಕ್ತದೃಷ್ಟಶ್ರುತಸಂಗಬಂಧಃ ।**
**ಆರಾಧನಂ ಭಗವತ ಈಹಮಾನೋ**
**ಮೃಗೋಽಭವಂ ಮೃಗಸಂಗಾದ್ಧತಾರ್ಥಃ ||೧೪||**

**ಸಾ ಮಾಂ ಸ್ಮೃತಿರ್ಮೃಗದೇಹೇಽಪಿ ವೀರ**
**ಕೃಷ್ಣಾರ್ಚನಪ್ರಭವಾ ನೋ ಜಹಾತಿ ।।**
**ಅಥೋ ಅಹಂ ಜನಸಂಗಾದ್ವಿಮುಕ್ತೊ**
**ವಿಶಂಕಮಾನೋಽವಿಕೃತ(ವಿವೃತ)ಶ್ಚರಾಮಿ ||೧೫||**

**ಹೇ ವೀರ** ರಾಜನೇ **ಅಹಂ** ನಾನು **ಪುರಾ** ಹಿಂದೆ ಭರತನೆಂಬ ಹೆಸರಿನ ಪ್ರಸಿದ್ಧ ರಾಜನು **ವಿಮುಕ್ತದೃಷ್ಟಶ್ರುತಸಂಗಬಂಧಃ** ಪ್ರತ್ಯಕ್ಷ ಕಾಣುವ ದ್ರವ್ಯಾದಿಗಳಲ್ಲಿ, ಕೇಳಲ್ಪಡುವ ಸ್ವರ್ಗಾದಿಗಳಲ್ಲಿ, ಸ್ನೇಹ ಸಂಬಂಧವನ್ನು ತೊರೆದವನಾಗಿ **ಭಗವತಃ** ಶ್ರೀಹರಿಯ **ಆರಾಧನಂ** ಏಕಾಂತದಲ್ಲಿ ಉಪಾಸನೆ ಮಾಡುತ್ತಾ **ಮೃಗಸಂಗಾತ್** ಜಿಂಕೆಯಲ್ಲಿ ಸ್ನೇಹ ಮಾಡಿದ್ದರಿಂದ **ಹತಾರ್ಥಃ** ಯೋಗವೆಂಬ ಪ್ರಯೋಜನವನ್ನು ಕಳೆದುಕೊಂಡವನಾಗಿ **ಮೃಗಃ ಅಭವಂ** ಜಿಂಕೆಯಾಗಿ ಜನಿಸಿದೆನು. **ಮೃಗದೇಹೇಽಪಿ** ನಿಗದಿತವಾದ ಜಿಂಕೆ ದೇಹದಲ್ಲಿಯೂ (ಇದರ ಹಿಂದಿನ) **ಕೃಷ್ಣಾರ್ಚನಪ್ರಭವಾ** ಶ್ರೀಹರಿಯ ಪೂಜೆ ಮಾಡಿದ್ದರಿಂದ ಉಂಟಾದ **ಸಾ ಸ್ಮೃತಿಃ** ಜನ್ಮಾಂತರ ಸ್ಮರಣವು **ಮಾಂ ನೊ ಜಹಾತಿ** ನನ್ನನ್ನು ಬಿಡದು (ಹೋಗಲಿಲ್ಲವೆಂದರ್ಥ) **ಅಥೊ** ಆದ್ದರಿಂದ **ಅಹಂ** ನಾನು **ಜನಸಂಗಾತ್ ವಿಶಂಕಮಾನಃ** ಜನರ ಸ್ನೇಹ ಮಾಡಿದರೆ ಯೋಗನಾಶವಾಗುವುದು ಎಂಬ ಸಂದೇಹದಿಂದ(ಗಾಬರಿಯಿಂದ) (**ವಿಮುಕ್ತಃ**) ಅಭಿಮಾನದಿಂದ ಮುಕ್ತನಾಗಿ **ಅಸಂಗಃ** ಸರ್ವಸಂಗರಹಿತನಾಗಿ **ಅವಿಕೃತಃ** ವಿಷಯ ಲಾಭಾಲಾಭನಿಮಿತ್ತಕ

ನೀಚೋಚ್ಚತಾರಹಿತನಾಗಿ **ಅವಿವೃತಃ** ಜ್ಞಾನಾದಿಗಳನ್ನು ಪ್ರಕಟಪಡಿಸದೇ **ಚರಾಮಿ** ಸಂಚರಿಸುವೆನು. ||೧೪-೧೫||

**ತಸ್ಮಾನ್ನರೋಽಸಂಗಸುಸಂಗಜಾತಜ್ಞಾನಾಸಿನೈವೇಹ ವಿವೃಕ್ಣಸಂಗಃ ।**
**ಹರಿಂ ತದೀಹಾಕಥನಶ್ರುತಿಭ್ಯಾಂ ಲಬ್ಧಸ್ಮೃತಿರ್ಯಾತ್ಯತಿಪಾರಮಧ್ವನಃ ॥**

**ತಸ್ಮಾತ್** ಶ್ರೀಕೃಷ್ಣಾರ್ಚನ ಫಲವು ನನ್ನ ಅನುಭವಸಿದ್ಧವಾದುದರಿಂದ **ನರಃ** ಅಧಿಕಾರಿಯು **ಅಸಂಗಃ** ವೈರಾಗ್ಯವು **ಸುಸಂಗಃ** ಸತ್ಸಂಗ ಇವುಗಳಿಂದ **ಜಾತ** ಉಂಟಾದ ನಿಶಿತವಾದ **ಜ್ಞಾನಾಸಿನಾ ಏವ** ಜ್ಞಾನವೆಂಬ ಖಡ್ಗದಿಂದಲೇ **ಇಹ** ಸಂಸಾರದಲ್ಲಿ **ವಿವೃಕ್ಣಸಂಗಃ** ವಿಶೇಷವಾಗಿ ಕತ್ತರಿಸಲ್ಪಟ್ಟ ಸ್ನೇಹವುಳ್ಳವನಾಗಿ **ಅಧ್ವನಃ** ಸಂಸಾರ ಮಾರ್ಗದ **ಅತಿಪಾರಂ** ಕೊನೆ ಅವಧಿಯಾದ **ಹರಿಂ** ಶ್ರೀಹರಿಯನ್ನು **ತದೀಹಾಕಥನಶ್ರುತಿಭ್ಯಾಂ** ಶ್ರೀಹರಿಯ ಚರಿತ್ರೆಯನ್ನು ಹೇಳುವುದು ಮತ್ತು ಕೇಳುವುದರಿಂದ **ಲಬ್ಧಸ್ಮೃತಿಃ** ಧ್ಯಾನ ಮಾಡುವನಾಗಿ **ಯಾತಿ** ಹೊಂದುವನು. ||೧೬||

**|| ಇಲ್ಲಿಗೆ ೧೨ನೇ ಅಧ್ಯಾಯವು ಮುಗಿಯಿತು ||**

★★★



 

# ಹನ್ನೆರಡನೇ ಅಧ್ಯಾಯ ಸಾರ

ರಹೂಗಣ ರಾಜನು ಮಾತಾಡುವನು - ತಾವು ಅವಧೂತರು. ಜನರ ಅನುಗ್ರಹಕ್ಕಾಗಿ ದೇಹವನ್ನು ಹೊಂದಿದವರು. ಪ್ರಾರಬ್ಧ ಕರ್ಮಾನುಭವಕ್ಕಾಗಿಯೇ ನಿಮಗೆ ಈ ದೇಹ. ಜೀವನ್ಮುಕ್ತರಾದ ತಮಗೆ ಸ್ವರೂಪಾಪರೋಕ್ಷವಿರುವುದರಿಂದ ಪಾಂಚಭೌತಿಕ ದೇಹದ ಮೇಲೆ ಮಮತೆಯಿಲ್ಲ. ಗೂಢವಾದ ಪರಮಾನಂದಾನುಭವವುಳ್ಳ ತಮಗೆ ದೇಹಾಭಿಮಾನ ಎಲ್ಲಿ? ಈ ಅವಧೂತ ಬ್ರಾಹ್ಮಣಾದಿಸ್ವರೂಪದಲ್ಲಿ ತಾವು ಸ್ವರೂಪ ಸಾಮರ್ಥ್ಯವನ್ನು ಮುಚ್ಚಿಟ್ಟುಕೊಂಡಿರುವಿರಿ. ಈ ನಿಮ್ಮ ಅವಧೂತ ಚಿನ್ಹೆಯಿಂದ ತಮಗಿರುವ ಶ್ರೀಹರಿಯ ಅನುಭವವನ್ನು ಗುಟ್ಟಾಗಿಟ್ಟಿರುವಿರಿ. ತಮಗೆ ನಮಸ್ಕಾರ. ತಮ್ಮ ಅಂತರ್ಯಾಮಿ ಶ್ರೀಹರಿಯು ಆನಂದಾಶ್ರಯವೂ, ಆನಂದಾತ್ಮಕವೂ ಆದ ದೇಹವುಳ್ಳವನು. ಕುತ್ಸಿತ ಅಸುರರ ನಿರಾಸಕ್ಕೆಂದೇ ದೇಹವನ್ನು ಸ್ವೀಕರಿಸುವನು. ಅವನಿಗೆ ಚಿದಾನಂದಾತ್ಮಕ ಸ್ವರೂಪ ದೇಹವೇ ಹೊರತು ಭೌತಿಕ ಪ್ರಾಕೃತದೇಹವಿಲ್ಲ . ಅವನು ದ್ವಿಜರ ಬಂಧುವು. ಅವನ ನಿತ್ಯ ಸಾಮರ್ಥ್ಯವು ಸಾಮಾನ್ಯರಿಗೆ ತಿಳಿಯದು. ಇಂತಹ ಅಂತರ್ಯಾಮಿ ಶ್ರೀಹರಿಗೂ ನಮೋ ನಮಃ. ಜ್ವರ, ರೋಗದಿಂದ ಪೀಡಿತನಾದವನಿಗೆ ಉತ್ತಮ ಔಷಧದಂತೆ ಬಿಸಿಲಿನಿಂದ ತಪ್ತನಿಗೆ ತಣ್ಣೀರಿನಂತೆ ಕೆಟ್ಟ ದೇಹಾಭಿಮಾನವೆಂಬ ಸರ್ಪದಿಂದ ಕಚ್ಚಲ್ಪಟ್ಟು ಜ್ಞಾನ ಚಕ್ಷುಸ್ಸನ್ನೇ ಕಳೆದುಕೊಂಡ ನನಗೆ ತಮ್ಮ ಮಾತುಗಳು ಅಮೃತದಂತಹ ಔಷಧವಾಗಿದೆ. ಆದ್ದರಿಂದ ಸಂದೇಹ ನಿವೃತ್ತಿಗಾಗಿ ತಮ್ಮನ್ನು ಸಂದಿಗ್ಧ ವಿಷಯ ಒಂದನ್ನು ಈಗ ಕೇಳುತ್ತೇನೆ. (ತಮ್ಮ ಸನ್ನಿಧಾನದಲ್ಲಿ ಅದು ಸುಲಭವಾಗಿ ತಿಳಿಯಲು ಸಾಧ್ಯ ಅನ್ಯ ಸನ್ನಿಧಾನದಲ್ಲಿ ತಿಳಿಯಲಾಗುವುದಿಲ್ಲ).

ನನ್ನ ಮನಸ್ಸು ತಮ್ಮ ಮಾತಿನ ಸರಿಯಾದ ಅಭಿಪ್ರಾಯವನ್ನು ತಿಳಿಯಬೇಕೆಂಬ ಕುತೂಹಲಪೂರ್ಣವಾಗಿದೆ. ತಾವು ಈಗಾಗಲೇ ಹೇಳಿದ ಪರಮಾತ್ಮನ ಜ್ಞಾನದಿಂದ

ನೀಚೋಚ್ಚತಾರಹಿತನಾಗಿ **ಅವಿವೃತಃ** ಜ್ಞಾನಾದಿಗಳನ್ನು ಪ್ರಕಟಪಡಿಸದೇ **ಚರಾಮಿ** ಸಂಚರಿಸುವೆನು. ।।೧೪-೧೫।।

**ತಸ್ಮಾನ್ನರೋಽಸಂಗಸುಸಂಗಜಾತಜ್ಞಾನಾಸಿನೈವೇಹ ವಿವೃಕ್ಣಸಂಗಃ ।**
**ಹರಿಂ ತದೀಹಾಕಥನಶ್ರುತಿಭ್ಯಾಂ ಲಬ್ಧಸ್ಮೃತಿರ್ಯಾತ್ಯತಿಪಾರಮಧ್ವನಃ ।।**

**ತಸ್ಮಾತ್** ಶ್ರೀಕೃಷ್ಣಾರ್ಚನ ಫಲವು ನನ್ನ ಅನುಭವಸಿದ್ಧವಾದುದರಿಂದ **ನರಃ** ಅಧಿಕಾರಿಯು **ಅಸಂಗಃ** ವೈರಾಗ್ಯವು **ಸುಸಂಗಃ** ಸತ್ಸಂಗ ಇವುಗಳಿಂದ **ಜಾತ** ಉಂಟಾದ ನಿಶಿತವಾದ **ಜ್ಞಾನಾಸಿನಾ ಏವ** ಜ್ಞಾನವೆಂಬ ಖಡ್ಗದಿಂದಲೇ **ಇಹ** ಸಂಸಾರದಲ್ಲಿ **ವಿವೃಕ್ಣಸಂಗಃ** ವಿಶೇಷವಾಗಿ ಕತ್ತರಿಸಲ್ಪಟ್ಟ ಸ್ನೇಹವುಳ್ಳವನಾಗಿ **ಅಧ್ವನಃ** ಸಂಸಾರ ಮಾರ್ಗದ **ಅತಿಪಾರಂ** ಕೊನೆ ಅವಧಿಯಾದ **ಹರಿಂ** ಶ್ರೀಹರಿಯನ್ನು **ತದೀಹಾಕಥನಶ್ರುತಿಭ್ಯಾಂ** ಶ್ರೀಹರಿಯ ಚರಿತ್ರೆಯನ್ನು ಹೇಳುವುದು ಮತ್ತು ಕೇಳುವುದರಿಂದ **ಲಬ್ಧಸ್ಮೃತಿಃ** ಧ್ಯಾನ ಮಾಡುವನಾಗಿ **ಯಾತಿ** ಹೊಂದುವನು. ।।೧೬।।

**।। ಇಲ್ಲಿಗೆ ೧೨ನೇ ಅಧ್ಯಾಯವು ಮುಗಿಯಿತು ।।**

★★★



## ಹನ್ನೆರಡನೇ ಅಧ್ಯಾಯ ಸಾರ

ರಹೂಗಣ ರಾಜನು ಮಾತಾಡುವನು - ತಾವು ಅವಧೂತರು. ಜನರ ಅನುಗ್ರಹಕ್ಕಾಗಿ ದೇಹವನ್ನು ಹೊಂದಿದವರು. ಪ್ರಾರಬ್ಧ ಕರ್ಮಾನುಭವಕ್ಕಾಗಿಯೇ ನಿಮಗೆ ಈ ದೇಹ. ಜೀವನ್ಮುಕ್ತರಾದ ತಮಗೆ ಸ್ವರೂಪಾಪರೋಕ್ಷವಿರುವುದರಿಂದ ಪಾಂಚಭೌತಿಕ ದೇಹದ ಮೇಲೆ ಮಮತೆಯಿಲ್ಲ. ಗೂಢವಾದ ಪರಮಾನಂದಾನುಭವವುಳ್ಳ ತಮಗೆ ದೇಹಾಭಿಮಾನ ಎಲ್ಲಿ? ಈ ಅವಧೂತ ಬ್ರಾಹ್ಮಣಾದಿಸ್ವರೂಪದಲ್ಲಿ ತಾವು ಸ್ವರೂಪ ಸಾಮರ್ಥ್ಯವನ್ನು ಮುಚ್ಚಿಟ್ಟುಕೊಂಡಿರುವಿರಿ. ಈ ನಿಮ್ಮ ಅವಧೂತ ಚಿನ್ಹೆಯಿಂದ ತಮಗಿರುವ ಶ್ರೀಹರಿಯ ಅನುಭವವನ್ನು ಗುಟ್ಟಾಗಿಟ್ಟಿರುವಿರಿ. ತಮಗೆ ನಮಸ್ಕಾರ. ತಮ್ಮ ಅಂತರ್ಯಾಮಿ ಶ್ರೀಹರಿಯು ಆನಂದಾಶ್ರಯವೂ, ಆನಂದಾತ್ಮಕವೂ ಆದ ದೇಹವುಳ್ಳವನು. ಕುತ್ಸಿತ ಅಸುರರ ನಿರಾಸಕ್ಕೆಂದೇ ದೇಹವನ್ನು ಸ್ವೀಕರಿಸುವನು. ಅವನಿಗೆ ಚಿದಾನಂದಾತ್ಮಕ ಸ್ವರೂಪ ದೇಹವೇ ಹೊರತು ಭೌತಿಕ ಪ್ರಾಕೃತದೇಹವಿಲ್ಲ . ಅವನು ದ್ವಿಜರ ಬಂಧುವು. ಅವನ ನಿತ್ಯ ಸಾಮರ್ಥ್ಯವು ಸಾಮಾನ್ಯರಿಗೆ ತಿಳಿಯದು. ಇಂತಹ ಅಂತರ್ಯಾಮಿ ಶ್ರೀಹರಿಗೂ ನಮೋ ನಮಃ. ಜ್ವರ, ರೋಗದಿಂದ ಪೀಡಿತನಾದವನಿಗೆ ಉತ್ತಮ ಔಷಧದಂತೆ ಬಿಸಿಲಿನಿಂದ ತಪ್ತನಿಗೆ ತಣ್ಣೀರಿನಂತೆ ಕೆಟ್ಟ ದೇಹಾಭಿಮಾನವೆಂಬ ಸರ್ಪದಿಂದ ಕಚ್ಚಲ್ಪಟ್ಟು ಜ್ಞಾನ ಚಕ್ಷುಸ್ಸನ್ನೇ ಕಳೆದುಕೊಂಡ ನನಗೆ ತಮ್ಮ ಮಾತುಗಳು ಅಮೃತದಂತಹ ಔಷಧವಾಗಿದೆ. ಆದ್ದರಿಂದ ಸಂದೇಹ ನಿವೃತ್ತಿಗಾಗಿ ತಮ್ಮನ್ನು ಸಂದಿಗ್ಧ ವಿಷಯ ಒಂದನ್ನು ಈಗ ಕೇಳುತ್ತೇನೆ. (ತಮ್ಮ ಸನ್ನಿಧಾನದಲ್ಲಿ ಅದು ಸುಲಭವಾಗಿ ತಿಳಿಯಲು ಸಾಧ್ಯ, ಅನ್ಯ ಸನ್ನಿಧಾನದಲ್ಲಿ ತಿಳಿಯಲಾಗುವುದಿಲ್ಲ).

ನನ್ನ ಮನಸ್ಸು ತಮ್ಮ ಮಾತಿನ ಸರಿಯಾದ ಅಭಿಪ್ರಾಯವನ್ನು ತಿಳಿಯಬೇಕೆಂಬ ಕುತೂಹಲಪೂರ್ಣವಾಗಿದೆ. ತಾವು ಈಗಾಗಲೇ ಹೇಳಿದ ಪರಮಾತ್ಮನ ಜ್ಞಾನದಿಂದ

ಯುಕ್ತವಾದ ಧ್ಯಾನ ವಿಷಯಕವಾದ ಗ್ರಂಥಗಳಲ್ಲಿ ಪ್ರತಿಪಾದಿತವಾದ ಮಾತುಗಳ ಅಭಿಪ್ರಾಯವನ್ನೂ ಪ್ರಮೇಯವನ್ನೂ ವಿಶದವಾಗಿ ತಿಳಿಸಿರಿ. ಯೋಗೇಶ್ವರರೇ! ತಾವು, ನಾನು ಹೋಗುವವನಾಗಿದ್ದರೆ, ನನಗೆ ಭಾರವಿದ್ದರೆ ಮುಂತಾಗಿ ಹೇಳಿದಿರಿ. ಈ ಮಾತಿನ ಪೂರ್ಣಾಭಿಪ್ರಾಯ ನನಗೆ ಆಗುತ್ತಿಲ್ಲ. ಹೋಗುವಿಕೆ, ನಡೆಯುವಿಕೆ ಮೊದಲಾದ ಲೌಕಿಕ ಕ್ರಿಯೆಗಳು ಅವುಗಳ ಫಲವಾದ ಶ್ರಮಾದಿಗಳು ಪ್ರತ್ಯಕ್ಷ ಪ್ರಮಾಣಸಿದ್ಧವಾಗಿವೆ.

ಸೋಮಪಾನ, ಅದರಿಂದ ಬರುವ ಅಮೃತತ್ವ ಮೊದಲಾದವುಗಳು ವೇದದಿಂದ ತಿಳಿದು ಬಂದಿವೆ. ಜ್ಞಾನಿಗಳು ಅಬಾಧಿತಜ್ಞಾನವಿಷಯಗಳಾದ ಇವುಗಳನ್ನು ಸತ್ಯವೆಂದೇ ವ್ಯವಹರಿಸುವರು. ತಾವು ಮುಖ್ಯ ವೃತ್ತಿಯಿಂದ ಇವು ತತ್ತ್ವನಿರ್ಣಯಕ್ಕೆ ಹೊರಟಾಗ ಒಬ್ಬನಲ್ಲಿಯೇ ಸ್ಥಾಯಿಯಾಗಿ ಇರುವುದಿಲ್ಲವೆಂದು ಹೇಳಿದಿರಿ. ತಮ್ಮ ಮಾತಿಗೆ ನಾನು ಮಾಡಿಕೊಂಡಿರುವ ಅರ್ಥವು ಸರಿಯೇ ಅಲ್ಲವೇ? ಎಂದು ಸಂದಿಗ್ಧವಾಗಿದೆ. ಬಿಡಿಸಿ ತಿಳಿಸಿರಿ.

(ಭರತ) ಬ್ರಾಹ್ಮಣರು ಹೇಳುವರು. ರಾಜನೇ! ಮೂಲ ಕಾರಣವನ್ನೇ ಪರಂಪರೆಯಿಂದ ಮುಖ್ಯಾಶ್ರಯವೆಂದು ತಿಳಿಯಬೇಕು. ಹಾಗಿಲ್ಲದಿದ್ದಲ್ಲಿ ಪೃಥಿವಿಯ ವಿಕಾರವಾದ ಈ ವಾಹಕ ದೇಹವು ಪೃಥಿವಿಯಲ್ಲಿ ಚಲಿಸುತ್ತದೆ ಎಂಬ ವ್ಯವಹಾರಕ್ಕೆ ಕಾರಣವಾದರೂ ಏನು? ಪೃಥಿವಿಯ ಸಂಬಂಧವಿರುವುದು ಕಾಲುಗಳಿಗೆ. ಅವುಗಳ ಮೇಲೆ ಗೆಣ್ಣುಗಳು(ಗುಲ್ಫ), ಅವುಗಳ ಮೇಲೆ ಮೀನಖಂಡಗಳು, ಅವುಗಳ ಮೇಲೆ ಮೊಳಕಾಲುಗಳು, ಅವುಗಳ ಮೇಲೆ ತೊಡೆಗಳು, ಅವುಗಳ ಮೇಲೆ ನಡುವು, ಅದರ ಮೇಲೆ ಎದೆ, ಅದರ ಮೇಲೆ ಕುತ್ತಿಗೆ, ಭೂಜಗಳೂ ಮಧ್ಯದಲ್ಲಿ ಆಧಾರವಾಗಿರುವವು ಅಲ್ಲವೇ? ಇವುಗಳಲ್ಲಿ ಚಲಿಸುವನೆಂದು ವ್ಯವಹಾರ ಇರಬೇಕಿತ್ತು. ಆದರೆ ಹಾಗೆ ವ್ಯವಹಾರ ಇಲ್ಲ. ಆದ್ದರಿಂದ ಮೂಲ ಕಾರಣವೆ ಮುಖ್ಯಾಶ್ರಯವೆಂದು ತಿಳಿಯುವುದು. ಅದರಂತೆ ಶ್ರೀಹರಿಯೇ ಹೊರುವುದು ಮುಂತಾದುದಕ್ಕೆ ಮುಖ್ಯಾಶ್ರಯನೆಂದು ತಿಳಿಯಬೇಕು. ಇದರಂತೆಯೇ 'ಭೂಮಿಯಲ್ಲಿ ರಾಜನು ಹೋಗುತ್ತಿರುವನು' ಎಂಬ ವ್ಯವಹಾರವೂ ಉಪಪಾದಿತವಾಗಬೇಕು. ಏಕೆಂದರೆ ಹೆಗಲ ಮೇಲಿನ ಮರದ ಮೇಲೆ ಅದರಲ್ಲಿ ಸೌವಿರ ರಾಜನೆಂಬ ಹೆಸರಿಗೆ ಮಾತ್ರ ವಿಷಯವಾದ ದೇಹ. ಅದರಲ್ಲಿ ನನ್ನದು ಎಂಬ ಅಭಿಮಾನ ಪೂರ್ಣನೂ, ಸಿಂಧು ದೇಶದ ರಾಜನೇ ನಾನು ಎಂಬ ಅಹಂಕಾರದಿಂದ ಕುರುಡನಾದ ನೀನು(ನಿನಗೂ

 

ಭೂಮಿಗೂ ಇಷ್ಟು ಅಂತರವಿದ್ದರೂ ಈ ವ್ಯವಹಾರವು ಮೂಲಾಶ್ರಯನಾದ ನಿನ್ನ ಅಭಿಪ್ರಾಯದಿಂದಲೇ ಯುಕ್ತವಾಗುವುದು) ರಾಜನೆಂಬ ಅಹಂಕಾರದಿಂದ ನೀನು ಶೋಚನೀಯರಾದ ಈ ವಾಹಕರನ್ನು ನಿಯಮನ ಮಾಡ ಹೊರಟು ಒಳ್ಳೆಯ ಮಾತುಗಳನ್ನೂ ಆಡದಿರುವೆ. ಇದರಿಂದ ನಿನಗೆ ಇಲ್ಲಿಯೂ ಪರಲೋಕದಲ್ಲಿಯೂ ದುಃಖ ಹೆಚ್ಚುವದೇ ಹೊರತು ಕಡಿಮೆಯಾಗುವುದಿಲ್ಲ. ನಮ್ಮ ಅಂತರ್ಯಾಮಿಯೇ ಮುಖ್ಯ ವಾಹಕನು ಹೇಗೆಯೋ ಹಾಗೆಯೇ ನಿನ್ನ ಅಂತರ್ಯಾಮಿಯೇ ಮುಖ್ಯ ಜನರಕ್ಷಕ. ಆದರೂ ನಾನೇ ಜನ ರಕ್ಷಕನೆಂದು ಹೊಗಳಿಕೊಳ್ಳುವ ನೀನು ದುಷ್ಟನೇ ಸರಿ. ಜ್ಞಾನಿಗಳು ಯಾರೂ ನಿನ್ನನ್ನು ಮುಖ್ಯ ರಕ್ಷಕನೆಂದು ಶ್ಲಾಘಿಸುವುದಿಲ್ಲ. ಈ ನ್ಯಾಯದಂತೆ ಜಂಗಮ ಸ್ಥಾವರ ವಸ್ತುಗಳ ಸ್ಥಿತಿಯನ್ನೂ ಉತ್ಪತ್ತಿಯನ್ನೂ ಭೂಮಿಯಲ್ಲಿ ಹೇಳುವುದು ಅಜ್ಞಾನಿಗಳ ರೂಢಿಯೇ ಸರಿ. ವಿಚಾರ ಮಾಡಿದರೆ ಈ ಸ್ಥಿತಿ ಉತ್ಪತ್ತಿಗಳಿಗೆ ಆಶ್ರಯವಾದ ಕ್ಷಿತಿ ಶಬ್ದ ವ್ಯವಹಾರಕ್ಕೆ ಅರ್ಹವಾದ ಅಬಾಧಿತ ಪ್ರವೃತ್ತಿ ನಿಮಿತ್ತವುಳ್ಳ ವಸ್ತು ಕ್ಷಿತಿಗಿಂತ ಬೇರೆ ಎಂದು ಯುಕ್ತಿಯುಕ್ತವಾಗಿ ನಿರೂಪಿಸಬೇಕು. ಮಹಾಯೋಗವಿದ್ವದ್ರೂಢಿಗಳಿಂದ ಅದು ಶ್ರೀಹರಿಯೆಂದೇ ಸಿದ್ಧವು. ಹೀಗೆ ಕ್ಷಿತಿ ಶಬ್ದಕ್ಕೆ ಮುಖ್ಯವಾಚ್ಯನು ಶ್ರೀಹರಿಯೇ ಆದ ಮೇಲೆ ಪೃಥಿವೀ ಪರಮಾಣುಗಳೇ ಮುಖ್ಯಾಶ್ರಯವೆಂಬ ಮಾತೂ ಅಯುಕ್ತವೇ ಸರಿ. ಅಜ್ಞಾನಯುಕ್ತ ಮನಸ್ಸಿನಿಂದ ಹಾಗೆ ಹೇಳುತ್ತಿರುವರು. ಆ ಪರಮಾಣುಗಳ ಸಮೂಹವಾದ ಪೃಥಿವೀಮೊದಲಾದವುಗಳು ಚರಾಚರ ಜಗತ್ತಿನ ಮುಖ್ಯಾಶ್ರಯನಾದ ಶ್ರೀಹರಿಯ ಇಚ್ಛೆಯಿಂದ ಮತ್ತು ಅದರಿಂದ ನಿಯತವಾದ ಪ್ರಕೃತಿಯಿಂದ ಆಧಾರಗಳಾಗಿ-ರುವುದರಿಂದ ಅಸ್ವತಂತ್ರ (ಅಮುಖ್ಯ)ಆಧಾರಗಳು. ಕೃಶ, ಸ್ಥೂಲ, ಅಣು, ಬೃಹತ್, ಮೂರ್ತ, ಅಮೂರ್ತ, ಕಾರಣ, ಕಾರ್ಯ, ಜೀವ, ಜಡ, ಪರಸ್ಪರ ಮತ್ತು ಶ್ರೀಹರಿಯಿಂದ ಭಿನ್ನವಾದ ಜಗತ್ತೆಲ್ಲ ಮುಖ್ಯವಾಗಿ ಸ್ವಭಾವ, ಅಂತಃಕರಣ, ಕಾಲ, ಕರ್ಮಗಳಿಗೆ ಅಭಿಮಾನಿನಿ, ಚಿತ್ ಪ್ರಕೃತಿ ಮತ್ತು ಏತದಾತ್ಮಕ ಜಡಪ್ರಕೃತಿಗಳಿಂದಲೂ ಅಮುಖ್ಯವಾಗಿ ಕೃತ ಮತ್ತು ಧೃತವಾಗಿದೆಯೆಂದು ತಿಳಿ. ಆದ್ದರಿಂದ ಪ್ರಕೃತ್ಯಾದಿಗಳನ್ನು ಹೇಳುವ ಮಾತುಗಳಿಗೂ ಅಪ್ರಾಮಾಣ್ಯವಿಲ್ಲ. ಶ್ರೀಹರಿಯಾದರೋ ಜ್ಞಾನಾತ್ಮಕನು, ದೋಷಲೇಪವಿಲ್ಲದವನು, ಉತ್ತಮಾರ್ಘನು, ಅಸದೃಶನು, ಒಳ ಹೊರಗೆ ಪ್ರೇರಕರಿಲ್ಲದವನು, ಸ್ವಗತಭೇದರಹಿತನು. ಅಪರಿಚ್ಛಿನ್ನನು, ಪೂರ್ಣನು, ಆನಂದಾದಿಸಾಧುಗುಣಯುಕ್ತನು, ಮುಕ್ತಾಮುಕ್ತ ನಿಯಾಮಕನು. ಪ್ರತಿ ಜೀವರಲ್ಲಿಯೂ ಅಭಿಮುಖವಾಗಿ ಬಿಂಬನಾಗಿರುವನು.

ಕ್ರೋಧರಹಿತನು. ಉತ್ಕೃಷ್ಟ ಸುಖಪೂರ್ಣನು, ಭಗವಚ್ಛಬ್ದ ಮುಖ್ಯವಾಚ್ಯನು. ಇವನನ್ನೇ ವಾಸುದೇವನೆಂದು ಕರೆಯುವರು. ರಹೂಗಣ! ಸಾಧಕನು ಸ್ತೋತ್ತಮರ ಪಾದರಜಸ್ಸಿನಲ್ಲಿ ಸ್ನಾನ ಮಾಡದೆ ಇಂತಹ ಶ್ರೀಹರಿಯನ್ನು ಹೊಂದಲಾರ. ಅವರ ಉಪದೇಶವಿಲ್ಲದೆ ಕೇವಲ ತಪಸ್ಸಿನಿಂದ ಪೌರುಷೇಯ ಶಾಸ್ತ್ರಗಳಿಂದ, ಸನ್ಯಾಸದಿಂದ, ವೇದಗಳಿಂದ, ಜಲಾಗ್ನಿ ಸೂರ್ಯರ ದೆಸೆಯಿಂದ ಹೊಂದಲಾರ. ಮಹನೀಯರಿದ್ದಲ್ಲಿ ಉತ್ತಮ ಶ್ಲೋಕನಾದ ಶ್ರೀಹರಿಯ ಗುಣಾನುವಾದವು ನಡೆಯುವುದು. ಅಲ್ಲಿ ಗ್ರಾಮ್ಯ(ಲೌಕಿಕ) ಕಥೆಗಳಿಗೆ ಅವಕಾಶವಿರುವುದಿಲ್ಲ. ಆ ಗುಣಾನುವಾದವನ್ನು ಪ್ರತಿದಿನ ಶ್ರವಣ ಮಾಡುವುದರಿಂದ ವಾಸುದೇವ ನಾಮಕನಾದ ಶ್ರೀಹರಿಯಲ್ಲಿ ಭಕ್ತಿಯುಕ್ತವಾದ ಮತ್ತು ಮೋಕ್ಷಕ್ಕೆ ಕಾರಣವಾದ ಜ್ಞಾನವು ಮುಮುಕ್ಷುವಿಗೆ ಬರುವುದು. ಸಂಸಾರವೂ ಕೊನೆಯಾಗುವುದು. ನಾನು ಹಿಂದಿನ ಜನ್ಮದಲ್ಲಿ ಭರತನೆಂಬ ರಾಜ. ಐಹಿಕ ಆಮುಷ್ಮಿಕ ಫಲಗಳಲ್ಲಿ ಆಸಕ್ತಿರಹಿತನಾಗಿದ್ದವನು. ಶ್ರೀಹರಿಯನ್ನೇ ಸೇವಿಸುತ್ತಿದ್ದ ನಾನು ಜಿಂಕೆಯಲ್ಲಿನ ಅಭಿಮಾನದಿಂದ ನನ್ನ ಯೋಗ ಸಾಧನೆಯಿಂದ ಭ್ರಷ್ಟನಾಗಿ ಜಿಂಕೆ ಜನ್ಮವನ್ನು ಹೊಂದಿದೆನು. ಶ್ರೀಹರಿಯ ಅರ್ಚನೆಯ ಫಲವಾಗಿ ನನಗೆ ಅವನ ಸ್ಮರಣೆಯು ಸಿದ್ಧಿಸಿತ್ತು. ವೀರನೇ! ಅದು ಶ್ರೀಹರಿಯ ಅನುಗ್ರಹದಿಂದ ಜಿಂಕೆಯ ದೇಹದಲ್ಲಿಯೂ, ಈ ಬ್ರಾಹ್ಮಣ ದೇಹದಲ್ಲಿಯೂ ನಷ್ಟವಾಗಲಿಲ್ಲ . ಆ ಕಾರಣದಿಂದ ಜನಸಂಗವೆಂದರೆ ನನಗೆ ಹೆದರಿಕೆ. ದೇಹಾಭಿಮಾನ ರಹಿತನಾಗಿ ಅವಧೂತ ವೇಷದಲ್ಲಿ ಸಂಚರಿಸುತ್ತಿದ್ದೇನೆ. ಆದ್ದರಿಂದ ಪ್ರತಿಯೊಬ್ಬ ಸಾಧಕನೂ ದುಷ್ಟ ಸಂಗವನ್ನು ಬಿಟ್ಟು ಸಜ್ಜನ ಸೇವೆಯನ್ನು ಮಾಡಬೇಕು. ಅದರಿಂದ ಬಂದ ಜ್ಞಾನವೆಂಬ ಖಡ್ಗದಿಂದ ಈ ಸಂಸಾರದಲ್ಲಿ ಫಲಾಸಕ್ತಿಯನ್ನೂ ಕತ್ತರಿಸಿ ಹಾಕಬೇಕು. ಶ್ರೀಹರಿಚರಿತ್ರೆಯ ಶ್ರವಣ ಕಥನಗಳಿಂದ ಜ್ಞಾನವನ್ನು ಹೊಂದಿ ಸಂಸಾರ ಮಾರ್ಗದ ಕೊನೆಯ ಅವಧಿಯಾದ ಶ್ರೀಹರಿಯನ್ನು ಅವನು ಹೊಂದುವನು.

ಯಾವ ಕಾರಣ ಬಿಡಲಾಗದ ಸಂಗವನ್ನು ಬಿಟ್ಟ ಮಹಾನುಭಾವನಾದ ಪರಮ ಭಾಗವತನಾದ ಭರತನಿಗೆ ತನ್ನ ಜಾತಿಯಲ್ಲದ ಜಿಂಕೆಯ ಮರಿಯ ಸಂಗವು ಬಂಧಕವಾಯಿತು ಅಂದಮೇಲೆ ನಮ್ಮ ಜಾತಿಯವರೇ ಆದ ದೇಹಸಂಬಂಧಿಗಳಾದ ಬಂಧುಗಳಲ್ಲಿ ಸಂಗಬಂಧಕವೆಂದು ಪ್ರತ್ಯೇಕ ಹೇಳಬೇಕಿಲ್ಲವೆಂದು ಭಾವ.

॥ ★★★ ॥




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ತ್ರಯೋದಶೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಈ ಅಧ್ಯಾಯದಲ್ಲಿ ರಹೂಗಣನಿಗೆ ವೈರಾಗ್ಯ ದೃಢವಾಗದಿದ್ದರೆ ಸುದೃಢ ತತ್ತ್ವಜ್ಞಾನವು ಆಗಲಾರದು ಎಂದು ತಿಳಿಸಲು ಘೋರಾರಣ್ಯದೃಷ್ಟಾಂತದಿಂದ ಸಂಸಾರಿ ಸ್ವರೂಪವನ್ನು ನಿರೂಪಿಸುವರು.

**ಸಂಸಾರಾಟವಿಯ ನಿರೂಪಣೆ**

ಸಂಸಾರದಲ್ಲಿ ವಿರಕ್ತನಾದವನಿಗೇನೇ ಶ್ರೀಹರಿಯಲ್ಲಿ ಸುದೃಢ ಭಕ್ತಿ ಬರುವುದು. ಅದರಿಂದ ಅಪರೋಕ್ಷ ಜ್ಞಾನವಾಗುವುದು. ಅದರಿಂದ ಅವನವನ ಯೋಗ್ಯತೆಗೆ ತಕ್ಕ ಮುಕ್ತಿಯಾಗುವುದು. ಕಾರಣ ಸಂಸಾರ ಹೇಯವೆಂದು ತಿಳಿದು ಸುದೃಢ ವೈರಾಗ್ಯ ಹುಟ್ಟಲು ಅದರ ಸ್ವರೂಪವನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು. ಮೊದಲಿಗೆ ವೈರಾಗ್ಯ ದಾರ್ಢ್ಯಕ್ಕಾಗಿ ಭೀಕರ ಸಂಸಾರವನ್ನು ಅರಣ್ಯ ಸಾಮ್ಯದಿಂದ ನಿರೂಪಿಸುವರು.

**ಬ್ರಾಹ್ಮಣ ಉವಾಚ-**

**ದುರತ್ಯಯೇಽಧ್ವನ್ಯಜಯಾ ನಿವೇಶಿತೋ**
**ರಜಸ್ತಮಸ್ಸತ್ವವಿಭಕ್ತಕರ್ಮದೃಕ್ ।**
**ಸ ಏಷ ಸಾರ್ಥೋಽರ್ಥಪರಃ ಪರಿಭ್ರಮನ್**
**ಭವಾಟವೀಂ ಯಾತಿ ನ ಶರ್ಮ ವಿಂದತಿ ॥೧॥**

**ಅರ್ಥಪರಃ** ವೈಷಯಿಕ ಸುಖವನ್ನಪೇಕ್ಷಿಸುವ **ರಜಸ್ತಮಸ್ಸತ್ವವಿಭಕ್ತಕರ್ಮದೃತ್** ರಜಸ್ತಮಸ್ಸತ್ವಗುಣಗಳಿಂದ ವಿಭಾಗ ಮಾಡಲ್ಪಟ್ಟ ಕರ್ಮಗಳಲ್ಲಿಯೇ ದೃಷ್ಟಿಯುಳ್ಳ ಅಥವಾ ರಾಜಸತಾಮಸಸಾತ್ವಿಕ ಕರ್ಮಗಳಫಲವಾದ ಶರೀರಗಳನ್ನು ಕಾಣುವ **ಸಃ ಏಷಃ** ಪ್ರಸಿದ್ಧವಾದ ಜೀವ ಸಮೂಹವು **ಅಜಯಾ** ಅನಾದಿ ಸಿದ್ಧವಾದ ಜೀವ ಸ್ವಭಾವ, ಪ್ರಕೃತಿಯಿಂದ, ಶ್ರೀಹರಿಯ ಬಂಧಕೇಚ್ಛೆಯಿಂದ **ದುರತ್ಯಯೇ** ಶ್ರೀ ಹರಿಯ ಕೃಪೆಯಿಲ್ಲದೇ ದಾಟಲಾಗದ **ಅಧ್ವನಿ** ಪ್ರವೃತ್ತಿ ಮಾರ್ಗದಲ್ಲಿ (ಕಾಮ್ಯ ನಿಷಿದ್ಧ ಕರ್ಮ ಮಾಡುವುದರಲ್ಲಿ) **ನಿವೇಶಿತಃ** ತೊಡಗಿಸಲ್ಪಟ್ಟು **ಪರಿಭ್ರಮನ್** ನಾನೇ ಕರ್ತಾ ಎಂದು ಭ್ರಾಂತನಾಗಿ **ಭವಾಟವೀಂ ಯಾತಿ** ಸಂಸಾರವೆಂಬ ವನವನ್ನು ಸೇರುವುದು **ಶರ್ಮ ನ ವಿಂದತಿ** ಮೋಕ್ಷ ಸಾಧನವನ್ನು ಹೊಂದುವುದಿಲ್ಲ. **ಯಥಾ** ಹೇಗೆ **ಅರ್ಥಪರಃ** ಧನವೇ ಮುಖ್ಯ ಉದ್ದೇಶ್ಯವಾಗಿರುವ **ಸಾರ್ಥಃ** ವ್ಯಾಪಾರಿಗಳ ಸಮೂಹವು **ಅಧ್ವನಿ ಪರಿಭ್ರಮನ್** ಮಾರ್ಗದಲ್ಲಿ ತಿರುಗುತ್ತ **ಅಟವೀಂ ಯಾತಿ** ಅಡವಿಯನ್ನು ಸೇರುವುದು **ಶರ್ಮ** ತನಗೆ ಬೇಕಾದ ಸುಖವನ್ನು **ನ ವಿಂದತಿ** ಹೊಂದಲಾರದು **ತಥಾ** ಹಾಗೆಯೇ ಇವನು.

ತನಗೆ ಬೇಕಾದ ಸುಖ ದೊರೆಯದಿರಲು ಕಾರಣ ಹೇಳುವರು

**ಯಸ್ಯಾಮಿಮೇ ಷಣ್ಣರದೇವ ದಸ್ಯವಃ**
**ಸ್ವಾರ್ಥಂ ವಿಲುಂಪಂತಿ ಕುನಾಯಕಂ ಬಲಾತ್ ।**
**ಗೋಮಾಯವೋ ಯತ್ರ ಹರಂತಿ ಸಾರ್ಥಕಂ**
**ಪ್ರಮತ್ತಮಾವಿಶ್ಯ ಯಥೋರಣಂ ವೃಕಾಃ** **॥੭॥**

**ಹೇ ನರದೇವ** ರಾಜನೇ! **ಯಸ್ಯಾಂ** ಯಾವ ಈ ಸಂಸಾರಾರಣ್ಯದಲ್ಲಿ **ಷಟ್‌ದಸ್ಯವಃ** ಐದು ಇಂದ್ರಿಯಗಳು ಮನಸ್ಸು ಎಂಬ ಆರು ಕಳ್ಳರು **ಕುನಾಯಕಂ** ಕುತ್ಸಿತ ನಾಯಕನುಳ್ಳ ಬುದ್ಧಿ (ಕಾಮು) ಎಂಬ ನಾಯಕನುಳ್ಳ ಜೀವನನ್ನು ಬಲಾತ್ಕಾರದಿಂದ **ಸಾರ್ಥಂ** ಸಂಚಿತ ಪುಣ್ಯವನ್ನು **ವಿಲುಂಪಂತಿ** ವಿಷಯಗಳ ಉಪಭೋಗ ಮೂಲಕ ಅಪಹರಿಸುವುವು. ಹೀಗೆ ಅಂತಃಶತ್ರುಗಳನ್ನು ಹೇಳಿ ಬಾಹ್ಯಶತ್ರುಗಳನ್ನು ಹೇಳುವರು **ಯತ್ರ** ಯಾವ ಈ ಸಂಸಾರದಲ್ಲಿ **ಯಥಾ** ಹೇಗೆ **ಗೋಮಾಯವಃ** ನರಿಗಳು **ವೃಕಾಃ** ತೋಳಗಳು ಉರಣಂ ಮೇಕೆಯನ್ನು **ಹರಂತಿ** ಅಪಹರಿಸುವವೋ **ತಥಾ** ಹಾಗೇ ನರಿಗಳಂತಿರುವ, ತೋಳಗಳಂತಿರುವ ಹೆಂಡತಿ




ಮಕ್ಕಳು ಮುಂತಾದವರು **ಸಾರ್ಥಕಂ** ಸಂಪತ್ತಿನಿಂದ ಕೂಡಿದ ಆದ್ದರಿಂದ **ಪ್ರಮತ್ತಂ** ಮೋಕ್ಷ ಸಾಧನದಲ್ಲಿ ವಿಮುಖನಾದ ಜೀವನನ್ನು **ಆವಿಶ್ಯ** ಅವ್ಯಕ್ತ ಮಧುರ ಮಾತುಗಳಿಂದ ಮನಸ್ಸನ್ನು ಪ್ರವೇಶಿಸಿ(ನೀನು ನನ್ನ ತಂದೆ, ನನ್ನ ಗಂಡ ಮುಂತಾದ ಮಾತುಗಳಿಂದ ಮೋಹಗೊಳಿಸಿ) ಧನಕನಕಾದಿಗಳನ್ನೂ, ಅಮೂಲ್ಯವಾದ ಕಾಲವನ್ನೂ **ಹರಂತಿ** ಅಪಹರಿಸುವರು. ಅರಣ್ಯದಲ್ಲಿ ಆರು ಜನ ಕಳ್ಳರು ಮೇಲೆಬಿದ್ದು ಸರಿಯಾದ ನಾಯಕನಿಲ್ಲದ ಆ ವರ್ತಕರ ಗುಂಪಿನ ಹಣವನ್ನು ಬಲಾತ್ಕಾರವಾಗಿ ಕಸಿದುಕೊಳ್ಳುವರು. ಅಲ್ಲಿ ನರಿಗಳು, ತೋಳಗಳು, ಕುರಿಗಳನ್ನು ಹೊತ್ತುಕೊಂಡು ಹೋಗುವಂತೆ ಹಣವಿರುವ ಆದರೆ ಎಚ್ಚರವಿಲ್ಲದ ವರ್ತಕರ ಗುಂಪನ್ನು ಪ್ರವೇಶಿಸಿ ಧನವನ್ನು ಹೊತ್ತುಕೊಂಡು ಹೋಗುವರು. ಇಲ್ಲಿ ಒಳ್ಳೆ ಮಾತಿನಿಂದ ಸಮೀಪಿಸುವಲ್ಲಿ ನರಿ ದೃಷ್ಟಾಂತ. ಹೊತ್ತುಕೊಂಡು ಹೋಗುವಲ್ಲಿ ತೋಳ ದೃಷ್ಟಾಂತವನ್ನು ಕೊಟ್ಟಿರುವರು. ।।೨।।

**ಪ್ರಭೂತವೀರುತ್ತೃಣಗುಲ್ಮಗಹ್ವರೇ**
**ಕಠೋರದಂಶೈರ್ಮಶಕೈರುಪದ್ರುತಃ ।**
**ಕ್ವಚಿಚ್ಚ ಗಂಧರ್ವಪುರಂ ಪ್ರವಿಶ್ಯ(ಪ್ರಪಶ್ಯತಿ)**
**ಕ್ವಚಿತ್ ಕ್ವಚಿಚ್ಚಾಸುಹರೋಲ್ಮುಕಗ್ರಹಮ್ ।।೩।।**

**ಪ್ರಭೂತ** ಅತಿಶಯವಾಗಿರುವ ಮತ್ತೆ ಮತ್ತೆ ಬೆಳೆಯುವ **ವೀರುತ್** ದೊಡ್ಡ ಬಳ್ಳಿಗಳು **ತೃಣ** ಹುಲ್ಲು **ಗುಲ್ಮ** ಪೊದೆಗಳು ಇವುಗಳಂತಿರುವ ಕಾಮ್ಯ ಕರ್ಮಗಳಿಂದ **ಗಹ್ವರೇ** ಸಂಚರಿಸಲಾಗದ ಗೃಹಸ್ಥಾಶ್ರಮದಲ್ಲಿ ಇರುವನಾಗಿ **ಕಠೋರದಂಶೈಃ** ಕಾಡುನೊಣಗಳಿಂದ **ಮಶಕೈಃ** ಸೊಳ್ಳೆಗಳಿಂದ ಅಂದರೆ ಇವುಗಳಂತಿರುವ ರಾಜಭಟರಿಂದ, ಕಳ್ಳರಿಂದ **ಉಪದ್ರುತಃ** ಧನ, ಧಾನ್ಯ ಮುಂತಾದವನ್ನು ಅಪಹರಿಸುವ ಮೂಲಕ ಬಾಧೆಗೊಳಗಾದವನಾಗಿ **ಕ್ವಚಿತ್** ಆ ಸಂಸಾರಾರಣ್ಯದಲ್ಲಿ ಒಂದೆಡೆ **ಗಂಧರ್ವಪುರಂ** ಕಣ್ಣಿಗೆ ಕಾಣದ ಪುಣ್ಯ ಪಾಪಗಳಿಂದ ನಿರ್ಮಿತವಾದ ಮನುಷ್ಯ ಮೊದಲಾದ ದೇಹವನ್ನು **ಪ್ರಪಶ್ಯತಿ** ನೋಡಿ ಪ್ರವೇಶಿಸಿ ಅನುಭವಿಸುವನು. ಸ್ಥಿರವೆಂದು ತಿಳಿಯುವನು. **ಕ್ವಚಿತ್ ಕ್ವಚಿತ್** ಒಂದೊಂದೆಡೆ **ಅಸುಹರೊಲ್ಮುಕಂ ಗ್ರಹಂ** ಪ್ರಾಣವನ್ನು ಹರಣಮಾಡುವ ಕೆಟ್ಟ ದೆವ್ವಗಳಂತಿರುವ ಶಬ್ದಮೊದಲಾದ ವಿಷಯಗಳನ್ನು ನೋಡುವನು. ಅಥವಾ ಬೆಂಕಿಯನ್ನು ಅಪೇಕ್ಷಿಸುವವನು ಕೊಳ್ಳಿ ದೆವ್ವವನ್ನು ನೋಡಿ ಅಗ್ನಿಯನ್ನು ತೆಗೆದುಕೊಳ್ಳಲು ಹೋಗಿ ತನ್ನ ಪ್ರಾಣವನ್ನೇ

**ಅರ್ಥಪರಃ** ವೈಷಯಿಕ ಸುಖವನ್ನಪೇಕ್ಷಿಸುವ **ರಜಸ್ತಮಸ್ಸತ್ವವಿಭಕ್ತಕರ್ಮದೃತ್** ರಜಸ್ತಮಸ್ಸತ್ವಗುಣಗಳಿಂದ ವಿಭಾಗ ಮಾಡಲ್ಪಟ್ಟ ಕರ್ಮಗಳಲ್ಲಿಯೇ ದೃಷ್ಟಿಯುಳ್ಳ ಅಥವಾ ರಾಜಸತಾಮಸಸಾತ್ವಿಕ ಕರ್ಮಗಳಫಲವಾದ ಶರೀರಗಳನ್ನು ಕಾಣುವ **ಸಃ ಏಷಃ** ಪ್ರಸಿದ್ಧವಾದ ಜೀವ ಸಮೂಹವು **ಅಜಯಾ** ಅನಾದಿ ಸಿದ್ಧವಾದ ಜೀವ ಸ್ವಭಾವ, ಪ್ರಕೃತಿಯಿಂದ, ಶ್ರೀಹರಿಯ ಬಂಧಕೇಚ್ಛೆಯಿಂದ **ದುರತ್ಯಯೇ** ಶ್ರೀ ಹರಿಯ ಕೃಪೆಯಿಲ್ಲದೇ ದಾಟಲಾಗದ **ಅಧ್ವನಿ** ಪ್ರವೃತ್ತಿ ಮಾರ್ಗದಲ್ಲಿ (ಕಾಮ್ಯ ನಿಷಿದ್ಧ ಕರ್ಮ ಮಾಡುವುದರಲ್ಲಿ) **ನಿವೇಶಿತಃ** ತೊಡಗಿಸಲ್ಪಟ್ಟು **ಪರಿಭ್ರಮನ್** ನಾನೇ ಕರ್ತಾ ಎಂದು ಭ್ರಾಂತನಾಗಿ **ಭವಾಟವೀಂ ಯಾತಿ** ಸಂಸಾರವೆಂಬ ವನವನ್ನು ಸೇರುವುದು **ಶರ್ಮ ನ ವಿಂದತಿ** ಮೋಕ್ಷ ಸಾಧನವನ್ನು ಹೊಂದುವುದಿಲ್ಲ. **ಯಥಾ** ಹೇಗೆ **ಅರ್ಥಪರಃ** ಧನವೇ ಮುಖ್ಯ ಉದ್ದೇಶ್ಯವಾಗಿರುವ **ಸಾರ್ಥಃ** ವ್ಯಾಪಾರಿಗಳ ಸಮೂಹವು **ಅಧ್ವನಿ ಪರಿಭ್ರಮನ್** ಮಾರ್ಗದಲ್ಲಿ ತಿರುಗುತ್ತ **ಅಟವೀಂ ಯಾತಿ** ಅಡವಿಯನ್ನು ಸೇರುವುದು **ಶರ್ಮ** ತನಗೆ ಬೇಕಾದ ಸುಖವನ್ನು **ನ ವಿಂದತಿ** ಹೊಂದಲಾರದು **ತಥಾ** ಹಾಗೆಯೇ ಇವನು.

ತನಗೆ ಬೇಕಾದ ಸುಖ ದೊರೆಯದಿರಲು ಕಾರಣ ಹೇಳುವರು

**ಯಸ್ಯಾಮಿಮೇ ಷಣ್ಣರದೇವ ದಸ್ಯವಃ**
**ಸ್ವಾರ್ಥಂ ವಿಲುಂಪಂತಿ ಕುನಾಯಕಂ ಬಲಾತ್ ।**
**ಗೊಮಾಯವೋ ಯತ್ರ ಹರಂತಿ ಸಾರ್ಥಕಂ**
**ಪ್ರಮತ್ತಮಾವಿಶ್ಯ ಯಥೋರಣಂ ವೃಕಾಃ** ॥೨॥

**ಹೇ ನರದೇವ** ರಾಜನೇ! **ಯಸ್ಯಾಂ** ಯಾವ ಈ ಸಂಸಾರಾರಣ್ಯದಲ್ಲಿ **ಷಟ್‌ದಸ್ಯವಃ** ಐದು ಇಂದ್ರಿಯಗಳು ಮನಸ್ಸು ಎಂಬ ಆರು ಕಳ್ಳರು **ಕುನಾಯಕಂ** ಕುತ್ಸಿತ ನಾಯಕನುಳ್ಳ ಬುದ್ಧಿ (ಕಾಮ) ಎಂಬ ನಾಯಕನುಳ್ಳ ಜೀವನನ್ನು ಬಲಾತ್ಕಾರದಿಂದ **ಸಾರ್ಥಂ** ಸಂಚಿತ ಪುಣ್ಯವನ್ನು **ವಿಲುಂಪಂತಿ** ವಿಷಯಗಳ ಉಪಭೋಗ ಮೂಲಕ ಅಪಹರಿಸುವುವು. ಹೀಗೆ ಅಂತಃಶತ್ರುಗಳನ್ನು ಹೇಳಿ ಬಾಹ್ಯಶತ್ರುಗಳನ್ನು ಹೇಳುವರು **ಯತ್ರ** ಯಾವ ಈ ಸಂಸಾರದಲ್ಲಿ **ಯಥಾ** ಹೇಗೆ **ಗೊಮಾಯವಃ** ನರಿಗಳು **ವೃಕಾಃ** ತೋಳಗಳು ಉರಣಂ ಮೇಕೆಯನ್ನು **ಹರಂತಿ** ಅಪಹರಿಸುವವೋ **ತಥಾ** ಹಾಗೇ ನರಿಗಳಂತಿರುವ, ತೋಳಗಳಂತಿರುವ ಹೆಂಡತಿ

 

ಮಕ್ಕಳು ಮುಂತಾದವರು **ಸಾರ್ಥಕಂ** ಸಂಪತ್ತಿನಿಂದ ಕೂಡಿದ ಆದ್ದರಿಂದ **ಪ್ರಮತ್ತಂ** ಮೋಕ್ಷ ಸಾಧನದಲ್ಲಿ ವಿಮುಖನಾದ ಜೀವನನ್ನು **ಆವಿಶ್ಯ** ಅವ್ಯಕ್ತ ಮಧುರ ಮಾತುಗಳಿಂದ ಮನಸ್ಸನ್ನು ಪ್ರವೇಶಿಸಿ(ನೀನು ನನ್ನ ತಂದೆ, ನನ್ನ ಗಂಡ ಮುಂತಾದ ಮಾತುಗಳಿಂದ ಮೋಹಗೊಳಿಸಿ) ಧನಕನಕಾದಿಗಳನ್ನೂ, ಅಮೂಲ್ಯವಾದ ಕಾಲವನ್ನೂ **ಹರಂತಿ** ಅಪಹರಿಸುವರು. ಅರಣ್ಯದಲ್ಲಿ ಆರು ಜನ ಕಳ್ಳರು ಮೇಲೆಬಿದ್ದು ಸರಿಯಾದ ನಾಯಕನಿಲ್ಲದ ಆ ವರ್ತಕರ ಗುಂಪಿನ ಹಣವನ್ನು ಬಲಾತ್ಕಾರವಾಗಿ ಕಸಿದುಕೊಳ್ಳುವರು. ಅಲ್ಲಿ ನರಿಗಳು, ತೋಳಗಳು, ಕುರಿಗಳನ್ನು ಹೊತ್ತುಕೊಂಡು ಹೋಗುವಂತೆ ಹಣವಿರುವ ಆದರೆ ಎಚ್ಚರವಿಲ್ಲದ ವರ್ತಕರ ಗುಂಪನ್ನು ಪ್ರವೇಶಿಸಿ ಧನವನ್ನು ಹೊತ್ತುಕೊಂಡು ಹೋಗುವರು. ಇಲ್ಲಿ ಒಳ್ಳೆ ಮಾತಿನಿಂದ ಸಮೀಪಿಸುವಲ್ಲಿ ನರಿ ದೃಷ್ಟಾಂತ. ಹೊತ್ತುಕೊಂಡು ಹೋಗುವಲ್ಲಿ ತೋಳ ದೃಷ್ಟಾಂತವನ್ನು ಕೊಟ್ಟಿರುವರು. ॥೨॥

**ಪ್ರಭೂತವೀರುತ್ತೃಣಗುಲ್ಮಗಹ್ವರೇ**
**ಕಠೋರದಂಶೈರ್ಮಶಕೈರುಪದ್ರುತಃ ।**
**ಕ್ವಚಿಚ್ಚ ಗಂಧರ್ವಪುರಂ ಪ್ರವಿಶ್ಯ(ಪ್ರಪಶ್ಯತಿ)**
**ಕ್ವಚಿತ್ ಕ್ವಚಿಚ್ಚಾಸುಹರೋಲ್ಮುಕಗ್ರಹಮ್ ॥೩॥**

**ಪ್ರಭೂತ** ಅತಿಶಯವಾಗಿರುವ ಮತ್ತೆ ಮತ್ತೆ ಬೆಳೆಯುವ **ವೀರುತ್** ದೊಡ್ಡ ಬಳ್ಳಿಗಳು **ತೃಣ** ಹುಲ್ಲು **ಗುಲ್ಮ** ಪೊದೆಗಳು ಇವುಗಳಂತಿರುವ ಕಾಮ್ಯ ಕರ್ಮಗಳಿಂದ **ಗಹ್ವರೇ** ಸಂಚರಿಸಲಾಗದ ಗೃಹಸ್ಥಾಶ್ರಮದಲ್ಲಿ ಇರುವನಾಗಿ **ಕಠೋರದಂಶೈಃ** ಕಾಡುನೊಣಗಳಿಂದ **ಮಶಕೈಃ** ಸೊಳ್ಳೆಗಳಿಂದ ಅಂದರೆ ಇವುಗಳಂತಿರುವ ರಾಜಭಟರಿಂದ, ಕಳ್ಳರಿಂದ **ಉಪದ್ರುತಃ** ಧನ, ಧಾನ್ಯ ಮುಂತಾದವನ್ನು ಅಪಹರಿಸುವ ಮೂಲಕ ಬಾಧೆಗೊಳಗಾದವನಾಗಿ **ಕ್ವಚಿತ್** ಆ ಸಂಸಾರಾರಣ್ಯದಲ್ಲಿ ಒಂದೆಡೆ **ಗಂಧರ್ವಪುರಂ** ಕಣ್ಣಿಗೆ ಕಾಣದ ಪುಣ್ಯ ಪಾಪಗಳಿಂದ ನಿರ್ಮಿತವಾದ ಮನುಷ್ಯ ಮೊದಲಾದ ದೇಹವನ್ನು **ಪ್ರಪಶ್ಯತಿ** ನೋಡಿ ಪ್ರವೇಶಿಸಿ ಅನುಭವಿಸುವನು. ಸ್ಥಿರವೆಂದು ತಿಳಿಯುವನು. **ಕ್ವಚಿತ್ ಕ್ವಚಿತ್** ಒಂದೊಂದೆಡೆ **ಅಸುಹರೊಲ್ಮುಕಂ ಗ್ರಹಂ** ಪ್ರಾಣವನ್ನು ಹರಣಮಾಡುವ ಕೆಟ್ಟ ದೆವ್ವಗಳಂತಿರುವ ಶಬ್ದಮೊದಲಾದ ವಿಷಯಗಳನ್ನು ನೋಡುವನು. ಅಥವಾ ಬೆಂಕಿಯನ್ನು ಅಪೇಕ್ಷಿಸುವವನು ಕೊಳ್ಳಿ ದೆವ್ವವನ್ನು ನೋಡಿ ಅಗ್ನಿಯನ್ನು ತೆಗೆದುಕೊಳ್ಳಲು ಹೋಗಿ ತನ್ನ ಪ್ರಾಣವನ್ನೇ

ಕಳೆದುಕೊಳ್ಳುವಂತೆ ಕೆಟ್ಟ ಧನಿಕನಲ್ಲಿಗೆ ಹೋಗಿ ಹಣವನ್ನು ಯಾಚಿಸಿ ತನ್ನ ಸರ್ವಸ್ವವನ್ನು ಕಳೆದುಕೊಳ್ಳುವನು ಎಂದೂ ಅರ್ಥ. ||೩||

**ನಿವಾಸತೋಯದ್ರವಿಣಾತ್ಮಬುದ್ಧಿಸ್ತತಸ್ತತೋ ಧಾವತಿ ಭೋ ಅಟವ್ಯಾಂ ||**
**ಕ್ವಚಿಚ್ಚ ವಾತ್ಯೋತ್ಥಿತಪಾಂಸುಧೂಮ್ರಾ ದಿಶೋ ನ ಜಾನಾತಿ ರಜಸ್ವಲಾಕ್ಷಃ ||೪||**

**ಭೋ** ಎಲೊ ರಾಜನೇ! **ನಿವಾಸ** ಮನೆ **ತೋಯ** ನೀರು **ದ್ರವಿಣ** ಹಣ ಇವುಗಳಲ್ಲಿ **ಆತ್ಮಬುದ್ಧಿಃ** ನನ್ನವು ಎಂಬ ಅಭಿಮಾನವುಳ್ಳವನು **ಅಟವ್ಯಾಂ** ಸಂಸಾರವೆಂಬ ಅಡವಿಯಲ್ಲಿ **ತತಸ್ತತಃ** ಅಲ್ಲಲ್ಲಿ ಆ ಆ ಪ್ರಯೋಜನ ಪಡೆಯಲು **ಧಾವತಿ** ಓಡುವನು **ರಜಸ್ವಲಾಕ್ಷಃ** ಧೂಳು ತುಂಬಿದ ಕಣ್ಣುಳ್ಳವನು **ವಾತ್ಯೋತ್ಥಿತ-ಪಾಂಸುಧೂಮ್ರಾಃ** ಸುಂಟರ ಗಾಳಿಯಿಂದೆದ್ದ ಧೂಳಿನಿಂದ ಹೊಗೆಯ ಬಣ್ಣವುಳ್ಳ **ದಿಶಃ** ದಿಕ್ಕುಗಳನ್ನು **ನ ಜಾನಾತಿ** ತಿಳಿಯಲಾರ (ಕತ್ತಲೆಕವಿದಂತಿದ್ದ) **ಯಥಾ** ಹೇಗೆ **ತಥಾ** ಹಾಗೆ.

**ರಜಸ್ವಲಾಕ್ಷಃ** ರಜೋ ಗುಣದಿಂದ ಮುಚ್ಚಲ್ಪಟ್ಟ ಕಣ್ಣುಳ್ಳ ಇವನು **ವಾತ್ಯಾ** ಸುಂಟರಗಾಳಿಯಂತೆ ಭ್ರಮೆಯುಂಟುಮಾಡುವ ಸ್ತ್ರೀಯಿಂದುಂಟಾದ ಧೂಳಿಗೆ ಸದೃಶವಾದ ದೃಷ್ಟಿಗೆ ಆಚ್ಛಾದಕ ರಾಗಾದಿಗಳಿಂದ **ಧೂಮ್ರಾಃ** ಆಚ್ಛಾದಿತಗಳಾದ **ದಿಶಃ** ಕರ್ಮ ಸಾಕ್ಷಿಗಳಾದ ದಿಗ್ದೇವತೆಗಳನ್ನು **ನ ಜಾನಾತಿ** ತಿಳಿಯಲಾರ. || ೪ ||

**ಕ್ವಚಿತ್** ಯಾವುದೋ (ಒಂದು ಕಡೆ)

**ಅದೃಶ್ಯಝಿಲ್ಲೀಸ್ವನಕರ್ಣಮೂಲ**
**ಉಲೂಕವಾಗ್ಭಿರ್ವ್ಯಥಿತಾಂತರಾತ್ಮಾ |**
**ಅಪುಣ್ಯವೃಕ್ಷಾನ್ ಶ್ರಯತೇ ಕ್ಷುಧಾರ್ದಿತೋ**
**ಮರೀಚಿತೋಯಾನ್ಯಭಿಧಾವತಿ ಕ್ವಚಿತ್** ||೫||

**ಅದೃಶ್ಯಝಿಲ್ಲೀಸ್ವನಕರ್ಣಮೂಲಃ** ಕಣ್ಣಿಗೆ ಕಾಣದ ಹುಳಗಳ ಧ್ವನಿಯಂತೆ ಪರೋಕ್ಷವಾಗಿ(ಹಿಂದೆ) ಮಾತಾಡುವರ ಅಪ್ರಿಯ ಶಬ್ದಗಳಿಂದ ತುಂಬಿದ ಕಿವಿಯುಳ್ಳ **ಉಲೂಕವಾಗ್ಭಿಃ** ಗೂಬೆಯ ಮಾತಿನಂತೆ ಪ್ರತ್ಯಕ್ಷವಾಗಿ(ಎದುರಿನಲ್ಲಿ) ಮಾತಾಡುವ ಅಪ್ರಿಯ ನಿಷ್ಠುರ ಶಬ್ದಗಳಿಂದ **ವ್ಯಥಿತಾಂತರಾತ್ಮಾ** ದುಃಖಿತವಾದ ಮನಸ್ಸುಳ್ಳವನಾಗಿ **ಕ್ವಚಿತ್** ಕೆಲವು ಸಲ **ಕ್ಷುಧಾರ್ದಿತಃ** ಹಸಿವೆಯಿಂದ ಅಂದರೆ ಧನತೃಷ್ಣೆಯಿಂದ

 

ಪೀಡಿತನಾಗಿ **ಅಪುಣ್ಯವೃಕ್ಷಾನ್** ಯಾವುದರ ನೆರಳಿನಲ್ಲಿ ಕುಳಿತರೂ ಪಾಪ ಬರುವುದೋ ಅಂಥ ಗಿಡಗಳಂತಿರುವ ದಾನಭೋಗಗಳಿಲ್ಲದ ಧನಿಕನ ಬಳಿಗೆ **ಶ್ರಯತೇ** ಆಶ್ರಯಿಸುವನು **ಮರೀಚಿತೋಯಾನ್** ಬಿಸಿಲುಕುದುರೆಯನ್ನು ಅಂದರೆ ಸದಾಕಾಲ ಇರುವುದಿಲ್ಲ ಎಂದು ತಿಳಿದ ವಿಷಯಗಳನ್ನು ಕುರಿತು **ಅಭಿಧಾವತಿ** ಓಡುವನು. ।।೫।।

**ಕ್ವಚಿದ್ವಿತೋಯಾಃ ಸರಿತೋಽಭಿಯಾತಿ ಪರಸ್ಪರಂ ಖಾದಯತೇ ನಿರನ್ನಃ।**
**ಆಸಾದ್ಯ ದಾವಂ ಕ್ವಚಿದಗ್ನಿತಪ್ತೋ ನಿರ್ವಿದ್ಯತೇ ಕ್ವ ಚ ಯಕ್ಷೈರ್ಹೃತಾಸುಃ ।।೬।।**

**ಕ್ವಚಿತ್** ಕೆಲವು ಸಲ **ವಿತೋಯಾಃ** ನೀರಿಲ್ಲದ **ಸರಿತಃ ಅಭಿಯಾತಿ** ನದಿಗಳನ್ನು ಕುರಿತು ಹೋಗುವನು ಅಂದರೆ, ಅದರಂತೆ ಇಹಪರಗಳಲ್ಲಿ ದುಃಖದಾಯಕ ಪಾಷಂಡ ಮತಗಳಿಗೆ ಹೋಗುವನು **ನಿರನ್ನಃ** ಅನ್ನ ಇಲ್ಲದವನಾಗಿ ಪರಸ್ಪರಂ ತಂದೆ ಮಗನನ್ನು ಮಗ ತಂದೆಯನ್ನೂ **ಖಾದಯತೇ** ಪೀಡಿಸುವನು **ದಾವಂ ಆಸಾದ್ಯ** ದುಃಖ ಕೊಡುವುದರಿಂದ ಕಾಡ್ಗಿಚ್ಚಿನಂತಿರುವ ಮನೆಗೆ ಬಂದು **ಅಗ್ನಿತಪ್ತಃ** ಶೋಕಾಗ್ನಿಯಿಂದ ತಾಪಗೊಂಡು **ನಿರ್ವಿದ್ಯತೇ** ವಿಷಾದಿಸುವನು **ಕ್ವಚಿತ್** ಕೆಲವೊಮ್ಮೆ **ಯಕ್ಷೈಃ** ರಾಕ್ಷಸ ಸಮರಾದ ರಾಜಭಟರಿಂದ **ಹೃತಾಸುಃ** ಪ್ರಾಣಪ್ರಿಯವಾದ ಧನ ಅಪಹರಿಸಲ್ಪಟ್ಟು **ಮೃತಕ ಇವ ಆಸ್ತೇ** ಸತ್ತಂತಿರುವನು. ।।೬।।

**ಶೂರೈ(ಪರೈ)ರ್ಹೃತಸ್ವಃ ಕ್ವ ಚ ನಿರ್ವಿಣ್ಣಚೇತಾಃ (ಚಿತ್ತಃ)**
**ಶೋಚನ್ ವಿಮುಹ್ಯನ್ನುಪಯಾತಿ ಕಶ್ಮಲಮ್ ।**
**ಕ್ವಚಿಚ್ಚ ಗಂಧರ್ವಪುರಂ ಪ್ರವಿಷ್ಟಃ**
**ಪ್ರಮೋದತೇ ನಿರ್ವೃತವನ್ಮುಹೂರ್ತಮ್ ।।೭।।**

**ಕ್ವಚ** ಕೆಲವೊಮ್ಮೆ **ಪರೈಃ** ಬೇರೆಯವರಿಂದ(**ಶೂರೈಃ** ಮಂದಿಯ ಹಣವನ್ನು ಅಪಹರಿಸುವುದರಲ್ಲಿ ಶೂರರಾದವರಿಂದ) **ಹೃತಸ್ವಃ** ಅಪಹರಿಸಲ್ಪಟ್ಟ ದ್ರವ್ಯವುಳ್ಳವನಾಗಿ **ನಿರ್ವಿಣ್ಣಚಿತ್ತಃ** ವಿಷಾದಯುಕ್ತ ಮನಸ್ಕನಾಗಿ **ಶೋಚನ್** ದುಃಖಿಸುತ್ತ **ವಿಮುಹ್ಯನ್** ಭ್ರಮಿಸುವವನಾಗಿ **ಕಶ್ಮಲಂ** ಮೂರ್ಛೆಯನ್ನು **ಉಪಯಾತಿ** ಹೊಂದುವನು. ಮತ್ತೆ ಕೆಲವು ಸಲ **ಗಂಧರ್ವಪುರಂ ಪ್ರವಿಷ್ಟಃ** ಗಂಧರ್ವಪುರಕ್ಕೆ ಸಮಾನವಾದ ಬೇಗನೆ ನಾಶ ಹೊಂದುವ ಪಿತೃಪಿತಾಮಹ ಮುಂತಾದ ಬಂಧು ಸಮಾಜವನ್ನು ಪ್ರವೇಶಿಸಿ ಮುಹೂರ್ತಂ ಒಂದು ಘಳಿಗೆ **ನಿರ್ವೃತವತ್** ಸುಖಿಸಿದಂತೆ **ಪ್ರಮೋದತೇ**

ಸಂತೋಷಿಸುವನು ಅಥವಾ **ನಿರ್ವೃತವತ್** ಜಾಗ್ರದವಸ್ಥೆಯಲ್ಲಿ ತಂದೆ ಮುಂತಾದವರನ್ನು ಕಂಡು ರೋಮಾಂಚಿತನಾಗುವಂತೆ **ಗಂಧರ್ವಪುರಂ** ಗಂಧರ್ವಪುರದಂತೆ ಹೊರಗೆ ಇಲ್ಲದಿರುವ ವಾಸನಾಮಯ ತಂದೆತಾತಂದಿರನ್ನು, ಸಮಾಜವನ್ನು **ಪ್ರವಿಷ್ಟಃ ಸನ್** ಪ್ರವೇಶ ಮಾಡಿ **ಪ್ರಮೋದತೇ** ಸ್ವಪ್ನದಲ್ಲಿ ವಾಸನಾಮಯ ತಂದೆ ಮುಂತಾದವರನ್ನು ಕಂಡು ಆನಂದಿಸುವನು. ॥೭॥

**ಚಲನ್ ಕ್ವಚಿತ್ ಕಂಟಕಶರ್ಕರಾಂಘ್ರಿರ್ನಗಾರುರುಕ್ಷುರ್ವಿಮನಾ ಇವಾಸ್ತೇ ॥**
**ಪದೇ ಪದೇಽಭ್ಯಂತರ ವಹ್ನಿನಾರ್ದಿತಃ ಕೌಟುಂಬಿಕಃ ಕ್ರುಧ್ಯತಿ ವೈ ಜನಾಯ ॥**

**ಯಥಾ** ಹೇಗೆ **ನಗಾರುರುಕ್ಷುಃ** ಪರ್ವತವನ್ನೇರಲು ಇಚ್ಛಿಸುವವನು ಮೊದಲಿಗೇನೇ **ಕಂಟಕಶರ್ಕರಾಂಘ್ರಿಃ** ಮುಳ್ಳು, ಚಿಕ್ಕ ಕಲ್ಲುಗಳಿಂದ ಚುಚ್ಚಲ್ಪಟ್ಟ ಪಾದಗಳುಳ್ಳವನಾಗಿ **ಪದೇ ಪದೇ** ಹೆಜ್ಜೆ ಹೆಜ್ಜೆಗೆ **ವಿಮನಾ ಆಸ್ತೇ** ನಷ್ಟ ಮನಸ್ಸುಳ್ಳವನಾಗುವನೋ ಹಾಗೆಯೇ **ಕ್ವಚಿತ್** ಕೆಲವು ಸಲ **ನಗಾರುರುಕ್ಷುಃ** ಬಹಳ ಎತ್ತರವಾದ ಹತ್ತಲಾಗದ ಪರ್ವತ ಸದೃಶವಾದ ಗೃಹಾಶ್ರಮೋಚಿತವಾದ ಕರ್ಮಗಳನ್ನು ಮಾಡಲಿಚ್ಛಿಸುವನಾಗಿ ಆರಂಭದಲ್ಲಿಯೇ **ಕಂಟಕ ಶರ್ಕರಾಂಘ್ರಿಃ** ಮುಳ್ಳು, ಕಲ್ಲುಗಳ ಸ್ಥಾನದಲ್ಲಿರುವ ಅನೇಕ ವ್ಯಸನ ಸಮೂಹಗಳಿಂದ ಪ್ರತಿಬದ್ಧವಾದ ಕರ್ತವ್ಯ ಕರ್ಮಮಾರ್ಗವುಳ್ಳವನಾಗಿ **ಪದೇ ಪದೇ** ಪ್ರತಿಯೊಂದು ಕರ್ಮ ಮಾಡುವಾಗಲೂ **ವಿಮನಾ ಆಸ್ತೇ** ದುಃಖಿತ ಮನಸ್ಸುಳ್ಳವನಾಗುವನು **ಪದೇ ಪದೇ** ಪ್ರತಿದಿನವು **ಅಭ್ಯಂತರ ವಹ್ನಿನಾ** ಒಳಗಿರುವ ಜಾಠರಾಗ್ನಿಯಿಂದ **ಅರ್ದಿತಃ** ಪೀಡಿತನಾಗಿ **ಕೌಟುಂಬಿಕಃ** ಗೃಹಸ್ಥನು **ಜನಾಯ** ಹೆಂಡತಿ ಮಕ್ಕಳ ಮೇಲೆ **ಕ್ರುಧ್ಯತಿ** ಕುಪಿತನಾಗುವನು. ॥೮॥

**ಕ್ವಚಿನ್ನಿಗೀರ್ಣೋಽಜಗರಾಹಿನಾ ಜನೋ ನಾವೈತಿ ಕಿಂಚಿದ್ವಿಪಿನೇಽಪವಿದ್ಧಃ ॥**
**ದಷ್ಟಃ ಸ್ಮ ಶೇತೇ ಕ್ವ ಚ ದಂದಶೂಕೈರಂಧೋಽಂಧಕೂಪೇ ಪತಿತಸ್ತಮಿಸ್ರೇ ॥೯॥**

**ಕ್ವಚಿತ್** ಕೆಲವು ಸಲ **ಅಜಗರಾಹಿನಾ** ನಿದ್ದೆಯ ಸ್ವಭಾವದ ಹೆಬ್ಬಾವಿನ ಸ್ಥಾನದಲ್ಲಿರುವ ನಿದ್ದೆಯಿಂದ **ನಿಗೀರ್ಣಃ** ನುಂಗಲ್ಪಟ್ಟು (ಕೂಡಿದವನಾಗಿ) **ಕಿಂಚಿತ್ ನ ಅವೈತಿ** ಏನನ್ನೂ ತಿಳಿಯಲಾರನು. **ವಿಪಿನೇ** ಅಡವಿಯಲ್ಲಿ **ಅಪವಿದ್ಧಃ** ಬಿಡಲ್ಪಟ್ಟ ಶವದಂತೆ **ದಂದಶೂಕೈಃ** ಕ್ರೂರಸರ್ಪಸ್ಥಾನೀಯರಾದ ಪುನಃ ಪುನಃ ಉಪದ್ರವ ಕೊಡುವ ಸ್ವಭಾವದ ದುರ್ಜನರಿಂದ **ದಷ್ಟಃ** ಆಕ್ಷೇಪಿಸಲ್ಪಟ್ಟು **ಅಂಧಃ**

ವಿವೇಕಜ್ಞಾನವಿಲ್ಲದೆ **ಅಂಧಕೂಪೇ** ಕತ್ತಲೆಯ ಸ್ಥಾನದ ಅಜ್ಞಾನ ತುಂಬಿದ **ತಮಿಸ್ರೇ** ದುಃಖ ಸಮೂಹದಲ್ಲಿ **ಪತಿತಃ** ಬಿದ್ದವನಾಗಿ ಕರ್ತವ್ಯಾನುಸಂಧಾನ ರಹಿತ ಮೋಹಕೂಪದಲ್ಲಿ **ಶೇತೇ ಸ್ಮ** ಮಲಗಿರುವನು. ॥೯॥

**ಕರ್ಹಿಸ್ಮಚಿತ್ ಕ್ಷುದ್ರರಸಾನ್ವಿಚಿನ್ವಂ-**
**ಸ್ತನ್ಮಕ್ಷಿಕಾಭಿರ್ಮಥಿತೋ ವಿಮಾನಃ ॥**
**ತತ್ರಾಪಿ ಕೃಚ್ಛ್ರಾತ್ ಪ್ರತಿಲಬ್ಧಮನ್ಯೇ**
**ಬಲಾದ್ವಿಲುಂಪಂತ್ಯಥ ತಂ ತತೋಽನ್ಯೇ ॥೧೦॥**

**ಕರ್ಹಿಸ್ಮಚಿತ್** ಕೆಲವೊಮ್ಮೆ **ಕ್ಷುದ್ರರಸಾನ್** ಜೇನುತುಪ್ಪದಂತೆ ತತ್ಕಾಲದಲ್ಲಿ ಅಲ್ಪ ಸುಖ ಕೊಡುವ ಮತ್ತೊಬ್ಬರ ಧನವನಿತಾ(ಹೆಂಡತಿ)ದಿಗಳನ್ನು **ವಿಚಿನ್ವನ್** ಹುಡುಕುತ್ತ **ತನ್ಮಕ್ಷಿಕಾಭಿಃ** ಜೇನುನೊಣದಂತಿರುವ ಧನವನಿತಾದಿ ಸ್ವಾಮಿಗಳಿಂದ **ವಿಮಾನಃ ಮಥಿತಃ** ಕಚ್ಚಲ್ಪಟ್ಟು ಹೊಡೆಯಲ್ಪಟ್ಟು ಮರ್ಯಾದೆ ಇಲ್ಲದೇ ನರಕದಲ್ಲಿ ಬೀಳುವನು **ತತ್ರಾಪಿ** ಕಷ್ಟಪಟ್ಟು ಮಧುವನ್ನೋ, ಪರದಾರಾಧನಾದಿಗಳನ್ನೋ ಸಂಪಾದಿಸಿದರೆ **ಕೃಚ್ಛ್ರಾತ್ ಪ್ರತಿಲಬ್ಧಂ** ಕಷ್ಟದಿಂದ ಸಂಪಾದಿತವಾದುದನ್ನು **ತತೋ ಅನ್ಯೇ** ಅವನಿಗಿಂತ ಬಲಿಷ್ಠರಾದವರು **ಬಲಾತ್** ಬಲಾತ್ಕಾರದಿಂದ **ತಂ** ಅವನನ್ನು **ವಿಲುಂಪಂತಿ** ಅಪಹರಿಸುವರು. ಅವನಲ್ಲಿರುವ ಧನವನಿತಾದಿಗಳನ್ನು ಇವು ನನ್ನವೇ ಎಂದು ಶಪಥ ಮಾಡಿ ಬಂಧಮುಕ್ತನಾಗಿ ಮತ್ತೆ ಪಡೆದುಕೊಂಡಿದ್ದಲ್ಲಿ ಅವುಗಳನ್ನು ಮತ್ತೆ ಅವನಿಗಿಂತ ಬಲಿಷ್ಠರಾದವರು ಅಪಹರಿಸುವರು ಎಂದರ್ಥ. ॥೧೦॥

**ಕ್ವಚಿಚ್ಚ ಶೀತಾತಪವಾತವರ್ಷಪ್ರತಿಕ್ರಿಯಾಂ ಕರ್ತುಮನೀಶ ಆಸ್ತೇ ।**
**ಕ್ವಚಿನ್ಮಿಥೋ ವಿಪಣನ್ಯಚ್ಚ ಕಿಂಚಿದ್ವಿದ್ವೇಷಮೃಚ್ಛತ್ಯುತವಿತ್ತಶಾಠ್ಯಾತ್ ॥೧೧॥**

**ಕ್ವಚಿತ್** ಹಲವು ಬಾರಿ **ಶೀತಾತಪವಾತವರ್ಷಪ್ರತಿಕ್ರಿಯಾಂ ಕರ್ತುಂ ಅನೀಶಃ ಆಸ್ತೇ** ಛಳಿ, ಬಿಸಿಲು, ಗಾಳಿ, ಮಳೆಗಳಿಗೆ ಪರಿಹಾರಮಾಡಿಕೊಳ್ಳಲು ಅಸಮರ್ಥನಾಗಿ ಚಿಂತೆಗೊಳಗಾಗಿರುವನು. **ಕ್ವಚಿತ್** ಮತ್ತೆ ಕೆಲವೊಮ್ಮೆ **ಮಿಥಃ** ಪರಸ್ಪರ **ವಿಪಣನ್** ಕ್ರಯ ವಿಕ್ರಯರೂಪ ವ್ಯಾಪಾರ ಮಾಡುವವನಾಗಿ **ಯತ್ ಕಿಂಚಿತ್ ವಿಕ್ರಿಯಂ ಋಚ್ಛತಿ** ಅಲ್ಪಸ್ವಲ್ಪ ಧನಧಾನ್ಯ ಪಡೆಯುವನು **ಉತ** ಮತ್ತು **ವಿತ್ತಶಾಠ್ಯಾತ್** ನಾನು ಧನಾಢ್ಯನು, ನಿನಗೆ ನಾಳೆ ಕೊಡುವೆನು ಎಂದು ಹೇಳಿ **ವಿದ್ವೇಷಂ ಋಚ್ಛತಿ** ಅವನ ದ್ವೇಷಕಟ್ಟಿಕೊಳ್ಳುವನು. ॥೧೧॥

**ಕ್ವಚಿತ್ ಕ್ವಚಿತ್ ಕ್ಷೀಣಧನಸ್ತು ತಸ್ಮಿನ್ ಶಯ್ಯಾಸನಸ್ಥಾನವಿಹಾರಹೀನಃ ।**
**ಯಾವತ್ ಪರಾದಪ್ರತಿಲಬ್ಧಕಾಮಃ ಪಾರಕ್ಯದೃಷ್ಟಿರ್ಲಭತೇಽವಮಾನಮ್ ॥**

**ಕ್ವಚಿತ್ ಕ್ವಚಿತ್** ಕೆಲವು ಸಲ **ತಸ್ಮಿನ್** ಸಂಸಾರಾರಣ್ಯ ಮಾರ್ಗದಲ್ಲಿ **ಕ್ಷೀಣಧನಃ** ಹಣ ಇಲ್ಲದವನಾಗಿ **ಶಯ್ಯಾ** ಹಾಸಿಗೆ **ಆಸನ** ಕಂಬಳಿ ಮುಂತಾದವು **ಸ್ಥಾನ** ಮನೆ **ವಿಹಾರ** ವಿಹಾರ ಸಾಧನವಾದ ವಾಹನ ಇವುಗಳಿಂದ **ಹೀನಃ** ರಹಿತನಾಗಿ **ಯಾವತ್** ಯಾವಾಗ ಯಾಚಿಸಿದರೂ **ಪರಾತ್** ಬೇರೆಯವರಿಂದ **ಅಪ್ರತಿಲಬ್ಧಕಾಮಃ** ಇಷ್ಟವನ್ನು ಪಡೆಯದವನಾಗಿ **ಪಾರಕ್ಯದೃಷ್ಟಿಃ** ಪರಕೀಯರ ವಸ್ತುಗಳಲ್ಲಿ ಅಭಿಲಾಷೆಯುಳ್ಳವನಾಗಿ **ಅವಮಾನಂ ಲಭತೇ** ಬೈಗಳನ್ನು, ಬಡಿತಗಳನ್ನೂ ಹೊಂದುವನು. ॥೧೨॥

**ಪ್ರಸಜ್ಜತಿ ಕ್ವಾಪಿ ಲತಾಭುಜಾಶ್ರಯ-**
**ಸ್ತದಾಶ್ರಯೋಽವ್ಯಕ್ತಪದಂ ದ್ವಿಜಸ್ಯ ಹ (ಸ್ಪೃಹಃ) ।**
**ಕ್ವಚಿತ್ ಕದಾಚಿತ್ ಹರಿಚಕ್ರತಸ್ತ್ರಸನ್**
**ಸಖ್ಯಂ ವಿಧತ್ತೇ ಬಕಕಂಕಗೃಧ್ರೈಃ ॥೧೩॥**

**ಕ್ವಾಪಿ** ಕೆಲವೊಮ್ಮೆ **ಲತಾಭುಜಾಶ್ರಯಃ** ಬಳ್ಳಿಯ ಟೊಂಗೆಗಳನ್ನು ಆಶ್ರಯಿಸಿದವನಾಗಿ **ತದಾಶ್ರಯಾಃ** ಆ ಟೊಂಗೆಯನ್ನು ಆಶ್ರಯಿಸಿದ **ಅವ್ಯಕ್ತಪದಂ** ಮಂಜುಲ ಧ್ವನಿ ಮಾಡುವ **ದ್ವಿಜ** ಪಕ್ಷಿಗಳಲ್ಲಿ **ಸ್ಪೃಹನ್** ಆಸಕ್ತಿಯುಳ್ಳವನಾಗಿ **ಪ್ರಸಜ್ಜತಿ** ಪಕ್ಷಿಗಳ ಸಂರಕ್ಷಣೆಯಲ್ಲಿ ತೊಡಗುವನು. **ಕದಾಚಿತ್** ಹಲವೊಮ್ಮೆ **ಕ್ವಚಿತ್** ಕೆಲವು ಸ್ಥಳದಲ್ಲಿ **ಹರಿಚಕ್ರತಃ** ಸಿಂಹ ಸಮೂಹದಿಂದ **ತ್ರಸನ್** ಹೆದರಿದವನಾಗಿ ಅದರಿಂದ ತನ್ನ ರಕ್ಷಣೆಗಾಗಿ **ಬಕಕಂಕಗೃಧ್ರೈಃ ಸಖ್ಯಂ ವಿಧತ್ತೇ** ಬಕ ಪಕ್ಷಿ, ಹದ್ದು, **ಕಂಕ** ಹದ್ದಿನ ಪ್ರಭೇದ ಅವುಗಳ ಜೊತೆಗೆ ಸ್ನೇಹ ಮಾಡುವನು. ಇದು ವ್ಯಾಪಾರಿ ದೃಷ್ಟಿಯಿಂದ ಯೋಜನೆ. ದಾರ್ಷ್ಟಾಂತಿಕ ಸಂಸಾರಿ ದೃಷ್ಟಿಯಿಂದ - ಭವಾಟವಿಯಲ್ಲಿ **ಲತಾಭುಜಾಶ್ರಯಃ** ಲತೆಯಂತೆ ಕೋಮಲಳಾದ ಸ್ತ್ರೀಯ ಭುಜಗಳಿಂದ ಆಲಿಂಗಿತನಾಗಿ **ತದಾಶ್ರಯ** ಅವಳನ್ನಾಶ್ರಯಿಸಿದ **ಅವ್ಯಕ್ತಪದಂ** ತೊದಲು ನುಡಿಯ **ದ್ವಿಜ** ಪಕ್ಷಿಯಂತಿರುವ ಮಕ್ಕಳು ಮುಂತಾದವರಲ್ಲಿ **ಸ್ಪೃಹಃ** ಆಸಕ್ತಿ ಉಳ್ಳವನಾಗಿ **ಪ್ರಸಜ್ಜತಿ** ಹೆಂಡತಿ ಮಕ್ಕಳ ಲಾಲನೆ ಪಾಲನೆಗಳಲ್ಲಿ ಆಸಕ್ತನಾಗುವನು **ಕದಾಚಿತ್** ಒಂದು ಸಲ **ಹರಿಚಕ್ರತಃ** ಸಿಂಹಸಮೂಹದಂತಿರುವ ಕಾಲ ಚಕ್ರದಿಂದ **ತ್ರಸನ್** ಹೆದರಿ ಅದರಿಂದ ತನ್ನ ರಕ್ಷಣೆಗಾಗಿ **ಬಕಕಂಕಗೃಧ್ರೈಃ** ಬಕಾದಿಗಳಂತೆ ಭಕ್ಷಣ, ಮೈಥುನ ಮುಂತಾದ ಸ್ವಭಾವದ




ಪಾಷಂಡಿಗಳಿಂದ ಪೂಜಿಸಲ್ಪಡುವ ತಾಮಸ ದೇವತೆಗಳ ಕೂಡಿ **ಸಖ್ಯಂ ವಿಧತ್ತೇ** ಅವುಗಳ ಸೇವೆ ಎಂಬ ಗೆಳೆತನ ಮಾಡುವನು. 'ಬಕ ಭಕ್ಷಣೆ' ಎಂಬ ಧಾತು ಇರುವುದರಿಂದ ಮಾಂಸ ಭಕ್ಷಣಾದಿ ಶೀಲ ತಾಮಸ ಗಾಣಪತ್ಯಾದಿಗಳು, 'ಕಕಿ ಲೌಲ್ಯೇ' ಎಂದು ಧಾತು ಇರುವುದರಿಂದ ಮೈಥುನ ಲೋಲ ದುಷ್ಟ ಯಕ್ಷಾದಿ ದೇವತೆ, ಗೃಧು ಅಭಿಕಾಂಕ್ಷಾಯಾಂ ಎಂದಿರುವುದರಿಂದ ರಕ್ತ ಕುಡಿಯುವ ಆಕಾಂಕ್ಷೆಯುಳ್ಳ ಭದ್ರಕಾಳಿ ಮುಂತಾದ ತಾಮಸ ದೇವತೆಗಳು ಬಕ ಕಂಕ ಗೃಧ್ರ ಎನಿಸುವುವು. ||೧೩||

**ತೈರ್ವಂಚಿತೋ ಹಂಸಕುಲಂ ಸಮಾವಿಶನ್ನ-**
**ರೋಚಯಂಛೀಲಮುಪೈತಿ ವಾನರಮ್।**
**ತಜ್ಜಾತಿರಾಸೇನ ಸುನಿರ್ವೃತೇಂದ್ರಿಯಃ**
**ಪರಸ್ಪರಾನ್ವೀಕ್ಷಣವಿಸ್ಮೃತಾವಧಿಃ** ||೧೪||

**ತೈಃ** ಆ ತಾಮಸ ದೇವತೆಗಳಿಂದ **ವಂಚಿತಃ** ವಿಶ್ವಾಸದಿಂದ ಸೇವಿಸಿದರೂ ರಕ್ಷಣಾಭೀಷ್ಟಗಳನ್ನು ಹೊಂದದೇ ವಂಚಿತನಾಗಿ **ಹಂಸಕುಲಂ** ಶುದ್ಧಾಂತಃಕರಣ-ವಾದ್ದರಿಂದ ರಾಜಹಂಸ ಸ್ಥಾನೀಯವಾದ ಬ್ರಾಹ್ಮಣ ಕುಲವನ್ನು **ಸಮಾವಿಶನ್** ಪ್ರವೇಶ ಮಾಡಿ ಅವರ **ಶೀಲಂ** ಉಪನಯನಾದಿ ಸಂಸ್ಕಾರ ಪೂರ್ವಕವಾಗಿ ಶ್ರುತಿ ಸ್ಮೃತಿಗಳಲ್ಲಿ ಹೇಳಿದಂತೆ ಭಗವದಾರಾಧನೆ ಮಾಡುವ ಸ್ವಭಾವವನ್ನು **ನ ರೋಚಯನ್** ಹಿಡಿಸದೇ(ಇಚ್ಛಿಸದೇ) (ಅನಿಷ್ಟಸಾಧನವೆಂದು ಅಪಥ್ಯವೆಂದು ತಿಳಿದು) **ವಾನರಂ** ವೈದಿಕ ಶುದ್ಧಿ ಇಲ್ಲದ್ದರಿಂದ ಕೋತಿಯಂತಿರುವ ಶೂದ್ರರ **ಶೀಲಂ** ಸ್ವಭಾವವನ್ನು **ಉಪೈತಿ** ಹೊಂದುವನು ಅವರ ವೃತ್ತಿಯನ್ನು ಉಪಜೀವಿಸುವನು **ವಾನರಾನ್** ಎಂಬ ಪಾಠದಲ್ಲಿ ಶೂದ್ರರನ್ನು ಹೊಂದುವನು ಅಂದರೆ ಅವರು ಕೊಟ್ಟ ಹಣದಿಂದ ಜೀವಿಸುವನು ಎಂದರ್ಥ. **ತಜ್ಜಾತಿರಾಸೇನ** ಕೋತಿ ಜಾತಿಯ ಕ್ರೀಡೆಯಿಂದ ಅಂದರೆ ಸ್ತ್ರೀಯೊಡಗೂಡಿ **ಸುನಿರ್ವೃತೇಂದ್ರಿಯಃ** ಕುಟುಂಬ ಪೋಷಣ ಮಾಡುವುದರಿಂದ ಅತ್ಯಂತ ಪ್ರೀತಗಳಾದ ಇಂದ್ರಿಯಗಳುಳ್ಳವನಾಗಿ **ಪರಸ್ಪರಾನ್ವೀಕ್ಷಣವಿಸ್ಮೃತಾವಧಿಃ** ಹೆಣ್ಣು ಗಂಡುಗಳು ಪರಸ್ಪರ ಮುಖ ನೋಡುವುದರಲ್ಲಿಯೇ ತನ್ನ ಜೀವಿತಾವಧಿಯನ್ನು ಮರೆತುಬಿಡುವನು. ||೧೪||

**ದ್ರುಮೇಷು ರಂಸ್ಯನ್ ಸುತದಾರವತ್ಸಲೋ**
**ವ್ಯವಾಯದೀನೋ ವಿವಶಶ್ಚರನ್ ವನೇ ।**
**ಕ್ವಚಿತ್ ಪ್ರಮಾದಾದ್ಗಿರಿಕಂದರೇ ಪತನ್**
**ವಲ್ಲೀಂ ಗೃಹೀತ್ವಾ ಗಜಭೀತ ಆಸ್ಥಿತಃ ॥೧೫॥**

**ದ್ರುಮೇಷು** ಗಿಡಗಳಂತಿರುವ ಐಹಿಕ ವಿಷಯ ಭೋಗಕ್ಕೆ ಯೋಗ್ಯವಾದ ಮನೆಯಲ್ಲಿ **ರಂಸ್ಯನ್** ಕೋತಿಯಂತೆ ರತಿ ಕ್ರೀಡೆ ಮಾಡುತ್ತ **ಸುತದಾರವತ್ಸಲಃ** ಮಕ್ಕಳಲ್ಲಿ ಮಡದಿಯಲ್ಲಿ ಸ್ನೇಹವುಳ್ಳವನಾಗಿ **ವ್ಯವಾಯದೀನಃ** ಮೈಥುನ ಕ್ರಿಯೆಯಿಂದ ಶೋಚನೀಯ ಸ್ಥಿತಿಯನ್ನು ಹೊಂದಿ **ವಿವಶಃ** ಪರವಶನಾಗಿ **ವನೇ** ಸಂಸಾರಾಟವಿಯಲ್ಲಿ **ಚರನ್ ಭವತಿ** ಸಂಚರಿಸುವನು **ಕ್ವಚಿತ್** ಕೆಲವು ಸಲ **ಪ್ರಮಾದಾತ್** ಪಾಪಕರ್ಮಗಳನ್ನು ಮಾಡುವುದರಿಂದ **ಗಿರಿಕಂದರೇ** ಪರ್ವತಗಳ ಕಂದಕದಲ್ಲಿ ಕೋತಿಯು ಬೀಳುವಂತೆ ಕಂದಕದಂತೆ ಭಯಂಕರವಾದ ನರಕದಲ್ಲಿ **ಪತನ್** ಬೀಳುವವನಾಗಿ **ಗಜಭೀತಃ** ಕಂದಕದಲ್ಲಿರುವ ಆನೆಗೆ ಸಮಾನವಾದ ಮೃತ್ಯುವಿನಿಂದ ಹೆದರಿ **ವಲ್ಲೀ** ಜನ್ಮಾಂತರದಲ್ಲಿ ಮಾಡಿದ ಪುಣ್ಯವೆಂಬ ಬಳ್ಳಿಯನ್ನು **ಗೃಹೀತ್ವಾ** ಅವಲಂಬಿಸಿ **ಆಸ್ಥಿತಃ ಭವತಿ** ಇರುವನು. ॥೧೫॥

**ತತಃ ಕಥಂಚಿತ್ ಪ್ರತಿಮುಕ್ತ ಆಪದಃ ಪುನಶ್ಚ ಸಾರ್ಥಂ ಪ್ರವಿಶತ್ಯರಿಂದಮ ।**
**ಅಧ್ವನ್ಯಮುಷ್ಮಿನ್ನಜಯಾ ನಿವೇಶಿತೋ ಭ್ರಮಂಜನೋಽದ್ಯಾಪಿ ನ ವೇದ ಕಶ್ಚನ ॥**

**ತತಃ** ನರಕ ಭೋಗಾನಂತರ **ಕಥಂಚಿತ್** ಹೇಗೋ ಕಷ್ಟ ಅನುಭವಿಸಿ (**ವಲ್ಲೀಂ ಗೃಹಿತ್ವಾ** ಪೂರ್ವಕರ್ಮ ಅವಲಂಬಿಸಿ) **ಆಪದಃ ಪ್ರತಿಮುಕ್ತಃ** ಆಪತ್ತಿನಿಂದ ಪಾರಾಗಿ ಬಂದರೂ **ಪುನಶ್ಚ** ಮತ್ತೆ **ಸಾರ್ಥಂ ಪ್ರವಿಶತಿ** ವ್ಯಾಪಾರಿಗಳ ಸಮೂಹ ಸ್ಥಾನೀಯವಾದ ಪ್ರವೃತ್ತಿಮಾರ್ಗನಿರತ ನರಲೋಕವನ್ನು ಪ್ರವೇಶಿಸುವನೇ ಹೊರತು ಬಹುವಿಧನರಕ ದುಃಖಾನುಸಂಧಾನದಿಂದ ನಿವೃತ್ತಿಮಾರ್ಗನಿರತನಾಗುವುದಿಲ್ಲವೆಂದು ಭಾವ **ಅಮುಷ್ಮಿನ್ ಅಧ್ವನಿ** ಈ ಸಂಸಾರ ಮಾರ್ಗದಲ್ಲಿ **ಅಜಯಾ** ಭಗವದಧೀನವಾದ **ಅಂಗ** ಶರೀರರೂಪ ಪ್ರಕೃತಿಯಿಂದ **ನಿವೇಶಿತಃ** ಪ್ರವೇಶಿಸಲ್ಪಟ್ಟವನಾಗಿ **ಭ್ರಮನ್** ಸಂಚರಿಸುವ **ಕಶ್ಚನ ಜನಃ** ಯಾವನೊಬ್ಬನು **ಅದ್ಯಾಪಿ** ಇದುವರೆಗೆ **ನ ವೇದ** ಯಾವ ಭಗವಂತನಿಂದ ಪ್ರಕೃತಿಯ ಮೂಲಕ ಬಂಧಿತನಾದನೋ ಅವನನ್ನು ತಿಳಿಯಲಿಲ್ಲ. ಅಂದರೆ ಭಗವದಜ್ಞಾನವೇ ಸಂಸಾರಕ್ಕೆ ಮೂಲಕಾರಣವೆಂದು ಭಾವ. **ಅರಿಂದಮ** ಶತ್ರುಗಳನ್ನು

ದಮನ ಮಾಡುವವನೇ ಎಂದು ರಾಜನನ್ನು ಸಂಬೋಧಿಸುವ ಮೂಲಕ ಸಾಂಸಾರಿಕ ಮೋಹ ಮೊದಲಾದ ಅಂತಃಶತ್ರುಗಳನ್ನು ಗೆಲ್ಲಲು ಪ್ರಯತ್ನಿಸು ಎಂದು ಸೂಚಿಸುವನು ಬ್ರಾಹ್ಮಣ. ।।೧೬।।

ಪ್ರಕೃತಿಕೃತ ಸಂಸಾರಮಾರ್ಗನಿವೇಶನವನ್ನೇ ವಿಶದಪಡಿಸುವರು

**ಅನ್ಯೋನ್ಯವಿತ್ತವ್ಯತಿಷಂಗವೃದ್ಧವೈರಾನುಬಂಧೋಽಧಿವಹನ್ ಮಿಥಶ್ಚ ।**
**ಅಧ್ವನ್ಯಮುಷ್ಮಿನ್ನುರುಕೃಚ್ಛ್ರವಿತ್ತಬಾಧೋಪಸರ್ಗೈರ್ವಿಹರನ್ ವಿಪನ್ನಃ ।।೧೭।।**

**ಅನ್ಯೋನ್ಯ** ಪರಸ್ಪರವಾಗಿ **ವಿತ್ತವ್ಯತಿಷಂಗ** ದ್ರವ್ಯ ಕೊಡುವುದು ತೆಗೆದುಕೊಳ್ಳುವುದು ಎಂಬ ಸಂಬಂಧದಿಂದ **ವೃದ್ಧ** ಬೆಳೆದ **ವೈರಾನುಬಂಧಃ** ದ್ವೇಷಪರಂಪಯುಳ್ಳವನಾಗಿದ್ದರೂ **ಮಿಥಃ ಅಧಿವಹನ್** ಪರಸ್ಪರ ಕುಟುಂಬ ಪೋಷಣಾದಿಗಳನ್ನು ಮಾಡುತ್ತ **ಅಮುಷ್ಮಿನ್ ಅಧ್ವನಿ** ಈ ಸಂಸಾರ ಮಾರ್ಗದಲ್ಲಿ **ವಿಹರನ್** ಸಂಚರಿಸುತ್ತ **ಉರುಕೃಚ್ಛ್ರ** ಬಹಳ ಕಷ್ಟಗಳಿಂದ **ವಿತ್ತಬಾಧೋಪಸರ್ಗೈಃ** ಹಣದ ತೊಂದರೆಯಿಂದಲೂ ಮತ್ತು **ಉಪಸರ್ಗೈಃ** ರಾಗ ದ್ವೇಷಗಳಿಂದ **ವಿಪನ್ನಃ ಭವತಿ** ಮೃತಪ್ರಾಯನಾಗುವನು. ।।೧೭।।

**ತಾಂಸ್ತಾನ್ವಿಪನ್ನಾನ್ ಸ ಹಿ ತತ್ರ ತತ್ರ**
**ವಿಹಾಯ ಜಾತಂ ಪರಿಗೃಹ್ಯ ಸಾರ್ಥಃ ।**
**ಆವರ್ತತೇಽದ್ಯಾಪಿ ನ ಕಶ್ಚಿದತ್ರ**
**ವೀರಾಧ್ವನಃ ಪಾರಮುಪೈತಿ ಯೋಗಮ್ ।।೧೮।।**

**ಸಃ ಸಾರ್ಥಃ** ಆ ವ್ಯಾಪಾರಿಯು **ವಿಪನ್ನಾನ್** ನಷ್ಟವಾದ **ತಾನ್ ತಾನ್** ಆ ಆ ವಸ್ತ್ರಾಲಂಕಾರಾದಿಗಳನ್ನು **ತತ್ರ ತತ್ರ** ಅಲ್ಲಲ್ಲಿ **ವಿಹಾಯ** ಬಿಟ್ಟು **ಜಾತಂ** ಹೊಸದಾಗಿ ಸಂಪಾದಿಸಿದನ್ನು **ಪರಿಗೃಹ್ಯ** ಸ್ವೀಕರಿಸಿ **ಅದ್ಯಾಪಿ ಆವರ್ತತೇ** ಈಗಲೂ ಶುದ್ಧ ಮಾರ್ಗ ತಿಳಿಯದೇ ವನದಲ್ಲೇ ಸುತ್ತುವನು.

ಹಾಗೆಯೇ **ಸಃ ಸಾರ್ಥಃ** ವ್ಯಾಪಾರಿಯ ಸ್ಥಾನದಲ್ಲಿರುವ ಸಂಸಾರಿಯು **ತತ್ರ ತತ್ರ** ಮನುಷ್ಯ ಮುಂತಾದ ಜನ್ಮದಲ್ಲಿ **ತಾನ್ ತಾನ್ ವಿಪನ್ನಾನ್** ರೋಗಾದಿಗಳನ್ನು ಹೊಂದಿದ ದೇಹಗಳನ್ನು **ವಿಹಾಯ** ತ್ಯಜಿಸಿ **ಜಾತಂ** ಹೊಸದಾಗಿ ಜನಿಸಿದ ದೇಹವನ್ನು **ಪರಿಗೃಹ್ಯ** ಸ್ವೀಕರಿಸಿ **ಅದ್ಯಾಪಿ ಆವರ್ತತೇ** ಈಗಲೂ ಸಂಸಾರದಲ್ಲಿ ಸುತ್ತುವನು **ಹೇ**

**ವೀರ** ಎಲೋ ರಹೂಗಣನೇ! **ಅತ್ರ** ಸಂಸಾರಾಟವಿಯಲ್ಲಿ ತಿರುಗುವ **ಕಶ್ಚಿತ್ ಅಪಿ** ಒಬ್ಬನೂ ಸಹ **ಅಧ್ವನಃ ಪಾರಂ** ಸಂಸಾರ ಮಾರ್ಗದ ಕೊನೆಯನ್ನು ತಲುಪಿಸುವ **ಯೋಗಂ** ಉಪಾಯನಾದ ಶ್ರೀಹರಿಯನ್ನು **ನ ಉಪೈತಿ** ಹೊಂದಲಾರ. ಇದು ದಾರ್ಷ್ಟಾಂತಿಕಪರವಾಗಿ ಅರ್ಥ. ದೃಷ್ಟಾಂತದಲ್ಲಿ ಉಪಾಯವನ್ನು ಹೊಂದಲಾರನೆಂದರ್ಥ. ||೧೮||

ಈ ವಿಧ ಉಪಾಯವನ್ನು ಶಕ್ತನಾದವನು ತನ್ನ ಪರಾಕ್ರಮದಿಂದ ಹೊಂದುವನು ಎಂದರೆ ಹೇಳುವರು

''**ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ । ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ**'' ಎಂದು ಶ್ರುತಿ ಇರುವುದರಿಂದ ಯಾರೂ ಪಾರವನ್ನು ಹೊಂದುವುದಿಲ್ಲ ಎಂದು ಹೇಳಿದ್ದು ಹೇಗೆ ಯುಕ್ತವಾದೀತು? ಎಂದರೆ ನಾವು ನಿಷೇಧಿಸಿದ್ದು ಜಿತೇಂದ್ರಿಯರಾದ ಜ್ಞಾನಿಜನರಿಂದ ಇತರರಾದ ಪುರುಷರ ಅಭಿಪ್ರಾಯದಿಂದ ಎಂದು ಹೇಳುವರು -

**ಮನಸ್ವಿನೋ ನಿರ್ಜಿತದಿಗ್ಗಜೇಂದ್ರಾ**
**ಮಮೇತಿ ಸರ್ವೇ ಭುವಿ ಬದ್ಧವೈರಾಃ ।**
**ಮೃಧೇ ಶಯೀರನ್ನ ತು ತದ್ವ್ರಜಂತಿ**
**ಯನ್ನ್ಯಸ್ತದಂಡೋ ಗತವೈರೋಽಭಿಯಾತಿ** ||೧೯||

**ಮನಸ್ವಿನಃ** ದಾನಶೂರರಾದ, ಧೈರ್ಯವಂತರಾದ **ನಿರ್ಜಿತದಿಗ್ಗಜೇಂದ್ರಾಃ** ದಿಗ್ಗಜಗಳಂತಿರುವ ಶ್ರೇಷ್ಠ ರಾಜನನ್ನು ಗೆದ್ದ **ಸರ್ವೇ** ಎಲ್ಲರೂ **ಭುವಿ** ಭೂಮಿಯ ವಿಷಯದಲ್ಲಿ **ಮಮ ಇತಿ** ಇದು ನನ್ನದು ಎಂದು **ಬದ್ಧವೈರಾಃ** ದ್ವೇಷ ಕಟ್ಟಿಕೊಂಡು **ಮೃಧೇ** ಯುದ್ಧದಲ್ಲಿ **ಶಯೀರನ್** ಶತ್ರುಗಳಿಂದ ಹೊಡಿಸಿಕೊಂಡು ಸಾಯುವರೇ ಹೊರತು **ನ್ಯಸ್ತದಂಡಃ** ವ್ಯರ್ಥ ಹಿಂಸೆ ಮಾಡದ **ಗತವೈರಃ** ವಿಷ್ಣು ವೈಷ್ಣವ ದ್ವೇಷ ಮಾಡದವನು **ಯತ್** ಯಾವುದನ್ನು **ಅಭಿಯಾತಿ** ಹೊಂದುವನೋ **ತತ್** ಆ ಯೋಗವನ್ನು **ನ ವ್ರಜಂತಿ** ಹೊಂದಲಾರರು. ||೧೯||

ಸಂಸಾರ ಮಾರ್ಗದಲ್ಲಿರುವ ನಾನು ಅದನ್ನು ದಾಟುವುದು ಹೇಗೆ ಎಂದರೆ ಹೇಳುವರು-




**ರಹೂಗಣ ತ್ವಮಪಿ ಹ್ಯಧ್ವನೋಽಸ್ಯ ಸನ್ಯಂಸ್ತದಂಡಃ ಕೃತಭೂತಮೈತ್ರಃ ।**
**ಅಸಜ್ಜಿತಾತ್ಮಾ ಹರಿಸೇವಯಾ ಶಿತಜ್ಞಾನಾಸಿಮಾದಾಯ ತರಾತಿಪಾರಮ್ ॥೨೦॥**

**ಹೇ ರಹೂಗಣ** ಎಲೋ ರಾಜನೇ! **ತ್ವಮಪಿ** ನೀನೂ ಸಹ **ಸಂನ್ಯಸ್ತದಂಡಃ** ದಂಡಮಾಡುವುದನ್ನು ಬಿಟ್ಟವನಾಗಿ **ಕೃತಭೂತಮೈತ್ರಃ** ಸಜ್ಜನರಲ್ಲಿ ಸ್ನೇಹ ಮಾಡಿ **ಅಸಜ್ಜಿತಾತ್ಮಾ** ವಿಷಯಗಳಲ್ಲಿ ಆಸಕ್ತವಾಗದ ಮನಸ್ಸುಳ್ಳವನಾಗಿ **ಹರಿಸೇವಯಾ** ಶ್ರವಣಾದಿರೂಪ ಶ್ರೀಹರಿ ಸೇವೆಯಿಂದ **ಶಿತ** ತೀಕ್ಷ್ಣವಾದ **ಜ್ಞಾನಾಸಿಂ ಆದಾಯ** ಜ್ಞಾನವೆಂಬ ಖಡ್ಗವನ್ನು ತೆಗೆದುಕೊಂಡು **ಅತಿ ಪಾರಂ ತರ** ಕೊನೆ ಅವಧಿಯಾದ ಮೋಕ್ಷಕ್ಕಾಗಿ ಸಂಸಾರಾಟವಿಯನ್ನು ದಾಟು, ಶ್ರೀಹರಿಯನ್ನು ಹೊಂದು. ॥೨೦॥

ಅತಿದುರ್ಲಭವಾದ ಮಹತ್ಸಮಾಗಮವು ತನ್ನ ಪುರುಷಾರ್ಥ ಸಾಧನವಾದ್ದರಿಂದ ಅದರಲ್ಲಿ ಆದರವಿರಬೇಕು ಎಂದು ತಿಳಿಸಲು ಯಾವ ದೇಹದಲ್ಲಿ ಮಹತ್ಸಮಾಗಮವಾಗುವುದೋ ಅದೇ ಜನ್ಮವು ಎಲ್ಲ ಜನ್ಮಗಳಲ್ಲಿ ಶ್ರೇಷ್ಠವೆಂದು ಸ್ತುತಿಸುವನು ರಹೂಗಣನು

**ರಾಜೋವಾಚ-**

**ಅಹೋ ನೃಜನ್ಮಾಖಿಲಜನ್ಮಶೋಭನಂ**
**ಕಿಂ ಜನ್ಮಭಿಸ್ತ್ವಪರೈರಪ್ಯಮುಷ್ಮಿನ್ ।**
**ನ ಯದ್ಧೃಷೀಕೇಶಯಶಃಕೃತಾತ್ಮನಾಂ**
**ಮಹಾತ್ಮನಾಂ ವಃ ಪ್ರಚುರಃ ಸಮಾಗಮಃ ॥೨೧॥**

**ಯತ್** ಯಾವ ಮನುಷ್ಯ ದೇಹದಲ್ಲಿ **ಹೃಷೀಕೇಶಯಶಃಕೃತಾತ್ಮನಾಂ** ಸರ್ವೇಂದ್ರಿಯನಿಯಾಮಕನಾದ ಶ್ರೀಹರಿಯ ಕೀರ್ತಿಯಲ್ಲಿ ಇರಿಸಿದ ಮನುಸ್ಸುಳ್ಳ **ಮಹಾತ್ಮನಾಂ** ಮಹಾತ್ಮರಾದ **ವಃ** ನಿಮ್ಮ **ಪ್ರಚುರಃ ಸಮಾಗಮಃ** ಶ್ರೇಷ್ಠ ಸಮಾಗಮವಾಗುವುದೋ ಅಂಥ ನೃಜನ್ಮ ಮನುಷ್ಯ ಜನ್ಮವೇ **ಅಖಿಲಜನ್ಮಶೋಭನಂ** ಎಲ್ಲ ಜನ್ಮಗಳಲ್ಲಿ ಮಂಗಲಕರವಾದುದು **ಅಮುಷ್ಮಿನ್ ಅಪಿ** ಸ್ವರ್ಗಾದಿಗಳಲ್ಲಿಯೂ **ಅಪರೈಃ** ಭೋಗಕ್ಕಾಗಿ ಬಂದ ಜನ್ಮಗಳಿಂದ **ಕಿಂ** ಏನು ಪ್ರಯೋಜನ? ಏನೂ ಇಲ್ಲ. ಏಕೆಂದರೆ **ಯತ್ರ** ಎಲ್ಲಿ **ಹೃಷೀಕೇಶಯಶಃಕೃತಾತ್ಮನಾಂ ವಃ ಪ್ರಚುರಃ ಸಮಾಗಮಃ ನ ತೈಃ ಕಿಂ** ಯಾವ ಆ ಜನ್ಮಗಳಲ್ಲಿ ನಿಮ್ಮಂಥ ಭಗವದ್ಭಕ್ತರ ಸಮಾಗಮವಿಲ್ಲವೋ ಅಂಥ ಜನ್ಮಗಳು ವ್ಯರ್ಥವೆಂದು ಭಾವ. ॥೨೧॥

ಬಹುತರ ಮಹತ್ಸಮಾಗಮವು ಪುರುಷಾಪೇಕ್ಷಿತ ಅಶೇಷಾರ್ಥಸಾಧಕವೆಂದು ಕೈಮುತ್ಯನ್ಯಾಯ ಸಿದ್ಧವಾಗುವುದು. ಏಕೆಂದರೆ ಒಂದುಮುಹೂರ್ತ ಮಾತ್ರ ಮಹತ್ಸಮಾಗಮದಿಂದ ಪುರುಷಾರ್ಥ ಸಿದ್ಧಿ ಕಂಡಿದೆ ಎಂದು ಹೇಳುವನು

**ನ ಹ್ಯದ್ಭುತಂ ತ್ವಚ್ಚರಣಾಬ್ಜರೇಣುಭಿ-**
**ರ್ಹತಾಂಹಸೋ ಭಕ್ತಿರಧೋಕ್ಷಜೇಽಮಲಾ ।**
**ಮೌಹೂರ್ತಿಕಾದ್ಯಸ್ಯ ಸಮಾಗಮಾಚ್ಚ**
**ಮೇ ದುಸ್ತರ್ಕಮೂಲೋಽಪಹತೋಽವಿವೇಕಃ ॥೨೨॥**

**ಮೌಹೂರ್ತಿಕಾತ್** ಮುಹೂರ್ತ ಮಾತ್ರವಾದರೂ **ಯಸ್ಯ** ಯಾವ ನಿಮ್ಮ **ಸಮಾಗಮಾತ್** ಸಹವಾಸದಿಂದ **ಮೇ** ನನ್ನ **ದುಸ್ತರ್ಕಮೂಲಃ** ಶ್ರಮ ಮುಂತಾದ ಕಾರ್ಯ ಕಂಡದ್ದರಿಂದ ಜೀವರೇ ಗಮನಾದಿ ಕರ್ತೃಗಳು ಇಲ್ಲವಾದರೆ ಅವರಿಗೆ ಶ್ರಮವಾಗಬಾರದಿತ್ತು ಎಂಬ ಕುತರ್ಕದಿಂದ ಬಂದ **ಅವಿವೇಕಃ** ಜೀವರೇ ಸ್ವತಂತ್ರ ಕರ್ತೃಗಳು ಎಂಬ ಅವಿವೇಕವು **ಅಪಹತಃ** ನಷ್ಟವಾಯಿತು. ಅಂಥ **ತ್ವಚ್ಚರಣಾಬ್ಜರೇಣುಭಿಃ** ನಿತ್ಯದಲ್ಲಿಯೂ ಉಪಾಸಿಸಲ್ಪಟ್ಟ ನಿಮ್ಮ ಪಾದಧೂಳಿಗಳಿಂದ **ಹತಾಂಹಸಃ** ಪಾಪ ಕಳೆದುಕೊಂಡವನಿಗೆ **ಅಧೋಕ್ಷಜೇ** ಭಗವಂತನಲ್ಲಿ **ಅಮಲಾ ಭಕ್ತಿಃ** ಕಾಮ್ಯ ಫಲಾಭಿಸಂಧಿ ರಹಿತವಾದ ಮುಕ್ತಿದಾಯಕವಾದ ನಿರ್ಮಲ ಭಕ್ತಿಯು ಉಂಟಾಗುವುದೆಂಬುದು **ನ ಹಿ ಅದ್ಭುತಂ** ಆಶ್ಚರ್ಯವೇನಲ್ಲ. ॥೨೨॥

ತನ್ನ ದೃಷ್ಟಾಂತದಿಂದ ಇತರ ರಾಜರಿಗೂ ಇಂಥ ಅವಧೂತರ ಅವಮಾನದಿಂದ ಉಂಟಾಗುವ ಅಪರಾಧ ಸಂಭಾವಿತವೆಂದು ಬಗೆದು ಅದರ ಪರಿಹಾರಕ್ಕಾಗಿ ಎಲ್ಲ ಅವಧೂತರನ್ನೂ ನಮಸ್ಕರಿಸುವನು.

**ನಮೋ ಮಹದ್ಭ್ಯೋಽಸ್ತು ನಮಃ ಶಿಶುಭ್ಯೋ**
**ನಮೋ ಯುವಭ್ಯೋ ನಮ ಆ ವಟುಭ್ಯಃ।**
**ಯೇ ಬ್ರಾಹ್ಮಣಾ ಗಾಮವಧೂತಲಿಂಗಾ-**
**ಶ್ಚರಂತಿ ತೇಭ್ಯಃ ಶಿವಮಸ್ತು ರಾಜ್ಞಾಂ ॥೨೩॥**

**ಆ ವಟುಭ್ಯಃ** ಬ್ರಹ್ಮಚಾರಿಗಳನ್ನೂ ಹಿಡಿದು **ಯೇ ಬ್ರಾಹ್ಮಣಾಃ** ಯಾವ ಬ್ರಾಹ್ಮಣರು **ಅವಧೂತಲಿಂಗಾಃ** ಬ್ರಾಹ್ಮಣ ಚಿನ್ಹ ಬಿಟ್ಟು **ಗಾಂ** ಭೂಮಿಯನ್ನು **ಚರಂತಿ** ಸಂಚರಿಸುವರೋ **ತೇಭ್ಯಃ** ಅಂಥ **ಯುವಭ್ಯಃ** ಯುವಕರಿಗೆ **ಶಿಶುಭ್ಯಃ** ಮಕ್ಕಳಿಗೆ




**ಮಹದ್ಭ್ಯಃ** ಹಿರಿಯರಿಗೆ **ನಮಃ** ನಮಸ್ಕಾರವು **ರಾಜ್ಞಾಂ** ಬ್ರಾಹ್ಮಣರ ಅವಜ್ಞೆಯಿಂದುಂಟಾದ ಅಪರಾಧವುಳ್ಳ ಎಲ್ಲ ರಾಜರಿಗೆ **ಶಿವಂ ಅಸ್ತು** ನಾನು ಮಾಡಿದ ನಮಸ್ಕಾರದಿಂದ ಕಲ್ಯಾಣವಾಗಲಿ. ।।೨೩।।

**ಶ್ರೀಶುಕ ಉವಾಚ**

**ಇತ್ಯೇವಮುತ್ತರಾಮಾತಃ ಸ ವೈ ಬ್ರಹ್ಮರ್ಷಿಸುತಃ ಸಿಂಧುಪತೇಃ ಪರಮಾತ್ಮ-ಸತತ್ತ್ವಮವಿಗಣಿತಪರವಮಾನುಭಾವಃ ಪರಮಕಾರುಣಿಕತಯೋಪದಿಶ್ಯ ರಹೂಗಣೇನ ಸಕರುಣಮಭಿವಂದಿತಚರಣಕಮಲಃ ಪೂರ್ಣಾರ್ಣವ ಇವ ನಿಭೃತಕರಣೋರ್ಮ್ಯಾಶಯೋ ಧರಣೀಮಿಮಾಂ ವಿಚಚಾರ ।।೨೪।।**

**ಹೇ ಉತ್ತರಾಮಾತಃ** ಉತ್ತರೆಯೇ ತಾಯಿಯಾಗಿಯುಳ್ಳ ಪರೀಕ್ಷಿತನೇ **ಸಃ ಬ್ರಹ್ಮರ್ಷಿಸುತಃ** ಆ ಜಡಭರತನು **ಅವಿಗಣಿತಪರಾನುಭಾವಃ** ಅಸಂಖ್ಯಾತವಾದ ಉತ್ಕೃಷ್ಟ ಪ್ರಭಾವವುಳ್ಳವನು **ಪರಮಾತ್ಮಸತತ್ತ್ವಂ** ಶ್ರೀಹರಿಯ ನಿರ್ದೋಷ ಸ್ವರೂಪವನ್ನು **ಇತ್ಯೇವಂ** ಈ ರೀತಿಯಾಗಿ **ಪರಮಕಾರುಣಿಕತಯಾ ಉಪದಿಶ್ಯ** ಅತ್ಯಂತ ದಯಾಳುವಾದುದರಿಂದ ಉಪದೇಶಮಾಡಿ **ರಹೂಗಣೇನ** ರಾಜನಿಂದ **ಸಕರುಣಂ** ದೈನ್ಯದಿಂದ **ಅಭಿವಂದಿತಚರಣಕಮಲಃ** ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳವನಾಗಿ **ಪೂರ್ಣಾರ್ಣವ ಇವ** ತುಂಬಿದ ಸಮುದ್ರದಂತೆ **ನಿಭೃತಕರಣೋರ್ಮ್ಯಾಶಯಃ** ವಶೀಕೃತವಾದ ಇಂದ್ರಿಯಗಳೆಂಬ ತೆರೆಗಳ ಮತ್ತು ಅಂತಃಕರಣವುಳ್ಳವನಾಗಿ **ಇಮಾಂ ಧರಣೀಂ ವಿಚಚಾರ** ಈ ಭರತ ಭೂಮಿಯಲ್ಲಿ ಸಂಚರಿಸಿದನು. ।।೨೪।।

**ಸೌವೀರಪತಿರಪಿ ಸುಜನಸಮವಗತಪರಮಾತ್ಮಸತತ್ತ್ವ ಆತ್ಮನ್ಯವಿದ್ಯಾಧ್ಯಾ-ರೋಪಿತಾಂ ಚ ದೇಹಾತ್ಮಮತಿಂ ವಿಸಸರ್ಜ ಏವಂ ನೃಪ ಭಗವದಾಶ್ರಿತಾಶ್ರಿತಾ-ನುಭಾವಃ ।।೨೫।।**

**ಸೌವೀರಪತಿರಪಿ** ಸೌವೀರ ದೇಶದ ರಾಜನಾದ ರಹೂಗಣನೂ ಕೂಡ **ಸುಜನಸಮವಗತಪರಮಾತ್ಮಸತತ್ತ್ವಃ** ಸಜ್ಜನನಾದ ಬ್ರಾಹ್ಮಣನಿಂದ ಚೆನ್ನಾಗಿ ತಿಳಿಯಲ್ಪಟ್ಟ ಶ್ರೀಹರಿಯ ಸರಿಯಾದ ಸ್ವರೂಪ ಉಳ್ಳವನಾಗಿ **ಆತ್ಮನಿ** ತನ್ನಲ್ಲಿ **ಅವಿದ್ಯಾಧ್ಯಾರೋಪಿತಾಂ** ಅಜ್ಞಾನದಿಂದ ಆರೋಪಿಸಲ್ಪಟ್ಟ **ದೇಹಾತ್ಮಮತಿಂ** ದೇಹದಲ್ಲಿ ನಾನು ನನ್ನದು ಎಂಬ ಅಭಿಮಾನವನ್ನು **ವಿಸಸರ್ಜ** ತ್ಯಜಿಸಿದನು **ನೃಪ** ರಾಜನೇ!

**ಭಗವದಾಶ್ರಿತಾಶ್ರಿತಾನುಭಾವಃ** ಏವಂ ಭಗವಂತನನ್ನು ಆಶ್ರಯಿಸಿದ ಭರತನನ್ನು ಆಶ್ರಯಿಸಿದ ರಹೂಗಣನ ಪ್ರಭಾವ ಹೀಗಿದೆ ಎಂದು ಭಾವ.॥೨೫॥

**ವಿಜಯಧ್ವಜರ ಪ್ರಕಾರ ೧೩ನೇ ಅಧ್ಯಾಯ ಇಲ್ಲಿಗೆ ಮುಗಿಯಿತು. ಯಾದವಾರ್ಯರ ಪ್ರಕಾರ ಮುಂದುವರೆದಿದೆ.**

**ತಸ್ಯೇಮಾನ್ ಶ್ಲೋಕಾನ್ ಗಾಯಂತಿ ।**
**ಆರ್ಷಭಸ್ಯೇಹ ರಾಜರ್ಷೇರ್ಮನಸಾಪಿ ಮಹಾತ್ಮನಃ ।**
**ನಾನುವರ್ತ್ಮಾರ್ಹತಿ ನೃಪೋ ಮಕ್ಷಿಕೇವ ಗರುತ್ಮತಃ ॥೨೬॥**

**ತಸ್ಯ** ಭರತನ **ಇಮಾನ್** ಮುಂದೆ ಹೇಳುವ **ಶ್ಲೋಕಾನ್** ಶ್ಲೋಕಗಳನ್ನು **ಗಾಯಂತಿ** ಹೇಳುವರು **ಆರ್ಷಭಸ್ಯ** ಋಷಭ ಪುತ್ರನಾದ **ರಾಜರ್ಷೇಃ** ರಾಜ ಶ್ರೇಷ್ಠನಾದ **ಮಹಾತ್ಮನಃ** ಮಹಾತ್ಮನಾದ ಭರತನು **ಅನುವರ್ತ್ಮ** ಅನುಸರಿಸಿರುವ ಮಾರ್ಗವನ್ನು **ನೃಪಃ** ಕರ್ಮದೇವತೆಗಳಿಗೆ ಸಮಾನರಾದ ರಾಜರನ್ನು ಬಿಟ್ಟು ಇಹ ಈ ರಾಜರಲ್ಲಿ ಯಾವ ರಾಜನೂ **ಗರುತ್ಮತಃ** ಗರುಡನ ಮಾರ್ಗವನ್ನು **ಮಕ್ಷಿಕಾ ಇವ** ನೊಣದಂತೆ **ನ ಅರ್ಹತಿ** ಹೊಂದಲಾರನು. ॥೨೬॥

### ಭರತನಿಗೆ ಸಮಾನ ರಾಜರು ಯಾರೂ ಇಲ್ಲವೇ?

ಈ ಶ್ಲೋಕದಲ್ಲಿ ಭರತನಿಗೆ ಸಮಾನ ರಾಜ ಯಾರೂ ಇಲ್ಲವೆಂದು ಹೇಳುತ್ತಾರೆ ಎಂಬ ಪ್ರತೀತಿಯನ್ನು ನಿವಾರಿಸಲು ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು.

ತಾತ್ಪರ್ಯ-'ಋತೇ ಹೈಹಯವೈನ್ಯಾದೀನಾರ್ಷಭಸ್ಯೇಹ ಕಃ ಸಮಃ ।
ಯಸ್ಯೋಪದೇಶಾತ್ ಸಿಂಧ್ವೀಶೋ ದದರ್ಶ ಕಪಿಲಂ ಪ್ರಭುಂ' ಇತಿ ಚ ॥

ಕಾರ್ತವೀರ್ಯಾರ್ಜುನ, ಪೃಥು, ಪ್ರಿಯವ್ರತ ಮುಂತಾದ ಕರ್ಮಜದೇವತೆಗಳಿಗೆ ಸಮಾನರಾದ ರಾಜರನ್ನು ಬಿಟ್ಟು ಯಾವನ ಉಪದೇಶದಿಂದ ರಹೂಗಣ ರಾಜನು ಕಪಿಲರೂಪಿ ಶ್ರೀಹರಿಯನ್ನು ಕಂಡನೋ ಅಂಥ ಋಷಭಪುತ್ರ ಭರತನಿಗೆ ಮಿಕ್ಕವರಾರು ಸಮಾನರಾಗುವರು? ಯಾರೂ ಇಲ್ಲ.

**ಯೋ ದುಸ್ತ್ಯಜಾನ್ ದಾರಸುತಾನ್ ಸುಹೃದ್ರಾಜ್ಯಂ ಹೃದಿಸ್ಪೃಶಮ್ ।**
**ಜಹೌ ಯುವೈವ ಮಲವದುತ್ತಮಶ್ಲೋಕಲಾಲಸಃ ॥೨೭॥**

 

**ಯಃ** ಯಾವನು **ಯುವಾ ಏವ** ತರುಣನಾದಾಗಲೇ **ದುಸ್ತ್ಯಜಾನ್** ಸಾಮಾನ್ಯರಿಗೆ ಬಿಡಲಾಗದ **ದಾರಸುತಾನ್** ಹೆಂಡತಿ ಮಕ್ಕಳನ್ನು **ಸುಹೃತ್** ಸ್ನೇಹಿತರನ್ನು **ಹೃದಿಸ್ಪೃಶಂ** ಹೃದಯಂಗಮವಾದ **ರಾಜ್ಯಂ** ರಾಜ್ಯವನ್ನು **ಉತ್ತಮಶ್ಲೋಕಲಾಲಸಃ** ಪರಮಾತ್ಮನನ್ನು ಹೊಂದುವ ಅಭಿಲಾಷೆಯುಳ್ಳವನಾಗಿ **ಮಲವತ್ ಜಹೌ** ಅಮೇಧ್ಯದಂತೆ ತ್ಯಜಿಸಿದನು. ||೨೭||

**ಯೋ ದುಸ್ತ್ಯಜಾನ್ ಕ್ಷಿತಿಸುತಸ್ವಜನಾರ್ಥದಾರಾನ್**
**ಪ್ರಾರ್ಥ್ಯಾಂ ಶ್ರಿಯಂ ಸುರವರ್ಯೈಃ ಸದಯಾವಲೋಕೈಃ ।**
**ನೈಚ್ಛನ್ನೃಪಸ್ತದುಚಿತಂ ಮಹತಾಂ ಮಧುದ್ವಿಟ್**
**ಸೇವಾನುರಕ್ತಮನಸಾಮಭವೋಽಪಿ ಫಲ್ಗುಃ ||೨೮||**

**ಯಃ** ಯಾವನು **ದುಸ್ತ್ಯಜಾನ್** ಬಿಡಲಾಗದ **ಕ್ಷಿತಿ** ಭೂಮಿ **ಸುತ** ಮಕ್ಕಳು **ಸ್ವಜನ** ಬಂಧುಗಳು **ಅರ್ಥ** ಹಣ **ದಾರಾನ್** ಹೆಂಡತಿ ಇವುಗಳನ್ನು **ಸದಯಾವಲೋಕೈಃ** ಕೃಪಾದೃಷ್ಟಿಯಿಂದ ಕೂಡಿದ **ಸುರವರ್ಯೈಃ** ದೇವತಾ ಶ್ರೇಷ್ಠರಿಂದ **ಪ್ರಾರ್ಥ್ಯಾಂ** ಶ್ಲಾಘನೀಯವಾದ **ಶ್ರಿಯಂ** ಸಂಪತ್ತನ್ನು **ನೃಪಃ** ಭರತ ಚಕ್ರವರ್ತಿಯು **ನೈಚ್ಛತ್** ಇಚ್ಛಿಸಲಿಲ್ಲ **ಮಹತಾಂ** ಮಹನೀಯರಿಗೆ **ತತ್ ಉಚಿತಂ** ಅದು ಯೋಗ್ಯವೇ **ಮಧುದ್ವಿಟ್ ಸೇವಾನುರಕ್ತಮನಸಾಂ** ಶ್ರೀಹರಿಯ ಸೇವಾಸಕ್ತ ಮನಸ್ಸುಳ್ಳವರಿಗೆ **ಅಭವೋಽಪಿ** ಮೋಕ್ಷವೂ ಸಹ **ಫಲ್ಗುಃ** ಅಲ್ಪವೇ ಅಷ್ಟೇ. ||೨೮||

**ಯಜ್ಞಾಯ ಧರ್ಮಪತಯೇ ವಿಧಿನೈಪುಣಾಯ**
**ಯೋಗಾಯ ಸಾಂಖ್ಯಶಿರಸೇ ಪ್ರಕೃತೀಶ್ವರಾಯ ।**
**ನಾರಾಯಣಾಯ ಹರಯೇ ನಮ ಇತ್ಯುದಾರಂ**
**ಗಾಯನ್ ಮೃಗತ್ವಮಪಿ ಯಃ ಸಮುದಾಜಹಾರ ||೨೯||**

**ಯಜ್ಞಾಯ** ಪೂಜನೀಯನಾದ **ಧರ್ಮಪತಯೇ** ಪುಣ್ಯಸ್ವಾಮಿಯಾದ **ವಿಧಿನೈಪುಣಾಯ** ವಿಧಿವಿಹಿತ ಕರ್ಮಾನುಷ್ಠಾನ ಮಾಡುವ ಕೌಶಲ್ಯವನ್ನು ನೀಡುವ (ವಿಧೌ ನೈಪುಣಂ ಯಸ್ಮಾತ್ ತಸ್ಯ) **ಯೋಗಾಯ** ಮನ ಆದಿ ಇಂದ್ರಿಯಗಳು ತನ್ನ ವಿಷಯವಾಗುವಂತೆ ಪ್ರೇರಿಸುವ (ಯುಜ್ಯತೇ ಅನೇನೇತಿ ಯೋಗಃ) **ಸಾಂಖ್ಯಶಿರಸೇ** ಉತ್ತಮ ಜ್ಞಾನರೂಪನಾದ **ಪ್ರಕೃತೀಶ್ವರಾಯ** ಲಕ್ಷ್ಮೀಪತಿಯಾದ **ನಾರಾಯಣಾಯ** ಮುಕ್ತಾಶ್ರಯನಾದ **ಹರಯೇ** ಶ್ರೀಹರಿಗೆ **ನಮಃ** ನಮಸ್ಕಾರವು **ಇತಿ** ಈ ರೀತಿ

**ಉದಾರಂ ಗಾಯನ್** ಉತ್ಕೃಷ್ಟವಾಗಿ ಹಾಡುತ್ತ **ಮೃಗತ್ವಂ ಅಪಿ** ಜಿಂಕೆಯ ಜನ್ಮವನ್ನು **ಯಃ** ಯಾವನು **ಸಮುದಾಜಹಾರ** ಉತ್ಕೃಷ್ಟವಾಗಿ ಸ್ವೀಕರಿಸಿದನು. ॥೨೯॥

## ಯೋಗ, ಸಾಂಖ್ಯಶಿರಸ್ ಶಬ್ದಾರ್ಥಗಳು

ಯೋಗಾಯ ಸಾಂಖ್ಯಶಿರಸೇ ಎಂಬೆರಡು ಪದಗಳಿಗೆ ಪ್ರಕೃತ ಸಂಗತ ಅರ್ಥ ತಿಳಿಸುವರು

ತಾತ್ಪರ್ಯ – 'ಯುಜ್ಯತೇ ಅನೇನೇತಿ ಯೋಗೋ ಹರಿಃ ।
ಸಾಂಖ್ಯಶಿರಸೇ ಉತ್ತಮಜ್ಞಾನಸ್ವರೂಪಾಯ ॥

ಇಂದ್ರಿಯಗಳು ಬೇರೆಡೆ ಹೋಗದೆ ತನ್ನೆಡೆಗೆ ಬರುವಂತೆ ಪ್ರೇರಿಸುವ ಹರಿಯು **ಯೋಗ** ಶಬ್ದಾರ್ಥ. **ಸಾಂಖ್ಯಶಿರಸೇ** ಉತ್ತಮಜ್ಞಾನಸ್ವರೂಪನಾದವನಿಗೆ ಎಂದರ್ಥ.

**ಇದಂ ಭಾಗವತಸಭಾಜಿತಾವದಾತಗುಣಕರ್ಮಣೋ ರಾಜರ್ಷೇರ್ಭರತಸ್ಯ ಅನುಚರಿತಂ ಸ್ವಸ್ತ್ಯಯನಂ ಆಯುಷ್ಯಂ ಧನ್ಯಂ ಯಶಸ್ಯಂ ಸ್ವರ್ಗ್ಯಂ ಆಪವರ್ಗ್ಯಂ ಚ ಅನುಶ್ರುಣೋತ್ಯಾಖ್ಯಾಸ್ಯತ್ಯಭಿನಂದತಿ ಚ ಸರ್ವಾಹ್ಯೇವ ಆಶಿಷಃ ಆತ್ಮತ ಆಶಾಸ್ತೆ ನ ಕಶ್ಚನ ಪರತ ಇತಿ ॥೩೦॥**

**ಇದಂ** ಈ **ಭಾಗವತ** ಭಗವದ್ಭಕ್ತರಿಂದ **ಸಭಾಜಿತ** ಪೂಜಿತವಾದ **ಅವದಾತ** ನಿರ್ಮಲವಾದ **ಗುಣಕರ್ಮಣಃ** ಗುಣಗಳ ಕಾರ್ಯಗಳುಳ್ಳ **ರಾಜರ್ಷೇಃ ಭರತಸ್ಯ** ರಾಜ ಋಷಿಯಾದ ಭರತನ **ಅನುಚರಿತಂ** ಚರಿತ್ರವು **ಸ್ವಸ್ತ್ಯಯನಂ** ಪರಮ ಮಂಗಲದಾಯಕವು **ಆಯುಷ್ಯಂ** ಆಯುಷ್ಯ ವರ್ಧಕವು **ಧನ್ಯಂ** ಧನ್ಯತಾಪ್ರದವು **ಯಶಸ್ಯಂ** ಕೀರ್ತಿಪ್ರದವು **ಸ್ವರ್ಗ್ಯಂ** ಸ್ವರ್ಗಪ್ರದವು **ಆಪವರ್ಗ್ಯಂ** ಮೋಕ್ಷಪ್ರದವು ಆದ ಇದನ್ನು **ಅನುಶ್ರುಣೋತಿ** ಪುನಃ ಪುನಃ ಕೇಳುವನು **ಆಖ್ಯಾಸ್ಯತಿ** ಹೇಳುವನು **ಅಭಿನಂದತಿ** ಅನುಮೋದಿಸುವನು ಯಾವನೋ ಅವನು **ಸರ್ವಾಃ ಆಶಿಷಃ** ತನ್ನೆಲ್ಲ ಅಭೀಷ್ಟಗಳನ್ನು **ಆತ್ಮತಃ ಆಶಾಸ್ತೇ** ಪರಮಾತ್ಮನಿಂದಲೇ ಅಪೇಕ್ಷಿಸುವನು **ಕಾಶ್ಚನ ನ ಪರತಃ** ಯಾವದೊಂದನ್ನೂ ಬೇರೆಯವರಿಂದ ಅಪೇಕ್ಷಿಸುವುದಿಲ್ಲ. ಅಂದರೆ ಶ್ರೀಹರಿಯ ಸ್ವಾತಂತ್ರ್ಯವನ್ನು ಚೆನ್ನಾಗಿ ತಿಳಿಯುವನೆಂದರ್ಥ **ಹಿ** ಕೇಳಿದವರಿಗೆ ಅನುಭವ ಸಿದ್ಧ **ಇತಿ** ಭರತ ಕಥಾ ಸಮಾಪ್ತಿ.

॥ ಇಲ್ಲಿಗೆ ೧೩ ನೇ ಅಧ್ಯಾಯವು ಮುಗಿಯಿತು ॥





## ಹದಿಮೂರನೇ ಅಧ್ಯಾಯದ ಸಾರ

ಈ ಪ್ರಸಿದ್ಧವಾದ ಜೀವಸಮುದಾಯವು ಅನಾದಿಸಿದ್ಧವಾದ ತನ್ನ ಸ್ವಭಾವಾನುಸಾರ ಶ್ರೀಹರಿಯ ಇಚ್ಛೆಯಿಂದ ಸಂಸಾರ ಮಾರ್ಗದಲ್ಲಿ ನಿವೇಶಿತವಾಗಿದೆ. ಅವನ ಅನುಗ್ರಹವಿಲ್ಲದೇ ಆ ಮಾರ್ಗವನ್ನು ದಾಟಲಾಗುವುದಿಲ್ಲ. ಈ ಜೀವಸಮುದಾಯವು ರಾಜಸ ತಾಮಸ ಸಾತ್ವಿಕ ಕರ್ಮಗಳನ್ನು 'ನಾನು ಮಾಡುತ್ತೇನೆ' 'ನನ್ನವಿವು' ಎಂದು ತಿಳಿಯುವುದು. ಅದರ ಫಲವಾಗಿ ಬೇರೆ ಬೇರೆ ದೇಹಗಳನ್ನು ಹೊಂದುವುದು. ತನ್ನ ಪ್ರಯೋಜನ ಸಾಧನೆಯಲ್ಲಿ ಆಸಕ್ತವಾಗಿರುವುದು. ಕಾಮ್ಯ ನಿಷಿದ್ಧ ಕರ್ಮಾಚರಣೆಯ ಈ ಮಾರ್ಗದಲ್ಲಿ ಸ್ವತಂತ್ರಕರ್ತನೆಂಬ ಭ್ರಾಂತಿಯಿಂದ ಮುಂದುವರೆದು ಈ ಸಂಸಾರವೆಂಬ ಅಡವಿಯನ್ನು ಪ್ರವೇಶಿಸುವುದು. ಅಲ್ಲಿ ಅದಕ್ಕೆ ಸುಖ ದೊರೆಯುತ್ತಿಲ್ಲ. (ಮೋಕ್ಷ ಸಾಧನೆಯಾಗುತ್ತಿಲ್ಲ) ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಎಂಬ ಆರು ಒಳ ಶತ್ರುಗಳು ಕಾಮಾದಿಗಳಿಂದ ಸೆಳೆಯಲ್ಪಡುವ ಇವರಿಂದ ಬಲಾತ್ಕಾರವಾಗಿ ಪುಣ್ಯರೂಪವಾದ ಹಣವನ್ನು ಅಪಹರಿಸುತ್ತಿರುವುವು. ನರಿಗಳಂತಿರುವ ಮಕ್ಕಳು ಹೆಂಡತಿ ಮೊದಲಾದ ಹೊರ ಶತ್ರುಗಳು ಪ್ರಮತ್ತನೂ ಹಣವಂತನೂ ಆಗಿರುವ ಜೀವನನ್ನು ಮಧುರ ಮಾತುಗಳಿಂದ ಮೋಹಗೊಳಿಸಿ ಕುರಿಯನ್ನು ತೋಳವು ಹೊತ್ತುಕೊಂಡು ಹೋಗುವಂತೆ ಅಪಹರಿಸುತ್ತಿರುವರು. ಎಲ್ಲೆಲ್ಲಿ ನೋಡಿದರೂ ಬೆಳೆದಿರುವ ಬಳ್ಳಿಗಳು ಪೊದೆಗಳಂತೆ ಇರುವ ಆಸೆಗಳಿಂದಲೂ ಶ್ರೌತಸ್ಮಾರ್ತಕರ್ಮಗಳಿಂದಲೂ ತುಂಬಿದ ಗೃಹಸ್ಥಾಶ್ರಮದಲ್ಲಿ ಇದ್ದುಕೊಂಡು ಸಹಿಸಲಾಗದಂತೆ ಕಚ್ಚುವ ಸೊಳ್ಳೆಗಳಂತಿರುವ ರಾಜಭಟರು, ಕಳ್ಳರು ಮೊದಲಾದವರು ಧನಧಾನ್ಯಗಳನ್ನು ಕಿತ್ತುಕೊಳ್ಳುವುದರಿಂದ ಆ ಜೀವನು ಬಾಧೆಗೀಡಾಗುವನು. ಈ ಸಂಸಾರದಲ್ಲಿ ಒಂದೊಂದು ಸಲ ಕರ್ಮದ ಫಲವಾಗಿ ಬಂದ ಮನುಷ್ಯ ಮೊದಲಾದ

ಶರೀರಗಳನ್ನು ಕಂಡು ಅದರಲ್ಲೂ ಪ್ರವೇಶಿಸಿ ಕರ್ಮ ಫಲವನ್ನು ಅನುಭವಿಸುವನು. ಒಂದೊಂದು ಕಡೆ ಪ್ರಾಣವನ್ನೇ ಅಪಹರಿಸುವ ಕೊಳ್ಳಿ ದೆವ್ವದಂತಿರುವ ಶಬ್ದ ಮೊದಲಾದ ವಿಷಯಗಳನ್ನು ಕಾಣುವನು. ತಾನಿರುವ ಸ್ಥಳಕ್ಕಿಂತ ಹೊರಗಿರುವ ದ್ರವ್ಯದಲ್ಲಿ ತನ್ನ ಹಣವೆಂಬ ಭಾವನೆಯಿಂದ ಅತ್ತ ಇತ್ತ ಓಡುತ್ತಲೇ ಇರುವನು. ಒಂದೊಂದೆಡೆ ಸುಂಟರಗಾಳಿಯಂತಿರುವ ಹೆಂಗಸರ ನಿಮಿತ್ತವಾಗಿ ರಾಗ ಮೊದಲಾದ ಧೂಳಿನಿಂದ ಮುಚ್ಚಿಹೋದ ಕ್ಷುದ್ರ ಫಲಪ್ರದ ದೇವತೆಗಳನ್ನು ವಿವೇಕ ಶೂನ್ಯನಾಗಿ ಯಥಾರ್ಥವಾಗಿ ತಿಳಿಯದೇ ಹೋಗುವನು. ದಟ್ಟವಾದ ಕಾಡಿನಲ್ಲಿ ಶಬ್ದ ಮಾತ್ರ ಕೇಳಿಬರುವ ಕೀಟಗಳ ಧ್ವನಿಗಳಂತೆ ರಾಜ, ಚೋರಾದಿಗಳ ಕಠಿಣ ಶಬ್ದಗಳಿಂದ ಕಿವಿಗಳು ತುಂಬಿ ಎದುರಿಗೆ ಬಯ್ಯುವ ದುರ್ಜನರ ಬೆದರಿಕೆಗಳಿಂದ ಪರಿಖಿನ್ನವಾದ ಮನಸ್ಸುಳ್ಳವನಾಗುವನು. ವಿಷಯಾಭಿಲಾಷೆಯಿಂದ ನೊಂದು ಒಂದೊಂದು ಸಲ ಜಾಲಿಯ ಮರದಂತೆ ದೃಷ್ಟಾದೃಷ್ಟ ಫಲವಿಲ್ಲದ ಪಾಖಂಡ ಮತಗಳನ್ನು ಹೊಂದುವನು. ಬಿಸಿಲು ಕುದುರೆಯಂತಿರುವ, ತೃಪ್ತಿ ಕೊಡದ ಶಬ್ದ ಮೊದಲಾದ ವಿಷಯಗಳಿಗಾಗಿ ಓಡುವನು.

ಒಂದೆಡೆ ನೀರಿಲ್ಲದ ನದಿಗಳನ್ನು ಅಧರಾಮೃತವಿಲ್ಲದ ಜಾರಣಿಯರನ್ನು ಕುರಿತು ಹೋಗುವನು. ಅಶನ ವಸನಗಳಿಲ್ಲದೆ ಪರಸ್ಪರ ಹಣಗಳನ್ನು ಅಪಹರಿಸುವುದೂ ಉಂಟು. ಕಾಡುಗಿಚ್ಚಿನಂತಿರುವ ಮನೆಯನ್ನು ಹೊಂದಿ ದುಃಖಾಗ್ನಿ ತಪ್ತನಾಗಿ ನಿರ್ವಿಣ್ಣನಾಗುವನು. ಯಕ್ಷರಂತೆ ಪ್ರಬಲಾರಾದ ರಾಜ, ಅಮಾತ್ಯ ಮೊದಲಾದವರು ಬಾಹ್ಯ ಪ್ರಾಣವೆನಿಸಿದ ಧನವನ್ನು ಕಸಿದುಕೊಂಡು ಹೋಗಲು ಪ್ರಾಣ ಹೋದವನಂತಿರುವನು. ಒಂದೆಡೆ ಇತರರು ತನ್ನ ಆಸ್ತಿಯನ್ನು ಅಪಹರಿಸಲು ಜಿಗುಪ್ಸೆಗೊಂಡು ಆ ಊರನ್ನೇ ಬಿಟ್ಟು ಹೊರಡಬೇಕೆಂದು ಯೋಚಿಸಿ ದುಃಖಿಸುತ್ತ ಮೋಹಗೊಂಡು ಕಷ್ಟಕ್ಕೀಡಾಗುವನು. ತನ್ನ ಕರ್ಮದ ಫಲವಾದ ಒಂದೊಂದು ಸಲ ಸ್ವರ್ಗಾದಿ ಲೋಕಗಳನ್ನು ಪ್ರವೇಶಿಸಿ ಸುಖಿಯಂತೆ ಆ ಕರ್ಮ ಮುಗಿಯುವವರೆಗೂ ಸಂತೋಷ ಪಡುವನು. ಹೀಗೆಯೇ ಸಂಸಾರದಲ್ಲಿ ತೊಳಲಾಡುತ್ತ ಒಂದೊಂದು ಸಲ ಮುಳ್ಳು, ಕಲ್ಲು ಚುಚ್ಚಿದ ಕಾಲಿನವನಂತೆ ಕರ್ಮ ಮಾರ್ಗದಲ್ಲಿ ಮುಂದುವರೆಯಲಾಗದೆ ತನಗೆ ನಿಲುಕದ ನಿವೃತ್ತಿ ಮಾರ್ಗವನ್ನು ಹೊಂದಬಯಸಿ ಹೊಂದಲಾಗದೇ ಮನಸ್ಸು ತಗೆಯುವನು. ಮೇಲಿಂದ ಮೇಲೆ ಜಠರಾಗ್ನಿಯು ಅವನನ್ನು ದುಃಖ ಪಡಿಸುವುದು. ಕುಟುಂಬಿಯಾದ ಈ ಜೀವನು ತನ್ನ




ಕುಟುಂಬದವರ ಮೇಲೆಯೇ ಸಿಟ್ಟು ಮಾಡುವನು. ಕಾಲವೆಂಬ ಅಜಗರ ಸರ್ಪವು ಇವನನ್ನು ನುಂಗುತ್ತಿದ್ದರೂ ಅವನಿಗೆ ಅದರ ಪರಿವೇ ಇರುವುದಿಲ್ಲ. ಒಂದು ಸಲ ಜ್ಞಾನವಿಲ್ಲದೆ ಕಗ್ಗತಲೆಯಲ್ಲಿ ಹಿಂಬದಿಯಿಂದ ಹೊಡೆಯಲ್ಪಟ್ಟವನಾಗಿ ಹೆಣದಂತೆ ಮಲಗುವನು. ಒಂದೊಂದು ಸಲ ಮೇಲಿಂದ ಮೇಲೆ ದುಃಖ ಕೊಡುವ ದುಷ್ಟರ ಹೀಯಾಳಿಕೆಗೆ ಗುರಿಯಾಗಿ ಕುರುಡನಾಗುವನು. ನರಕದಂತೆ ದುಃಖಕಾರಕ ಅಂಧ ಕೂಪಗಳಲ್ಲಿ ಬೀಳುವನು ಅಂದರೆ ಯೋನಿಗಳಲ್ಲಿ ಜನಿಸುವನು. ಒಮ್ಮೊಮ್ಮೆ ಪರಸ್ತ್ರೀಯರಿಂದ ದೊರೆಯುವ ಅಲ್ಪಾನಂದಗಳನ್ನು ಹುಡುಕಿಕೊಂಡು ಹೋಗುವನು. ಆಗ ಜೇನುನೊಣದಂತಿರುವ ಧನವನಿತಾದಿಸ್ವಾಮಿಗಳಿಂದ, ಸಮಾನಧರ್ಮರಾದ ಉಪಪತಿಗಳಿಂದ ತಾಡಿತನಾಗಿ ಅಪಮಾನಕ್ಕೊಳಗಾಗುವನು. ಅಲ್ಲಿಯೂ ಅತಿಪ್ರಯಾಸದಿಂದ ಸಂಪಾದಿಸಿದ ಹಣವನ್ನು ಬಲಾತ್ಕಾರದಿಂದ ರಾಜಾದಿಗಳು ಕಸಿದುಕೊಳ್ಳುವರು. ಇತರ ಉಪಪತಿಗಳು ಇವನಿಂದ ಆ ವ್ಯಭಿಚಾರಿಸ್ತ್ರೀಯರನ್ನು ಅಪಹರಿಸಿಕೊಂಡು ಹೋಗುವರು. ಮತ್ತೊಮ್ಮೆ ಛಳಿ, ಬಿಸಿಲು, ಮಳೆ, ಗಾಳಿಗಳಿಗೆ ಪರಿಹಾರವನ್ನು ಮಾಡಿಕೊಳ್ಳಲಾಗದೆ ಅತ್ಯಂತ ಚಿಂತೆಗೀಡಾಗುವನು. ಪರಸ್ಪರ ವ್ಯಾಪಾರದಲ್ಲಿ ತೊಡಗಿ ಅಲ್ಪಸ್ವಲ್ಪ ಪದಾರ್ಥಗಳನ್ನು ಕೊಂಡುಕೊಳ್ಳುವನು. ಕೆಲವು ವೇಳೆ ಮುಂದೆ ಹಣವನ್ನು ಕೊಡುತ್ತೇನೆ ಎಂದು ಹೇಳಿ ಹೆಚ್ಚು ಪದಾರ್ಥಗಳನ್ನು ಪಡೆಯುವುದೂ ಉಂಟು. ಒಮ್ಮೊಮ್ಮೆ ವ್ಯವಹಾರದಲ್ಲಿ ಹಣವನ್ನು ಕಳೆದುಕೊಂಡು ಹಾಸಿಗೆ, ಕಂಬಳಿ, ಮನೆ ಮತ್ತು ವಾಹನಗಳಿಲ್ಲದವನಾಗುವನು. ತನಗೆ ಬೇಕಾದ ವಸ್ತುಗಳಿಗಾಗಿ ಇತರರನ್ನು ಯಾಚಿಸುವನು. ಅವರು ಕೊಡದೇಹೋದಾಗ ಅವರ ಪದಾರ್ಥಗಳನ್ನು ಕಳ್ಳತನದಿಂದ ಹೊಂದಬಯಸಿ ಸಿಕ್ಕಿಬಿದ್ದು ಹೊಡೆತಕ್ಕೆ, ಬಂಧನಕ್ಕೆ ಗುರಿಯಾಗುವನು. ಒಂದೊಂದು ಸಲ ಕೋಮಲೆಯರ ಭುಜಲತೆಯನ್ನೇ ಆಶ್ರಯಿಸಿ ಅವರ ವಿಷಯದಲ್ಲಿ ಅತ್ಯಂತ ಆಸಕ್ತನಾಗುವನು. ಉತ್ತಮ ವಂಶದಲ್ಲಿ ಹುಟ್ಟಿದ್ದರೂ ಹೀಗೆ ವಿಷಯಾಸಕ್ತನಾಗುವನು. ತಾಯಂದಿರನ್ನು ಆಶ್ರಯಿಸಿದ ಮಕ್ಕಳುಗಳ ಅವ್ಯಕ್ತ ಮಧುರ ಮಾತುಗಳಿಗೆ ಮರುಳಾಗಿ ಅವರ ರಕ್ಷಣೆಯಲ್ಲಿಯೇ ತೊಡಗಿ ಮೋಕ್ಷಕ್ಕೆ ವಿಮುಖನಾಗುವನು. ಒಮ್ಮೊಮ್ಮೆ ಕಾಲಚಕ್ರಕ್ಕೆ ಹೆದರಿ ಗಣಪತಿ, ಯಕ್ಷ, ಕಾಳಿ ಮೊದಲಾದ ದೇವತೆಗಳನ್ನು ಆರಾಧಿಸುವನು. ಅವರಿಂದ ಇಷ್ಟಾರ್ಥವನ್ನು ಪಡಯದೇ ವಂಚಿತನಾಗಿ ಬ್ರಾಹ್ಮಣ ಧರ್ಮವನ್ನು ಆಶ್ರಯಿಸುವನು. ಅದೂ ಅವನಿಗೆ ರುಚಿಸುವುದಿಲ್ಲ. ಹಿಂಸೆಯಿಂದಲೇ ಆನಂದಿಸುವ ಶೂದ್ರವೃತ್ತಿಯನ್ನು

ಆಶ್ರಯಿಸಿ ಜೀವಿಸುವನು. ಕೋತಿಯಂತೆ ಶೂದ್ರಜಾತಿಯ ಮೈಥುನಾದಿ ಕ್ರೀಡೆಗಳಲ್ಲಿ ಇಂದ್ರಿಯ ತೃಪ್ತಿಯನ್ನು ಪಡೆದು ಸ್ತ್ರೀಪುರುಷರ ಪರಸ್ಪರ ನಿರೀಕ್ಷಣೆಯ ಭರದಲ್ಲಿ ತನ್ನ ಜೀವಿತದ ಅವಧಿಯನ್ನೇ ಮರೆಯುವನು. ಐಹಿಕಫಲಭೋಗ ಸ್ಥಾನಗಳಾದ ಮನೆಗಳಲ್ಲಿ ಕ್ರೀಡೆ ಮಾಡುತ್ತ ಮಕ್ಕಳು ಹೆಂಡತಿಯರಲ್ಲಿ ಪ್ರೀತಿಯುತನಾಗಿ ಮೈಥುನ ಕ್ರಿಯೆಯಿಂದ ಶೋಚನೀಯ ಸ್ಥಿತಿಗೆ ಬಂದು ಪರಾಧೀನನಾಗುವನು. ಹೀಗೆ ಸಂಸಾರಾಡವಿಯಲ್ಲಿ ಸಂಚರಿಸುತ್ತಲೇ ಇರುವನು. ಅವನಿಗೆ ಶ್ರೀಹರಿಯ ತತ್ತ್ವದ ಪರಿವೆಯೇ ಇರುವುದಿಲ್ಲ. ಬೆಟ್ಟದ ಗುಹೆಯಂತೆ ಭೀಕರವಾದ ನರಕದಲ್ಲಿ ಬೀಳುವನು. ಪೂರ್ವಜನ್ಮಾರ್ಜಿತ ಪುಣ್ಯಪಾಪಕರ್ಮವೆಂಬ ಬಳ್ಳಿಯನ್ನು ಆಶ್ರಯಿಸಿ ಮೃತ್ಯುವಿಗೆ ಹೆದರಿ ಜೀವಿಸುವನು. ದುಃಖವನ್ನು ಅನುಭವಿಸಿ ಅತಿಪ್ರಯಾಸದಿಂದ ನರಕದಿಂದ ಹೊರಬರುವನು. ಒಮ್ಮೊಮ್ಮೆ ಮತ್ತೆ ಆಸ್ತಿಕ್ಯ ಬುದ್ಧಿಯಿಂದ ಸದಾಚಾರರತನಾಗುವನು. ಜೀವನಿಗೆ ಇರುವ ಅನಾದಿಯಾದ ಲಿಂಗಶರೀರದ ನಿಮಿತ್ತವಾಗಿ ಶ್ರೀಹರಿಯು ಇವನನ್ನು ಸಂಸಾರಕ್ಕೆ ಹಾಕಿ ಜನ್ಮಗಳನ್ನು ಎತ್ತುವಂತೆ ಮಾಡುವನು. ಎಷ್ಟು ಜನ್ಮಗಳೆತ್ತಿದರೂ ಅವನಿಗೆ ಶ್ರೀಹರಿಯ ಜ್ಞಾನವಾಗುತ್ತಿಲ್ಲ. ಪರಸ್ಪರ ಕುಟುಂಬ ರಕ್ಷಣೆಯಲ್ಲಿಯೇ ಇದ್ದು ಸಂಸಾರದಲ್ಲಿ ವಿಹರಿಸುವನು. ಬಹುಕಷ್ಟಪಟ್ಟು ಸಂಪಾದಿಸಿದ ಹಣವನ್ನು ಕಳೆದುಕೊಂಡು ದ್ವೇಷ ಮಾಡುತ್ತ ವಿಪತ್ತಿಗೀಡಾಗುವನು. ಹೀಗೆ ಜೀವಸಮುದಾಯವು ಜನ್ಮಜನ್ಮಗಳಲ್ಲಿ ಸತ್ತುಹೋದ ತಂದೆ ಮೊದಲಾದವರನ್ನೂ ರೋಗಾದಿಗಳಿಗೆ ಆಶ್ರಯಗಳಾದ ದೇಹಗಳನ್ನೂ ಬಿಟ್ಟು ಹೊಸ ತಂದೆ ತಾಯಿ ಮೊದಲಾದವರ ನೂತನ ದೇಹವನ್ನೂ ಹೊಂದುವನು. ಹುಟ್ಟುಸಾವುಗಳು ಅದಕ್ಕೆ ತಪ್ಪುವುದೇ ಇಲ್ಲ. ಹೀಗಾಗಿ ಸಂಸಾರದ ಕೊನೆಯಾದ ಶ್ರೀಹರಿಯನ್ನು ಯಾವ ಜೀವನೂ ಹೊಂದುತ್ತಿಲ್ಲ. ಆದರೆ ವ್ಯರ್ಥವಾಗಿ ಹಿಂಸೆಯಲ್ಲಿ ತೊಡಗದೆ ಯೋಗ್ಯತೆಗೆ ಅನುಗುಣವಾಗಿ ವಿಷ್ಣುವೈಷ್ಣವರ ದ್ವೇಷವಿಲ್ಲದ ಜೀವನು ಶ್ರೀಹರಿಯನ್ನು ಹೊಂದುವನು. ಹರಿಭಕ್ತರಲ್ಲದ ಮನಸ್ವಿಗಳು, ದಿಗ್ವಿಜಯ ಮಾಡಿದವರೂ, ನನ್ನದೇ ಈ ಭೂಮಿ ಎಂದು ಪರಸ್ಪರ ಶತ್ರುತನ ಸಾಧಿಸಿದವರೂ ಆದ ಪರಾಕ್ರಮಿಗಳು ಯುದ್ಧದಲ್ಲಿ ಸಾಯುವುದೇ ಹೊರತು ಶ್ರೀಹರಿಯನ್ನು ಹೊಂದಲಾರರು.

ರಹೂಗಣ! ನೀನು ಹಿಂಸೆಯನ್ನು ಬಿಡು. ವಿಷ್ಣು ವೈಷ್ಣವ ಮೈತ್ರಿಯನ್ನು ಹೊಂದು. ವಿಷಯಗಳಲ್ಲಿ ಆಸಕ್ತನಾಗಬೇಡ. ಶ್ರೀಹರಿಯನ್ನು ಆರಾಧಿಸು. ನಿನ್ನ ಜ್ಞಾನ ಸಮರ್ಥವಾಗುವುದು. ಈ ಹರಿತವಾದ ಜ್ಞಾನಖಡ್ಗದಿಂದ ಸಂಸಾರ ಮಾರ್ಗವನ್ನು




ಕೊನೆಗಾಣಿಸುವೆ. ಈ ಸಂಸಾರನದಿಯ ಆಚೆಯ ದಡವೇ ಶ್ರೀಹರಿ. ಅವನನ್ನು ಹೊಂದುವುದಕ್ಕಾಗಿ ಈ ನದಿಯನ್ನು ದಾಟು.

ರಹೂಗಣ ಹೇಳುವನು. ಆಹಾ ಎಲ್ಲ ಜನ್ಮಗಳಲ್ಲಿಯೂ ಶ್ರೇಯಃಸಾಧನವಾದುದು ಮನುಷ್ಯ ಜನ್ಮವೇ. ಸ್ವರ್ಗದಲ್ಲಿಯೂ ಭೋಗ ಮಾಡಲು ಜನ್ಮಗಳು ಬರುವವು. ಅವುಗಳಿಂದ ಪ್ರಯೋಜನವಿಲ್ಲ. ಅವುಗಳಲ್ಲಿ ತಮ್ಮಂತಹ ಶ್ರೀಹರಿಯ ಕೀರ್ತಿಯಲ್ಲಿ ಆಸಕ್ತವಾದ ಮನಸ್ಸುಳ್ಳ ಭಗವದ್ಭಕ್ತರ ಸಮಾಗಮವು ಮೇಲಿಂದ ಮೇಲೆ ಆಗುವುದಿಲ್ಲ. ತಮ್ಮನ್ನು ಸೇವಿಸಿ ತಮ್ಮ ಪಾದಾರವಿಂದ ಧೂಳನ್ನು ಪಡೆದವರಿಗೆ ಪಾಪಗಳು ನಾಶವಾಗುವವು. ಶ್ರೀಹರಿಯಲ್ಲಿ ಶುದ್ಧವಾದ ಭಕ್ತಿಯು ಉಂಟಾಗುವುದು. ಇದು ಆಶ್ಚರ್ಯಕರವೇನಲ್ಲ. ನನಗೆ ಅನುಭವಕ್ಕೆ ಬಂದಿದೆ. ತಮ್ಮ ಈ ಒಂದು ಮುಹೂರ್ತಕಾಲದ ಸಹವಾಸದಿಂದಲೇ ನನ್ನ ಅವಿವೇಕವು, ಜೀವರು ಸ್ವತಂತ್ರರೆಂಬ ತಪ್ಪು ತಿಳುವಳಿಕೆಯು ಹೋಯಿತು. ಶ್ರಮ ಮೊದಲಾದವು ಆಗುವುದರಿಂದ ಹೊತ್ತುಕೊಳ್ಳುವುದೇ ಮೊದಲಾದ ಕ್ರಿಯೆಗಳ ಕರ್ತಾರರು ಜೀವರೇ ಮುಖ್ಯವಾಗಿ ಆಗಿರಬೇಕು ಎಂಭ ದುಷ್ಟಯುಕ್ತಿಯಿಂದ ಅದು ರೂಢಮೂಲವಾಗಿತ್ತು. ನನ್ನ ಹಣದಿಂದ ಜೀವಿಸುವ ಇವರನ್ನು ನಾನು ಶಿಕ್ಷಿಸಬಹುದು ಎಂಬ ಕುಯುಕ್ತಿಯಿಂದ ನಾನೇ ಶಿಕ್ಷಕನೆಂಬ ಅಜ್ಞಾನವೂ ನನಗೆ ಬಂದಿತ್ತು ಅದೂ ಹೋಯಿತು. ತಮ್ಮನ್ನು ತಿರಸ್ಕರಿಸಿದ ನನ್ನ ಅಪರಾಧವನ್ನು ಕ್ಷಮಿಸಿ. ಭಗವದ್ಭಕ್ತರಾದ ಹಿರಿಯರಿಗೂ, ಶಿಶುಗಳಿಗೂ, ಯುವಕರಿಗೂ, ವಟುಪರ್ಯಂತರಾದ ಎಲ್ಲರಿಗೂ ನಮಸ್ಕಾರ. ಅವಧೂತವೇಷದಲ್ಲಿ ಭೂಮಿಯಲ್ಲಿ ಸಂಚರಿಸುವ ಸಮಸ್ತ ಬ್ರಾಹ್ಮಣರಿಗೂ ನಮಸ್ಕಾರ. ಪರಿವೆ ಇಲ್ಲದೆ ಅಂತಹವರನ್ನು ತಿರಸ್ಕರಿಸಿದ ರಾಜರಿಗೂ ವಿಶೇಷವಾಗಿ ನನಗೂ ಒಳ್ಳೆಯದಾಗಲಿ.

ಶುಕಾಚಾರ್ಯರು ಹೇಳುವರು. ಉತ್ತರಾಕುವರನೇ! ಆ ಬ್ರಹ್ಮ ಋಷಿಗಳ ಪುತ್ರರಾದ ಭರತರು ಅಸಂಖ್ಯಾತ ಮಹಿಮೋಪೇತರು. ಅವರು ಕರುಣೆಯಿಂದ ಮೇಲೆ ಹೇಳಿದಂತೆ ಶ್ರೀಹರಿಯ ನಿರ್ದೋಷಸ್ವರೂಪವನ್ನು ಸಿಂಧುದೇಶಾಧಿಪತಿಯಾದ ರಹೂಗಣರಿಗೆ ಉಪದೇಶಿಸಿದರು. ರಾಜರು ಆದರದಿಂದ ಅವರಿಗೆ ನಮಸ್ಕಾರ ಮಾಡಿದರು. ತುಂಬು ಸಮುದ್ರದಲ್ಲಿ ಅಲೆಗಳು ಇಲ್ಲದಿರುವಂತೆ ಅವರ ಇಂದ್ರಿಯಗಳು, ಮನಸ್ಸು ಶಾಂತವಾಗಿದ್ದವು. ಶಾಂತಮನಸ್ಕರಾದ ಅವರು ಈ ಭೂಮಿಯಲ್ಲಿ ಸಂಚರಿಸುತ್ತಿದ್ದರು. ಸೌವೀರದೇಶಾಧಿಪತಿ ರಹೂಗಣರೂ ಕೂಡ

ಸಜ್ಜನರಾದ ಭರತರಿಂದ ಶ್ರೀಹರಿಯ ಸ್ವಾತಂತ್ರ್ಯರೂಪವಾದ ನಿಜಸ್ವರೂಪವನ್ನು ಅರಿತು ತಮ್ಮ ಅಜ್ಞಾನದಿಂದ ತಿಳಿದಿದ್ದ ದೇಹವೇ ನಾನು, ನನ್ನದೀದೇಹವೆಂಬ ಅಭಿಮಾನವನ್ನು ಸಂಪೂರ್ಣವಾಗಿ ಬಿಟ್ಟರು. ರಾಜನೇ! ಭಗವದ್ಭಕ್ತರ ಪ್ರಭಾವವೇ ಹೀಗಿರುವಾಗ ಶ್ರೀಹರಿಯ ಸಾಮರ್ಥ್ಯವನ್ನು ಹೇಳುವುದೇನು? ಆ ಭರತರ ಮಹಿಮೆಯನ್ನು ವರ್ಣಿಸುವ ಶ್ಲೋಕಗಳನ್ನು ಹಿರಿಯರು ಹೇಳುತ್ತಾರೆ. ಋಷಭದೇವನ ಮಕ್ಕಳಾದ ಭರತರ ಮಹಿಮೆಯು ಮನಸ್ಸಿಗೂ ಮೀರಿದ್ದು. ಅವರ ಮಾರ್ಗವು ಲೋಕಶಾಸ್ತ್ರಗಳೆರಡಕ್ಕೂ ಅನುಕೂಲವಾದುದು. ಕಾರ್ತವೀರ್ಯ, ಪೃಥು, ಪ್ರಿಯವ್ರತ ಮುಂತಾದ ಕರ್ಮಜದೇವತಾಸಮಾನರಾದ ರಾಜರನ್ನು ಬಿಟ್ಟು ಮತ್ತೆ ಯಾವರಾಜನೂ ಅವರ ಸಮಾನತೆಯನ್ನು ಹೊಂದಲಾರ. ನೊಣವು ಗರುಡನಿಗೆ ಸಮಾನವಾದೀತೇ! ಸಾಮಾನ್ಯರಿಂದ ಬಿಡಲಾಗದ ಹೆಂಡತಿಮಕ್ಕಳನ್ನು ಯುವಕರಾದ ಅವರು ಬಿಟ್ಟರು. ಹೃದಯಸ್ಪರ್ಶಿಯಾದ ಶತ್ರುರಹಿತರಾಜ್ಯವನ್ನೂ ಮಲದಂತೆ ದೂರ ಮಾಡಿದರು.

ಉತ್ತಮ ಶ್ಲೋಕನಾದ ಶ್ರೀಹರಿಯಲ್ಲಿಯೇ ಆಸಕ್ತರಾಗಿದ್ದರು. ಆ ರಾಜರು ಭೂಮಿ, ಮಕ್ಕಳು, ಸ್ವಜನರು, ಹಣ, ಹೆಂಡತಿಯರನ್ನು ಕರುಣಾವಲೋಕನದಿಂದ ಕೂಡಿದ ದೇವತೆಗಳಿಂದಲೂ ಶ್ಲಾಘನೀಯವಾದ ಸಂಪತ್ತನ್ನೂ ಇಚ್ಛಿಸದೆಯೇ ಇದ್ದರು. ಭಗವದ್ಭಕ್ತರಿಗೆ ಉಚಿತವಾದ ವೈರಾಗ್ಯವಿದು. ಶ್ರೀಹರಿಯ ಸೇವಾಸಕ್ತ ಚಿತ್ತರಾದ ಮಹಾಂತರಿಗೆ ಹುಟ್ಟುಸಾವುಗಳನ್ನು ತಪ್ಪಿಸುವ ಮೋಕ್ಷವೂ ಆದರಣೀಯವಲ್ಲ. ಅವರು ಮೃಗದ ಜನ್ಮ ಸ್ವೀಕರಿಸಿದರೂ ''ಪೂಜನೀಯನೂ, ಧರ್ಮನಿಯಾಮಕನೂ, ವಿಹಿತ ಕರ್ಮಕುಶಲತೆಯನ್ನು ಕೊಡುವವನೂ, ಕರ್ಮೋಪಾಯಜ್ಞನೂ, ಉತ್ತಮಜ್ಞಾನಸ್ವರೂಪನೂ, ಸ್ವಾಭಾವಿಕವಾಗಿಯೇ ಸರ್ವೇಶ್ವರನೂ, ಲಕ್ಷ್ಮೀಪತಿಯೂ ಆದ ನಾರಾಯಣನಿಗೆ, ಶ್ರೀಹರಿಗೆ ನಮಸ್ಕಾರ'' ಎಂದು ಭಕ್ತಿಯಿಂದ ಗಾನ ಮಾಡುತ್ತ ಆ ಮೃಗಶರೀರವನ್ನು ಬಿಟ್ಟರು. ಈ ರೀತಿ ಭರತರ ಜನ್ಮಗಳ ಚರಿತ್ರೆ, ರಾಜರ್ಷಿಗಳಾದ ಅವರ ಗುಣಕರ್ಮಗಳನ್ನು ಶುದ್ಧವಾದವುಗಳೆಂದು ಭಗವದ್ಭಕ್ತರೆಲ್ಲರೂ ಪ್ರಶಂಸಿಸುತ್ತಾರೆ. ಇದು ಕ್ಷೇಮಕರ, ಆಯುಷ್ಯಕರ, ಧನ್ಯತಾಪ್ರದ, ಕೀರ್ತಿಕರ, ಸ್ವರ್ಗಪ್ರದ, ಮೋಕ್ಷಕ್ಕೂ ಪ್ರಯೋಜಕ. ಇದನ್ನು ಕೇಳುವವನು, ಹೇಳುವವನು, ಅಭಿನಂದಿಸುವವನು ಶ್ರೀಹರಿಯಿಂದಲೇ ಎಲ್ಲ ಅಭ್ಯುದಯಗಳನ್ನೂ ಆಶಿಸುವನು. (ಶ್ರೀಹರಿಯೇ ಸ್ವತಂತ್ರನೆಂದು ತಿಳಿಯುವನು. ಅಸ್ವತಂತ್ರರಾದ ಇತರರಿಂದ ಏನನ್ನೂ ಅಪೇಕ್ಷಿಸುವುದಿಲ್ಲ.)

II ★★★ II

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಚತುರ್ದಶೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಬಹಳ ದುಃಖಭರಿತ ಸಂಸಾರದಲ್ಲಿ ವಿಷಯಕ ವಿರಕ್ತಿ ಹುಟ್ಟಿಸಿ ಶ್ರೀಹರಿಯಲ್ಲಿ ಭಕ್ತ್ಯತಿಶಯ ಹುಟ್ಟಿಸಲು ಪರೋಕ್ಷವಾಗಿ ಹಿಂದಿನ ಅಧ್ಯಾಯದಲ್ಲಿ ಹೇಳಿದ ಭವಾಟವಿಯನ್ನೇ ಪ್ರತಿಪಾದಿಸುವರು ಈ ಅಧ್ಯಾಯದಲ್ಲಿ.

### ಭವಾಟವಿಯ ಪುನರ್ನಿರೂಪಣೆ

ಹಿಂದಿನ ಅಧ್ಯಾಯದಲ್ಲಿ ಜಡಭರತರು ರಹೂಗಣನಿಗೆ ಹೇಳಿದ್ದು ಚೇನ್ನಾಗಿ ತಿಳಿಯಲಿಲ್ಲ ಕಾರಣ ಸ್ಪಷ್ಟವಾಗಿ ಹೇಳಿರೆಂದು ಪರೀಕ್ಷಿದ್ರಾಜರು ಶುಕಾಚಾರ್ಯರಿಗೆ ಪ್ರಾರ್ಥಿಸುವರು.

**ರಾಜೋವಾಚ -**

**ಯೋ ಹ ವಾ ಇಹ ಬಹುವಿದಾ ಮಹಾಭಾಗವತ ತ್ವಯಾಽಭಿಹಿತಃ ಪಾರೋಕ್ಷ್ಯೇಣ ವಚಸಾ ಜೀವಲೋಕಸ್ಯ ಭವಾಧ್ವಾ ಸ ಹ್ಯಾರ್ಯಮನೀಷಯಾ ಕಲ್ಪಿತವಿಷಯೋ ನಾಂಜಸಾಽವ್ಯುತ್ಪನ್ನಲೋಕಸಮಧಿಗತಃ ಅಥ ತದೇವ ದುರವಗಮಂ ಸಮವೇತಾನು- ಕೂಲ್ಯೇನ ನಿರ್ದಿಶ್ಯತಾಮ್ ॥೧॥**

**ಹೇ ಮಹಾಭಾಗವತ** ಎಲೋ ಭಗವದ್ಭಕ್ತನೇ **ಬಹುವಿದಾ** ಸರ್ವಜ್ಞನಾದ **ತ್ವಯಾ** ನಿನ್ನಿಂದ **ಪಾರೋಕ್ಷೇಣ ವಚಸಾ** ವ್ಯಾಪಾರಿಯ ಮಾರ್ಗವನ್ನು ಹೇಳುವ ನೆಪದಿಂದ **ಯಃ** ಯಾವ **ಜೀವಲೋಕಸ್ಯ** ಜನರ **ಭವಾಧ್ವಾ** ಸಂಸಾರ ಮಾರ್ಗವು

**ಅಭಿಹಿತಃ** ಹೇಳಲ್ಪಟ್ಟಿತು **ಸಃ ಹಿ** ಅದಾದರೂ **ಆರ್ಯಮನೀಷಯಾ ಕಲ್ಪಿತವಿಷಯಃ** ಜ್ಞಾನಿಗಳ, ಪಂಡಿತರ ಬುದ್ಧಿಯಿಂದ ನಿರ್ಣಿತ ಅರ್ಥ ಉಳ್ಳದ್ದು ಆದ್ದರಿಂದ **ಅವ್ಯುತ್ಪನ್ನಸ್ಯ** ಶಬ್ದದಿಂದ ವ್ಯಂಗ್ಯವಾಗುವ ವಿಶಿಷ್ಟ ಅರ್ಥವನ್ನು ಅರಿಯಲು ಅಸಮರ್ಥರಾದ ಜನರಿಗೆ **ಅಂಜಸಾ** ಸಾಕ್ಷಾತ್ತಾಗಿ ಅಂದರೆ ವ್ಯಾಖ್ಯಾನವಿಲ್ಲದೆ **ನ ಸಮಧಿಗತಃ** ಚೆನ್ನಾಗಿ ತಿಳಿಯಲಿಲ್ಲ (ಬಾರದು) **ಅಥ** ಆದ್ದರಿಂದ **ತದೇವ** ಅದನ್ನೇ **ದುರವಗಮಂ** ಕಷ್ಟದಿಂದ ತಿಳಿಯುವುದನ್ನು **ಸಮವೇತಾನುಕೂಲ್ಯೇನ ನಿರ್ದಿಶ್ಯತಾಂ** ಈ ದೃಷ್ಟಾಂತದಿಂದ ಕೂಡಿದ ಯಾವ ದಾರ್ಷ್ಟಾಂತಿಕವಿದೆಯೋ ಅದನ್ನು ನಮಗೆ ತಿಳಿಯುವಂತೆ ಹೇಳಿರಿ. ।।೧।।

**ದುರತ್ಯಯೋಽಧ್ವಾ ಅಜಯಾ ನಿವೇಶಿತಃ** ಎಂದು ಹೇಳಿದ್ದನ್ನು ವಿವರಿಸುವರು

**ಸೂತ ಉವಾಚ -**

ಇಲ್ಲಿ **ಶ್ರೀಶುಕ ಉವಾಚ** ಎಂದು ಹೇಳದೆ **ಸೂತ ಉವಾಚ** ಎಂದು ಹೇಳಿದ್ದು ಪರೀಕ್ಷಿತ್ ಶುಕ ಸಂವಾದವು ಶೌನಕ ಸೂತ ಸಂವಾದಾಂತರ್ಗತವೆಂದು ನೆನಪಿಸಲು.

**ಸ ಹೋವಾಚ**

**ಸಃ** ಶುಕಾಚಾರ್ಯರು **ಉವಾಚ** ಪರೀಕ್ಷಿತನ ಪ್ರಶ್ನೆಗೆ ಉತ್ತರವಾಗಿ ಹಿಂದೆ ಹೇಳಿದ್ದರ ವಿವರಣರೂಪವಾದ ಮಾತನ್ನು ಹೇಳಿದರು ಎಂದು ಇದು ಸೂತರ ಮಾತು.

**ಯ ಏಷ ದೇಹಾತ್ಮಮಾನಿನಾಂ ಸತ್ತ್ವಾದಿಗುಣವಿಶೇಷವಿಕಲ್ಪಿತಕುಶಲಾಕುಶಲ ಸಮವಹಾರವಿನಿರ್ಮಿತವಿವಿಧದೇಹಾವಲಿಭಿಃ ವಿಯೋಗಸಂಯೋಗಾ-ದ್ಯನಾದಿಸಂಸಾರಾನು ಭವಸ್ಯ ದ್ವಾರಭೂತೇನ ಷಡಿಂದ್ರಿಯವರ್ಗೇಣ ತಸ್ಮಿನ್ ದುರ್ಗಾಧ್ವವದಸುಗಮೇಽಧ್ವ ನ್ಯಾಪತಿತ ಈಶ್ವರಸ್ಯ ಭಗವತೋ ವಿಷ್ಣೋರ್ವಶವರ್ತಿನ್ಯಾ ಮಾಯಯಾ ಜೀವಲೋಕೋಽಯಂ ಯಥಾ ವಣಿಕ್ ಸಾರ್ಥೋಽರ್ಥಪರಃ ಸ್ವದೇಹನಿಷ್ಪಾದಿತಕರ್ಮಾನುಭವನ್ ಸ್ಮಶಾನವದ-ಶಿವತಮಾಯಾಂ ಸಂಸಾರಾಟವ್ಯಾಂ ಗತೋ ನಾದ್ಯಾಪಿ ವಿಫಲಬಹುಯೋಗ-ಸಹಸ್ರಹೃತ್ತಾಪೋಪಶಮನೀಂ ಹರಿಗುರುಚರಣಾರವಿಂದಮಧುಕರಾ-ನುಪದವೀಮವರುಂಧೇ ।।೨।।**




**ಈಶ್ವರಸ್ಯ** ಸರ್ವ ನಿಯಾಮಕೋತ್ತಮನಾದ **ಭಗವತಃ** ಭಗವಚ್ಛಬ್ದವಾಚ್ಯನಾದ **ವಿಷ್ಣೋಃ** ಶ್ರೀಹರಿಯ **ವಶವರ್ತಿನ್ಯಾ** ಅಧೀನವಾದ **ಮಾಯಯಾ** ಪ್ರಕೃತಿಯಿಂದ **ದೇಹಾತ್ಮಮಾನಿನಾಂ** ದೇಹದಲ್ಲಿ ನಾನು ನನ್ನದು ಎಂಬ ಅಭಿಮಾನವುಳ್ಳವರ ಸಂಬಂಧಿ ಗಳಾದ **ಸತ್ವಾದಿಗುಣವಿಶೇಷ** ಸತ್ವರಜತಮಸ್ಸೆಂಬ ಗುಣವಿಶೇಷಗಳಿಂದ **ವಿಕಲ್ಪಿತ** ಸಾತ್ವಿಕ ರಾಜಸ ತಾಮಸಗಳೆಂದು ವಿಭಾಗಿಸಲ್ಪಟ್ಟ **ಕುಶಲ** ಪುಣ್ಯ **ಅಕುಶಲ** ಪಾಪ **ಸಮವಹಾರ** ಮಿಶ್ರಗಳಾದ ಕರ್ಮಗಳಿಂದ **ವಿನಿರ್ಮಿತ** ಸೃಷ್ಟವಾದ (ಕರ್ಮಗಳ ಫಲವಾಗಿ ಶ್ರೀಹರಿಯು ಇತ್ತ) **ವಿವಿಧದೇಹಾವಲಿಭಿಃ** ನಾನಾವಿಧ (ಅನೇಕ) ದೇಹಗಳ ಪರಂಪರೆಯ **ವಿಯೋಗ** ಬಿಡುವುದು **ಸಂಯೋಗ** ಸ್ವೀಕರಿಸುವುದು **ಆದಿ** ಮೊದಲಾದ **ಅನಾದಿಸಂಸಾರಾನುಭವಸ್ಯ** ದುಃಖಪರಂಪರೆಯ ಅನುಭವಕ್ಕೆ **ದ್ವಾರಭೂತೇನ** ಕಾರಣವಾದ **ಷಡಿಂದ್ರಿಯವರ್ಗೇಣ** ಮನಸ್ಸು ಮತ್ತು ಐದು ಜ್ಞಾನೇಂದ್ರಿಯಗಳಿಂದ **ತಸ್ಮಿನ್** ಆ **ದುರ್ಗಾಧ್ವವತ್** ದುರ್ಗಮನಾದ ಮಾರ್ಗದಂತೆ **ಅಸುಗಮೇ** ಸುಗಮವಲ್ಲದ **ಅಧ್ವನಿ** ಮಾರ್ಗದಲ್ಲಿ **ಆಪತಿತಃ** ನಿವೇಶಿತವಾದ (**ಯಃ ಏಷಃ**) **ಅಯಂ ಜೀವಲೋಕಃ** ಈ ಜೀವಸಮುದಾಯವು **ಅರ್ಥಪರಃ** ಹಣವನ್ನು ಸಂಪಾದಿಸಬೇಕೆಂಬ **ವಣಿಕ್(ಸಾರ್ಥಃ) ಯಥಾ** ವರ್ತಕರ ಗುಂಪಿನಂತೆ **ಸ್ವದೇಹನಿಷ್ಪಾದಿತಕರ್ಮ ಅನುಭವನ್** ತಮ್ಮ ತಮ್ಮ ದೇಹದಿಂದ ಮಾಡಿದ ಕರ್ಮ, ಪುಣ್ಯಪಾಪಫಲಗಳಾದ ಸುಖದುಃಖಗಳನ್ನು ಅನುಭವಿಸುತ್ತ **ಸ್ಮಶಾನವದಶಿವತಮಾಯಾಂ** ಸ್ಮಶಾನದಂತೆ ದುಃಖ ಬಹುಲವಾದ (**ಸಂಸಾರಾಟವ್ಯಾಂ**) ಸಂಸಾರಾಟವಿಯಲ್ಲಿ **ಗತಃ** ಸೇರಿದವನಾಗಿ **ವಿಫಲ** ನಿಷ್ಫಲಗಳಾದ **ಬಹುಯೋಗ** ಅನೇಕ ಉಪಾಯಗಳ ಫಲಗಳಾದ **ಸಹಸ್ರಹೃತ್ತಾಪ** ಸಾವಿರಾರು ಮನೋದುಃಖಗಳ **ಉಪಶಮನೀಂ** ನಾಶಕವಾದ ಮೋಕ್ಷಕ್ಕೆ ಸಾಧನವಾದ **ಹರಿಗುರುಚರಣಾರವಿಂದಮಧುಕರಾನುಪದವೀಂ** ಹರಿಗುರುಗಳ ಪಾದಾರವಿಂದಗಳಲ್ಲಿ ದುಂಬಿಗಳಂತಿರುವ ಸಾಧುಗಳ ಅನುಸರಣೆ ಎಂಬ ಸೇವೆಯನ್ನು **ಅದ್ಯಾಪಿ** ಇಂದಿಗೂ **ನ ಅವರುಂಧೇ** ಹೊಂದುತ್ತಿಲ್ಲ.

**ವಿ.ವಿ :-** ಈ ಭಾಗವು (೧೩-೧) ಶ್ಲೋಕದ ವಿವರಣ. **ಮಾಯಯಾ** ಎಂಬುದು **ಅಜಯಾ** ಎಂಬುದರ ಅರ್ಥ. ಪ್ರಕೃತಿಯು ಸ್ವತಂತ್ರವಲ್ಲವೆಂಬುದನ್ನು **ವಿಷ್ಣೋಃ ವಶವರ್ತಿನ್ಯಾ** ಎಂಬುದರಿಂದ ತಿಳಿಸಿರುವರು. **ದೇಹಾತ್ಮಮಾನಿನಾ** ಮುಂತಾದ ವಾಕ್ಯದಿಂದ ಮಾಯೆಯು ಹೇಗೆ ಸಂಸಾರದಲ್ಲಿ ತಳ್ಳುವುದೆಂಬುವುದನ್ನು ಹೇಳಿರುವರು. **ಸ್ವದೇಹನಿಷ್ಪಾದಿತ** ಎಂಬುದರಿಂದ **ರಜಸ್ತಮ** ಇತ್ಯಾದಿ ಭಾಗವನ್ನು

ವಿವರಿಸಿರುವರು. **ದುರತ್ಯಯೇ** ಎಂಬುದನ್ನು **ಅಸುಗಮೇ** ಎಂಬುದರಿಂದಲೂ **ಅರ್ಥಪರಃ** ಎಂಬುದಕ್ಕೆ ದಾರ್ಷ್ಟಾಂತಿಕದಲ್ಲಿ ಹೇಳಬೇಕಾದ ಅರ್ಥವನ್ನು **ಸ್ವದೇಹ** ಇತ್ಯಾದಿಗಳಿಂದಲೂ **ಅಶಿವತಮ** ಎಂಬುವುದರಿಂದ **ನ ಶರ್ಮ ವಿಂದತಿ** ಎಂಬುದರ ವಿವರಣೆಯನ್ನು ತಿಳಿಸಿರುವರು.

ಪ್ರಕೃತಿಯಿಂದ ದೇಹಾಭಿಮಾನ ಆದರಿಂದ ಸಾತ್ವಿಕ ಮೊದಲಾದ ಕರ್ಮಕರಣ, ಆದರಿಂದ ಹಿಂದಿನ ದೇಹತ್ಯಾಗ ಮುಂದಿನ ದೇಹ ಸಂಯೋಗ ಉಂಟಾಗಿ ಷಡಿಂದ್ರಿಯವರ್ಗದಿಂದ ಮತ್ತೆ ದುಃಖಾನುಭವರೂಪ ಸಂಸಾರಾಟವಿಪ್ರಾಪ್ತಿ. ಅಲ್ಲಿ ಮತ್ತೆ ಮೇಲೆ ಹೇಳಿದಂತೆ ಇಂದ್ರಿಯವರ್ಗದಿಂದ ಕರ್ಮ ಮಾಡುವುದು ಎಂಬ ಮಾರ್ಗದಲ್ಲಿ ನಿವೇಶ ಎಂದು ವಿವರಿಸಿರುವರು ಎಂದು ತಿಳಿಯಬೇಕು.

ಅಡವಿ ಎರಡು ವಿಧ. ಒಂದು ಮುಳ್ಳು ಕಲ್ಲುಗಳಿಂದ ಕೂಡಿದ್ದು. ಅದು ದುಃಖದಾಯಕ. ಸುಖಪ್ರದವಾದ ನಂದನವನ ಮತ್ತೊಂದು. ಇಲ್ಲಿ ಉಪಮಾನವಾಗಿ ಕೊಟ್ಟದ್ದು ಯಾವುದು ಎಂಬ ಶಂಕೆಗೆ ಉತ್ತರಿಸಲು **ಭವಾಟವೀಂ ಯಾತಿ** ಎಂಬುದರ ತಾತ್ಪರ್ಯ **ಶ್ಮಶಾನವದಶಿವತಮಾಂ ಸಂಸಾರಾಟವ್ಯಾಂ ಗತಃ** ಎಂದು **ಅಶಿವತಮಾ** ಎಂದುದರಿಂದ ದುಃಖಪ್ರದ ಎಂದು ಹೇಳಿದಂತಾಯಿತು. ||೨||

**ಯಸ್ಯಾಮು ಹ ವಾ ಏತೇ ಷಡಿಂದ್ರಿಯನಾಮಾನಃ ಕರ್ಮಣಾ ದಸ್ಯವ ಇವ ತದ್ಯಥಾ ಪುರುಷಸ್ಯ ಧನಂ ಕಿಂಚಿತ್ ಸಾಕ್ಷಾತ್ ಧರ್ಮೋಪಯಿಕಂ ಬಹುಕೃಚ್ಛ್ರಾಧಿಗತಂ ಯತ್ ಪರಮಪುರುಷಾರಾಧನಲಕ್ಷಣಂ ಸಾಂಪರಾಯಿಕ-ಮುದಾಹರಂತಿ । ತದ್ಧರ್ಮ್ಯಂ ಧನಂ ದರ್ಶನಸ್ಪರ್ಶನಶ್ರವಣಾಸ್ವಾದನಾ-ವಘ್ರಾಣಸಂಕಲ್ಪಸಮವಾಯೇನ ಗೃಹೇ ಗ್ರಾಮ್ಯೋಪಭೋಗೇನ ಕುನಾಥಸ್ಯಾ-ಜಿತಾತ್ಮನೊ ವಿಲುಂಪಂತಿ ||೩||**

**ಯಸ್ಯಾಂ** ಯಾವ ಈ ಸಂಸಾರಾಟವಿಯಲ್ಲಿ **ಕರ್ಮಣಾ** ವ್ಯಾಪಾರದಿಂದ **ದಸ್ಯವ ಇವ** ಕಳ್ಳರಂತಿರುವ **ಷಡಿಂದ್ರಿಯನಾಮಾನಃ** ಆರು ಇಂದ್ರಿಯಗಳೆಂಬುವವು **ತದ್ಯಥಾ** ಅದು ಹೇಗೆಂದರೆ **ಪುರುಷಸ್ಯ** ಮುಮುಕ್ಷು ಜೀವನ **ಸಾಕ್ಷಾತ್ ಧರ್ಮೋಪಯಿಕಂ** ಮುಖ್ಯವಾಗಿ ಮೋಕ್ಷಸಾಧನ ಪರಮಾಪೂರ್ವ(ಪುಣ್ಯ) ನಿಮಿತ್ತವಾದ ನಿವೃತ್ತಧರ್ಮಕ್ಕೆ ಸಾಧನವಾದ(ಮೋಕ್ಷಸಾಧನವಾದ) **ಬಹುಕೃಚ್ಛ್ರಾಧಿಗತಂ** ಹಿಂದಿನ ಜನ್ಮದಲ್ಲಾಗಲೀ, ಈ ಜನ್ಮದಲ್ಲಾಗಲೀ ಬಹಳ ಕಷ್ಟದಿಂದ ಸಂಪಾದಿಸಿದ




**ಪುರುಷಾರಾಧನಲಕ್ಷಣಂ** ಸರ್ವೋತ್ತಮನಾದ ಶ್ರೀಹರಿಯ ಆರಾಧನೆಗೆ ಸಾಧನವಾದ ಶ್ರೀಹರಿಪ್ರಸಾದ ಜನಕವಾದ **ಯತ್** ಯಾವ **ಧನಂ** ಧನಸ್ಥಾನೀಯವಾದ ಕರ್ಮವನ್ನು **ಸಾಂಪರಾಯಿಕಂ** ಮೋಕ್ಷಕಾರಣವೆಂದು **ಉದಾಹರಂತಿ** ಹೇಳುವರೋ **ಕುನಾಥಸ್ಯ** ಕೆಟ್ಟನಾಯಕನುಳ್ಳ (ದೃಷ್ಟಾಂತದಲ್ಲಿ) ಕೆಟ್ಟಗುರುವುಳ್ಳ ಆದ್ದರಿಂದಲೇ **ಅಜಿತಾತ್ಮನಃ** ಮನಸ್ಸನ್ನು ಜಯಿಸದಿರುವವನ **ತತ್** ಆ **ಧರ್ಮ್ಯಂ** ಧರ್ಮಾನುಗುಣವಾದ (ಅವಾಂತರಾಪೂರ್ವಸಹಿತವಾದ) **ಧನಂ** ವಿತ್ತವನ್ನು **ಗೃಹೇ** ಮನೆಯಲ್ಲಿ **ದರ್ಶನ** ಹೆಂಡತಿ ಮಕ್ಕಳನ್ನು ನೋಡುವುದು **ಸ್ಪರ್ಶನ** ಮುಟ್ಟುವುದು **ಶ್ರವಣ** ಸಂಭಾಷಣೆ ಕೇಳುವುದು **ಆಸ್ವಾದನ** ರುಚಿ ನೋಡುವುದು **ಅವಘ್ರಾಣ** ವಾಸನೆ ನೋಡುವುದು **ಸಂಕಲ್ಪ** ಮನಸ್ಸಿನಿಂದ ಬಯಸುವುದು ಇವುಗಳ **ಸಮವಾಯೇನ** ಮೇಲನದಿಂದ ಈ ವಿಧವಾದ **ಗ್ರಾಮ್ಯೋಪಭೋಗೇನ** ಐಹಿಕ ಸುಖವನ್ನು ಮಾತ್ರ ಉಂಟುಮಾಡುವ ವಿಷಯಾನುಭವದಿಂದ **ವಿಲುಂಪಂತಿ** ಹಾಳು ಮಾಡುವವು. **ಉ ಹ ವಾ** ಇದು ಪ್ರಸಿದ್ಧವು. ದರ್ಶನಾದಿಗಳೈದು ಬಾಹ್ಯೇಂದ್ರಿಯ ವ್ಯಾಪಾರಗಳು. ಸಂಕಲ್ಪ ಮನೋವ್ಯಾಪಾರ. **ಕುನಾಯಕಂ** ಎಂಬುದರ ಅರ್ಥ **ಕುನಾಥಸ್ಯ** ಎಂದು. **ಬಲಾತ್** ಎಂಬುದಕ್ಕೆ ತಮ್ಮಿಂದ ಸಾಧ್ಯವಾದ ವ್ಯಾಪಾರದ ಬಲದಿಂದ ಎಂದರ್ಥ ಹೇಳಿದಂತಾಯಿತು. **ಯಸ್ಯಾಮಿಮೇ** ಎಂಬ ಎರಡನೇ ಶ್ಲೋಕದ ಅರ್ಥ ಇದು. ||೩||

**ಗೋಮಾಯವೋ ಯತ್ರ** ಎಂಬುದರ ಅರ್ಥ ಹೇಳುವರು

**ಅಥ ಚ ಯತ್ರ ಕೌಟುಂಬಿಕಸ್ಯ(ಕಾ) ದಾರಾಪತ್ಯಾದಯೋ ನಾಮ್ನಾ ಕರ್ಮಣಾ ವೃಕಸೃಗಾಲಾ ಇವಾನಿಚ್ಛತೋऽಪಿ ಕದರ್ಯಸ್ಯ ಕುಟುಂಬಿನಃ ಉರಣಕವತ್ ಸಂರಕ್ಷ್ಯಮಾಣಂ ಮಿಷತೋऽಪಹರಂತಿ ||೪||**

**ಅಥ ಚ** ಪ್ರಕಾರಾಂತರದಿಂದ ದುಃಖವನ್ನು ನಿರೂಪಿಸುತ್ತೇವೆ. **ಯತ್ರ** ಯಾವ ಸಂಸಾರಡವಿಯಲ್ಲಿ **ಕೌಟುಂಬಿಕಸ್ಯ** ಕುಟುಂಬಿಯಾದ ಜೀವನ **ನಾಮ್ನಾ** ಹೆಸರಿನಿಂದ ಮಾತ್ರ **ದಾರಾಪತ್ಯಾದಯಃ** ಹೆಂಡತಿ ಮಕ್ಕಳು ಮುಂತಾದವರು **ಕರ್ಮಣಾ** ವ್ಯಾಪಾರದಿಂದ **ವೃಕಶೃಗಾಲಾ ಇವ** ತೋಳ ಮತ್ತು ನರಿಗಳಂತೆ **ಅನಿಚ್ಛತಃ ಅಪಿ** ಇಚ್ಛಿಸದಿದ್ದರೂ **ಕದರ್ಯಸ್ಯ** ಲುಬ್ಧನಾದ **ಕುಟುಂಬಿನಃ** ಕುಟುಂಬಿಯ **ಉರಣಕವತ್** ಕುರಿಮರಿಯಂತೆ **ಸಂರಕ್ಷ್ಯಮಾಣಂ ಧನಂ** ಕಾಪಾಡಿಟ್ಟಿರುವ ಹಣವನ್ನು **ಮಿಷತಃ** ನೋಡುತ್ತಿರುವಾಗಲೇ **ಅಪಹರಂತಿ** ಅಪಹರಿಸುವರು. ||೪||

ಪ್ರಭೂತವೀರುತ್ತೃಣ ಎಂಬುದರ ಅರ್ಥ ಹೇಳುವರು

**ಯಥಾ ಹಿ ಅನುವತ್ಸರಂ ಕೃಷ್ಯಮಾಣಮಪ್ಯದಗ್ಧಬೀಜಕ್ಷೇತ್ರಂ ಪುನರಾವಪನ-ಕಾಲೇ ಗುಲ್ಮತೃಣವೀರುದ್ಭಿರ್ಗಹ್ವರಮೇವ ಭವತಿ ॥೫॥**

**ಯಥಾ** ಹೇಗೆ **ಕೃಷ್ಯಮಾಣಮಪಿ** ನೇಗಿಲಿನಿಂದ ಊಳುತ್ತಿದ್ದರೂ **ಅದಗ್ಧಬೀಜಕ್ಷೇತ್ರಂ** ಸುಡದಿರುವ(ಹುಲ್ಲಿನ ಬೀಜವುಳ್ಳ) ಗದ್ದೆ ಹೊಲಗಳು **ಅನುವತ್ಸರಂ** ಪ್ರತಿವರ್ಷವು **ಪುನಃ ಏವ** ಮತ್ತೆ ಮತ್ತೆ **ಆವಪನಕಾಲೇ** ಬೀಜ ಬಿತ್ತುವ ಸಮಯದಲ್ಲಿ **ಗುಲ್ಮ** ಪೊದೆ **ತೃಣ** ಹುಲ್ಲು **ವಿರುದ್ಭಿಃ** ಬಳ್ಳಿಗಳಿಂದ **ಯಥಾ** ಹೇಗೆ **ಗಹ್ವರಂ ಏವ ಭವತಿ** ತುಂಬಿ ಹೋಗಿ ನಡೆಯಲಾಗದಂತಾಗುವುದೋ. ॥೫॥

**ಏವಮೇವ ಗೃಹಾಶ್ರಮಕರ್ಮಕ್ಷೇತ್ರಂ ಯಸ್ಮಿನ್ ನ ಹಿ ಕರ್ಮಾಣ್ಯುತ್ಸೀದಂತಿ ॥೬॥**

**ಏವಮೇವ** ಹೀಗೆಯೇ **ಗೃಹಾಶ್ರಮಕರ್ಮಕ್ಷೇತ್ರಂ** ಗೃಹಸ್ಥಾಶ್ರಮವೆಂಬ ಕರ್ಮಗಳನ್ನು ಮಾಡುವ ಭೂಮಿಯು **ಯಸ್ಮಿನ್** ಯಾವುದರಲ್ಲಿ **ಕರ್ಮಾಣಿ ನ ಹಿ ಉತ್ಸೀದಂತಿ** ಪ್ರವೃತ್ತಿಕರ್ಮಗಳು ಮುಗಿಯುವುದೇ ಇಲ್ಲ. ಹುಲ್ಲು ಬೆಳೆದಂತೆ ಮತ್ತೆ ಮತ್ತೆ ನಡೆಯುತ್ತವೆ. ॥೬॥

ಏಕೆಂದರೆ ಇಲ್ಲಿಯೂ ಸುಡದಿರುವ ಬೀಜಸ್ಥಾನಿಯನ್ನು ಹೇಳುವರು

**ಯದಪಕ್ವಕಾಮಕರಂಡ ಏಷಃ ಆವಸಥಸ್ತತ್ರ ರತೋ ದಂಶಮಶಕ ಸಮಾಪಸದ್ಭಿರ್ಮನುಜೈಃ ಶಲಭಶಕುಂತತಸ್ಕರಮೂಷಕಾದಿಭಿರುಪರುಧ್ಯಮಾನ-ಬಹಿಃಪ್ರಾಣಃ ಕ್ವಚಿತ್ಪರಿವರ್ತಮಾನೋಽಸ್ಮಿನ್ನಧ್ವನ್ಯವಿದ್ಯಾಕಾಮಕರ್ಮಭಿ-ರುಪರಕ್ತಮನಸಾಽನುಪಪನ್ನಾರ್ಥಂ ನರಲೋಕಂ ಗಂಧರ್ವನಗರಮುಪಪನ್ನ-ಮಿತಿ ಮಿಥ್ಯಾ ದೃಷ್ಟಿರನುಪಶ್ಯತಿ ॥೭॥**

**ಯತ್** ಯಾವಕಾರಣ **ಏಷಃ ಆವಸಥಃ** ಈ ಗೃಹಸ್ಥಾಶ್ರಮವು **ಅಪಕ್ವಕಾಮಕರಂಡ** ಸುಡದಿರುವ ಐಹಿಕ ಆಮುಷ್ಮಿಕಫಲೇಚ್ಛೆಯ ಕರಡಿಗೆಯಂತಿರುವುದು ಕಾರಣ ಅದಗ್ಧಬೀಜಕ್ಷೇತ್ರದ ಪರಿಸ್ಥಿತಿಯೇ ಎಂದು ಭಾವ. ಮತ್ತೆ ಮತ್ತೆ ಪ್ರವೃತ್ತಿಕರ್ಮಗಳು ಬರುವುದಕ್ಕೆ ಫಲಾಪೇಕ್ಷೆಯೇ ಕಾರಣವೆಂದಂತಾಯಿತು. ಹೀಗೆ ಮೊದಲನೇ ಪಾದ ಅರ್ಥವನ್ನು ಹೇಳಿ ಎರಡನೇ ಪಾದದ ಅರ್ಥ ಹೇಳುವರು. **ತತ್ರ** ಇಂಥ




ಗೃಹಸ್ಥಾಶ್ರಮದಲ್ಲಿ **ರತಃ** ಆಸಕ್ತನಾಗಿ **ದಂಶಮಶಕಸಮ್ಮೈಃ** ತಗಣೆ, ಸೊಳ್ಳೆಗಳಿಗೆ ಸಮಾನರಾದ **ಅಪಸದೈಃ** ನೀಚರಾದ **ಜನ್ಯೈಃ** ಜನರಿಂದ **ಶಲಭಶಕುಂತತಸ್ಕರ-ಮೂಷಕಾದಿಭಿಃ** ದೀಪಹುಳ, ಶಕುಂತಪಕ್ಷಿ, ಕಳ್ಳ, ಇಲಿ ಮೊದಲಾದವುಗಳಿಂದ **ಉಪರುಧ್ಯಮಾನಬಹಿಃಪ್ರಾಣಃ** ಪೀಡಿತವಾದ ವಿತ್ತವುಳ್ಳವನಾಗಿ (**ಕ್ವಚಿಚ್ಚ ಗಂಧರ್ವಪುರಂ** ಎಂಬುದರ ಅರ್ಥ ಹೇಳುವರು) **ಅಸ್ಮಿನ್ ಅಧ್ವನಿ ಪರಿವರ್ತಮಾನಃ** ಈ ಸಂಸಾರ ಮಾರ್ಗದಲ್ಲಿ ಸುತ್ತಾಡುವವನಾಗಿ **ಕ್ವಚಿತ್** ಒಂದೆಡೆ **ಮಿಥ್ಯಾದೃಷ್ಟಿಃ** ಭ್ರಾಂತಿಯುಳ್ಳವನಾಗಿ **ಅನುಪಪನ್ನಾರ್ಥಂ** ಅಸ್ಥಿರವಾದ **ನರಲೋಕಗಂಧರ್ವನಗರಂ** ಮನುಷ್ಯದೇಹವೆಂಬ ಗಂಧರ್ವನಗರವನ್ನು ಅಸ್ಥಿರಪದಾರ್ಥವನ್ನು **ಅವಿದ್ಯಾಕಾಮ-ಕರ್ಮಭಿಃ ಉಪರಕ್ತಮನಸಾ** ಅವಿದ್ಯೆ, ಕಾಮ ಮತ್ತು ಕರ್ಮಗಳಿಂದ ಕೂಡಿದ (ದೂಷಿತವಾದ) ಮನಸ್ಸಿನಿಂದ **ಉಪಪನ್ನಂ ಇತಿ** ಸ್ಥಿರವೆಂದು **ಅನುಪಶ್ಯತಿ** ತಿಳಿಯುವನು. ಇದೇ ಇವನ ತಪ್ಪು ತಿಳುವಳಿಕೆ. ಇದಕ್ಕೆ ಕಾರಣ ಅವಿದ್ಯಾದಿಗಳು. ।।೭।।

**ಕ್ವಚಿಚ್ಚಾಶೇಷದೋಷನಿಷದನಂ ಪುರುಷವಿಶೇಷಮುಪೇತ್ಯ ತದ್ವರ್ಣ-ಗುಣನಿಹಿತಮತಿಃ ಸುವರ್ಣಮುಪಾದಿತ್ಸತ್ಯಗ್ನಿಕಾಮಕಾತರ ಇವೋಲ್ಮುಕಪಿ-ಶಾಚಮ್ ।।೮।।**

**ಕ್ವಚಿಚ್ಚಾಸುಹರೋಲ್ಮುಕಗ್ರಹಂ** ಎಂಬುದರ ಅಭಿಪ್ರಾಯವನ್ನು ಹೇಳುವರು. **ಕ್ವಚಿತ್** ಒಂದೆಡೆ **ಅಶೇಷದೋಷನಿಷದನಂ** ಎಲ್ಲ ದೋಷಗಳಿಗೂ ವಾಸಸ್ಥಾನವಾದ **ಪುರುಷವಿಶೇಷಂ** ದೇಹವಿಶೇಷವನ್ನು (ಪುರುಷದೇಹ) ಸ್ತ್ರೀದೇಹವನ್ನೋ **ಉಪೇತ್ಯ** ಹೊಂದಿ **ತದ್ವರ್ಣಗುಣನಿಹಿತಮತಿಃ** ಆದರ ಕಾಂತಿ ಮತ್ತು ಐಶ್ವರ್ಯ ಮೊದಲಾದಗುಣಗಳಿಂದ ಅವುಗಳಿಲ್ಲದ ತಾನು ಪಾಪಿಯೆಂದು ತಿಳಿದವನಾಗಿ **ಅಗ್ನಿಕಾಮಕಾತರಃ** ಬೆಂಕಿಯನ್ನು ಅಪೇಕ್ಷಿಸುವವನಂತೆ ಕಾತರನಾಗಿ **ಉಲ್ಮುಕಪಿಶಾಚಂ ಇವ** ಕೊಳ್ಳಿದೆವ್ವವನ್ನು ಅಪೇಕ್ಷಿಸುವಂತೆ **ಸುವರ್ಣಂ** ದ್ರವ್ಯವನ್ನು ಒಳ್ಳೆಯ ಬಣ್ಣ ಉಳ್ಳ ಬೆಂಕಿಯನ್ನೂ **ಉಪಾದಿತ್ಸತಿ** ತೆಗೆದುಕೊಳ್ಳಲು ಅಪೇಕ್ಷಿಸುವನು. ಅಥವಾ **ಸುವರ್ಣಂ ಇವ** ದ್ರವ್ಯವನ್ನು ಬಯಸುವಂತೆ ಪುರುಷ ವಿಶೇಷವನ್ನೂ ಹೊಂದಿ ಉಲ್ಮುಕಪಿಶಾಚವನ್ನು ತೆಗೆದುಕೊಳ್ಳಬಯಸುವನು. ಶೀತದಿಂದ ನೊಂದವನು ಬೆಂಕಿಯನ್ನು ಅಪೇಕ್ಷಿಸುವಂತೆ ಎಲ್ಲ ದೋಷಗಳಿಗೂ ಆವಾಸಸ್ಥಾನವಾದ ಪುರುಷಾಕಾರದ ಕೊಳ್ಳಿದೆವ್ವವನ್ನು ಉರಿಯುತ್ತಿರುವದನ್ನೂ ನೋಡಿ ಸಮೀಪಿಸಿ ಭ್ರಾಂತಿಯಿಂದ ತೆಗೆದುಕೊಳ್ಳಲಿಚ್ಛಿಸುವನು. ಸ್ತ್ರೀ ಎಂಬ ಅರ್ಥ ಇಟ್ಟುಕೊಂಡಾಗ

ಅವಳನ್ನು ಹೊಂದಿ ಭೋಗಮಾಡಲು ಒಳ್ಳೆಯ ದೇಹವನ್ನೂ ಸ್ವೀಕರಿಸುವನು. ಅಗ್ನಿಯನ್ನು ಸೇವಿಸಬೇಕೆಂಬುವರು ಕೊಳ್ಳಿದೆವ್ವವನ್ನು ಹೊಂದಿದಂತೆ ಎಂದು ಅಭಿಪ್ರಾಯ. ಪಿಶಾಚಸಾಮ್ಯ ತಿಳಿಸಲು ಎಲ್ಲ ದೋಷಗಳ ಆವಾಸಸ್ಥಾನ ಎಂದಿದ್ದಾರೆ. ।।೮।।

**ನಿವಾಸತೋಯ** ಎಂಬುದರ ಅರ್ಥಹೇಳುವರು

**ಅಥ ಕದಾಚಿತ್ ಗೃಹಪಾನೀಯದ್ರವಿಣಾದ್ಯನೇಕಾತ್ಮೋಪಜೀವನಾಭಿನಿವೇಶ ಏತಸ್ಯಾಂ ಸಂಸಾರಾಟವ್ಯಾಮಿತಿಸ್ತತಃ ಪರಿಧಾವತಿ ।।೯।।**

**ಅಥ** ಅನಂತರ **ಕದಾಚಿತ್** ಒಂದು ಕಾಲದಲ್ಲಿ **ಗೃಹ** ಮನೆ (ನಿವಾಸ ಶಬ್ದಾರ್ಥ) **ಪಾನೀಯ** ನೀರು (ತೋಯ ಶಬ್ದಾರ್ಥ) **ದ್ರವಿಣಾದಿ** ಹಣವೇ ಮೊದಲಾದ ಅನೇಕ **ಆತ್ಮೋಪಜೀವನಾಭಿನಿವೇಶಃ** ಅನೇಕ ರೀತಿಯ ತನ್ನ ಜೀವನೋಪಾಯಗಳಲ್ಲಿ ನಾನು ನನ್ನದೆಂಬ ಅಭಿಮಾನವುಳ್ಳವನಾಗಿ ಅಥವಾ ಅನೇಕ ರೀತಿಯ ಜೀವನ ಸಹಕಾರಿಗಳಲ್ಲಿ ಯಾವುದೊಂದು ಇಲ್ಲದಿದ್ದರೂ ಜೀವನ ನಡೆಯುವುದಿಲ್ಲವೆಂಬ ದುರಾಗ್ರಹವುಳ್ಳವನಾಗಿ **ಏತಸ್ಯಾಂ** ಈ **ಸಂಸಾರಾಟವ್ಯಾಂ** ಸಂಸಾರಾಡವಿಯಲ್ಲಿ **ಇತಸ್ತತಃ ಪರಿಧಾವತಿ** ಇತ್ತ ಅತ್ತ ಓಡುವನು. ।।೯।।

**ಕ್ವಚಿಚ್ಚ ವಾತ್ಯೋತ್ಥಿತ** ಮುಂತಾದ ವಾಕ್ಯದ ಅಭಿಪ್ರಾಯವನ್ನು ಹೇಳುತ್ತಾರೆ

**ಕ್ವಚಿಚ್ಚ ವಾತ್ಯೋಪಮಯಾ ಪ್ರಮದಯಾ ಆರೋಹಮಾರೋಪಿತ-ಸ್ತತ್ಕಾಲ ರಜಸಾ ರಜನೀಭೂತಃ ಕುಜನ ಇವ ಸಾಧುಮರ್ಯಾದಾಂ ರಜಸ್ವಲಾಕ್ಷೋ ದಿಗ್ದೇವತಾದಿರಜಸ್ವಲಮತಿರ್ನ ವಿಜಾನಾತಿ ।।೧೦।।**

**ಕ್ವಚಿತ್** ಒಂದೆಡೆ **ವಾತ್ಯೋಪಮಯಾ** ಸುಂಟರಗಾಳಿಗೆ ಸಮಾನಳಾದ **ಪ್ರಮದಯಾ** ತರುಣಿಯಿಂದ **ಆರೋಹಂ** ತೊಡೆಯನ್ನು **ಆರೋಪಿತಃ** ಏರಿಸಲ್ಪಟ್ಟವನಾಗಿ **ತತ್ಕಾಲರಜಸಾ** ಅವಳೊಡನೆ ವಿಷಯಾನುಭವ ಕಾಲದಲ್ಲಿ ಅನುರಾಗದಿಂದ **ರಜನೀಭೂತಃ** ಕತ್ತಲೆಯ ಪ್ರದೇಶದಲ್ಲಿರುವ **ಕುಜನ ಇವ** ದುಷ್ಟಜನನಂತೆ **ಸಾಧುಮರ್ಯಾದಾಂ** ಸಜ್ಜನರ ಮರ್ಯಾದೆಯನ್ನೂ **ರಜಸ್ವಲಾಕ್ಷಃ ರಜಸ್ವಲಮತಿಃ** ರಜೋಗುಣ ವ್ಯಾಪ್ತವಾದ ಬುದ್ಧಿಯುಳ್ಳವನಾಗಿ **ದಿಗ್ದೇವತಾದಿ** ಕರ್ಮಸಾಕ್ಷಿಗಳಾದ ದಿಗ್ದೇವತೆಗಳನ್ನೂ **ನ ವಿಜಾನಾತಿ** ತಿಳಿಯಲಾರನು.




ಭ್ರಾಮಕಗುಣಸಾಮ್ಯವನ್ನಿಟ್ಟುಕೊಂಡು ಹೆಂಗಸಿಗೆ ಸುಂಟರಗಾಳಿಯ ಉಪಮಾನವನ್ನು ಕೊಟ್ಟಿದೆ. **ಆರೋಹ** ಎಂದು ಹೇಳಿದ್ದರಿಂದ ದೃಷ್ಟಾಂತವಾದ ಸುಂಟರಗಾಳಿಯು ವಣಿಕ್ ಸಾರ್ಥವನ್ನೂ ಸ್ವಲ್ಪಮೇಲಕ್ಕೆ ಎತ್ತಿಕೊಂಡು ಹೋಗುವುದು ಎಂದು ತಿಳಿಯುವುದು. **ರಜಸ್ವಲಾಕ್ಷಃ** ಎಂದು ಅನುವಾದಮಾಡಿ **ರಜಸ್ವಲಮತಿಃ** ಎಂದು ಅದರ ವ್ಯಾಖ್ಯಾನವನ್ನು ಮಾಡಿರುವರು. **ರಜಸ್ವಲಾ ರಜೋಗುಣವ್ಯಾಪ್ತಾ ಮತಿಃ ಯಸ್ಯ ಸಃ** ರಜೋಗುಣದಿಂದವ್ಯಾಪ್ತವಾದ ಮತಿ(ಬುದ್ಧಿ) ಉಳ್ಳವನು ಎಂದರ್ಥ. ಇದರಿಂದ ದಾರ್ಷ್ಟಾಂತಿಕದಲ್ಲಿ (ಜೀವಸಮುದಾಯಪರ ಅರ್ಥದಲ್ಲಿ ) ಅಕ್ಷಶಬ್ದಕ್ಕೆ ಬುದ್ಧಿ ಎಂದರ್ಥ ಹೇಳಬೇಕೆಂದು ಸೂಚಿಸಿರುವರು. ॥೧೦॥

**ಅದೃಶ್ಯಝಿಲ್ಲೀ** ಎಂಬುದರ ಅರ್ಥ ಹೇಳುವರು

**ಕ್ವಚಿದುಲೂಕಝಿಲ್ಲೀಸ್ವನವದತಿಪರುಷರಭಸಾಟೋಪಂ ಪ್ರತ್ಯಕ್ಷಂ ಪರೋಕ್ಷಂ ವಾ ರಿಪುರಾಜಕುಲನಿರ್ಭರ್ತ್ಸಿತೇನಾತಿವ್ಯಥಿತಕರ್ಣಮೂಲ-ಹೃದಯಃ ॥೧೧॥**

**ಕ್ವಚಿತ್** ಒಂದೆಡೆ **ಉಲೂಕ** ಗೂಬೆ **ಝಿಲ್ಲೀ** ಜೀರುಂಡೆ ಹುಳ ಇವುಗಳ **ಸ್ವನವತ್** ಶಬ್ದದಂತೆ **ಅತಿಪರುಷರಭಸಾಟೋಪಂ** ಬಹುಕ್ರೂರವೂ ಉತ್ಸಾಹಯುಕ್ತವೂ ಆಗಿ ಅಭಿನಿವೇಶ ಉಂಟಾಗುವಂತೆ **ಪ್ರತ್ಯಕ್ಷಂ ಪರೋಕ್ಷಂ ವಾ** ಎದುರಿಗೋ ಮರೆಯಲ್ಲಿಯೋ **ರಿಪು** ಶತ್ರುಗಳ **ರಾಜಕುಲ** ರಾಜಭಟರ **ನಿರ್ಭರ್ತ್ಸಿತೇನ** ತೆಗಳಿಕೆಗಳಿಂದ **ಅತಿವ್ಯಥಿತಕರ್ಣಮೂಲಹೃದಯಃ** ಬಹಳ ವ್ಯಥೆಗೊಂಡ ಕಿವಿ ಮತ್ತು ಹೃದಯಗಳುಳ್ಳವನಾಗುವನು.

ಇಲ್ಲಿ ಗೂಬೆಯ ಧ್ವನಿಯಂತಿರುವ ಪ್ರತ್ಯಕ್ಷ ತೆಗಳಿಕೆಯಿಂದ ಹೃದಯವ್ಯಥೆಯೂ ಝಿಲ್ಲೀ ಧ್ವನಿಯಂತಿರುವ ಪರೋಕ್ಷ ತೆಗಳಿಕೆಯಿಂದ ಕರ್ಣವ್ಯಥೆಯು ಎಂದು ವಿಭಾಗಿಸಿಕೊಳ್ಳಬೇಕು. ॥೧೧॥

**ಅಪುಣ್ಯವೃಕ್ಷಾನ್** ಎಂಬುದರ ಅಭಿಪ್ರಾಯ ತಿಳಿಸುವರು

**ಸ ಯದಾ ದಗ್ಧಪೂರ್ವಸುಕೃತಸ್ತದಾ ಕಾರಸ್ಕರಕಾಕ ತುಂಡಾದ್ಯಪುಣ್ಯ-ದ್ರುಮಲತಾವಿಷೋದಪಾನವದುಭಯಾರ್ಥದ್ರವಿಣಶೂನ್ಯಾನ್ ಜೀವನ್ಮೃತಾನ್ ಸ್ವಯಂ ಜೀವನ್ಮ್ರಿಯಮಾಣ ಉಪಧಾವತಿ ॥೧೨॥**

**ಯದಾ** ಯಾವಾಗ **ದಗ್ಧಪೂರ್ವಸುಕೃತಃ** ಹಿಂದಿನ ಜನ್ಮದಲ್ಲಿ ಸಂಪಾದಿಸಿದ ಪುಣ್ಯವನ್ನು ಅನುಭವಿಸಿ ಮಂದಭಾಗ್ಯನಾಗುವನೋ **ತದಾ** ಆಗ **ಕಾರಸ್ಕರ** ಕಾರೆಮುಳ್ಳಿನಗಿಡ (ಜಾಲಿಮರ) **ಕಾಕತುಂಡ ವಿಷವೃಕ್ಷ ಆದಿ** ಕಾಕತುಂಡ ವಿಷವೃಕ್ಷ ಇವೇ ಮೊದಲಾದ ಹೆಸರುಗಳುಳ್ಳ **ಅಪುಣ್ಯದ್ರುಮಲತಾ** ಕೆಟ್ಟಗಿಡಬಳ್ಳಿಗಳೂ **ವಿಷೋದಪಾನ** ಕಹಿನೀರಿನ ಭಾವಿ ಇವುಗಳಂತೆ **ಉಭಯಾರ್ಥದ್ರವಿಣಶೂನ್ಯಾನ್** ಐಹಿಕ, ಆಮುಷ್ಮಿಕ ಎರಡೂ ಪ್ರಯೋಜನವಿಲ್ಲದ ಹಣವುಳ್ಳ ಆದ್ದರಿಂದಲೇ **ಜೀವನ್ಮೃತಾನ್** ಬದುಕಿದ್ದೂ ಸತ್ತಂತಿರುವ ಧನಿಕರನ್ನು **ಜೀವನ್ಮ್ರಿಯಮಾಣಃ** ಬದುಕಿಯೂ ಸತ್ತಂತಿರುವ ತಾನು **ಉಪಧಾವತಿ** ಅನುಸರಿಸಿ ಓಡುವನು (ಕ್ಷುಧಾರ್ಥಿತಃ ಎಂಬುದರ ಅರ್ಥವಿದು). ॥೧೨॥

**ಮರೀಚಿತೋಯಾನಭಿಧಾವತಿ** ಎಂಬುದರ ಅರ್ಥ ಹೇಳುವರು

**ಕ್ವಚಿತ್ ಸಕೃದವಗತವಿಷಯವೈತಥ್ಯಃ ಸ್ವಯಂ ವಿಷಯಾಭಿಧ್ಯಾನೇನ ವಿಭ್ರಂಶಿತಸ್ಮೃತಿರತ ಏವ ಮರೀಚಿತೋಯಪ್ರಾಯಾಂಸ್ತಾನೇವಾಭಿಧಾವತಿ ॥೧೩॥**

**ಕ್ವಚಿತ್** ಒಂದುಕಡೆಯಲ್ಲಿ ಮಹನೀಯರ ಸಹವಾಸದಿಂದ **ಸಕೃದವಗತ ವಿಷಯವೈತಥ್ಯಃ** ಒಮ್ಮೆ ತಿಳಿಯಲ್ಪಟ್ಟ ವಿಷಯಗಳ ನಶ್ವರತೆಯುಳ್ಳವನಾದರೂ **ಸ್ವಯಂ** ತಾನೇ (ಮಹತ್ಸಂಗತಿ ಇಲ್ಲದೇ) **ವಿಷಯಾಭಿಧ್ಯಾನೇನ** ವಿಷಯಗಳ ಚಿಂತನೆಯಿಂದ **ವಿಭ್ರಂಶಿತಸ್ಮೃತಿಃ** ನಷ್ಟವಾದ ವಿಷಯ ನಶ್ವರತೆಯ ಸ್ಮರಣವುಳ್ಳವನಾಗಿ (**ಭ್ರಂಶಿತಮತಿಃ** ಎಂದು ಪಾಠವಿದ್ದಾಗ ನಷ್ಟವಾದ ವಿಷಯನಶ್ವರತೆಯ ಜ್ಞಾನವುಳ್ಳವನಾಗಿ ಎಂದರ್ಥ) **ಅತ ಏವ** ಆದ್ದರಿಂದಲೇ **ಮರೀಚಿತೋಯಪ್ರಾಯಾನ್** ಬಿಸಿಲು ಝಳದ ನೀರಿನಂತೆ ಯಾವಾಗಲೂ ಇಲ್ಲದಿರುವ ಕೆಲವುಕಾಲಮಾತ್ರ ಇರುವ **ತಾನ್ ಏವ** ವಿಷಯಗಳನ್ನೇ **ಅಭಿಧಾವತಿ** ಕುರಿತು ಧಾವಿಸುವನು.

### ಪುನರುಕ್ತಿ ಶಂಕಾ ಪರಿಹಾರ

ಈ ಶ್ಲೋಕದಲ್ಲಿ ಹೇಳಿದ ಅಭಿಪ್ರಾಯವು **ಕ್ವಚಿಚ್ಚ ಗಂಧರ್ವಪುರಂ** ಎಂಬಲ್ಲಿ ಮೊದಲೇ ಹೇಳಿಯಾಗಿದೆ ಕಾರಣ ಪುನರುಕ್ತಿದೋಷ ಎಂದು ಶಂಕಿಸುವಂತಿಲ್ಲ. ಇಲ್ಲಿ **ಸಕೃದವಗತಃ** ಎಂದು ಹೇಳಿದ್ದರಿಂದ **ಕ್ವಚಿಚ್ಚ ಗಂಧರ್ವಪುರಂ** ಎಂಬುದರಿಂದ




ಗತಾರ್ಥವಲ್ಲವೆಂದು ತಿಳಿಸಿರುವರು. ಹಾಗಾದರೆ ಎರಡು ಶ್ಲೋಕಗಳಲ್ಲಿ ಏನು ಅಭಿಪ್ರಾಯಭೇದ? ಎಂದರೆ ಈ ಶ್ಲೋಕದಲ್ಲಿ ಮೊದಲೊಮ್ಮೆ ಮಹಾತ್ಮರ ಸಂಗದಿಂದ ವಿಷಯನಶ್ವರತೆಯ ಜ್ಞಾನ ಉಳ್ಳವನಾದರೂ ಅದನ್ನು ಮರೆತು ವಿಷಯಗಳನ್ನು ಕುರಿತು ಧಾವಿಸುವವನು ಅಭಿಪ್ರೇತನು. **ಕ್ವಚಿಚ್ಚ ಗಂಧರ್ವಪುರಂ** ಎಂಬಲ್ಲಿಯಾದರೋ ಸರ್ವಥಾ ವಿಷಯವೈತಥ್ಯಜ್ಞಾನವಿಲ್ಲದವನೇ ಅಭಿಪ್ರೇತನು. ಅಲ್ಲಿ ಸರ್ವಥಾ ಜ್ಞಾನಶೂನ್ಯನೇ ಅಭಿಪ್ರೇತನು ಎಂಬುವುದು **ಅವಿದ್ಯಾಕಾಮಕರ್ಮಭಿಃ** ಎಂಬ ವಿಶೇಷಣದಿಂದ ತಿಳಿದುಬರುವುದು. ।।೧೩।।

**ಕ್ವಚಿದ್ವಿತೋಯಾ** ಎಂಬುದರ ಅಭಿಪ್ರಾಯ ಹೇಳುವರು

**ಏಕದಾತ್ವಸತ್ಪ್ರಸಂಗಾನ್ನಿಕೃತಮತಿರ್ವ್ಯುದಸ್ರೋತಶ್ಚಲನವದುಭಯತೋಽಪಿ ದುಃಖದಂ ಪಾಷಂಡಮಭಿಯಾತಿ ।।೧೪।।**

**ಏಕದಾ** ಒಂದುಸಲ **ಅಸತ್ಪ್ರಸಂಗಾತ್** ದುಷ್ಟರ ಸಹವಾಸದಿಂದ **ನಿಕೃತಮತಿಃ** ವಂಚಿತ ಬುದ್ಧಿಯುಳ್ಳವನಾಗಿ **ವ್ಯುದಸ್ರೋತಶ್ಚಲನವತ್** ನೀರಿಲ್ಲದ ನದಿಗೆ ಹೋಗುವಂತೆ (ಮೃಗತೃಷ್ಣಿಕಾಪ್ರವಾಹದಂತೆ) **ಉಭಯತಃ ಅಪಿ** ಇಹದಲ್ಲಿಯೂ ಪರದಲ್ಲಿಯೂ ಕೂಡ **ದುಃಖದಂ** ದುಃಖವನ್ನುಂಟುಮಾಡುವ **ಪಾಷಂಡಂ** ಪಾಷಂಡಮತವನ್ನು **ಉಪಧಾವತಿ** ಅನುಸರಿಸುವನು. ।।೧೪।।

**ಪರಸ್ಪರಂ ಖಾದಯತಃ** ಎಂಬುದರ ಅಭಿಪ್ರಾಯವನ್ನು ಹೇಳುವರು

**ಯದಾ ತು ಪರಬಾಧಯಾಽನ್ನಮಾತ್ಮನೋ ನೋಪನಮತಿ ತದಾ ಹಿ ಪಿತೃಪುತ್ರಾನ್ ಬಾಲಾನ್ ಖಲು ಭಕ್ಷಯತಿ ।।೧೫।।**

**ಯದಾ ತು** ಯಾವಾಗ **ಪರಬಾಧಯಾ** ಬೇರೆಯವರ ಪೀಡೆಯಿಂದ **ಆತ್ಮನಃ** ತನಗೆ **ಅನ್ನಂ** ಅನ್ನವು (**ಅರ್ಥಂ** ಅಭೀಷ್ಟವು) **ನ ಉಪನಮತಿ** ದೊರೆಯುವುದಿಲ್ಲವೋ (ಇದರಿಂದ **ನಿರನ್ನಃ** ಎಂಬುದನ್ನೂ ವಿವರಿಸಿರುವರು) **ತದಾ** ಆವಾಗ **ಪಿತೃಪುತ್ರಾನ್** ತಂದೆಮಕ್ಕಳನ್ನು **ಬಾಲಾನ್** ಮಕ್ಕಳನ್ನು ಅಂದರೆ ತಂದೆ ಮಕ್ಕಳನ್ನು ಮಕ್ಕಳು ತಂದೆಯನ್ನು ಹೀಗೆ ಪರಸ್ಪರ **ಭಕ್ಷಯತಿ ಖಲು** ಪೀಡಿಸುವರಷ್ಟೇ. ಇದರಿಂದ ಪೂರ್ವಾಧ್ಯಾಯದಲ್ಲಿ ಹೇಳಿದ **ಪರಸ್ಪರಂ** ಎಂಬುದನ್ನು ವಿವರಿಸಿದಂತಾಯಿತು. ।।೧೫।।

**ಆಸಾದ್ಯದಾವಂ** ಎಂಬುದರ ಅಭಿಪ್ರಾಯ ಹೇಳುವರು

**ಕ್ವಚಿದಾಸಾದ್ಯ ಗೃಹಂ ದಾವವತ್ ಪ್ರಿಯಾರ್ಥವಿಧುರಮಸುಖೋದರ್ಕಂ ಶೋಕಾಗ್ನಿನಾ ದಹ್ಯಮಾನೋ ಭೃಶಂ ನಿರ್ವೇಶಮುಪಗಚ್ಛತಿ ॥೧೬॥**

**ಕ್ವಚಿತ್** ಒಂದೆಡೆ **ದಾವವತ್** ಕಾಡ್ಗಿಚ್ಚಿನಂತೆ **ಪ್ರಿಯಾರ್ಥವಿಧುರಂ** ಪ್ರಿಯವಾದ ಪ್ರಯೋಜನವಿಲ್ಲದ ಆದ್ದರಿಂದಲೇ **ಅಸುಖೋದರ್ಕಂ** ದುಃಖಕ್ಕೆ ಕಾರಣವಾದ **ಗೃಹಂ** ಮನೆಯನ್ನು **ಆಸಾದ್ಯ** ಹೊಂದಿ **ಶೋಕಾಗ್ನಿನಾ** ಶೋಕವೆಂಬ ಅಗ್ನಿಯಿಂದ **ದಹ್ಯಮಾನಃ** ಸುಡಲ್ಪಡುವವನಾಗಿ **ಭೃಶಂ** ಬಹಳ **ನಿರ್ವೇದಂ** ವಿಷಾದವನ್ನು **ಉಪಗಚ್ಛತಿ** ಹೊಂದುವನು. ॥೧೬॥

**ಕ್ವಚ ಯಕ್ಷೈರ್ಹೃತಾಸುಃ** ಎಂಬುದರ ಅರ್ಥ ಹೇಳುವರು

**ಕ್ವಚಿತ್ಕಾಲವಿಷಮಿತರಾಜಕುಲಯಕ್ಷಾಪಹೃತಪ್ರಿಯತಮಧನಾಸುರ್ಮೃತಕ ಇವ ವಿಗತ ಜೀವಲಕ್ಷಣ ಆಸ್ತೇ ॥೧೭॥**

**ಕ್ವಚಿತ್ ಕಾಲವಿಷಮಿತ** ಕಲಿಯುಗದ ಪ್ರಭಾವದಿಂದ ಪ್ರತಿಕೂಲರಾದ **ರಾಜಕುಲ ಯಕ್ಷಾಪಹೃತ** ರಾಜಸಮೂಹವೆಂಬ(ಭೃತ್ಯರೆಂಬ) ಯಕ್ಷರಿಂದ ಕಸಿದುಕೊಳ್ಳಲ್ಪಟ್ಟ **ಪ್ರಿಯತಮಧನಾಸುಃ** ಅತ್ಯಂತಪ್ರಿಯವಾದ ಧನವೆಂಬ ಪ್ರಾಣವುಳ್ಳವನಾಗಿ **ಮೃತಕ** ಇವ ಶವದಂತೆ **ಆಸ್ತೇ** ತೇಜೋಹೀನನಾಗಿ ಇರುವನು. ॥೧೭॥

ಇದರಿಂದ **ಪರೈರ್ಹೃತಸ್ವಃ** ಎಂಬುದನ್ನು ವಿವರಿಸಿರುವರು. ಹಿಂದೆ ಹೇಳಿದ **ದಂಶಮಶಕಸಮೂಹಾಪಸದೈಃ** ಎಂಬಲ್ಲಿ ಹೇಳಿದ ಅಪಹಾರಕರ್ತೃಗಳು ಬೇರೆ ಆದ್ದರಿಂದ ಪೌನರುಕ್ತಿ ಇಲ್ಲ.

**ಕದಾಚಿತ್ ಮನೋರಥಾವಗತಪಿತೃಪಿತಾಮಹಾದ್ಯಸತ್ಸದಿತಿಸ್ವಪ್ನನಿರ್ವೃತಿ-ಮನುಭವತಿ ॥೧೮॥**

**ಕದಾಚಿತ್** ಒಂದು ಸಲ **ಮನೋರಥ** ಮನಸ್ಸಿನಲ್ಲಿರುವ ವಾಸನಾವಿಶೇಷದಿಂದ **ಅವಗತ** ತಿಳಿಯಲ್ಪಟ್ಟ **ಪಿತೃಪಿತಾಮಹಾದಿ** ತಂದೆ ತಾತ ಮೊದಲಾದವರನ್ನು **ಅಸತ್** ಹೊರಗೆ ಇಲ್ಲದಿರುವವರನ್ನು **ಸತ್** ಹೊರಗೆ ಇರುವರೆಂದು (**ಜಾನನ್**) ತಿಳಿದು

 

**ಸ್ವಪ್ನನಿರ್ವೃತಿಂ ಅನುಭವತಿ** ಸ್ವಪ್ನಸುಖವನ್ನು ಅನುಭವಿಸುವನು **ಅಸತ್** ಶೀಘ್ರನಾಶವಾಗುವುದಾಗಿ, ದುಃಖದಾಯಕವಾದರೂ ನಿತ್ಯಸುಖದಾಯವೆಂದೂ ತಿಳಿಯುವನು. ||೧೮||

**ಚಲನ್ ಕ್ವಚಿತ್** ಎಂಬುದರ ಅರ್ಥ ಹೇಳುವರು

**ಕ್ವಚಿದ್ಗೃಹಾಶ್ರಮಚೋದಿತಕರ್ಮಾತಿಭಾರಗಿರೀನಾರುರುಕ್ಷಮಾಣೋ ಲೌಕಿಕವ್ಯಸನಕರ್ಷಿತಮನಾಃ ಕಂಟಕಶರ್ಕರಾಕ್ಷೇತ್ರಂ ಪ್ರವಿಶನ್ನಿವ ಸೀದತಿ ||೧೯||**

**ಕ್ವಚಿತ್** ಒಂದೆಡೆ **ಗೃಹಾಶ್ರಮಚೋದಿತ** ಗೃಹಸ್ಥಾಶ್ರಮಕ್ಕೆ ವಿಧಿಸಿರುವ **ಕರ್ಮಾತಿಭಾರಗಿರೀನ್** ಪ್ರವೃತ್ತಿಕರ್ಮಗಳೆಂಬ ಬಹಳಭಾರವಾದ ಬೆಟ್ಟಗಳನ್ನು **ಆರುರುಕ್ಷಮಾಣಃ** ಹತ್ತಲು ಇಷ್ಟಪಡುವವನಾಗಿ ಅಂದರೆ ಸಂಪೂರ್ಣಮಾಡಲು ಇಚ್ಛಿಸಿ **ಲೌಕಿಕವ್ಯಸನಕರ್ಷಿತಮನಾಃ** ಲೌಕಿಕಕಷ್ಟಗಳಿಂದ ಸೆಳೆಯಲ್ಪಟ್ಟ ಮನಸ್ಸುಳ್ಳವನಾಗಿ **ಕಂಟಕಶರ್ಕರಾಕ್ಷೇತ್ರಂ ಪ್ರವಿಶನ್ನಿವ ಸೀದತಿ** ಮುಳ್ಳು, ಕಲ್ಲುಚಕ್ರಗಳುಳ್ಳ ಪ್ರದೇಶವನ್ನು ಪ್ರವೇಶಿಸುವವನಂತೆ ದುಃಖಪಡುವನು. ||೧೯||

**ಪದೇ ಪದೇಽಭ್ಯಂತರವನ್ಹಿನಾ** ಎಂಬುದನ್ನು ವ್ಯಾಖ್ಯಾನಿಸುವರು

**ಕ್ವಚಿದ್ದುಃಸಹೇನ ಕಾಯಾಭ್ಯಂತರವನ್ಹಿನಾ ಗೃಹೀತಸಾರಃ ಸ್ವಕುಟುಂಬಾಯ ಕ್ರುಧ್ಯತಿ ||೨೦||**

**ಕ್ವಚಿತ್** ಒಂದೆಡೆ **ದುಸ್ಸಹೇನ** ಸಹಿಸಲಾಗದ **ಕಾಯಾಭ್ಯಂತರವನ್ಹಿನಾ** ದೇಹದೊಳಗಿನ ಜಾಠರಾಗ್ನಿಯಿಂದ **ಗೃಹೀತಸಾರಃ** ಧೈರ್ಯವಿಲ್ಲದವನಾಗಿ ಬಲಹೀನನಾಗಿ ಸ್ವ ತನ್ನ **ಕುಟುಂಬಾಯ** ಕುಟುಂಬದ ಜನರಮೇಲೆ **ಕ್ರುಧ್ಯತಿ** ಕೋಪಗೊಳ್ಳುವನು. ||೨೦||

**ಕ್ವಚನ್ನಿಗೀರ್ಣ** ಎಂಬುದನ್ನು ವ್ಯಾಖ್ಯಾನಿಸುವರು

**ಸ ಏವ ಪುನರ್ನಿದ್ರಾಽಜಗರಗೃಹೀತೋಽಂಧೇತಮಸಿ ಮಗ್ನಃ ಶೂನ್ಯಾರಣ್ಯ ಇವ ಶೇತೇ ನಾನ್ಯತ್ಕಿಂಚನ ವೇದ ಶವ ಇವಾಪವಿದ್ಧಃ |**

**ದಷ್ಟಸ್ಮ ಶೇತೇ** ಎಂಬುದರ ವ್ಯಾಖ್ಯಾನ

**ಕ್ವಚಿದ್ಭಗ್ನಮನಾ ದಷ್ಟೋ ದುರ್ಜನದಂದಶೂಕೈರಲಬ್ಧನಿದ್ರಾಕ್ಷಣೋ ವ್ಯಥಿತಹೃದಯೇನ ಕ್ಷೀಯಮಾಣವಿಜ್ಞಾನೋಽಂಧೇ ಕೂಪೇಽಂಧವತ್ಪತತಿ ।।೨೦।।**

**ಸಃ ಏವ** ಅವನೇ **ಪುನಃ** ಮತ್ತೆ **ನಿದ್ರಾಽಜಗರಗೃಹೀತಃ** ನಿದ್ದೆಯೆಂಬ ಹೆಬ್ಬಾವಿನಿಂದ ನುಂಗಲ್ಪಟ್ಟವನಾಗಿ **ಅಂಧೇ ತಮಸಿ ಮಗ್ನಃ ಇವ** ಕುರುಡಾಗಿಸುವ ಕತ್ತಲೆಯಲ್ಲಿ ಮುಳುಗಿದವನಂತೆ **ಅನ್ಯತ್** ತಾನು, ಕಾಲ, ಅವಿದ್ಯಾ ಇವುಗಳಿಂದ (ಭಿನ್ನವಾದ) ಬೇರೆ ಯಾವುದನ್ನೂ ಅಂದರೆ ಬಾಹ್ಯ ವಸ್ತುವನ್ನು **ನ ವೇದ** ತಿಳಿಯುವುದಿಲ್ಲ **ಶೂನ್ಯಾರಣ್ಯೇ ಅಪವಿದ್ಧಃ ಶವ ಇವ ಶೇತೇ** ಯಾರೂ ಇಲ್ಲದ ಅಡವಿಯಲ್ಲಿ ಬಿಡಲ್ಪಟ್ಟ ಹೆಣದಂತೆ ಮಲಗಿರುವನು. **ಶೇತೇ** ಎಂದು ಹೇಳಿದ್ದರಿಂದ ಉತ್ತರಾರ್ಧದಲ್ಲಿಯ ಶೇತೇ ಎಂಬುದನ್ನು ಇಲ್ಲಿ ಅನ್ವಯ ಮಾಡಿಕೊಳ್ಳಬೇಕೆಂದು ಸೂಚಿಸಿರುವರು.

**ಕ್ವಚಿತ್** ಒಂದೆಡೆ **ದುರ್ಜನದಂದಶೂಕೈಃ** ದುಷ್ಟ ಜನರೆಂಬ ಸರ್ಪಗಳಿಂದ **ದಷ್ಟಃ** ಕಚ್ಚಲ್ಪಟ್ಟವನಾಗಿ (ತಿರಸ್ಕರಿಸಲ್ಪಟ್ಟವನಾಗಿ) **ಭಗ್ನಮನಾಃ** ಅವರಲ್ಲಿ ತನ್ನವರೆಂಬ ಭಾವನೆ ಇಲ್ಲದೇ **ಅಲಬ್ಧನಿದ್ರಾಕ್ಷಣಃ** ನಿದ್ದೆಗೆ ಅವಕಾಶವಿಲ್ಲದವನಾಗಿ **ವ್ಯಥಿತಹೃದಯೇನ** ದುಃಖಿತವಾದ ಹೃದಯದಿಂದ **ಕ್ಷೀಯಮಾಣವಿಜ್ಞಾನಃ** ವಿವೇಕಜ್ಞಾನ ಕಡಿಮೆಯಾದವನಾಗಿ **ಅಂಧಕೂಪೇ** ಅವಿವೇಕದಲ್ಲಿ, ಕತ್ತಲೆಯಿಂದ ಕುರುಡಾಗಿಸುವ ಭಾವಿಯಲ್ಲಿ **ಅಂಧವತ್** ವಿಜ್ಞಾನಶೂನ್ಯನಾಗಿ **ಪತತಿ** ಬೀಳುವನು. **ವ್ಯಥಿತಹೃದಯ** ಎಂಬುದರಿಂದ **ತಮಿಸ್ರ** ಎಂಬುದನ್ನು **ದುಃಖಸಮೂಹ** ಎಂದು **ಅಂಧ** ಎಂಬುದನ್ನು **ಕ್ಷೀಯಮಾಣವಿಜ್ಞಾನ**ವೆಂದು ವಿವರಿಸಿರುವರು. **ಅಂಧವತ್** ಎಂದುದರಿಂದ ಅಂಧಪದವು ಲುಪ್ತೋಪಮ ಆಗಿ ಪ್ರಸಿದ್ಧ ಕತ್ತಲೆತರವೆಂದೂ ಸೂಚಿಸಿರುವರು. ।।೨೦।।

**ಕರ್ಹಿಸ್ಮಚಿತ್ ಕ್ಷುದ್ರರಸಾನ್** ಎಂಬುದರ ಅರ್ಥ ಹೇಳುವರು

**ಕರ್ಹಿಸ್ಮಚಿತ್ಕಾಮಸುಖಲವಾನ್ವಿಚಿನ್ವನ್ಯದಾ ಪರದಾರಪರದ್ರವ್ಯಾಣ್ಯ-ವರುಂಧಾನೋ ರಾಜ್ಞಾ ಸ್ವಾಮಿಭಿರ್ನಿಹತಃ ಪತತ್ಯಪಾರೇ ನಿರಯೇ ।।೨೨।।**

**ಕರ್ಹಿಸ್ಮಚಿತ್** ಒಂದು ಸಲ **ಕಾಮಸುಖಲವಾನ್ ವಿಚಿನ್ವನ್** ಅಲ್ಪ ವಿಷಯ ಸುಖಗಳನ್ನು ಹುಡುಕುತ್ತ **ಯದಾ** ಯಾವಾಗ **ಪರದಾರ** ಬೇರೆಯವರ ಹೆಂಡತಿ **ಪರದ್ರವ್ಯಾಣಿ** ಬೇರೆಯವರ ವಡವೆವಸ್ತುಗಳನ್ನು **ಅವರುಂಧಾನಃ** ಅಪಹರಿಸುವವನಾಗಿ




**ರಾಜ್ಞಾ** ರಾಜನಿಂದಾಗಲಿ **ಸ್ವಾಮಿಭಿಃ** ಅವುಗಳ ಯಜಮಾನನಿಂದಾಗಲಿ **ನಿಹತಃ** ಅವಮಾನಿತನಾಗುವನೋ **ತದಾ** ಆಗ **ಅಪಾರೇ ನಿರಯೇ ಪತತಿ** ದಾಟಲಾಗದ ನರಕದಲ್ಲಿ ಬೀಳುವನು. **ಕಾಮಮಧುಲವಾನ್** ಎಂಬ ಪಾಠದಲ್ಲಿ ವಿಷಯಗಳೆಂಬ ಜೇನುತುಪ್ಪದ ಹನಿಗಳನ್ನು ಎಂದರ್ಥ. ।।೨೨।।

ಗೃಹಸ್ಥಾಶ್ರಮದಲ್ಲಿ ಕಾಮ್ಯಕರ್ಮಕ್ಕೂ ನಿಷಿದ್ಧಕರ್ಮಕ್ಕೂ ಸಂಸಾರ ಕಾರಣತ್ವವನ್ನು ಇದುವರೆಗೆ ಹೇಳಿದರು. ಈಗ ಅದನ್ನು ಮುಗಿಸುವವರಾಗಿ **ಸ್ಮ** ಎಂಬುದರಿಂದ ಸೂಚಿತವಾದ ಪ್ರಮಾಣ ಪ್ರಸಿದ್ಧಿಯನ್ನು ಹೇಳುತ್ತಾರೆ

**ಅಥ ಚ ತಸ್ಮಾದುಭಯಥಾಪಿ ಕರ್ಮಾಣ್ಯಸ್ಮಿನ್ನಾತ್ಮನಃ ಸಂಸಾರಾವಪನ-ಮುದಾಹರಂತಿ ।।೨೩।।**

**ಅಥ ಚ** ಮೇಲೆ ಹೇಳಿದ ಕಾರಣದಿಂದ **ಕರ್ಮ** ಕಾಮ್ಯ ಮತ್ತು ನಿಷಿದ್ಧ ಕರ್ಮಗಳು **ಸಂಸಾರಾವಪನಂ** ಸಂಸಾರ ಬೀಜದ ಬಿತ್ತುವಿಕೆ ಎಂದು **ಉದಾಹರಂತಿ** ಜ್ಞಾನಿಗಳು ಹೇಳುತ್ತಾರೆ. ಇಲ್ಲಿ **ಅಥ ಚ ತಸ್ಯಾಶುಭಪ್ರಕ್ಷಾಲನಂ ಕರ್ಮ ಸಂಸಾರಾವಪನ ಮುದಾಹರಂತಿ** ಎಂದು ಪಾಠವಿದೆ. ಆಗ ಮಾಡಿದ ಪಾಪಗಳು ಪ್ರಾಯಶ್ಚಿತ್ತದಿಂದ ನಾಶವಾದ ಮೇಲೆ ನರಕದಲ್ಲಿ ಬೀಳುವುದೇಕೆ ಎಂದು ಅವತಾರಿಕೆ ಇತ್ತು. **ಅಶುಭ ಪ್ರಕ್ಷಾಲನಂ** ಪ್ರಾಯಶ್ಚಿತ್ತರೂಪವಾದ ಕರ್ಮವೂ ಸಹ **ಸಂಸಾರಾವಪನಂ ಉದಾಹರಂತಿ** ಸಂಸಾರ ಬೀಜ ಬಿತ್ತಿದಂತೆಯೇ ಎಂದು ಹೇಳುವರು. **ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ** ಎಂದು ವಚನವಿರುವುದರಿಂದ ಪ್ರಾಯಶ್ಚಿತ್ತ ಕರ್ಮಗಳಲ್ಲಿಯೂ ದೋಷವಾಗುವ ಸಂಭವವಿದ್ದೇ ಇದೆ ಎಂದು ವ್ಯಾಖ್ಯಾನಿಸಬೇಕು.

**ತತ್ರಾಪಿ ಕೃಚ್ಛ್ರಾತ್** ಎಂಬುದರ ಅರ್ಥ ಹೇಳುವರು

**ಯದಿ ಚ ಮುಕ್ತಸ್ತತೋ ವಧಾದ್ದೇವದತ್ತ ಉಪಾಚ್ಛಿನತ್ತಿ ತಸ್ಮಾದಪಿ ವಿಷ್ಣುಮಿತ್ರ ಇತ್ಯನವಸ್ಥಿತಿಃ ।।೨೪।।**

**ಯದಿ ಚ** ಒಂದು ವೇಳೆ **ತತೋ ವಧಾತ್** ಆ ಕೊಲೆಯಿಂದಾ (ಗಲ್ಲು ಶಿಕ್ಷೆಯಿಂದಾ) **ಬಂಧಾತ್** ಎಂಬ ಪಾಠವಿದ್ದಾಗ ಆ ರಾಜರ ಬಂಧನದಿಂದ ಎಂದರ್ಥ **ಮುಕ್ತಃ** ಬಿಡಲ್ಪಟ್ಟವನಾದರೆ ನಾನು ಕದಿಯಲಿಲ್ಲ ನನ್ನದೇ ಈ ಹಣ ಎಂದು ವಾದಿಸಿ

ಪರರ ಒಡವೆಯನ್ನು ತನ್ನದೆಂದು ಸ್ಥಿರ ಪಡಿಸಿಕೊಂಡರೆ **ದೇವದತ್ತಃ** ಅವನಿಗಿಂತ ಬಲಿಷ್ಠನಾದ ಒಬ್ಬ ವ್ಯಕ್ತಿಯು **ಉಪಾಚ್ಛಿನತ್ತಿ** ಕಸಿದುಕೊಂಡು ಹೋಗುವವನು **ತಸ್ಮಾದಪಿ** ಆ ದೇವದತ್ತನಿಂದಲೂ **ವಿಷ್ಣುಮಿತ್ರಃ** ಅವನಿಗಿಂತ ಬಲಿಷ್ಠನಾದ ವ್ಯಕ್ತಿಯೂ **ಉಪಾಚ್ಛಿನತ್ತಿ** ಕಿತ್ತುಕೊಳ್ಳುವನು ಇತಿ ಈ ರೀತಿ **ಅನವಸ್ಥಿತಿಃ** ಆ ದ್ರವ್ಯ ಭೋಗ್ಯವಾಗಿ ಒಬ್ಬನಲ್ಲಿ ಉಳಿಯುವುದಿಲ್ಲ . ।।೨೪।।

**ಕ್ವಚಿಚ್ಚ ಶೀತಾತಪ** ಎಂಬುದನ್ನು ವ್ಯಾಖ್ಯಾನಿಸುವರು

**ಕ್ವಚಿಚ್ಚ ಶೀತಾತಪವಾತವರ್ಷಾದ್ಯನೇಕಾಧಿದೈವಿಕಭೌತಿಕಾತ್ಮೀಯಾನಾಂ ದುಃಖಾನಾಂ ವಾರಣಾಯಾಕಲ್ಪೋ ದುರಂತಚಿಂತಯಾ ವಿಷಣ್ಣ ಆಸ್ತೇ ।।೨೫।।**

**ಕ್ವಚಿತ್** ಒಂದೆಡೆ **ಶೀತಾತಪವಾತವರ್ಷಾದ್ಯನೇಕಾಧಿದೈವಿಕಭೌತಿಕಾತ್ಮೀಯಾನಾಂ** ಛಳಿ, ಬಿಸಿಲು, ಗಾಳಿ, ಮಳೆ ಮುಂತಾದ ಅನೇಕ ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕಗಳಾದ **ದುಃಖಾನಾಂ** ದುಃಖಗಳ **ವಾರಣಾಕಲ್ಪಃ** ನಿವಾರಣೆಗೆ ಅಸಮರ್ಥನಾಗಿ (ವಸ್ತ್ರಾದಿಗಳಿಲ್ಲದ್ದರಿಂದ) **ದುರಂತ ಚಿಂತಯಾ** ಕೊನೆಯಿಲ್ಲದ ಚಿಂತೆಯಿಂದ **ವಿಷಣ್ಣಃ ಆಸ್ತೇ** ವಿಷಣ್ಣನಾಗಿರುವನು. ಅನೇಕ ದುಃಖಗಳು ಎಂದದ್ದರಿಂದ ಶೀತ, ಆತಪ, ವಾತ, ವರ್ಷ ಪದಗಳು ಇತರ ದುಃಖಗಳಿಗೆ ಸಂಗ್ರಾಹಕಗಳೆಂದು ತಿಳಿಸಿದಂತಾಯಿತು. ।।೨೫।।

**ಕ್ವಚಿನ್ಮಿಥೋ ವಿಪಣನ್** ಎಂಬುದನ್ನು ವಿವರಿಸುವರು

**ಕ್ವಚನ್ಮಿಥೋಽಭ್ಯೇತ್ಯ ವಿಪಣಿಕಃ ಕಾಕಣಿಕಾಮಾತ್ರಮಪ್ಯಪಹರತಿ ಕಿಂಚಿದ್ಧಿ ವಿದ್ವೇಷ ಮುಪಯಾತಿ ವಿತ್ತಶಾಠ್ಯೇನ ।।೨೬।।**

**ಕ್ವಚಿತ್** ಒಂದೆಡೆ **ವಿಪಣಿಕಃ** ವರ್ತಕನು **ಮಿಥಃ** ಪರಸ್ಪರ **ಅಭ್ಯೇತ್ಯ** ಸೇರಿ **ವಿತ್ತಶಾಠ್ಯೇನ** ಹಣದ ವಂಚನೆಯಿಂದ (ನಾಳೆ ಕೊಡುವೆನು ಎಂದು ಹೇಳಿ ವಂಚಿಸಿ) **ಕಾಕಣಿಕಮಾತ್ರಂ ಅಪಿ** ಸ್ವಲ್ಪವಾದರೂ **ಕಿಂಚಿತ್ ಅಪಿ** ಸ್ವಲ್ಪ ಹೆಚ್ಚಾಗಿಯಾದರೂ **ಅಪಹರತಿ** ಧನಧಾನ್ಯಾದಿಗಳನ್ನು ಅಪಹರಿಸುವನು ಅದರಿಂದ **ವಿದ್ವೇಷಂ ಉಪಯಾತಿ ಹಿ** ಇನ್ನೊಬ್ಬನ ದ್ವೇಷಕ್ಕೆ ವಿಷಯನಾಗುವನು. ।।೨೬।।

**ಕ್ವಚಿತ್ ಕ್ಷೀಣಧನಃ** ಎಂಬುದರ ಅರ್ಥ ಹೇಳುವರು

**ಕ್ವಚಿಚ್ಚ ಕ್ಷೀಣಧನಃ ಶಯ್ಯಾಸನಾದ್ಯುಪಭೋಗಹೀನೋ ಯಾವದಪ್ರತಿಲಬ್ಧ-ಮನೋರಥಃ ಪರಸ್ವಾದಾನೇ ವ್ಯವಸಿತಮತಿಃ ತತೋಽವಮಾನಾದೀನಿ ಲಭತೇ ॥೨೭॥**

**ಕ್ವಚಿಚ್ಚ** ಕೆಲವು ಕಡೆ **ಕ್ಷೀಣಧನಃ** ದುಡ್ಡಿಲ್ಲದವನಾಗಿ **ಶಯ್ಯಾಸನಾದ್ಯುಪಭೋಗಹೀನಃ** ಹಾಸಿಗೆ ಮುಂತಾದ ಭೋಗ ಸಾಮಗ್ರಿಗಳಿಲ್ಲದೇ **ಅಪ್ರತಿಲಬ್ಧಮನೋರಥಃ** ಅಭೀಷ್ಟಗಳನ್ನು ಹೊಂದದೇ **ಯಾವತ್** ಯಾವಾಗ **ಪರಸ್ವಾದಾನೇ** ಬೇರೆಯವರ ಹಣ ತೆಗೆದುಕೊಳ್ಳಲು (ಕಳ್ಳತನ ಮಾಡಲು) **ವ್ಯವಸ್ಥಿತ ಮತಿಃ** ನಿಶ್ಚಯ ಮಾಡಿ **ತತಃ** ಕಳ್ಳತನದಿಂದ **ಅವಮಾನಾದೀನಿ** ಅಪಮಾನ ಶಿಕ್ಷೆಗಳನ್ನು **ಲಭತೇ** ಹೊಂದುವನು. ॥೨೭॥

ಇಷ್ಟಾದರೂ ಅವನಿಗೆ ಅಲ್ಲಿ ವೈರಾಗ್ಯ ಬರಲಾರದು ಎಂದು ಹೇಳುವರು

**ಏವಂ ವಿತ್ತವ್ಯತಿಷಂಗವಿವೃದ್ಧವೈರಾನುಬಂಧೋಽಪಿ ಪೂರ್ವವಾಸನಯಾ ಮಿಥ ಉದ್ವಹತಾಂ ಸ ಏವೋದ್ವಹತಿ ॥೨೮॥**

**ಏವಂ** ಈ ರೀತಿಯಾಗಿ **ವಿತ್ತವ್ಯತಿಷಂಗ** ಹಣದ ವಿನಿಮಯದಿಂದಾಗಿ **ವಿವೃದ್ಧ** ಬೆಳೆದ **ವೈರಾನುಬಂಧಃ** ದ್ವೇಷಕ್ಕೆ ನಿಮಿತ್ತವಾದ ವಿತ್ತಶಾಠ್ಯವುಳ್ಳವನು **ಅಪಿ** ಆದರೂ **ಪೂರ್ವವಾಸನಯಾ** ಹಿಂದಿನ ಸಂಸ್ಕಾರದಿಂದ **ಮಿಥಃ ಉದ್ವಹತಾಂ ಮಧ್ಯೇ** ಪರಸ್ಪರ ವ್ಯವಹಾರ ಮಾಡುವವರ ಮಧ್ಯದಲ್ಲಿ **ಸಃ ಏವ** ವಿತ್ತಶಾಠ್ಯದಿಂದ ದ್ವೇಷ ವಿಷಯನಾದವನೇ **ಉದ್ವಹತಿ** ಮತ್ತೆ ಧಾನ್ಯತೆಗೆದುಕೊಳ್ಳುವುದೇ ಮೊದಲಾದ ವ್ಯಾಪಾರ ಮಾಡುವನು.

**ಯತ ಆರಬ್ಧ ಏಷ ನರಲೋಕಸಾರ್ಥಸ್ತಮಧ್ವನಃ ಪಾರಮುಪದಿಶಂತಿ ॥೨೯॥**

**ಯತಃ** ಯಾವ ಶ್ರೀಹರಿಯಿಂದ **ಏಷಃ** ಈ **ನರಲೋಕಸಾರ್ಥಃ** ಜೀವ ಸಮುದಾಯವು **ಆರಬ್ಧಃ** ಸೃಷ್ಟಿಗೆ ತರಲ್ಪಟ್ಟಿತೋ **ತಂ** ಆ ಶ್ರೀಹರಿಯನ್ನೇ **ಅಧ್ವನಃ** ಸಂಸಾರ ಮಾರ್ಗದ **ಪಾರಂ** ಕೊನೆಯನ್ನಾಗಿ **ಉಪದಿಶಂತಿ** ಜ್ಞಾನಿಗಳು ಉಪದೇಶಿಸುವರು (ಹೇಳುವರು). ॥೨೯॥

ಅವನನ್ನು ಯಾರು ಹೊಂದುವರು? ಎಂದರೆ ಹೇಳುವರು

**ಯದಿದಂ ಯೋಗಾನುಶಾಸನಮೇತದೇವ ಶಂತಮಂ ತೇ ಉಪಶಮಶೀಲಾ ಉಪರತಾತ್ಮಾನ ಉಪತಿಷ್ಠಂತಿ ।।೩೦।।**

**ಯತ್** ಯಾವ ಇದಂ ಈ **ಯೋಗಾನುಶಾಸನಂ** ಹೊಂದುವ ಉಪಾಯವನ್ನು ತಿಳಿಸಿಕೊಡುವ **ಶಂತಮಂ** ಸುಖತಮವಾದ **ಏತದೇವ** ಈ ಬ್ರಹ್ಮರೂಪ ವಸ್ತುವನ್ನೇ **ಉಪಶಮಶೀಲಾಃ** ಶ್ರೀಹರಿಯನ್ನೇ ಧ್ಯಾನ ಮಾಡುವ ಸ್ವಭಾವವುಳ್ಳ **ತೇ** ಆ ಮುನಿಗಳು **ಉಪರತಾತ್ಮಾನಃ ಸಂತಃ** ಮನಸ್ಸನ್ನು ವಶಪಡಿಸಿಕೊಂಡವರಾಗಿ ಶ್ರೀಹರಿಯಲ್ಲಿಯೇ ಸುಖಪಡುವವರಾಗಿ **ಉಪತಿಷ್ಠಂತಿ** ಹೊಂದುವರು. ।।೩೦।।

**ಪ್ರಸಜ್ಞತಿ** ಎಂಬುದರ ಅರ್ಥ ಹೇಳುವರು

**ಕ್ವಾಪಿ ದೇವಮಾಯಯಾ ಸ್ತ್ರಿಯಾ ಭುಜಲತೋಪಗೂಢಃ ಪ್ರಸ್ಕನ್ನವಿವೇಕ-ಜ್ಞಾನಸ್ತದ್ವಿಹಾರ ಗೃಹಾರಂಭಾನ್ ಕುರ್ವಂಸ್ತದಾಶ್ರಮಾಸಕ್ತಃ ಸುತದುಹಿತೃ-ಕಲಭಾಷಿತಾವಲೋಕ ವಿಚೇಷ್ಟಿತಾಪಹೃತಹೃದಯ ಆತ್ಮಾನಮಜಿತಾತ್ಮಾऽ-ಪಾರೇऽಂಧೇ ತಮಸಿ ಪ್ರಾಹಿಣೋತಿ ।।೩೧।।**

**ಕ್ವಾಪಿ** ಒಂದೆಡೆ **ದೇವಮಾಯಯಾ** ಶ್ರೀಹರಿಯ ಮೋಹಕಶಕ್ತಿಗೆ ಆವಾಸಸ್ಥಾನಳಾದ **ಸ್ತ್ರಿಯಾ** ಹೆಣ್ಣಿನಿಂದಾ **ಭುಜಲತೋಪಗೂಢಃ** ಬಳ್ಳಿಯಂತಿರುವ ಬಾಹುಗಳಿಂದ ಕಟ್ಟಲ್ಪಟ್ಟವನಾಗಿ **ಪ್ರಸ್ಕನ್ನವಿವೇಕಜ್ಞಾನಃ** ವಿವೇಕವನ್ನು ಕಳೆದುಕೊಂಡವನಾಗಿ **ತದ್ವಿಹಾರಗೃಹಾರಂಭಾನ್** ಆ ಹೆಣ್ಣಿನ ಕ್ರೀಡೆಗಾಗಿ ಮನೆ ಮುಂತಾದವನ್ನು ಮಾಡುತ್ತ **ತದಾಶ್ರಮಾಸಕ್ತಃ** ಗೃಹಸ್ಥಾಶ್ರಮದಲ್ಲಿಯೇ ಆಸಕ್ತನಾಗಿ **ಸುತದುಹಿತೃಕಲಭಾಷಿತಾವಲೋಕವಿಚೇಷ್ಟಿತಾಪಹೃತಹೃದಯಃ** ಮಗ, ಮಗಳು ಮೊದಲಾದವರ ಅಸ್ಪಷ್ಟ ಮಾತುಗಳು(ಕಲಭಾಷಣೆ), ನೋಟ ಮತ್ತು ಚೇಷ್ಟೆಗಳಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವನಾಗಿ **ಅಜಿತಾತ್ಮಾ** ಮನೋಜಯವಿಲ್ಲದ ಈ ಜೀವನು **ಆತ್ಮಾನಂ** ತನ್ನನ್ನು **ಅಪಾರೇ ಅಂಧೇ ತಮಸಿ** ಕೊನೆಯಿಲ್ಲದ ಅಂಧಂತಮಸ್ಸಿಗೆ **ಪ್ರಾಹಿಣೋತಿ** ಕಳಿಸುವನು. ಹಿ ಗತೌ ಎಂದು ಧಾತುವಿನ ಪ್ರಕಾರ ಈ ಅರ್ಥ. ಇದರಿಂದ **ಪ್ರಸಜ್ಞತಿ** ಎಂಬುದಕ್ಕೆ ವಿವೇಕನಾಶ ಮತ್ತು ಅಂಧತಮಃಪ್ರಾಪಣ ಎಂದು ಎರಡರ್ಥ ಹೇಳಿದಂತಾಯಿತು. ದ್ವಿಜ ಶಬ್ದದಿಂದ ಸೂಚಿತವಾದ ಅರ್ಥವನ್ನು **ಸುತದುಹಿತೃ** ಮುಂತಾಗಿ ವಿವರಿಸಿರುವರು. **ಕಲಭಾಷಿತಂ** ಎಂಬುದರಿಂದ ಅವ್ಯಕ್ತ ಪದದ ವಿವರಣೆ. ಇದು ಉಪಲಕ್ಷಣ ಎಂದಿಟ್ಟುಕೊಂಡು ಅವಲೋಕವಿಚೇಷ್ಟಿತಗಳನ್ನು ಹೇಳಿರುವರು. ।।೩೧।।

**ಕ್ವಚಿತ್ ಕದಾಚಿತ್ ಹರಿಚಕ್ರತಃ** ಎಂಬುದನ್ನು ವ್ಯಾಖ್ಯಾನಿಸುವರು

**ಕದಾಚಿದೀಶ್ವರಸ್ಯ ಭಗವತೋ ವಿಷ್ಣೋಶ್ಚಕ್ರಾತ್ ಪರಮಾಣ್ವಾದಿ-ದ್ವಿಪರಾರ್ಧಾಪವರ್ಗ ಕಾಲೋಪಲಕ್ಷಣಪರಿವರ್ತನೇನ ವಯಸ್ತರಸಾ ಹರತ ಆ ಬ್ರಹ್ಮಸ್ತಂಭಾದೀನಾಂ ಮಿಷತಾಂ ವಿತ್ರಸ್ತಹೃದಯಸ್ತಮೇವೇಶ್ವರಂ ಕಾಲಚಕ್ರ-ನಿಜಾಯುಧಂ ಸಾಕ್ಷಾದ್ಭಗವಂತಂ ಯಜ್ಞಪುರುಷಮನಾದೃತ್ಯ ಪಾಷಂಡದೇವತಾಃ ಕಂಕಗೃಧ್ರಬಕಪ್ರಾಯಾ ಆರ್ಯಹಂಸ ಸಮಯಪರಿಭೂತಾಃ ಸಾಂಕೇತ್ಯೇನಾ-ಭಿದತ್ತೇ (ಸಾಕಲ್ಯೇನ) ।।೩೨।।**

**ಕದಾಚಿತ್** ಕೆಲವು ಸಲ **ಪರಮಾಣು** ಅತ್ಯಂತ ಸೂಕ್ಷ್ಮಕಾಲವೇ **ಆದಿ** ಮೊದಲುಗೊಂಡು **ದ್ವಿಪರಾರ್ಧಾಪವರ್ಗ** ಎರಡು ಪರಾರ್ಧಗಳುಳ್ಳ ಬ್ರಹ್ಮದೇವರ ಆಯುಷ್ಯದ ಕೊನೆ ಎಂಬ **ಕಾಲೋಪಲಕ್ಷಣಪರಿವರ್ತನೇನ** ಕಾಲದ ಜ್ಞಾಪಕವಾದ ಸುತ್ತುವಿಕೆಯಿಂದ **ಆಬ್ರಹ್ಮಸ್ತಂಭಾದೀನಾಂ** ಬ್ರಹ್ಮದೇವರನ್ನಾರಂಭಿಸಿ ತೃಣಜೀವ ಪರ್ಯಂತ **ಮಿಷತಾಂ** ಪ್ರಾಣಿಗಳ **ವಯಃ** ಆಯುಷ್ಯವನ್ನು **ತರಸಾ** ವೇಗದಿಂದ **ಹರತಃ** ಮುಗಿಸುವ **ಭಗವತಃ** ಐಶ್ವರ್ಯಶಾಲಿಯಾದ **ಈಶ್ವರಸ್ಯ** ಸರ್ವೋತ್ತಮನಾದ ಸರ್ವ ಸಮರ್ಥನಾದ(**ಮಹತಃ** ದೇಶಕಾಲಗುಣಗಳಿಂದಲೂ ಉತ್ತಮನಾದ - **ವಿಜಯಧ್ವಜಪಾಠ**) **ವಿಷ್ಣೋಃ** ಶ್ರೀಹರಿಯ **ಚಕ್ರಾತ್** ಕಾಲಚಕ್ರದಿಂದ (ಇದರಿಂದ ಸುದರ್ಶನಚಕ್ರ ಇಲ್ಲಿ ವಿವಕ್ಷಿತವಲ್ಲವೆಂದು ತಿಳಿಯಬೇಕು) **ವಿತ್ರಸ್ತಹೃದಯಃ** ಹೆದರಿದ ಮನಸ್ಸುಳ್ಳವನಾಗಿ **ಕಾಲಚಕ್ರನಿಜಾಯುಧಂ** ಕಾಲ ಚಕ್ರವೇ ತನ್ನ ಆಯುಧವಾಗಿವುಳ್ಳ **ಯಜ್ಞಪುರುಷಂ** ಯಜ್ಞಕ್ಕೆ ಉದ್ದೇಶ್ಯನಾದ, ಫಲದಾತೃವಾದ **ಸಾಕ್ಷಾದ್ಭಗವಂತಂ** ಮುಖ್ಯ ಷಡ್ಗುಣವಂತನಾದ **ತಂ ಈಶ್ವರಂ** ನಿಯಾಮಕನಾದ ಆ ಶ್ರೀಹರಿಯನ್ನು **ಅನಾದೃತ್ಯ** ಆದರಿಸದೇ(ಸೇವಿಸದೇ) **ಆರ್ಯಹಂಸಸಮಯಪರಿಭೂತಾಃ** ಜ್ಞಾನಿಗಳ ಶುದ್ಧ ಸಿದ್ಧಾಂತದಲ್ಲಿ ನಿಂದಿತಗಳಾದ **ಕಂಕಗೃಧ್ರಬಕಪ್ರಾಯಾಃ** ಕಾಗೆ, ಹದ್ದು, ಬಕಪಕ್ಷಿಗಳ ಸ್ವಭಾವದ **ಪಾಷಂಡದೇವತಾಃ** ಪಾಖಂಡ ಕ್ಷುದ್ರ ದೇವತೆಗಳನ್ನು **ಸಾಕಲ್ಯೇನ** ಎಲ್ಲ ರೀತಿಯಿಂದಲೂ **ಸಾಂಕೇತ್ಯೇನ** ಕೇವಲ ಸಂಕೇತದಿಂದ ಅಂದರೆ ಮೂಲಪ್ರಮಾಣವಿಲ್ಲದೇ **ಅಭಿಧತ್ತೇ** ಶೀಘ್ರಫಲ ಕೊಡುವುದರಿಂದ ಇವೇ ದೇವತೆಗಳು ಎಂದು ಹೇಳುವನು. ಅವುಗಳನ್ನೇ ಸೇವಿಸುವನು. ಪ್ರಾಣಿಗಳ ಆಯುರ್ಹರಣ ಮಾಡುವ ಕಾಲಚಕ್ರದಿಂದ ಮರಣ ಬಂದೇ ಬರುವುದು ಆದ್ದರಿಂದ ಸಾಯುವುದಕ್ಕೆ ಮೊದಲೇ ವಿಷಯ ಭೋಗಕ್ಕಾಗಿ ಶೀಘ್ರಫಲ ಕೊಡುವ ಈ

ದೇವತೆಗಳೇ ಸೇವ್ಯಗಳೆಂಬ ಭಾವನೆಯಿಂದ ಸೇವಿಸುವನು ಎಂದು ತಾತ್ಪರ್ಯ. ॥೩೨॥

**ತ್ರೈವರ್ಣಂಚಿತಃ** ಎಂಬುದನ್ನು ವಿವರಿಸುವರು

**ಯದಾ ತು ತಾಭಿಃ ಪಾಷಂಡದೇವತಾಭಿರಾತ್ಮವಂಚಕೈರುರುವಂಚಿತೋ ಬ್ರಹ್ಮಕುಲಂ ಸಮಾವಿಶಂಸ್ತೇಷಾಂ ಶೀಲಮುಪನಯನಾದಿಶ್ರೌತಸ್ಮಾರ್ತ-ಕರ್ಮಾನುಷ್ಠಾನೇನ ಭಗವತೋ ಯಜ್ಞಪುರುಷಸ್ಯಾರಾಧನಮೇವ ಪುನಸ್ತದರೋಚಯಂಚ್ಛೂದ್ರಕುಲಂ ಭಜತ್ಯನಿಗಮ ಪರಿಶುದ್ಧಂ ಯಸ್ಯ ಹಿ ಮಿಥುನೀಭಾವಃ ಕುಟುಂಬಭರಣಂ ಯಥಾವಾನರಜಾತೇಸ್ತತ್ರಾಪಿ ನಿರವರೋಧಃ ಸ್ವೈರೇಣ ವಿಹರನ್ನತಿಕೃಪಣಬುದ್ಧಿರನ್ಯೋನ್ಯಮುಖನಿರೀಕ್ಷಣಾದಿಗ್ರಾಮ್ಯ ಕರ್ಮಣ್ಯೈವ ವಿಸ್ಮೃತಕಾಲಾವಧಿಃ ॥೩೩॥**

**ಯದಾ ತು** ಯಾವಾಗ **ಆತ್ಮವಂಚಕೈಃ** ತಮ್ಮನ್ನೇ ವಂಚನೆ ಮಾಡಿಕೊಳ್ಳುವ (ತಮಗೆ ಸರಿಯಾಗಿ ಪೂಜೆಯಾಗದಿರುವ) **ಪಾಷಂಡದೇವತಾಭಿಃ** ಆ ಪಾಖಂಡಿ ಕಲ್ಪಿತ ಕ್ಷುದ್ರ ದೇವತೆಗಳಿಂದ **ಉರುವಂಚಿತಃ** ಬಹಳ ವಂಚಿತನಾಗುವನೋ **ತದಾ** ಆವಾಗ **ಬ್ರಹ್ಮಕುಲಂ ಸಮಾವಿಶನ್** ಬ್ರಾಹ್ಮಣ ಜಾತಿಯನ್ನು ಆಶ್ರಯಿಸುವವನಾಗಿ **ಪುನಃ** ಮತ್ತೆ **ತೇಷಾಂ** ಬ್ರಾಹ್ಮಣರ ಉಪನಯನಾದಿ **ಶ್ರೌತಸ್ಮಾರ್ತಕರ್ಮಾನುಷ್ಠಾನೇನ** ಉಪನಯನ (ಮುಂಜಿವೆ) ಮೊದಲಾದ ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಕರ್ಮಗಳನ್ನು ಮಾಡುವುದರಿಂದ **ಭಗವತಃ ಯಜ್ಞಪುರುಷಸ್ಯ** ಯಜ್ಞ ಪುರುಷನಾದ ಶ್ರೀಹರಿಯ **ಆರಾಧನಮೇವ** ಆರಾಧಿಸುವುದೆಂಬ **ಯತ್ ಶೀಲಂ** ಯಾವ ಸ್ವಭಾವವೋ **ತತ್** ಅದನ್ನು **ಅರೋಚಯನ್** ಇಷ್ಟ ಸಾಧನವೆಂದು ತಿಳಿಯದೇ **ಅನಿಗಮಪರಿಶುದ್ಧಂ** ವೇದೋಕ್ತ ಸಂಸ್ಕಾರಗಳಿಂದ ಶುದ್ಧವಲ್ಲದ **ಶೂದ್ರಕುಲಂ ಭಜತಿ** ಶೂದ್ರಜಾತಿಯನ್ನೆ ಸೇರುವವನು **ಯಸ್ಯ** ಯಾವ ಶೂದ್ರಕುಲಕ್ಕೆ **ಯಥಾ ವಾನರಜಾತೇಃ** ಕಪಿಗಳ ಜಾತಿಯಂತೆ **ಮಿಥುನೀಭಾವಃ** ಸ್ತ್ರೀಪುರುಷಸಂಯೋಗವು **ಕುಟುಂಬಭರಣಂ** ಕುಟುಂಬ ಪೋಷಣೆಯು ಇಷ್ಟೇ ಕಾರ್ಯವು **ತತ್ರಾಪಿ** ಆ ಶೂದ್ರಕುಲದಲ್ಲಿಯೂ **ನಿರವರೋಧಃ ಸನ್** ವಿಧಿನಿಷೇಧಗಳೆಂಬ ಪ್ರತಿಬಂಧವಿಲ್ಲದೇ **ಸ್ವೈರೇಣ** ತನ್ನ ಇಚ್ಛಾನುಸಾರವಾಗಿ **ವಿಹರನ್** ಕ್ರೀಡಿಸುತ್ತ **ಅತಿಕೃಪಣಬುದ್ಧಿಃ** ಅತ್ಯಂತ ದೈನ್ಯಮನಸ್ಕನಾಗಿ **ಅನ್ಯೋನ್ಯಮುಖನಿರೀಕ್ಷಣಾದಿಗ್ರಾಮ್ಯಕರ್ಮಣ್ಯೈವ** ಪರಸ್ಪರ ಮುಖ ನೋಡುವುದೇ




ಮುಂತಾದ ಗ್ರಾಮ್ಯ ಕರ್ಮದಿಂದಲೇ (ಮೈಥುನದಿಂದಲೇ) **ವಿಸ್ಮೃತಕಾಲಾವಧಿಃ** ತನ್ನ ಮೃತ್ಯುವನ್ನು (ಜೀವನಾವಧಿಯನ್ನು) ಮರೆಯುವನು.।।೩೩।।

**ದ್ರುಮೇಷು ರಂಸ್ಯನ್** ಎಂಬುದರ ಅರ್ಥ ಹೇಳುವರು

**ಕ್ವಚಿದ್ದ್ರುಮವದೈಹಿಕಾರ್ಥೇಷು ಗೃಹೇಷು ರಂಸ್ಯನ್ಯಥಾ ವಾನರಃ ಸುತದಾರವತ್ಸಲೋ ವ್ಯವಾಯಕ್ಷಣಃ ।।೩೪।।**

**ಕ್ವಚಿತ್** ಒಂದೆಡೆ **ದ್ರುಮವತ್** ಮರಗಳಂತೆ **ಐಹಿಕಾರ್ಥೇಷು ಗೃಹೇಷು** ಐಹಿಕ ಪ್ರಯೋಜನವುಳ್ಳ ಮನೆಗಳಲ್ಲಿ **ರಂಸ್ಯನ್** ವಿಹರಿಸುತ್ತ **ಯಥಾ ವಾನರಃ** ಮಂಗನಂತೆ **ಸುತದಾರವತ್ಸಲಃ** ಮಕ್ಕಳು ಮಡದಿಯಲ್ಲಿ ಅಭಿಮಾನಿಯೂ **ವ್ಯವಾಯಕ್ಷಣಃ** ಮೈಥುನಕ್ಕಾಗಿಯೇ ಕಾಲವುಳ್ಳವನಾಗುವನು. ।।೩೪।।

**ಕ್ವಚಿತ್ಪ್ರಮಾದಾತ್** ಎಂಬುದನ್ನು ವಿವರಿಸುವರು

**ಏವಮಧ್ವನ್ಯವರುಂಧಾನೋ ಮೃತ್ಯುಗಜಭಯಾತ್ತಮಸಿ ಗಿರಿಕಂದರಪ್ರಾಯೇ ಪತನ್ ಕರ್ಮವಲ್ಲೀಮವಲಂಬ್ಯ ತತ ಆಪದಃ ಕಥಂಚಿನ್ನರಕಾದ್ವಿಮುಕ್ತಃ ಪುನರಪ್ಯೇವಂ ಸಂಸಾರಾಧ್ವನಿ ವರ್ತಮಾನೋ ನರಲೋಕಸಾರ್ಥಮುಪಯಾತಿ ।।**

**ಏವಂ** ಹೀಗೆ **ಸಂಸಾರಾಧ್ವನಿ** ಸಂಸಾರ ಮಾರ್ಗದಲ್ಲಿ **ಅವರುಂಧಾನಃ** ತಡೆಹಿಡಿಯಲ್ಪಟ್ಟವನಾಗಿ **ಮೃತ್ಯುಗಜಭಯಾತ್** ಮೃತ್ಯುವೆಂಬ ಆನೆಯ ಭಯದಿಂದ **ಗಿರಿಕಂದರಪ್ರಾಯೇ** ಬೆಟ್ಟದ ಗುಹೆಯಂತಿರುವ(ಭಯಂಕರವಾದ) **ತಮಸಿ ಪತನ್** ತಮಸ್ಸಿನಲ್ಲಿ ಬೀಳುವವನಾಗಿ **ಕರ್ಮವಲ್ಲೀಂ ಅವಲಂಬ್ಯ** ಕರ್ಮಗಳೆಂಬ ಬಳ್ಳಿಗಳನ್ನು ಹಿಡಿದುಕೊಂಡು **ತತಃ ಆಪದಃ** ಆ ಆಪತ್ತಿನಿಂದ(ನರಕದಿಂದ) **ಕಥಂಚಿತ್** ದುಃಖವನ್ನು ಅನುಭವಿಸುವ ಮೂಲಕ **ನರಕಾದ್ವಿಮುಕ್ತಃ** ನರಕದಿಂದ ಬಿಡುಗಡೆ ಹೊಂದಿ **ಪುನರಪಿ ಏವಂ** ಮತ್ತೆ ಹೀಗೆಯೇ **ಸಂಸಾರಾಧ್ವನಿ** ಸಂಸಾರ ಮಾರ್ಗದಲ್ಲಿ **ವರ್ತಮಾನಃ** ಇರುವವನಾಗಿ **ನರಲೋಕಸಾರ್ಥಮುಪಯಾತಿ** ಮನುಷ್ಯ ದೇಹವೆಂಬ ಸಂತೆಯನ್ನು ಹೊಂದುವನು. ।।೩೫।।

**ಅಧ್ವನ್ಯಮುಷ್ಮಿನ್ನಜಯಾ** ಎಂಬ ಶ್ಲೋಕವು ಸಂಸಾರಕಾರಣ ಅಜ್ಞಾನವನ್ನು ತಿಳಿಸಲು ಹೊರಟಿದ್ದರೂ ಪರೋಕ್ಷವಾಗಿ ಹೇಳದಿರುವುದರಿಂದ ಅದನ್ನು ಬಿಟ್ಟು **ಅಧ್ವನ್ಯಮುಷ್ಮಿನ್ನುರುಕೃಚ್ಛ್ರ** ಎಂಬುದನ್ನು ವ್ಯಾಖ್ಯಾನಿಸುವರು

**ಏತಸ್ಮಿನ್ ಸಂಸಾರಾಧ್ವನಿ ನಾನಾಕ್ಲೇಶೋಪಸರ್ಗವಿತತೇ(ಬಾಧಿತೇ) ಆಪನ್ನಾಂಸ್ತತ್ರ ವಿಸೃಜ್ಯ ಜಾತಂ ಜಾತಮುಪಾದಾಯ ಶೋಚನ್, ಮುಹ್ಯನ್, ಖಿದ್ಯನ್, ಬಿಭ್ಯನ್, ವಿವಿದನ್, ಕ್ರಂದನ್, (ವಿ)ಹೃಷ್ಯನ್, ರುದನ್, ಗಾಯನ್, (ವಿ)ನಹ್ಯಮಾನಃ, ಸಾಧುವರ್ಜಿತೋಽಸಾಧುವನ ಏವಾವರ್ತತೇಽದ್ಯಾಪಿ ॥೩೬॥**

**ನಾನಾಕ್ಲೇಶೋಪಸರ್ಗವಿತತೇ** ಅನೇಕ ಕಷ್ಟಗಳಿಗೆ ಕಾರಣವಾದ ದೋಷಗಳಿಂದ ವ್ಯಾಪ್ತವಾದ **ಏತಸ್ಮಿನ್** ಈ **ಸಂಸಾರಾಧ್ವನಿ** ಸಂಸಾರ ಮಾರ್ಗದಲ್ಲಿ **ಆಪನ್ನಾನ್** ತೊಂದರೆಗೀಡಾದ ದೇಹಗಳನ್ನು **ತತ್ರ ತತ್ರ** ಅಲ್ಲಲ್ಲಿ **ವಿಸೃಜ್ಯ** ಬಿಟ್ಟು **ಜಾತಂ ಜಾತಂ** ಉಂಟಾದ ಹೊಸ ದೇಹಗಳನ್ನು **ಉಪಾದಾಯ** ಸ್ವೀಕರಿಸಿ **ಶೋಚನ್** ದುಃಖ ಪಡುತ್ತ **ಮುಹ್ಯನ್** ಮೋಹಗೊಳ್ಳುತ್ತ **ಖಿದ್ಯನ್** ಅತೃಪ್ತಿಪಡುತ್ತ **ಬಿಭ್ಯನ್** ಭಯಪಡುತ್ತ **ಹೃಷ್ಯನ್** ಸಂತೋಷಪಡುತ್ತ (ದುಃಖ ಸಂಬಂಧದಿಂದ ಹರ್ಷವೂ ಕ್ಲೇಶದಾಯಕವೆಂದು ಹೇಳಿರುವರು) **ರುದನ್** ಅಳುತ್ತ **ಗಾಯನ್** ಹಾಡುತ್ತ (ಇದೂ ಹರ್ಷದಂತೆ ದುಃಖಕರ) **ಸಾಧುವರ್ಜಿತಃ** ಸನ್ಮಾರ್ಗ ತೋರಿಸುವ ಸಜ್ಜನನಿಲ್ಲದೇ (**ನೈವಾವರ್ತತೇ** ಹಿಂತಿರುಗಿ ಬರುತ್ತಿಲ್ಲ) **ಅದ್ಯಾಪಿ** ಈಗಲೂ **ಅಸಾಧುವನೇ ಏವ** ಅಸಜ್ಜನ ಸಮೂಹದಲ್ಲಿಯೇ (ಭವಾಟವಿಯಲ್ಲಿಯೇ) **ಆವರ್ತತೇ** ಸುತ್ತುತ್ತಿರುವನು.

**ನ ಕಶ್ಚಿದತ್ರ** ಎಂಬುದನ್ನು ವಿವರಿಸುವರು

**ಯತ ಆರಬ್ಧಃ ಏಷ ನರಲೋಕಸಾರ್ಥಃ ಯಮಧ್ವನಃ ಪಾರಮುಪದಿಶಂತಿ ಯದಿದಂ ಯೋಗಾನುಶಾಸನಂ ನಾಮ ಶಂತಮಂ ನ ವಾ ಏತದನುರುಂಧೇ ನ್ಯಸ್ತದಂಡಾ ಶಾಂತಿಮಂತ ಉಪಶಮಶೀಲಾ ಉಪರತಾತ್ಮಾನ ಉಪತಿಷ್ಠಂತಿ ಯದಪಿ ದಿಗ್ವಿಜಯಿನೋ ಯಜ್ವಾನೋ ರಾಜರ್ಷಯೋ ನೈವೈತದ್ ವ್ರಜಂತಿ ಕಿಂತು ವ್ಯೃಧೇ ಶಯೀರನ್ ಯಸ್ಯಾಮೇವ ಮಮೈವೇಯಂ ಮಹೀತಿ ಕೃತವೈರಾನುಬಂಧಾಃ ಯಾಂ ವಿಸೃಜ್ಯ ಸ್ವಯಮುಪಸಂಹೃತಾಃ । ಯಸ್ಯಾಮಿಮೇ ಉಪಸರ್ಗಾಃ ಸುಖದುಃಖರಾಗದ್ವೇಷಭಯಾಭಿಮಾನಪ್ರಮಾದೋನ್ಮಾದ ಶೋಕಮೋಹಮಾತ್ಸರ್ಯೇರ್ಷ್ಯಾವಮಾನಕ್ಷುತ್ಪಿಪಾಸಾಧಿವ್ಯಾಧಿ ಜರಾಜನ್ಮಮರಣಾದಯಃ (ವಿಜಯಧ್ವಜಯಲ್ಲಿ ಮೂಲ ವಾಕ್ಯಗಳು ಹಿಂದೆ ಮುಂದೆ ಇರುವುವು) ॥೩೭॥**

 

**ಏಷಃ** ಈ **ನರಲೋಕಸಾರ್ಥಃ** ಮನುಷ್ಯ ಸಮೂಹವು **ಯತಃ** ಯಾವನಿಂದ **ಆರಬ್ಧಃ** ಪ್ರವೃತ್ತವಾಯಿತೋ **ಯಂ** ಯಾವಾತನನ್ನು **ಅಧ್ವನಃ** ಸಂಸಾರ ಮಾರ್ಗದ **ಪಾರಂ ಉಪದಿಶಂತಿ** ಕೊನೆ ಎಂದು ಜ್ಞಾನಿಗಳು ಉಪದೇಶಿಸುವರೋ **ಯತ್** ಯಾವನ ವಿಷಯದಲ್ಲಿ **ಇದಂ ಯೋಗಾನುಶಾಸನಂ ನಾಮ** ಈ ಯೋಗಶಾಸ್ತ್ರವು ಪ್ರವೃತ್ತವಾಗಿದೆಯೋ **ಏತತ್** ಅಂಥ **ಶಂತಮಂ** ಸುಖತಮನಾದ ಪರಬ್ರಹ್ಮನನ್ನು **ನ ವಾ ಅನುರುಂಧೇ** ಹೊಂದಲಾರನು. **ನ್ಯಸ್ತದಂಡಾಃ** ವ್ಯರ್ಥ ಹಿಂಸಾ ಮಾಡದಿರುವವರು **ಶಾಂತಿಮಂತಃ** ಭಗವನ್ನಿಷ್ಠೆ ಉಳ್ಳವರು **ಉಪಶಮಶೀಲಾಃ** ಧ್ಯಾನ ಮಾಡುವ ಸ್ವಭಾವದವರು **ಉಪರತಾತ್ಮಾನಃ** ಮನೋಜಯ ಉಳ್ಳವರು **ಯತ್** ಯಾವುದನ್ನು **ಉಪತಿಷ್ಠಂತಿ** ಹೊಂದುವರೊ **ತದೇತತ್ ನ ವಾ ಅನುರುಂಧೇ** ಎಂದು ಅನ್ವಯ **ದಿಗ್ವಿಜಯಿನಃ** ದಿಕ್ಕುಗಳನ್ನು ಗೆದ್ದವರು **ಯಜ್ವಾನಃ** ಯಜ್ಞ ಮಾಡುವವರು **ರಾಜ ಋಷಯ** ರಾಜ ಋಷಿಗಳು **ನೈವ ಏತದ್ ವ್ರಜಂತಿ** ಈ ಶ್ರೀಹರಿಯನ್ನು ಹೊಂದುವುದಿಲ್ಲ **ಕಿಂತು** ಆದರೆ **ಮಮೈವ ಇಯಂ ಮಹೀ ಇತಿ** ಈ ಭೂಮಿಯು ನನ್ನದೇ ಎಂದು **ಕೃತ ವೈರಾನುಬಂಧಾಃ** ದ್ವೇಷವನ್ನು ಬೆಳೆಸಿಕೊಂಡು **ಯಾಂ** ಯಾವ ಭೂಮಿಯನ್ನು **ವಿಸೃಜ್ಯ** ತೊರೆದು **ಸ್ವಯಂ** ತಾವೇ **ಉಪಸಂಹೃತಾಃ** ಕೊಲ್ಲಲ್ಪಟ್ಟವರಾಗಿ **ಮೃಧೇ** ಯುದ್ಧದಲ್ಲಿ **ಶಯೀರನ್** ಮಲಗುವರು*.

ಕ್ಲೇಶೋಪಸರ್ಗಗಳನ್ನು ಹೇಳುತ್ತಾರೆ

**ಯಸ್ಯಾಂ** ಯಾವ ಸಂಸಾರಾಟವಿಯಲ್ಲಿ ಸುಖ, ದುಃಖ, ರಾಗ, ದ್ವೇಷ, ಭಯ, ಅಭಿಮಾನ, ಪ್ರಮಾದ, ಉನ್ಮಾದ, ಶೋಕ, ಮೋಹ, ಮಾತ್ಸರ್ಯ, ಈರ್ಷ್ಯಾ (ಅಸೂಯೆ), ಅವಮಾನ, ಹಸಿವು(ಕ್ಷುತ್), ನೀರಡಿಕೆ(ಪಿಪಾಸಾ), ಮನೋವ್ಯಥೆ (ಆಧಿ), ಶರೀರವ್ಯಥೆ (ವ್ಯಾಧಿ), ಮುಪ್ಪು, ಹುಟ್ಟು, ಸಾವು ಮುಂತಾದವು ಕ್ಲೇಶಜನಕ ದೋಷಗಳು ಇರುವುವು.

**॥ ಇಲ್ಲಿಗೆ ೧೪ನೇ ಅಧ್ಯಾಯವು ಮುಗಿಯಿತು ॥**

★★★

★ ವಿಜಯಧ್ವಜದಲ್ಲಿ ಇಲ್ಲಿ ಕಾಣಸುವ ಶ್ಲೋಕಗಳು 13ನೇ ಅಧ್ಯಾಯದಲ್ಲಿಯೇ ಯಾದುಪತ್ಯ ಪ್ರಕಾರ ವ್ಯಾಖ್ಯಾನಿಸಿದೆ.

## ಹದಿನಾಲ್ಕನೇ ಅಧ್ಯಾಯದ ಸಾರ

**ಪರೀಕ್ಷಿದ್ರಾಜರು** - ಮಹಾಭಗವದ್ಭಕ್ತರಾದ ಶುಕಾಚಾರ್ಯರೇ! ಶ್ರೀಹರಿಯ ಪೂರ್ಣತೆಯನ್ನು ಬಲ್ಲ ಸರ್ವಜ್ಞಕಲ್ಪರಾದ ತಾವು ಗೂಢಾರ್ಥವಾಗಿ ಜೀವಲೋಕದ ಸಂಸಾರ ಮಾರ್ಗವನ್ನು ಹೇಳಿದಿರಿ. ಅದು ಪಂಡಿತರ ಬುದ್ಧಿಯಿಂದ ನಿರ್ಣೀತವಾದ ವಿಷಯವು. ಶಬ್ದದ ವ್ಯಂಗ್ಯಾರ್ಥವನ್ನು ತಿಳಿಯದ ಜನರಿಗೆ ಅದು ಸರಿಯಾಗಿ ತಿಳಿಯಲಾಗುವುದಿಲ್ಲ. ದೇವತೆಗಳು ಪರೋಕ್ಷಪ್ರಿಯರು. ತಿಳಿಯಲಸಾಧ್ಯವಾದ್ದರಿಂದ ಅದನ್ನು ಈ ಶಬ್ದಕ್ಕೆ ಇದು ಅರ್ಥವೆಂಬ ರೀತಿಯಲ್ಲಿ ಬಿಡಿಸಿ ತಿಳಿಯುವಂತೆ ಮತ್ತೆ ವಿಶದಪಡಿಸಿರಿ.

**ಸೂತರು** - ಶೌನಕರೇ! ರಾಜರ ಈ ಪ್ರಶ್ನೆಗೆ ಉತ್ತರವಾಗಿ ಶುಕಾಚಾರ್ಯರು ಮುಂದಿನಂತೆ ಹೇಳಿದರು.

**ಶುಕಾಚಾರ್ಯರು** - ಸರ್ವನಿಯಾಮಕೋತ್ತಮನೂ ಭಗವಚ್ಛಬ್ದವಾಚ್ಯನೂ ಆದ ವಿಷ್ಣುವಿನ ಅಧೀನವಾದುದು ಪ್ರಕೃತಿ. ಇದರಿಂದ ಜೀವಸಮುದಾಯವು ಸುಗಮವಲ್ಲದ ಸಂಸಾರ ಮಾರ್ಗದಲ್ಲಿ ನಿವೇಶಿತವಾಗಿದೆ. ದೇಹದಲ್ಲಿ ನಾನು ನನ್ನದು ಎಂಬ ಅಭಿಮಾನವುಳ್ಳ ಈ ಜೀವರ ಪುಣ್ಯ, ಪಾಪ ಮತ್ತು ಮಿಶ್ರಕರ್ಮಗಳು ಸಾತ್ವಿಕರಾಜಸ ತಾಮಸವೆಂದು ವಿಭಕ್ತವಾಗಿವೆ. ಈ ಕರ್ಮಗಳ ಫಲವಾಗಿ ಶ್ರೀಹರಿಯು ವಿವಿಧದೇಹಗಳನ್ನು ಕೊಡುವನು. ಆ ದೇಹಗಳ ಸಂಯೋಗ ವಿಯೋಗ ರೂಪವಾದುದೇ ಈ ಅನಾದಿ ಸಂಸಾರ. ಈ ಸಂಸಾರದ ದುಃಖಪರಂಪರೆಯ ಅನುಭವಕ್ಕೆ ಮನಸ್ಸು ಮತ್ತು ಐದು ಜ್ಞಾನೇಂದ್ರಿಯಗಳು ಕಾರಣ. ಈ ಸಂಸಾರವು ದುರ್ಗಮ ಮಾರ್ಗದಂತೆ ಬಹುಕಠಿಣವಾದುದು. ಹಣ ಸಂಪಾದನೆಗಾಗಿ ಹೊರಟ




ವರ್ತಕರ ಗುಂಪಿನಂತೆ ಜೀವಸಮುದಾಯವು ತಮ್ಮ ತಮ್ಮ ಶರೀರಗಳಿಂದ ಮಾಡಿದ ಪುಣ್ಯಪಾಪಕರ್ಮ ಫಲಗಳಾದ ಸುಖದುಃಖಗಳನ್ನು ಅನುಭವಿಸುತ್ತಾ ಮಸಣದಂತೆ ಅಮಂಗಲಕರವಾದ ಈ ಸಂಸಾರಾಟವಿಯನ್ನು ಹೊಕ್ಕಿದೆ. ನಿಷ್ಫಲಗಳಾದ ಅನೇಕ ಉಪಾಯಗಳನ್ನು ಮಾಡಿ ಸಾವಿರಾರು ಮನೋದುಃಖಗಳಿಗೆ ಈಡಾಗಿದೆ. ಈ ಎಲ್ಲ ದುಃಖಗಳ ನಾಶರೂಪವಾದ ಮೋಕ್ಷಕ್ಕೆ ಸಾಧನವಾದ ಹರಿಗುರುಚರಣಾರವಿಂದ ಮಧುಕರರಾದ ಸಾಧುಜನರ ಸೇವೆಯನ್ನು ಅದು ಇಂದಿಗೂ ಹೊಂದುತ್ತಿಲ್ಲ. ಈ ಸಂಸಾರಾಟವಿಯಲ್ಲಿ ಷಡಿಂದ್ರಿಯಗಳೆಂಬುವು ವ್ಯಾಪಾರದಿಂದ ಕಳ್ಳರಂತೆ ಇವೆ. ಇವು ಮುಮುಕ್ಷು ಜೀವನು ಬಹುಕಷ್ಟಪಟ್ಟು ಹಿಂದಿನ ಅಥವಾ ಇಂದಿನ ಜನ್ಮದಲ್ಲಿ ಸಂಪಾದಿಸಿದ ಮೋಕ್ಷಸಾಧನವಾದ ಶ್ರೀಹರಿಯ ಆರಾಧನೆ ಎಂಬ ಧನವನ್ನು ಮೋಕ್ಷಕಾರಣವಾದ ಧರ್ಮಾನುಗುಣ ಧನವನ್ನು ಹಾಳುಮಾಡುತ್ತವೆ. ಕೆಟ್ಟ ಗುರುಗಳುಳ್ಳ ಕುನಾಯಕನೂ ಆದ್ದರಿಂದಲೇ ಮನೋಜಯವಿಲ್ಲದವನೂ ಆದ ಈ ಜೀವನ ಮನೆಯಲ್ಲಿ ಹೆಂಡತಿ ಮಕ್ಕಳನ್ನು ನೋಡುವುದು, ಮುಟ್ಟುವುದು, ಅವರೊಡನೆ ಮಾತನಾಡುವುದು, ಕೇಳುವುದು, ರಸಾಸ್ವಾದನೆ ಮಾಡುವುದು, ವಾಸನೆ ನೋಡುವುದು ಮತ್ತು ಮನಃಸಂಕಲ್ಪ ಸಮೂಹರೂಪವಾದ ಐಹಿಕ ವಿಷಯಸುಖಾನುಭವದಿಂದ ಅವನಿಗೆ ಶ್ರೀಹರಿಯ ಆರಾಧನೆಗೆ ಅವಕಾಶವಿಲ್ಲದಂತೆ ಮಾಡುತ್ತವೆ. ಮತ್ತೂ ಈ ಅಡವಿಯಲ್ಲಿ ಕುಟುಂಬಿಯಾದ ಜೀವನ ಹೆಂಡತಿಮಕ್ಕಳೆನಿಸಿಕೊಂಡವರು ವ್ಯಾಪಾರದಿಂದ ತೋಳನರಿಗಳಂತೆ ಇರುವರು. ನೋಡುತ್ತಿದ್ದಂತೆಯೇ ಕಾಯಿದಿರಿಸಿದ ಕುರಿಮರಿಯನ್ನು ತೋಳನರಿಗಳು ಒಯ್ಯುವಂತೆ ಕುಟುಂಬಿಯು ನೋಡುತ್ತಿದ್ದಂತೆಯೇ ಅವನು ರಕ್ಷಿಸಿದ ಧನವನ್ನು ಅವನಿಗಿಷ್ಟವಿಲ್ಲದಿದ್ದರೂ ಇವರು ಅಪಹರಿಸುವರು. ಊಳುತ್ತಿದ್ದರೂ ಬೀಜವನ್ನು ಸುಡದಿರುವ ಹೊಲದಲ್ಲಿ ಪ್ರತಿವರ್ಷವೂ ಮತ್ತೆ ಮತ್ತೆ ಬೀಜ ಹಾಕುವ ವೇಳೆಗೆ ಪೊದೆಹುಲ್ಲು ಮತ್ತು ಬಳ್ಳಿಗಳು ಬೆಳೆದು ಹೇಗೆ ಹೊಲವು ನಡೆಯಲಾಗದಂತಾಗುವುದೋ ಅದರಂತೆ ಈ ಗೃಹಸ್ಥಾಶ್ರಮವೆಂಬ ಕರ್ಮಕ್ಷೇತ್ರವು ಕರ್ಮಗಳಿಂದ ತುಂಬಿ ನಿರ್ವಹಿಸಲಸಾಧ್ಯವಾಗುವುದು. ಇದರಲ್ಲಿ ಪ್ರವೃತ್ತಿ ಕರ್ಮಗಳು ಮುಗಿಯುವುದೇ ಇಲ್ಲ. ಈ ಗೃಹಸ್ಥಾಶ್ರಮವು ಪಕ್ವವಾಗದಿರುವ ಐಹಿಕಾಮುಷ್ಮಿಕ ಫಲಾಸಕ್ತಿಯ ದಂತದ ಭರಣಿ. ಇದರಲ್ಲಿ ಆಸಕ್ತನಾದ ಜೀವನ ಹೊರಪ್ರಾಣಗಳೆನಿಸಿದ ಹಣವನ್ನು ತಗಣಿ ಸೊಳ್ಳೆಗಳಿಗೆ ಸಮಾನರಾದ ನೀಚಜನರು

ಅಪಹರಿಸಿ ಪೀಡಿಸುವರು. ಪತಂಗಳ, ಹುಳ, ಹಕ್ಕಿ, ಕಳ್ಳ, ಇಲಿ ಮುಂತಾದವು ಇವನ ಧನಧಾನ್ಯಗಳನ್ನು ಮುಗಿಸಿ ಪೀಡಿಸುವವು. ಕರ್ಮಫಲವಾಗಿ ಸಂಸಾರ ಮಧ್ಯದಲ್ಲಿ ಒಮ್ಮೆ ನಶ್ವರವಾದ ಮನುಷ್ಯ ದೇಹವನ್ನು ಜೀವನು ಹೊಂದುವನು. ಅವಿದ್ಯಾಕಾಮಕರ್ಮಗಳಿಂದ ದೂಷಿತ ಮನಸ್ಕನಾಗಿ ಇದನ್ನೇ ಸ್ಥಿರವೆಂದು ತಪ್ಪಾಗಿ ತಿಳಿಯುವನು. ಮತ್ತೊಮ್ಮೆ ಎಲ್ಲ ದೋಷಗಳಿಗೂ ಆವಾಸಸ್ಥಾನವಾದ ದೇಹವಿಶೇಷವನ್ನು (ಪುರುಷ ಅಥವಾ ಸ್ತ್ರೀದೇಹವನ್ನು ) ಹೊಂದುವನು. ಅದರ ಕಾಂತಿ, ಐಶ್ವರ್ಯ, ಗುಣಗಳಿಗೆ ಮಾರುಹೋಗಿ ತನ್ನನ್ನು ಪಾಪಿ ಎಂದು ಬಗೆಯುವನು. ಅಗ್ನಿಯನ್ನು ಅಪೇಕ್ಷಿಸುವ ಒಬ್ಬನು ಭ್ರಾಂತಿಯಿಂದ ಬೆಂಕಿಯಂತೆ ಜ್ವಲಿಸುವ ಪಿಶಾಚವನ್ನು ಅಪೇಕ್ಷಿಸುವಂತೆ ಸ್ತ್ರೀಯಳನ್ನು ಹೊಂದಿ ಅವಳ ಭೋಗಕ್ಕಾಗಿ ಸುಂದರ ದೇಹವನ್ನು ಬಯಸುವನು. ಗೃಹಪಾನೀಯದ್ರವಿಣಗಳು ತನ್ನ ಜೀವನಕ್ಕೆ ಅವಶ್ಯಕಗಳೆಂದು ಅವುಗಳಲ್ಲಿ ಅಭಿನಿವೇಶವುಳ್ಳವನಾಗಿ ಈ ಭವಾರಣ್ಯದಲ್ಲಿ ಅತ್ತಿತ್ತ ಧಾವಿಸುವನು. ಸುಂಟರಗಾಳಿಯು ಎತ್ತಿಕೊಂಡು ಹೋಗುವಂತೆ ಮೋಹಕಳಾದ ಸ್ತ್ರೀಯು ತನ್ನ ತೊಡೆಯ ಮೇಲೇರಿಸಿಕೊಳ್ಳಲು ಆ ವಿಷಯಾನುಭವಕಾಲದ ಅನುರಾಗದಿಂದ ಕುರುಡನಾಗುವನು. ಇವನಿಗೆ ಸಜ್ಜನರ ಮರ್ಯಾದೆಯ ಪರಿವೆ ಇರುವುದಿಲ್ಲ. ದುಷ್ಟರಂತೆ ಇವನೂ ರಜೋಗುಣ ವ್ಯಾಪ್ತಬುದ್ಧಿಯುಳ್ಳವನಾಗುವನು. ಕರ್ಮಸಾಕ್ಷಿಗಳಾದ ದಿಗ್ದೇವತೆಗಳನ್ನೇ ತಿಳಿಯದೇ ಹೋಗುವನು. ಒಮ್ಮೆ ಗೂಬೆಯಂತೆ ಎದುರಿನಲ್ಲಿಯೇ, ಮತ್ತೊಮ್ಮೆ ಅಡಗಿದ್ದು ಶಬ್ದಮಾಡುವ ಕೀಟದಂತೆ ಮರೆಯಲ್ಲಿಯೇ ಕ್ರೌರ್ಯೋತ್ಸಾಹ ಸಂಭ್ರಮಗಳಿಂದ ತೆಗಳುವ ಶತ್ರುಗಳು ಮತ್ತು ರಾಜಭಟರಿಂದ ಕರ್ಣಮನೋವ್ಯಥೆಗೀಡಾಗುವನು. ಇವನ ಪೂರ್ವಸುಕೃತ ಮುಗಿದುಹೋಗಲು ಜಾಲಿಯ ಮರದಂತೆ, ವಿಷದ ಕೂಪದಂತೆ ಐಹಿಕ ಆಮುಷ್ಮಿಕ ಪ್ರಯೋಜನರಹಿತ ಜೀವನ್ಮೃತ ಧನಿಕರನ್ನು ಬದುಕಿದ್ದೂ ಸಾಯಲಿರುವ ಇವನು ಹಿಂಬಾಲಿಸಿ ಓಡುವನು. ಮಹನೀಯರ ಸಹವಾಸದಿಂದ ವಿಷಯಗಳ ನಶ್ವರತೆಯನ್ನು ಅರಿತಿದ್ದರೂ ತಾನೇ ವಿಷಯ ಚಿಂತನೆಗೆ ತುತ್ತಾಗಿ ವಿಷಯಗಳ ಅನಿತ್ಯತೆಯನ್ನು ಮರೆತು ಬಿಸಿಲು ಝಳದ ನೀರಿನಂತೆ ತತ್ಕಾಲದಲ್ಲಿ ತೋರುವ ಆ ವಿಷಯಗಳತ್ತ ಧಾವಿಸುವನು. ದುಷ್ಟಸಹವಾಸದಿಂದ ವಂಚಿತ ಮನಸ್ಕನಾಗಿ ನೀರಿಲ್ಲದ ನದಿಯತ್ತ ಧಾವಿಸುವಂತೆ ಇಹಪರಗಳೆರಡಲ್ಲಿಯೂ ದುಃಖಕ್ಕೆ ಕಾರಣವಾದ ಪಾಖಂಡ ಮತವನ್ನು ಆಶ್ರಯಿಸುವನು. ಇತರರ ತೊಂದರೆಯಿಂದ ತನ್ನ ಇಷ್ಟಾರ್ಥವು ಸಿದ್ಧಿಸದೇಹೋದಾಗ

 

ತಂದೆಯು ಮಕ್ಕಳನ್ನು ಮಕ್ಕಳು ತಂದೆಯನ್ನೂ ಪೀಡಿಸತೊಡಗುವರು. ಇವನ ಮನೆಯು ಪ್ರಿಯವಾದ ಪ್ರಯೋಜನರಹಿತವಾಗಿ ದುಃಖಕ್ಕೆ ಕಾರಣವಾಗಿ ಕಾಡುಗಿಚ್ಚಿನಂತಿರುವುದು. ಇದರಲ್ಲಿ ಸಿಕ್ಕಿಕೊಂಡು ಶೋಕಾಗ್ನಿಯಿಂದ ಬೆಂದು ಬಹಳ ವಿಷಾದಪಡುವನು. ಕಾಲಪ್ರಯುಕ್ತವಾಗಿ ರಾಜಸಂಬಂಧಿ ಜನರು (ಆಡಳಿತವರ್ಗದವರು) ಪ್ರತಿಕೂಲರಾಗಿ ರಾಕ್ಷಸರಂತೆ ಇವನಿಗೆ ಅತ್ಯಂತ ಪ್ರಿಯ ಬಹಿಃಪ್ರಾಣವೆನಿಸಿದ ಧನವನ್ನು ಕಸಿದುಕೊಂಡು ಹೋಗಲು ಬದುಕಿನ ಚಿನ್ಹೆಯೇ ಇಲ್ಲದಂತಾಗಿ ಹೆಣದಂತೆ ಕಾಂತಿಗುಂದುವನು. ಮನಸ್ಸಿನ ಸಂಸ್ಕಾರ ವಿಶೇಷದಿಂದ ಹೊರಗೆ ಇಲ್ಲದಿರುವ ತಂದೆ ತಾತ ಮೊದಲಾದವರನ್ನು ಹೊರಗಿರುವರೆಂದು ಸ್ವಪ್ನದಲ್ಲಿ ಕಂಡು ಸುಖಪಡುವನಂತೆ ಆಗುವನು. ಗೃಹಸ್ಥಾಶ್ರಮಿಯು ವಿಧಿಯನ್ನನುಸರಿಸಿ ಮಾಡಬೇಕಾಗಿರುವ ಪ್ರವೃತ್ತಿಕರ್ಮಗಳೆಂಬ ಅತಿಭಾರದ ಬೆಟ್ಟಗಳನ್ನು ಸಂಪೂರ್ಣವಾಗಿ ಮಾಡುವುದರ ಮೂಲಕ ಹತ್ತಬೇಕೆಂದು ಅಪೇಕ್ಷಿಸಿ ಲೌಕಿಕ ವ್ಯಸನದಿಂದ ಮನಸ್ಸು ಸೆಳೆದವನಾಗಿ ಮುಳ್ಳುಕಲ್ಲುಗಳ ಹೊಲವನ್ನು ಹೊಕ್ಕವನಂತೆ ದುಃಖಿಸುವನು. ತಡೆಯಲಾಗದ ಜಠರಾಗ್ನಿಯಿಂದ ಶಕ್ತಿಗುಂದಿ ಧೈರ್ಯಹೀನನಾಗಿ ಕುಟುಂಬದವರ ಮೇಲೆಯೇ ಕೋಪಗೊಳ್ಳುವನು. ನಿದ್ರೆ ಎಂಬ ಹೆಬ್ಬಾವಿನಿಂದ ನುಂಗಲ್ಪಟ್ಟು ಕಣ್ಣು ಕಾಣದ ಕತ್ತಲೆಯ ಒಳಹೊಕ್ಕವನನಂತೆ ಬಾಹ್ಯವಸ್ತುಜ್ಞಾನವಿಲ್ಲದವನಾಗುವನು. ನಿರ್ಜನಾರಣ್ಯದಲ್ಲಿ ಬಿದ್ದಿರುವ ಹೆಣದಂತೆ ಮಲಗಿರುವನು. ದುಷ್ಟಜನರೆಂಬ ಸರ್ಪಗಳು ಕಚ್ಚಲು ಅವರಲ್ಲಿ ಸ್ನೇಹಭಾವವನ್ನು ತೊರೆದು ನಿದ್ರೆಗೆ ಅವಕಾಶವಿಲ್ಲದವನಾಗಿ ಮನನೊಂದವನಾಗುವನು. ಅವನ ವಿವೇಕ ವಿಜ್ಞಾನಗಳು ನಶಿಸುವವು ಕುರುಡನಂತೆ ಅವಿವೇಕದ ಅಂಧಕೂಪದಲ್ಲಿ ಬೀಳುವನು. ವಿಷಯ ಸುಖಲೇಶಗಳನ್ನು ಅರಸುತ್ತ ಪರಸ್ತ್ರೀ ಪರದ್ರವ್ಯಗಳನ್ನು ಅಪಹರಿಸುವನಾಗಿ ರಾಜರಿಂದಲೋ ಯಜಮಾನನಿಂದಲೋ ಅವಮಾನಿತನಾಗುವನು. ಕೊನೆಯಿಲ್ಲದ ನರಕಕ್ಕೆ ಬೀಳುವನು. ತನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡಾಗಲೂ ಅದರಲ್ಲಿಯೂ ದೋಷವಿರುವುದರಿಂದ ಅದೂ ಸಂಸಾರಕ್ಕೆ ಬೀಜವೆಂದೇ ಜ್ಞಾನಿಗಳು ಹೇಳುವರು. ಒಂದು ವೇಳೆ ಶಿಕ್ಷೆಯಿಂದ ತಪ್ಪಿಸಿಕೊಂಡರೂ ಇವನು ಅಪಹರಿಸಿದ್ದ ಒಡವೆಯನ್ನು ಮತ್ತೊಬ್ಬ ಬಲಿಷ್ಠನೂ ಅವನಿಂದ ಅವನಿಗಿಂತ ಬಲಿಷ್ಠನಾದವನು ಅಪಹರಿಸುವರು. ಹೀಗೆ ಆ ವಡವೆಯು ಯಾವನೊಬ್ಬನ ಸುಖಕ್ಕೂ ಕಾರಣವಾಗದೇ ಹೋಗುವುದು. ಚಳಿ, ಮಳೆ, ಬಿಸಿಲು ಮೊದಲಾದ ಆಧಿದೈವಿಕ, ಆಧ್ಯಾತ್ಮಿಕ, ಆಧಿ

ಭೌತಿಕ ದುಃಖಗಳಿಗೆ ಪ್ರತೀಕಾರ ಮಾಡಿಕೊಳ್ಳಲು ಅಸಮರ್ಥನಾಗಿ ಅತ್ಯಂತ ಚಿಂತೆಗೊಳಗಾಗಿ ವಿಷಣ್ಣನಾಗುವನು. ಪರಸ್ಪರ ವ್ಯವಹಾರದಲ್ಲಿ ವ್ಯಾಪಾರಿಯು ಒಂದು ಸ್ವಲ್ಪ ಹೆಚ್ಚಿಗೆ ತೆಗೆದುಕೊಂಡರೂ ಹಣದಲೋಭದಿಂದ ಅವನಲ್ಲಿ ವಿದ್ವೇಷವನ್ನೇ ಮಾಡುವನು. ಹಣವನ್ನು ಕಳೆದುಕೊಂಡು ಹಾಸಿಗೆ, ಆಸನ ಮೊದಲಾದ ಉಪಭೋಗಸಾಮಗ್ರಿಗಳಿಲ್ಲದೇ ತನ್ನ ಇಷ್ಟಾರ್ಥ ಸಿದ್ಧಿಸದೇ ಹೋದಾಗ ಪರಕೀಯರ ಧನವನ್ನು ಅಪಹರಿಸಲು ನಿಶ್ಚಯಿಸುವನು. ಇದರಿಂದ ಅಪಮಾನಕ್ಕೆ ಗುರಿಯಾಗುವನು. ಹೀಗೆ ಧನ ವ್ಯವಹಾರದಿಂದ ದ್ವೇಷವು ಬೆಳೆದುಹೋಗುವುದು. ಆದರೂ ಹಿಂದಿನ ಸಂಸ್ಕಾರದಿಂದ ವ್ಯವಹರಿಸುವವರೊಡನೆ ಮತ್ತೆ ವ್ಯವಹಾರಕ್ಕೆ ತೊಡಗುವನು. ಈ ಜೀವಸಮುದಾಯವು ಶ್ರೀಹರಿಯಿಂದ ಹೊರಬಂದಿರುವುದು. ಆ ಶ್ರೀಹರಿಯೇ ಸಂಸಾರದ ಕೊನೆಯೆಂದು ಜ್ಞಾನಿಗಳು ಹೇಳುವರು. ಶ್ರೀಹರಿಯೇ ಉಪಾಯವನ್ನು ತಿಳಿಸಿಕೊಡುವನು. ಇವನು ಸುಖತಮನು. ಇವನನ್ನೇ ಧ್ಯಾನ ಮಾಡುವ ಸ್ವಭಾವವುಳ್ಳ ಮುನಿಗಳು ಮನಸ್ಸನ್ನೂ ವಶಪಡಿಸಿಕೊಂಡವರು. ಶ್ರೀಹರಿಯಲ್ಲಿಯೇ ಸುಖಪಡುವವರಾಗಿ ಇವನನ್ನೇ ಹೊಂದುವರು.

ಸ್ತ್ರೀಯು ಶ್ರೀಹರಿಯ ಮೋಹಕಶಕ್ತಿಯ ಆವಾಸಸ್ಥಾನವು. ಸಂಸಾರಿಯು ಬಳ್ಳಿಯಂತಿರುವ ಅವಳ ತೋಳುಗಳ ತೆಕ್ಕೆಯಲ್ಲಿ ಸಿಕ್ಕಿಬಿದ್ದು ವಿವೇಕ ಜ್ಞಾನವನ್ನು ಕಳೆದುಕೊಳ್ಳುವನು. ಅವಳ ಕ್ರೀಡೆಗಾಗಿ ಮನೆ ಮೊದಲಾದವನ್ನು ಮಾಡುವನು. ಗೃಹಸ್ಥಾಶ್ರಮದಲ್ಲಿ ಆಸಕ್ತನಾಗಿ ಮಕ್ಕಳ ಮುದ್ದುಮಾತು, ನೋಟ, ಚೇಷ್ಟೆಗಳಿಗೆ ಮನಸೋಲುವನು. ಹೀಗೆ ಮನಸ್ಸನ್ನೂ ಅಧೀನದಲ್ಲಿ ಇಟ್ಟುಕೊಳ್ಳದ ತನ್ನನ್ನು ಅಂಧಂತಮಸಸ್ಸಿಗೆ ಸೇರುವಂತೆ ಮಾಡಿಕೊಳ್ಳುವನು. ಕೆಲವು ವೇಳೆ ಶ್ರೀಹರಿಯ ಆಯುಧವಾದ ಕಾಲಚಕ್ರದಿಂದ ಭಯಗೊಳ್ಳುವನು. ಪರಮಾಣು ಕಾಲದಿಂದ ಹಿಡಿದು ಬ್ರಹ್ಮಕಲ್ಪ ಪರ್ಯಂತ ಕಾಲವನ್ನು ತಿಳಿಸುತ್ತ ಅದು ಸುತ್ತುತ್ತಿರುವುದು. ಬ್ರಹ್ಮದೇವರಿಂದ ಪ್ರಾರಂಭಿಸಿ ತೃಣಪರ್ಯಂತ ಸಮಸ್ತ ಜೀವರ ಆಯುಸ್ಸನ್ನೂ ಮುಗಿಸುವುದು. ಇದರಿಂದ ಭೀತನಾದ ಸಂಸಾರಿಯು ಕಾಲಚಕ್ರಾಯುಧವನ್ನೂ ಸರ್ವಯಜ್ಞಗಳಿಂದ ಪೂಜ್ಯನೂ ನಿಯಾಮಕನೂ ಆದ ಶ್ರೀಹರಿಯನ್ನು ಸೇವಿಸದೇ ಪಾಷಂಡಿಗಳಿಂದ ದೇವತೆಗಳೆಂದು ಗೌರವಿಸಲ್ಪಟ್ಟ ಕಾಗೆ, ಹದ್ದು, ಬಕಪಕ್ಷಿಗಳ ಸ್ವಭಾವದ ಕ್ಷುದ್ರದೇವತೆಗಳನ್ನು ಸರ್ವರೀತಿಯಿಂದ ಆಶ್ರಯಿಸುವನು. ಜ್ಞಾನಿಗಳ ಸಿದ್ಧಾಂತದಲ್ಲಿ ಈ ದೇವತೆಗಳು ಅಗ್ರಾಹ್ಯವೆಂದು ನಿಂದಿತವಾಗಿರುವವು. ತಮ್ಮನ್ನೇ




ವಂಚಿಸಿಕೊಳ್ಳುವ ಕ್ಷುದ್ರದೇವತೆಗಳು ಇವನ ಇಷ್ಟಾರ್ಥವನ್ನೂ ಕೊಡದೆ ಇವನನ್ನು ವಂಚಿಸುವವು. ಹೀಗೆ ಬಹುವಂಚಿತನಾದ ಇವನು ಬ್ರಾಹ್ಮಣವಂಶವನ್ನು ಸೇರುವನು. ಅವರ ಸ್ವಭಾವಸಿದ್ಧವಾದ ಉಪನಯನಾದಿ ಕರ್ಮಾನುಷ್ಠಾನ ಪೂರ್ವಕ ಭಗವದಾರಾಧನೆಯು ಇವನಿಗೆ ಹಿತಕರವೆಂದು ತೋರಿ ಬರುವುದಿಲ್ಲ. ಆಗ ವೇದಸಂಸ್ಕಾರಪೂತವಲ್ಲದ ಶೂದ್ರಜಾತಿಯಲ್ಲಿಯೂ ಮಿಥುನವಾಗಿರುವಿಕೆ, ಕುಟುಂಬ ಪೋಷಣೆ ಇವುಗಳೇ ಕಾರ್ಯಗಳು. ಆದರಲ್ಲಿಯೂ ವಿಧಿನಿಷೇದರಹಿತನಾಗಿ ಸ್ವೇಚ್ಛೆಯಿಂದ ವಿಹರಿಸುತ್ತ ಅತಿದೀನಮನಸ್ಕನಾಗಿ ಪರಸ್ಪರ ಮುಖಾವಲೋಕನ, ಮೈಥುನಗಳಿಂದ ಕಾಲಹಾಕುತ್ತ ತನ್ನ ಜೀವಿತದ ಅವಧಿಯನ್ನೇ ಮರೆಯುವನು. ಇವನ ಮನೆಗಳು ಮರಗಳಂತೆ ಕೇವಲ ಐಹಿಕ ಫಲವುಳ್ಳವುಗಳು. ಅವುಗಳಲ್ಲಿ ಕ್ರೀಡಿಸುತ್ತ ಕಪಿಯಂತೆ ಹೆಂಡತಿ ಮಕ್ಕಳಲ್ಲಿ ಮಮತೆ ಮಾಡುತ್ತ ಮೈಥುನದಿಂದಲೇ ಸಂತೋಷಿಸುವನು(ಕಾಲಕಳೆಯುವನು). ಹೀಗೆ ಸಂಸಾರ ಪಥದಲ್ಲಿ ಸಿಕ್ಕಿಬಿದ್ದು ಮೃತ್ಯುವೆಂಬ ಆನೆಗೆ ಹೆದರಿ ಪರ್ವತದ ಗುಹೆಯಂತೆ ಭಯಂಕರವಾದ ತಮಸ್ಸಿನಲ್ಲಿ ಬೀಳುವನು. ಕರ್ಮವೆಂಬ ಬಳ್ಳಿಯನ್ನು ಹಿಡಿದುಕೊಂಡು ದುಃಖವನ್ನನುಭವಿಸಿ ಆ ನರಕದಿಂದ ಈಚೆಗೆ ಬಂದರೂ ಮತ್ತೆ ಸಂಸಾರ ಮಾರ್ಗದಲ್ಲಿಯೇ ತೊಳಲುತ್ತ ಮನುಷ್ಯದೇಹವೆಂಬ ವರ್ತಕರ ಗುಂಪನ್ನು ಸೇರುವನು. ಈ ಸಂಸಾರ ಮಾರ್ಗ ಅನೇಕ ಕ್ಲೇಶಗಳಿಂದ ತುಂಬಿದುದು. ಆದರಲ್ಲಿ ತೊಂದರೆಗೀಡಾದ ದೇಹಗಳನ್ನು ಬಿಟ್ಟು ಹೊಸದಾಗಿ ಬಂದ ಬಂದ ದೇಹಗಳನ್ನು ಸ್ವೀಕರಿಸಿ ದುಃಖಿಸುತ್ತ, ಮೋಹಗೊಳ್ಳುತ್ತ, ಖೇದಪಡುತ್ತ, ಹೆದರುತ್ತ, ಹರ್ಷಿಸುತ್ತ, ಅಳುತ್ತ, ಹಾಡುತ್ತ ಸಾಧು ಮಾರ್ಗವನ್ನು ತೋರುವವರಿಲ್ಲದೇ ಎಷ್ಟುಕಾಲವಾದರೂ ದುರ್ಜನ ಸಹವಾಸದಲ್ಲಿಯೇ ಸುತ್ತುತ್ತಿರುವನು. ಶ್ರೀಹರಿಯನ್ನು ಹೊಂದುವುದೇ ಇಲ್ಲ. ದಿಗ್ಗಜಗಳನ್ನು ಗೆದ್ದ ರಾಜಋಷಿಗಳೂ ನನ್ನದೇ ಈ ಭೂಮಿಯೆಂದು ಪರಸ್ಪರ ವೈರ ಬೆಳೆಸಿಕೊಂಡು ಯುದ್ಧದಲ್ಲಿ ತಾವೇ ಸಂಹೃತರಾಗಿ ಹೊಡದಾಟಕ್ಕೆ ಕಾರಣವಾದ ಭೂಮಿಯನ್ನು ಬಿಟ್ಟು ಮಲಗುವರೇ ವಿನಹಾ ಶ್ರೀಹರಿಯನ್ನು ಹೊಂದಲಾರರು. ಈ ಸಂಸಾರಾಡವಿಯಲ್ಲಿ ಸುಖ, ದುಃಖ, ರಾಗ, ದ್ವೇಷ, ಭಯ, ಅಭಿಮಾನ, ಪ್ರಮಾದ, ಮದ, ಶೋಕ, ಮೋಹ, ಮಾತ್ಸರ್ಯ, ಈರ್ಷ್ಯೆ, ಅವಮಾನ ಹಸಿವು, ಬಾಯಾರಿಕೆ, ಆಧಿ, ವ್ಯಾಧಿ, ಮುಪ್ಪು, ಹುಟ್ಟು, ಸಾವುಗಳು ತಪ್ಪುವುದೇ ಇಲ್ಲ.

II ★★★ II

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಪಂಚದಶೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ರಾಜಸಂತತಿಯಲ್ಲಿ ವಿಶಿಷ್ಟರಾಜರ ಜ್ಞಾನವು ಭಗವಂತನ ಮಾಹಾತ್ಮ್ಯಜ್ಞಾನಕ್ಕೆ ಉಪಯೋಗಿಯಾದುದರಿಂದ ಅದನ್ನು ತಿಳಿಸಲು ಭರತವಂಶವನ್ನು ವರ್ಣಿಸುವರು. ವಿಶೇಷವಾಗಿ ಗಯನಚರಿತ್ರೆಯನ್ನು ಬಣ್ಣಿಸುವರು.

## ಗಯನ ಚರಿತ್ರೆ

**ಶ್ರೀಶುಕ ಉವಾಚ-**

**ಭರತಸ್ಯಾತ್ಮಜಃ ಸುಮತಿರ್ನಾಮಾಽಭಿಹಿತೋ ಯಮು ಹ ವಾ ವ ಕೇಚಿತ್ ಪಾಷಂಡಿನೋ ಋಷಭಪದವೀಮನುವರ್ತಮಾನಮನಾರ್ಯಾ ಅವೇದಸಮಾಮ್ನಾತಾಂ ದೇವತಾಂ ಸ್ವಮನೀಷಯಾ ಪಾಪೀಯಸೀಂ(ಸ್ಯಾಂ) (ಪಿ) ಕಲೌ ಕಲ್ಪಯಿಷ್ಯಂತಿ ॥೧॥**

**ಭರತಸ್ಯ** ಭರತ ಚಕ್ರವರ್ತಿಯ **ಆತ್ಮಜಃ** ಮಗನು **ಸುಮತಿಃ ನಾಮ** ಸುಮತಿ ಎಂದು **ಅಭಿಹಿತಃ** ಹೇಳಲ್ಪಟ್ಟಿರುವನು **ಯಂ** ಯಾವಾತನನ್ನು **ಋಷಭಪದವೀಂ ಅನುವರ್ತಮಾನಂ** ಋಷಭನು ತೋರಿಸಿದ ಅವಧೂತ ಮಾರ್ಗವನ್ನು ಅನುಸರಿಸುವನನ್ನು **ವಿಲೋಕ್ಯ** ನೋಡಿ **ಅನಾರ್ಯಾಃ** ಅಜ್ಞಾನಿಗಳಾದ **ಕೇಚಿತ್** ಕೆಲವು **ಪಾಷಂಡಿನಃ** ಪಾಖಂಡಮತದವರು(ಬೌದ್ಧರು) **ಕಲೌ** ಕಲಿಯುಗದಲ್ಲಿ **ಅವೇದ ಸಮಾಮ್ನಾತಾಂ** ವೇದವಿರುದ್ಧ ಬೌದ್ಧಾಗಮದಲ್ಲಿ ಹೇಳಿದ **ಪಾಪಿಯಸೀಂ ದೇವತಾಂ**




ಪಾಪಿಷ್ಠ ದೇವತೆಯೆಂದು **ಸ್ವಮನೀಷಯಾ** ತಮ್ಮ ಬುದ್ಧಿಯಿಂದ **ಕಲ್ಪಯಿಷ್ಯಂತಿ** ತಿಳಿದು ಕೊಳ್ಳುವರು. **ಪಾಪೀಯಸಿ** ಎಂಬ ಪಾಠದಲ್ಲಿ **ಕಲೌ** ಎಂದು ಅನ್ವಯಿಸಬೇಕು. ಪಾಪಭೂಯಿಷ್ಠವಾದ ಕಲಿಯುಗದಲ್ಲಿ ಎಂದರ್ಥ. ಉ,ಹ,ವಾ,ವ, ಎಂಬ ನಾಲ್ಕು ಅವ್ಯಯಗಳಿಂದ ಮಾಧ್ಯಮಿಕರು, ಯೋಗಾಚಾರ್ಯರು, ಸೌತ್ರಾಂತಿಕರು, ವೈಭಾಷಿಕರು ಎಂದು ನಾಲ್ಕು ರೀತಿಯಿಂದ ಬೌದ್ಧರು ಪ್ರಸಿದ್ಧರೆಂದು ಸೂಚಿಸಿರುವರು.

**ತಸ್ಮಾದ್ಗೃಧ್ರಸೇನಾಯಾಂ(ವೃದ್ಧಸೇನಾಯಾಂ) (ಧ್ರುವಸೇನಾಯಾಂ) ದೇವಪಾದಿರ್ನಾಮ (ದೇವತಾಜಿನ್ನಾಮ) ಪುತ್ರೋऽಭವತ್ ॥೨॥**

**ತಸ್ಮಾತ್** ಆ ಸುಮತಿಯಿಂದ **ಗೃಧ್ರಸೇನಾಯಾಂ** ಗೃಧ್ರಸೇನೆ ಎಂಬವಳಲ್ಲಿ **ದೇವಪಾದಿಃ ನಾಮ** ದೇವಪಾದಿ ಎಂಬ ಹೆಸರಿನ **ಪುತ್ರಃ** ಮಗನು **ಅಭವತ್** ಹುಟ್ಟಿದನು. ॥೨॥

**ಅಥ ಅಸುರ್ಯಾಂ ತತ್ತನಯೋ ದೇವದ್ಯುಮ್ನಸ್ತತೋ ಧೇನುಮತ್ಯಾಂ ಸುತಃ ಪರಮೇಷ್ಠೀ ತಸ್ಯ ಸುವರ್ಚಲಾಯಾಂ ಪ್ರತೀಹ ಉಪಜಾತಃ ಯ ಆತ್ಮವಿದ್ಯಾಯಾಂ ಸ್ವಯಮಖಿಲಾಯಾಂ ಸಂಸಿದ್ಧೋ ಮಹಾಪುರುಷಮನುಸಸ್ಮಾರ ॥೩॥**

**ಅಥ** ಅನಂತರ **ಅಸುರ್ಯಾಂ** ಅಸುರಿ ಎಂಬವಳಲ್ಲಿ **ತತ್ತನಯಃ** ದೇವಪಾದಿಯ ಮಗನು **ದೇವದ್ಯುಮ್ನಃ** ದೇವದ್ಯುಮ್ನನೆಂಬುವವನು ಹುಟ್ಟಿದನು. **ತತಃ** ದೇವದ್ಯುಮ್ನನಿಂದ **ಧೇನುಮತ್ಯಾಂ** ಧೇನುಮತಿ ಎಂಬವಳಲ್ಲಿ **ಪರಮೇಷ್ಠೀ ಸುತಃ** ಪರಮೇಷ್ಠಿ ಎಂಬ ಮಗನು ಜನಿಸಿದನು **ತಸ್ಯ** ಪರಮೇಷ್ಠಿಗೆ **ಸುವರ್ಚಲಾಯಾಂ** ಸುವರ್ಚಲಾ ಎಂಬವಳಲ್ಲಿ **ಪ್ರತೀಹಃ** ಪ್ರತೀಹನೆಂಬುವನು **ಉಪಜಾತಃ** ಜನಿಸಿದನು **ಯಃ** ಯಾವ ಪ್ರತೀಹನು **ಆತ್ಮವಿದ್ಯಾಯಾಂ ಅಖಿಲಾಯಾಂ** ಎಲ್ಲ ಆತ್ಮವಿದ್ಯೆಯಲ್ಲಿ **ಸ್ವಯಂ** ತಾನು **ಸಂಸಿದ್ಧಃ** ಸಿದ್ಧಿಯನ್ನು ಪಡೆದವನಾಗಿ **ಮಹಾಪುರುಷಂ** ಪುರುಷೋತ್ತಮನಾದ ಶ್ರೀಹರಿಯನ್ನು **ಅನುಸಸ್ಮಾರ** ಪ್ರತಿನಿತ್ಯ ಸ್ಮರಿಸುತ್ತಿದ್ದನು. ॥೩॥

**ಪ್ರತೀಹಾತ್ ಸುಬಲಾಯಾಂ ಪ್ರತಿಹರ್ತಾದಯಸ್ತ್ರಯಃ ಆಸನ್ ಇಜ್ಯಾಕೋವಿದಾಃ ಸೂನವಃ ಪ್ರತಿಹರ್ತುಃ ಸ್ತುತ್ಯಾಂ ವ್ಯೋಮಭೂಮಾನಾ-ವಜನಿಷಾತಾಮ್ ॥೪॥**

**ಪ್ರತೀಹಾತ್** ಪ್ರತೀಹನಿಂದ **ಸುಬಲಾಯಾಂ** ಸುಬಲಾ ಎಂಬವಳಲ್ಲಿ **ಪ್ರತಿಹರ್ತಾದಯಃ** ಪ್ರತಿಹರ್ತಾ, ಪ್ರಸ್ತೋತಾ, ಉದ್ಗಾತಾ ಎಂಬ **ತ್ರಯಃ** ಮೂರು ಜನ **ಇಜ್ಯಾಕೋವಿದಾಃ** ಯಜ್ಞದಲ್ಲಿ ನಿಪುಣರಾದ **ಸೂನವಃ** ಮಕ್ಕಳು ಉಂಟಾದರು. **ಪ್ರತಿಹರ್ತುಃ** ಪ್ರತಿಹರ್ತೃವಿಗೆ **ಸ್ತುತ್ಯಾಂ** ಸ್ತುತಿ ಎಂಬುವಳಲ್ಲಿ **ವ್ಯೋಮಭೂಮಾನೌ** ವ್ಯೋಮ ಮತ್ತು ಭೂಮ ಎಂಬೀರ್ವರು **ಅಜನಿಷಾತಾಂ** ಹುಟ್ಟಿದರು. ।।೪।।

**ವ್ಯೋಮ್ನ ಋಷಿಕುಲ್ಯಾಯಾಮುದ್ಗೀಥಃ ತತಃ ಪ್ರಸ್ತೋತಾ ದೇವಕುಲ್ಯಾಯಾಂ ಪ್ರಸ್ತೋತುರ್ವಿರುರುತ್ಸಾಯಾಂ ಹೃದಯಜ ಆಸೀದ್ವಿಭುಃ ವಿಭೋ ರತ್ಯಾಂ ಚ ಪೃಥುಷೇಣಸ್ತಸ್ಮಾನ್ನಕ್ತ ಆಕೂತ್ಯಾಂ ಜಜ್ಞೇ ನಕ್ತಾತ್ ಋ(ರ)ತಿಪುತ್ರೋ ಗಯೋ ರಾಜರ್ಷಿಪ್ರವರ ಉದಾರಶ್ರವಾ ಅಜಾಯತ ಸಾಕ್ಷಾದ್ಭಗವತೋ ವಿಷ್ಣೋರ್ಜಗದಭಿರಕ್ಷಯಾ ಗೃಹೀತಸತ್ವಸ್ಯ ಕಲಾತ್ಮವತ್ತಾಭಿಲಕ್ಷಣೇನ ಮಹಾಪುರುಷತಾಂ ಪ್ರಾಪ್ತಃ ।।೫।।**

**ವ್ಯೋಮ್ನಃ** ವ್ಯೋಮನಿಗೆ **ಋಷಿಕುಲ್ಯಾಯಾಂ** ಋಷಿಕುಲ್ಯಾಳಲ್ಲಿ **ಉದ್ಗೀಥ** ಉದ್ಗೀಥನೂ **ತತಃ** ಆ ಉದ್ಗೀಥನಿಂದ **ದೇವಕುಲ್ಯಾಯಾಂ** ದೇವಕುಲ್ಯೆಯೆಂಬವಳಲ್ಲಿ **ಪ್ರಸ್ತೋತಾ** ಪ್ರಸ್ತೋತಾ ಎಂಬುವನು **ಪ್ರಸ್ತೋತುಃ** ಪ್ರಸ್ತೋತುವಿಗೆ **ವಿರುರುತ್ಸಾಯಾಂ** ವಿರುರುತ್ಸಾಳಲ್ಲಿ **ವಿಭುಃ** ವಿಭು ಎಂಬುವನು **ಹೃದಯಜಃ ಆಸೀತ್** ಔರಸ ಪುತ್ರನು ಜನಿಸಿದನು. **ವಿಭೋಃ** ವಿಭುವಿನಿಂದ **ರತ್ಯಾಂ** ರತಿಯಲ್ಲಿ **ಪೃಥುಷೇಣಃ** ಪೃಥುಷೇಣನೂ **ತಸ್ಮಾತ್** ಅವನಿಂದ **ಆಕೂತ್ಯಾಂ** ಆಕೂತಿಯಲ್ಲಿ **ನಕ್ತಃ ಜಜ್ಞೇ** ನಕ್ತನು ಹುಟ್ಟಿದನು. **ಜಗದಭಿರಕ್ಷಯಾ** ಜಗತ್ತಿನ ರಕ್ಷಣೆಗಾಗಿ **ಗೃಹೀತಸತ್ತ್ವಸ್ಯ** ಸತ್ತ್ವಗುಣವನ್ನು ಸ್ವೀಕರಿಸಿದ **ಸಾಕ್ಷಾದ್ಭಗವತಃ** ಮುಖ್ಯ ಭಗವಂತನಾದ **ವಿಷ್ಣೋಃ** ಶ್ರೀಹರಿಯ **ಕಲಾ** ಅಂಶದ **ಆತ್ಮವತ್ತಾ** ಮೂರ್ತಿಮತ್ತಾ (ವಿಶೇಷಾವೇಶದ) **ಅಭಿಲಕ್ಷಣೇನ** ಕರಚರಣಾದಿಗಳಲ್ಲಿ ಚಕ್ರಾದಿ ಚಿನ್ಹಗಳಿಂದ **ಮಹಾಪುರುಷತಾಂ** ಪ್ರಿಯವ್ರತಾದಿ ಚಕ್ರವರ್ತಿಗಳಲ್ಲಿ ಗಣನೀಯತೆಯನ್ನು **ಪ್ರಾಪ್ತಃ** ಹೊಂದಿದ **ಉದಾರಶ್ರವಾಃ** ಉತ್ಕೃಷ್ಟಕೀರ್ತಿಯುಳ್ಳ **ರಾಜರ್ಷಿಪ್ರವರಃ** ರಾಜಋಷಿಗಳಲ್ಲಿ ಶ್ರೇಷ್ಠನಾದ **ಗಯಃ** ಗಯ ಎಂಬುವನು **ನಕ್ತಾತ್** ನಕ್ತನಿಂದ **ಋತಿಪುತ್ರಃ** ಋತಿ ಎಂಬುವಳ ಮಗನಾಗಿ ಜನಿಸಿದನು. ।।೫।।

**ಸ ವೈ ಸ್ವಧರ್ಮೇಣ ಪ್ರಜಾಪಾಲನಪೋಷಣಪ್ರೀಣನೋಪ ಲಾಲನಾನುಶಾಸನಲಕ್ಷಣೇನೇಜ್ಯಾದಿನಾ ಚ ಭಗವತಿ ಮಹಾಪುರುಷೇ ಪರಬ್ರಹ್ಮಣಿ**

 

**ಸರ್ವಾತ್ಮನಾऽರ್ಪಿತಪರಮಾರ್ಥಲಕ್ಷಣೇನ ಬ್ರಹ್ಮವಿಚ್ಚರಣಾನುಸೇವಯಾऽऽ-ಪಾದಿತಭಗವದ್ಭಕ್ತಿಯೋಗೇನ ಚಾಭೀಕ್ಷ್ಣಶಃ ಪರಿಭಾವಿತವಿಶುದ್ಧಸತ್ತ್ವ ಉಪರತಾನಾತ್ಮ್ಯೇ ಸ್ವಾತ್ಮನಿ ಸ್ವಯಮುಪಲಭ್ಯಮಾನಬ್ರಹ್ಮಾನುಭವೋऽಪಿ ನಿರಭಿಮಾನ ಏವಾವನಿಮಜುಗುಪತ್ । ತಸ್ಯೇಮಾಂ ಗಾಥಾಂ ಪಾಂಡವೇಯ ಪುರಾವಿದ ಉಪಗಾಯಂತಿ ॥೬॥**

**ಸಃ** ಆ ಗಯರಾಜನು **ಭಗವತಿ** ಐಶ್ವರ್ಯಶಾಲಿಯಾದ ಮಹಾಪುರುಷೋತ್ತಮ-ನಾದ **ಪರಬ್ರಹ್ಮಣಿ** ಗುಣಪೂರ್ಣನಾದ ಶ್ರೀ ಹರಿಯಲ್ಲಿ **ಸರ್ವಾತ್ಮನಾ** ಎಲ್ಲರೀತಿಯಿಂದ **ಅರ್ಪಿತ** ಅರ್ಪಣದಿಂದ **ಪರಮಾರ್ಥಲಕ್ಷಣೇನ** ಉತ್ತಮ ಪುರುಷಾರ್ಥವಾದ ಮೋಕ್ಷಕ್ಕೆ ಜ್ಞಾಪಕವಾದ(ಸಾಧನವೆನಿಸಿದ) **ಪ್ರಜಾಪಾಲನ** ಅನ್ನವಸ್ತ್ರಾದಿಗಳಿಂದ ರಕ್ಷಿಸುವುದು **ಪ್ರೀಣನ** ಪ್ರೀತಿಗೊಳಿಸುವುದು **ಉಪಲಾಲನ** ಮುದ್ದಾಡುವುದು **ಅನುಶಾಸನಲಕ್ಷಣೇನ** ತಿಳುವಳಿಕೆ ಕೊಡುವುದು, ಶಿಕ್ಷಿಸುವುದು, ಆಜ್ಞಮಾಡುವುದು ಇವುಗಳಿಂದ **ಚ** ಮತ್ತು **ಇಜ್ಯಾದಿನಾ** ಯಜ್ಞಮೊದಲಾದ **ಸ್ವಧರ್ಮೇಣ** ತನಗೆ ವಿಹಿತವಾದ ಧರ್ಮದಿಂದ **ಬ್ರಹ್ಮವಿಚ್ಚರಣಾನುಸೇವಯಾ** ಬ್ರಹ್ಮಜ್ಞಾನಿಗಳ ಪಾದಗಳ ನಿರಂತರ ಸೇವೆಯಿಂದ **ಆಪಾದಿತ** ಸಂಪಾದಿಸಲ್ಪಟ್ಟ (ಉತ್ಪನ್ನವಾದ) **ಭಗವದ್ಭಕ್ತಿಯೋಗೇನ** ಭಗವಂತನ ಭಕ್ತಿ ಎಂಬ ಮೋಕ್ಷೋಪಾಯದಿಂದ **ಅಭೀಕ್ಷ್ಣಶಃ** ನಿರಂತರವಾಗಿ **ಪರಿಭಾವಿತ** ವಶಪಡಿಸಿಕೊಂಡ **ವಿಶುದ್ಧಸತ್ತ್ವಃ** ನಿರ್ಮಲ ಅಂತಃಕರಣವುಳ್ಳವನಾಗಿ **ಉಪರತಾನಾತ್ಮ್ಯೇ** ವಿಷಯ ಸಂಬಂಧದಿಂದ ಉಂಟಾಗುವ ದೇಹವಿಕಾರ ರಹಿತನಾದ **ಸ್ವಾತ್ಮನಿ** ತನ್ನ ಹೃದಯದಲ್ಲಿ **ಸ್ವಯಂ** ತಾನಾಗಿಯೇ **ಉಪಲಭ್ಯಮಾನ** ಅಪರೋಕ್ಷೀಕರಿಸಿಕೊಳ್ಳುವ **ಬ್ರಹ್ಮಾನುಭಾವಃ ಅಪಿ** ಶ್ರೀಹರಿಯ ಸಾಮರ್ಥ್ಯ ಉಳ್ಳವನಾದರೂ(ರಾಜ್ಯಪಾಲನೆ ಅಸಂಭಾವಿತವಾದರೂ) **ನಿರಭಿಮಾನಃ ಏವ** ಸ್ವಾತಂತ್ರ್ಯಾಭಿಮಾನವಿಲ್ಲದೆಯೇ **ಅವನಿಂ** ಭೂಮಿಯನ್ನು **ಅಜುಗುಪತ್** ರಕ್ಷಿಸಿದನು.

**ಹೇ ಪಾಂಡವೇಯ** ಪರೀಕ್ಷಿತನೇ **ಪುರಾವಿದಃ** ಪುರಾಣಜ್ಞರು **ತಸ್ಯ** ಆ ಗಯ ರಾಜನ ಮಹಿಮೆಯನ್ನು ತಿಳಿಸುವ **ಇಮಾಂ** ಮುಂದೆ ಹೇಳುವ **ಗಾಥಾಂ** ವಿಷಮಾಕ್ಷರ ಗುರುಪಾದಗಳುಳ್ಳ ಗೀತಿಕೆಗಳನ್ನು **ಉಪಗಾಯಂತಿ** ಗಾನಮಾಡುವರು. ಇದರಿಂದ **ಗೀಯಮಾನತ್ವಾತ್ ಗಾಥಾ** ಎಂದು ನಿರುಕ್ತಿಯನ್ನು ಸೂಚಿಸಿದಂತಾಯಿತು. ॥೬॥

**ಗಯಂ ನೃಪಂ ಕಃ ಪ್ರತಿಯಾತಿ ಕರ್ಮಭಿ-**
**ರ್ಯಜ್ವಾಭಿಮಾನೀ ಬಹುವಿದ್ಧರ್ಮಗೋಪ್ತಾ ।**
**ಸದಾಗತಶ್ರೀಃ ಸದಸಸ್ಪತಿಃ ಸತಾಂ**
**ಸತ್ಸೇವಕೋಽನ್ಯೋ ಭಗವತ್ಕಲಾಮೃತೇ ॥೭॥**

**ಯಜ್ವಾ** ಯಾಗಶೀಲನೂ **ಅಭಿಮಾನೀ** ಎಲ್ಲರಿಂದಲೂ ಸನ್ಮಾನಿತನೂ **ಬಹುವಿತ್** ಬಹಳಶಾಸ್ತ್ರಜ್ಞನು **ಧರ್ಮಗೋಪ್ತಾ** ಧರ್ಮರಕ್ಷಕನೂ **ಸದಾ ಆಗತಶ್ರೀಃ** ಯಾವಾಗಲೂ ಒದಗಿಬಂದ ಸಂಪತ್ತುಳ್ಳುವನೂ **ಸತಾಂ** ಸಜ್ಜನರ **ಸದಸಸ್ಪತಿಃ** ಸಭಾಪತಿಯಾದ **ಸತ್ಸೇವಕಃ** ಸಜ್ಜನರ ಸೇವಕನೂ ಆದ **ಗಯಂ ನೃಪಂ** ಗಯರಾಜನನ್ನು **ಭಗವತ್ಕಲಾಂ ಋತೇ** ರಾಮಕೃಷ್ಣಾದಿ ರೂಪಗಳನ್ನು (ಸ್ವರೂಪಾಂಶ), ಬ್ರಹ್ಮಾದಿ ದೇವತೆಗಳನ್ನು, ಚ್ಯವನ, ಉಚಥ್ಯ ಮುಂತಾದ ಕರ್ಮಜದೇವತೆಗಳನ್ನೂ ಅವರಿಗೆ ಸಮಾನರಾದ ಪ್ರಿಯವ್ರತನನ್ನು ಬಿಟ್ಟು **ಅನ್ಯಃ ಕಃ** ಬೇರೆಯಾವನು **ಕರ್ಮಭಿಃ** ಕರ್ಮಗಳಿಂದ **ಪ್ರತಿಯಾತಿ** ಪ್ರತಿನಿಧಿಸಿಯಾನು? ಯಾವನೂ ಪ್ರತತಿನಿಧಿಸಲಾರನು.

### ಗಯನು ರಾಮಕೃಷ್ಣರಿಗೆ ಸಮನೇ?

ಈ ಶ್ಲೋಕದಲ್ಲಿ ಗಯನಂತಹವರು ರಾಮಕೃಷ್ಣರೇ ಇರುವರು ಎಂದು ಹೇಳಿದಂತೆ ತೋರುವುದು. ಆದರೆ ಅದು ಪ್ರಮಾಣವಿರುದ್ಧ. ಯದ್ಯಪಿ **ಭಗವತ್ಕಲಾಂ ಋತೇ** ಎಂದಿದ್ದರಿಂದ ರಾಮಕೃಷ್ಣರ ಸಾಕ್ಷಾದಂಶರನ್ನು ಬಿಟ್ಟು ಬೇರೆ ಯಾರು ಗಯನಂತಹವರು ಇಲ್ಲ ಎಂದರ್ಥವಾಗುವುದು. ಆದರೂ ಅದು ಬಾಧಿತವೇ. ಗಯಸಮಾನರಾದ ಪ್ರಿಯವ್ರತ ಮುಂತಾದವರಿರುವರು. ಕಾರಣ **ಭಗವತ್ಕಲಾ** ಎಂಬುದು ಉಪಲಕ್ಷಣ ಎಂಬ ಅಭಿಪ್ರಾಯದಿಂದ ಆಚಾರ್ಯರು ಪ್ರಮಾಣ ಹೇಳುವರು

ತಾತ್ಪರ್ಯ - ''ಪ್ರಿಯವ್ರತೋ ಗಯಶ್ಚೈವ ಕರ್ಮದೇವಸಮೌ ಗುಣೈಃ''

ಪ್ರಿಯವ್ರತಗಯರು ಗುಣಗಳಿಂದ ಕರ್ಮಜದೇವತೆಗಳಿಗೆ ಸಮಾನರೆಂದು ಈ ಪ್ರಮಾಣದಿಂದ ತಿಳಿದು ಬರುವುದು. ಕಾರಣ ಮೇಲೆ ಹೇಳಿದಂತೆ ಮೂಲಾರ್ಥ ತಿಳಿಯಬೇಕು. ಗಯರಾಜನಿಗಿಂತ ಕೆಳಗಿನವರು ಇವನನ್ನು ಪ್ರತಿನಿಧಿಸಲಾರರು ಎಂದು ಭಾವ. ॥೭॥




**ಯಮಭ್ಯಷಿಂಚನ್ ಪರಯಾ ಮುದಾ ಸತೀಃ**
**ಸತ್ಯಾಶಿಷೋ ದಕ್ಷಕನ್ಯಾಃ ಸರಿದ್ಭಿಃ ।**
**ಯಸ್ಯ ಪ್ರಜಾನಾಂ ದುದುಹೇ ಧರಾಽಽಶಿಷೋ**
**ಯಥೇಪ್ಸಿತಾ ವೈ ಗುಣವತ್ಸ್ನುತೋಧಾಃ ॥೮॥**

**ಸತ್ಯಾಶಿಷಾಃ** ಯಥಾರ್ಥವಾದ ಆಶೀರ್ವಾದವುಳ್ಳ **ಸತೀಃ** ಪತಿವ್ರತೆಯರಾದ **ದಕ್ಷಕನ್ಯಾಃ** ದಕ್ಷಪ್ರಜೇಶ್ವರನ ಪುತ್ರಿಯರಾದ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾಧೃತಿ, ಕ್ಷಮಾ ಮೊದಲಾದವರು **ಸರಿದ್ಭಿಃ** ಗಂಗಾನದಿಗಳ ನೀರಿನಿಂದ **ಯಂ** ಯಾವ ಗಯನನ್ನು **ಅಭ್ಯಷಿಂಚನ್** ಅಭಿಷೇಕ ಮಾಡಿದರೋ **ಪರಯಾ ಮುದಾ** ಬಹುಸಂತೋಷದಿಂದ **ಗುಣವತ್ಸ್ನುತೋಧಾ** (೧) ತಾನು ಗುಣಶಾಲಿಯಾದುದರಿಂದ ಸುಧಾರಿಸಿದ ಕೆಚ್ಚಲುಳ್ಳ (೨) ಗುಣಶಾಲಿಯಾದ ಗಯನೇ ಕರುವಾಗಿದ್ದುದರಿಂದ ತ್ವರಿಸಿದ ಕೆಚ್ಚಲುಳ್ಳ **ಧರಾ** ಭೂಮಿ ಎಂಬ ಗೋವು **ಯಸ್ಯ ಪ್ರಜಾನಾಂ** ಯಾವ ಗಯರಾಜನ ಪ್ರಜೆಗಳಿಗೆ **ಯಥೇಪ್ಸಿತಾಃ** ಅವರವರು ಅಪೇಕ್ಷಿಸಿದ **ಆಶಿಷಃ** ಕಾಮಿತಗಳನ್ನು **ದುದುಹೇ** ಕರೆದಳೋ ಅಂತಹ ಗಯರಾಜನನ್ನು ಯಾರು ಪ್ರತಿನಿಧಿ ಸುವರು(ಸಿಯಾರು)? ಎಂದು ಹಿಂದಕ್ಕೆ ಅನ್ವಯ. ವೈ ಇದು ಆಗಮಸಿದ್ಧವು. ಇದರಿಂದ ಸಕಲ ಜಗದ್ವಶೀಕರಣ ಶಕ್ತಿಯುಳ್ಳ ಶ್ರೀಪುರುಷೋತ್ತಮ ಮಂತ್ರಸಿದ್ಧಿಯುಳ್ಳವನು ಗಯರಾಜನೆಂದು ಸೂಚಿಸುವರು. ॥೮॥

ವೇದಗಳೂ ಕೂಡ ಅವುಗಳಲ್ಲಿ ಹೇಳಿದ (ಮೇಲ್ನೋಟಕ್ಕೆ) ಕರ್ಮಫಲಗಳನ್ನು ಅಪೇಕ್ಷಿಸದಿದ್ದರೂ ಎಲ್ಲ ಅಭೀಷ್ಟಗಳನ್ನು ನೀಡಿದವು ಎಂದು ಹೇಳುವರು

**ಛಂದಾಂಸ್ಯಕಾಮಸ್ಯ ಚ ಯಸ್ಯ ಕಾಮಾನ್**
**ದುದೂಹುರಾಜಹ್ರುರಥೋ ಬಲಿಂ ನೃಪಾಃ ।**
**ಪ್ರತ್ಯಾಹೃತಾ ಯುಧಿ ಧರ್ಮೇ ಚ ವಿಪ್ರಾ**
**ಯಸ್ಯಾಶಿಷಃ ಷಷ್ಠಮಂಶಂ ಪ್ರಜಾಶ್ಚ ॥೯॥**

**ಅಕಾಮಸ್ಯ** ಇಚ್ಛಿಸದಿರುವ **ಯಸ್ಯ** ಯಾವ ಗಯರಾಜನಿಗೆ **ಕಾಮಾನ್** ಅಭೀಷ್ಟಗಳನ್ನು **ಛಂದಾಸಿ** ವೇದಗಳು **ದುದೂಹುಃ** ಕರೆದವು **ಯುಧಿ** ಯುದ್ಧದಲ್ಲಿ **ಪ್ರತ್ಯಾಹೃತಾಃ** ಪರಾಜಿತರಾದ **ನೃಪಾಃ** ರಾಜರು **ಬಲಿಂ** ಕಾಣಿಕೆಯನ್ನು **ಆಜಹ್ರುಃ** ತಂದರು **ಅಥೋ** ಮತ್ತು **ವಿಪ್ರಾಃ** ಬ್ರಾಹ್ಮಣರೂ **ಆಶಿಷಃ** ಆಶೀರ್ವಾದಗಳನ್ನು **ಧರ್ಮೇ**

ಧರ್ಮದಲ್ಲಿ **ಪ್ರತ್ಯಾಹೃತಾಃ** ಅಭಿಮುಖೀಕೃತರಾದ **ಪ್ರಜಾಃ** ಪ್ರಜೆಗಳು **ಷಷ್ಠಂ ಅಂಶಂ** ತಾವು ಸಂಪಾದಿಸಿದ ಹಣದ ಆರನೇ ಒಂದು ಭಾಗವನ್ನು, ಪುಣ್ಯವನ್ನು **ಆಜಹ್ರುಃ** ಇತ್ತರು. ।।೯।।

**ಯಸ್ಯಾಧ್ವರೇ ಭಗವಾನಧ್ವರಾತ್ಮಾ**
**ಮಘೋನಿ ಮಾದ್ಯತ್ಯುರುಸೋಮಪೀಥೇ ।**
**ಶ್ರದ್ಧಾವಿಶುದ್ಧಾಚಲಭಕ್ತಿಯೋಗ**
**ಸಮರ್ಪಿತೇಜ್ಯಾಫಲಮಾಜಹಾರ ।।೧೦।।**

**ಯಸ್ಯ** ಯಾವ ಗಯ ರಾಜನ **ಉರುಸೋಮಪೀಥೇ** ಬಹು ಸೋಮಪಾನವುಳ್ಳ **ಅಧ್ವರೇ** ಯಜ್ಞದಲ್ಲಿ **ಅಧ್ವರಾತ್ಮಾ** ಯಜ್ಞಭೋಕ್ತೃವಾದ, ಫಲದಾತೃವಾದ ಶ್ರೀಹರಿಯು **ಮಘೋನಿ** ಇಂದ್ರನು, ಬ್ರಹ್ಮಾದಿ ದೇವತೆಗಳು **ಮಾದ್ಯತಿ ಸತಿ** ಯಜ್ಞಭಾಗಗಳಾದ ಅನ್ನಾದಿಗಳಿಂದ ಸಂತುಷ್ಟರಾಗುತ್ತಿರಲು **ಶ್ರದ್ಧಾ** ಶ್ರದ್ಧೆಯಿಂದ **ವಿಶುದ್ಧ** ನಿರ್ಮಲವಾದ **ಅಚಲ** ದೃಢವಾದ **ಭಕ್ತಿಯೋಗ** ಭಕ್ತಿರೂಪ ಉಪಾಯದಿಂದ **ಸಮರ್ಪಿತ** ಅರ್ಪಿಸಲ್ಪಟ್ಟ **ಫಲಂ** ಪುಣ್ಯವನ್ನು **ಆಜಹಾರ** ಸ್ವೀಕರಿಸಿದನು. ಪ್ರೀತನಾದನೆಂದರ್ಥ. ।।೧೦।।

ಬ್ರಹ್ಮಾದಿಗಳು ಸಂತುಷ್ಟರಾದರೆ ಭಗವಂತನೇಕೆ ಪ್ರೀತನಾದನು ಎಂದರೆ ಹೇಳಿದ್ದನ್ನು ವಿಶದಪಡಿಸುವರು

**ಯತ್ಪ್ರೀಣನಾದ್ಬರ್ಹಿಷಿ ದೇವತಿರ್ಯಙ್-**
**ಮನುಷ್ಯವೀರುತ್ತೃಣಮಾವಿರಿಂಚಾತ್ ।**
**ಪ್ರೀಯೇತ ಸದ್ಯಃ ಸ ಹಿ ವಿಶ್ವ ಏವ**
**ಪ್ರೀತಃ ಸ್ವಯಂ ಪ್ರೀತಿಮಗಾದ್ಗಯಸ್ಯ ।।೧೧।।**

**ಬರ್ಹಿಷಿ** ಯಜ್ಞದಲ್ಲಿ **ಆವಿರಿಂಚಾತ್** ಬ್ರಹ್ಮದೇವರನ್ನಾರಂಭಿಸಿ **ದೇವ** ದೇವತೆಗಳು **ತಿರ್ಯಕ್** ಪ್ರಾಣಿಗಳು **ಮನುಷ್ಯ** ಮನುಷ್ಯರು **ವೀರುತ್** ಬಳ್ಳಿಗಳು **ತೃಣಂ** ಹುಲ್ಲು ಎಂಬ **ಯತ್** ಯಾವ ಪ್ರಾಣಿಸಮೂಹ ಉಂಟೋ ಅದರ **ಪ್ರೀಣನಾತ್** ಪ್ರೀತಿಪಡಿಸುವುದರಿಂದ **ಸಃ** ಆ ಭಗವಂತನು **ಸದ್ಯಃ** ಕೂಡಲೇ **ಪ್ರೀಯೇತ** ಪ್ರೀತನಾಗುವನು **ಹಿ** ಏಕೆಂದರೆ **ಏಷಃ** ಇವನು **ವಿಶ್ವಃ** ಜಗತ್ತನ್ನು ಪ್ರವೇಶ ಮಾಡಿದವನು (**ವಿಶ್ವಜೀವಃ** ಎಂಬ ಪಾಠದಲ್ಲಿ ಸರ್ವಾಂತರ್ಯಾಮಿಯು ಎಂದರ್ಥ)




ಶ್ರೀಹರಿಯ ಅಧಿಷ್ಠಾನರೆಂದು ಬ್ರಹ್ಮಾದಿಗಳನ್ನು ಪೂಜಿಸಿದಾಗ ಅಂತರ್ಗತನಾದ ಶ್ರೀಹರಿಯು ಪ್ರೀತನಾಗುವನು ಎಂದು ಭಾವ.

ಅಥವಾ ಬ್ರಹ್ಮಾದಿಗಳಿರುವಾಗ ಶ್ರೀಹರಿಯ ಪ್ರೀತಿಯಿಂದಾಗಬೇಕಾದುದೇನು ಎಂದರೆ ಬ್ರಹ್ಮಾದಿಗಳ ಪ್ರೀತಿಯಿಂದ ಆಗುವ ಫಲವು ಶ್ರೀಹರಿಪ್ರೀತಿಯಿಂದಲೇ ಆಗುವುದೆಂದು ಹೇಳುವರು.

**ಯತ್ಪ್ರೀಣನಾತ್** ಯಾವ ಶ್ರೀಹರಿಯನ್ನು ಪ್ರೀತಿಗೊಳಿಸುವುದರಿಂದ **ಆವಿರಿಂಚಾತ್** ಬ್ರಹ್ಮದೇವರನ್ನಾರಂಭಿಸಿ **ದೇವತಿರ್ಯಜಮನುಷ್ಯವೀರುತ್ತೃಣಂ** ದೇವತೆಗಳಿಂದ ಹಿಡಿದು ಹುಲ್ಲಿನವರೆಗೆ **ಪ್ರೀಯೇತ** ಅಂದರೆ ಅವರುಗಳ ಪ್ರೀತಿಯಿಂದೇನಾಗಬೇಕೋ ಅದೆಲ್ಲ ಶ್ರೀಹರಿಯ ಪ್ರೀತಿಯೊಂದರಿಂದಲೇ ಆಗುವುದು ಎಂದು ಭಾವ **ಹಿ** ಏಕೆಂದರೆ **ಏಷಃ ಹಿ ವಿಶ್ವಃ** ಇವನು ಪೂರ್ಣಗುಣನು ಅಂದರೆ ಸರ್ವಗುಣಪೂರ್ಣನಾದುದರಿಂದ ಶ್ರೀಹರಿಯೇ ಸರ್ವಪುರುಷಾರ್ಥಪ್ರದನು. ಅವನ ಪ್ರೀತಿಯಿಂದಲೇ ಇತರರ ಪ್ರೀತಿಯಿಂದ ಬರುವ ಫಲವು ಬರುವುದು. ಎಂದು ಹೇಳಿದಂತಾಯಿತು **ಸ್ವಯಂ** ತಾನಾಗಿಯೇ **ಪ್ರೀತಃ** ಸಂತುಷ್ಟನಾಗಿದ್ದ ಶ್ರೀಹರಿಯು **ಗಯಸ್ಯ ಪ್ರೀತಿಂ ಅಗಾತ್** ಗಯರಾಜನ ಯಜ್ಞಾದಿಗಳಿಂದ ವಿಶೇಷವಾಗಿ ಪ್ರೀತನಾದನು (ಪ್ರೀತಿಯನ್ನೂ ಹೊಂದಿದನು). ।।೧೧।।

**ಗಯಾಜ್ಜಯಂತ್ಯಾಂ ಚಿತ್ರರಥಃ ಸ್ವಸ್ತಿರವರೋಧನ ಇತಿ ತ್ರಯಃ ಪುತ್ರಾಃ ಬಭೂವುಶ್ಚಿತ್ರರಥಾದೂರ್ಜಾಯಾಂ ಸಮ್ರಾಡಜನಿಷ್ಟ ।।೧೨।।**

**ಗಯಾತ್** ಗಯರಾಜನಿಂದ **ಜಯಂತ್ಯಾಂ** ಜಯಂತಿಯಲ್ಲಿ **ಚಿತ್ರರಥಃ ಸ್ವಸ್ತಿಃ ಅವರೊಧನಃ ಇತಿ** ಈ ಹೆಸರಿನ **ತ್ರಯಃ ಪುತ್ರಾಃ** ಮೂರು ಜನ ಮಕ್ಕಳು **ಬಭೂವುಃ** ಹುಟ್ಟಿದರು. **ಚಿತ್ರರಥಾತ್** ಚಿತ್ರರಥನಿಂದ **ಊರ್ಜಾಯಾಂ** ಊರ್ಜಾಳಲ್ಲಿ **ಸಮ್ರಾಟ್** ಎಂಬುವನು **ಅಜನಿಷ್ಟ** ಜನಿಸಿದನು. ।।೧೨।।

**ತತಃ ಉತ್ಕಲಾಯಾಂ ಮರೀಚಿರ್ಮರಿಚೇರ್ಬಿಂದುಮತ್ಯಾಂ ಬಿಂದುಮಾ-ನುದಪದ್ಯತ ತಸ್ಮಾತ್ ಸುಷೇಣಾಯಾಂ ಮಧುರ್ನಾಮಾಭವತ್ ಮಧೋಃ ಸುಮನಸ್ಯಾಂ ವೀರವ್ರತಸ್ತತೋ ವ್ರಜಾಯಾಮನ್ಯುಪ್ರಮನ್ಯೂ ಜಜ್ಞಾತೇ ಮನ್ಯೋಃ ಸತ್ಯಾಯಾಂ ಭುವನಸ್ತತೋ ದೋಷಾಯಾಂ ತ್ವಷ್ಟಾ ಅಜನಿಷ್ಟ**

**ತ್ವಷ್ಟುರ್ವಿರಜೋ ವಿರೋಚನಾಯಾಂ ವಿರಜಸ್ಯ ಶತಜಿತ್ಪ್ರವರಂ ಪುತ್ರಶತಂ ಕನ್ಯಾಶ್ಚ ವಿಷೂಚ್ಯಾಂ ಕಿಲ ಜಾತಾಃ ।।೧೩।।**

**ತತಃ** ಸಮ್ರಾಟನಿಂದ **ಉತ್ಕಲಾಯಾಂ** ಉತ್ಕಲೆಯಲ್ಲಿ **ಮರೀಚಿಃ** ಮರೀಚಿಯು **ಮರಿಚೇಃ** ಮರೀಚಿಗೆ **ಬಿಂದುಮತ್ಯಾಂ** ಬಿಂದುಮತಿಯಲ್ಲಿ **ಬಿಂದುಮಾನ್** ಬಿಂದುಮಂತನು **ಉದಪದ್ಯತ** ಹುಟ್ಟಿದರು **ತಸ್ಮಾತ್** ಬಿಂದುಮಂತನಿಂದ **ಸುಷೇಣಾಯಾಂ** ಸುಷೇಣೆಯಲ್ಲಿ **ಮಧುಃ ನಾಮ** ಮಧು ಎಂಬುವನು **ಅಭವತ್** ಮಗನಾದನು **ಮಧೋಃ** ಮಧುವಿಗೆ **ಸುಮನಸ್ಯಾಂ** ಸುಮನಸಿಯಲ್ಲಿ **ವೀರವ್ರತಃ** ವೀರವ್ರತನು **ತತಃ** ವೀರವತ್ರನಿಂದ **ವ್ರಜಾಯಾಂ** ವ್ರಜೆಯಲ್ಲಿ **ಮನ್ಯುಪ್ರಮನ್ಯೂ** ಮನ್ಯು, ಪ್ರಮನ್ಯು ಎಂಬುವರು **ಜಜ್ಞಾತೇ** ಹುಟ್ಟಿದರು **ಮನ್ಯೋಃ** ಮನ್ಯುವಿಗೆ **ಸತ್ಯಾಯಾಂ** ಸತ್ಯಾಳಲ್ಲಿ **ಭುವನಃ** ಭುವನನು **ತತಃ** ಭುವನನಿಂದ **ದೋಷಾಯಾಂ** ದೋಷಾಳಲ್ಲಿ **ತ್ವಷ್ಟಾ** ತ್ವಷ್ಟನು **ಅಜನಿಷ್ಟ** ಹುಟ್ಟಿದನು **ತ್ವಷ್ಟುಃ** ತ್ವಷ್ಟುವಿಗೆ **ವಿರೋಚನಾಯಾಂ** ವಿರೋಚನೆಯಲ್ಲಿ **ವಿರಜಃ** ವಿರಜನು **ವಿರಜಸ್ಯ** ವಿರಜನಿಗೆ **ವಿಷೂಚ್ಯಾಂ** ವಿಷೂಚಿಯಲ್ಲಿ **ಶತಜಿತ್ಪ್ರವರಂ** ಶತಜಿತ್ ಎಂಬುವನೇ ಶ್ರೇಷ್ಠನಾಗಿ ಇರುವ **ಪುತ್ರಶತಂ** ನೂರುಜನ ಗಂಡುಮಕ್ಕಳು **ಚ** ಮತ್ತು **ಕನ್ಯಾ** ಒಂದು ಹೆಣ್ಣು ಮಗುವೂ **ಜಾತಾಃ ಕಿಲ** ಹುಟ್ಟಿದರು. ।।೧೩।।

**ತತ್ರಾಯಂ ಶ್ಲೋಕಃ**

**ತತ್ರ** ಆ ವಿರಜನ ವಿಷಯದಲ್ಲಿ **ಅಯಂ** ಈ **ಶ್ಲೋಕಃ** ಶ್ಲೋಕವು ಇದೆ.

**ಪ್ರೈಯವ್ರತಂ ವಂಶಮಿಮಂ ವಿರಜಶ್ಚರಮೋದ್ಭವಃ ।**
**ಅಕರೋದತ್ಯಲಂಕೀರ್ತ್ಯಾ ವಿಷ್ಣುಃ ಸುರಗಣಂ ಯಥಾ ।।೧೪।।**

**ಚರಮೋದ್ಭವಃ** ವಂಶದ ಕೊನೆಯಲ್ಲಿ ಜನಿಸಿದ **ವಿರಜಃ** ವಿರಜನು **ಇಮಂ** ಈ **ಪ್ರೈಯವ್ರತಂ** ಪ್ರಿಯವ್ರತರಾಜನ **ವಂಶಂ** ವಂಶವನ್ನು **ಯಥಾ** ಹೇಗೆ **ವಿಷ್ಣುಃ** ಶ್ರೀಹರಿಯು **ಸುರಗಣಂ** ದೇವತಾ ಸಮೂಹವನ್ನು **ಕೀರ್ತ್ಯಾ** ಕೀರ್ತಿಯಿಂದ **ಅತ್ಯಲಂಕರೋತ್** ಅತ್ಯಂತ ಅಲಂಕರಿಸಿದನೋ **ತಥಾ** ಹಾಗೆ ಕೀರ್ತ್ಯಾ **ಅತ್ಯಲಂಕರೋತ್** ಅತಿಯಾಗಿ ಭೂಷಿತವನ್ನಾಗಿ ಮಾಡಿದನು. ।।೧೪।।

**।। ಇಲ್ಲಿಗೆ ೧೫ನೇ ಅಧ್ಯಾಯವು ಮುಗಿಯಿತು ।।**

# ಹದಿನೈದನೇ ಅಧ್ಯಾಯದ ಸಾರಾಂಶ

ಶುಕಾಚಾರ್ಯರು ಹೇಳುವರು - ಭರತರಾಜನ ಮಗನು ಸುಮತಿ. ಈತನು ಋಷಭದೇವನು ತೋರಿದ ಅವಧೂತ ಮಾರ್ಗವನ್ನು ಅನುಸರಿಸಿದನು. ಬೌದ್ಧರು ಪಾಪಬಹುಲವಾದ ಕಲಿಯುಗದಲ್ಲಿ ಈತನನ್ನು ಕಂಡು ವೇದವಿರುದ್ಧ ತಮ್ಮ ಆಗಮದಿಂದ ಪ್ರತಿಪಾದಿತವಾದ ಬುದ್ಧನ ಅವತಾರದ ದೇವತೆಯೆಂದು ಕಲ್ಪಿಸಿಕೊಳ್ಳುವರು. ಈ ಬೌದ್ಧರಲ್ಲಿ ನಾಲ್ಕು ಪ್ರಭೇದಗಳುಂಟು ಮಾಧ್ಯಮಿಕ, ಯೋಗಾಚಾರ್ಯ, ವೈಭಾಷಿಕ, ಸೌತ್ರಾಂತಿಕ ಎಂದು. ಈತನಿಗೆ ಗೃಧ್ರಸೇನೆಯಲ್ಲಿ ದೇವತಾದಿಯೂ ಅವನಿಗೆ ಆಸುರಿಯಲ್ಲಿ ದೇವದ್ಯುಮ್ನನೂ ಅವನಿಗೆ ಧೇನುಮತಿಯಲ್ಲಿ ಪರಮೇಷ್ಠಿಯೂ ಅವನಿಗೆ ಸುವರ್ಚಲೆಯಲ್ಲಿ ಪ್ರತೀಹನೂ ಹುಟ್ಟಿದರು. ಈ ಪ್ರತೀಹನು ಆತ್ಮವಿದ್ಯೆಯಲ್ಲಿ ಸ್ವಯಂ ಸಿದ್ಧಿಯನ್ನು ಪಡೆದು ಶ್ರೀಹರಿಯನ್ನು ಪ್ರತಿನಿತ್ಯವು ಸ್ಮರಿಸುತ್ತಿದ್ದನು. ಇವನಿಗೆ ಸುಬಲಾಳಲ್ಲಿ ಪ್ರತಿಹರ್ತಾ, ಪ್ರಸ್ತೋತಾ, ಉದ್ಗಾತಾ ಎಂಬ ಮೂರು ಮಕ್ಕಳಾದರು. ಇವರೆಲ್ಲರೂ ಯಜ್ಞಕಾರ್ಯದಲ್ಲಿ ನಿಪುಣರು. ಪ್ರತಿಹರ್ತನಿಗೆ ಸ್ತುತಿಯಲ್ಲಿ ವ್ಯೋಮ ಮತ್ತು ಭೂಮರೆಂಬ ಇಬ್ಬರು ಮಕ್ಕಳಾದರು. ವ್ಯೋಮನಿಗೆ ಋಷಿಕುಲ್ಯೆಯಲ್ಲಿ ಉದ್ಗೀಥನೂ ಅವನಿಗೆ ದೇವಕುಲ್ಯೆಯಲ್ಲಿ ಪ್ರಸ್ತೋತನೂ ಅವನಿಗೆ ವಿರುರುತ್ಸೆಯಲ್ಲಿ ವಿಭುವೆಂಬ ಔರಸ ಪುತ್ರನೂ ಅವನಿಗೆ ರತಿಯಲ್ಲಿ ಪೃಥುಷೇಣನು ಅವನಿಗೆ ಆಕೂತಿಯಲ್ಲಿ ನಕ್ತನೂ ಮಕ್ಕಳಾದರು. ಈತನಿಂದ ಋತಿಯಲ್ಲಿ ಗಯರಾಜನು ಜನಿಸಿದನು. ಜಗದ್ರಕ್ಷಣೆಗಾಗಿ ಸತ್ವಗುಣವನ್ನು ಪರಿಗ್ರಹಿಸಿದ ಶ್ರೀಹರಿಯ ಅಂಶದ ಮೂರ್ತದೇಹವಿಶೇಷಾಂಶದ ಚಿನ್ಹೆಗಳು ಅವನಲ್ಲಿದ್ದವು. ಕೈಕಾಲುಗಳಲ್ಲಿ ಚಕ್ರಶಂಖಮೊದಲಾದ ಗುರುತುಗಳಿದ್ದವು. ಇವುಗಳಿಂದ ಇವನು ಪ್ರಿಯವ್ರತಾದಿ

ಚಕ್ರವರ್ತಿಗಳಲ್ಲಿ ಗಣನೆಗೆ ಬಂದನು. ಇವನ ಕೀರ್ತಿಯು ಎಲ್ಲರಿಂದಲೂ ಶ್ರುತವಾಗಿತ್ತು. ಎಲ್ಲರಿಂದಲೂ ಗೀಯಮಾನನಾದ್ದರಿಂದ ಗಯನೆಂದು ಪ್ರಸಿದ್ಧನಾದನು. ಇವನು ತನ್ನ ಧರ್ಮವಾದ ಪ್ರಜಾಪಾಲನೆ, ಪೋಷಣೆ, ಪ್ರೀಣನೆ, ಉಪಲಾಲನೆ ಮತ್ತು ಅನುಶಾಸನಗಳನ್ನು, ಯಜ್ಞ ಮೊದಲಾದವನ್ನು ಗುಣಪೂರ್ಣನಾದ ಶ್ರೀಹರಿಗೆ ಸಮರ್ಪಿಸಿದನು. ಆದ್ದರಿಂದ ಅವು ಪುರುಷಾರ್ಥಸಾಧನಗಳಾದವು. ಬ್ರಹ್ಮಜ್ಞಾನಿಗಳ ಪಾದಗಳನ್ನು ನಿರಂತರ ಸೇವಿಸುತ್ತಿದ್ದನು. ಇದರಿಂದ ಮೋಕ್ಷಕ್ಕೆ ಕಾರಣವಾದ ಭಗವದ್ಭಕ್ತಿಯು ಇವನಿಗೆ ಉಂಟಾಯಿತು. ಈ ಕಾರಣದಿಂದ ಮನಸ್ಸು ಶುದ್ಧವಾಗಿ ಇವರ ವಶದಲ್ಲಿ ಯಾವಾಗಲೂ ಇದ್ದಿತು. ದೇಹವಿಕಾರಗಳು ಇವನಿಗಾಗುತ್ತಿರಲಿಲ್ಲ. ಶ್ರೀಹರಿಯ ಮಹಿಮೆಯನ್ನು ತಾನಾಗಿಯೇ ಅಪರೋಕ್ಷೀಕರಿಸಿಕೊಂಡಿದ್ದನು. ಆದರೂ ಸ್ವಾತಂತ್ರ್ಯಾಭಿಮಾನವಿಲ್ಲದೆ ರಾಜ್ಯವನ್ನು ಪಾಲನೆ ಮಾಡಿದನು. ರಾಜನೇ! ಪುರಾಣಜ್ಞರು ಇವನ ವಿಷಯದಲ್ಲಿ ಈ ಗೀತೆಯನ್ನು ಹಾಡುತ್ತಾರೆ. ಯಾಗಶೀಲನೂ, ಸರ್ವಸನ್ಮಾನಿತನು, ಬಹುಶಾಸ್ತ್ರಜ್ಞನು, ಧರ್ಮರಕ್ಷಕನು, ಸಂಪತ್ಸಮೃದ್ಧನು, ಸಜ್ಜನರ ಸಭಾಪತಿಯು, ಸಜ್ಜನ ಸೇವಕನೂ ಆದ ಮತ್ತೊಬ್ಬನು ಯಾವನು ತಾನೇ ಕರ್ಮಗಳಿಂದ ಗಯರಾಜನಿಗೆ ಸಮಾನನಾದಾನು? ರಾಮಕೃಷ್ಣಾದಿ ಭಗವದ್ರೂಪಗಳು, ಬ್ರಹ್ಮಾದಿದೇವತೆಗಳು, ಚ್ಯವನ ಉಚಥ್ಯ ಮುಂತಾದ ಕರ್ಮಜ ದೇವತೆಗಳು, ಅವರಿಗೆ ಸಮರಾದ ಪ್ರಿಯವ್ರತರಾಜ ಇವರನ್ನು ಬಿಟ್ಟು ಮತ್ತೆಯಾರೂ ಗಯರಾಜನನ್ನು ಪ್ರತಿನಿಧಿಸಲಾರರು. ಸತ್ಯವಾದ ಆಶೀರ್ವಾದವುಳ್ಳವರು, ಪತಿವ್ರತೆಯರೂ ಆದ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮೆಗಳೆಂಬ ದಕ್ಷಕನ್ಯೆಯರು(ಇವುಗಳಿಗೆ ಅಭಿಮಾನಿಗಳು) ಗಂಗಾದಿ ತೀರ್ಥಗಳಿಂದ ಗಯರಾಜನಿಗೆ ಅಭಿಷೇಕಮಾಡಿದರು(ಇವುಗಳೆಲ್ಲ ಇವನಲ್ಲಿ ಪ್ರವಾಹದಂತೆ ತುಂಬಿದ್ದವು). ಭೂಮಿಯು ಗುಣವಂತನಾದ ಈ ರಾಜನನ್ನು ಕರುವನ್ನಾಗಿಸಿಕೊಂಡು ಪ್ರಜೆಗಳು ಅಪೇಕ್ಷಿಸಿದ್ದನ್ನೆಲ್ಲ ಕೆಚ್ಚಲಿನಿಂದ ಸುರಿಸಿದಳು. ಗಯರಾಜ ಯಾವ ಕಾಮ್ಯಫಲವನ್ನು ಅಪೇಕ್ಷಿಸುತ್ತಿರಲಿಲ್ಲ. ಆದರೂ ಎಲ್ಲ ವೇದಗಳು ಇವರ ಇಷ್ಟಗಳನ್ನು ಪೂರೈಸುತ್ತಿದ್ದವು. ಯುದ್ಧದಲ್ಲಿ ಪರಾಜಿತರಾದ ರಾಜರು ಇವನಿಗೆ ಕಾಣಿಕೆಗಳನ್ನು ಒಪ್ಪಿಸುತ್ತಿದ್ದರು. ಬ್ರಾಹ್ಮಣರೂ ಧರ್ಮಾಚರಣೆ ಮಾಡುವ ಪ್ರಜೆಗಳು ಇವನಿಗೆ ತಮ್ಮ ಪುಣ್ಯದ ಆರನೆಯ ಒಂದು ಭಾಗ ಕೊಡುತ್ತಿದ್ದರು. ಇವನ ಯಾಗಗಳಿಂದ




ಬಹುಸೋಮಪಾನ ಮಾಡಿ ಇಂದ್ರಾದಿ ದೇವತೆಗಳು, ಬ್ರಹ್ಮಾದಿಗಳು ತೃಪ್ತರಾಗುತ್ತಿರಲು ಯಜ್ಞಸಾರಭೋಕ್ತೃವು, ಫಲದಾತನೂ ಆದ ಶ್ರೀಹರಿಯು ಇವನು ಶ್ರದ್ಧೆಯಿಂದಲೂ ಸ್ಥಿರಭಕ್ತಿಯಿಂದಲೂ ಸಮರ್ಪಿಸಿದ ಯಾಗಗಳನ್ನು ಸ್ವೀಕರಿಸಿ ಫಲಗಳನ್ನು ಕೊಡುತ್ತಿದ್ದನು. ಶ್ರೀಹರಿಯು ವಿಶ್ವದಲ್ಲಿ ಪ್ರವಿಷ್ಟನು. ವಿಶ್ವಕ್ಕೆ ಜೀವನಪ್ರದನು. ಅವನು ಯಜ್ಞದಲ್ಲಿ ಪ್ರೀತನಾದದ್ದೇ ಆದರೆ ಎಲ್ಲಾ ಬ್ರಹ್ಮಾದಿದೇವತೆಗಳೂ, ಪ್ರಾಣಿಗಳು, ಮನುಷ್ಯರು, ಬಳ್ಳಿಗಳು, ಹುಲ್ಲುಗಳು ಎಲ್ಲರೂ ಕೂಡಲೇ ತೃಪ್ತರಾಗುವರು. ಅಂತಹ ಶ್ರೀಹರಿಯು ಮೊದಲೇ ಗಯರಾಜನ ಕರ್ಮಗಳಿಂದ ಪ್ರೀತನಾಗಿದ್ದನು. ಈಗ ಮತ್ತಷ್ಟು ಪ್ರೀತನಾದನು. ಗಯಾರಾಜನಿಂದ ಜಯಂತಿಯಲ್ಲಿ ಚಿತ್ರರಥ, ಸ್ವಾತಿ, ಅವಿರೋಧನರೆಂಬ ಮೂವರು ಮಕ್ಕಳಾದರು. ಚಿತ್ರರಥನಿಂದ ಊರ್ಜೆಯಲ್ಲಿ ಸಮ್ರಾಟನೂ ಅವನಿಂದ ಉತ್ಕಲೆಯಲ್ಲಿ ಮರೀಚಿಯೂ ಅವನಿಂದ ಬಿಂದುಮತಿಯಲ್ಲಿ ಬಿಂದುಮಂತನೂ ಅವನಿಂದ ಸುಷೇಣೆಯಲ್ಲಿ ಮಧುವು ಅವನಿಂದ ಸುಮನಸಿಯಲ್ಲಿ ವೀರವ್ರತನೂ ಅವನಿಂದ ಪ್ರಜೆಯಲ್ಲಿ ಮನ್ಯು ಪ್ರಮನ್ಯು ಎಂಬ ಇಬ್ಬರು ಸುತರು, ಮನ್ಯುವಿನಿಂದ ಸತ್ಯಾಳಲ್ಲಿ ಭುವನನು ಭುವನನಿಂದ ದೋಷಾಳಲ್ಲಿ ತ್ವಷ್ಟನು ತ್ವಷ್ಟುವಿಗೆ ವಿರೋಚನೆಯಲ್ಲಿ ವಿರಜನೂ ಮಕ್ಕಳಾದರು. ವಿರಜನಿಗೆ ವಿಷೂಚಿಯಲ್ಲಿ ನೂರು ಗಂಡುಮಕ್ಕಳು ಒಬ್ಬ ಕನ್ಯೆಯು ಉತ್ಪನ್ನರಾದರು ಅವರಲ್ಲಿ ಶತಜಿತನು ಶ್ರೇಷ್ಠನು. ಕೊನೆಯಲ್ಲಿ ಜನಿಸಿದ ವಿರಜನು ಪ್ರಿಯವ್ರತನ ವಂಶವನ್ನು ವಿಷ್ಣುವು ದೇವತಾಗಣವನ್ನು ಹೇಗೋ ಹಾಗೆ ಕೀರ್ತಿಯಿಂದ ಅತಿಯಾಗಿ ಅಲಂಕರಿಸಿದರು.

|| ★★★ ||

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಷೋಡಶೋऽಧ್ಯಾಯಃ

**ಈ ಅಧ್ಯಾಯದಲ್ಲಿ...**

ಶ್ರೀಹರಿಯ ಮಾಹಾತ್ಮ್ಯಾತಿಶಯ ಪ್ರಕಾಶಕವಾದ ವಿಶಾಲವಾದ ಭೂವಲಯಾದಿಗಳ ಜ್ಞಾನವು ಪರಮಪುರುಷಾರ್ಥಕ್ಕೆ ಉಪಯೋಗಿಯಾದುದರಿಂದ ಅದರ ಪರಿಮಾಣಾದಿಗಳನ್ನು ಈ ಹದಿನಾರನೇ ಅಧ್ಯಾಯದಿಂದ ಮುಂದೆ ಐದು ಅಧ್ಯಾಯಗಳಲ್ಲಿ ವಿವರಿಸುವರು.

### ಭೂಗೋಳ ನಿರೂಪಣೆ

ಪ್ರಥಮಾಧ್ಯಾಯದಲ್ಲಿ ಮೊದಲಿಗೆ ಪ್ರಿಯವ್ರತನ ಕಥೆ (ಚರಿತ್ರೆ) ಹೇಳುವಾಗ ಪ್ರಿಯವ್ರತನು ಏಳು ಸಲ ಭೂಮಂಡಲ ಪ್ರದಕ್ಷಿಣೆ ಮಾಡಿದ್ದರಿಂದ ಅವನ ರಥದ ಚಕ್ರಗಳ ತುದಿಯಿಂದ (ಅಂಚಿನಿಂದ) ಏಳು ಸಮುದ್ರಗಳು, ಏಳು ದ್ವೀಪಗಳು ರಚಿಸಲ್ಪಟ್ಟವು ಎಂದು ಶುಕಾಚಾರ್ಯರು ಸಂಕ್ಷೇಪವಾಗಿ ಹೇಳಿದ್ದನ್ನು ವಿಸ್ತಾರವಾಗಿ ತಿಳಿಯಲು ಪರೀಕ್ಷಿತನು ಪ್ರಶ್ನಿಸುವನು. ಹೇಳಿದ್ದನ್ನು ಅನುವಾದ ಮಾಡುವನು.

### ಭೂಗೋಳ ನಿರೂಪಣೆಗಾಗಿ ಪರೀಕ್ಷಿತ ಪ್ರಾರ್ಥಿಸುವುದು

**ರಾಜೋವಾಚ-**

**ಇತ್ಯುಕ್ತಸ್ತ್ವಯಾ(ಉಕ್ತಸ್ತ್ವಯಾ) ಭೂಮಂಡಲಾಯಾಮವಿಶೇಷೋ ಯಾವದಾದಿತ್ಯಸ್ತಪತಿ ಯತ್ರ ಚಾಸೌ ಜ್ಯೋತಿಷಾಂ ಗಣೈಶ್ಚಂದ್ರಮಾಃ ಸಹ ದೃಶ್ಯತೇ ॥೧॥**




**ಯಾವತ್** ಎಲ್ಲಿಯವರೆಗೆ **ಆದಿತ್ಯಃ** ಸೂರ್ಯನು **ತಪತಿ** ತಾಪಕೊಡುತ್ತಿರುವನೋ **ಚ** ಮತ್ತು **ಅಸೌ ಚಂದ್ರಮಾಃ** ಈ ಚಂದ್ರನು **ಜ್ಯೋತಿಷಾಂ ಗಣೈಃ ಸಹ** ನಕ್ಷತ್ರಗಳ ಸಮೂಹಗಳ ಜೊತೆಗೆ **ದೃಶ್ಯತೇ** ಕಾಣುತ್ತಿರುವನೋ **ತಾವಾನ್** ಅಷ್ಟು **ಭೂಮಂಡಲಾಯಾಮವಿಶೇಷಃ** ಭೂಮಂಡಲದ ವಿಸ್ತಾರ ವಿಶೇಷವು **ಇತಿ** ಎಂದು **ತ್ವಯಾ** ತಮ್ಮಿಂದ **ಉಕ್ತಃ** ಹೇಳಲ್ಪಟ್ಟಿತು. ।।೧।।

**ತತ್ರಾಪಿ ಪ್ರಿಯವ್ರತರಥಚರಣಪರಿಖಾತೈಃ ಸಪ್ತಭಿಃ ಸಪ್ತಸಿಂಧವಃ ಉಪಕ್ಲೃಪ್ತಾಃ ಯತ ಏತಸ್ಯಾಃ ಸಪ್ತದ್ವೀಪವಿಶೇಷಕಲ್ಪಸ್ತ್ವಯಾ ಭಗವನ್ ಖಲು ಸೂಚಿತಃ ಏತದೇವ ನಿಖಿಲಮಹಂ ಮಾನತೋ ಲಕ್ಷಣತಶ್ಚ ಸರ್ವಂ ಜಿಜ್ಞಾಸ್ಯಾಮಿ ।।೨।।**

**ತತ್ರಾಪಿ** ಆ ಭೂಮಂಡಲದಲ್ಲಿಯೂ **ಭಗವನ್** ಪೂಜ್ಯರೇ **ತ್ವಯಾ** ತಮ್ಮಿಂದ **ಪ್ರಿಯವ್ರತರಥಚರಣಪರಿಖಾತೈಃ** ಪ್ರಿಯವ್ರತರಾಜನ ರಥದ ಗಾಲಿಗಳ ಸುತ್ತುವುದರಿಂದುಂಟಾದ (ತೆಗ್ಗು) ಹಳ್ಳಗಳಿಂದ **ಸಪ್ತಸಿಂಧವಃ** ಏಳು ಸಮುದ್ರಗಳು **ಉಪಕ್ಲೃಪ್ತಾಃ** ಬೇರೆ ಬೇರೆ ತಿಳಿಯಲ್ಪಟ್ಟವು **ಯತಃ** ಯಾವ ಸಮುದ್ರಗಳಿಂದ **ಏತಸ್ಯಾಃ** ಈ ಭೂಮಿಯ **ಸಪ್ತದ್ವೀಪವಿಶೇಷಕಲ್ಪಃ** ಏಳುದ್ವೀಪಗಳ ವಿಭಾಗ ವಿಶೇಷವು **ಸೂಚಿತಃ ಖಲು** ಸಂಕ್ಷೇಪವಾಗಿ ಹೇಳಲ್ಪಟ್ಟಿತಷ್ಟೇ **ನಿಖಿಲಂ** ಸಮುದ್ರ ದ್ವೀಪ ಮೊದಲಾದ ಎಲ್ಲ **ಏತದೇವ** ಭೂಮಂಡಲವನ್ನೇ **ಸರ್ವಂ** ಸಮುದ್ರದ್ವೀಪಾದಿಗಳಲ್ಲಿರುವ ಅಲ್ಲಿಂದಾಚೆ ಇರುವ ಕಾಂಚನಭೂಮಿ(ಚಿನ್ನದ) ಮೊದಲಾದ ಎಲ್ಲವನ್ನು **ಮಾನತಃ** ಪರಿಮಾಣದಿಂದಲೂ **ಲಕ್ಷಣತಃ** ವರ್ತುಲಾಕಾರವಾಗಿ, ಚತುರಸ್ರಾಕಾರವಾಗಿ ಮುಂತಾದ ಆಕಾರದಿಂದಲೂ **ಅಹಂ** ನಾನು **ಜಿಜ್ಞಾಸ್ಯಾಮಿ** ತಿಳಿಯಬಯಸುವೆನು. ।।೨।।



ಮೋಕ್ಷಾನುಪಯೋಗಿಯಾದುದರಿಂದ ಇದನ್ನು ತಿಳಿದೇನು ಮಾಡುವಿ? ಎಂದರೆ ಇದರ ಜ್ಞಾನವೂ ಮೋಕ್ಷಜನಕ ಬ್ರಹ್ಮಜ್ಞಾನಕ್ಕೆ ಉಪಯೋಗಿಯಾಗಿದೆ ಕಾರಣ ಅವಶ್ಯಕವೇ ಎಂದು ಹೇಳುವರು

**ಭಗವತೋ ಗುಣಮಯೇ ಏವ ಸ್ಥೂಲರೂಪೇ ಆವೇಶಿತಂ ಮನೋ ಹ್ಯಗುಣೇ ಸೂಕ್ಷ್ಮ ಆತ್ಮಜ್ಯೋತಿಷಿ ಪರೇ ಬ್ರಹ್ಮಣಿ ಭಗವತಿ ವಾಸುದೇವಾಖ್ಯೇ ಕ್ಷಮಮಾವೇಶಿತುಂ ತದುಹವೈ ತತ್ ಗುರೋಽರ್ಹಸ್ಯನುವರ್ಣಯಿತುಮಿತಿ ॥**

**ಗುಣಮಯೇ** ಸತ್ತ್ವಮುಂತಾದಗುಣವಿಕಾರವಾದ **ಭಗವತಃ** ಶ್ರೀಹರಿಯ **ಸ್ಥೂಲರೂಪೇ** ಪಾತಾಲ ಮೊದಲಾದ ಜಡಾವಯವಗಳುಳ್ಳ ಹದಿನಾಲ್ಕು ಲೋಕಾತ್ಮಕಪ್ರತಿಮಾರೂಪದಲ್ಲಿ **ಆವೇಶಿತಂ** ನಿರಂತರ ಅಭ್ಯಾಸದಿಂದ ಇಟ್ಟ **ಮನಃ** ಹಿ ಮನಸ್ಸೇ **ಅಗುಣೇ** ಸತ್ವಾದಿಗುಣವಿಕಾರವಿಲ್ಲದ (ಸಚ್ಚಿದಾನಂದಾದ್ಯಾತ್ಮಕವಾದ) **ಸೂಕ್ಷ್ಮೇ** ಅನುಗ್ರಹವಿಲ್ಲದೇ ಕಾಣಲಾಗದ ನಮ್ಮ ಅಂತರ್ಯಾಮಿಯಾದ **ಆತ್ಮಜ್ಯೋತಿಷಿ** ಸ್ವಯಂಪ್ರಕಾಶಮಾನನಾದ **ಪರೇ ಬ್ರಹ್ಮಣಿ** ಪರಬ್ರಹ್ಮನೆಂದು ಕರಿಸಿಕೊಳ್ಳುವ **ಭಗವತಿ** ಸರ್ವದೇವನಿಯಾಮಕನಾದ, ಐಶ್ವರ್ಯಾದಿ ಗುಣಪೂರ್ಣನಾದ **ವಾಸುದೇವಾಖ್ಯೇ ಅಪಿ** ವಾಸುದೇವನೆಂದು ಕರಿಸಿಕೊಳ್ಳುವ ಶ್ರೀಹರಿಯಲ್ಲಿಯೂ **ಆವೇಶಿತುಂ** ಇಡಲು (ನಿರಂತರ ಸ್ಮರಣೆ ಮಾಡಲು) **ಕ್ಷಮಂ** ಸಮರ್ಥವಾಗುವುದು **ತದು** ಆದ್ದರಿಂದಲೇ **ಏತತ್ ವಾ** ಇದನ್ನೇ **ಗುರೋ** ಗುರುಗಳೇ **ಅನುವರ್ಣಯಿತುಂ ಅರ್ಹಸಿ** ವರ್ಣಿಸಲು ಅರ್ಹನು.

**ಭಗವತಿ** ಎಂಬುದರಿಂದ ನಿರ್ಗುಣನಲ್ಲವೆಂದೂ **ಪರಬ್ರಹ್ಮಣಿ** ಎಂದುದರಿಂದ ಮಾಯಾಶಬಲನಲ್ಲವೆಂದೂ ತಿಳಿಸಿರುವರು. ।।೩।।

**ಋಷಿರುವಾಚ-**

ಶುಕಾಚಾರ್ಯರು ಉತ್ತರ ಕೊಡುತ್ತಾರೆ

**ನ ವೈ ಮಹಾರಾಜ ಭಗವತೋ ಮಾಯಾಗುಣವಿಭೂತೇಃ ಸ್ಥಾನವಿಶೇಷಾಣಾಂ ನಾಮರೂಪತಃ ಕಾಷ್ಠಾಂ ಮನಸಾಽಧಿಗಂತುಮಲಂ ವಿಬುಧಾಯುಷೇಣಾಪಿ ಪುರುಷಸ್ತಸ್ಮಾತ್ಪ್ರಾಧಾನ್ಯೇನೈವ ಭೂಗೋಲವಿಶೇಷಂ ನಾಮರೂಪಮಾನ-ಲಕ್ಷಣತೋ ವ್ಯಾಖ್ಯಾಸ್ಯಾಮಃ ।।೪।।**

**ಮಹಾರಾಜ** ಪರೀಕ್ಷಿತನೇ! **ಮಾಯಾಗುಣವಿಭೂತೇಃ** ಪ್ರಕೃತಿಯ ಕಾರ್ಯಗಳಲ್ಲಿ ವಿವಿಧ ರೂಪಗಳುಳ್ಳ **ಭಗವತಃ** ಶ್ರೀಹರಿಯ **ಸ್ಥಾನವಿಶೇಷಾಣಾಂ** ಪ್ರತಿಮೆಗಳಂತಿರುವ ಸಮುದ್ರದ್ವೀಪ ಮೊದಲಾದವುಗಳ **ಕಾಷ್ಠಾಂ** ಕೊನೆಯನ್ನು(ಪೂರ್ತಿಯನ್ನು) **ನಾಮರೂಪತಃ** ನಾಮರೂಪಗಳಿಂದ **ಮನಸಾ** ಮನಸ್ಸಿನಿಂದ (**ವಚಸಾ** ಮಾತುಗಳಿಂದ) **ಅಧಿಗಂತುಂ** ತಿಳಿಯಲು **ವಿಬುಧಾಯುಷೇಣಾಪಿ** ದೇವತೆಗಳ ಆಯುಷ್ಯದಿಂದಲೂ **ಪುರುಷಃ** ಮನುಷ್ಯನು **ನ ಅಲಂ ವೈ** ಸಮರ್ಥನಲ್ಲವೇ ಅಲ್ಲ. ಅಂದಮೇಲೆ ಹೇಳಲು ಸಮರ್ಥನಲ್ಲವೆಂದು ಬೇರೆ ಹೇಳಬೇಕಿಲ್ಲವೆಂದು ಭಾವ.

**ತಸ್ಮಾತ್** ಆದ್ದರಿಂದ **ಪ್ರಾಧಾನ್ಯೇನ** ಮುಖ್ಯವಾಗಿ **ನಾಮರೂಪತಃ** ಲವಣ, ಇಕ್ಷು, ಸುರಾ, ಸರ್ಪಿ ಮುಂತಾದ ಹೆಸರುಗಳಿಂದ, ಸಂಸ್ಥಾನವಿಶೇಷಗಳಿಂದ (**ರೂಪತಃ**) **ಮಾನತಃ** ಲಕ್ಷ ಮುಂತಾದ ಸಂಖ್ಯಾಪರಿಮಾಣದಿಂದ **ಲಕ್ಷಣತಃ** ಆದರದರ ಅಸಾಧಾರಣ ಧರ್ಮಗಳಿಂದ **ಭೂಗೋಲವಿಶೇಷಂ** ಭೂಗೋಲ ವಿಶೇಷವನ್ನು **ವ್ಯಾಖ್ಯಾಸ್ಯಾಮಃ** ವಿವರಿಸುವೆನು. ।।೪।।

**ಯೋ ವಾ ಅಯಂ ದ್ವೀಪಃ ಕುವಲಯಕಮಲಕೋಶಾಭ್ಯಂತರಕೋಶೋ ನಿಯುತಯೋಜನವಿಶಾಲಃ ಸಮವರ್ತುಲೋ ಯಥಾ ಪುಷ್ಕರಮ್ ।।೫।। (ಪುಷ್ಕರಪತ್ರಂ)**

**ಕುವಲಯಕಮಲ** ಭೂಮಂಡಲವೆಂಬ ಕಮಲದ **ಕೋಶಾಃ** ಮೊಗ್ಗು(ದಳಗಳು) (ಏಳು) ಸಾಲುಗಳ (ದ್ವೀಪಗಳ) **ಅಭ್ಯಂತರಕೋಶಃ** ಒಳದಳಗಳ ಸಾಲು ಇದ್ದಂತೆ ಮಧ್ಯದಲ್ಲಿರುವ **ಯೋ ವಾ ಅಯಂ** ಯಾವ ಈ ಜಂಬೂದ್ವೀಪವಿದೆಯೋ **ಸಃ** ಅದು **ನಿಯುತಯೋಜನವಿಶಾಲಃ** ಒಂದು ಲಕ್ಷಯೋಜನ ವಿಸ್ತಾರವಾದುದು. **ಸಮವರ್ತುಲಃ** ಚಪ್ಪಟೆಯಾಗಿ ದುಂಡಾಗಿದೆ. **ಯಥಾ ಪುಷ್ಕರಂ** (**ಪತ್ರಂ**) ಪದ್ಮದ ಎಲೆಯಂತೆ (ಪದ್ಮದಂತೆ).

## ದ್ವೀಪ ಶಬ್ದದ ನಿರ್ವಚನ

ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ಎರಡೆರಡು ಕಡೆಗಳಿಂದಲೂ ಸಮುದ್ರದ ನೀರನ್ನು ಕುಡಿಯುವದರಿಂದ ದ್ವೀಪವೆಂದು ಹೆಸರು. ಹಾಗೆ ನೀರನ್ನು ಹೀರಿಕೊಳ್ಳದಿದ್ದರೆ ಭೂಮಿಯು ಬಿಸಿಲಿನಿಂದ ಒಣಗಿ ಧೂಳಾಗಿ ಜನಕ್ಕೆ ವಾಸಿಸಲು

ಸ್ಥಳವಿಲ್ಲದೇ ನೀರಲ್ಲಿ ಮುಳುಗಿ ಎಲ್ಲವೂ ನಾಶವಾಗುತ್ತಿತ್ತು. ಲಕ್ಷಯೋಜನ ವೆಂಬುದರಿಂದ ಅದರ ಪರಿಮಾಣವನ್ನು, ಆಭ್ಯಂತರ ಕೋಶವೆಂಬುದರಿಂದ ಪಶುವನ್ನು ಕೋಡನ್ನು ಹಿಡಿದು ತೋರಿಸುವಂತೆ ಅದು ಇರುವ ಪ್ರಕಾರವನ್ನೂ ಸಮವರ್ತುಲ ಎಂಬುದರಿಂದ ಲಕ್ಷಣವನ್ನೂ ಹೇಳಿರುವರು. ಒಳಗಿನ ದಳಗಳ ಸಾಲಿನಲ್ಲಿ ದಳಗಳು ಒಂದಕ್ಕೊಂದು ಅಂಟಿಕೊಳ್ಳದೆ ವಿರಳವಾಗಿರುತ್ತವೆ ಆದ್ದರಿಂದ ಆ ಉಪಮಾನ ಸರಿಯಲ್ಲವೆಂದು ತಿಳಿದು ಭಾಗಗಳಿಲ್ಲದೆ ಒಂದೇ ಆಗಿರುವ ಪದ್ಮಪತ್ರವನ್ನು ಉಪಮಾನವಾಗಿ ಹೇಳಿರುವರು. **ವೈ** ಎಂಬುದರಿಂದ ಇಲ್ಲಿ ಹೇಳಿರುವ ಪ್ರಮಾಣಗಳೇ ಸರಿಯೆಂದು ಬೇರೇ ಗ್ರಂಥಗಳಲ್ಲಿ ಹೇಳಿದ್ದು ಸರಿಯಲ್ಲವೆಂದೂ ತಿಳಿಸಿರುವರು.

★ (ಇದೆಲ್ಲವೂ ವಿಜಯಧ್ವಜರು ಹೇಳಿದ ವಿಷಯ ಆದರೆ ಇದು ಈಗ ಹೈದರಾಬಾದದಲ್ಲಿ ಮುದ್ರಿಸಿದ ಪುಸ್ತಕದಲ್ಲಿ ಇಲ್ಲ. ಹನ್ನೊಂದು ಟಿಪ್ಪಣಿ ಪುಸ್ತಕದಲ್ಲಿ ನೋಡಿ ಬರೆದಿದೆ)

**ಯಸ್ಮಿನ್ನವವರ್ಷಾಣಿ ನವ (ನವ) ಯೋಜನ (ವಿ) ಸಹಸ್ರಾಯಾಮಾನ್ಯ-ಷ್ಟಭಿರ್ಮರ್ಯಾದಾಗಿರಿಭಿಃ ಸುವಿಭಕ್ತಾನಿ ಭವಂತಿ ॥೬॥**

**ಯಸ್ಮಿನ್** ಯಾವ ಜಂಬೂದ್ವೀಪದಲ್ಲಿ **ನವನವಯೋಜನಸಹಸ್ರಾಯಾಮಾನಿ** ಪ್ರತಿಯೊಂದು ಒಂಭತ್ತು ಸಾವಿರ ಯೋಜನ ವಿಸ್ತಾರವುಳ್ಳ ಮತ್ತು **ಅಷ್ಟಭಿಃ** ಎಂಟು **ಮರ್ಯಾದಾಗಿರಿಭಿಃ** ಎಲ್ಲೆಯ(ಸೀಮಾ) ಬೆಟ್ಟಗಳಿಂದ **ಸುವಿಭಕ್ತಾನಿ** ಚೆನ್ನಾಗಿ ಬೇರ್ಪಟ್ಟಿರುವ **ನವವರ್ಷಾಣಿ** ಒಂಬತ್ತು ಖಂಡಗಳು **ಭವಂತಿ** ಇರುವವು.

ಇವುಗಳಲ್ಲಿ ಭದ್ರಾಶ್ವ, ಕೇತುಮಾಲಾ ಖಂಡಗಳು ಮಾತ್ರ ಒಂದೊಂದು ಮೂವತ್ತೊಂದು ಸಾವಿರ ಯೋಜನ ವಿಸ್ತಾರವಿರುವವು. ಆದರೂ ಅಧಿಕ ಸಂಖ್ಯೆಯಲ್ಲಿ ನ್ಯೂನ ಸಂಖ್ಯೆಯಿರುವುದು ಎಂಬ ಅಭಿಪ್ರಾಯದಿಂದ ಎಲ್ಲಕ್ಕೂ ಒಂಭತ್ತು ಸಾವಿರವೆಂದು ಹೇಳಿರುವರು ಎಂದು ತಿಳಿಯಬೇಕು. ಪ್ರತಿಯೊಂದು ಖಂಡಕ್ಕೂ ಒಂಭತ್ತು ಸಾವಿರವೇ ಯೋಜನವಿಸ್ತಾರವೆಂದು ಹೇಳುವದಾದರೆ ಮೇಲೆ ಹೇಳಿದ ಎರಡು ಖಂಡಗಳನ್ನು ಬಿಟ್ಟು ಮಿಕ್ಕ ಖಂಡಗಳಿಗೆ ಆ ಪರಿಮಾಣವೆಂದು ಹೊಂದಿಸಿಕೊಳ್ಳಬೇಕು. ಛತ್ರಿನ್ಯಾಯದಿಂದ ಹೇಳಿದ್ದು ಎಂದರ್ಥ.




## ಛತ್ರಿನ್ಯಾಯ

ಛತ್ರಿಯುಳ್ಳವರು ಇಲ್ಲದವರೂ ಗುಂಪಾಗಿ ಹೋಗುತ್ತಿದ್ದಾಗ ಇಲ್ಲದವರನ್ನೂ ಸೇರಿಸಿ ಛತ್ರಿಯುಳ್ಳವರು ಹೋಗುತ್ತಿರುವರು ಎಂದು ಹೇಳುವ ವಾಡಿಕೆ. ಇದಕ್ಕೆ ಛತ್ರಿ ನ್ಯಾಯವೆಂದು ಹೆಸರು. ।।೬।।

**ಯೇಷಾಂ ಮಧ್ಯೇ ಇಲಾವೃತಂ ನಾಮಾಭ್ಯಂತರವರ್ಷಂ ಯಸ್ಯ ನಾಭ್ಯಾ-ಮವಸ್ಥಿತಃ ಸೌವರ್ಣಃ ಕುಲಗಿರಿರಾಜೋ ಮೇರುರ್ದ್ವೀಪಾಯಾಮಸಮುನ್ನಾಹಃ ಕರ್ಣಿಕಾಭೂತಃ ಕುವಲಯಕಮಲಸ್ಯ ಮೂರ್ಧನಿ ದ್ವಾತ್ರಿಂಶತ್ಸಹಸ್ರಯೋಜನ-ವಿತತೋ ಮೂಲೇ ಷೋಡಶಸಹಸ್ರಂ ತಾವತಾಂऽತರ್ಭೂಮ್ಯಾಂ ಪ್ರವಿಷ್ಟಃ ।।**

**ಯೇಷಾಂ ಮಧ್ಯೇ** ಈ ಒಂಭತ್ತು ವರ್ಷಗಳ ಮಧ್ಯದಲ್ಲಿ **ಇಲಾವೃತಂ ನಾಮ** ಇಲಾವೃತವೆಂಬುದು **ಅಭ್ಯಂತರ ವರ್ಷಂ** ಒಳಗಿನ ಖಂಡವಾಗಿದೆ **ಯಸ್ಯ ನಾಭ್ಯಾಂ** ಯಾವ ಇಲಾವೃತ ಖಂಡದ ಮಧ್ಯದಲ್ಲಿ **ಸೌವರ್ಣಃ** ಬಂಗಾರದ **ಕುಲಗಿರಿರಾಜಃ** ಕುಲಪರ್ವತ ಶ್ರೇಷ್ಠವಾದ **ಮೇರುಃ** ಮೇರು ಪರ್ವತವು **ಅವಸ್ಥಿತಃ** ಇದೆ ಇದು **ದ್ವೀಪಾಯಾಮಸಮುನ್ನಾಹಃ** ಜಂಬುದ್ವೀಪದ ವಿಸ್ತಾರದಷ್ಟು ಅಂದರೆ ಒಂದು ಲಕ್ಷಯೋಜನ ಎತ್ತರ ಉಳ್ಳದ್ದು **ಕುವಲಯಕಮಲಸ್ಯ** ಭೂಮಂಡಲವೆಂಬ ಕಮಲಕ್ಕೆ **ಕರ್ಣಿಕಾಭೂತಃ** ಬೀಜಕೋಶ(ಪರಾಗ ಪೀಠದಂತೆ) ಇದೆ **ಮೂರ್ಧನಿ** ಮೇಲ್ಭಾಗದಲ್ಲಿ **ದ್ವಾತ್ರಿಂಶತ್ಸಹಸ್ರಯೋಜನವಿತತಃ** ಮೂವತ್ತೆರಡು ಸಾವಿರ ಯೋಜನ ವಿಸ್ತಾರವಾದುದು **ಮೂಲೇ** ಬುಡದಲ್ಲಿ **ಷೋಡಶಸಹಸ್ರಂ** ಹದಿನಾರುಸಾವಿರ ಯೋಜನ **ವಿತತಃ** ವಿಸ್ತಾರವಾದುದು **ತಾವತಾ** ಹದಿನಾರು ಸಾವಿರ ಯೋಜನಗಳ ಪರಿಮಾಣದಿಂದ **ಭೂಮ್ಯಾಂ** ಭೂಮಿಯಲ್ಲಿ **ಅಂತಃ** ಒಳಗೆ **ಪ್ರವಿಷ್ಟಃ** ಪ್ರವೇಶಿಸಿರುವುದು. ಅಂದರೆ ಹೊರಗೆ ಎಂಭತ್ತುನಾಲ್ಕು ಸಾವಿರ ಯೋಜನ ಎತ್ತರವಾಗಿ ಕಾಣುವುದು ಎಂದರ್ಥ. ಲಕ್ಷಯೋಜನ ಎತ್ತರವೆಂಬುದರಿಂದ ಮೇರುವಿನ ಪರಿಮಾಣವನ್ನೂ ಕರ್ಣಿಕಾಭೂತ ಎಂಬುದರಿಂದ ಲಕ್ಷಣವನ್ನೂ ಹೇಳಿರುವರು.

★ ಶ್ರೀವಿಜಯಧ್ವಜರು ತಾತ್ಪರ್ಯ ಅವತಾರಿಕೆಯಾಗಿ ಹೇಳಿದ ವಿಶೇಷ ವಿಷಯ ಮುಂದಿನಂತೆ. ಶ್ರೀಯಾದವಾರ್ಯರ ಪ್ರಕಾರ ೭ನೇ ಶ್ಲೋಕಕ್ಕೆ ಈ ತಾತ್ಪರ್ಯವಿದೆ. ಈ ವಿಷಯವೂ ರಾಘವೇಂದ್ರ ಸೇವಾಸಮಿತಿ ಭಾಗಲಿಂಗಪಲ್ಲಿ ಹೈದ್ರಾಬಾದ ಇವರಿಂದ

ಪೇಜಾವರ ಶ್ರೀಗಳ ಮಾರ್ಗದರ್ಶನದಲ್ಲಿ ಪ್ರಕಾಶಿತ ಪುಸ್ತಕದಲ್ಲಿ ಕಂಡುಬರುವುದಿಲ್ಲ. ಏನು ಪ್ರಮಾದವಾಗಿದೆಯೋ ಅರ್ಥವಾಗುತ್ತಿಲ್ಲ.

## ವಿಷ್ಣುಪುರಾಣ-ಭಾಗವತ ವಿರೋಧಪರಿಹಾರ

(ವಿಷ್ಣುಪುರಾಣ ೨-೨) **ಚತುರಾಶೀತಿಸಾಹಸ್ರಯೋಜನಾನಾಂ ಸಮುಚ್ಛ್ರಯಃ** ಎಂದು ಪರಾಶರರು ಮೈತ್ರೇಯರಿಗೆ ಎಂಭತ್ತುನಾಲ್ಕು ಸಾವಿರ ಯೋಜನ ಎತ್ತರವುಳ್ಳದ್ದೆಂದು ಮೇರುವನ್ನು ವರ್ಣಿಸಿರುವಾಗ ಇಲ್ಲಿ ಹೇಳಿದ ಲಕ್ಷಯೋಜನ ಎತ್ತರವೆಂಬುದು ಹೇಗೆ ಸರಿಯಾದೀತು? ಎಂದು ಶಂಕಿಸಿ ವಿಜಯಧ್ವಜತೀರ್ಥರು ಉತ್ತರವಾಗಿ ಪರಾಶರರು ಸರಿಯಾಗಿ ತಿಳಿದಿಲ್ಲವೆಂದು ಹೇಳಿರುವರು **ನ ತದೀದೃಗಿತಿ ಜ್ಞೇಯಂ ನ ವಾಚ್ಯಂ ನ ಚ ತರ್ಕ್ಯತೇ । ಪಶ್ಯಂತೋಽಪಿ ನ ಜಾನಂತಿ ಮೇರೋ ರೂಪಂ ವಿಪಶ್ಚಿತಃ**' (ಇಂತಹದೆಂದು ಅದನ್ನು ತಿಳಿಯಲಾಗದು ಹೇಳಲಾಗದು, ಊಹಿಸಲಾಗದು. ಮೇರುವಿನ ರೂಪವನ್ನು ನೋಡುತ್ತಿದ್ದರೂ ಜ್ಞಾನಿಗಳು (ಸಂಪೂರ್ಣವಾಗಿ) ತಿಳಿಯುವುದಿಲ್ಲ) ಎಂಬ ವಚನವೂ **ಇಂದ್ರಸ್ತು ವರ್ತುಲಾಕಾರಂ ಪಂಚಕೋಣಂ ಬೃಹಸ್ಪತಿಃ** ಎಂದು ಇಂದ್ರಾದಿಗಳಿಗೂ ಅನ್ಯಥಾಜ್ಞಾನವಿರಬಹುದು ಎಂದಿರುವರು. ಅದರ ಮೇಲೆ **ಋಷಿಃ ತ್ರಿಕಾಲದರ್ಶೀ ಸ್ಯಾತ್** ಎಂಬ ವಾಕ್ಯವಿರುವುದರಿಂದ ತ್ರಿಕಾಲದಲ್ಲಿ ನಡೆಯುವುದನ್ನು ಬಲ್ಲವನೇ ಋಷಿ ಎನಿಸುವುದರಿಂದಲೂ ಶ್ರೀಹರಿಯ ಅನುಗ್ರಹದಿಂದ ಜ್ಞಾನವನ್ನು ಸಂಪಾದಿಸಿದವರಾದುದರಿಂದಲೂ ಪರಾಶರರ ವಚನವನ್ನು ಅಜ್ಞಾನದಿಂದ ಹೇಳಿದ್ದು ಎನ್ನುವುದು ಅತ್ಯಂತ ಸಾಹಸವೇ ಎನ್ನಬಹುದು. ಆದರೆ ಪ್ರಾಮಾಣಿಕವಾದುದನ್ನು ಒಪ್ಪಲೇಬೇಕು. ಶ್ರೀಹರಿಯನ್ನು (ಅರ್ಥಾತ್ ಪರಶುಕ್ಲತ್ರಯರನ್ನು) ಬಿಟ್ಟು ಇತರರಿಗೆ ಕೆಲವು ಸಲ ಅಲ್ಲಲ್ಲಿ ಅಜ್ಞಾನವು ಕಂಡುಬಂದಿದೆ. ಒಂದುವೇಳೆ ಈ ರೀತಿ ನಿರಾಕರಣೆ ಮಾಡುವುದನ್ನು ಬಿಟ್ಟು (ವೈರವನ್ನು) ಭಾಗವತ ಮತ್ತು ವಿಷ್ಣುಪುರಾಣ ವಾಕ್ಯಗಳಿಗೆ ಏಕವಾಕ್ಯತೆಯನ್ನು (ಸಾಮರಸ್ಯವನ್ನು) ಹೇಳಿದಲ್ಲಿ ಸಂತೋಷವಾಗುವುದು ಎನ್ನುವುದಾದರೆ ಆಗ ವಿಜಯಧ್ವಜರ ಉತ್ತರವಿದು **ಪ್ರವಿಷ್ಟಃ ಷೋಡಶಾಧಸ್ತಾತ್** ಎಂಬ ಪರಾಶರರ ಹದಿನಾರುಸಾವಿರಯೋಜನ ಕೆಳಗಿದೆ ಎಂಬ ಮಾತನ್ನೂ ಮೇಲೆ ಕಾಣಿಸುವ ಎಂಭತ್ತುನಾಲ್ಕುಸಾವಿರಯೋಜನವನ್ನೂ ಸೇರಿಸಿ ಒಂದು ಲಕ್ಷಯೋಜನವೆಂದೇ ಅರ್ಥವು. ಭಾಗವತದಲ್ಲಿ ಮೇಲೆ ಹೇಳಿದಂತೆ ಹದಿನಾರು ಸಾವಿರ ಯೋಜನ ಭೂಮಿಯಲ್ಲಿ ಇರುವ ಭಾಗವನ್ನೂ ಸೇರಿಸಿ ಒಂದು




ಲಕ್ಷಯೋಜನ ಎತ್ತರವೆಂಬುದೇ ಸರಿಯಾದುದು. ಹಿಂದಿನ ವಾಕ್ಯದಲ್ಲಿ (ಭಾಗವತದ) **ಮೂಲೇ ಷೋಡಶಸಾಹಸ್ರ** ಎಂದು ಹೇಳಿ ಉಕ್ತಿಲಾಘವಕ್ಕಾಗಿ **ತಾವತಾ** ಎಂದು ಮುಂದೆ ಹೇಳಿರುವರು. **ತಾವತಾ** ಎಂಬುದಕ್ಕೆ ಹದಿನಾಲ್ಕು ಸಾವಿರ ಎಂದು ಅರ್ಥ ಮಾಡಿದರೆ ದೂರಾನ್ವಯದೋಷವೂ ಬರುವುದಿಲ್ಲ. (ಇಲ್ಲವಾದರೆ ದೂರಾನ್ವಯ ಮತ್ತು ಅಪಾರ್ಥವಾಗುವುದು) ಇದರಿಂದ ಎರಡು ಪುರಾಣಗಳಲ್ಲಿ ಯಾವ ವ್ಯತ್ಯಾಸವಿಲ್ಲವೆಂದೇ ಆಯಿತು. ಅದೂ ಅಲ್ಲದೆ ವಿಷ್ಣುಪುರಾಣದಲ್ಲಿ **ಚತುರಶೀತಿ** ಎಂಬಲ್ಲಿ **ಚತುರಾಶೀತಿ** ಎಂದು ದೀರ್ಘಪ್ರಯೋಗವು ಯಾವುದೋ ವಿಶೇಷವನ್ನು ಸೂಚಿಸುವುದು. ವ್ಯಾಸರು ಭಾಗವತದಲ್ಲಿ ಹೇಳಿದ ವಿಶೇಷವೇ ಅದು ಎಂದು ತಿಳಿಯಬೇಕು. ಜ್ಞಾನಸಮುದ್ರರಾದ ವ್ಯಾಸರ ಮಾತಿನಲ್ಲಿ ಎಂದೂ ಅನ್ಯಥಾತ್ವವನ್ನು ಶಂಕಿಸುವಂತಿಲ್ಲ. ಆದ್ದರಿಂದ ಭಾಗವತದಲ್ಲಿ ಹೇಳಿದ ರೀತಿಯಲ್ಲಿಯೇ ಭುವನಕೋಶದ ವಿಚಾರವನ್ನು ತಿಳಿಯಬೇಕು ಎಂದು ಬ್ರಹ್ಮಾಂಡ ಪುರಾಣವಚನವಿದೆ.

''ಯಥಾ ಭಾಗವತೋಕ್ತಂ ಭೌವನಂ ಕೋಶಲಕ್ಷಣಮ್ ।
ತಸ್ಯಾವಿರೋಧತೋ ಯೋಜ್ಯಂ ಸರ್ವಗ್ರಂಥಾಂತರಸ್ಥಿತಂ ॥

ಎಂಬ ಪ್ರಮಾಣವು ಭಾಗವತದಲ್ಲಿ ಹೇಳಿದಂತೆ ಭುವನಕೋಶವನ್ನು ತಿಳಿಯಬೇಕೆಂದು, ಬೇರೇ ಗ್ರಂಥದಲ್ಲಿ ಇದಕ್ಕೆ ವ್ಯತ್ಯಾಸವೇನಾದರೂ ಇದ್ದಲ್ಲಿ ಅದನ್ನು ಇದಕ್ಕೆ ವಿರೋಧವಿಲ್ಲದಂತೆ ಅನ್ವಯಿಸಿಕೊಳ್ಳಬೇಕೆಂದೂ ತಿಳಿಸುವುದು. ಆದರೆ ಮುಂದುವರೆದು ಅದೇ ಪ್ರಮಾಣವು ಭಾಗವತದ ಕೆಲವು ವಾಕ್ಯಗಳಲ್ಲಿ ಯೋಜನಾವ್ಯತ್ಯಾಸದಿಂದ ಅನ್ಯಗ್ರಂಥಗಳಿಗೂ ಇದಕ್ಕೂ ಸಾಮರಸ್ಯವನ್ನೂ ತೋರಿಸಿರುವುದು

''ಮಂಡೋದೇಃ ಪೂರಣಂ ಚೈವ ವ್ಯತ್ಯಾಸಂ ಕ್ಷೀರಸಾಗರೇ
ರಾಹುಸೋಮರವೀಣಾಂ ಚ ಮಂಡಲಾತ್ ದ್ವಿಗುಣೋಕ್ತಿತಾಂ ।
ವಿನ್ಯೈವ ಸರ್ವಮುನ್ನೇಯಂ ಯೋಜನಾಭೇದತೋಽತ್ರ ತು ॥

ಎಂದು. ಇವುಗಳನ್ನೂ ಆಯಾಸ್ಥಳದಲ್ಲಿ ತೋರಿಸಲಾಗುವುದು. ॥೭॥

**ಉತ್ತರೋತ್ತರೇಣೇಳಾ(ಲಾ)ವೃತಾನ್ನೀಲಃ, ಶ್ವೇತಃ, ಶೃಂಗವಾನಿತಿ ತ್ರಯೋ, ರಮ್ಯಕಹಿರಣ್ಮಯಕುರೂಣಾಂ ವರ್ಷಾಣಾಂ(ತ್ರಯಾಣಾಂ) ಮರ್ಯಾದಾಗಿರಯಃ ಪ್ರಾಗಾಯತಾ ಉಭಯತಃ ಕ್ಷಾರೋದಾವಧಯೋ ದ್ವಿಸ(ಸಾ)ಹಸ್ರಪೃಥವ**

**ಏಕೈಕಶಃ ಪೂರ್ವಸ್ಮಾತ್ಪೂರ್ವಸ್ಮಾದುತ್ತರೋತ್ತರೋ(ತ್ತರಾತ್) ದಶಾಂಶಾಧಿ ಕಾಂಶೇನ (ದಶಾಂಶೇನ) ದೈರ್ಘ್ಯ ಏವ ಹ್ರಸಂತಿ ॥೮॥**

**ಇಲಾವೃತಾತ್ ಉತ್ತರೋತ್ತರೇಣ** ಇಲಾವೃತ ಖಂಡದ ಉತ್ತರದಲ್ಲಿ ಕ್ರಮವಾಗಿ **ಪ್ರಾಗಾಯತಃ** ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿರುವ (ಪೂರ್ವಸ್ಯಾಂ ದಿಶಿ ಶೃಂಗೈಃ ಭುಗ್ನಾವಸ್ಥಿತಾಃ) ಕೋಡುಗಳಿಂದ ಪೂರ್ವದಿಕ್ಕಿನಲ್ಲಿ ಸ್ವಲ್ಪ ಮೊಟಕಾಗಿರುವ ಎಂದು ವಿಜಯಧ್ವಜೀ) **ಉಭಯತಃ** ಪೂರ್ವಪಶ್ಚಿಮದಿಕ್ಕುಗಳಲ್ಲಿ **ಕ್ಷಾರೋದಾವಧಯಃ** ಉಪ್ಪಿನ ಸಮುದ್ರವೇ ಅವಧಿಯಾಗಿವುಳ್ಳ **ದ್ವಿಸಾಹಾಸ್ರ** ಎರಡು ಸಾವಿರ ಯೋಜನ **ಪೃಥವಃ** ಉತ್ತರದಕ್ಷಿಣವಿಸ್ತಾರವುಳ್ಳ (ದಪ್ಪ) **ನೀಲಃ, ಶ್ವೇತಃ, ಶೃಂಗವಾನ್** ಎಂಬ **ತ್ರಯಃ** ಮೂರು **ರಮ್ಯಕ, ಹಿರಣ್ಮಯ, ಕುರೂಣಾಂ ತ್ರಯಾಣಾಂ ವರ್ಷಾಣಾಂ** ರಮ್ಯಕ, ಹಿರಣ್ಮಯ, ಕುರು ಎಂಬ ಮೂರು ಖಂಡಗಳಿಗೆ **ಮರ್ಯಾದಾಗಿರಯಃ** ಎಲ್ಲೆಯ ಪರ್ವತಗಳಾಗಿ ಇವೆ **ಏಕೈಕಶಃ** ಒಂದೊಂದೂ ಪರ್ವತವು **ಪೂರ್ವಸ್ಮಾತ್** ಹಿಂದಿನದಕ್ಕಿಂತ **ಉತ್ತರೋತ್ತರಾತ್** ಮುಂದೆ ಮುಂದೆ ಇರುವ ಪರ್ವತಗಳಿಗಿಂತ **ದಶಾಂಶೇನ** ಹತ್ತು ಭಾಗದಿಂದ **ದೈರ್ಘ್ಯ ಏವ** ಉದ್ದದಲ್ಲಿ ಮಾತ್ರ **ಹ್ರಸಂತಿ** ಕಡಿಮೆಯಿರುವುವು (ಎತ್ತರದಲ್ಲಿ ಆಗಲಿ ವಿಸ್ತಾರದಲ್ಲಿ ಆಗಲಿ ಅಲ್ಲ). ॥೮॥




ದಶಾಂಶ ಹ್ರಾಸ

ಬ್ರಹ್ಮಾಂಡ ಖರ್ಪರ

ಘನೋದಕ

ತಮೋಭಾಗ

ಭೂ ಭಾಗ

| ಭಾಗ | ಯೋಜನ | ಕ್ರೋಶ | ದಂಡ | ಹಸ್ತ | ಅಂಗುಲ | ವ್ರೀಹಿ | ಸರ್ಷಪ |
|---|---|---|---|---|---|---|---|
| ಭೂ ಭಾಗ | 7,14,28,571 | 1.5 | 214 | 1 | 3 | 1 | 2 |
| ತಮೋ ಭಾಗ | 14,28,57,142 | 3 | 428 | 2 | 6 | 2 | 4 |
| ಘನೋದಕ ಭಾಗ | 28,57,14,284 | 6 | 856 | 4 | 12 | 4 | 8 |
| ಬ್ರಹ್ಮಾಂಡ ಖರ್ಪರ | 50,00,00,000 | | | | | | |
| Total | 100,00,00,000 | | | | | | |




ಭೂಭಾಗ - ಸಪ್ತದ್ವೀಪಗಳು




ಜಂಬೂದ್ವೀಪ
ಜಂಬೂದ್ವೀಪ
ಜಂಬೂದ್ವೀಪ
ಜಂಬೂದ್ವೀಪ
ಲವಣ ಸಮುದ್ರ
ಲವಣ ಸಮುದ್ರ
ಲವಣ ಸಮುದ್ರ
ಲವಣ ಸಮುದ್ರ
ಲವಣ ಸಮುದ್ರ
ಕುರುವರ್ಷ
9000 ಯೋಜನ
ಶೃಂಗವಾನ್
2000 ಯೋಜನ
ಹಿರಣ್ಮಯ ವರ್ಷ
9000 ಯೋಜನ
ಶ್ವೇತ ಪರ್ವತ
2000 ಯೋಜನ
ರಮ್ಯಕ ವರ್ಷ
9000 ಯೋಜನ
ನೀಲ
2000 ಯೋಜನ
ಕೇತುಮಾಲ ವರ್ಷ
ಭದ್ರಾಶ್ವ ವರ್ಷ
ಇಲಾವೃತ
9000 ಯೋಜನ
ಕೈಲಾಸ ಕರವೀರ
10000 ಯೋಜನ
ಕುಮುದ
ಕೌಬೇರೀ
ಮೇರು
ಯಾಮ್ಯಾ
ಮಂದರ
ಸುಪಾರ್ಶ್ವ
ಮೇರುಮಂದರ
ಶೃಂಗ ಮಕರ
9000 ಯೋಜನ
10000 ಯೋಜನ
2000 ಯೋಜನ
10000 Yojanas
18000 Yojanas
9000 ಯೋಜನ
18000 ಯೋಜನ
ಗಂಧಮಾದನ
ನಿಷಧ
2000 ಯೋಜನ
ಹರಿವರ್ಷ
9000 ಯೋಜನ
ಹೇಮಕೂಟ
2000 ಯೋಜನ
ಕಿಂಪುರುಷ ವರ್ಷ
9000 ಯೋಜನ
ಹಿಮಾಲಯ
2000 ಯೋಜನ
ಭರತ ವರ್ಷ
9000 ಯೋಜನ

32000 ಯೋಜನ
ಮೇರುಶಿಖರ
ಮೇರುಪರ್ವತ
1ಲಕ್ಷ ಯೋಜನ
84000 ಯೋಜನ
ಕೇತುಮಾಲ ವರ್ಷ
ಇಲಾವೃತ ವರ್ಷ
ಭದ್ರಾಶ್ವ
ಲವಣಸಮುದ್ರ
9000 Yojanas
10000 Yojanas
ಪವನ
9000 Yojanas
ಪಾರಿಯಾತ್ರ
9000 Yojanas
ಮಾಲ್ಯವಾನ್
5000 Yojanas
4000 ಯೋಜನ
ಸುಪಾರ್ಶ್ವ
ಮಂದರ
4000 ಯೋಜನ
5000 ಯೋಜನ
ಗಂಧಮಾದನ
9000 ಯೋಜನ
ದೇವಕೂಟ
9000 ಯೋಜನ
ಜಠರ
9000 ಯೋಜನ
ಲವಣ ಸಮುದ್ರ
16000 ಯೋಜನ
ಮೇರು ಬುಡ
16000 Yojanas
1ಲಕ್ಷ ಯೋಜನ ದಪ್ಪ ಭೂಭಾಗ
10000 Yojanas
ಅತಲ
10000 Yojanas
ವಿತಲ
10000 Yojanas
ಸುತಲ
ಒಂದೊಂದು ಲೋಕದ ಮಧ್ಯದಲ್ಲಿ 500 ಯೋಜನದ ಅಂತರ
10000 Yojanas
ತಲಾತಲ
10000 Yojanas
ಮಹಾತಲ
10000 Yojanas
ರಸಾತಲ
10000 Yojanas
ಪಾತಾಲ
11000 Yojanas

**ಮೇರು ಪರ್ವತ ಪರಿಮಾಣ**


ಉತ್ತರಾಯಣ
ಆರ್ದ್ರಾ
ಪುನರ್ವಸು
ಧಾತಾ
ಧರ್ಮ
ಇಂದ್ರ
ಅಗ್ನಿ
ಪ್ರಜಾಪತಿ
ವಿಧಾತಾ
ಧ್ರುವ
ಪುಷ್ಯ
ಸಪ್ತ ಋಷಿಗಳು
ಆಶ್ಲೇಷಾ
ಅಜಾವೀಧಿ
ಆಕಾಶಗಂಗಾ
ಮೃಗಶಿರಾ
ರೋಹಿಣೀ
ಕೃತ್ತಿಕಾ
ಭರಣೀ
ಅಶ್ವಿನೀ
ರೇವತೀ
ಉತ್ತರಾಭಾದ್ರಾ
ಪೂರ್ವಾಭಾದ್ರಾ
ಶತಭಿಷಾ
ಮಘಾ
ಪೂರ್ವಾಫಾಲ್ಗುಣೀ
ಉತ್ತರಫಾಲ್ಗುಣೀ
ಹಸ್ತಾ
ಚಿತ್ರ
ಸ್ವಾತೀ
ವಿಶಾಖಾ
ಅನುರಾಧಾ
ಜ್ಯೇಷ್ಠಾ
ಧನಿಷ್ಠಾ
ಅಭಿಜಿತ್
ಶ್ರವಣ
ಪೂರ್ವಾಷಾಢಾ
ಮೂಲಂ
ಉತ್ತರಾಷಾಢಾ
ದಕ್ಷಿಣಾಯನ
ಶಿಂಶುಮಾರ ರೂಪಿ
ಭಗವಂತನಲ್ಲಿ ನಕ್ಷತ್ರಗಳ
ಚಿಂತನೆ

**ಏವಂ ದಕ್ಷಿಣೇನೇಲಾವೃತಾನ್ನಿಷಧೋ ಹೇಮಕೂಟೋ ಹಿಮಾಲಯ ಇತಿ ಪ್ರಾಗಾಯತಾ ಯಥಾ ನೀಲಾದಯಃ ಅಯುತಯೋಜನೋತ್ಸೇಧಾಃ ಹರಿವರ್ಷಕಿಂಪುರುಷಭಾರತಾನಾಂ ಯಥಾಸಂಖ್ಯಮ್॥೯॥**

**ಏವಂ** ಹೀಗೆಯೇ **ಇಲಾವೃತಾತ್ ದಕ್ಷಿಣೇನ** ಇಲಾವೃತಖಂಡದ ದಕ್ಷಿಣಕ್ಕೆ **ನಿಷಧ, ಹೇಮಕೂಟ, ಹಿಮಾಲಯಃ ಇತಿ** ಈ ಹೆಸರಿನ ಮೂರು ಪರ್ವತಗಳು **ಯಥಾ ನೀಲಾದಯಃ** ಮೇಲೆ ಹೇಳಿದ ನೀಲಾದಿಪರ್ವತಗಳಂತೆ **ಪ್ರಾಗಾಯತಾಃ** ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿರುವವು **ಅಯುತ ಯೋಜನ ಉತ್ಸೇಧಾಃ** ಹತ್ತುಸಾವಿರ ಯೋಜನ ಎತ್ತರವಿರುವವು **ಯಥಾಸಂಖ್ಯಂ** ಕ್ರಮವಾಗಿ **ಹರಿವರ್ಷ, ಕಿಂಪುರುಷ, ಭರತಾನಾಂ** ಈ ಖಂಡಗಳಿಗೆ ಎಲ್ಲೆಯ ಪರ್ವತಗಳಾಗಿರುವುವು.

ವಿಸ್ತಾರ ಎತ್ತರ
|-ಉದ್ದ -|

ನೀಲಾದಿಪರ್ವತಗಳಂತೆ ದಕ್ಷಿಣಕ್ಕಿರುವ ನಿಷಧಾದಿಪರ್ವತಗಳು ಅವುಗಳ ಉತ್ತರ ಪರ್ವತ (ಮುಂದಿನ ಪರ್ವತ) ಗಳಿಗಿಂತ ಹತ್ತು ಭಾಗದಿಂದ ದೀರ್ಘದಲ್ಲಿ ಕಡಿಮೆಯಿರುವುವು ನೀಲ, ನಿಷಧ ಪರ್ವತಗಳು ಒಂದು ಲಕ್ಷಯೋಜನಕ್ಕಿಂತ ಸ್ವಲ್ಪ ಕಡಿಮೆ ಉದ್ದವಿರುವುವು. ಅವುಗಳಿಗಿಂತ ಶ್ವೇತಹೇಮಕೂಟಗಳು ಹತ್ತುಸಾವಿರ ಯೋಜನ ಕಡಿಮೆ ಅವುಗಳಿಗಿಂತ ಶೃಂಗವಾನ್, ಹಿಮಾಲಯಗಳೂ ಇನ್ನೂ ಹತ್ತು ಸಾವಿರ ಯೋಜನ ಕಡಿಮೆ ಉದ್ದವಿರುವುವು. **ಲಕ್ಷಪ್ರಮಾಣೌ ದ್ವೌ ಮಧ್ಯೇ ದಶಹೀನಾಸ್ತಥಾಪರೇ** ಎಂಬ ವಿಷ್ಣುಪುರಾಣವಚನವು **ಜಂಬೂದ್ವೀಪಪ್ರಮಾಣೇನ ನಿಷಧಃ ಪರಿಕೀರ್ತಿತಃ । ತಸ್ಮಾಚ್ಚ ದಶಭಾಗೇನ ಹೇಮಕೂಟಃ ಪ್ರತಿಯತೇ** ಎಂಬ ವರಾಹಪುರಾಣ ವಚನವು ಇದೇ ಪ್ರಮಾಣವನ್ನೇ(ಅಳತೆಯನ್ನೇ) ತಿಳಿಸುತ್ತವೆ.

ಇದೇ ಎತ್ತರವನ್ನೇ ನೀಲಾದಿಪರ್ವತಗಳಿಗೆ ತಿಳಿಯಬೇಕು (ಹತ್ತುಸಾವಿರ ಯೋಜನ). ನೀಲಾದಿಗಳ ವಿಸ್ತಾರವನ್ನೇ ಇವುಗಳಿಗೆ ತಿಳಿಯಬೇಕು ಅಂದರೆ ಎರಡು ಸಾವಿರ ಯೋಜನ ವಿಸ್ತಾರವೆಂದು ಭಾವ. ॥೯॥

**ತಥೈವೇಲಾವೃತಮಪರೇಣ ಪೂರ್ವೇಣ ಚ ಮಾಲ್ಯವದ್ಗಂಧಮಾದನಾ- ವಾನೀಲನಿಷಧಾಯತೌ ದ್ವಿಸಹಸ್ರಪೃಥೌ ಕೇತುಮಾಲಭದ್ರಾಶ್ವಯೋಃ ಸೀಮಾನಂ ವಿದಧಾತೇ ॥೧೦॥**

**ತಥೈವ** ಹೇಗೆ ಇಲಾವೃತದ ಉತ್ತರ ದಕ್ಷಿಣಗಳಲ್ಲಿ ನೀಲ ನಿಷಧ ಮುಂತಾದವು ರಮ್ಯಕಾದಿಗಳಿಗೆ ಮರ್ಯಾದೆಯನ್ನು ನೀಡುವವೋ ಹಾಗೆಯೇ **ಇಲಾವೃತಂ ಅಪರೇಣ** ಪಶ್ಚಿಮದಲ್ಲಿ **ಪೂರ್ವೇಣ ಚ** ಪೂರ್ವದಲ್ಲಿಯೂ ಕ್ರಮವಾಗಿ **ಮಾಲ್ಯವದ್‌ಗಂಧಮಾದನೌ** ಮಾಲ್ಯವಾನ್ ಗಂಧಮಾದನಗಳೆಂಬ ಪರ್ವತಗಳು **ಆನೀಲನಿಷಧಾಯತೌ** ಉತ್ತರದಿಂದ ನೀಲ ಪರ್ಯಂತ ದಕ್ಷಿಣದಿಂದ ನಿಷಧಪರ್ಯಂತ ಉದ್ದವಾಗಿವೆ(ಹಬ್ಬಿವೆ) **ದ್ವಿಸಹಸ್ರವೃದ್ಧೌ** ಎರಡು ಸಾವಿರ ಯೋಜನ ಪೂರ್ವ ಪಶ್ಚಿಮಗಾತ್ರವಿವೆ **ಕೇತುಮಾಲಭದ್ರಾಶ್ವಯೋಃ** ಕೇತುಮಾಲ ಭದ್ರಾಶ್ವವರ್ಷಗಳನ್ನು ಕ್ರಮವಾಗಿ **ಸೀಮಾನಂ ವಿದಧಾತೇ** ಇಲಾವೃತ ಖಂಡದಿಂದ ಬೇರ್ಪಡಿಸುವವು (ಎಲ್ಲೆಯಾಗಿರುವುವು).

**ವಿ.ವಿ :-** ಇಲ್ಲಿ ಮೇರು ಮೊದಲಾದ ಪರ್ವತಗಳ ಪರಿಮಾಣಗಳನ್ನೂ ಸೇರಿಸಿಕೊಂಡು ಜಂಬೂದ್ವೀಪವು ಒಂದು ಲಕ್ಷಯೋಜನ ವಿಸ್ತಾರವೆಂದು ತಿಳಿಯಬೇಕು. ಹೇಗೆಂದರೆ ಪೂರ್ವ ಪಶ್ಚಿಮ ಮೇರು ಪ್ರದೇಶ ಹದಿನಾರು ಸಾವಿರ ಇಲಾವೃತ ಪ್ರದೇಶ ಎರಡೂ ಕಡೆ ಸೇರಿ (ಪೂರ್ವಪಶ್ಚಿಮಕ್ಕೆ ಇರುವ) ಹದಿನೆಂಟು ಸಾವಿರ, ಮಾಲ್ಯವಾನ್ ಗಂಧಮಾದನಗಳ ಪ್ರದೇಶ ನಾಲ್ಕುಸಾವಿರ, ಕೇತುಮಾಲಾಖಂಡ ಪಶ್ಚಿಮ ಸಮುದ್ರದವರೆಗೆ ಮೂವತ್ತೊಂದು ಸಾವಿರ ಭದ್ರಾಶ್ವಖಂಡ ಪೂರ್ವ ಸಮುದ್ರದವರೆಗೆ ಮೂವತ್ತೊಂದು ಸಾವಿರ ಅಂತೂ ಒಂದುಲಕ್ಷ ಯೋಜನ. ದಕ್ಷಿಣೋತ್ತರ ಮೇರುಪ್ರದೇಶ ಹದಿನಾರು ಸಾವಿರ, ಇಲಾವೃತ ಹದಿನೆಂಟು ಸಾವಿರ, ಹಿಮಾಲಯದ ಆರುಪರ್ವತಗಳ ಪ್ರದೇಶ ಹನ್ನೆರಡು ಸಾವಿರ ಭಾರತಾದಿ ಆರು ಖಂಡಗಳೂ ಸೇರಿ ಐವತ್ತನಾಲಕ್ಕು ಸಾವಿರ. ಹೀಗೆ ಲಕ್ಷ ಯೋಜನೆ. ಇದರಿಂದ ಖಂಡಗಳ ವಿಸ್ತೀರ್ಣವನ್ನು ಎಲ್ಲವನ್ನೂ ಸೇರಿಸಿದರೂ ಜಂಬೂದ್ವೀಪದ ವಿಸ್ತೀರ್ಣ ಪೂರ್ಣವಾಗಿ ಬರುವುದಿಲ್ಲವೆಂಬ ಶಂಕೆಗೆ ಅವಕಾಶ ಇಲ್ಲವೆಂದು ತಿಳಿಯಬೇಕು. ||೧೦||

**ಮಂದರೋ ಮೇರುಮಂದರಃ ಸುಪಾರ್ಶ್ವಃ ಕುಮುದ ಇತ್ಯಯುತಯೋಜನ ವಿಸ್ತಾರೋನ್ನಾಹಾಃ ಮೇರೋಶ್ಚತುರ್ದಿಶಮವಷ್ಟಂಭಗಿರಯ ಉಪಕ್ಲೃಪ್ತಾಃ ||**

**ಮಂದರ, ಮೇರುಮಂದರ, ಸುಪಾರ್ಶ್ವ, ಕುಮುದ ಇತಿ** ಎಂಬ **ಅಯುತಯೋಜನವಿಸ್ತಾರೋನ್ನಾಹಃ** ಒಂದೊಂದು ಹತ್ತುಸಾವಿರ ಯೋಜನ **ವಿಸ್ತಾರ**

 

ಸುತ್ತಳತೆ ಮತ್ತು **ಉನ್ನಾಹ** ಎತ್ತರವುಳ್ಳ **ಅವಷ್ಟಂಭಗಿರಯಃ** ಪೀಠಸ್ಥಾನೀಯ ಪರ್ವತಗಳು **ಮೇರೋಃ ಚತುರ್ದಿಶಂ** ಮೇರುವಿನ ನಾಲಕ್ಕು ದಿಕ್ಕುಗಳಲ್ಲಿಯೂ ಪೂರ್ವದಿಂದ ಕ್ರಮವಾಗಿ **ಉಪಕ್ಲೃಪ್ತಾಃ** ಸಮೀಪದಲ್ಲಿ ಇವೆ. ಆ ಪರ್ವತಗಳ ಸರಿಯಾದ ವಿಸ್ತಾರವು(Diameter) ಮೂರು ಸಾವಿರ ಮುನ್ನೂರು ಯೋಜನಕ್ಕೂ ಸ್ವಲ್ಪ ಹೆಚ್ಚೆಂದು ತಿಳಿಯಬೇಕು. ಸುತ್ತಳತೆಯ(Circumference) ಮೂರನೆಯ ಒಂದು ಭಾಗ ವ್ಯಾಸ(ವಿಸ್ತಾರ, Diameter) ವಿರುವುದು ಸಿದ್ಧವಾದ ವಿಷಯ.

ಹೀಗೆ ಹೇಳಿದ್ದರಿಂದ ಮೇರುವಿನ ಸುತ್ತಲೂ ಒಂಭತ್ತುಸಾವಿರ ಯೋಜನ ವಿಸ್ತಾರವಿರುವ ಇಲಾವೃತ ವರ್ಷದಲ್ಲಿ ಹತ್ತುಸಾವಿರ ಯೋಜನದ ವಿಸ್ತಾರದ ಈ ಪರ್ವತಗಳ ಅವಸ್ಥಿತಿ ಹೇಗೆ ಎಂದು ಶಂಕಿಸಬೇಕಿಲ್ಲ. ಮೇರು ಪರ್ವತವು ಮೇಲೆ ಹೆಚ್ಚು ವಿಸ್ತಾರವಿದ್ದು, ಕೆಳಗೆ ಕಡಿಮೆ ವಿಸ್ತಾರವಿದೆ. ಆದ್ದರಿಂದ ಅದರ ಸುತ್ತಲೂ ಕೆಳಗೂ ವಿಸ್ತಾರ ಹೆಚ್ಚಾಗಲು ಅವಷ್ಟಂಭಗಿರಿಗಳು ಏರ್ಪಟ್ಟಿವೆ (ಸಪೋರ್ಟುಗಾಗಿ) ಎಂದು ಭಾವ. ||೧೧||

**ಚತುರ್ಷ್ವೇತೇಷು ಚೂತಜಂಬೂಕದಂಬನ್ಯಗ್ರೋಧಾಶ್ಚತ್ವಾರಃ ಪಾದಪಪ್ರವರಾಃ ಪರ್ವತಕೇತವ ಇವ ಅಧಿಕಸಹಸ್ರಯೋಜನೋನ್ನಾಹಾಸ್ತಾವದ್ವಿಟಪವಿತತಯಃ ಶತಯೋಜನ ಪರಿಣಾಹಾಃ ||೧೨||**

**ಏತೇಷು ಚತುರ್ಷು** ಈ ನಾಲ್ಕು ಪರ್ವತಗಳಲ್ಲಿಯೂ ಕ್ರಮವಾಗಿ **ಚೂತ** ಮಾವು **ಜಂಬೂ** ನೇರಳೆ **ಕದಂಬ**(ಕಡಹ) ನೀಪ (ಉತ್ತಮಜಾತಿಯ ಈಚಲಮರ) **ನ್ಯಗ್ರೋಧ** ಆಲವೆಂಬ **ಪಾದಪಪ್ರವರಾಃ** ಹೆಮ್ಮರಗಳು **ಅಧಿಕಸಹಸ್ರಯೋಜನ** ಸಾವಿರದ ಒಂದನೂರು ಯೋಜನ **ಉನ್ನಾಹಾಃ** ಎತ್ತರವಾಗಿಯೂ **ತಾವತಾ** ಅಷ್ಟೇ ಸಂಖ್ಯೆಯ ಯೋಜನ **ವಿಟಪವಿತತಯಃ** ಶಾಖಾವಿಸ್ತಾರವುಳ್ಳವುಗಳಾಗಿಯೂ **ಪರ್ವತಕೇತವಃ ಇವ** ಆಯಾಬೆಟ್ಟಗಳ ಧ್ವಜಗಳಂತಿರುವುವು **ಶತಯೋಜನಪರಿಣಾಹಾಃ** ನೂರು ಯೋಜನ ದಪ್ಪಕಾಂಡ ಉಳ್ಳವುಗಳೂ ಆಗಿವೆ **ಏಕಾದಶಶತಾಯಾಮಾಃ ಪಾದಪಾ ಗಿರಿಕೇತವಃ** ಎಂಬ ವಿಷ್ಣುಪುರಾಣದಂತೆ ಹನ್ನೊಂದು ನೂರು ಎಂದು ಅರ್ಥಮಾಡಿದೆ, ಈ ಪ್ರಮಾಣದಲ್ಲಿಯ ಆಯಾಮಪದಕ್ಕೆ ಎತ್ತರವೆಂದು ಅರ್ಥ. ||೧೨||

**ಹ್ರದಾಶ್ಚತ್ವಾರಃ ಪಯೋಮಧ್ವಿಕ್ಷುರಸಮೃಷ್ಟಜಲಾಃ ಯದುಪಸ್ಪರ್ಶಿನ ಉಪದೇವಗಣಾ ಯೋಗೈಶ್ವರ್ಯಾಣಿ ಸ್ವಾಭಾವಿಕಾನಿ ಭರತರ್ಷಭ ಧಾರಯಂತಿ ||**

**ತಥೈವ** ಹೇಗೆ ಇಲಾವೃತದ ಉತ್ತರ ದಕ್ಷಿಣಗಳಲ್ಲಿ ನೀಲ ನಿಷಧ ಮುಂತಾದವು ರಮ್ಯಕಾದಿಗಳಿಗೆ ಮರ್ಯಾದೆಯನ್ನು ನೀಡುವವೋ ಹಾಗೆಯೇ **ಇಲಾವೃತಂ ಅಪರೇಣ** ಪಶ್ಚಿಮದಲ್ಲಿ **ಪೂರ್ವೇಣ ಚ** ಪೂರ್ವದಲ್ಲಿಯೂ ಕ್ರಮವಾಗಿ **ಮಾಲ್ಯವದ್‌ಗಂಧಮಾದನೌ** ಮಾಲ್ಯವಾನ್ ಗಂಧಮಾದನಗಳೆಂಬ ಪರ್ವತಗಳು **ಆನೀಲನಿಷಧಾಯತೌ** ಉತ್ತರದಿಂದ ನೀಲ ಪರ್ಯಂತ ದಕ್ಷಿಣದಿಂದ ನಿಷಧಪರ್ಯಂತ ಉದ್ದವಾಗಿವೆ(ಹಬ್ಬಿವೆ) **ದ್ವಿಸಹಸ್ರವೃದ್ಧೌ** ಎರಡು ಸಾವಿರ ಯೋಜನ ಪೂರ್ವ ಪಶ್ಚಿಮಗಾತ್ರವಿವೆ **ಕೇತುಮಾಲಭದ್ರಾಶ್ವಯೋಃ** ಕೇತುಮಾಲ ಭದ್ರಾಶ್ವವರ್ಷಗಳನ್ನು ಕ್ರಮವಾಗಿ **ಸೀಮಾನಂ ವಿದಧಾತೇ** ಇಲಾವೃತ ಖಂಡದಿಂದ ಬೇರ್ಪಡಿಸುವವು (ಎಲ್ಲೆಯಾಗಿರುವುವು).

**ವಿ.ವಿ :-** ಇಲ್ಲಿ ಮೇರು ಮೊದಲಾದ ಪರ್ವತಗಳ ಪರಿಮಾಣಗಳನ್ನೂ ಸೇರಿಸಿಕೊಂಡು ಜಂಬೂದ್ವೀಪವು ಒಂದು ಲಕ್ಷಯೋಜನ ವಿಸ್ತಾರವೆಂದು ತಿಳಿಯಬೇಕು. ಹೇಗೆಂದರೆ ಪೂರ್ವ ಪಶ್ಚಿಮ ಮೇರು ಪ್ರದೇಶ ಹದಿನಾರು ಸಾವಿರ ಇಲಾವೃತ ಪ್ರದೇಶ ಎರಡೂ ಕಡೆ ಸೇರಿ (ಪೂರ್ವಪಶ್ಚಿಮಕ್ಕೆ ಇರುವ) ಹದಿನೆಂಟು ಸಾವಿರ, ಮಾಲ್ಯವಾನ್ ಗಂಧಮಾದನಗಳ ಪ್ರದೇಶ ನಾಲ್ಕುಸಾವಿರ, ಕೇತುಮಾಲಾಖಂಡ ಪಶ್ಚಿಮ ಸಮುದ್ರದವರೆಗೆ ಮೂವತ್ತೊಂದು ಸಾವಿರ ಭದ್ರಾಶ್ವಖಂಡ ಪೂರ್ವ ಸಮುದ್ರದವರೆಗೆ ಮೂವತ್ತೊಂದು ಸಾವಿರ ಅಂತೂ ಒಂದುಲಕ್ಷ ಯೋಜನ. ದಕ್ಷಿಣೋತ್ತರ ಮೇರುಪ್ರದೇಶ ಹದಿನಾರು ಸಾವಿರ, ಇಲಾವೃತ ಹದಿನೆಂಟು ಸಾವಿರ, ಹಿಮಾಲಯದ ಆರುಪರ್ವತಗಳ ಪ್ರದೇಶ ಹನ್ನೆರಡು ಸಾವಿರ ಭಾರತಾದಿ ಆರು ಖಂಡಗಳೂ ಸೇರಿ ಐವತ್ತನಾಲಕ್ಕು ಸಾವಿರ. ಹೀಗೆ ಲಕ್ಷ ಯೋಜನೆ. ಇದರಿಂದ ಖಂಡಗಳ ವಿಸ್ತೀರ್ಣವನ್ನು ಎಲ್ಲವನ್ನೂ ಸೇರಿಸಿದರೂ ಜಂಬೂದ್ವೀಪದ ವಿಸ್ತೀರ್ಣ ಪೂರ್ಣವಾಗಿ ಬರುವುದಿಲ್ಲವೆಂಬ ಶಂಕೆಗೆ ಅವಕಾಶ ಇಲ್ಲವೆಂದು ತಿಳಿಯಬೇಕು. ॥೧೦॥

**ಮಂದರೋ ಮೇರುಮಂದರಃ ಸುಪಾರ್ಶ್ವಃ ಕುಮುದ ಇತ್ಯಯುತಯೋಜನ ವಿಸ್ತಾರೋನ್ನಾಹಾಃ ಮೇರೋಶ್ಚತುರ್ದಿಶಮವಷ್ಟಂಭಗಿರಯ ಉಪಕ್ಲೃಪ್ತಾಃ ॥**

**ಮಂದರ, ಮೇರುಮಂದರ, ಸುಪಾರ್ಶ್ವ, ಕುಮುದ ಇತಿ** ಎಂಬ **ಅಯುತಯೋಜನವಿಸ್ತಾರೋನ್ನಾಹಃ** ಒಂದೊಂದು ಹತ್ತುಸಾವಿರ ಯೋಜನ ವಿಸ್ತಾರ




ಸುತ್ತಳತೆ ಮತ್ತು **ಉನ್ನಾಹ** ಎತ್ತರವುಳ್ಳ **ಅವಷ್ಟಂಭಗಿರಯಃ** ಪೀಠಸ್ಥಾನೀಯ ಪರ್ವತಗಳು **ಮೇರೋಃ ಚತುರ್ದಿಶಂ** ಮೇರುವಿನ ನಾಲಕ್ಕು ದಿಕ್ಕುಗಳಲ್ಲಿಯೂ ಪೂರ್ವದಿಂದ ಕ್ರಮವಾಗಿ **ಉಪಕ್ಲೃಪ್ತಾಃ** ಸಮೀಪದಲ್ಲಿ ಇವೆ. ಆ ಪರ್ವತಗಳ ಸರಿಯಾದ ವಿಸ್ತಾರವು(Diameter) ಮೂರು ಸಾವಿರ ಮುನ್ನೂರು ಯೋಜನಕ್ಕೂ ಸ್ವಲ್ಪ ಹೆಚ್ಚೆಂದು ತಿಳಿಯಬೇಕು. ಸುತ್ತಳತೆಯ(Circumference) ಮೂರನೆಯ ಒಂದು ಭಾಗ ವ್ಯಾಸ(ವಿಸ್ತಾರ, Diameter) ವಿರುವುದು ಸಿದ್ಧವಾದ ವಿಷಯ.

ಹೀಗೆ ಹೇಳಿದ್ದರಿಂದ ಮೇರುವಿನ ಸುತ್ತಲೂ ಒಂಭತ್ತುಸಾವಿರ ಯೋಜನ ವಿಸ್ತಾರವಿರುವ ಇಲಾವೃತ ವರ್ಷದಲ್ಲಿ ಹತ್ತುಸಾವಿರ ಯೋಜನದ ವಿಸ್ತಾರದ ಈ ಪರ್ವತಗಳ ಅವಸ್ಥಿತಿ ಹೇಗೆ ಎಂದು ಶಂಕಿಸಬೇಕಿಲ್ಲ. ಮೇರು ಪರ್ವತವು ಮೇಲೆ ಹೆಚ್ಚು ವಿಸ್ತಾರವಿದ್ದು, ಕೆಳಗೆ ಕಡಿಮೆ ವಿಸ್ತಾರವಿದೆ. ಆದ್ದರಿಂದ ಅದರ ಸುತ್ತಲೂ ಕೆಳಗೂ ವಿಸ್ತಾರ ಹೆಚ್ಚಾಗಲು ಅವಷ್ಟಂಭಗಿರಿಗಳು ಏರ್ಪಟ್ಟಿವೆ (ಸಪೋರ್ಟುಗಾಗಿ) ಎಂದು ಭಾವ. ।।೧೧।।

**ಚತುರ್ಷ್ವೇತೇಷು ಚೂತಜಂಬೂಕದಂಬನ್ಯಗ್ರೋಧಾಶ್ಚತ್ವಾರಾಃ ಪಾದಪಪ್ರವರಾಃ ಪರ್ವತಕೇತವ ಇವ ಅಧಿಕಸಹಸ್ರಯೋಜನೋನ್ನಾಹಾಸ್ತಾವದ್ವಿಟಪವಿತತಯಃ ಶತಯೋಜನ ಪರಿಣಾಹಾಃ ।।೧೨।।**

**ಏತೇಷು ಚತುರ್ಷು** ಈ ನಾಲ್ಕು ಪರ್ವತಗಳಲ್ಲಿಯೂ ಕ್ರಮವಾಗಿ **ಚೂತ** ಮಾವು **ಜಂಬೂ** ನೇರಳೆ **ಕದಂಬ**(ಕಡಹ) ನೀಪ (ಉತ್ತಮಜಾತಿಯ ಈಚಲಮರ) **ನ್ಯಗ್ರೋಧ** ಆಲವೆಂಬ **ಪಾದಪಪ್ರವರಾಃ** ಹೆಮ್ಮರಗಳು **ಅಧಿಕಸಹಸ್ರಯೋಜನ** ಸಾವಿರದ ಒಂದನೂರು ಯೋಜನ **ಉನ್ನಾಹಾಃ** ಎತ್ತರವಾಗಿಯೂ **ತಾವತಾ** ಅಷ್ಟೇ ಸಂಖ್ಯೆಯ ಯೋಜನ **ವಿಟಪವಿತತಯಃ** ಶಾಖಾವಿಸ್ತಾರವುಳ್ಳವುಗಳಾಗಿಯೂ **ಪರ್ವತಕೇತವಃ ಇವ** ಆಯಾಬೆಟ್ಟಗಳ ಧ್ವಜಗಳಂತಿರುವುವು **ಶತಯೋಜನಪರಿಣಾಹಾಃ** ನೂರು ಯೋಜನ ದಪ್ಪಕಾಂಡ ಉಳ್ಳವುಗಳೂ ಆಗಿವೆ **ಏಕಾದಶಶತಾಯಾಮಾಃ ಪಾದಪಾ ಗಿರಿಕೇತವಃ** ಎಂಬ ವಿಷ್ಣುಪುರಾಣದಂತೆ ಹನ್ನೊಂದು ನೂರು ಎಂದು ಅರ್ಥಮಾಡಿದೆ, ಈ ಪ್ರಮಾಣದಲ್ಲಿಯ ಆಯಾಮಪದಕ್ಕೆ ಎತ್ತರವೆಂದು ಅರ್ಥ. ।।೧೨।।

**ಹ್ರದಾಶ್ಚತ್ವಾರಃ ಪಯೋಮಧ್ವಿಕ್ಷುರಸಮೃಷ್ಟಜಲಾಃ ಯದುಪಸ್ಪರ್ಶಿನ ಉಪದೇವಗಣಾ ಯೋಗೈಶ್ವರ್ಯಾಣಿ ಸ್ವಾಭಾವಿಕಾನಿ ಭರತರ್ಷಭ ಧಾರಯಂತಿ ।।**

**ಹೇ ಭರತರ್ಷಭ** ಭರತವಂಶ ಶ್ರೇಷ್ಠನಾದ ಪರೀಕ್ಷಿತನೇ! **ಪಯಃ** ಹಾಲು **ಮಧು** ಜೇನುತುಪ್ಪ **ಇಕ್ಷುರಸ** ಕಬ್ಬಿನಹಾಲು ಮತ್ತು **ಮೃಷ್ಟಜಲಾಃ** ಉತ್ತಮ ಸಮೃದ್ಧ ನೀರುಗಳುಳ್ಳ **ಚತ್ವಾರಃ** ನಾಲ್ಕು **ಹ್ರದಾಃ** ಮಡುವುಗಳು (ಕ್ರಮವಾಗಿ ನಾಲ್ಕು ದಿಕ್ಕುಗಳಲ್ಲಿವೆ). **ಯದುಪಸ್ಪರ್ಶಿನಃ** ಯಾವ ನೀರನ್ನು ಸೇವಿಸುವ **ಉಪದೇವಗಣಾಃ** ಗಂಧರ್ವರೇ ಮೊದಲಾದ ಅಮುಖ್ಯ ದೇವತೆಗಳು **ಸ್ವಾಭಾವಿಕಾನಿ ಯೋಗೈಶ್ವರ್ಯಾಣಿ** ಸ್ವಭಾವ ಸಿದ್ಧವಾದ ಅಣಿಮಾದಿ ಸಿದ್ಧಿಗಳನ್ನು **ಧಾರಯಂತಿ** ಹೊಂದಿರುವರು, ಸಿದ್ಧಿಗಳ ಅಭಿವ್ಯಕ್ತಿವುಳ್ಳವರಾಗುವರೆಂದರ್ಥ.

**ದೇವೋದ್ಯಾನಾನಿ ಚ ಭವಂತಿ ಚತ್ವಾರಿ ನಂದನಂ ಚೈತ್ರರಥಂ ವೈಭ್ರಾಜಂ(ಕಂ) ಸರ್ವತೋಭದ್ರ(ಕ)ಮಿತಿ ।।೧೪।।**

ಅಲ್ಲಿ ಕ್ರಮವಾಗಿ ನಂದನ, **ಚೈತ್ರರಥ, ವೈಭ್ರಾಜ, ಸರ್ವತೋಭದ್ರ ಇತಿ** ಎಂಬ ಈ ಹೆಸರುಗಳುಳ್ಳ ಚತ್ವಾರಿ ನಾಲ್ಕು **ದೇವೋದ್ಯಾನಾನಿ ಚ ಭವಂತಿ** ದೇವತೆಗಳಿಗೆ ಕ್ರೀಡೆಗೆ ಯೋಗ್ಯವಾದ ವನಗಳು ಇವೆ. ।।೧೪।।

**ಯೇಷ್ವಮರಪರಿವೃಢಾಃ ಸಹಾಮರಲಲಾಮಯೂಥಪತಯ ಉಪದೇವ-ಗಣೈರುಪಗೀಯಮಾನಮಹಿಮಾನಃ ಕಿಲ ವಿಹರಂತಿ ।।೧೫।।**

**ಯೇಷು** ಯಾವ ಈ ವನಗಳಲ್ಲಿ **ಸಹಾಮರಲಲಾಮಯೂಥಪತಯಃ** ಸುರಸ್ತ್ರೀಯರಲ್ಲಿ ಶ್ರೇಷ್ಠರಾದ ಸ್ತ್ರೀಯರ ಗುಂಪಿಗೆ ನಾಯಕಿಯರಾದ(ಶ್ರೇಷ್ಠರಾದ) ಸ್ತ್ರೀಯರೊಂದಿಗೆ **ಅಮರಪರಿವೃಢಾಃ** ದೇವಶ್ರೇಷ್ಠರು **ಉಪದೇವಗಣೈಃ** ಗಂಧರ್ವರ ಸಮೂಹಗಳಿಂದ **ಉಪಗೀಯಮಾನಮಹಿಮಾನಃ** ಗಾನಮಾಡಲ್ಪಡುವ ಮಹಿಮೆಯುಳ್ಳವರಾಗಿ **ವಿಹರಂತಿ** ಕ್ರೀಡಿಸುವರು **ಕಿಲ** ಅಷ್ಟೇ. ।।೧೫।।

**ಮಂದರೋತ್ಸಂಗ ಏಕಾದಶಶತಯೋಜನೋತ್ತುಂಗದೇವಚೂತಶಿರಸೋ ಗಿರಿಶಿಖರಸ್ಥೂಲಾನಿ ಫಲಾನ್ಯಮೃತಕಲ್ಪಾನಿ ನಿಪತಂತಿ ।।೧೬।।**

**ಮಂದರೋತ್ಸಂಗೇ** ಮಂದರ ಪರ್ವತದ ತೆಪ್ಪಲು ಪ್ರದೇಶದಲ್ಲಿ (ಶಿಖರದಲ್ಲಿ) (ಇರುವ) **ಏಕಾದಶಶತಯೋಜನೋತ್ತುಂಗ** ಹನ್ನೊಂದುನೂರು ಯೋಜನ ಎತ್ತರವಾದ **ದೇವಚೂತಶಿರಸಃ** ದೇವಮಾವಿನ ತುದಿಯಿಂದ(ದೇವತೆಗಳಿಂದ ಉಪಭೋಗಿಸಲರ್ಹವಾದುದರಿಂದ ದೇವಮಾವೆಂದು ಹೆಸರು) **ಗಿರಿಶಿಖರಸ್ಥೂಲಾನಿ**




ಬೆಟ್ಟದ ಶಿಖರದಷ್ಟು ಗಾತ್ರದ **ಅಮೃತಕಲ್ಪಾನಿ** ಅಮೃತಕ್ಕೆ ಸಮಾನಗಳಾದ **ಫಲಾನಿ** ಹಣ್ಣುಗಳು **ನಿಪತಂತಿ** ಬೀಳುತ್ತವೆ ||೧೬||

**ತೇಷಾಂ ವಿಶೀರ್ಯಮಾಣಾನಾಮತಿಮಧುರಸುರಭಿ(ಸುಗಂಧಿ) ಬಹುಲಾರುಣರಸೋದೇನಾರುಣೋದಾ ನಾಮ ನದೀ ಮಂದರಗಿರಿ-ಶಿಖರಾನ್ನಿಪತಂತೀ ಪೂರ್ವೇಣೇಲಾವೃತಮುಪಪ್ಲಾವಯತಿ ||೧೭||**

**ವಿಶೀರ್ಯಮಾಣಾನಾಂ ತೇಷಾಂ** ಬೀಳುತ್ತಿರುವ ಆ ಮಾವಿನ ಹಣ್ಣುಗಳ **ಅತಿಮಧುರ** ಅತ್ಯಂತ ಸಿಹಿಯಾದ **ಸುರಭಿ** ಸುವಾಸನೆಯುಳ್ಳದ್ದೂ **ಬಹುಲಾರುಣ** ಅತ್ಯಂತ ಕೆಂಪಾಗಿರುವ **ರಸೋದೇನ** ಹಣ್ಣಿನ ರಸವೆಂಬ ನೀರಿನಿಂದ **ಅರುಣೋದಾ ನಾಮ** ಅರುಣೋದಾ ಎಂದು ಹೆಸರುಳ್ಳ **ನದೀ** ನದಿಯು **ಮಂದರಗಿರಿಶಿಖರಾತ್ ನಿಪತಂತೀ** ಮಂದರ ಪರ್ವತದ ಶಿಖರದಿಂದ ಕೆಳಕ್ಕೆ ಬೀಳುವುದಾಗಿ **ಇಲಾವೃತಂ ಪೂರ್ವೇಣ** ಇಲಾವೃತ ಖಂಡವನ್ನು ಪೂರ್ವದಿಕ್ಕಿನಲ್ಲಿ **ಉಪಪ್ಲಾವಯತಿ** ಪ್ರವಾಹವುಳ್ಳದ್ದನ್ನಾಗಿ ಮಾಡುವುದು (ಇಲಾವೃತಖಂಡದ ಪೂರ್ವಭಾಗವನ್ನು ತೋಯಿಸುತ್ತದೆ, ಮುಳುಗಿಸುತ್ತದೆ ಎಂದು ಭಾವ). **ಉಪಧಾವತಿ** ಎಂಬ ಪಾಠದಲ್ಲಿ ತನ್ನ ಪ್ರವಾಹದಿಂದ ಶುದ್ಧಮಾಡುತ್ತದೆ ಎಂದರ್ಥ. ||೧೭||

**ಯದುಪಜೋಷಾದ್ಭವಾನ್ಯಾ ಅನುಚರೀಣಾಂ ಪುಣ್ಯಜನವಧೂನಾಮ-ವಯವ ಸ್ಪರ್ಶಸುಗಂಧವಾತೋ ದಶಯೋಜನಂ ಸಮಂತಾದನುವಾಸಯತಿ ||೧೮||**

**ಯದುಪಜೋಷಾತ್** ಯಾವ ನೀರನ್ನು (ರಸವನ್ನು) ಸೇವಿಸುವುದರಿಂದ **ಭವಾನ್ಯಾಃ** ಪಾರ್ವತಿಯ **ಅನುಚರೀಣಾಂ** ದಾಸಿಯರಾದ **ಪುಣ್ಯಜನವಧೂನಾಂ** ಯಕ್ಷಸ್ತ್ರೀಯರ **ಅವಯವಸ್ಪರ್ಶಸುಗಂಧವಾತಃ** ಶರೀರದ ಸಂಬಂಧಉಳ್ಳ ಸುವಾಸನೆಯುಳ್ಳ ಗಾಳಿಯು **ಸಮಂತಾತ್** ಸುತ್ತಲೂ **ದಶಯೋಜನಂ** ಹತ್ತು ಯೋಜನಗಳನ್ನು **ಅನುವಾಸಯತಿ** ಸುವಾಸನೆಯುಳ್ಳದ್ದನ್ನಾಗಿ ಮಾಡುತ್ತದೆ. ||೧೮||

**ಏವಂ (ಮೇರುಮಂದರ ಪರ್ವತಸ್ಥ)ಜಂಬೂಫಲಾನಾಮತ್ಯುಚ್ಚನಿಪಾತ ವಿಶೀರ್ಣಾನಾಮನಸ್ಥಿಪ್ರಾಯಾಣಾಮಿಭಕಾಯನಿಭಾನಾಂ ರಸೇನ ಜಂಬೂ ನಾಮ ನದೀ ಮೇರುಮಂದರಶಿಖರಾತ್ ಅಯುತಯೋಜನಾತ್ ಅವನಿತಲೇ ನಿಪತಂತೀ ದಕ್ಷಿಣೇನಾತ್ಮಾನಂ ಯಾವದಿಲಾವೃತಂ ಉಪಸ್ಯಂದಯತಿ**

**ತಾವದುಭಯೋರಪಿ ರೋಧಸೋರ್ಯಾ ಮೃತ್ತಿಕಾ ತತ್ರ(ಜಂಬೂ) ಫಲರಸೇನಾನುವಿಧ್ಯಮಾನಾ ವಾಯ್ವರ್ಕ ಸಂಯೋಗವಿಪಾಕೇನ ಸದಾಮರಲೋಕಾಭರಣಂ ಜಾಂಬೂನದಂ ನಾಮ ಸುವರ್ಣಂ ಭವತಿ ॥೧೯॥**

ಏವಂ ಇದೇ ರೀತಿಯಾಗಿ **ಅನಸ್ಥಿಪ್ರಾಯಾಣಾಂ** ಹೆಚ್ಚು ಒಳಗೆ ಬೀಜವಿಲ್ಲದಿರುವ (ಅತ್ಯಂತ ಸಣ್ಣ ಬೀಜವುಳ್ಳ) **ಇಭಕಾಯನಿಭಾನಾಂ** ಆನೆಯ ದೇಹದಂತೆ ಕಾಣುವ **ಜಂಬೂಫಲಾನಾಂ** ನೇರಳೆ ಹಣ್ಣುಗಳ **ಅತ್ಯುಚ್ಚನಿಪಾತವಿಶೀರ್ಣಾನಾಂ** ಬಹಳ ಎತ್ತರದಿಂದ ಬೀಳುವುದರಿಂದ ಒಡೆದು ಹೋದವುಗಳ **ರಸೇನ** ರಸದಿಂದ **ಜಂಬೂ ನಾಮ ನದೀ** ಜಂಬೂ ಎಂಬ ನದಿಯು **ಮೇರುಮಂದರಶಿಖರಾತ್** ಮೇರು ಮಂದರ ಪರ್ವತದ ಶಿಖರದಿಂದ **ಅಯುತಯೋಜನಾತ್** ಹತ್ತುಸಾವಿರ ಯೋಜನೆಗಳ ಎತ್ತರದಿಂದ **ಅವನಿತಲೇ ನಿಪತಂತೀ** ಭೂಮಿಗೆ ಬೀಳುತ್ತ **ದಕ್ಷಿಣೇನೇಲಾವೃತಂ** ಇಲಾವೃತದ ದಕ್ಷಿಣ ಭಾಗವನ್ನು **ಯಾವತ್** ಎಲ್ಲಿಯವರೆಗೆ **ಆತ್ಮಾನಂ** ತನ್ನನ್ನು(ತನ್ನ ಪ್ರವಾಹವನ್ನು) **ಉಪಸ್ಯಂದಯತಿ** ಹರಿಸುವುದೋ **ತಾವತ್** ಅಲ್ಲಿಯವರೆಗೆ **ಉಭಯೋಃ ಅಪಿ ರೋಧಸೋಃ** ಎರಡೂ ತೀರಗಳಲ್ಲಿಯೂ ಇರುವ **ಯಾ ಮೃತ್ತಿಕಾ** ಯಾವ ಮಣ್ಣು **ಜಂಬೂಫಲರಸೇನ ಅನುವಿಧ್ಯಮಾನಾ** ನೇರಳೆಹಣ್ಣಿನ ರಸದಿಂದ ಹೊಡೆಯಲ್ಪಡುವುದೋ **ಸಾ** ಅದು(ಆ ಮಣ್ಣು) **ತತ್ರ** ಅಲ್ಲಿ **ಸದಾ** ಯಾವಾಗಲೂ **ವಾಯ್ವರ್ಕಸಂಯೋಗವಿಪಾಕೇನ** ಗಾಳಿಬಿಸಿಲುಗಳ ಸಂಬಂಧದಿಂದ ಒಂದು ಬಗೆಯ ವಿಶೇಷಪಾಕದ ಫಲವಾಗಿ **ಅಮರಲೋಕಾಭರಣಂ** ದೇವತೆಗಳು ಆಭರಣ ಮಾಡಿಸಿಕೊಳ್ಳಲು ಉಪಯೋಗಿಸುವ **ಜಾಂಬೂನದಂ ನಾಮ** ಜಂಬೂನದಿಯಲ್ಲಿ ಜನಿಸುವುದರಿಂದ ಜಾಂಬೂನದವೆನಿಸಿಕೊಳ್ಳುವ **ಸುವರ್ಣಂ ಭವತಿ** ಬಂಗಾರವಾಗುವುದು. ಇಲ್ಲಿ ವಿಜಯಧ್ವಜರು '**ಇಭಕಾಯನಿಭ**' ಎಂಬುದು ಬುದ್ಧಿಗೆ ತೋರುವುದಕ್ಕಾಗಿ ಹೇಳಿದ್ದೇ ಹೊರತು ಆನೆಯಷ್ಟು ಪ್ರಮಾಣವೆಂಬ ನಿಶ್ಚಯದಿಂದಲ್ಲ. ವಾಯುಪುರಾಣದಲ್ಲಿರುವ **ಅರತ್ನೀನಾಂ ಶತಾನ್ಯಷ್ಟೌ ಏಕಷಷ್ಟ್ಯಧಿಕಾನಿ ಚ ಫಲಪ್ರಮಾಣಮಾಖ್ಯಾತಂ ಋಷಿಭಿಸ್ತತ್ವದರ್ಶಿಭಿಃ** ಎಂಬ ಮಾತಿನಂತೆ ಎಂಟುನೂರಾ ಅರವತ್ತೊಂದು ಅರತ್ನಿಗಳು ಹಣ್ಣುಗಳ ಪ್ರಮಾಣವೆಂದು ವ್ಯಾಖ್ಯಾನ ಮಾಡಿರುವರು.

**ಅರತ್ನಿಯೆಂದರೆ ?** ಮೊಳಕೈಯಿಂದ ಹಿಡಿದು ಕಿರುಬೆರಳಿನ ತುದಿಯವರೆಗಿನ ಅಳತೆ ಅರತ್ನಿ.

ಆದರೆ ಯಾದವಾರ್ಯರು ಭಾಗವತಕ್ಕನುಸಾರವಾಗಿಯೇ ಬೇರೇ ಗ್ರಂಥಗಳಲ್ಲಿ ಹೇಳಿದ್ದನ್ನು ಯೋಜನೆ ಮಾಡಿಕೊಳ್ಳಬೇಕೆಂದು ಶ್ರೀಮದಾಚಾರ್ಯರು ಹೇಳಿರುವುದರಿಂದ ಇಲ್ಲಿ ಹೇಳಿರುವುದೇ ಫಲಗಳ ಪರಿಮಾಣವೆಂದೂ ವಾಯುಪುರಾಣಾದಿಗಳಲ್ಲಿ ಹೇಳಿದ್ದು ಅಲ್ಲವೆಂದೂ ಅಭಿಪ್ರಾಯಪಟ್ಟಿರುವರು. ಹಿಂದೆಯೂ **ಗಿರಿಶಿಖರಸ್ಥೂಲಾನಿ** ಎಂದೂ ಹೇಳಿದ್ದು ಫಲಗಳು ಅಷ್ಟು ಸ್ಥೂಲವೆಂಬ ಅಭಿಪ್ರಾಯದಿಂದಲೇ ಎಂದು ತಿಳಿಯಬೇಕು. ಹತ್ತುಸಾವಿರ ಯೋಜನವೆಂದು ಹೇಳಿದ್ದು ಶಿಖರದಿಂದ ಭೂಮಿಗೆ ಮಧ್ಯದಲ್ಲಿರುವ ಪ್ರದೇಶದ ಅಭಿಪ್ರಾಯದಿಂದ ಹೊರತು ಶಿಖರವೇ ಹತ್ತು ಸಾವಿರ ಯೋಜನವೆಂದಲ್ಲ (ಒಟ್ಟು ಪರ್ವತವೇ ಹತ್ತುಸಾವಿರ ಯೋಜನವಿದೆ ಶಿಖರಮಾತ್ರವಲ್ಲವೆಂದು ಭಾವ). ।।೧೯-೨೦।।

ಮೇಲೆ ಹೇಳಿದ್ದನ್ನೇ ವಿಶದಪಡಿಸುವರು

**ಯದು ಹ ವಾವ ವಿಬುಧಾದಯಃ ಸಹಯುವತಿಭಿಃ ಕಟಕಮುಕುಟ-ಸೂತ್ರಾದ್ಯಾಭರಣರೂಪೇಣ ಖಲು ಧಾರಯಂತಿ ।।೨೧।।**

**ಯದು** ಯಾವ ಈ ಬಂಗಾರವನ್ನೇ **ವಿಬುಧಾದಯಃ** ದೇವತೆಗಳೇ ಮೊದಲಾದವರು **ಯುವತಿಭಿಃ ಸಹ** ಯುವತಿಯರೊಂದಿಗೆ **ಕಟಕ** ಬಳೆ **ಮುಕುಟ** ಕಿರೀಟ ಮತ್ತು **ಕಟಿಸೂತ್ರ** ಉಡುದಾರ **ಆದಿ** ಇವೇ ಮೊದಲಾದ **ಆಭರಣರೂಪೇಣ ಧಾರಯಂತಿ ಖಲು** ಆಭರಣವಾಗಿ ಧರಿಸುವರಷ್ಟೇ **ಹ ವಾವ** ಇದು ಶಾಸ್ತ್ರಪ್ರಸಿದ್ಧವು.

**ಯಸ್ತು ಮಹಾಕದಂಬಃ ಸುಪಾರ್ಶ್ವನಿಗೂಢಃ ತಸ್ಯ ಕೊಟರೇಭ್ಯೋ ನಿಃಸೃತಾಃ ಪಂಚವ್ಯಾಮಪರಿಣಾಹಾಃ ಪಂಚಮಧುಧಾರಾಃ ಸುಪಾರ್ಶ್ವಶಿಖರಾತ್ ಪತಂನ್ತ್ಯೋ ಽಪರೇಣಾತ್ಮಾನಂ ಇಲಾವೃತಂ ಅನುಮೋದಯಂತಿ ।।೨೨।।**

**ಸುಪಾರ್ಶ್ವನಿಗೂಢಃ** ಸುಪಾರ್ಶ್ವಪರ್ವತದಲ್ಲಿ (ಅಡಗಿರುವ) **ಯಃ ಮಹಾಕದಂಬಃ** ನೀಪಮರ ಉಂಟೋ **ತಸ್ಯ** ಅದರ **ಕೋಟರೇಭ್ಯಃ** ಪೊಟರೆಗಳಿಂದ (ಸಂದುಗಳಿಂದ) **ನಿಃಸೃತಾಃ** ಹರಿದು ಬಂದ **ಪಂಚವ್ಯಾಮಪರಿಣಾಹಾಃ** ಐದು ಹಸ್ತಗಳ ಗಾತ್ರವುಳ್ಳ **ಪಂಚಮಧುಧಾರಾಃ** ಐದು ಮದ್ಯಧಾರೆಗಳು **ಸುಪಾರ್ಶ್ವಶಿಖರಾತ್** ಸುಪಾರ್ಶ್ವ ಪರ್ವತದ ಶಿಖರದಿಂದ **ಪತಂತ್ಯಃ** ಬೀಳುವವುಗಳಾಗಿ **ಆತ್ಮಾನಂ ಅಪರೇಣ** ತಮ್ಮ ಪಶ್ಚಿಮಕ್ಕೆ **ಇಲಾವೃತಂ** ಇಲಾವೃತ ಖಂಡವನ್ನೂ **ಅನುಮೋದಯಂತಿ** ಸಂತೋಷಪಡಿಸುವವು. ।।೨೨।।

**ಯಾಹ್ಯುಪಭುಂಜಾನಾನಾಂ ಮುಖನಿರ್ವಾಸಿತೋ ವಾಯುಃ ಸಮಂತಾತ್ ಶತಯೋಜನಮನುವಾಸಯತಿ ॥೨೩॥**

**ಯಾಃ** ಯಾವ ಈ ಮಧುಧಾರೆಗಳನ್ನು **ಉಪಭುಂಜಾನಾನಾಂ** ಸೇವಿಸುವವರ **ಮುಖನಿರ್ವಾಸಿತಃ** ಮುಖದಿಂದ ಹೊರಟ **ವಾಯುಃ** ಗಾಳಿಯು **ಸಮಂತಾತ್** ಸುತ್ತಲೂ **ಶತಯೋಜನಂ** ನೂರುಯೋಜನ ಪ್ರದೇಶವನ್ನು **ಅನುವಾಸಯತಿ** ವಾಸನೆಯುಳ್ಳದ್ದನ್ನಾಗಿ ಮಾಡುವವು. ॥೨೩॥

**ಏವಂ ಕುಮುದನಿರೂಢೋ ಯಃ ಶತಬಲಶೋ ನಾಮ ವಟಸ್ತಸ್ಯ ಸ್ಕಂಧೇಭ್ಯೋऽರ್ವಾಚೀನಾಃ ಪಯೋದಧಿಘೃತಮಧು ಗುಡಾನ್ನಾದ್ಯಂಬರ-ಶಯ್ಯಾಸನಾಭರಣಾದಯಃ ಸರ್ವಕಾಮದುಘಾ ನದಾಃ ಕುಮುದಾಗ್ರಾತ್ ಪತಂತಃ ಉತ್ತರೇಣೇಲಾವೃತಮುಪಭೋಜಯಂತಿ ॥೨೪॥**

**ಏವಂ** ಹೀಗೆಯೇ **ಕುಮುದನಿರೂಢಃ** ಕುಮುದ ಪರ್ವತದಲ್ಲಿರುವ **ಶತಬಲಶೋ ನಾಮ** ಶತಬಲಶ ಎಂಬ **ಯಃ** ಯಾವ **ವಟಃ** ಆಲದ ಮರ ಉಂಟೋ **ತಸ್ಯ** ಅದರ **ಸ್ಕಂಧೇಭ್ಯಃ** ಕೊಂಬೆ ಒಡೆಯುವ ಸ್ಥಳದಿಂದ **ಅರ್ವಾಚೀನಾಃ** ಕೆಳ ಮುಖವಾಗಿ ಹರಿಯುವ **ಪಯ** ಹಾಲು **ದಧಿ** ಮೊಸರು **ಮಧು** ಜೇನುತುಪ್ಪ **ಘೃತ** ತುಪ್ಪ **ಗುಡಾನ್ನ** ಪಾಯಸ **ಆದಿ** ಮೊದಲಾದ **ಅಂಬರ** ಬಟ್ಟೆ **ಶಯ್ಯಾ** ಹಾಸಿಗೆ **ಆಸನ** ಆಸನವು **ಆಭರಣ** ಒಡವೆ **ಆದಯಃ** ಮೊದಲಾದ **ಸರ್ವಕಾಮದುಘಾಃ** ಎಲ್ಲ ಅಭೀಷ್ಟಗಳನ್ನೂ ಕೊಡುವ **ನದಾಃ** ಗಂಡು ನದಿಗಳು **ಕುಮುದಾಗ್ರಾತ್** ಕುಮುದ ಪರ್ವತದ ಶಿಖರದಿಂದ **ಪತಂತಃ** ಬೀಳುತ್ತ **ಉತ್ತರೇಣೇಲಾವೃತಂ** ಇಲಾವೃತದ ಉತ್ತರಭಾಗವನ್ನು (ಅಲ್ಲಿ ವಾಸಿಸುವ ಜನರನ್ನು) **ಉಪಭೋಜಯಂತಿ** ಭೋಜನ ಮಾಡಿಸುವವು **ಉಪಯೋಜಯಂತಿ** ಎಂಬ ಪಾಠದಲ್ಲಿ ಉತ್ತರ ದಿಕ್ಕಿನಲ್ಲಿ ಪ್ರವಹಿಸುವುವು ಎಂದರ್ಥ. ॥೨೪॥

**ಯಾನುಪಜುಷಾಣಾನಾಂ ನ ಕದಾಚಿತ್ ಕ್ವಚಿದಪಿ ಪ್ರಜಾನಾಂ ವಲೀಪಲಿತಕ್ಲಮಸ್ವೇದ ದೌರ್ಗಂಧ್ಯಜರಾಮಯಾಪಮೃತ್ಯುಶೀತೋಷ್ಣ-ವೈವರ್ಣ್ಯೋಪಸರ್ಗಾದಯಸ್ತಾಪವಿಶೇಷಾ ಭವಂತಿ ಯಾವಜ್ಜೀವಂ ಸುಖಂ ನಿರತಿಶಯಮೇವ ॥ ೨೫ ॥**

**ಯಾನ್** ಯಾವ ಈ ಪದಾರ್ಥಗಳನ್ನು **ಉಪಜುಷಾಣಾನಾಂ** ಸೇವಿಸುವ **ಪ್ರಜಾನಾಂ** ಪ್ರಜೆಗಳಿಗೆ **ಕದಾಚಿತ್** ಎಂದಿಗೂ **ಕ್ವಚಿದಪಿ** ಎಲ್ಲಿಯೂ **ವಲೀ** ದೇಹದ




ಚರ್ಮ ಸುಕ್ಕುವುದು **ಪಲಿತ** ಮುಪ್ಪಿನಿಂದ ಬಿಳಿಯಾಗುವುದು **ಕ್ಲಮ** ಆಯಾಸ **ಸ್ವೇದ** ಬೆವರು **ದೌರ್ಗಂಧ್ಯ** ದುರ್ವಾಸನೆ **ಜರಾ** ಮುಪ್ಪು **ಮರಣ** ಸಾವು **ಆಮಯ** ರೋಗ **ಅಪಮೃತ್ಯು** ಅಕಾಲಮರಣ **ಶೀತ** ಚಳಿ **ಉಷ್ಣ** ಬಿಸಿ **ವೈವರ್ಣ್ಯ** ಬಣ್ಣ ಹೋಗುವುದು (ಬದಲಾಗುವುದು) **ಉಪಸರ್ಗ** ಜ್ಞಾನವಿಘ್ನಗಳಾದ ಉಪದ್ರವಗಳು **ಆದಯಃ** ರಾಜರ ಕಳ್ಳರ ಪೀಡೆ ಮೊದಲಾದ **ತಾಪವಿಶೇಷಾಃ** ವಿಶೇಷತಾಪಗಳು **ನ ಭವಂತಿ** ಆಗಲಾರವು ನಿರತಿಶಯಂ ಅವರಿಗೆ ಆಗಬೇಕಾದ **ಸುಖಂ ಭವತಿ** ಸುಖವೇ ಆಗುವುದು. ।।೨೫।।

**ಕುರಂಗ ಕುರರ ಕುಸಂಭಕ ವೈಕಂಕ ಚಿತ್ರಕೂಟ ಶಿಶಿರ ಪತಂಗ ರುಚಕ ನಿಷಧ ಶಿತಿವಾಸ ಕಪಿಲ ಶಂಖ ವೈಡೂರ್ಯ ಜಾರುಧಿ ಹಂಸ ಋಷಭ ನೀರನಾಗ ಕಾಂಲಜರ ನಾರದಾದಯೋ ಗಿರಯಃ ಮೇರೋಃ ಕರ್ಣಿಕಾಯಾ ಇವ ಕೇಸರಭೂತಾಃ ಮೂಲದೇಶೇ ಪರಿತ ಉಪಕ್ಲೃಪ್ತಾಃ ।।೨೬।।**

ಕುರಂಗ, ಕುರರ, ಕುಸುಂಭಕ, ವೈಕಂಕ, ಚಿತ್ರಕೂಟ, ಶಿಶಿರ, ಪತಂಗ, ರುಚಕ, ನಿಷಧ, ಶಿತಿವಾಸ, ಕಪಿಲ, ಶಂಖ, ವೈಡೂರ್ಯ, ಜಾರುಧಿ, ಹಂಸ, ಋಷಭ, ನೀರನಾಗ, ಕಾಲಂಜರ, ನಾರದ **ಆದಯಃ** 'ಇವೇ ಮೊದಲಾದ **ಗಿರಯಃ** ಪರ್ವತಗಳು **ಕರ್ಣಿಕಾಯಾಃ** ಭೂಪದ್ಮದ ಮೇರು ಎಂಬ ಕರ್ಣಿಕೆಗೆ (ಬೀಜಕೋಶಕ್ಕೆ) **ಕೇಸರಾ ಇವ ಭೂತಾಃ** ಕೇಸರಗಳಾಗಿವೆಯೋ ಎಂಬಂತೆ **ಮೂಲದೇಶೇ** ಮೇರು ಪರ್ವತದ ಬುಡದಲ್ಲಿ **ಪರಿತಃ** ಸುತ್ತಲೂ **ಉಪಕ್ಲೃಪ್ತಾಃ** ಇರುವುವು. ।।೨೬।।

**ಜಠರದೇವಕೂಟೌ ಮೇರುಂ ಪೂರ್ವೇಣ ಅಷ್ಟಾದಶಯೋಜನಸಹಸ್ರೌ ಉದಗಾಯತೌ ದ್ವಿಸಹಸ್ರಂ ಪೃಥೂತ್ತುಂಗೌ ಭವತಃ । ಏವಮಪರೇಣ ಪವನಪರಿಯಾತ್ರೌ ದಕ್ಷಿಣೇನ ಕೈಲಾಸಕರವೀರೌ ಪ್ರಾಗಾಯತೌ ಏವಮುತ್ತರತಃ ಶೃಂಗಮಕರೌ ಇತ್ಯಷ್ಟಭಿರೇತೈಃ ಪರಿಸ್ಸೃತೋಽಗ್ನಿರಿವ ಪರಿತೋ ಮೇರುಶ್ಚಕಾಸ್ತಿ ಕಾಂಚನಗಿರಿಃ ।।೨೭।।**

**ಜಠರದೇವಕೂಟೌ** ಜಠರ ಮತ್ತು ದೇವಕೂಟಗಳೆಂಬ ಎರಡು ಪರ್ವತಗಳು **ಮೇರುಂ ಪೂರ್ವೇಣ** ಮೇರು ಪರ್ವತಕ್ಕೆ ಪೂರ್ವದಲ್ಲಿ ಮಂದರಪರ್ವತದ ಮುಂದೆ ಪೂರ್ವಕ್ಕೆ **ಅಷ್ಟಾದಶಯೋಜನಸಹಸ್ರೌ** ಹದಿನೆಂಟುಸಾವಿರ ಯೋಜನ ದೂರದಲ್ಲಿ **ಉದಗಾಯತೌ** ದಕ್ಷಿಣದಿಂದ ಉತ್ತರಕ್ಕೆ ಹಬ್ಬಿ **ದ್ವಿಸಹಸ್ರಂ ಪೃಥೂತ್ತುಂಗೌ** ಎರಡುಸಾವಿರ ಯೋಜನ ಗಾತ್ರ ಮತ್ತು ಎತ್ತರ ಉಳ್ಳವುಗಳಾಗಿ ಇಲಾವೃತ

ಮೇರುಗಳ ಮಧ್ಯದಲ್ಲಿ **ಭವತಃ** ಇರುವವು. **ಅಪರೇಣ** ಮೇರುವಿಗೆ ಪಶ್ಚಿಮದಲ್ಲಿ **ಸುಪಾರ್ಶ್ವ** ಪರ್ವತಕ್ಕೂ ಪಶ್ಚಿಮಕ್ಕೆ (ಅದಾದನಂತರ) **ಪವನಪಾರಿಯಾತ್ರೌ** ಪವನ ಪಾರಿಯಾತ್ರ ಎಂಬ ಪರ್ವತಗಳು **ಏವಂ** ಹದಿನೆಂಟುಸಾವಿರ ಯೋಜನ ದೂರದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹಬ್ಬಿ ಎರಡುಸಾವಿರ ಯೋಜನ ಗಾತ್ರ ಮತ್ತು ಅಷ್ಟೇ ಎತ್ತರ ಉಳ್ಳವುಗಳಾಗಿ ಇಲಾವೃತ ಮೇರುಗಳ ಮಧ್ಯದಲ್ಲಿ ಇರುವುವು **ದಕ್ಷಿಣೇನ** ಮೇರು ಪರ್ವತದ ದಕ್ಷಿಣದಲ್ಲಿ ಮೇರು ಮಂದರ ಪರ್ವತಕ್ಕೂ ದಕ್ಷಿಣದಲ್ಲಿ **ಏವಂ** ಹದಿನೆಂಟು ಸಾವಿರ ಯೋಜನ ದೂರದಲ್ಲಿ **ಕೈಲಾಸಕರವೀರೌ** ಕೈಲಾಸ ಕರವೀರ ಎಂಬ ಪರ್ವತಗಳು **ಪ್ರಾಗಾಯತೌ** ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿ ಎರಡು ಸಾವಿರ ಯೋಜನ ದಪ್ಪ ಮತ್ತು ಅಷ್ಟೇ ಎತ್ತರವುಳ್ಳವುಗಳಾಗಿ ಇರುವುವು **ಉತ್ತರತಃ** ಮೇರುವಿನ ಉತ್ತರಕ್ಕೆ ಕುಮುದ ಪರ್ವತದ ಉತ್ತರಕ್ಕೆ (ಅದಾದನಂತರ) **ಏವಂ** ಹದಿನೆಂಟುಸಾವಿರ ಯೋಜನದೂರದಲ್ಲಿ **ಶೃಂಗಮಕರೌ** ಶೃಂಗ ಮಕರಗಳೆಂಬ ಪರ್ವತಗಳು **ಏವಂ** ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿ ಎರಡುಸಾವಿರ ಯೋಜನ ಗಾತ್ರ ಮತ್ತು ಅಷ್ಟೇ ಎತ್ತರವುಳ್ಳವುಗಳಾಗಿರುವವು **ಇತಿ** ಹೀಗೆ **ಏತೈಃ** ಈ **ಅಷ್ಟಭಿಃ** ಎಂಟು ಬೆಟ್ಟಗಳಿಂದ **ಪರಿತಃ** ನಾಲ್ಕೂ ದಿಕ್ಕುಗಳಲ್ಲಿಯೂ **ಪರಿಸ್ಕೃತಃ** ಸುತ್ತ ಅಲಂಕೃತವಾಗಿರುವ **ಕಾಂಚನಗಿರಿಃ ಮೇರುಃ** ಬಂಗಾರದ ಪರ್ವತವಾದ ಮೇರುವು **ಪರಿತಃ** ಸುತ್ತಲೂ **ಪರಿಸ್ಕೃತಃ** ದರ್ಭೆಯ ಪರಿಸ್ತರಣಗಳಿಂದ ಅಲಂಕರಿಸಲ್ಪಟ್ಟ **ಅಗ್ನಿರಿವ** ಅಗ್ನಿಯಂತೆ **ಚಕಾಸ್ತಿ** ಪ್ರಕಾಶಿಸುತ್ತಿರುವುದು. ।।೨೭।।

**ಮೇರೋರ್ಮೂರ್ಧನಿ(ತನ್ಮಧ್ಯತಃ) ಭಗವತ ಆತ್ಮಯೋನೇರುಪಕ್ಲೃಪ್ತಾಂ ಪುರೀಂ ಅಯುತಯೋಜನಸಾಹಸ್ರೀಂ ಸಮಚತುರಸ್ರಾಂ ಶಾತಕೌಂಭೀಂ ಶತಕೋಟಿಂ ವದಂತಿ ।।೨೮।।**

**ಮೇರೋಃ ಮೂರ್ಧನಿ** ಮೇರು ಪರ್ವತದ ಮೂವತ್ತೆರಡುಸಾವಿರ ಯೋಜನ ಅಗಲದ ಮೇಲ್ಭಾಗದಲ್ಲಿ **ತನ್ಮಧ್ಯತಃ** ಆ ಮೇಲ್ಭಾಗದ ಮಧ್ಯದಲ್ಲಿ **ಉಪಕ್ಲೃಪ್ತಾಂ** ಇರುವ **ಭಗವತಃ** ಪೂಜ್ಯರಾದ **ಆತ್ಮಯೋನೇಃ** ಚತುರ್ಮುಖ ಬ್ರಹ್ಮದೇವರ **ಶಾತಕೌಂಭೀಂ** ಬಂಗಾರದ **ಸಮಚತುರಸ್ರಾಂ** ಸಮವಾಗಿ ಚೌಕಾಗಿರುವ **ಅಯುತ ಯೋಜನ ಸಾಹಸ್ರೀಂ** ಹತ್ತು ಸಾವಿರ ಯೋಜನದ **ಪುರೀಂ** ಪಟ್ಟಣವನ್ನು **ಶತಕೋಟಿಂ ವದಂತಿ** ಶತಕೋಟಿ ಎಂದು ಹೇಳುವರು ಅಥವಾ **ಶತಕೋಟಿ** ಎಂಬ ಪಟ್ಟಣವನ್ನು ಮಧ್ಯದಲ್ಲಿರುವುದನ್ನಾಗಿ ಹೇಳುವರು. ।।೨೮।।

**ತಾಮನುಪರಿತೋ ಲೋಕಪಾಲಾನಾಂ ಅಷ್ಟಾನಾಂ ಯಥಾದಿಶಂ ಯಥಾರೂಪಂ ತುರೀಯಭಾಗೇನ ಪುರೋಽಷ್ಟಾವುಪಕ್ಲೃಪ್ತಾಃ ॥೨೯॥**

**ತಾಂ ಅನು** ಅದನ್ನು ಅನುಸರಿಸಿ **ಪರಿತಃ** ಸುತ್ತಲೂ **ಯಥಾದಿಶಂ** ಅವರವರ ದಿಕ್ಕುಗಳಲ್ಲಿ **ಅಷ್ಟಾನಾಂ ಲೋಕಪಾಲಾನಾಂ** ಎಂಟು ದಿಕ್ಪಾಲಕರ **ಯಥಾರೂಪಂ** ಮಾನಸೋತ್ತರ ಪರ್ವತದಲ್ಲಿರುವ ಇಂದ್ರ ಮೊದಲಾದವರ ಪಟ್ಟಣಗಳ ಹಾಗೆಯೇ ಇರುವ (**ಯಥಾನುರೂಪಂ** ಎಂಬ ಪಾಠದಲ್ಲಿ ಅನುಕೂಲಕ್ಕೆ ತಕ್ಕಂತೆ ಎಂದರ್ಥ) **ಅಷ್ಟೌ ಪುರಃ** ಎಂಟು ಪಟ್ಟಣಗಳು **ತುರೀಯಭಾಗೇನ** ಬ್ರಹ್ಮದೇವರ ಪಟ್ಟಣದ ನಾಲ್ಕನೆಯ ಒಂದುಭಾಗದಿಂದ ಅಂದರೆ ಪ್ರತಿಯೊಂದು ಎರಡುವರೆಸಾವಿರ ಯೋಜನಗಳಿಂದ **ಉಪಕ್ಲೃಪ್ತಾಃ** ಕಲ್ಪಿತವಾಗಿರುವುವು. ॥೨೯॥

**ಭಾಗವತ - ಇತರ ಪುರಾಣಗಳಲ್ಲಿ ವಿರೋಧಪರಿಹಾರ**

ಭಾಗವತದಲ್ಲಿ ಹೇಳಲ್ಪಡುವ ಭುವನಕೋಶಲಕ್ಷಣ ಪ್ರಮಾಣಾದಿಗಳಿಗೆ ಸಂಬಂಧಿಯಾದ ಭೂವಲಯಾದಿಪ್ರಮಾಣವನ್ನು ಬೇರೇ ಗ್ರಂಥಗಳಲ್ಲಿ ಬೇರೇ ರೀತಿಯಾಗಿ ಹೇಳಿರುವುದರಿಂದ ವಿರೋಧ ಬರುವುದಲ್ಲ ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು

ತಾತ್ಪರ್ಯ - **''ಯಥಾ ಭಾಗವತೇ ತೂಕ್ತಂ ಭೌವನಂ ಕೋಶಲಕ್ಷಣಮ್ ।**
**ತಸ್ಯಾವಿರೋಧತೋ ಯೋಜ್ಯಂ ಸರ್ವಗ್ರಂಥಾಂತರಸ್ಥಿತಮ್ ॥**
**ಮಂಡೋದೇಃ ಪೂರಣಂ ಚೈವ ವ್ಯತ್ಯಾಸಂ ಕ್ಷೀರಸಾಗರೇ ।**
**ರಾಹುಸೋಮರವೀಣಾಂ ಚ ಮಂಡಲಾದ್ವಿಗುಣೋಕ್ತಿತಾಂ ।**
**ವಿನೈವ ಸರ್ವಮುನ್ನೇಯಂ ಯೋಜನಾಭೇದತೋಽತ್ರ ತು ।**
**-ಇತಿ ಬ್ರಹ್ಮಾಂಡೇ ॥**

ಬ್ರಹ್ಮಾಂಡದಲ್ಲಿರತಕ್ಕ ಭೂಲೋಕ ಮೊದಲಾದ ಭುವನಕೋಶದ ಲಕ್ಷಣ ಪ್ರಮಾಣಾದಿಗಳು ಭಾಗವತದಲ್ಲಿ ನಿರವಕಾಶವಾಗಿ ಹೇಗೆ ಹೇಳಿದೆಯೋ ಅದನ್ನು ಅನುಸರಿಸಿಯೇ ಸಮಸ್ತ ಗ್ರಂಥಾಂತರಗಳಲ್ಲಿರತಕ್ಕ ಭೂಲೋಕ ಮೊದಲಾದ ಲೋಕಗಳ ಪರಿಮಾಣಾದಿಗಳನ್ನು ಸರಿಪಡಿಸಬೇಕು (ಭಾಗವತಕ್ಕೂ ನಿರವಕಾಶ ಪ್ರಮಾಣಾಂತರ ವಿರೋಧ ಬಂದರೇ ಅಲ್ಲಿ ಪ್ರತೀತವಾದ ಅರ್ಥವನ್ನು ಬಿಟ್ಟು ಅರ್ಥಾಂತರವನ್ನು ಹೇಳಬೇಕು. ಭುವನಕೋಶದ ಪರಿಮಾಣ ಲಕ್ಷಣಗಳ ವಿಷಯದಲ್ಲಾದರೋ ಭಾಗವತವೇ ಮುಖ್ಯ ಪ್ರಮಾಣವು).

ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ, ಶುದ್ಧೋದಕ ಎಂದು ಸಮುದ್ರಗಳನ್ನು ನಿರ್ದೇಶ ಮಾಡುವ ಬದಲಿಗೆ ಪ್ರಿಯವ್ರತನ ಉಪಾಖ್ಯಾನದಲ್ಲಿ ಕ್ಷೀರಸಮುದ್ರವಾದ ಮೇಲೆ ದಧಿಸಮುದ್ರವನ್ನೂ ಘೃತಸಮುದ್ರವಾದಮೇಲೆ ಸಮುದ್ರವನ್ನೂ ಹೇಳಿದೆ. ಅದರಂತೆ ಸೂರ್ಯಮಂಡಲಕ್ಕಿಂತ ಚಂದ್ರಮಂಡಲವು ಎರಡು ಪಟ್ಟು (ಇಮ್ಮಡಿ) ಅದಕ್ಕಿಂತ ರಾಹುಮಂಡಲ ಎರಡು ಪಟ್ಟು ಎಂದು ಹೇಳುವ ಬದಲಿಗೆ ಹನ್ನೆರಡು ಸಾವಿರ ಯೋಜನ ಪರಿಮಾಣವುಳ್ಳದ್ದು ಚಂದ್ರಮಂಡಲವು ಹದಿಮೂರು ಸಾವಿರಯೋಜನ ಪರಿಮಾಣವುಳ್ಳದ್ದು ರಾಹುಮಂಡಲವು ಎಂದು ಹೇಳಿದ ಇದೆಲ್ಲವೂ ಪ್ರಮಾಣವಿರುದ್ಧವು. ಆದಕಾರಣ ಭಾಗವತವನ್ನನುಸರಿಸಿ ಗ್ರಂಥಾಂತರವನ್ನು ಸರಿಪಡಿಸುವುದು ಹೇಗೆ ಎಂದರೆ ಹೇಳಿದ್ದಕ್ಕೆ ಅಪವಾದವನ್ನು ಹೇಳುವರು **ಮಂಡೋದ** ಮುಂತಾಗಿ. (೧) ಶುದ್ಧೋದಕ ಸಮುದ್ರಕ್ಕಿಂತ ಬೇರೆ ಆರು ಸಮುದ್ರಗಳಿಗೆ ದಧಿಸಮುದ್ರದಲ್ಲಿ ಪೂರ್ತಿಯನ್ನು ಅಂದರೆ ದಧಿಸಮುದ್ರವನ್ನು ಒಂಬತ್ತನೆಯದು ಎಂದು ಹೇಳಿದುದನ್ನೂ (೨) ಕ್ಷೀರಸಮುದ್ರವು ಒಂಬತ್ತನೆಯದಾಗಿದ್ದರೂ ಅದನ್ನು ಐದನೆಯದ್ದು ಎಂದು ವ್ಯತ್ಯಾಸವಾಗಿ ಹೇಳಿದುದನ್ನೂ (೩) ರಾಹು ಚಂದ್ರ ಸೂರ್ಯಮಂಡಲಗಳು ದ್ವಿಗುಣವಾಗಿವೆ ಎಂಬುದಕ್ಕೆ ವಿರುದ್ಧೋಕ್ತಿಯು ಹನ್ನೆರಡು ಸಾವಿರ ಹದಿಮೂರು ಸಾವಿರ ಯೋಜನ ಎನ್ನುವಾಗ ಇಮ್ಮಡಿಯಾಗಲಿಲ್ಲ ಎಂಬ ಈ ಮೂರನ್ನು ಮಾತ್ರ ಬಿಟ್ಟು ಎಲ್ಲಾ ಗ್ರಂಥಾಂತರಗಳಲ್ಲಿ ಹೇಳಿದ ಪ್ರಮೇಯವನ್ನು ಭಾಗವತವನ್ನನುಸರಿಸಿಯೇ ತಿಳಿಯಬೇಕು. ಈ ಹೇಳಿದ ಮೂರು ಸ್ಥಳಗಳಲ್ಲಿಯೂ ಯೋಜನಾವಿಶೇಷದಿಂದಲೇ ಗ್ರಂಥಾಂತರದಲ್ಲಿದ್ದಂತೆಯೇ ಇಲ್ಲಿಯೂ ತಿಳಿದುಕೊಳ್ಳಬೇಕು. ಮಂಡೋದ ಪೂರಣದಲ್ಲಿ ಕ್ಷೀರಸಾಗರ ವ್ಯತ್ಯಾಸದಲ್ಲಿಯೂ ಯೋಜನಾವಿಶೇಷವನ್ನು ಆಚಾರ್ಯರೇ ಮುಂದೆ ಹೇಳುವರು. ಸೂರ್ಯ ಸೋಮ ರಾಹುಮಂಡಲಗಳಿಗೆ ಇಲ್ಲಿ ಹೇಳಿದ್ದು ದ್ವಿಗುಣತೆ ಹೇಗಾಗುವುದು ಎಂಬುದನ್ನು ಆ ಸ್ಥಳದಲ್ಲಿಯೇ ತಿಳಿಸುವೆವು ಎನ್ನುವರು ಯಾದವಾರ್ಯರು (೨೩ನೇ ಅಧ್ಯಾಯದಲ್ಲಿ ಹೇಳುವರು.)

**॥ ಇಲ್ಲಿಗೆ ೧೬ನೇ ಅಧ್ಯಾಯವು ಮುಗಿಯಿತು ॥**

★★★




## ಹದಿನಾರನೇ ಅಧ್ಯಾಯದ ಸಾರ

ಪರೀಕ್ಷಿತರಾಜರು ಹೇಳುವರು - ಸೂರ್ಯನು ತಾಪಕೊಡುತ್ತಿರುವ ಮತ್ತು ಚಂದ್ರನು ಜ್ಯೋತಿರ್ಗಣಗಳೊಂದಿಗೆ(ನಕ್ಷತ್ರಗಳೊಂದಿಗೆ) ಕಾಣುತ್ತಿರುವ ಪ್ರದೇಶದಷ್ಟು ಭೂಮಂಡಲದ ವಿಸ್ತಾರವಿಶೇಷವೆಂದು ತಾವು ಹೇಳಿದಿರಿ. ಪೂಜ್ಯರೇ! ಆ ಭೂಮಂಡಲದಲ್ಲಿಯೂ ಪ್ರಿಯವ್ರತರಾಜರ ತೇರಿನ ಚಕ್ರಗಳ ಅಂಚಿನಿಂದಾಗಿ ಏಳು ಹಳ್ಳಗಳಿಂದ ಏಳು ಸಮುದ್ರಗಳೂ ಅವುಗಳಿಂದ ಸಪ್ತದ್ವೀಪಗಳೆಂಬ ವಿಭಾಗಗಳೂ ಆದವು ಎಂದು ಸೂಚಿಸಿದರಷ್ಟೇ! ಈ ಎಲ್ಲಾ ಭೂಮಂಡಲವನ್ನೂ ಅಲ್ಲಿರುವ ಎಲ್ಲವನ್ನೂ ಮತ್ತು ಅಲ್ಲಿಂದಾಚೆ ಇರುವ ಕಾಂಚನಭೂಮಿಯನ್ನೂ ಪರಿಮಾಣ ಆಕಾರಗಳಿಂದ ನಾನು ತಿಳಿಯಬಯಸುತ್ತೇನೆ. ಸತ್ವಮೊದಲಾದ ಗುಣ ವಿಕಾರವಾದ ಈ ಚತುರ್ದಶಲೋಕಾತ್ಮಕ ಸ್ಥೂಲಪ್ರತಿಮಾರೂಪದಲ್ಲಿ ಮೊದಲು ಮನಸ್ಸನ್ನು ನಿಲ್ಲಿಸಿ ಅಭ್ಯಾಸ ಮಾಡಬೇಕು. ಆಗ ಅದು ವಿಶೇಷಸ್ಮರಣೆಯಲ್ಲಿ ಸಮರ್ಥವಾಗುವುದು. ಅಂತಹ ಸಮರ್ಥ ಮನಸ್ಸೇ, ಗುಣವಿಕಾರಶೂನ್ಯನಾಗಿ ಸಚ್ಚಿದಾನಂದಾಕಾರನೂ, ಸೂಕ್ಷ್ಮನಾಗಿ ಅನುಗ್ರಹವಿಲ್ಲದೆ ಕಾಣಲಾಗದವನೂ, ಅಂತರ್ಯಾಮಿಯೂ, ಸ್ವಯಂಪ್ರಕಾಶನೂ, ಪರಬ್ರಹ್ಮನೆಂದು ಕರೆಸಿಕೊಳ್ಳುವವನೂ, ಐಶ್ವರ್ಯಾದಿಗುಣ ಪರಿಪೂರ್ಣನೂ, ವಾಸುದೇವನಾಮಕನೂ ಆದ ಶ್ರೀಹರಿಯನ್ನು ನಿರಂತರ ಸ್ಮರಿಸಲು ಸಮರ್ಥವಾಗುವುದು. ಆದ್ದರಿಂದ ಗುರುಗಳಾದ ತಾವು ಈ ಪ್ರತಿಮಾರೂಪವನ್ನೇ ವರ್ಣಿಸಲು ಅರ್ಹರು (ಎಂದು ಪ್ರಾರ್ಥಿಸಿದರು).

ಆಗ ಶುಕಾಚಾರ್ಯರು ಮಹಾರಾಜ! ಶ್ರೀಹರಿಯು ಪ್ರಕೃತಿಯ ಗುಣಗಳ ಪ್ರವೃತ್ತಿಗಾಗಿ ಬಹುರೂಪಗಳನ್ನು ಪರಿಗ್ರಹಿಸುವನು. ಪ್ರಕೃತಿಕಾರ್ಯಗಳಲ್ಲಿ ವಿವಿಧ ರೂಪಗಳುಳ್ಳವನು. ಈ ಮಹಿಮಾಗುಣವಿಭೂತಿಯಾದ ಶ್ರೀಹರಿಯ ಪ್ರತಿಮಾಸ್ಥಾನ

ವಿಶೇಷಗಳಾದ ಸಮುದ್ರದ್ವೀಪಗಳ ಪೂರ್ಣವಿಚಾರವನ್ನು ನಾಮರೂಪಗಳಿಂದ ತಿಳಿಯಲು ಮನುಷ್ಯನು ಬ್ರಹ್ಮದೇವರ ಆಯುಷ್ಯದಿಂದಲೂ ಸಮರ್ಥನಲ್ಲ. ಆದ್ದರಿಂದ ಭೂಗೋಲದ ಮುಖ್ಯ ವಿಶೇಷಗಳನ್ನು ಮಾತ್ರ ನಾಮ, ರೂಪ, ಸಂಖ್ಯಾ, ಪರಿಮಾಣ ಮತ್ತು ಲಕ್ಷಣಗಳಿಂದ ವಿವರಿಸುವೆನು.

ಈ ಜಂಬೂದ್ವೀಪವು ಒಂದುಲಕ್ಷಯೋಜನ ವಿಸ್ತಾರವುಳ್ಳದ್ದಾಗಿ ಕಮಲದ ಎಲೆಯಂತೆ ಸಮವರ್ತುಲವಾಗಿದ್ದು ಭೂವಲಯವೆಂಬ ಕಮಲದ ಹೂವಿನ ದಳಗಳ (ಸಪ್ತದ್ವೀಪ) ಸಾಲಿನಲ್ಲಿ ಒಳಗಡೆಯ ಕೊನೆಯ ಸಾಲಿನಂತೆ ಕೊನೆಯ ದ್ವೀಪವಾಗಿದೆ. ಈ ದ್ವೀಪದಲ್ಲಿ ಒಂಭತ್ತು ಖಂಡಗಳು. ಎರಡು ಮಾತ್ರ ಪ್ರತಿಯೊಂದೂ ಮೂವತ್ತೊಂದು ಸಾವಿರ ಯೋಜನ ವಿಸ್ತಾರವಾಗಿವೆ. ಉಳಿದ ಏಳೂ ಪ್ರತಿಯೊಂದೂ ಒಂಭತ್ತುಸಾವಿರ ಯೋಜನ ವಿಸ್ತಾರವಾಗಿ ಈ ಖಂಡಗಳನ್ನು ಎಂಟು ಎಲ್ಲೆಯ ಪರ್ವತಗಳು ಸಂಪೂರ್ಣವಾಗಿ ವಿಭಾಗ ಮಾಡಿವೆ. ಈ ಖಂಡಗಳ ಮಧ್ಯದಲ್ಲಿ ಒಳಗಿರುವುದು ಇಲಾವೃತಖಂಡ. ಇದರ ಮಧ್ಯದಲ್ಲಿ ಕುಲಪರ್ವತಗಳಲ್ಲೆಲ್ಲ ಉತ್ತಮವಾದ ಬಂಗಾರದ ಮೇರುಪರ್ವತವಿದೆ.

ಈ ಪರ್ವತವು ಜಂಬೂದ್ವೀಪದಷ್ಟೇ ಅಂದರೆ ಒಂದುಲಕ್ಷಯೋಜನ ಎತ್ತರವಿರುವುದು. ಅದರಲ್ಲಿ ಹದಿನಾರುಸಾವಿರ ಯೋಜನ ಭೂಮಿಯಲ್ಲಿ ಹೂತು ಹೋಗಿದೆ. ಉಳಿದ ಎಂಭತ್ತುನಾಲ್ಕು ಸಾವಿರ ಯೋಜನ ಭೂಮಿಯ ಮೇಲೆ ಕಾಣುವ ಎತ್ತರ. ಬುಡದಲ್ಲಿ ಹದಿನಾರು ಸಾವಿರ ಯೋಜನಗಾತ್ರವಿರುವ ಈ ಪರ್ವತ ಮೇಲ್ಭಾಗದಲ್ಲಿ ಮೂವತ್ತೆರಡುಸಾವಿರ ಯೋಜನ ವಿಸ್ತಾರವಾಗಿದೆ. ಇದು ಭೂಮಂಡಲವೆಂಬ ಕಮಲಕ್ಕೆ ಕರ್ಣಿಕೆ(ಬೀಜಕೋಶ)ಯಂತೆ ಇದೆ. ಇಲಾವೃತಖಂಡಕ್ಕೆ ಉತ್ತರಕ್ಕೆ ನೀಲವೆಂಬ ಪರ್ವತವು ಪಶ್ಚಿಮಸಮುದ್ರದಿಂದ ಹಿಡಿದು ಪೂರ್ವಸಮುದ್ರದವರೆಗೂ ಹಬ್ಬಿದೆ. ಇದರ ಗಾತ್ರ ಎರಡು ಸಾವಿರ ಯೋಜನ, ಎತ್ತರ ಹತ್ತುಸಾವಿರ ಯೋಜನ. ಇದರ ಉದ್ದ ಒಂದುಲಕ್ಷ ಯೋಜನಕ್ಕೆ ಸ್ವಲ್ಪ ಕಡಿಮೆ. ಈ ಪರ್ವತದ ಉತ್ತರಕ್ಕೆ ರಮ್ಯಕವರ್ಷ ಒಂಭತ್ತು ಸಾವಿರ ಯೋಜನ ವಿಸ್ತಾರವಾಗಿ ಪಶ್ಚಿಮದಿಂದ ಪೂರ್ವ ಸಮುದ್ರಗಳವರೆಗೂ ಇದೆ. ಇದರ ಉತ್ತರದ ಎಲ್ಲೆ ಶ್ವೇತವೆಂಬ ಪರ್ವತ ಈ ಪರ್ವತವೂ ಪಶ್ಚಿಮ ಸಮುದ್ರದಿಂದ ಪೂರ್ವ ಸಮುದ್ರವರೆಗೂ ಹಬ್ಬಿದೆ. ಎರಡುಸಾವಿರ ಯೋಜನ ಗಾತ್ರ ಮತ್ತು ಹತ್ತುಸಾವಿರ ಯೋಜನ ಎತ್ತರ. ಉದ್ದದಲ್ಲಿ ಮಾತ್ರ ನೀಲಪರ್ವತಕ್ಕಿಂತ ಹತ್ತುಭಾಗ ಕಡಿಮೆ. ಈ




ಪರ್ವತದ ಉತ್ತರಕ್ಕೆ ಇರುವುದು ಹಿರಣ್ಮಯವರ್ಷ. ಇದರ ವಿಸ್ತಾರ ಒಂಭತ್ತುಸಾವಿರ ಯೋಜನ. ಇದರ ಉತ್ತರದ ಎಲ್ಲೆ ಶೃಂಗವಂತ ಪರ್ವತ. ಇದೂ ಪಶ್ಚಿಮ ಸಮುದ್ರದಿಂದ ಪೂರ್ವ ಸಮುದ್ರದವರೆಗೂ ಹಬ್ಬಿ ಎರಡುಸಾವಿರ ಯೋಜನ ಗಾತ್ರ ಮತ್ತು ಹತ್ತು ಸಾವಿರ ಯೋಜನ ಎತ್ತರವಿದೆ. ಉದ್ದದಲ್ಲಿ ಮಾತ್ರ ಶ್ವೇತಪರ್ವತಕ್ಕಿಂತ ಹತ್ತುಭಾಗಕಡಿಮೆ. ಇದರ ಉತ್ತರಕ್ಕೆ ಸುತ್ತಲೂ ಸಮುದ್ರದ ವರೆಗೂ ಇರುವಖಂಡವೇ ಕುರುವರ್ಷ. ಇದರ ವಿಸ್ತಾರವೂ ಒಂಭತ್ತು ಸಾವಿರ ಯೋಜನ. ಇಲಾವೃತ ಖಂಡಕ್ಕೆ ದಕ್ಷಿಣಕ್ಕೆ ನಿಷದವೆಂಬ ಪರ್ವತವು ಪಶ್ಚಿಮ ಸಮುದ್ರದಿಂದ ಪೂರ್ವ ಸಮುದ್ರದವರೆಗೂ ಹಬ್ಬಿದೆ. ಇದರ ಗಾತ್ರವೂ ಎರಡುಸಾವಿರ ಯೋಜನ ಎತ್ತರವು ಹತ್ತುಸಾವಿರ ಯೋಜನ. ಉದ್ದ ಒಂದು ಲಕ್ಷಯೋಜನಕ್ಕಿಂತ ಸ್ವಲ್ಪಕಡಿಮೆ. ಇದರಿಂದ ದಕ್ಷಿಣಕ್ಕೆ ಇರುವ ಖಂಡವೇ ಹರಿವರ್ಷ. ಇದರ ವಿಸ್ತಾರವೂ ಒಂಭತ್ತುಸಾವಿರ ಯೋಜನ. ಇದರ ದಕ್ಷಿಣದ ಎಲ್ಲೆಯೇ ಹೇಮಕೂಟ ಪರ್ವತ. ಇದು ಎತ್ತರ ಮತ್ತು ಉದ್ದಗಳಲ್ಲಿ ಉತ್ತರದಲ್ಲಿ ಹೇಳಿದ ಶ್ವೇತಪರ್ವತಕ್ಕೆ ಸಮಾನವಾದುದು. ಇದರ ದಕ್ಷಿಣಕ್ಕೆ ಒಂಭತ್ತುಸಾವಿರ ಯೋಜನ ವಿಸ್ತೀರ್ಣದ ಕಿಂಪುರುಷಖಂಡ. ಇದರ ದಕ್ಷಿಣದ ಎಲ್ಲೆಯಾಗಿರುವ ಹಿಮಾಲಯ ಪರ್ವತ ಶೃಂಗವಂತ ಪರ್ವತವನ್ನು ಗಾತ್ರ ಎತ್ತರ ಮತ್ತು ಉದ್ದಗಳಲ್ಲಿ ಹೋಲುವುದು. ಇದರ ದಕ್ಷಿಣಕ್ಕೆ ಸುತ್ತಲೂ ಸಮುದ್ರದವರೆಗೂ ಇರುವ ಖಂಡವೇ ಭರತವರ್ಷ. ಇದರ ವಿಸ್ತಾರವೂ ಒಂಭತ್ತುಸಾವಿರ ಯೋಜನ.

ಇಲಾವೃತ ಖಂಡಕ್ಕೆ ಪಶ್ಚಿಮದಲ್ಲಿ ಮಾಲ್ಯವತ್ಪರ್ವತವು ಉತ್ತರದಿಂದ ದಕ್ಷಿಣಕ್ಕೆ ನೀಲ ಪರ್ವತದಿಂದ ನಿಷಧ ಪರ್ವತದವರೆಗೂ ಹಬ್ಬಿದೆ. ಇದರ ಗಾತ್ರ ಎರಡು ಸಾವಿರ ಯೋಜನ. ಎತ್ತರ ಹತ್ತು ಸಾವಿರ ಯೋಜನ. ಇದರ ಪಶ್ಚಿಮಕ್ಕೆ ಸಮುದ್ರದವರೆಗೂ ಇರುವುದೇ ಕೇತುಮಾಲಖಂಡ. ಇದರಂತೆಯೇ ಇಲಾವೃತಖಂಡಕ್ಕೆ ಪೂರ್ವದಲ್ಲಿ ಗಂಧಮಾದನಪರ್ವತವಿದ್ದು ಭದ್ರಾಶ್ವಖಂಡಕ್ಕೆ ಎಲ್ಲೆಯಾಗಿದೆ.

ಮೇರುವಿಗೆ ಬುಡದಲ್ಲಿ ನಾಲ್ಕುದಿಕ್ಕುಗಳಲ್ಲಿಯೂ ಪೀಠಸ್ಥಾನೀಯಗಳಾಗಿ ನಾಲ್ಕುಪರ್ವತಗಳಿವೆ. ಪೂರ್ವದಲ್ಲಿ ಮಂದರ, ದಕ್ಷಿಣದಲ್ಲಿ ಮೇರುಮಂದರ, ಪಶ್ಚಿಮದಲ್ಲಿ ಸುಪಾರ್ಶ್ವ ಮತ್ತು ಉತ್ತರದಲ್ಲಿ ಕುಮುದ. ಈ ಪ್ರತಿಯೊಂದು ಪರ್ವತಗಳ ಸುತ್ತಳತೆ ಹತ್ತುಸಾವಿರ ಯೋಜನ ಮತ್ತು ಎತ್ತರವೂ ಅಷ್ಟೇ. ಮಂದರ ಪರ್ವತದಲ್ಲಿ ದೇವಮಾವಿನಮರವೂ ಮೇರುಮಂದರದಲ್ಲಿ ನೇರಳೆ ಮರವು

ಸುಪಾರ್ಶ್ವ ಪರ್ವತದಲ್ಲಿ ಕದಂಬ (ನೀಪ) ವೃಕ್ಷವೂ ಕುಮುದ ಪರ್ವತದಲ್ಲಿ ಆಲದ ಮರವೂ ಆ ಪರ್ವತಗಳ ಧ್ವಜಗಳಂತೆ ಇವೆ.

ಈ ಹೆಮ್ಮರಗಳು ಒಂದೊಂದೂ ಒಂದುಸಾವಿರದ ಒಂದುನೂರು ಯೋಜನ ಎತ್ತರವಿದೆ. ಅಷ್ಟೇ ಉದ್ದದ ಕೊಂಬೆಗಳಿಂದ (ಟೊಂಗೆ) ಹರಡಿವೆ. ಒಂದೊಂದರ ಬುಡದ ಗಾತ್ರವೂ ಒಂದುನೂರು ಯೋಜನ. ಈ ಪರ್ವತಗಳಲ್ಲಿ ನಾಲ್ಕುಕೊಳಗಳಿವೆ (ಸರೋವರಗಳು) ಮಂದರ ಪರ್ವತದ ಕೊಳದಲ್ಲಿ ಹಾಲು, ಮೇರುಮಂದರ ಕೊಳದಲ್ಲಿ ಜೇನುತುಪ್ಪವೂ, ಸುಪಾರ್ಶ್ವದ ಕೊಳದಲ್ಲಿ ಕಬ್ಬಿನಹಾಲು(ರಸ), ಕುಮುದ ಪರ್ವತದ ಕೊಳದಲ್ಲಿ ಸಿಹಿಯಾದ ನೀರೂ ತುಂಬಿವೆ. ಇವುಗಳನ್ನು ಕುಡಿಯುವ ಗಂಧರ್ವರೇ ಮೊದಲಾದವರು ಸ್ವಾಭಾವಿಕಗಳಾದ ಅಣಿಮಾದಿಸಿದ್ಧಿಗಳನ್ನು ಪಡೆದಿರುವರು. ಈ ನಾಲ್ಕು ಪರ್ವತಗಳಲ್ಲಿಯೂ ದೇವತೆಗಳ ವಿಹಾರಕ್ಕೆ ಯೋಗ್ಯಗಳಾದ ನಾಲ್ಕು ಉದ್ಯಾನವನಗಳಿಗೆ ಕ್ರಮವಾಗಿ ನಂದನ, ಚೈತ್ರರಥ, ವೈಭ್ರಾಜಕ, ಸರ್ವತೋಭದ್ರಗಳೆಂದು ಇವುಗಳಿಗೆ ಹೆಸರು. ಈ ವನಗಳಲ್ಲಿ ದೇವತಾಶ್ರೇಷ್ಠರು ದೇವಸ್ತ್ರೀಯರಲ್ಲಿ ಉತ್ತಮರೆನಿಸಿದ ಸ್ತ್ರೀಯರೊಂದಿಗೆ ವಿಹರಿಸುವರು. ಇವರ ಮಹಿಮೆಗಳನ್ನು ಗಂಧರ್ವಾದಿಗಳು ಗಾನ ಮಾಡುತ್ತಿರುವರು. ಮಂದರಪರ್ವತದ ಶಿಖರದಲ್ಲಿ ಇರುವ ಹನ್ನೊಂದುನೂರುಯೋಜನ ಎತ್ತರವಾದ ದೇವಮಾವಿನ ಮರದ ಮೇಲ್ಭಾಗದಿಂದ ಬೆಟ್ಟದ ಶಿಖರದಷ್ಟು ಗಾತ್ರದ ಅಮೃತಕ್ಕೆ ಸಮಾನಗಳಾದ ಹಣ್ಣುಗಳು ಉದುರುವುವು. ಒಡೆದು ಹೋದ ಆ ಹಣ್ಣುಗಳ ಅತ್ಯಂತ ಸಿಹಿ, ಸುವಾಸನೆ ಮತ್ತು ಅತಿ ಕೆಂಪಿನ ರಸವೇ ನೀರಾಗಿ ಇರುವ ಅರುಣೋದವೆಂಬ ನದಿಯು ಆ ಪರ್ವತ ಶಿಖರದಿಂದ ಕೆಳಕ್ಕೆ ಧುಮುಕುತ್ತ ಇಲಾವೃತ ಖಂಡದ ಪೂರ್ವಪ್ರದೇಶಕ್ಕೆ ನೀರುಣಿಸುತ್ತದೆ. ಇದನ್ನು ಸೇವಿಸುವ ಭವಾನೀದಾಸಿಯರಾದ ಯಕ್ಷಿಣಿಯರ ಶರೀರಾವಯವಗಳನ್ನು ಮುಟ್ಟಿ ಬೀಸುವ ಸುಗಂಧವಾಯುವು ಸುತ್ತಲೂ ಹತ್ತುಯೋಜನ ಪ್ರದೇಶವನ್ನು ಸುವಾಸಿತವನ್ನಾಗಿಸುವುದು. ಹೀಗೆಯೇ ಮೇರುಮಂದರದ ಶಿಖರದಲ್ಲಿರುವ ಜಂಬೂವೃಕ್ಷದ ತುದಿಯಿಂದ (ಮೇಲ್ಭಾಗದಿಂದ) ಬೀಳುವ ಆನೆಯ ದೇಹದಂತೆ ಕಾಣುವ ಅಲ್ಪಬೀಜವುಳ್ಳ ಜಂಬೂಫಲಗಳ (ನೇರಳೆಹಣ್ಣು) ಒಡೆಯುವಿಕೆಯಿಂದ ಹರಿದ ರಸದಿಂದ ತುಂಬಿದ ಜಂಬೂನದಿಯು ಆ ಪರ್ವತದ ಶಿಖರದಿಂದ ಹತ್ತುಸಾವಿರ ಯೋಜನ ಕೆಳಕ್ಕೆ ಭೂಮಿಗೆ ಬೀಳುತ್ತ ಇಲಾವೃತಖಂಡದ ದಕ್ಷಿಣಪ್ರಾಂತದಲ್ಲಿ ಹರಿಯುವುದು. ಅದರ ಎರಡೂ ದಡಗಳಲ್ಲಿ

 

ಜಂಬೂರಸವು ಮೇಲೆ ಹರಿದ ಮಣ್ಣು ಗಾಳಿ ಬಿಸಿಲಿನ ಸಂಯೋಗರೂಪ ವಿಶೇಷಪಾಕದಿಂದ ದೇವತೆಗಳ ಆಭರಣಗಳಿಗೆ ಬೇಕಾದ ಜಾಂಬೂನದವೆಂಬ ಬಂಗಾರವು ಆಗುವುದು. ಇದನ್ನೇ ದೇವತೆಗಳೇಮೊದಲಾದವರು ತಮ್ಮ ಯುವತಿಯರೊಂದಿಗೆ ಬಳೆ, ಕಿರೀಟ, ಉಡುದಾರವೇ ಮೊದಲಾದ ಆಭರಣ ರೂಪದಲ್ಲಿ ಧರಿಸುವರು.

ಸುಪಾರ್ಶ್ವಪರ್ವತದಲ್ಲಿರುವ ದೊಡ್ಡ ಕದಂಬವೃಕ್ಷದ ಪೊದರುಗಳಿಂದ ಹೊರಹೊರಟ ಐದು ಮಧು(ಮದ್ಯ) ಧಾರೆಗಳು ಐದುಮಾರು ಗಾತ್ರದವುಗಳಿದ್ದು ಆ ಪರ್ವತದ ಶಿಖರದಿಂದ ಕೆಳಕ್ಕೆ ಸುರಿಯುತ್ತ ಇಲಾವೃತಖಂಡದ ಪಶ್ಚಿಮ ಪ್ರಾಂತ (ದಲ್ಲಿಯ ಜನ)ವನ್ನೂ ಸಂತೋಷ ಪಡಿಸುವುವು. ಈ ಮಧುಧಾರೆಗಳನ್ನು ಸೇವಿಸುವವರ ಬಾಯಿಯಿಂದ ಹೊರಟ ಗಾಳಿಯು ಸುತ್ತಲೂ ಒಂದುನೂರು ಯೋಜನ ಸುವಾಸಿತವನ್ನಾಗಿ ಮಾಡುವುದು. ಕುಮುದ ಪರ್ವತದಲ್ಲಿ ಶತಬಲಶವೆಂಬ ಆಲದ ಹೆಮ್ಮರವಿರುವುದು. ಅದರ ಕಾಂಡದಿಂದ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಪಾಯಸ ಇವೇ ಮೊದಲಾದ ಆಹಾರ ಪದಾರ್ಥಗಳೂ, ಬಟ್ಟೆ, ಹಾಸಿಗೆ, ಆಸನ, ಆಭರಣ ಮೊದಲಾದ ಭೋಗವಸ್ತುಗಳನ್ನೂ ಅಲ್ಲದೆ ಇಷ್ಟವಾದ ಎಲ್ಲಪದಾರ್ಥಗಳನ್ನೂ ಕೊಡುವ ನದಿಗಳು ಪರ್ವತದ ಮೇಲ್ಭಾಗದಿಂದ ಕೆಳಮುಖವಾಗಿ ಬೀಳುತ್ತ ಇಲಾವೃತ ಖಂಡದ ಉತ್ತರಪ್ರಾಂತದಲ್ಲಿರುವ ಜನರನ್ನು ಉಪಭೋಗಯುಕ್ತರನ್ನಾಗಿ ಮಾಡುವುವು. ಇವುಗಳನ್ನು ಅನುಭವಿಸುವ ಆ ಜನರಿಗೆ ಎಂದೂ ಎಲ್ಲಿಯೂ ಮೈಚರ್ಮದ ಸುಕ್ಕಾಗಲಿ ನೆರೆಯಾಗಲಿ(ಬಿಳಿ), ಆಯಾಸವಾಗಲಿ, ಬೆವರುವುದಾಗಲಿ, ದುರ್ವಾಸನೆಯಾಗಲಿ, ಮುಪ್ಪು, ಅಪಮೃತ್ಯು, ಶೀತ, ಉಷ್ಣ, ಬಣ್ಣವ್ಯತ್ಯಾಸ, ಜ್ಞಾನಕ್ಕೆ ಅಡ್ಡಿ ತರುವ ಭೂತಾವೇಶ ಮೊದಲಾದ ತಾಪವಿಶೇಷಗಳು ಆಗುವುದಿಲ್ಲ.

ಹೂವಿನ ಕರ್ಣಿಕೆ (ಬೀಜಕೋಶ)ಗೆ ಕೇಸರುಗಳಿರುವಂತೆ ಭೂವಲಯ ಕಮಲದ ಕರ್ಣಿಕೆಯಂತಿರುವ ಮೇರುಪರ್ವತಕ್ಕೆ ಸುತ್ತಲೂ ಬುಡದಲ್ಲಿ ಕೇಶರಪರ್ವತಗಳಾಗಿ ಕುರಂಗ, ಕುರರ, ಕುಶುಂಭಕ, ವೈಕಂಕ, ಚಿತ್ರಕೂಟ, ಶಿಶಿರ, ಪತಂಗ, ರುಚಕ, ನಿಷಧ, ಶಿತಿವಾಸ, ಕಪಿಲ, ಶಂಖ, ವೈಡೂರ್ಯ, ಜಾರುದಿ, ಹಂಸ, ಋಷಭ, ನೀರನಾಗ, ಕಾಲಂಜರ, ನಾರದ ಮೊದಲಾದ ಬೆಟ್ಟಗಳಿರುವುವು. ಮೇರುವಿನ ಪೂರ್ವಕ್ಕೆ ಮಂದರಪರ್ವತಕ್ಕೂ ಆಚೆ ಜಠರ ಮತ್ತು ದೇವಕೂಟ

ಪರ್ವತಗಳು ಹದಿನೆಂಟು ಸಾವಿರ ಯೋಜನ ದೂರದಲ್ಲಿ (ಅಧಿಕ) ದಕ್ಷಿಣದಿಂದ ಉತ್ತರಕ್ಕೆ ಹಬ್ಬಿ ಎರಡು ಸಾವಿರ ಯೋಜನ ಗಾತ್ರ ಮತ್ತು ಅಷ್ಟೇ ಎತ್ತರವಾಗಿರುವವು. ಇದರಂತೆಯೇ ಮೇರುವಿನ ಪಶ್ಚಿಮದಲ್ಲಿ ಪವನ ಮತ್ತು ಪಾರಿಯಾತ್ರ ಪರ್ವತಗಳು ಸುಪಾರ್ಶ್ವಪರ್ವತದ ಆಚೆ ಹದಿನೆಂಟುಸಾವಿರ ಯೋಜನದೂರದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹಬ್ಬಿ ಎರಡು ಸಾವಿರ ಯೋಜನಗಾತ್ರ ಮತ್ತು ಅಷ್ಟೇ ಎತ್ತರವುಳ್ಳವುಗಳಾಗಿರುವುವು. ಮೇರುಪರ್ವತದ ದಕ್ಷಿಣಕ್ಕೆ ಮೇರುಮಂದರ ಪರ್ವತದ ಆಚೆ ಹದಿನೆಂಟುಸಾವಿರ ಯೋಜನ ದೂರದಲ್ಲಿ ಕೈಲಾಸ, ಕರವೀರ ಪರ್ವತಗಳು ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿ ಎರಡುಸಾವಿರ ಯೋಜನಗಾತ್ರ ಮತ್ತು ಅಷ್ಟೇ ಎತ್ತರವಾಗಿರುವುವು. ಮೇರುವಿನ ಉತ್ತರಕ್ಕೆ ಕುಮುದ ಪರ್ವತಕ್ಕೂ ಆಚೆ ಹದಿನೆಂಟು (ಅಧಿಕ) ಸಾವಿರ ಯೋಜನ ದೂರದಲ್ಲಿ ಶೃಂಗ, ಮಕರ ಪರ್ವತಳು ಮೇಲಿನ ಪರ್ವತಗಳಷ್ಟೇ ಗಾತ್ರ, ಎತ್ತರವುಳ್ಳವುಗಳಾಗಿರುವುವು. ಈ ಎಂಟೂ ಪರ್ವತಗಳಿಂದ ಸುತ್ತಲೂ ಅಲಂಕೃತವಾದ ಮೇರುಪರ್ವತವು ಸುತ್ತಲೂ ದರ್ಭೆಗಳಿಂದ ಅಲಂಕೃತವಾದ ಅಗ್ನಿಯಂತೆ ಪ್ರಕಾಶಿಸುವುದು. ಮೇರುವಿನ ಮೇಲ್ಭಾಗವು ಮೂವತ್ತೆರಡುಸಾವಿರ ಯೋಜನ ಅಗಲವಿದೆಯಷ್ಟೇ. ಅದರ ಮಧ್ಯದಲ್ಲಿ ಹತ್ತುಸಾವಿರ ಯೋಜನ ವಿಸ್ತೀರ್ಣವಾದ ಸಮ ಮತ್ತು ಚೌಕಾದ ಪೂಜ್ಯಬ್ರಹ್ಮದೇವರ ನಗರವಿರುವುದು. ಬಂಗಾರದ ಈ ನಗರವನ್ನು ಶತಕೋಟಿ ಎಂಬ ಹೆಸರಿನಿಂದ ಕರೆಯುವರು. ಆ ನಗರದ ಸುತ್ತಲೂ ಎಂಟು ದಿಕ್ಕುಗಳಲ್ಲಿ ಆ ಆ ದಿಕ್ಪಾಲಕರ ಎಂಟು ಪಟ್ಟಣಗಳು ಮಾನಸೋತ್ತರ ಪರ್ವತದಲ್ಲಿರುವ ಪಟ್ಟಣಗಳಂತೆಯೇ ನಿರ್ಮಿತವಾಗಿರುವುವು. ಇವುಗಳಲ್ಲಿ ಒಂದೊಂದರ ವಿಸ್ತೀರ್ಣವೂ ಬ್ರಹ್ಮದೇವರ ನಗರದ ನಾಲ್ಕನೆಯ ಒಂದು ಭಾಗ ಅಂದರೆ ಎರಡೂವರೆಸಾವಿರ ಯೋಜನ.

II ★★★ II




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಸಪ್ತದಶೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಶ್ರೀಪದ್ಮನಾಭನ ದಿವ್ಯಪಾದಪದ್ಮಪರಾಗದಿಂದ ಕೂಡಿದ ಸುರನದಿಯ ಪಾವನೋದಕದ ಸ್ನಾನ ಪಾನ ಮಾಡುವುದರಿಂದ ನಿರ್ಮಲಾಂತಃಕರಣರಾದ ಜನರಿಗೆ ಶ್ರೀಹರಿಯಲ್ಲಿ ದೃಢತರ ಭಕ್ತಿಜ್ಞಾನಾದಿಗಳು ಅಭಿವೃದ್ಧಿಯಾಗುವ ಮೂಲಕ ಮುಕ್ತಿಯಾಗುವುದು ಕಾರಣ ಆ ವಿಷ್ಣುಪದ ಮಹಿಮೆಯಿಂದ ತುಂಬಿದ ಆ ನದಿಯ ಅವತರಣವನ್ನು ನಿರೂಪಿಸುವರು ಈ ಅಧ್ಯಾಯದಲ್ಲಿ.

## ಭಾಗೀರಥೀ ಗದ್ಯ - ಗಂಗೆ ಇಳಿದುಬಂದ ಬಗೆ

ಮೊದಲಿಗೆ ವಿಷ್ಣುಪಾದದಿಂದ ಗಂಗೆಯು ಇಲಾವೃತದಲ್ಲಿ ನಾಲ್ಕು ದಿಕ್ಕುಗಳಲ್ಲಿ ಹರಿದು ಬಂದ ಪ್ರಕಾರವನ್ನು ಹೇಳಲು ಪ್ರಾರಂಭಿಸುವರು

**ಶ್ರೀಶುಕ ಉವಾಚ-**

**ತತ್ರ ಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ ವಿಷ್ಣೋರ್ವಿಕ್ರಮತೋ ವಾಮ- ಪಾದಾಂಗುಷ್ಠ ನಖನಿರ್ಭಿನ್ನೋರ್ಧ್ವಾಂಡಕಟಾಹವಿವರೇಣಾಂತಃ ಪ್ರವಿಷ್ಟಾ ಯಾ ಬಾಹ್ಯಜಲಧಾರಾ ತಚ್ಚರಣ ಪಂಕಜಾವನೇಜನಾರುಣಕಿಂಜಲ್ಕೋಪರಂಜಿತಾ- ಖಿಲಜಗದಘಮಲಾಪಹೋಪಸ್ಪರ್ಶನಾಮಲಾ ಸಾಕ್ಷಾದ್ಭಗವತ್ಪದೀತ್ಯ- ನುಪಲಕ್ಷಿತವಚೋಭಿರಭಿಧೀಯಮಾನಾತಿಮಹತಾಕಾಲೇನ ಯುಗ- ಸಹಸ್ರೋಪಲಕ್ಷಣೇನ ದಿವೋ ಮೂರ್ಧನ್ಯವತತಾರ ಯತ್ತದ್ವಿಷ್ಣುಪದಮಾಹುಃ ॥**

**ಯಜ್ಞಲಿಂಗಸ್ಯ** ಬಲಿಚಕ್ರವರ್ತಿಯ ಯಜ್ಞಶಾಲೆಯಲ್ಲಿ ವಾಮನರೂಪದಿಂದಿದ್ದ **ಭಗವತಃ** ಪರಮಪೂಜ್ಯನಾದ **ಸಾಕ್ಷಾತ್** ಆವೇಶಾವತರಾನಲ್ಲದ **ವಿಷ್ಣೋಃ** ಶ್ರೀಹರಿಯ **ವಿಕ್ರಮತಃ** ತ್ರಿವಿಕ್ರಮದಿಂದ(ಮೂರುಲೋಕಗಳನ್ನು ಅಳೆದ ಪರಾಕ್ರಮದಿಂದ) **ವಾಮಪಾದಾಂಗುಷ್ಠನಖನಿರ್ಭಿನ್ನ** ಎಡಗಾಲಿನ ಹೆಬ್ಬೆರಳಿನ ಉಗುರಿನಿಂದ ರಂಧ್ರಮಾಡಲ್ಪಟ್ಟ **ಊರ್ಧ್ವಾಂಡಕಟಾಹವಿವರೇಣ** ಮೇಲ್ಭಾಗದ ಬ್ರಹ್ಮಾಂಡ ಕಟಾಹದ ರಂಧ್ರದಿಂದ **ಅಂತಃ** ಬ್ರಹ್ಮಾಂಡದ ಒಳಗೆ **ಪ್ರವಿಷ್ಟಾ** ಪ್ರವೇಶಿಸಿದ **ಯಾ** ಯಾವ **ಬಾಹ್ಯಜಲಧಾರಾ** ಬ್ರಹ್ಮಾಂಡ ಕಟಾಹದ ಹೊರಗಿನ ನೀರಿನ ಧಾರೆಯುಂಟೋ **ಸಾ** ಅದು **ಅಮಲಾ(ಅಪಿ)** ಸ್ವಾಭಾವಿಕವಾಗಿ ಬೆಳ್ಳಗಿದ್ದರೂ **ತಚ್ಚರಣಪಂಕಜ** ಆ ಶ್ರೀಹರಿಯ ಪಾದಕಮಲಗಳ **ಅವನೇಜನ** ತೊಳೆಯುವುದರಿಂದ **ಅರುಣಕಿಂಜಲ್ಕ** ಸಂಕ್ರಾಂತವಾದ ಕೆಂಪು ಪರಾಗದಿಂದ **ಉಪರಂಜಿತಾ** ಕೆಂಪುಬಣ್ಣದ್ದೋ ಎಂಬಂತೆ ಇರುವುದಾಗಿ **ಅಖಿಲಜಗದಘಮಲಾಪಹೋಪಸ್ಪರ್ಶನಾ** ಎಲ್ಲಜಗತ್ತಿನ ಯೋಗ್ಯಜೀವರ ಪಾಪ (ಒಳಗಿನದು) ಮಲ(ಹೊರಗಿನ) ಕೊಳೆಯನ್ನು ಹೋಗಲಾಡಿಸುವ ಆಚಮನವುಳ್ಳದ್ದಾಗಿ ಅಂದರೆ ಆಚಮನ ಮಾತ್ರದಿಂದ ಎಲ್ಲಾ ಪಾಪಕಳೆಯುವುದು ಅಂದಮೇಲೆ ಸ್ನಾನಾದಿಗಳಿಗೆ ಕೇಳಬೇಕೇ? ಎಂದು ಭಾವ. **ಅಮಲಾ** ತಾನು ಪಾಪಸಂಬಂಧವಿಲ್ಲದ್ದಾಗಿ **ಅನುಪಲಕ್ಷಿತವಚೋಭಿಃ** ವೇದಪುರಾಣಗಳಲ್ಲಿನ ನಿಮಿತ್ತಗಳಿಂದ ಬಂದ **ಜಾನ್ಹವೀ** ಭಾಗೀರಥಿ ಮುಂತಾದ ಹೆಸರುಗಳಿಲ್ಲದ (ಮೊದಲು ಗಂಗೆಗೆ **ಭಗವತ್ಪದೀ** ಎಂದೇ ಹೆಸರು ಆ ಕಾಲದಲ್ಲಿ ಜಾನ್ಹವಿಮುಂತಾದ ಹೆಸರುಗಳು ಇರಲಿಲ್ಲವೆಂದು ಭಾವ) **ಸಾಕ್ಷಾತ್** ಯಥಾರ್ಥವಾದ ಔಪಚಾರಿಕವಲ್ಲದ **ಭಗವತ್ಪದೀ ಇತಿ** ವಿಷ್ಣುಪದಿ ಎಂಬ ಹೆಸರಿನಿಂದ **ಅಭಿಧಿ ೕಯಮಾನಾ** ಕರೆಯಲ್ಪಡುವಳಾಗಿ **ಯುಗಸಹಸ್ರೋಪಲಕ್ಷಣೇನ ಅತಿಮಹತಾ ಕಾಲೇನ** ಸಾವಿರಯುಗಗಳೆಂಬ ಅತಿದೀರ್ಘಕಾಲದನಂತರ **ಯತ್ತದ್ವಿಷ್ಣುಪದಂ** ಯಾವ ಆ ಸ್ಥಳವನ್ನು ಶಿಂಶುಮಾರ ರೂಪಿಯಾದ ಶ್ರೀಹರಿಯ ಸ್ಥಾನವೆಂದು **ಆಹುಃ** ಜ್ಞಾನಿಗಳು ಕರೆಯುವರೋ **ತತ್ರ** ಅಲ್ಲಿ **ದಿವಃ ಮೂರ್ಧನಿ** ಅಂತರಿಕ್ಷದ ಮೇಲ್ಭಾಗದಲ್ಲಿ ಧ್ರುವಲೋಕದಲ್ಲಿ **ಅವತತಾರ** ಅವತರಿಸಿತು, ವ್ಯಕ್ತವಾಯಿತೆಂದರ್ಥ.

**ವಿ.ವಿ** :-(೧) ಶ್ರೀಹರಿಯ ಪಾದರಜಸ್ಸಿನಿಂದ ಉಪರಕ್ತವಾದರೂ ತನ್ನನ್ನು ಸೇವಿಸುವರಿಗೆ ರಾಗವನ್ನು ಹುಟ್ಟಿಸಿ ಪಾಪಜನನಿ ಅಲ್ಲವೆಂದು **ಅಖಿಲಜಗದಘ-ಮಲಾಪಹಾ** ಎಂಬ ವಿಶೇಷಣದಿಂದ ತಿಳಿಸಿರುವರು. (೨) **ಉಪಸ್ಪರ್ಶನ** ಎಂದು

 

ಹೇಳಿದ್ದರಿಂದ ಆಚಮನದಿಂದಲೇ ಸಮಸ್ತ ಪಾಪಗಳನ್ನು ಕಳೆಯುವಾಗ ಸ್ನಾನಾದಿಗಳಿಂದ ಕಳೆಯುವುದೆಂದೇನು ಹೇಳುವುದು ಎಂಬ ಕೈಮುತ್ಯವನ್ನೂ ತೋರಿಸಿರುವರು. ಶ್ರೀಹರಿಯ ಪಾದರಜಸ್ಸಿನಿಂದ ಉಪರಂಜಿತಳಾದ್ದರಿಂದಲೇ ಪಾಪನಾಶಕಳೆಂದು ತಿಳಿಸಲು ಮೊದಲು ಆ ವಿಶೇಷಣ ಹೇಳಿರುವರು. **(೩) ಅಮಲಾ** ಎಂಬುದರಿಂದ ಪಾಪಸಂಬಂಧಶೂನ್ಯಳೆಂದು ತಿಳಿಸಿರುವರು. **(೪) ಸಾಕ್ಷಾತ್, ಅನುಪಲಕ್ಷಿತ** ಈ ಎರಡು ಪದಗಳನ್ನು ಹೇಳಿದ್ದರಿಂದ ಶಾಲಗ್ರಾಮ ಪ್ರತಿಮೆ ಮುಂತಾದವುಗಳಿಗೆ ಮಾಡಿದ ಅಭಿಷೇಕ ಜಲದಂತೆ ಪಾದೋದಕ ಎಂಬುದು ಔಪಚಾರಿಕವಲ್ಲವೆಂದೂ ಸ್ಪಷ್ಟಪಡಿಸಿರುವರು. **(೫) ವಾಮಪಾದವೆಂದು** ಹೇಳಿದ್ದರಿಂದ ಕಲ್ಪಭೇದದಿಂದ ವಾಮದಕ್ಷಿಣಪಾದಗಳನ್ನೂ ಎತ್ತಿದನೆಂದು ತಿಳಿಸಿರುವರು. ಒಂದೇ ಕಲ್ಪದಲ್ಲಿ ಅಲ್ಲ.

ಗ್ರಂಥಾಂತರದಲ್ಲಿ ದಕ್ಷಿಣಪಾದವೆಂದು ಹೇಳಿದೆ. ಇಲ್ಲಾದರೋ ವಾಮಪಾದವೆಂದಿದೆ ಕಾರಣ ವಿರೋಧ ಎಂದರೆ ಹೇಳುವರು

ತಾತ್ಪರ್ಯ - ''ವಾರಾಹೇ ವಾಮಪಾದಂ ತು ತದನ್ಯೇಷು ತು ದಕ್ಷಿಣಂ ।
ಪಾದಂ ಕಲ್ಪೇಷು ಭಗವಾನುಜ್ಜಹಾರ ತ್ರಿವಿಕ್ರಮಃ ಇತಿ ಚ ॥

ಶ್ವೇತವರಾಹಕಲ್ಪದಲ್ಲಿ ಎಡಗಾಲನ್ನು ಮಿಕ್ಕದಿನಕಲ್ಪಗಳಲ್ಲಿ ಬಲಗಾಲನ್ನು ತ್ರಿವಿಕ್ರಮರೂಪಿಯು ಎತ್ತಿದನು ಎಂದು ಪ್ರಮಾಣ ಸ್ಪಷ್ಟಪಡಿಸುವುದು. ಇದನ್ನು ತಿಳಿಸಲೆಂದೇ ವಾಮಪಾದ ಎಂದು ಮೂಲದಲ್ಲಿ ಹೇಳಿದ್ದು ಎಂದು ಭಾವ.

ಶಿಂಶುಮಾರ ಸ್ಥಾನ ಯಾವುದು ಎಂದರೆ ಧ್ರುವಲೋಕವೇ ಎಂಬ ಅಭಿಪ್ರಾಯದಿಂದ ಹೇಳುವರು

**ಯತ್ರ ಹವಾವ ವೀರವ್ರತ ಔತ್ತಾನಪಾದಿಃ ಪರಮಭಾಗವತೋಽಸ್ಮತ್ಕುಲದೇವತಾಚರಣಾರವಿಂದೋದಕಮಿತಿ ಯಾಮನುಸವನ ಮುತ್ಕೃಷ್ಯಮಾಣಭಗವದ್ಭಕ್ತಿಯೋಗೇನ ದೃಢಂ ಕ್ಲಿದ್ಯಮಾನಾಂತರ್ಹೃದಯ ಔತ್ಕಂಠ್ಯಾದ್ವಿವಶಾಮೀಲಿತಲೋಚನಯುಗಲಕುಡ್ಮಲವಿಗಲಿತಾಮಲ ಭಾಷ್ಪಕಲಯಾಽಭಿವ್ಯಜ್ಯಮಾನರೋಮಪುಲಕಕುಲಕ ಅಧುನಾಪಿ ಪರಮಾದರೇಣ ಶಿರಸಾ ಬಿಭರ್ತಿ ॥೨॥**

**ಯತ್ರ** ಯಾವ ವಿಷ್ಣುಪದದಲ್ಲಿ **ವೀರವ್ರತಃ** ಪ್ರಾರಂಭಿಸಿದುದನ್ನು ಕೊನೆಮುಟ್ಟಿಸುವವರ (ವೀರ)ವ್ರತವುಳ್ಳ **ಪರಮಭಾಗವತಃ** ಮಹಾಭಗವದ್ಭಕ್ತನಾದ **ಔತ್ತಾನಪಾದಿಃ** ಉತ್ತಾನಪಾದರಾಜನ ಮಗನಾದ ಧ್ರುವರಾಜನು **ಅಸ್ಮತ್ಕುಲದೇವತಾ ಪಾದೋದಕಂ ಇತಿ** ನಮ್ಮ ವಂಶದಲ್ಲಿಯ ಎಲ್ಲರಿಗೂ ದೇವತೆಯಾದ ಶ್ರೀಹರಿಯ ಪಾದೋದಕವೆಂದು **ಯಾಂ** ಯಾವ ಈ ಗಂಗೆಯ ನೀರನ್ನು **ಅನುಸವನಂ** (೧) ಪ್ರತಿದಿನವೂ (೨) ಮೂರು ಕಾಲಗಳಲ್ಲಿಯೂ **ಉತ್ಕೃಷ್ಯಮಾಣ** ಅಭಿವೃದ್ಧಿ ಹೊಂದುತ್ತಿರುವ **ಭಗವದ್ಭಕ್ತಿಯೋಗೇನ** ಶ್ರೀಹರಿಯ ಭಕ್ತಿ ಎಂಬ ಉಪಾಯದಿಂದ **ದೃಢಂ** ಬಹಳವಾಗಿ(ಗಟ್ಟಿಯಾಗಿ) **ಕ್ಲಿದ್ಯಮಾನ ಅಂತರ್ಹೃದಯಃ** ಸ್ನೇಹದಿಂದ ಒದ್ದೆಯಾಗುತ್ತಿರುವ ಹೃದಯದ ಒಳಭಾಗವುಳ್ಳವನಾಗಿ ಆದ್ದರಿಂದಲೇ **ಔತ್ಕಂಠ್ಯಾತ್** ಉತ್ಕಂಠತೆಯಿಂದ **ವಿವಶ** ಮೈಮರೆತು **ಆಮೀಲಿತ** ಸ್ವಲ್ಪ (ಅರೆ) ಮುಚ್ಚಿದ **ಲೋಚನಯುಗಲಕುಡ್ಮಲ** ಎರಡು ಕಣ್ಣುಗಳೆಂಬ ಮೊಗ್ಗುಗಳಿಂದ **ವಿಗಲಿತ** ಸರಿಯುತ್ತಿರುವ **ಅಮಲಭಾಷ್ಪಕಲಯಾ** ನಿರ್ಮಲ ಕಣ್ಣೀರಿನ ಹನಿಯೊಂದಿಗೆ **ಅಭಿವ್ಯಜ್ಯಮಾನ** ವ್ಯಕ್ತವಾಗುತ್ತಿರುವ **ರೋಮಪುಲಕಕುಲಕಃ ಸನ್** ರೋಮಾಂಚನ ಸಮೂಹವುಳ್ಳವನಾಗಿ **ಅಧುನಾ ಅಪಿ** ಈಗಲೂ **ಪರಮಾದರೇಣ** ಅತ್ಯಂತ ಆದರದಿಂದ **ಶಿರಸಾ ಬಿಭರ್ತಿ** ತಲೆಯಲ್ಲಿ ಧರಿಸುವನು. ॥೨॥

**ತತ (ಸಪ್ತ) ಋಷಯಸ್ತತ್ಪ್ರಭಾವಜ್ಞಾ ಋಷಿಲೋಕೇ (ಯಾಂ) ಇಯಂ ನನು ತಪಸ ಆತ್ಯಂತಿಕೀ ಸಿದ್ಧಿರೇತಾವತೀತಿ ಭಗವತಿ ಸರ್ವಾತ್ಮನಿ ವಾಸುದೇವೇಽ- ನವರತ ಭಕ್ತಿಯೋಗಲಾಭೇನೈವೋಪೇಕ್ಷಿತಾನ್ಯಾರ್ಥಾತ್ಮಗತಯೋ ಮುಕ್ತಿ- ಮಿವಾಗತಾಂ ಮುಮುಕ್ಷವಃ ಸಬಹುಮಾನಮೇವಾದ್ಯಾಪಿ ಜಟಾಜೂಟೈ- ರುದ್ವಹಂತಿ ॥೩॥**

**ತತಃ** ಆ ಧ್ರುವಲೋಕದಿಂದ ಕೆಳಕ್ಕೆ ಬೀಳುತ್ತ **ಋಷಿಲೋಕೇ** ಸಪ್ತ ಋಷಿ ಲೋಕದಲ್ಲಿ **ಸರ್ವಾತ್ಮನಿ** ಸರ್ವಸ್ವಾಮಿಯಾದ **ಭಗವತಿ ವಾಸುದೇವೇ** ಸರ್ವೈಶ್ವರ್ಯಸಂಪನ್ನನಾದ ಶ್ರೀಹರಿಯಲ್ಲಿ **ಅನವರತಭಕ್ತಿಯೋಗಲಾಭೇನ ಏವ** ಸಂತತವಾದ ಭಕ್ತಿಯೋಗದ ಲಾಭದಿಂದಲೇ **ಉಪೇಕ್ಷಿತಾನ್ಯಾರ್ಥಾಃ** ಬೇರೇ ವಿಷಯಗಳಲ್ಲಿ ಮತ್ತು ಬೇರೇ ಪುರುಷಾರ್ಥಗಳಲ್ಲಿ ಉಪೇಕ್ಷೆಯುಳ್ಳವರಾಗಿ (ಉದಾಸೀನತೆ) **ಆತ್ಮಗತಯಃ** ಆತ್ಮಜ್ಞಾನವುಳ್ಳ ಅಥವಾ ಉಪೇಕ್ಷಿತವಾದ ಅನ್ಯವಿಷಯಗಳಲ್ಲಿ ಅಪ್ರವೃತ್ತಿಯುಳ್ಳವರಾಗಿ ಅಥವಾ **ಋಷಯಃ** ಸಪ್ತ ಋಷಿಗಳು

**ತತ್ಪ್ರಭಾವಜ್ಞಾಃ ಸಂತಃ** ಆ ಗಂಗೆಯ ಪ್ರಭಾವವನ್ನರಿತವರಾಗಿ **ಇಯಂ** ಈ ಗಂಗೆಯು **ತಪಸಃ** ತಪಸ್ಸಿನ **ಆತ್ಯಂತಿಕೀ ಸಿದ್ಧಿಃ** ಕೊನೆಯ ಸಿದ್ಧಿಯು **ಏತಾವತೀ ನನು** ಇಷ್ಟೇ ಅಲ್ಲವೇ **ಇತಿ** ಎಂಬ ಅಭಿಪ್ರಾಯದಿಂದ **ಮುಮುಕ್ಷವಃ** ಮೋಕ್ಷವನ್ನಿಚ್ಛಿಸುವ ಜೀವರು **ಆಗತಾಂ ಮುಕ್ತಿಂ ಇವ** ಒದಗಿಬಂದ ಮುಕ್ತಿಯನ್ನು ಸ್ವೀಕರಿಸುವಂತೆ **ಯಾಂ** ಯಾವ ಗಂಗೆಯನ್ನು **ಸಬಹುಮಾನಂ** ಗೌರವಸಹಿತವಾಗಿ **ಅದ್ಯಾಪಿ** ಇಂದಿಗೂ **ಜಟಾಜೂಟೈಃ** ಜಟೆಗಳ ಸಮೂಹಗಳಿಂದ **ಉದ್ವಹಂತಿ** ಧರಿಸುವರು.

**ತತೋಽನೇಕಸಹಸ್ರಕೋಟಿವಿಮಾನಾನೀಕಸಂಕುಲದೇವಯಾನೇನಾವತರಂತೀಂ-ದುಮಂಡಲಮಾಪ್ಲಾವ್ಯ ಬ್ರಹ್ಮಸದನೇ ನಿಪತತಿ ॥೪॥**

**ತತಃ** ಆ ಸಪ್ತಋಷಿ ಲೋಕದಿಂದ **ಅನೇಕಸಹಸ್ರಕೋಟಿವಿಮಾನಾನೀಕ ಸಂಕುಲದೇವಯಾನೇನ** ಅನೇಕ ಸಾವಿರ ಕೋಟಿ ಏಳು ಮಹಡಿಗಳುಳ್ಳ ಮನೆಗಳ ಸಮೂಹದಿಂದ ನಿಬಿಡವಾದ ಇಂದ್ರ ಮೊದಲಾದವರ ಪಟ್ಟಣಗಳ ಸಂಬಂಧವುಳ್ಳ ಆಕಾಶಮಾರ್ಗದಿಂದ **ಅವತರಂತೀ** ಕೆಳಕ್ಕೆ ಇಳಿಯುತ್ತ **ಇಂದುಮಂಡಲಂ** ಚಂದ್ರಮಂಡಲವನ್ನು **ಆಪ್ಲಾವ್ಯ** ನೀರಿನಿಂದ ತೋಯಿಸಿ **ಬ್ರಹ್ಮಸದನೇ ನಿಪತತಿ** ಮೇರು ಮಧ್ಯದಲ್ಲಿರುವ ಶತಕೋಟಿ ಎಂಬ ಬ್ರಹ್ಮದೇವರ ನಿವಾಸ (ಪುರ)ದಲ್ಲಿ ಬೀಳುತ್ತದೆ. ॥೪॥

**ತತ್ರ ಚತುರ್ಧಾ ಭಿದ್ಯಮಾನಾ ಚತುರ್ಭಿರ್ನಾಮಭಿಶ್ಚತುರ್ದಿಶಮಭಿ-ಸ್ಯಂದತೀ ನದೀನದಪತಿಮೇವಾಭಿನಿವಿಶತಿ ಸೀತಾಽಲಕನಂದಾಚಕ್ಷುರ್ಭದ್ರೇತಿ ॥೫॥**

**ತತ್ರ** ಆ ಬ್ರಹ್ಮಸದನದ ಅಂಗಳದಲ್ಲಿ ಚತುರ್ಧಾ ಭಿಧ್ಯಮಾನಾ ನಾಲಕ್ಕು ಭಾಗಗಳಾಗಿ ವಿಭಾಗಗೊಳ್ಳುತ್ತಾ **ಸೀತಾ ಅಲಕನಂದಾ ಚಕ್ಷುಃ ಭದ್ರಾ** ಇತಿ ಎಂಬ **ಚತುರ್ಭಿಃ ನಾಮಭಿಃ** ನಾಲಕ್ಕು ಹೆಸರುಗಳಿಂದ **ಚತುರ್ದಿಶಂ ಅಭಿ** ಪೂರ್ವ ಮೊದಲಾದ ನಾಲ್ಕುದಿಕ್ಕುಗಳಿಗೆ ಕ್ರಮವಾಗಿ **ಸ್ಯಂದತೀ** ಹರಿಯುತ್ತ **ನದೀನದಪತಿಂ ಏವ** ಸಮುದ್ರವನ್ನೇ **ಅಭಿನಿವಿಶತಿ** ಸೇರುವುದು. (**ನದೀ** ನದಿಯು **ನದಪತಿಂ** ಸಮುದ್ರವನ್ನು ಹೀಗೂ ಅರ್ಥ ಮಾಡಿರುವರು) ॥೫॥

ನಾಲ್ಕು ಭಾಗವಾಗಿ ಹರಿದು ಸಮುದ್ರವನ್ನು ಸೇರುವ ರೀತಿಯನ್ನೇ ಹೇಳುವರು

**ಸೀತಾ ತು ಬ್ರಹ್ಮಸದನಾತ್ ಕೇಸರಾದ್ರಿಶಿಖರೇಭ್ಯೋಽಧೋಽಧಃ ಪತಂತೀ ಗಂಧಮಾದನ ಮಾರ್ಧ್ನಿ ಪತಿತ್ವಾಂತರೇಣ ಭದ್ರಾಶ್ವಂ ವರ್ಷಂ ಪ್ರಾಚ್ಯಾಂದಿಶಿ ಕ್ಷಾರಸಮುದ್ರಂ ಪ್ರವಿಶತಿ ॥೬॥**

**ಸೀತಾ ತು** ಸೀತಾ ಎಂಬ ಭಾಗವಾದರೋ **ಬ್ರಹ್ಮಸದನಾತ್** ಬ್ರಹ್ಮಸದನದಿಂದ **ಕೇಶರಾದ್ರಿಶಿಖರೇಭ್ಯಃ** ಕೇಸರಪರ್ವತಗಳ ಶಿಖರಗಳಿಂದ **ಅಧೋಽಧಃ** ಕೆಳಗೆ ಕೆಳಗೆ **ಪತಂತೀ** ಬೀಳುತ್ತಾ **ಗಂಧಮಾದನಮೂರ್ಧ್ನಿ** ಗಂಧಮಾದನ ಪರ್ವತದ ಮೇಲೆ **ಪತಿತ್ವಾ** ಬಿದ್ದು **ಅಂತರೇಣ ಭದ್ರಾಶ್ವಂ ವರ್ಷಂ** (ಭದ್ರಾಶ್ವಖಂಡವನ್ನೂ ಬಳಿಸಿಕೊಂಡು) ಭದ್ರಾಶ್ವವರ್ಷದ ಮಧ್ಯದಲ್ಲಿ ಹರಿದು **ಪ್ರಾಚ್ಯಾಂ ದಿಶಿ** ಪೂರ್ವದಿಕ್ಕಿನಲ್ಲಿ **ಕ್ಷಾರಸಮುದ್ರಂ** ಉಪ್ಪಿನಸಮುದ್ರವನ್ನು **ಪ್ರವಿಶತಿ** ಪ್ರವೇಶಿಸುವುದು. ॥೬॥

**'ಕೇಸರಾದ್ರಿಶಿಖರೇಭ್ಯಃ'** **ಅಥವಾ** **'ಕೇಸರಾಚಲಾದಿಶಿಖರೇಭ್ಯಃ'** ಎಂದು ಹೇಳಿದ್ದರಿಂದ ಕೇಶರಪರ್ವತಗಳೆನಿಸಿದ ಕುರಂಗಾದಿಗಳು ಮೇರುಪರ್ವತದ ಸಮಾನ ಎತ್ತರವಿರುವುದರಿಂದ ಮೊದಲು ಅಲ್ಲಿ ಬಿದ್ದು ನಂತರ ಮಂದರ ಮೊದಲಾದ ಅವಷ್ಟಂಭ ಗಿರಿಗಳಲ್ಲಿ ಮತ್ತು ಮರ್ಯಾದಾಪರ್ವತಗಳಾದ ಗಂಧಮಾದನಾದಿಗಳಲ್ಲಿ ಬೀಳುವುದು. ಕೇಸರ ಪರ್ವತಕ್ಕಿಂತ ಗಂಧಮಾದನಾದಿಗಳ ಎತ್ತರ ಕಡಿಮೆ ಎಂದು ಜ್ಞಾಪಿಸಿರುವರು.॥೬॥

**ಏವಂ ಮಾಲ್ಯವಚ್ಛಿಖರಾನ್ನಿಷ್ಪತಂತ್ಯನುಪರತವೇಗಾ ಕೇತುಮಾಲಾಮಭಿ- ಚಕ್ಷುಃ ಪ್ರತೀಚ್ಯಾಂ ದಿಶಿ ಸರಿತ್ಪತಿಂ ಪ್ರವಿಶತಿ ॥೭॥**

**ಏವಂ** ಹೀಗೆಯೇ **ಚಕ್ಷುಃ** ಚಕ್ಷು ಎಂಬ ಶಾಖೆಯು **ಮಾಲ್ಯವಚ್ಛಿಖರಾತ್** ಮಾಲ್ಯವಂತ ಪರ್ವತದ ಶಿಖರದಿಂದ **ನಿಷ್ಪತಂತೀ** ಬೀಳುತ್ತಾ **ಅನುಪರತವೇಗಾ** ಕಡಿಮೆಯಾಗದ ವೇಗವುಳ್ಳದ್ದಾಗಿ **ಕೇತುಮಾಲಾಮಭಿ** ಕೇತುಮಾಲಾಖಂಡಕ್ಕೆ ಅಭಿಮುಖವಾಗಿ ಹರಿದು **ಪ್ರತೀಚ್ಯಾಂ** ಪಶ್ಚಿಮ ದಿಕ್ಕಿನಲ್ಲಿ **ಸರಿತ್ಪತಿಂ** ಸಮುದ್ರವನ್ನು **ಪ್ರವಿಶತಿ** ಸೇರುವುದು ॥೭॥

**ಭದ್ರಾ ಚೋತ್ತರತೋ ಮೇರುಶಿರಸೋ ನಿಪತಂತೀ ಗಿರಿಶಿಖರಾದ್ಗಿರಿಶಿಖರ- ಮತಿಹಾಯ ಶೃಂಗವತಃ ಶೃಂಗಾದಭಿಸ್ಯಂದಮಾನಾ ಉತ್ತರಾಂಸ್ತು ಕುರೂನತಿಕ್ರಮ್ಯೋದೀಚ್ಯಾಂ ದಿಶಿ ಲವಣಾರ್ಣವಂ ಪ್ರವಿಶತಿ ॥೮॥**




**ಭದ್ರಾ ಚ** ಭದ್ರಾ ಎಂಬ ಭಾಗವಾದರೋ **ಉತ್ತರತಃ** ಉತ್ತರದಿಕ್ಕಿನಲ್ಲಿ **ಮೇರೋಃ ಶಿರಸಃ** ಮೇರುವಿನ ಮೇಲ್ಭಾಗದಿಂದ **ನಿಪತಂತೀ** ಆಕಾಶದಿಂದ ಬೀಳುತ್ತಾ **ಗಿರಿಶಿಖರಾತ್ ಗಿರಿಶಿಖರಂ** ಕೇಸರಗಿರಿ ಶಿಖರದಿಂದ ನೀಲಗಿರಿ ಶಿಖರವನ್ನು ನೀಲಗಿರಿ ಶಿಖರದಿಂದ ಶ್ವೇತಶಿಖರವನ್ನೂ ಶ್ವೇತಶಿಖರದಿಂದ ಶೃಂಗವಂತ ಪರ್ವತ ಶಿಖರವನ್ನೂ **ಅತಿಹಾಯ** ಅತಿಕ್ರಮಿಸಿ **ಶೃಂಗಾತ್** ಶೃಂಗವಂತಶಿಖರದಿಂದ **ಅಭಿಸ್ಯಂದಮಾನಾ** ಹರಿಯುವವಳಾಗಿ **ಉತ್ತರಾನ್ ಕುರೂನ್ ಅತಿಕ್ರಮ್ಯ** ಉತ್ತರದಲ್ಲಿ ಉತ್ತರಕುರುವನ್ನು ದಾಟಿ **ಲವಣಾರ್ಣವಂ ಪ್ರವಿಶತಿ** ಉಪ್ಪು ಸಮುದ್ರವನ್ನು ಸೇರುವುದು (ನೀಲಶಿಖರದಿಂದ ಶ್ವೇತಶಿಖರವನ್ನೂ ಸ್ಪರ್ಶಿಸದೇ ಶೃಂಗವಂತ ಶಿಖರವನ್ನು ಹೊಂದಿ ಅಲ್ಲಿಂದ ಹರಿದು ಹೀಗೂ ಅರ್ಥ ವೀರರಾಘವ ರೀತ್ಯಾ). ॥೮॥

**ತಥೈವಾಲಕನಂದಾ ದಕ್ಷಿಣೇನ ತು ಬ್ರಹ್ಮಸದನಾದ್ಬಹೂನಿ ಗಿರಿಕೂಟಾನ್ಯ-ತಿಕ್ರಮ್ಯ(ನಿಷಧ)ಹೇಮಕೂಟಹಿಮಕೂಟಾನ್ಯತಿರಭಸತರರಂಹಸಾ ಲುಠಂತೀ ಭಾರತಮೇವ ವರ್ಷಂ ದಕ್ಷಿಣಸ್ಯಾಂ ದಿಶಿ ಜಲನಿಧಿಂ ಪ್ರವಿಶತಿ ॥೯॥**

**ತಥೈವ** ಹಾಗೆಯೇ **ಅಲಕನಂದಾ ತು** ಅಲಕನಂದಾ ಎಂಬ ಭಾಗವು(ಶಾಖೆ) **ದಕ್ಷಿಣೇನ** ದಕ್ಷಿಣ ದಿಕ್ಕಿನಲ್ಲಿ **ಬ್ರಹ್ಮಸದನಾತ್** ಮೇರು ಪರ್ವತದ ಮೇಲಿನ ಬ್ರಹ್ಮಸದನದಿಂದ ಹೊರಟು **ಬಹೂನಿ** ಬಹಳ **ಗಿರಿಕೂಟಾನಿ** ಪರ್ವತ ಶಿಖರಗಳನ್ನು **ಅತಿಕ್ರಮ್ಯ** ಸ್ಪರ್ಶ ಮಾಡದೇ ದಾಟಿ **(ನಿಷಧ) ಹೇಮಕೂಟಹಿಮಕೂಟಾನಿ** ಆಕಾಶದಿಂದ ಹೇಮಕೂಟ ಹಿಮಾಚಲ ಪರ್ವತಗಳ ಶಿಖರಗಳನ್ನು **ಅತಿರಭಸತರರಂಹಸಾ** ಆಟೋಪಾತಿಶಯ ವೇಗದಿಂದ **ಲುಠಂತೀ** ಭೇದಿಸುತ್ತ ಅಥವಾ ಮೇಲೆ ಕೆಳಗೆ ಕಲ್ಲುಗಳ ಶಿಖರಗಳಲ್ಲಿ ಅಪ್ಪಳಿಸುತ್ತ ಸುತ್ತುತ್ತ **ಭಾರತಮೇವ ವರ್ಷಂ** ಭರತ ಖಂಡವನ್ನೇ ವ್ಯಾಪಿಸಿ ದಾಟಿ **ದಕ್ಷಿಣಸ್ಯಾಂ ದಿಶಿ** ದಕ್ಷಿಣ ದಿಕ್ಕಿನಲ್ಲಿ **ಜಲನಿಧಿಂ** ಸಮುದ್ರವನ್ನು **ಪ್ರವಿಶತಿ** ಪ್ರವೇಶಿಸುವುದು. ॥೯॥

**ಅನ್ಯೇ ನದಾ ನದ್ಯಶ್ಚ ವರ್ಷೇಽಸ್ಮಿನ್ ಸಂತಿ ಬಹುಶೋ ಮೇರ್ವಾದಿಗಿರಿ-ದುಹಿತರಃ ಅತ್ರಾಪಿ ಜಂಬೂದ್ವೀಪೇ ಭಾರತಮೇವಪರ್ಷಂ ಕರ್ಮಕ್ಷೇತ್ರಂ ಅಥ ಅನ್ಯಾನಿ ಅಷ್ಟವರ್ಷಾಣಿ ಸ್ವರ್ಗಿಣಾಂ ಪುಣ್ಯಶೇಷೋಪಭೋಗಸ್ಥಾನಾನಿ ಭೌಮಾನಿ ಸ್ವರ್ಗಪದಾನಿ ವ್ಯಪದಿಶಂತಿ ॥೧೦॥**

**ಅಸ್ಮಿನ್ ವರ್ಷೇ** ಈ ಭರತಖಂಡದಲ್ಲಿ **ಬಹುಶಃ** ಅನೇಕ ಬಗೆಯ ಮೇರ್ವಾದಿ **ಗಿರಿದುಹಿತರಃ** ಮೇರು ಮುಂತಾದ ಪರ್ವತಗಳಿಂದ ಹೊರಟ **ನದಾಃ** ಗಂಡು ನದಿಗಳು **ನದ್ಯಃ** ಹೆಣ್ಣುನದಿಗಳು **ಸಂತಿ** ಇರುವುವು **ಅತ್ರ ಜಂಬೂದ್ವೀಪೇSಪಿ** ಈ ಜಂಬೂ ದ್ವೀಪದಲ್ಲಿಯೂ **ಭಾರತಮೇವ ವರ್ಷಂ** ಭಾರತ ಖಂಡವೇ **ಕರ್ಮಕ್ಷೇತ್ರಂ** ಕರ್ಮಗಳನ್ನು ಮಾಡಿ ಪುಣ್ಯಪಾಪಗಳನ್ನು ಗಳಿಸುವ ಭೂಮಿಯು **ಅಥ ಅನ್ಯಾನಿ ಅಷ್ಟ ವರ್ಷಾಣಿ** ಇನ್ನುಳಿದ ಎಂಟು ಖಂಡಗಳು **ಸ್ವರ್ಗಿಣಾಂ** ಪುಣ್ಯವನ್ನು ಮಾಡಿ ಸ್ವರ್ಗವನ್ನು ಸೇರಿದವರ(ಅಲ್ಲಿದ್ದು ಪುಣ್ಯಫಲವನ್ನು ಅನುಭವಿಸಲರ್ಹರಾದವರ) **ಪುಣ್ಯಶೇಷೋಪಭೋಗಸ್ಥಾನಾನಿ** ಸ್ವರ್ಗದಲ್ಲಿ ಅನುಭವಿಸಿ ಉಳಿದ ಪುಣ್ಯಫಲಗಳನ್ನು ಅನುಭವಿಸುವ ತಾಣಗಳು **ಭೌಮಾನಿ ಸ್ವರ್ಗಪದಾನಿ** ಭೂಮಿಯ ಮೇಲಿನ ಸ್ವರ್ಗಗಳೆಂಬ ಹೆಸರುಳ್ಳವುಗಳೆಂದು **ವ್ಯಪದಿಶಂತಿ** ಕರೆಯುವರು.

**ವಿ.ವಿ** ಃ- ಸ್ವರ್ಗವು ದಿವ್ಯ, ಭೌಮ, ಬಿಲ ಎಂದು ಮೂರುವಿಧ. ಅದರಲ್ಲಿ ಇವು ಭೌಮ ಸ್ವರ್ಗಗಳು. ಪಾತಾಳದಲ್ಲಿರುವುದು ಬಿಲ ಅಂತರಿಕ್ಷದಲ್ಲಿರುವುದು ದಿವ್ಯವೆಂದು ಭಾವ.

**ಯೇಷು ಪುರುಷಾಣಾಮಯುತವರ್ಷಾಯುಷಾಂ ದೇವಕಲ್ಪಾನಾಂ ವಜ್ರಸಂಹನನ ಬಲವಯೋಮೋದಪ್ರಮುದಿತಮಹಾಸೌರತನಿರತ-ನರವರಾವರೋಧಮಿಥುನ ವ್ಯವಾಯಾಪವರ್ಗಧೃತ್ಯೈಕಗರ್ಭಕಲತ್ರಾಣಾಂ ತ್ರೇತಾಯುಗಸಮಃ ಕಾಲೋ ವರ್ತತೇ ।।೧೧।।**

**ಯೇಷು** ಯಾವ ಈ ಎಂಟು ಖಂಡಗಳಲ್ಲಿ ವಾಸಿಸುತ **ಅಯುತ ವರ್ಷಾಯುಷಾಂ** ಹತ್ತು ಸಾವಿರ ವರ್ಷ ಆಯುಷ್ಯವುಳ್ಳ (ಮನುಷ್ಯಮಾನದಿಂದ) **ನಾಗಾಯುತಪ್ರಾಣಾನಾಂ** ಹತ್ತು ಸಾವಿರ ಆನೆಗಳ ಬಲವುಳ್ಳ (ಮನುಷ್ಯಮಾನದಿಂದ) **ವಜ್ರಸಂಹನನ** ವಜ್ರದಂತೆ ದೃಢವಾದ ಶರೀರ ಮತ್ತು ಬಲ **ವಯ** ಯೌವನ **ಮೋದ** ಸಾಧಾರಣ ಸಂತೋಷ **ಪ್ರಮುದಿತ** ಅತಿಶಯ ಆನಂದ(ನೀರು ಕುಡಿದು ಆಗುವುದು ಮೋದ ಹಾಲು ಕುಡಿದರೆ ವ್ಯಾಮೋಹ)ವುಳ್ಳವರು **ಮಹಾಸೌರತನಿರತ** ಅತಿಶಯಿತ ಸುರತಕ್ರಿಯೆಯಲ್ಲಿ ನಿರತರಾದ **ನರವರಾವರೋಧ** ರಾಜರು ಮತ್ತು ಅವರ ಹೆಂಡತಿಯರಂತಿರುವ ಅಥವಾ ರಾಜಯೋಗ್ಯಮನೆಗಳಲ್ಲಿರುವ ಮಿಥುನ ಗಂಡು ಹೆಣ್ಣುಗಳ **ವ್ಯವಾಯಾಪವರ್ಗ** ಸಂಭೋಗ ಕಾಲ ಮುಗಿದ ಮೇಲೆ




**ಧೃತೈಕಗರ್ಭಕಲತ್ರಾಣಾಂ** ಒಂದೇ ಒಂದು ಗರ್ಭವನ್ನು ಧರಿಸುವ ಹೆಂಡತಿಯರುಳ್ಳ **ದೇವಕಲ್ಪಾನಾಂ** ದೇವತೆಗಳಿಗೆ ಸಮಾನರಾದ **ಪುರುಷಾಣಾಂ** ಪುರುಷರಿಗೆ **ತ್ರೇತಾಯುಗಸಮಃ** ತ್ರೇತಾಯುಗಕ್ಕೆ ಸಮಾನವಾದ **ಕಾಲಃ** ಕಾಲವು **ವರ್ತತೇ** ಇರುವುದು.

ವಿ.ವಿ :-ಇಲ್ಲಿ ಈ ವರ್ಷದಜನರಿಗೆ ತ್ರೇತಾಯುಗಸಮಾನವಾದ ಆಯುಷ್ಯವಿರುವುದು ಎಂದು ತೋರುವುದು. ಆದರೆ ಅದು ಪ್ರಮಾಣವಿರುದ್ಧ. ಕಾರಣ ಇಲ್ಲಿ ತ್ರೇತಾಯುಗದಂತೆ ವಿಷಯಸುಖಾಧಿಕ್ಯವಿರುವುದರಿಂದ ತ್ರೇತಾಯುಗದಂತೆ ಎಂದಿರುವರು ಎಂದು ತಿಳಿಯಬೇಕು. ತ್ರೇತಾಯುಗದಲ್ಲಿ ವಿಷಯಸುಖ. ಕೃತಯುಗದಲ್ಲಿ ಎಲ್ಲರೂ ಧ್ಯಾನ ಪರರು. ದ್ವಾಪರದಲ್ಲಿ ದುಃಖಾಧಿಕ್ಯ ಹೀಗೆ ಯುಗಾನುಗುಣವಾಗಿ ಇರುವುದೇ ಹೊರತು ಈ ವರ್ಷದಜನರಿಗೆ ತ್ರೇತಾಯುಗದಷ್ಟು ಆಯುಷ್ಯವೆಂದಲ್ಲ. ತ್ರೇತಾಯುಗದ ಪ್ರಮಾಣ ಮನುಷ್ಯಮಾನರೀತ್ಯಾ ಹನ್ನೆರಡು ಲಕ್ಷ ಒಂಬತ್ತು ಸಾವಿರ ವರ್ಷ ಇರುವುದು. ಇವರ ಆಯುಷ್ಯ ಹತ್ತು ಸಾವಿರ ವರ್ಷವೆಂದು ಮೇಲೆ ಹೇಳಿದೆಯಷ್ಟೇ!

ಸ್ತ್ರೀಯರು ಬಹುಗರ್ಭಧಾರಣ ಮಾಡಿದರೆ ದೇಹ ಶಿಥಿಲವಾಗಿ ಹೆಂಡತಿಯರ ಯೌವನ ಹಾಳಾಗಿ ಸಂಭೋಗ ಸುಖ ಕೆಡುವುದೆಂಬ ಭಯದಿಂದ ಆದರ ಕೊನೆಯಲ್ಲಿ ಮಾತ್ರ ಸಂತತಿತಾಗಿ (ಆಯುಷ್ಯದ ಒಂದು ವರ್ಷ ಉಳಿದಾಗ) ಒಂದೇ ಗರ್ಭವನ್ನು ಅಲ್ಲಿಯ ಜನರು ಧರಿಸುವರು ಎಂದು ವದಂತಿಯುಂಟು.

**ಯತ್ರ ಹ ವೇದಪತಯಃ ಸ್ವೈಃ ಸ್ವೈರ್ಗಣನಾಯಕೈರ್ವಿಹಿತಮಹಾರ್ಹಣಾಃ ಸರ್ವರ್ತುಕುಸುಮಸ್ತಬಕಫಲಕಿಸಲಯಶ್ರಿಯಾ ಆನಮ್ಯಮಾನವಿಟಪಲತಾವಿಟಪಿಭಿರುಪಶೋಭಮಾನರುಚಿರಕಾನನಾಶ್ರಮಾಯತನವರ್ಷಗಿರಿದ್ರೋಣೀಷು ತಥಾ ಚ ಅಮಲಜಲಾಶಯೇಷು ವಿಕಚವಿವಿಧವನರುಹಾಮೋದಮುದ-ಮುದಿತರಾಜಹಂಸ ಜಲಕುಕ್ಕುಟಕಾರಂಡವಸಾರಸಚಕ್ರವಾಕಾದಿಭಿರ್ಮಧು-ಕರನಿಕರಾ(ಕೂ)ರುತಿ ಭಿರುಪಕೂಜಿತೇಷು ಜಲಕ್ರೀಡಾಭಿರ್ವಿವಿಧವಿನೋದೈಃ ಸುಲಲಿತಸುರಸುಂದರೀಣಾಂ ಕಾಮಕಲಿಲವಿಲಾಸಹಾಸಲೀಲಾವಲೋಕಾಕೃಷ್ಟಮನೋದೃಷ್ಟಯಃ ಸ್ವೈರಂ ಕಿಲ ವಿಹರಂತಿ ॥೧೨॥**

**ಯತ್ರ ಹ** ಯಾವ ಈ ಎಂಟು ಖಂಡಗಳಲ್ಲಿ **ಸ್ವೈಃ ಸ್ವೈಃ** ತಮ್ಮ ತಮ್ಮ **ಗಣನಾಯಕೈಃ** ಸೇವಕ ಸಮೂಹಗಳ ಮುಖ್ಯಸ್ಥರಿಂದ **ಏಹಿತಮಹಾರ್ಹಣಾಃ** ಸಮರ್ಪಿಸಲ್ಪಟ್ಟ ದಿವ್ಯಮಾಲೆ, ಗಂಧ ಮುಂತಾದ ಉಪಚಾರಗಳಿಂದ ಪೂಜಿತರಾಗಿ **ದೇವಪತಯಃ** ದೇವಶ್ರೇಷ್ಠರು **ಸುಲಲಿತ** ಚೆನ್ನಾಗಿ ಸಿಂಗರಿಸಿಕೊಂಡ **ಸುರಸುಂದರೀಣಾಂ** ದೇವಸುಂದರೀಯರ **ಕಾಮಕಲಿಲ** ಮನ್ಮಥವಿಕಾರದಿಂದ ಕೂಡಿದ **ವಿಲಾಸ** ಶೃಂಗಾರಚೇಷ್ಟೆ **ಹಾಸ** ಮುಗುಳು ನಗೆ **ಲೀಲಾವಲೋಕ** ಜಿಡಿಗಿನ ನೋಟ ಇವುಗಳಿಂದ **ಆಕೃಷ್ಟಮನೋದೃಷ್ಟಯಃ(ಸಂತಃ)** ಆಕರ್ಷಿಸಲ್ಪಟ್ಟಮನಸ್ಸು ಮತ್ತು ದೃಷ್ಟಿಯುಳ್ಳವರಾಗಿ **ಸರ್ವರ್ತು** ಎಲ್ಲ ಋತುಗಳಲ್ಲಿಯೂ ಬಿಡುವ **ಕುಸುಮಸ್ತಬಕ** ಹೂ ಗೊಂಚಲು **ಫಲ** ಹಣ್ಣುಗಳ **ಕಿಸಲಯ** ಚಿಗುರು ಇವುಗಳ **ಶ್ರಿಯಾ** ಸಮೃದ್ಧಿಯಿಂದ **ಆನಮ್ಯಮಾನ** ಅತಿಯಾಗಿ ಬಾಗಿದ **ವಿಟಪ** ಕೊಂಬೆಗಳು **ಲತಾ** ಕೊಂಬೆಯನ್ನು ಆಶ್ರಯಿಸದ ಬಳ್ಳಿಗಳೂ ಉಳ್ಳ **ಅವಿಟಪಿಭಿಃ** ಭಾರತ ವರ್ಷದ ಮರಗಳಿಗಿಂತ ವಿಲಕ್ಷಣಗಳಾದ ಹೆಮ್ಮರಗಳಿಂದ **ಉಪಶೋಭಮಾನ** ಶೋಭಿಸುತ **ರುಚಿರಕಾನನ** ಮನೋಹರವನಗಳೆಂಬ ಅಥವಾ ವನಗಳುಳ್ಳ **ಆಶ್ರಮಾಯತನ** ಆಶ್ರಮಗಳಲ್ಲಿ, ನಿವಾಸ (ಮನೆ)ಗಳಲ್ಲಿ (ಆಶ್ರಮಳೆಂಬ ನಿವಾಸಗಳಲ್ಲಿ), **ವರ್ಷಗಿರಿದ್ರೋಣಿಷು** ಆ ಖಂಡಗಳ ಪರ್ವತಗಳ ಕಣಿವೆಗಳಲ್ಲಿ **ತಥಾ ಚ** ಹಾಗೆಯೇ **ವಿಕಚ** ಅರಳಿದ **ವಿವಿಧವನರುಹ** ಅನೇಕ ಬಗೆಯ ಕಮಲಗಳ **ಆಮೋದ** ವಾಸನೆಯಿಂದ ಉಂಟಾದ **ಮದ** ಮತ್ತತೆಯಿಂದ **ಮುದಿತ** ಸಂತುಷ್ಟವಾದ **ರಾಜಹಂಸ** ಕೆಂಪು ಕೊಕ್ಕು ಕಾಲುಳ್ಳ ಹಂಸಪಕ್ಷಿ ಕಲಹಂಸ (ದೊಡ್ಡ ಜಾತಿಯ ಹಂಸಪಕ್ಷಿ) **ಜಲಕುಕ್ಕುಟ** ನೀರುಕೋಳಿಗಳು **ಕಾರಂಡವ** ಬಕಪಕ್ಷಿಗಳು **ಸಾರಸ** ನೀರುಹಕ್ಕಿ **ಚಕ್ರವಾಕ** ಈ ಹೆಸರಿನ ಪಕ್ಷಿಗಳು **ಆದಿಭಿಃ** ಇವೇ ಮೊದಲಾದವುಗಳಿಂದಲೂ **ಮಧುಕರನಿಕರ** ದುಂಬಿಗಳ ಸಮೂಹದ **ಅರುತುಭಿಃ** ಝೇಂಕಾರಗಳಿಂದಲೂ **ಉಪಕೂಜಿತೇಷು** ಧ್ವನಿತಗಳಾದ **ಅಮಲಜಲಾಶಯೇಷು** ನಿರ್ಮಲ ನೀರಿನ ಸರೋವರಗಳಲ್ಲಿ **ಜಲಕ್ರೀಡಾಭಿಃ** ಜಲಕ್ರೀಡೆ ಮುಂತಾದ **ವಿವಿಧ ವಿನೋದೈಃ** ಅನೇಕ ಬಗೆಯ ಆಟಪಾಟಗಳಿಂದ **ಸ್ವೈರಂ** ಮನ ಬಂದಂತೆ **ವಿಹರಂತಿ ಕಿಲ** ವಿಹಾರ ಮಾಡುವರಷ್ಟೇ! ಇದು ಪ್ರಸಿದ್ಧವು. ॥

ಒಂಬತ್ತು ಖಂಡಗಳಲ್ಲಿ ವಾಸಿಸುವ ಜನರು ಮೈಥುನ ಮುಂತಾದ ಕರ್ಮದಿಂದಲೇ ಕಾಲಕಳೆಯುವರೆಂದಲ್ಲ. ಶ್ರೀಹರಿಯ ಪೂಜೆಯಿಂದಲೂ ಕಾಲಕಳೆಯುವರೆಂಬ ಅಭಿಪ್ರಾಯದಿಂದ ಹೇಳುತ್ತಾರೆ.




**ನವಸ್ವಪಿ ವರ್ಷೇಷು ಭಗವಾನ್ನಾರಾಯಣೋ ಮಹಾಪುರುಷಃ ಪುರುಷಾಣಾಮನುಗ್ರಹಾಯ ಆತ್ಮತತ್ವವ್ಯೂಹೇನಾದ್ಯಾಪಿ ಸನ್ನಿಧೀಯತೇ ॥೧೩॥**

**ನವಸ್ವಪಿ ವರ್ಷೇಷು** ಒಂಭತ್ತು ಖಂಡಗಳಲ್ಲಿಯೂ **ಮಹಾಪುರುಷಃ** ಶ್ರೀಹರಿಯು **ಪುರುಷಾಣಾಂ** ಅಲ್ಲಲ್ಲಿ ವಾಸಿಸುವ ಜನರನ್ನು **ಅನುಗ್ರಹಾಯ** ಅನುಗ್ರಹಿಸಲು **ಆತ್ಮತತ್ವವ್ಯೂಹೇನ** ತನ್ನ ಅನಾರೋಪಿತ ಒಂಬತ್ತು ಮೂರ್ತಿಗಳ (ರೂಪಗಳ) ಸಮೂಹದಿಂದ **ಅದ್ಯಾಪಿ** ಇಂದಿಗೂ **ಸನ್ನಿಧೀಯತೇ** ಸನ್ನಿಹಿತನಾಗಿರುವನು (ಆ ಆ ಖಂಡದವರಿಂದ ಪೂಜಿತನಾಗುವನು) **ತತ್ತ್ವ** ಎಂದು ಹೇಳಿದ್ದರಿಂದ ಈ ರೂಪಗಳು ಮಾಯಾಕಲ್ಪಿತಗಳೆಂಬ ಮತವನ್ನು ನಿರಾಸೆ ಮಾಡಿರುವರೆಂದು ತಿಳಿಯಬೇಕು ॥೧೩॥

ಇಲಾವೃತ ಖಂಡದಲ್ಲಿ ವಿಶೇಷವಿದೆಯೆಂದು ಹೇಳುತ್ತಾರೆ. ಒಂಭತ್ತು ಖಂಡಗಳಲ್ಲಿಯೂ ಸನ್ನಿಹಿತವಾದ ರೂಪಗಳನ್ನೂ ಅವುಗಳನ್ನು ಉಪಾಸಿಸುವವರನ್ನೂ ಕ್ರಮವಾಗಿ ಹೇಳುತ್ತಾರೆ

**ಇಲಾವೃತೇ ತು ಭಗವಾನ್ ಭವ ಏಕ ಏವ ಪುಮಾನ್ ನಹ್ಯನ್ಯಸ್ತತ್ರ ನಿವಿಶತಿ ಭವಾನ್ಯಾಃ ಶಾಪನಿಮಿತ್ತತಃ ಯತ್ರವಿಶ್ಯ ಸ್ತ್ರೀಭಾವಸ್ತತ್ಪಶ್ಚಾದ್ವಕ್ಷ್ಯಾಮಃ ॥೧೪॥**

**ಇಲಾವೃತೇಷು** ಇಲಾವೃತ ಖಂಡದಲ್ಲಿಯಾದರೂ **ಭಗವಾನ್** ಪೂಜ್ಯರಾದ **ಭವಃ ಏಕ ಏವ** ರುದ್ರದೇವರೊಬ್ಬರೇ **ಪುಮಾನ್** ಗಂಡಸರು **ಭವಾನ್ಯಾಃ** ರುದ್ರಪತ್ನಿ ಪಾರ್ವತಿಯ **ಶಾಪನಿಮಿತ್ತತಃ (ಜ್ಞಃ)** ಶಾಪವಿರುವಕಾರಣದಿಂದ (ವನ್ನುತಿಳಿದ) **ಅನ್ಯಃ** ಬೇರೊಬ್ಬ ಪುರುಷನು **ತತ್ರ** ಆ ಖಂಡದಲ್ಲಿ **ನ ನಿವಿಶತಿ** ಪ್ರವೇಶಿಸುವುದಿಲ್ಲ **ಯತ್ ಪ್ರವಿಶ್ಯ** ಯಾವಸ್ಥಳವನ್ನು ಪ್ರವೇಶಿಸಿ **ಸ್ತ್ರೀಭಾವಃ** ಸ್ತ್ರೀತ್ವಬರುವುದೋ ಸ್ತ್ರೀಯಾಗುವನೋ **ತತ್** ಆ ಕಥೆಯನ್ನು, ಸ್ಥಳವನ್ನು **ಪಶ್ಚಾತ್** ಒಂಬತ್ತನೇ ಸ್ಕಂಧದಲ್ಲಿ **ವಕ್ಷ್ಯಾಮಃ** ಹೇಳುವೆವು. ॥೧೪॥

**ಭವಾನೀನಾಥೈಃ ಸ್ತ್ರೀಗಣಾರ್ಬುದಸಹಸ್ರೈರವರುಧ್ಯಮಾನೋ ಭಗವತ-ಶ್ಚತುರ್ಮೂರ್ತೇರ್ಮಹಾಪುರುಷಸ್ಯ ತುರೀಯಾಂ ತಾಮಸೀಂ ಮೂರ್ತಿಂ ಪ್ರಕೃತಿಮಾತ್ಮನಃ ಸಂಕರ್ಷಣಸಂಜ್ಞಾಂ ಆತ್ಮಸಮಾಧಿರೂಪೇಣ ಸನ್ನಿಧಾಯ ತ್ವೈತದಭಿಗೃಣನ್ ಭವ ಉಪಧಾವತಿ ॥೧೫॥**

**ಭವಾನೀನಾಥೈಃ** ಪಾರ್ವತಿಯೇ ನಾಯಕಿಯಾಗಿಯುಳ್ಳ **ಸ್ತ್ರೀಗಣಾರ್ಬುದಸಹಸ್ರೈಃ** ಸಾವಿರ ಹತ್ತುಕೋಟಿ ಸ್ತ್ರೀಸಮೂಹಗಳಿಂದ **ಅವರುಧ್ಯಮಾನಃ** ಸೇವಿತನಾದ **ಭವಃ** ರುದ್ರದೇವರು **ಭಗವತಃ ಚತುರ್ಮೂರ್ತೇಃ** ಪರಮಪೂಜ್ಯನಾದ ವಾಸುದೇವ ಪ್ರದ್ಯುಮ್ನ ಅನಿರುದ್ಧ ಸಂಕರ್ಷಣ ಎಂಬ ನಾಲ್ಕು ರೂಪವುಳ್ಳ **ಮಹಾಪುರುಷಸ್ಯ** ಪುರುಷೋತ್ತಮನಾದ ಶ್ರೀಮನ್ನಾರಾಯಣನ **ತುರೀಯಾಂ** ನಾಲ್ಕನೆಯದಾದ **ತಾಮಸೀಂ** ಸಂಹಾರಕ್ಕೆ ಕಾರಣವಾದ ತಮೋಗುಣವನ್ನು ಪ್ರೇರಿಸುವ **ಆತ್ಮನಃ ಪ್ರಕೃತಿಂ** ತನಗೆ ಕಾರಣವಾದ **ಸಂಕರ್ಷಣಸಂಜ್ಞಾಂ** ಸಂಕರ್ಷಣ ಎಂಬ ಹೆಸರಿನ ಮೂರ್ತಿಯನ್ನು **ಆತ್ಮಸಮಾಧಿರೂಪೇಣ** ಮನಸ್ಸಿನ ಏಕಾಗ್ರತೆ ಎಂಬ ಧರ್ಮದಿಂದ **ಸನ್ನಿಧಾಯ** ಸನ್ನಿಹಿತವಾಗಿ ಮಾಡಿಕೊಂಡು **ಏತತ್** ಮುಂದೆ ಹೇಳುವಂತೆ **ಅಭಿಗೃಣನ್** ಜಪಿಸುತ್ತ **ಉಪಧಾವತಿ** ಉಪಾಸಿಸುತ್ತಿರುವರು. ।।೧೫।।

ರುದ್ರದೇವರು ಜಪಿಸುವ ಮಂತ್ರವನ್ನು ಹೇಳುತ್ತಾರೆ

**ಭವ ಉವಾಚ - ಓಂ ನಮೋ ಭಗವತೇ ಮಹಾಪುರುಷಾಯ ಸರ್ವಗುಣ ಸಂಖ್ಯಾತಾಯಾನಂತಾಯಾವ್ಯಕ್ತಾಯ ನಮಃ ಇತಿ ।।೧೬।।**

ಈ ಮಂತ್ರದಲ್ಲಿ ಅನಂತಾಯ ಎಂದು ಹೇಳಿದ್ದರಿಂದ ಶೇಷದೇವರಲ್ಲಿ ಸನ್ನಿಹಿತನಾದ ಶೇಷಾಂತರ್ಯಾಮಿ ಸಂಕರ್ಷಣನೂ ಶೇಷದೇವರೂ ಇಬ್ಬರೂ ರುದ್ರದೇವರಿಂದ ಉಪಾಸ್ಯರೆಂದು ಸೂಚಿತವಾಗಿರುವುದು. ಆದ್ದರಿಂದ ಈ ಮಂತ್ರದಿಂದ ಪ್ರಾರಂಭಿಸಿ ಮುಂದೆ ಸ್ತೋತ್ರದಲ್ಲೆಲ್ಲ ಇಬ್ಬರಿಗೂ ಅನ್ವಯಿಸುವಂತೆ ಅರ್ಥಮಾಡಲು ಸಾಧ್ಯವಿದ್ದಲ್ಲಿ ಎರಡರ್ಥವನ್ನು ಹೇಳಿರುವರೆಂದು ತಿಳಿಯಬೇಕು. ರುದ್ರದೇವರು ಶೇಷದೇವರಿಗೆ ಯೋಗ್ಯತೆಯಲ್ಲಿ ಸಮಾನರಾದರೂ ಪದವೀನಿಮಿತ್ತ ಆಧಿಕ್ಯವಿದ್ದುದರಿಂದ ಸ್ತುತಿಸುವುದು ಯುಕ್ತವೇ ಆಗಿದೆ.

**ಭಗವತೇ** (೧) ಸಮಗ್ರೈಶ್ವರ್ಯ ಸಂಪನ್ನನಾದ (೨) ಪೂಜ್ಯರಾದ **ಮಹಾಪುರುಷಾಯ** (೧) ಸರ್ವೋತ್ತಮನಾದ (೨) ರುದ್ರಾದಿದೇವತೆಗಳಿಗಿಂತ ಶ್ರೇಷ್ಠರಾದ **ಸರ್ವಗುಣಸಂಖ್ಯಾತಾಯ** (೧) ಸಮಸ್ತಗುಣಗಳಿಂದ ಅಭಿನ್ನ ಗುಣಸ್ವರೂಪನೆಂದು **ವಿಜ್ಞಾನಮಾನಂದಂ ಬ್ರಹ್ಮ** ಮೊದಲಾದ ಶ್ರುತಿಗಳಲ್ಲಿ ಪ್ರಸಿದ್ಧನಾದ (೨) ತಮಗೆ ಯೋಗ್ಯಗಳಾದ ಸಾವಧಿಕಗುಣಸ್ವರೂಪರೆಂದು ಶಾಸ್ತ್ರಗಳಲ್ಲಿ ಪ್ರಖ್ಯಾತರಾದ **ಅವ್ಯಕ್ತಾಯ** ತಮ್ಮ ಅನುಗ್ರಹವಿಲ್ಲದೇ ಭಕ್ತರಿಗೆ




ಕಾಣದಿರುವ (ಇದು ಇಬ್ಬರಿಗೂ ಸಮಾನ) **ಓಂ** ಪ್ರಣವ ಪ್ರತಿಪಾದ್ಯನಾದ **ಅನಂತಾಯ** (೧) ಮೂರು ದೇಶಕಾಲಗುಣಗಳಿಂದ ಅಂತವಿಲ್ಲದ ಶೇಷಾಂತರ್ಯಾಮಿ ಶಂಕಷಣನಿಗೆ (೨) ಅನಂತನೆಂದು ಕರೆಸಿಕೊಳ್ಳುವ ಶ್ರೀಹರಿಗೆ ಪ್ರತಿಮೆಯಾದ ಶೇಷದೇವರಿಗೆ **ನಮೋ ನಮಃ** ಪುನಃ ಪುನಃ ನಮಸ್ಕಾರ ಎಂದು ಹೇಳುವರು.

ಇಲ್ಲಿ ಕೇವಲ ಸಂಕರ್ಷಣ ನಾಮಕ ಶ್ರೀಹರಿಯೇ ರುದ್ರದೇವರಿಂದ ಧ್ಯಾನಮಾಡಲ್ಪಡುವನು ಎಂದರೆ ಮುಂದೆ 'ನಾಗವದ್ವಃ' ಮುಂತಾಗಿ ಮಾಡುವ ವಿಶೇಷ ಸ್ತೋತ್ರವು ಅಸಂಗತವಾಗುವುದು ಕಾರಣ ಶೇಷಾಂತರ್ಯಾಮಿ ಸಂಕರ್ಷಣನು ರುದ್ರದೇವರಿಂದ ಧ್ಯಾನಿಸಲ್ಪಡುವನು ಎಂದು ವಿವಕ್ಷಿತವಾಗಿದೆ ಎಂಬ ಅಭಿಪ್ರಾಯದಿಂದ ಸಮಾಖ್ಯಾಪ್ರಮಾಣ ಹೇಳುವರು

**ತಾತ್ಪರ್ಯ** -''ಅನಂತಾಂತಃ ಸ್ಥಿತೋ ವಿಷ್ಣುರನಂತಶ್ಚ ಸಹಾಮುನಾ ।
ಪೂಜ್ಯತೇ ಗಿರಿಶೇನೇಶ ಇಲಾವೃತಗತೇನ ತು' ಇತಿ ಚ ॥
ಜೀವವ್ಯಪೇಕ್ಷಯಾ ಚೈವ ತಥಾಂತರ್ಯಾಮ್ಯಪೇಕ್ಷಯಾ ।
ಮಿಶ್ರಾಸ್ತು ಸ್ತುತಯೋ ಜ್ಞೇಯಾ ವಿಷ್ಣೋರನ್ಯತ್ರ ಕೇವಲಂ ॥ ಇತಿ ಚ ।

ಈ ಪ್ರಮಾಣವು ಇಲಾವೃತದಲ್ಲಿರುವ ರುದ್ರದೇವರಿಂದ ಶೇಷನಲ್ಲಿ ಅಂತರ್ಗತನಾದ ಶ್ರೀವಿಷ್ಣುವು ಅವನಿಗೆ ಅಧಿಷ್ಠಾನನಾದ ಶೇಷನು ಕೂಡ ಪೂಜಿಸಲ್ಪಡುತ್ತಾರೆ ಎಂದು ತಿಳಿಸುತ್ತ ಈ ವಿಷಯವನ್ನೇ ಪುಷ್ಟೀಕರಿಸುತ್ತಿರುವುದು. ಹಾಗಾದರೆ ಮುಂದೆ ಬರುವ **ಭವಾಪಹರಂ** ಮೊದಲಾದ ಶ್ರೀಹರಿಗೆ ಮಾತ್ರ ಅನ್ವಯಿಸುವ ವಿಶೇಷಣ ಪದಗಳನ್ನು ಶೇಷದೇವರಿಗೆ ಹೇಗೆ ಅನ್ವಯಿಸುವರು ಎಂದರೆ ಮುಂದಿನ ವಾಕ್ಯಾನುಸಾರ ಮಿಶ್ರವಾದಸ್ತೋತ್ರಗಳು ಮಾತ್ರ ಅಮುಖವೃತ್ತಿಯಿಂದ ಅಧಿಷ್ಠಾನನಾದ ಜೀವನನ್ನೂ ಮುಖ್ಯವೃತ್ತಿಂಯಿಂದ ಅಂತರ್ಯಾಮಿ ಶ್ರೀಹರಿಯನ್ನು ಹೇಳುವವು. ಅಮಿಶ್ರಸ್ತುತಿಗಳು ವಿಷ್ಣುವನ್ನೇ ಪ್ರತಿಪಾದಿಸುವವು ಎಂದು ತಿಳಿಯಬೇಕು. ಇದರಂತೆ ಮುಂದಿನ ಭಾಗಗಳು ಹಿಂದೆ ಹೇಳಿದ ಪ್ರಮಾಣಾನುಸಾರ ಮಿಶ್ರಸ್ತುತಿಗಳಾದ್ದರಿಂದ ಅವುಗಳಿಗೆ ಅಮುಖ್ಯವೃತ್ತಿಯಿಂದ ಶೇಷದೇವರಲ್ಲಿಯೂ ಅನ್ವಯವಿದೆ ಎದು ತಿಳಿಯಬೇಕು. ॥೧೬॥

ರುದ್ರದೇವರು ಮಾಡಿದ ಸ್ತುತಿಯನ್ನು ತಿಳಿಸುವರು

**ಭಜೇ ಭಜನ್ಯಾರುಣಪಾದಪಂಕಜಂ**
**ಭಗಸ್ಯ ಕೃತ್ಸ್ನಸ್ಯ ಪರಂ ಪರಾಯಣಮ್ ।**
**ಭಕ್ತೇಷ್ವಲಂಭಾವಿತಭೂತಭಾವನಂ**
**ಭವಾಪಹಂ ತ್ವಾಂ ಭವಭಾವಮೀಶ್ವರಮ್ ॥೧೭॥**

**ಹೇ ಭಕ್ತೇಷ್ವಲಂಭಾವಿತ** ಭಕ್ತರಿಂದ ಅತಿಶಯವಾಗಿ ಧ್ಯಾನಮಾಡಲ್ಪಡುವವನೇ ವಶೀಕೃತನೇ, ಭಕ್ತರಲ್ಲಿ ನಿತ್ಯತೃಪ್ತನಾಗಿರುವವನೇ **ಭಗಸ್ಯ** ಸೇವಿಸಲು ಯೋಗ್ಯವೂ **ಅರುಣ** ಕೆಂಪೂ ಆದ **ಪಾದಪಂಕಜಂ** ಪಾದಕಮಲವುಳ್ಳ **ಕೃತ್ಸ್ನಸ್ಯ** ಸಮಸ್ತವಾದ **ಭಗಸ್ಯ** ಐಶ್ವರ್ಯಾದಿಗುಣಗಳಿಗೆ **ಪರಂ** ಅತ್ಯುತ್ತಮವಾದ **ಪರಾಯಣಂ** ಮುಖ್ಯಾಶ್ರಯನಾದ **ಭೂತಭಾವನಂ** ಎಲ್ಲ ಪ್ರಾಣಿಗಳಿಗೆ ಜನಕನಾದ **ಭವಾಪಹಂ** ಭಕ್ತರ ಸಂಸಾರವನ್ನು ನಾಶಮಾಡುವ **ಭವಂ ಅಪಜಹಾತಿ ತ್ಯಜತೀತಿ ಭವಾಪಹಃ ತಂ** ಎಂದು ಸಂಸಾರವೇ ಇಲ್ಲದೇ ನಿತ್ಯಮುಕ್ತನಾದ **ಭವಭಾವಂ** ಪುಣ್ಯವೆಂಬ ಮಂಗಳವನ್ನು ಉತ್ಪಾದಿಸುವ, ಅಭಕ್ತರಿಗೆ ಸಂಸಾರವನ್ನು ಕೊಡುವ **ಈಶ್ವರಂ** ಸರ್ವಸಮರ್ಥನಶೀಲನಾದ **ತ್ವಾಂ** ನಿನ್ನನ್ನು **ಭಜೇ** ಸೇವಿಸುವೆನು.

ಶೇಷದೇವರ ಪರವಾಗಿ ಹೇಳುವಾಗ ಅಮುಖ್ಯವೃತ್ತಿಯಿಂದ ಅವರಿಗೆ ಯೋಗ್ಯವಾದ ಅರ್ಥವನ್ನು ಅನ್ವಯಿಸಿಕೊಳ್ಳಬೇಕು. ಅಥವಾ **ಭೂತಭಾವನಂ** ಕಳೆದ, ಮುಂಬರುವ, ಇಂದಿನ, ಅತೀತ, ಅನಾಗತ, ವರ್ತಮಾನ ಜಗತ್ತಿಗೆ ಜನಕನಾದ, **ಭವಾಪಹಂ** 'ಭವತಿ ಪ್ರಭವತಿ ಉತ್ಪದ್ಯತೇ ಇತಿ ಭವಃ ಜಗತ್ ತಸ್ಯ ಅಪಹರ್ತಾರಂ ಸಂಹಾರ್ತಾರಂ' ಅಂದರೆ ಜಗತ್ತನ್ನು ಸಂಹರಿಸುವ ಎಂದರ್ಥ. ಕೇವಲ ಉತ್ಪಾದಕನಲ್ಲ ಸಂಹಾರಕನೂ ಎಂದೂ ಭಾವ. ಅಥವಾ **ಭಕ್ತೇಷ್ವಲಂಭಾವಿತಭೂತಭಾವನಂ** ಭಕ್ತರಲ್ಲಿ ಬಹಳವಾಗಿ ಪ್ರಕಟಿತವಾದ ಸಚ್ಚೇತನರ ಸಂರಕ್ಷಕರೂಪವುಳ್ಳ 'ಭೂತಾನಾಂ ಸಚ್ಚೇತನಾನಾಂ ಭಾವನಂ ಸಂರಕ್ಷಣಂ ಯಸ್ಮಾತ್ ಸಃ ಭೂತಭಾವನಃ' ಅಥವಾ 'ಭೂತಾನಾಂ ಭಾವಾನ್ ಬುಧ್ಯಾದಿಧರ್ಮಾನ್ ನಯತೀತಿ ಭೂತಭಾವನಃ' ಎಂದರೆ ಜನರಿಗೆ ಗೀತೆಯಲ್ಲಿ ಹೇಳಿದ ಬುದ್ಧಿ, ಜ್ಞಾನ, ಅಸಂಮೋಹ, ಕ್ಷಮಾ, ಸತ್ಯ, ದಮ, ಶಮ, ಸುಖ, ದುಃಖ, ಭವ, ಅಭವ, ಭಯ, ಅಭಯ, ಅಹಿಂಸಾ, ಸಮತಾ, ತುಷ್ಟಿ, ತಪ, ದಾನ, ಯಶ, ಅಯಶ ಎಲ್ಲವನ್ನು ಕೊಡುವ ಎಂದರ್ಥ.




ಇಲ್ಲಿ ವಿಜಯಧ್ವಜತೀರ್ಥರು ಹೀಗೂ ಅನ್ವಯ ತೋರಿಸಿರುವರು. **ಭಕ್ತೇಷು** ನಿಮ್ಮ ಸೇವಕರಲ್ಲಿ **ಭಾವಿತ** ಸಂಪೂರ್ಣಾನುಗ್ರಹವೆಂಬ ವಿತ್ತವುಳ್ಳ ಶೇಷದೇವರೇ **ಈ ಭಜನ್ಯಾರುಣಪಾದಪಂಕಜಂ** ಲಕ್ಷ್ಮೀದೇವಿಯಿಂದ ಸೇವಿಸಲ್ಪಡುವ ಕೆಂಪುಪಾದ ಪದ್ಮವುಳ್ಳ **ಕೃತ್ಸ್ನಸ್ಯ ಭಗಸ್ಯ** ಬ್ರಹ್ಮಾದಿಸಕಲಚೇತನರಲ್ಲಿರುವ ಸೌಭಾಗ್ಯದ **ಪರಂ ಪರಾಯಣಂ** ತಾರತಮ್ಯಕ್ಕೆ ಆಶ್ರಯನಾದ **ತ್ವಾಂ** ನಿನ್ನ ಅಂತರ್ಯಾಮಿಯಾದ ಆದ್ದರಿಂದಲೇ **ಪರಂ** ನಿಮಿಗಿಂತ ಉತ್ತಮನಾದ ಸಂಕರ್ಷಣನನ್ನು **ಭಜ** ಸೇವಿಸಿರಿ.

ಈ ಯೋಜನೆಯಲ್ಲಿ **ಭಜೇ ಭಜನ್ಯಾ** ಎಂಬಲ್ಲಿ **ಭಜ ಈ ಭಜನ್ಯಾ** ಎಂದೂ **ಪರಂ ಪರಾಯಣಂ** ಎಂಬಲ್ಲಿ **ಪರಂಪರಾ ಆಯನಂ** ಎಂದು ಪದಗಳನ್ನು ಬಿಡಿಸಬೇಕು. ಉಳಿದದ್ದೆಲ್ಲ ಹಿಂದಿನಂತೆ. **ಭಜನ್ಯಾರಣ** ಎಂಬ ಪಾಠದಲ್ಲಿ ಉಪಾಸ್ಯವಾದ ಪ್ರಾಪ್ಯವಾದ ಎಂದರ್ಥ ಅಥವಾ **ಹೇ ಭಜಸ್ಯ** ಸೇವಕಸ್ಯ **ಅರಣ** ಶರಣ್ಯ ಎಂದರ್ಥ ಅಥವಾ ಭಜನ ಮಾಡುವವರು ಭಜನರು ಅವರನ್ನು ಯಾತಿ ಹೊಂದುವವನು ಅವರಲ್ಲಿ ಸನ್ನಿಹಿತನಾಗುವನು(ಣಿಜಂತ ಭಜನ ಶಬ್ದದ ಮೇಲೆ ತತ್ಕರೋತಿ ಎಂಬರ್ಥದಲ್ಲಿ ಕರ್ತರಿ ಕ್ವಿತ್ ಭಜನಾನ್ಯಾತೀತಿ ಭಜನ್ಯಃ ಎಂದು ವ್ಯುತ್ಪತ್ತಿ). ||೧೭||

ಜಗತ್ತಿನ ಸೃಷ್ಟಿಯಲ್ಲಿ ತೊಡಗಿರುವ ಶ್ರೀಹರಿಗೆ ಅವನ ಜ್ಞಾನಕ್ಕೆ ಪ್ರಕೃತಿಯ ಗುಣಸಂಪರ್ಕದಿಂದ ನಮ್ಮಂತೆ ವಿಕಾರವಾಗಿ ಅನೀಶ್ವರತ್ವ ಬರುವುದರಿಂದ ಸಕಲ ಐಶ್ವರ್ಯಾಶ್ರಯತ್ವವು ಹೇಗಿರಲು ಸಾಧ್ಯ? ಎಂದರೆ ಹೇಳುತ್ತಾರೆ

**ನ ಯಸ್ಯ ಮಾಯಾಗುಣಚಿತ್ತವೃತ್ತಿಭಿ**
**ನಿರೀಕ್ಷತೋ ಹ್ಯಣ್ವಪಿ ದೃಷ್ಟಿರಜ್ಯತೇ ।**
**ಈಶೋ ಯಥಾನೋऽಜಿತ ಮನ್ಯುರಂಹಸಾಂ**
**ಕಸ್ತಂ ನ ಮನ್ಯೇತ ಜಿಗೀಷುರಾತ್ಮನಃ** ||೧೮||

**ಯಥಾ** ಹೇಗೆ **ಅಜಿತಮನ್ಯುರಂಹಸಾಂ** ಕೋಪದ ವೇಗವನ್ನು ಗೆಲ್ಲದ **ನಃ** ನಮ್ಮ **ದೃಷ್ಟಿಃ** ಜ್ಞಾನವು **ಮಾಯಾಗುಣಚಿತ್ತವೃತ್ತಿಭಿಃ** ಪ್ರಕೃತಿಗುಣಗಳಿಂದ ನಿರ್ಮಿತಗಳಾದ ಶಬ್ದ ಮುಂತಾದವುಗಳಲ್ಲಿ ಸಂಬದ್ಧವಾದ ಮನೋವ್ಯಾಪಾರಗಳಿಂದ **ಅಜ್ಯತೇ** ತಿರೋಹಿತವಾಗುವುದೋ ತಥಾ ಹಾಗೆ **ನಿರೀಕ್ಷತಃ** ಜಗದುಪಾದಾನಾದಿ ಎಲ್ಲವನ್ನೂ ನೋಡುವ(ಸರ್ವಕರ್ತನಾದ) **ಈಶಃ** ದೋಷಗಳನ್ನು ನಿವಾರಿಸುವ ಸಾಮರ್ಥ್ಯವುಳ್ಳ ಪ್ರಕೃತಿಗುಣಗಳಿಗೆ ನಿಯಾಮಕನಾದ (ಈಟ್ ಶಬ್ದ ಷಷ್ಠೀ ಏಕವಚನ ) **ಯಸ್ಯ**

ಯಾವ ನಿನ್ನ **ದೃಷ್ಟಿಃ** ಸ್ವರೂಪಜ್ಞಾನವು **ಮಾಯಾಗುಣಚಿತ್ತವೃತ್ತಿಭಿಃ** ಪ್ರಕೃತಿನಿರ್ಮಿತ ಚಿತ್ತವ್ಯಾಪಾರದಿಂದ **ಅಣ್ವಪಿ** ಸ್ವಲ್ಪವೂ **ನ ಅಜ್ಯತೇ ಹಿ** ತಿರೋಹಿತವಾಗುವುದಿಲ್ಲವೋ ವಿಕಾರವುಳ್ಳದ್ದಾಗುವುದಿಲ್ಲವೋ **ತಂ ತ್ವಾಂ** ಅಂಥ ನಿನ್ನನ್ನು **ಆತ್ಮನಃ ಜಿಗೀಷುಃ** ಮನಸ್ಸನ್ನು ಗೆಲ್ಲ ಬಯಸುವ **ಕಃ** ಯಾವ ಅಧಿಕಾರಿಯು ತಾನೇ **ನ ಮನ್ಯೇತ** ಸೇವಿಸದಿರುವನು? ಎಲ್ಲರೂ ಸೇವಿಸುವರು. ಎಲ್ಲ ಇಂದ್ರಿಯಗಳಲ್ಲಿದ್ದು ಶಬ್ದಾದಿ ವಿಷಯಗಳಲ್ಲಿ ತೊಡಗುವಂತೆ ಮಾಡಿ ಜವಿಷಯಜ್ಞಾನವನ್ನು ತಂದುಕೊಟ್ಟು ಸುಖಪಡಿಸುವ ಮೂಲಕ ಪರಮೋಪಕಾರಿಯಾದ ಶ್ರೀಹರಿಯನ್ನು ಕೃತಘ್ನನನ್ನು ಬಿಟ್ಟು ಎಲ್ಲ ಸಜ್ಜನರು ಸೇವಿಸಿಯೇ ಸೇವಿಸುವರೆಂದು ತಾತ್ಪರ್ಯ.

ಶೇಷದೇವರ ಪಕ್ಷದಲ್ಲಿ ಮನೋನಿಯಾಮಕರಾಗಿ ಮನಸ್ಸಿನ ಚಿತ್ತವೃತ್ತಿ ಸಂಬಂಧವಿದ್ದರೂ ಶ್ರೀಹರಿಯ ಜ್ಞಾನವು ಅವರಿಗೆ ನಮ್ಮ ಹಾಗೆ ತಿರೋಹಿತವಾಗುವುದಿಲ್ಲವೆಂದು ತಾತ್ಪರ್ಯ. ಮನಸ್ಸನ್ನು ಜಯಿಸಬೇಕೆಂಬುವವರು ಅವರನ್ನು ಸೇವಿಸಲೇಬೇಕು. **ಹಿ** ಇದು ಪ್ರಮಾಣಪ್ರಸಿದ್ಧವೆಂದರ್ಥ. ॥೧೮॥

ಭಗವಂತನ ಜ್ಞಾನಕ್ಕೆ ಮಾಯಾಗುಣಚಿತ್ತವೃತ್ತಿಗಳಿಂದ ವಿಕಾರವಿಲ್ಲವೆಂದಾದರೇ ಮದ್ಯಪಾನದಿಂದ ಮತ್ತನಾದಂತೆ ಕಾಣುವುದು ಹೇಗೆ ಎಂದರೆ ಅದು ಭ್ರಾಂತಿ. ಸರ್ವಾಂತರ್ಯಾಮಿಯಾದ ಅತಿಸಮೀಪದಲ್ಲಿರುವ ಶ್ರೀಹರಿಯ ಸ್ವರೂಪಜ್ಞಾನವು ಸರಿಯಾದ ಜ್ಞಾನಿಗಳಿಗೆ ಆಗುವುದೇ ಹೊರತು ಬೇರೆಯವರಿಗೆ ಆಗಲಾರದು ಎಂದು ಹೇಳುತ್ತಾರೆ

**ಅಸಂದೃಶೋ ಯಃ ಪ್ರತಿಭಾತಿ ಮಾಯಯಾ**
**ಕ್ಷೀಬೇವ ಮಧ್ವಾಸವತಾಮ್ರಲೋಚನಃ ।**
**ನ ನಾಗವಧ್ವೋರ್ಹಣಮೀಶಿರೇ ಹ್ರಿಯಾ**
**ಯತ್ಪಾದಯೋಃ ಸ್ಪರ್ಶನಧರ್ಷಿತೇಂದ್ರಿಯಾಃ** ॥೧೯॥

ಇಲ್ಲಿ ವಿಭಕ್ತಿ ವಿಪರಿಣಾಮದಿಂದ ಅನ್ವಯ ವಿಜಯಧ್ವಜರ ಪ್ರಕಾರ ಹೀಗಿದೆ

**ಮಾಯಯಾ** ಶ್ರೀಹರಿಯ ಮೋಹಕಶಕ್ತಿಯಿಂದ **ಮಧ್ವಾಸವತಾಮ್ರವಿಲೋಚನಸ್ಯ** ಗಿಡದಲ್ಲಿ ರಂಧ್ರಮಾಡಿದ ಕಾಂಡದಿಂದ ಸುರಿಯುವ ಹೆಂಡದ(ಮಧು)ತೆಂಗಿನ ಹೂಗೊಂಚಲಿನಿಂದ ಸುರಿಯುವ (ಆಸವ)ರಸದ ಸೇವನೆಯಿಂದ ಕೆಂಪಗಿರುವ




ಕಣ್ಣುಗಳುಳ್ಳ **ಕ್ಷೀಬಸ್ಯ** ಮತ್ತನಾದ ದುಃಶಾಸ್ತ್ರಶ್ರವಣದಿಂದ ಉಂಟಾದ ಅನ್ಯಥಾಜ್ಞಾನವೆಂಬ ಕೊನೆಯಲ್ಲಿ ವಿಷದಂತಾಗುವ ಸಿಹಿಯಾದ ಮದ್ಯದ ಸೇವನೆಯಿಂದ ಜ್ಞಾನವನ್ನು ಕಳೆದುಕೊಂಡ ಆದ್ದರಿಂದಲೇ **ಅಸಂದೃಶಃ** ಸರಿಯಾದ ಜ್ಞಾನವಿಲ್ಲದವನಿಗೆ **ಯಃ** ಯಾವ ಸಂಕರ್ಷಣನಾಮಕ ಶ್ರೀಹರಿಯು **ಮಧ್ವಾಸವತಾಮ್ರಲೋಚನಃ** ಮಧು ಮತ್ತು ಆಸವಗಳ ಸೇವನೆಯಿಂದ ಕೆಂಪುಗಣ್ಣುಳ್ಳವನಂತೆ **ಕ್ಷೀಬಃ ಇವ** ಮತ್ತನಂತೆ **ಪ್ರತಿಭಾತಿ** ತೋರುವನು. ಅಂದರೆ ಅವನನ್ನು ಮತ್ತನೆಂದು ತಿಳಿಯುವುದು ಭ್ರಾಂತಿಯೆಂದು ಭಾವ. ಇಂದ್ರಿಯದೋಷವುಳ್ಳ ಪುರುಷನಿಗೆ ಮೋಟುಮರವು ಮನುಷ್ಯನಂತೆ ಕಾಣುವುದು. ಅದರಂತೆ ಇದೂ ಭ್ರಾಂತಿ. ಶೇಷದೇವರು ಮತ್ತರಂತೆ ಕಾಣುವುದು ಅಜ್ಞಾನಿಗಳಿಗೆ ಹೊರತು ಜ್ಞಾನಿಗಳಿಗೆ ಅಲ್ಲವೆಂದರ್ಥ.

ನಾಗವಧುಗಳು(ಸ್ತ್ರೀಯರು) ಸೇವಿಸದಿರುವುದರಿಂದ ಶೇಷದೇವರು ವಾಸ್ತವಿಕವಾಗಿ ಮತ್ತರೇ ಆಗಿರಬೇಕಲ್ಲವೇ? ಎಂದರೆ ಸೇವಿಸದಿರುವುದಕ್ಕೆ ಬೇರೇ ನಿಮಿತ್ತವನ್ನು ಹೇಳುತ್ತಾರೆ. **ಯತ್ಪಾದಯೋಃ** ಯಾವ ಶೇಷದೇವರ ಪಾದಗಳ **ಸ್ಪರ್ಶನಧರ್ಷಿತೇಂದ್ರಿಯಾಃ** ಸ್ಪರ್ಶದಿಂದ ಇಂದ್ರಿಯ ಕ್ಷೋಭೆಯನ್ನು (ಮನ್ಮಥವಿಕಾರವನ್ನು) ಹೊಂದಿದ **ನಾಗವಧ್ವಃ** ನಾಗಕನ್ಯೆಯರು **ಹ್ರಿಯಾ** ನಾಚಿಕೆಯಿಂದ **ಅರ್ಹಣಂ** ಪೂಜೆಯನ್ನು ಮಾಡಲು **ನ ಈಶಿರೇ** ಸಮರ್ಥರಾಗಲಿಲ್ಲ. ಪೂಜೆ ಮಾಡದಿರುವುದಕ್ಕೆ ನಾಚಿಕೆಯೇ ಕಾರಣವೇ ಹೊರತು ಇವರು ಮತ್ತರಾದುದರಿಂದಲ್ಲವೆಂದು ಅಭಿಪ್ರಾಯ. ಇಂದ್ರಿಯ ಕ್ಷೋಭೆ ಇರುವುದೇ ಮತ್ತನೆಂಬುದಕ್ಕೆ ಗಮಕವೆಂದು ಆ ಬಗೆಯ ಭ್ರಾಂತಿಗೆ ಕಾರಣವನ್ನು ತಿಳಿಸಿರುವರೆಂದು ತಿಳಿಯಬೇಕು. **ನ ಸಂದೃಶೇ ತಿಷ್ಠತಿ ರೂಪಮಸ್ಯ** ಎಂಬ ಶ್ರುತಿಯೂ **ವಿದ್ಧವನ್ಮುಗ್ಧವಚ್ಚೈವ ಕೇಶವೋ ವೇದ ನಾರ್ತವತ್** ಎಂಬ ಸ್ಮೃತಿಯೂ ಶ್ರೀಹರಿಯು ಹಾಗೆ ತೋರಿಸುವನು ಎಂಬುದನ್ನು ಸ್ಪಷ್ಟಪಡಿಸುವವು. **ಕ್ಷೀಬ ಇವ** ಎಂದು ಹೇಳಬೇಕಾದಲ್ಲಿ **ಕ್ಷೀಬೇವ** ಎಂದು ಹೇಳಿದ್ದು ಛಂದೋಭಂಗ ಬರದಿರಲೆಂದೂ ಛಾಂದಸವೆಂದಾಗಲಿ ತಿಳಿಯಬೇಕು. ಮತ್ತನೆಂದು ಕಾಣುವುದು ಭ್ರಾಂತಿಯೆಂದು ಹೇಳಿದ್ದರಿಂದ ಮಾಯಾಗುಣಚಿತ್ತವೃತ್ತಿಗಳಿಂದ ವಿಕಾರವಿದ್ದಿರಬೇಕೆಂಬ ಶಂಕೆಯನ್ನೂ ನಿರಾಸಮಾಡಿರುವುದು. ||೧೯||

ಯಾವ ನಿನ್ನ **ದೃಷ್ಟಿಃ** ಸ್ವರೂಪಜ್ಞಾನವು **ಮಾಯಾಗುಣಚಿತ್ತವೃತ್ತಿಭಿಃ** ಪ್ರಕೃತಿನಿರ್ಮಿತ ಚಿತ್ತವ್ಯಾಪಾರದಿಂದ **ಅಣ್ವಪಿ** ಸ್ವಲ್ಪವೂ **ನ ಅಜ್ಯತೇ ಹಿ** ತಿರೋಹಿತವಾಗುವುದಿಲ್ಲವೋ ವಿಕಾರವುಳ್ಳದ್ದಾಗುವುದಿಲ್ಲವೋ **ತಂ ತ್ವಾಂ** ಅಂಥ ನಿನ್ನನ್ನು **ಆತ್ಮನಃ ಜಿಗೀಷುಃ** ಮನಸ್ಸನ್ನು ಗೆಲ್ಲ ಬಯಸುವ **ಕಃ** ಯಾವ ಅಧಿಕಾರಿಯು ತಾನೇ **ನ ಮನ್ಯೇತ** ಸೇವಿಸದಿರುವನು? ಎಲ್ಲರೂ ಸೇವಿಸುವರು. ಎಲ್ಲ ಇಂದ್ರಿಯಗಳಲ್ಲಿದ್ದು ಶಬ್ದಾದಿ ವಿಷಯಗಳಲ್ಲಿ ತೊಡಗುವಂತೆ ಮಾಡಿ ಜವಿಷಯಜ್ಞಾನವನ್ನು ತಂದುಕೊಟ್ಟು ಸುಖಪಡಿಸುವ ಮೂಲಕ ಪರಮೋಪಕಾರಿಯಾದ ಶ್ರೀಹರಿಯನ್ನು ಕೃತಘ್ನನನ್ನು ಬಿಟ್ಟು ಎಲ್ಲ ಸಜ್ಜನರು ಸೇವಿಸಿಯೇ ಸೇವಿಸುವರೆಂದು ತಾತ್ಪರ್ಯ.

ಶೇಷದೇವರ ಪಕ್ಷದಲ್ಲಿ ಮನೋನಿಯಾಮಕರಾಗಿ ಮನಸ್ಸಿನ ಚಿತ್ತವೃತ್ತಿ ಸಂಬಂಧವಿದ್ದರೂ ಶ್ರೀಹರಿಯ ಜ್ಞಾನವು ಅವರಿಗೆ ನಮ್ಮ ಹಾಗೆ ತಿರೋಹಿತವಾಗುವುದಿಲ್ಲವೆಂದು ತಾತ್ಪರ್ಯ. ಮನಸ್ಸನ್ನು ಜಯಿಸಬೇಕೆಂಬುವವರು ಅವರನ್ನು ಸೇವಿಸಲೇಬೇಕು. **ಹಿ** ಇದು ಪ್ರಮಾಣಪ್ರಸಿದ್ಧವೆಂದರ್ಥ. ॥೧೮॥

ಭಗವಂತನ ಜ್ಞಾನಕ್ಕೆ ಮಾಯಾಗುಣಚಿತ್ತವೃತ್ತಿಗಳಿಂದ ವಿಕಾರವಿಲ್ಲವೆಂದಾದರೇ ಮದ್ಯಪಾನದಿಂದ ಮತ್ತನಾದಂತೆ ಕಾಣುವುದು ಹೇಗೆ ಎಂದರೆ ಅದು ಭ್ರಾಂತಿ. ಸರ್ವಾಂತರ್ಯಾಮಿಯಾದ ಅತಿಸಮೀಪದಲ್ಲಿರುವ ಶ್ರೀಹರಿಯ ಸ್ವರೂಪಜ್ಞಾನವು ಸರಿಯಾದ ಜ್ಞಾನಿಗಳಿಗೆ ಆಗುವುದೇ ಹೊರತು ಬೇರೆಯವರಿಗೆ ಆಗಲಾರದು ಎಂದು ಹೇಳುತ್ತಾರೆ

**ಅಸಂದೃಶೋ ಯಃ ಪ್ರತಿಭಾತಿ ಮಾಯಯಾ**
**ಕ್ಷೀಬೇವ ಮಧ್ವಾಸವತಾಮ್ರಲೋಚನಃ ।**
**ನ ನಾಗವಧ್ವೋಽರ್ಹಣಮೀಶಿರೇ ಹ್ರಿಯಾ**
**ಯತ್ಪಾದಯೋಃ ಸ್ಪರ್ಶನಧರ್ಷಿತೇಂದ್ರಿಯಾಃ ॥೧೯॥**

ಇಲ್ಲಿ ವಿಭಕ್ತಿ ವಿಪರಿಣಾಮದಿಂದ ಅನ್ವಯ ವಿಜಯಧ್ವಜರ ಪ್ರಕಾರ ಹೀಗಿದೆ

**ಮಾಯಯಾ** ಶ್ರೀಹರಿಯ ಮೋಹಕಶಕ್ತಿಯಿಂದ **ಮಧ್ವಾಸವತಾಮ್ರವಿಲೋಚನಸ್ಯ** ಗಿಡದಲ್ಲಿ ರಂಧ್ರಮಾಡಿದ ಕಾಂಡದಿಂದ ಸುರಿಯುವ ಹೆಂಡದ(ಮಧು)ತೆಂಗಿನ ಹೂಗೊಂಚಲಿನಿಂದ ಸುರಿಯುವ (ಆಸವ)ರಸದ ಸೇವನೆಯಿಂದ ಕೆಂಪಗಿರುವ

ಕಣ್ಣುಗಳುಳ್ಳ **ಕ್ಷೀಬಸ್ಯ** ಮತ್ತನಾದ ದುಃಶಾಸ್ತ್ರಶ್ರವಣದಿಂದ ಉಂಟಾದ ಅನ್ಯಥಾಜ್ಞಾನವೆಂಬ ಕೊನೆಯಲ್ಲಿ ವಿಷದಂತಾಗುವ ಸಿಹಿಯಾದ ಮದ್ಯದ ಸೇವನೆಯಿಂದ ಜ್ಞಾನವನ್ನು ಕಳೆದುಕೊಂಡ ಆದ್ದರಿಂದಲೇ **ಅಸಂದೃಶಃ** ಸರಿಯಾದ ಜ್ಞಾನವಿಲ್ಲದವನಿಗೆ **ಯಃ** ಯಾವ ಸಂಕರ್ಷಣನಾಮಕ ಶ್ರೀಹರಿಯು **ಮಧ್ವಾಸವತಾಮ್ರಲೋಚನಃ** ಮಧು ಮತ್ತು ಆಸವಗಳ ಸೇವನೆಯಿಂದ ಕೆಂಪುಗಣ್ಣುಳ್ಳವನಂತೆ **ಕ್ಷೀಬಃ ಇವ** ಮತ್ತನಂತೆ **ಪ್ರತಿಭಾತಿ** ತೋರುವನು. ಅಂದರೆ ಅವನನ್ನು ಮತ್ತನೆಂದು ತಿಳಿಯುವುದು ಭ್ರಾಂತಿಯೆಂದು ಭಾವ. ಇಂದ್ರಿಯದೋಷವುಳ್ಳ ಪುರುಷನಿಗೆ ಮೋಟುಮರವು ಮನುಷ್ಯನಂತೆ ಕಾಣುವುದು. ಅದರಂತೆ ಇದೂ ಭ್ರಾಂತಿ. ಶೇಷದೇವರು ಮತ್ತರಂತೆ ಕಾಣುವುದು ಅಜ್ಞಾನಿಗಳಿಗೆ ಹೊರತು ಜ್ಞಾನಿಗಳಿಗೆ ಅಲ್ಲವೆಂದರ್ಥ.

ನಾಗವಧುಗಳು(ಸ್ತ್ರೀಯರು) ಸೇವಿಸದಿರುವುದರಿಂದ ಶೇಷದೇವರು ವಾಸ್ತವಿಕವಾಗಿ ಮತ್ತರೇ ಆಗಿರಬೇಕಲ್ಲವೇ? ಎಂದರೆ ಸೇವಿಸದಿರುವುದಕ್ಕೆ ಬೇರೇ ನಿಮಿತ್ತವನ್ನು ಹೇಳುತ್ತಾರೆ. **ಯತ್ಪಾದಯೋಃ** ಯಾವ ಶೇಷದೇವರ ಪಾದಗಳ **ಸ್ಪರ್ಶನಧರ್ಷಿತೇಂದ್ರಿಯಾಃ** ಸ್ಪರ್ಶದಿಂದ ಇಂದ್ರಿಯ ಕ್ಷೋಭೆಯನ್ನು (ಮನ್ಮಥವಿಕಾರವನ್ನು) ಹೊಂದಿದ **ನಾಗವಧ್ವಃ** ನಾಗಕನ್ಯೆಯರು **ಹ್ರಿಯಾ** ನಾಚಿಕೆಯಿಂದ **ಅರ್ಹಣಂ** ಪೂಜೆಯನ್ನು ಮಾಡಲು **ನ ಈಶಿರೇ** ಸಮರ್ಥರಾಗಲಿಲ್ಲ. ಪೂಜೆ ಮಾಡದಿರುವುದಕ್ಕೆ ನಾಚಿಕೆಯೇ ಕಾರಣವೇ ಹೊರತು ಇವರು ಮತ್ತರಾದುದರಿಂದಲ್ಲವೆಂದು ಅಭಿಪ್ರಾಯ. ಇಂದ್ರಿಯ ಕ್ಷೋಭೆ ಇರುವುದೇ ಮತ್ತನೆಂಬುದಕ್ಕೆ ಗಮಕವೆಂದು ಆ ಬಗೆಯ ಭ್ರಾಂತಿಗೆ ಕಾರಣವನ್ನು ತಿಳಿಸಿರುವರೆಂದು ತಿಳಿಯಬೇಕು. **ನ ಸಂದೃಶೇ ತಿಷ್ಠತಿ ರೂಪಮಸ್ಯ** ಎಂಬ ಶ್ರುತಿಯೂ **ವಿದ್ಧವನ್ಮುಗ್ಧವಚ್ಚೈವ ಕೇಶವೋ ವೇದ ನಾರ್ತವತ್** ಎಂಬ ಸ್ಮೃತಿಯೂ ಶ್ರೀಹರಿಯು ಹಾಗೆ ತೋರಿಸುವನು ಎಂಬುದನ್ನು ಸ್ಪಷ್ಟಪಡಿಸುವವು. **ಕ್ಷೀಬ ಇವ** ಎಂದು ಹೇಳಬೇಕಾದಲ್ಲಿ **ಕ್ಷೀಬೇವ** ಎಂದು ಹೇಳಿದ್ದು ಛಂದೋಭಂಗ ಬರದಿರಲೆಂದೂ ಛಾಂದಸವೆಂದಾಗಲಿ ತಿಳಿಯಬೇಕು. ಮತ್ತನೆಂದು ಕಾಣುವುದು ಭ್ರಾಂತಿಯೆಂದು ಹೇಳಿದ್ದರಿಂದ ಮಾಯಾಗುಣಚಿತ್ತವೃತ್ತಿಗಳಿಂದ ವಿಕಾರವಿದ್ದಿರಬೇಕೆಂಬ ಶಂಕೆಯನ್ನೂ ನಿರಾಸಮಾಡಿರುವುದು. ||೧೯||

ಈಗ ಶ್ರೀಹರಿಯನ್ನು ತಿಳಿಯಲು ಅವನ ಲಕ್ಷಣಗಳನ್ನು ಹೇಳುತ್ತಾರೆ

**ಯಮಾಹುರಸ್ಯ ಸ್ಥಿತಿಜನ್ಮಸಂಯಮಂ**
**ತ್ರಿಭಿರ್ವಿಹೀನಂ ಯಮನಂತಮೀಶ್ವರಮ್ ।**
**ನ ವೇದ ಸಿದ್ಧಾರ್ಥಮಿವ ಕ್ವಚಿತ್ ಸ್ಥಿತಂ**
**ಭೂಮಂಡಲಂ ಮೂರ್ಧಸಹಸ್ರಧಾಮಸು ॥೨೦॥**

**ಯಂ** ಯಾವ ಸಂಕರ್ಷಣನಾಮಕ ಶ್ರೀಹರಿಯನ್ನು **ಅಸ್ಯ** ಪ್ರತ್ಯಕ್ಷಸಿದ್ಧವಾದ್ದರಿಂದ ಸತ್ಯವಾದ ಈ ಜಗತ್ತಿನ **ಸ್ಥಿತಿ** ಇರುವಿಕೆ **ಜನ್ಮ** ಹುಟ್ಟು **ಸಂಯಮಂ** ಲಯಗಳಿಗೆ ಕಾರಣನನ್ನಾಗಿಯೂ **ತ್ರಿಭಿಃ** ಈ ಉತ್ಪತ್ತಿಸ್ಥಿತಿನಾಶಗಳಿಂದ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳಿಂದ **ವಿಹೀನಂ** ರಹಿತನನ್ನಾಗಿಯೂ **ಅನಂತಂ** ಅಂತತ್ರಯ (ದೇಶ, ಕಾಲ, ಗುಣಗಳಿಂದ ಪರಿಚ್ಛಿನ್ನತ್ವರೂಪ ಅಂತರಹಿತನನ್ನಾಗಿಯೂ **ಈಶ್ವರಂ** ಸರ್ವನಿಯಾಮಕ ಶ್ರೇಷ್ಠನನ್ನಾಗಿಯೂ **ಆಹುಃ** ಹೇಳುವರು. **ಯಃ** ಯಾವ ಶೇಷಾಂತರ್ಯಾಮಿ ಶ್ರೀಹರಿಯು **ಮೂರ್ಧಸಹಸ್ರಧಾಮಸು** (ಮಧ್ಯೇ) ಸಾವಿರ ಹೆಡೆಗಳೆಂಬ ಮನೆಗಳ ಮಧ್ಯದಲ್ಲಿ **ಕ್ವಚಿತ್** ಯಾವುದೋ ಒಂದು ಹೆಡೆಯಲ್ಲಿ **ಸ್ಥಿತಂ** ಇರುವ **ಭೂಮಂಡಲಂ** ಬ್ರಹ್ಮಾಂಡವನ್ನು **ಸಿದ್ಧಾರ್ಥಂ ಇವ** ಬಿಳಿಸಾಸುವೆಯಂತೆ ಹಗುರವಾಗಿದ್ದರಿಂದ **ನ ವೇದ** ಭಾರವೆಂದು ತಿಳಿಯುವದಿಲ್ಲ. ಹೀಗೆ ಹೇಳಿದ್ದರಿಂದ ಒಳಗಿರುವ ಅನಂತನಾಮಕ ಶ್ರೀಹರಿಯ ಸನ್ನಿಧಾನವಿಶೇಷದಿಂದ ಶೇಷದೇವರಿಗೆ ಬ್ರಹ್ಮಾಂಡ ಹೊರುವ ಸಾಮರ್ಥ್ಯ ಬಂದಿದೆ ಎಂದು ತಿಳಿಯುವುದು. **ತ್ರಿಭಿರ್ವಿಹೀನಂ** ಎಂಬುದರಿಂದ **ಸ್ಥಿತ್ಯಾದಿಕಾರಣತ್ವ** ಮೊದಲಾದ ಲಕ್ಷಣಗಳಿಗೆ ಬಾಧಕವಿಲ್ಲವೆಂದೂ ಅನಂತನೆಂಬುದರಿಂದ ಅಪರಿಚ್ಛಿನ್ನ ಮಹಿಮೆಯಿಂದ ಸ್ಥಿತ್ಯಾದಿವಿಹೀನತೆಯೂ ಯುಕ್ತವೆಂದೂ ಈಶ್ವರನೆಂಬುದರಿಂದ ಅಪರಿಚ್ಛಿನ್ನ ಮಹಿಮೆಯೂ ಯುಕ್ತವೆಂದೂ ತಿಳಿಸುವರು. ಮುಂದಿನ ವಿಶೇಷಣದಿಂದ ಈಶ್ವರನೆಂಬುದನ್ನು ಸಮರ್ಥಿಸಿರುವರು.

ಹಿಂದೆ ಹೇಳಿದ ಸೃಷ್ಟಿಯ ಕ್ರಮವನ್ನು ಹೇಳುತ್ತಾರೆ

**ಯಸ್ಯಾದ್ಯ ಆಸೀದ್ಗುಣವಿಗ್ರಹೋ ಮಹಾನ್**
**ವಿಜ್ಞಾನಧಿಷ್ಣ್ಯೋ ಭಗವಾನಜಃ ಕಿಲ ।**
**ಯತ್ಸಂಭವೋಽಹಂ ತ್ರಿವೃತಾ ಸ್ವತೇಜಸಾ**
**ವೈಕಾರಿಕಂ ತಾಮಸಮೈಂದ್ರಿಯಂ ಸೃಜೇ ॥೨೧॥**




**ಯಸ್ಯ** ಯಾವ ನಿನ್ನ ದೆಶೆಯಿಂದ (ಶ್ರೀಹರಿಯಿಂದ) **ಆದ್ಯಃ** ಹುಟ್ಟುವ ಪದಾರ್ಥಗಳಿಗೆ ಮೊದಲಿಗನಾದ **ಗುಣವಿಗ್ರಹಃ** ತ್ರಿಗುಣಾತ್ಮಕ ದೇಹವುಳ್ಳ (ವಿಶುದ್ಧ ಸತ್ವಗುಣ ಪ್ರಚುರ ಶರೀರವುಳ್ಳ) (ರಜೋಗುಣನಿರ್ಮಿತದೇಹವುಳ್ಳ) **ಮಹಾನ್** ತತ್ತ್ವಗಳಲ್ಲಿ ಮೊದಲನೆಯದಾದ ಮಹತ್ತತ್ತ್ವಕ್ಕೆ ಅಭಿಮಾನಿಯಾದ **ವಿಜ್ಞಾನಧಿಷ್ಣ್ಯಃ** ವಿಜ್ಞಾನ ಸ್ವರೂಪರಾದ, ವಿಜ್ಞಾನಕ್ಕೆ ಅಭಿಮಾನಿ ಸರಸ್ವತಿಗೆ ಆಶ್ರಯರಾದ (ಧಿಷ್ಣ್ಯಂ ಎಂಬ ಪಾಠದಲ್ಲಿ ವಿಜ್ಞಾನವಿರುವ ಸ್ಥಳವೆಂದರ್ಥ) **ಭಗವಾನ್** ಎಲ್ಲ ಜೀವರಿಂದ ಪೂಜ್ಯರಾದ **ಅಜಃ** ಪುರುಷನಾಮಕ ಬ್ರಹ್ಮದೇವರೇ **ಆಸೀತ್ ಕಿಲ** ಜನಿಸಿದರಷ್ಟೇ (ಮಹತ್ತತ್ತ್ವದ ಸೃಷ್ಟಿಯಿಂದ ಸೃಷ್ಟಿಕ್ರಮ ಹೇಗೆ ತಿಳಿದು ಬರುವುದು ಎಂದರೆ ಹೇಳುತ್ತಾರೆ **ಯತ್ಸಂಭವಃ** ಯಾವ ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮದೇವರಿಂದ ಹುಟ್ಟಿದ ನಾನು(ರುದ್ರನು) **ತ್ರಿವೃತಾ** ವೈಕಾರಿಕ ತೈಜಸ ತಾಮಸ ಎಂದು ಮೂರು ಬಗೆಯ ಅಹಂಕಾರ ಪ್ರೇರಕವಾಗಿ ಮೂರು ರೀತಿಯಾಗಿರುವ **ಸ್ವತೇಜಸಾ** ನನ್ನ ಸಾಮರ್ಥ್ಯದಿಂದ **ವೈಕಾರಿಕಂ** ವೈಕಾರಿಕ ಅಹಂಕಾರ ಕಾರ್ಯವಾದ ದೇವತಾದೇಹಸಮೂಹವನ್ನೂ **ತಾಮಸಂ**. ತಾಮಸ ಅಹಂಕಾರ ಕಾರ್ಯವಾದ ಪಂಚಭೂತಗಳನ್ನೂ **ಐಂದ್ರಿಯಂ** ತೈಜಸ ಅಹಂಕಾರ ಕಾರ್ಯವಾದ ಇಂದ್ರಿಯ ಸಮೂಹವನ್ನೂ ಅವುಗಳ ಅಭಿಮಾನಿಗಳನ್ನೂ **ಸೃಜೇ** ಸೃಷ್ಟಿಸುವೆನು.

**ಮಹಾನ್** ಎಂಬುದರಿಂದ ಆದ್ಯತೆಯನ್ನೂ **ಗುಣವಿಗ್ರಹ** ಎಂಬುದರಿಂದ ದೇಹವಿರುವುದರಿಂದ ಅಭಿಮಾನಿತ್ವವನ್ನೂ **ವಿಜ್ಞಾನಧಿಷ್ಣ್ಯ** ಎಂಬುದರಿಂದ ದೇಹವಿದ್ದರೂ ನಮ್ಮಂತೆ ಜ್ಞಾನಲೋಪವಿಲ್ಲವೆಂಬುದನ್ನೂ ಸಮರ್ಥಿಸಿರುವರು.

ಶೇಷದೇವರ ಪರವಾದ ಅರ್ಥದಲ್ಲಿ **ಯಸ್ಯ** ಯಾವ ನಿಮಗೆ **ಆದ್ಯಃ** ತಂದೆಯಾದ ಬ್ರಹ್ಮನು ಶ್ರೀಹರಿಯಿಂದ ಜನಿಸಿದನು. **ಯತ್ಸಂಭವಃ** ಯಾವ ನಿಮ್ಮೊಡನೆ ಜನಿಸಿದ **ಅಹಂ** ನಾನು ಅಥವಾ ತಾಮಸ ಅಹಂಕಾರಾಭಿಮಾನಿ ರುದ್ರದೇವರು ಶೇಷದೇವರಿಂದ ಹುಟ್ಟಿದವರಾದ್ದರಿಂದ **ಯತ್ಸಂಭವಃ** ಎಂಬುದಕ್ಕೆ ನಿಮ್ಮಿಂದ (ಶೇಷದೇವರಿಂದ) ಹುಟ್ಟಿದ ಎಂದೂ ಅರ್ಥಮಾಡಬಹುದು. ।।೨೧।।

ನಾವು ಮಾಡುವ ಸೃಷ್ಟಿಯೂ ನಾರಾಯಣನ ಅನುಗ್ರಹದಿಂದಲೇ ಹೊರತು ಸ್ವತಂತ್ರವಾಗಿ ಅಲ್ಲವೆಂದು ಹೇಳುತ್ತಾರೆ

**ಏತೇ ವಯಂ ಯಸ್ಯ ವಶೇ ಮಹಾತ್ಮನಃ**
**ಸ್ಥಿತಾಃ ಶಕುಂತಾ ಇವ ಸೂತ್ರಯಂತ್ರಿತಾಃ ।**
**ಮಹಾನಹಂ ವೈಕೃತತಾಮಸೇಂದ್ರಿಯಾಃ**
**ಸೃಜಾಮ ಸರ್ವಂ ಯದನುಗ್ರಹಾದಿದಮ್ ॥೨೨॥**

**ಸೂತ್ರಯಂತ್ರಿತಾಃ** ದಾರದಿಂದ ಕಟ್ಟಲ್ಪಟ್ಟ **ಶಕುಂತಾ ಇವ** ಪಕ್ಷಿಗಳಂತೆ **ಸೂತ್ರಯಂತ್ರಿತಾಃ** ಸೂತ್ರನಾಮಕ ವಾಯುದೇವರಿಂದ ನಿಯಮಿತರಾದ **ಏತೇ** ಈ **ಮಹಾನ್** ಬ್ರಹ್ಮದೇವರು **ಅಹಂ** ರುದ್ರದೇವರು **ವೈಕೃತ** ವೈಕಾರಿಕದೇವತೆಗಳು **ತಾಮಸ** ಭೂತಾಭಿಮಾನಿದೇವತೆಗಳು ಶಬ್ದಾದಿವಿಷಯಾಭಿಮಾನಿದೇವತೆಗಳು ಆದ **ವಯಂ** ನಾವು **ಮಹಾತ್ಮನಃ** ಮಹಾಮಹಿಮನಾದ **ಯಸ್ಯ** ಯಾವ ಶ್ರೀಹರಿಯ **ವಶೇ** ಅಧೀನದಲ್ಲಿ **ಸ್ಥಿತಾಃ** ಇರುವವರಾಗಿ **ಯದನುಗ್ರಹಾತ್** ಯಾವ ಶ್ರೀಹರಿಯ ಅನುಗ್ರಹದಿಂದ **ಇದಂ ಸರ್ವಂ** ನಮ ನಮಗೆ ಯೋಗ್ಯವಾದ ಪದಾರ್ಥಗಳನ್ನು **ಸೃಜಾಮ** ಸೃಷ್ಟಿಸುವೆವು.

ಶೇಷದೇವರ ಪರವಾಗಿ ಹೇಳುವಾಗ **ಮಹಾತ್ಮನಃ** ಮಹಾತ್ಮರಾದ ಯಾವ ನಿಮ್ಮ **ವಶೇ** ಶೇಷದೇವರ ಅಧೀನದಲ್ಲಿ ಇರುವ **ಮಹಾನ್** ಇಂದ್ರಾದಿಗಳಿಂದ ಪೂಜ್ಯನಾದ **ಅಹಂ** ನಾನು (ರುದ್ರನು) ಮುಂತಾಗಿ ಅರ್ಥಮಾಡಬೇಕು. ರುದ್ರದೇವರು ಪದವಿಯಲ್ಲಿ ಶೇಷದೇವರಕ್ಕಿಂತ ಅಧಮರಾದ್ದರಿಂದ ಅವರ ವಶರೆಂಬುದು ತಪ್ಪಲ್ಲ. ಇದೇ ಅಭಿಪ್ರಾಯದಿಂದ ಆಚಾರ್ಯರು ದ್ವಾದಶಸ್ತೋತ್ರದಲ್ಲಿ ಶೇಷದೇವರಿಗೆ **ಶರ್ವಾದಿವಂದ್ಯಚರಣ** ಎಂದು ವಿಶೇಷಣವಿತ್ತಿರುವುದು.

ಬಂಧಕತ್ವ ಮತ್ತು ಮೋಚಕತ್ವವನ್ನು ಹೇಳುವರು

**ಯನ್ನಿರ್ಮಿತಾಂ ಕರ್ಹ್ಯಪಿ ಕರ್ಮಪರ್ವಣೀಂ**
**ಮಾಯಾಂ ಜನೋಽಯಂ ಗುಣಸರ್ಗಮೋಹಿತಃ ।**
**ನ ವೇದ ನಿಸ್ತಾರಣಯೋಗಮಂಜಸಾ**
**ತಸ್ಮೈ ನಮಸ್ತದ್ವಿಲಯೋದಯಾತ್ಮನೇ ॥೨೩॥**

**ಗುಣಸರ್ಗಮೋಹಿತಃ** ಪ್ರಾಕೃತಗುಣಗಳಿಂದ ನಿರ್ಮಿತಗಳಾದ ವಿಷಯಗಳಿಂದ ಮೋಹಿತವಾದ **ಅಯಂ ಜನಃ** ಈ ಜೀವರಾಶಿಯು **ಯನ್ನಿರ್ಮಿತಾಂ** ಯಾವ ನಿನ್ನಿಂದ




(ಜನರನ್ನು ಮೋಹಗೊಳಿಸಲೆಂದೇ ನಿರ್ಮಿತವಾದ **ಕರ್ಮಪರ್ವಣೀಂ** ವಿಹಿತ ನಿಷಿದ್ಧ ಕರ್ಮಗಳೆಂಬ ಭವಬಂಧಕ್ಕೆ ಕಾರಣವಾದ್ದರಿಂದ ಗ್ರಂಥಿಗಳನ್ನು ತಂದುಕೊಡುವ **ಮಾಯಾಂ** ಬಂಧಕಶಕ್ತಿಯನ್ನು ಸ್ತ್ರೀ ಪುಂ ಮುಂತಾದ ಪ್ರಕೃತಿಯನ್ನು ಮಾತ್ರ **ವೇದ** ತಿಳಿದಿರುವನು ಎಂದನ್ವಯ) **ಆಸಾದ್ಯ** ಹೊಂದಿ **ಕರ್ಹಿ ಅಪಿ** ಎಂದೂ **ಅಂಜಸಾ** ಚೆನ್ನಾಗಿ **ನಿಸ್ತಾರಣಯೋಗಂ** ಮಾಯೆಯನ್ನು ದಾಟುವ ಉಪಾಯವನ್ನು **ನ ವೇದ** ತಿಳಿಯುತ್ತಿಲ್ಲ **ತದ್ವಿಲಯೋದಯಾತ್ಮನೇ** ಆ ಮಾಯೆಯನ್ನು ಹೋಗಲಾಡಿಸುವ ಜ್ಞಾನಸ್ವರೂಪನಾದ, ಉತ್ಕೃಷ್ಟದಯಾಸ್ವರೂಪನಾದ **ತಸ್ಮೈ** ಅಂತಹ ನಾರಾಯಣನಾದ ನಿನಗೆ **ನಮಃ** ನಮಸ್ಕಾರವು. ಹಿಂದಿನ ಯತ್ ಪದಗಳಿಗೆಲ್ಲ ಈ ತತ್ಪದದಲ್ಲಿ ಅನ್ವಯವೆಂದು ತಿಳಿಯಬೇಕು. ಉಪಾಯ ತಿಳಿಯದಿರಲು ಕಾರಣವನ್ನು **ಗುಣಸರ್ಗವಿಮೋಹಿತಃ** ಎಂಬುದರಿಂದ ಹೇಳಿರುವರು. ಶಬ್ದಾದಿಗಳಿಂದ ಬಂದ ಅನ್ಯಥಾಜ್ಞಾನವೇ ತಿಳಿಯದಿರಲು ಕಾರಣವೆಂದು ಅಭಿಪ್ರಾಯ. ಇದರಿಂದ ಬಂದ 'ಕರ್ತೃವು ಶ್ರೀಹರಿಯೆಂಬ' ಜ್ಞಾನಪೂರ್ವಕವಾದ ಪರಮಾತ್ಮನ ಜ್ಞಾನವೇ ಸಂಸಾರ ದಾಟಲು ಉಪಾಯ. ಅವನ ದಯೆಯೇ ಉಪಾಯ ಎಂದು ಸೂಚಿಸಿದಂತಾಯಿತು. ನಮಸ್ಕಾರದಿಂದ ಪ್ರಸನ್ನನಾದ ಶ್ರೀನಾರಾಯಣನ ಸ್ವರೂಪಜ್ಞಾನವು ಆದರಿಂದ ಅವರ ದಯೆಯೂ ಮಾಯಾನಿವರ್ತಕವೆಂದು ಆದ್ದರಿಂದ ಮುಮುಕ್ಷವು ಅಂತಹ ಜ್ಞಾನವನ್ನು ಸಂಪಾದಿಸಬೇಕು ಎಂದು ಸೂಚಿತವಾಯಿತು.

ಶೇಷದೇವರ ಪರ ಅರ್ಥದಲ್ಲಿ ಶ್ರೀಹರಿಯ ಆಜ್ಞೆಯಂತೆ ಇಂದ್ರಾದಿದೇವತೆಗಳಿಗೆ ಮಾಯೆಯನ್ನು ಪರಿಹರಿಸುವವರು ಎಂದು ತಿಳಿಯಬೇಕು.

**॥ ಇಲ್ಲಿಗೆ ೧೭ನೇ ಅಧ್ಯಾಯವು ಮುಗಿಯತು ॥**

★★★

## ಹದಿನೇಳನೇ ಅಧ್ಯಾಯದ ಸಾರ

ಶುಕಾಚಾರ್ಯರು ಹೇಳುವರು. ಶ್ರೀಹರಿಯ ಸಾಕ್ಷಾದವತಾರನಾದ ವಾಮನನು ಬಲಿಚಕ್ರವರ್ತಿಯ ಯಜ್ಞಶಾಲೆಗೆ ಬಂದನು. ಮೂರು ಲೋಕವನ್ನೂ ಅಳೆದು ತನ್ನ ಪರಾಕ್ರಮವನ್ನು ತೋರಿದನು. ಆಗವನು ಮೇಲಕ್ಕೆ ಎತ್ತಿದ ಎಡಪಾದದ ಹೆಬ್ಬೆರಳಿನ ಉಗುರಿನಿಂದ ಬ್ರಹ್ಮಾಂಡ ಕಟಾಹದ ಮೇಲ್ಭಾಗವನ್ನು ಭೇದಿಸಿದನು. ಹೀಗೆ ಬಿದ್ದ ರಂಧ್ರದಿಂದ ಬ್ರಹ್ಮಾಂಡದ ಹೊರಗೆ ಕಟಾಹಕ್ಕೆ ಬಡೆಯುತ್ತಿದ್ದ ನೀರು ಒಳಗೆ ನುಗ್ಗಿತು. ಸ್ವಾಭಾವಿಕವಾಗಿ ಬೆಳ್ಳಗಿದ್ದ ಆ ನೀರು ಶ್ರೀಹರಿಯ ಪಾದಕಮಲಗಳನ್ನು ತೊಳೆದುದರಿಂದ ಸೇರಿಬಂದ ಕೆಂಪುಪರಾಗದಿಂದ ಕೆಂಪಾಯಿತೋ ಎಂಬಂತಾಯಿತು. ಶ್ರೀಹರಿಯ ಪಾದಸ್ಪರ್ಶದಿಂದ ಪಾವನವಾದ ಆ ನೀರು ಆಚಮನ ಮಾಡಿದರೂ ಎಲ್ಲ ಯೋಗ್ಯಜನರ ಪಾಪವೆಂಬ ಕೊಳೆಯನ್ನು ಕಳೆಯುವ ಸಾಮರ್ಥ್ಯವುಳ್ಳದ್ದಾಯಿತು. ಆದರೂ ತನಗೆ ಪಾಪ ಲೇಪವಿಲ್ಲದೇ ಶುದ್ಧವೇ ಆಗಿರುವುದು. ಇದನ್ನು ವೇದಗಳೂ, ಪುರಾಣಗಳೂ ನಿಮಿತ್ತಾಂತರ ಪ್ರಯುಕ್ತವಲ್ಲದ ಯಥಾರ್ಥವಾದ 'ವಿಷ್ಣುಪದೀ' ಎಂಬ ಹೆಸರಿನಿಂದ ಕರೆಯುತ್ತಿರುವುವು. ಆಗ ಜಾನ್ಹವೀ, ಭಾಗೀರಥೀ ಎಂಬ ಹೆಸರುಗಳಿರಲಿಲ್ಲ. ಒಂದು ಸಾವಿರ ಯುಗಗಳಷ್ಟು ದೀರ್ಘಕಾಲದ ನಂತರ ಇದು ಅಂತರಿಕ್ಷದ ಮೇಲ್ಭಾಗದಲ್ಲಿ ಧ್ರುವಲೋಕದಲ್ಲಿ ಇಳಿಯತು. ಈ ಸ್ಥಳವನ್ನು ಶಿಂಶುಮಾರರೂಪಿ ಶ್ರೀಹರಿಯ ನಿವಾಸಸ್ಥಾನವಾದುದರಿಂದ ವಿಷ್ಣುಪದವೆಂದು ಜ್ಞಾನಿಗಳು ಕರೆಯುವರು. ಆ ವಿಷ್ಣುಪದದಲ್ಲಿ ವೀರವ್ರತರೂ, ಪರಮಭಗವದ್ಭಕ್ತರೂ, ಉತ್ತಾನಪಾದ ರಾಜರ ಮಕ್ಕಳೂ ಆದ ಧ್ರುವರಾಜರು ಯಾವ ವಿಷ್ಣುಪದಿಯನ್ನು (ಗಂಗೆಯನ್ನು) ಇದು ನಮ್ಮ ವಂಶದೇವತೆಯಾದ ಶ್ರೀಹರಿಯ ಪಾದಾರವಿಂದದ ನೀರೆಂದು ಪ್ರತಿದಿನವೂ ಮೂರು ಕಾಲಗಳಲ್ಲಿಯೂ ಅಭಿವೃದ್ಧಿಯಾಗುತ್ತಿರುವ




ಶ್ರೀಹರಿಯ ಭಕ್ತಿಯಿಂದ ಅತ್ಯಂತ ಸ್ನೇಹಪೂರ್ಣ ಹೃದಯಾಂತರಂಗರಾಗಿ ಉತ್ಕಂಠತೆಯಿಂದ ಇಂದಿಗೂ ಅತ್ಯಂತ ಆದರದಿಂದ ಶಿರಸ್ಸಿನಲ್ಲಿ ಧರಿಸುವರು. ಭಕ್ತಿಯಿಂದ ಮೈಮರೆತು ಅರೆ ಮುಚ್ಚಿದ ಅವರ ಎರಡು ಕಣ್ಣುಗಳ ಮೊಗ್ಗುಗಳಿಂದ ನಿರ್ಮಲಗಳಾದ ಕಣ್ಣೀರಿನ ಹನಿಗಳು ಉದುರುವುವು. ಜೊತೆಗೆ ರೋಮಾಂಚ ಸಮೂಹವೂ ದೇಹದಲ್ಲಿ ವ್ಯಕ್ತವಾಗುತ್ತಿರುವುದು. ಈ ವಿಷ್ಣುಪದಿಯು ಧ್ರುವಲೋಕದಿಂದ ಕೆಳಕ್ಕೆ ಸಪ್ತರ್ಷಿಲೋಕಕ್ಕೆ ಇಳಿಯುವಳು. ಸಪ್ತಋಷಿಗಳು ಸರ್ವಸ್ವಾಮಿಯೂ, ಸರ್ವೈಶ್ವರ್ಯಸಂಪನ್ನನೂ ಆದ ಶ್ರೀಹರಿಯಲ್ಲಿ ಸತತ ಭಕ್ತಿಯನ್ನು ಮಾಡುವರು. ಆದ್ದರಿಂದಲೇ ಇತರ ವಿಷಯಗಳಲ್ಲಿ ಮತ್ತು ಪುರುಷಾರ್ಥಗಳಲ್ಲಿ ಅವರಿಗೆ ಆದರವಿಲ್ಲ. ಆತ್ಮಜ್ಞಾನಿಗಳಾದ ಇವರು ಈ ವಿಷ್ಣುಪದಿಯ ಪ್ರಭಾವವನ್ನು ಬಲ್ಲವರು. ಇದು ನಮ್ಮ ತಪಸ್ಸಿನ ಅತ್ಯಂತ ಸಿದ್ಧಿಯ ಫಲವಲ್ಲವೆ ಎಂದು ಈ ಋಷಿಗಳು ಗೌರವದಿಂದ ಇಂದಿಗೂ ಈ ನೀರನ್ನೂ ಮುಮುಕ್ಷುವು ಒದಗಿ ಬಂದ ಮುಕ್ತಿಯನ್ನು ಆದರಿಸುವಂತೆ ತಮ್ಮ ಜಟೆಗಳಲ್ಲಿ ಧರಿಸುವರು. ಆ ಲೋಕದಿಂದ ಹೊರಟ ವಿಷ್ಣುಪದಿಯು ಅನೇಕ ಸಾವಿರ ಕೋಟಿ ಏಳು ಮಹಡಿಗಳುಳ್ಳ ಉಪ್ಪರಿಗೆಮನೆ(ವಿಮಾನ)ಗಳಿಂದ ನಿಬಿಡವೂ, ಇಂದ್ರಾದಿದೇವತೆಗಳ ಪಟ್ಟಣ ಸಂಬದ್ಧವೂ ಆದ ಆಕಾಶಮಾರ್ಗದಿಂದ ಕೆಳಕ್ಕೆ ಇಳಿಯುತ್ತ ಚಂದ್ರಮಂಡಲದಲ್ಲಿ ಹರಿದು ಮೇರುವಿನ ಮೇಲ್ಭಾಗದಲ್ಲಿ ಧುಮುಕುವುದು. ಆ ಅಂಗಳದಲ್ಲಿ ನಾಲ್ಕು ಭಾಗವಾಗಿ ಒಡೆದು ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂಬ ನಾಲ್ಕು ಹೆಸರುಗಳಿಂದ ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿ(ಗೆ) ಹರಿದು ಕೊನೆಯಲ್ಲಿ ಸಮುದ್ರವನ್ನು ಸೇರುವುದು. ಸೀತೆಯಾದರೋ ಬ್ರಹ್ಮಸದನದಿಂದ ಕೇಸರಪರ್ವತ ಶಿಖರಗಳಿಗೂ ಅಲ್ಲಿಂದ ಕೆಳಕ್ಕೂ ಧುಮುಕುತ್ತ ಗಂಧಮಾದನ ಪರ್ವತದ ಮೇಲೆ ಬಿದ್ದು ಭದ್ರಾಶ್ವ ವರ್ಷದಲ್ಲಿ ಹರಿದು ಪೂರ್ವದಲ್ಲಿ ಉಪ್ಪುನೀರಿನ ಸಮುದ್ರವನ್ನು ಸೇರುವುದು. ಚಕ್ಷು ಎಂಬ ಭಾಗವು ಬ್ರಹ್ಮಸದನದಿಂದ ಕೇಸರಪರ್ವತಗಳಿಗೆ ಕೆಳಕ್ಕೆ ಧುಮುಕಿ ಮಾಲ್ಯವಂತ ಪರ್ವತದ ಶಿಖರವನ್ನು ಸೇರಿ ಕಡಿಮೆಯಾಗದ ವೇಗದಿಂದ ಕೇತುಮಾಲಾ ಖಂಡದಲ್ಲಿ ಹರಿದು ಪಶ್ಚಿಮದಲ್ಲಿ ಸಮುದ್ರವನ್ನು ಸೇರುವುದು. ಭದ್ರೆಯೂ ಉತ್ತರದಲ್ಲಿ ಮೇರುಪರ್ವತದ ಮೇಲ್ಭಾಗದಿಂದ ಆಕಾಶದಿಂದ ಕೆಳಕ್ಕೆ ಬೀಳುತ್ತಾ ನೀಲ ಪರ್ವತ ಶಿಖರವನ್ನೂ ಅಲ್ಲಿಂದ ಶ್ವೇತಪರ್ವತಶಿಖರವನ್ನೂ ದಾಟಿ ಶೃಂಗವಂತದ ಶಿಖರವನ್ನು ಸೇರಿ ಹರಿದು ಉತ್ತರ

ಕುರುವರ್ಷವನ್ನು ಬಳಸಿಕೊಂಡು ಉತ್ತರದಲ್ಲಿ ಲವಣಸಮುದ್ರವನ್ನು ಸೇರುವುದು. ಹೀಗೆಯೇ ಅಲಕನಂದೆಯೂ ಬ್ರಹ್ಮಸದನದಿಂದ ದಕ್ಷಿಣಭಾಗದಿಂದ ಕೆಳಕ್ಕೆ ಹರಿದು ಅನೇಕ ನಿಷಧಪರ್ವತ ಶಿಖರಗಳನ್ನು ದಾಟಿ ಆಕಾಶಮಾರ್ಗವಾಗಿ ಹೇಮಕೂಟ ಹಿಮಾಚಲ ಪರ್ವತಗಳ ಮಧ್ಯದಲ್ಲಿ ಧುಮುಕಿ ಅತಿವೇಗದಿಂದ ಕಲ್ಲುಗಳ ಮಧ್ಯೆ ನುಸುಳಿ ಹರಿಯುತ್ತ ಭರತಖಂಡವನ್ನು ಸೇರಿ ಹರಿದು ದಕ್ಷಿಣದಲ್ಲಿ ಸಮುದ್ರವನ್ನು ಪ್ರವೇಶಿಸುವುದು. ಈ ಭರತವರ್ಷದಲ್ಲಿ ಮೇರು ಮೊದಲಾದಪರ್ವತಗಳಿಂದ ಹರಿದು ಬರುವ ಅನೇಕ ಇತರ ನದನದಿಗಳೂ ಇವೆ. ಈ ಜಂಬೂದ್ವೀಪದಲ್ಲಿಯೂ ಭರತಖಂಡವೇ ಕರ್ಮ ಮಾಡಿ ಪಾಪಪುಣ್ಯಗಳನ್ನು ಸಂಪಾದಿಸುವ ಪ್ರದೇಶವು. ಉಳಿದೆಂಟು ಖಂಡಗಳು ಪುಣ್ಯ ಮಾಡಿ ಸ್ವರ್ಗವನ್ನು ಸೇರಿದ ಜೀವರು ಸ್ವರ್ಗದಲ್ಲಿ ಅನುಭವಿಸಿ ಉಳಿದ ಪುಣ್ಯದ ಫಲವನ್ನು ಅನುಭವಿಸುವ ಭೂಸ್ವರ್ಗಗಳು. ಇಲ್ಲಿ ಭೂಸಂಬಂಧ ದುಃಖವೂ ಉಂಟು. ಈ ಖಂಡದಲ್ಲಿ ವಾಸಿಸುವ ಜನರಿಗೆ ಹತ್ತುಸಾವಿರ ವರ್ಷ ಆಯುಸ್ಸು ಹತ್ತು ಸಾವಿರ ಆನೆಗಳಷ್ಟು ಬಲ. ವಜ್ರದಂತೆ ದೃಢಕಾಯ(ಶರೀರ), ಬಲ, ಯೌವ್ವನ, ಸಂತೋಷ ಮತ್ತು ಪ್ರಮೋದಗಳಿಂದ ಕೂಡಿದ ಇವರು ಅತಿಶಯ ಸುರತಕ್ರೀಡೆಯಲ್ಲಿ ನಿರತರಾಗಿರುವರು. ರಾಜರಾಣಿಯರಂತಿರುವ ಇಲ್ಲಿನ ದಂಪತಿಗಳು ಅರಮನೆಗಳಂತಹ ಮನೆಗಳಲ್ಲಿ ವಾಸಿಸುವರು. ಹೆಂಡತಿಯರು ದೀರ್ಘಕಾಲದ ಸಂಭೋಗದ ಕೊನೆಯಲ್ಲಿ ಒಂದು ಸಲ ಮಾತ್ರ ಗರ್ಭವನ್ನು ಧರಿಸುವರು. ದೇವತೆಗಳಂತಿರುವ ಇಲ್ಲಿನ ಜನಕ್ಕೆ ಕಾಲವು ತ್ರೇತಾಯುಗದಂತೆ ಸುಖಮಯವಾಗಿರುವುದು. ಈ ಖಂಡಗಳಲ್ಲಿ ಅಡವಿಯಲ್ಲಿರುವ ಆಶ್ರಮಗಳೇ ಮನೆಗಳು. ಎಲ್ಲ ಋತುಗಳಲ್ಲಿಯೂ ಬಿಡುವ ಹೂಗೊಂಚಲು, ಹಣ್ಣು ಚಿಗುರುಗಳ ಸಮೃದ್ಧಿಯ ಭಾರದಿಂದ ಅತ್ಯಂತಬಾಗಿರುವ ಕೊಂಬೆಬಳ್ಳಿಗಳುಳ್ಳ ಹೆಮ್ಮರಗಳಿಂದ ಭರತಖಂಡದ ಮರಗಳಿಗಿಂತ ವಿಲಕ್ಷಣಗಳಾದವುಗಳಿಂದ ಶೋಭಿಸುತ್ತ ಮನೋಹರವಾಗಿರುವುವು. ಇಲ್ಲಿರುವ ಸರೋವರಗಳು ಅರಳಿದ ಅನೇಕ ಬಗೆಯ ಕಮಲಗಳ ಪರಿಮಳದಿಂದ ಮತ್ತಗಳಾಗಿ ಸಂತೋಷದಿಂದಿರುವ ರಾಜಹಂಸ, ಹಂಸ, ನೀರ್ಗೋಳಿ, ಬಕ ಮೊದಲಾದ ಹಕ್ಕಿಗಳಿಂದಲೂ, ದುಂಬಿಗಳ ಝೇಂಕಾರಗಳಿಂದಲೂ ಶಬ್ದ ಪೂರ್ಣವಾಗಿರುವುವು. ತಮ್ಮ ತಮ್ಮ ಸೇವಕಗಣನಾಯಕರಿಂದ ಪೂಜಿತರಾದ ದೇವಶ್ರೇಷ್ಠರು ಸುಂದರವಾಗಿ ಅಲಂಕರಿಸಿಕೊಂಡ ದೇವಸುಂದರಿಯರ ಕಾಮವಿಕಾರಪೂರ್ಣ ವಿಲಾಸ, ಹಾಸ, ಜಡೆಗಿನ ಕಣ್ಣೇಟೆಗಳಿಂದ ಆಕೃಷ್ಟರಾಗಿ




ಅವರನ್ನೇ ನೋಡುತ್ತ ಆ ಆಶ್ರಮ ನಿವಾಸಿಗಳಲ್ಲಿಯೂ ಆಯಾ ಖಂಡಗಳ ಪರ್ವತಗಳ ಕಣಿವೆಗಳಲ್ಲಿಯೂ ನಿರ್ಮಲಜಲಪೂರ್ಣ ಕೊಳಗಳಲ್ಲಿಯೂ ಅವರೊಡನೆ ವಿಹರಿಸುತ್ತ ಜಲಕ್ರೀಡೆ ಮೊದಲಾದ ಅನೇಕ ವಿಹಾರಗಳಿಷ್ಟೇ ಆಗಿರದೇ ಈ ಒಂಬತ್ತೂ ಖಂಡಗಳಲ್ಲಿನ ಜನರು ಆ ಆ ಖಂಡಗಳಲ್ಲಿ ಸ್ತ್ರೀ ಪುರುಷರನ್ನು ಅನುಗ್ರಹಿಸಲು ತನ್ನ ನಿಜಸ್ವರೂಪದ ಒಂಬತ್ತು ಮೂರ್ತಿಗಳಿಂದ ನೆಲಸಿರುವ ಪುರುಷೋತ್ತಮನನ್ನು ಬಿಂಬೈಕ್ಯ ಚಿಂತನೆಯಿಂದ ಉಪಾಸಿಸುವರು. ಹೀಗೆ ಇವರಿಂದ ಉಪಾಸಿತನಾಗಿ ಶ್ರೀಹರಿಯು ಇಂದಿಗೂ ಸನ್ನಿಹತನಾಗಿ ಖಂಡಗಳಲ್ಲಿ ನಿವಾಸಿಗಳಿಂದ ಪೂಜೆಗೊಳ್ಳುವನು. ಇಳಾವೃತ ಖಂಡದಲ್ಲಿ ಇರುವ ಗಂಡಸರೆಂದರೆ ಪೂಜ್ಯರಾದ ರುದ್ರದೇವರೊಬ್ಬರೇ. ಭವಾನಿಯ ಶಾಪನಿಮಿತ್ತವನ್ನು ಬಲ್ಲ ಯಾವನೂ ಆ ಖಂಡವನ್ನು ಪ್ರವೇಶಿಸುವುದಿಲ್ಲ. ಅಲ್ಲಿ ಪ್ರವೇಶಿಸಿದರೆ ಸ್ತ್ರೀಯಾಗುವರೆಂಬ ವಿಷಯವನ್ನು ಒಂಬತ್ತನೇ ಸ್ಕಂಧದಲ್ಲಿ ಹೇಳುವೆವು. ಸಾವಿರ ಹತ್ತು ಕೋಟಿ ಸ್ತ್ರೀ ಸಮೂಹಗಳಿಗೆ ಭವಾನಿಯೇ ನಾಯಕಿ(ಸ್ವಾಮಿನಿ)ಯು. ಈ ಸ್ತ್ರೀಯರಿಂದ ಪರಿವೃತರಾದ ರುದ್ರದೇವರು ಶೇಷದೇವರನ್ನೂ ಅವರ ಅಂತರ್ಯಾಮಿ ಸಂಕರ್ಷಣಮೂರ್ತಿಯನ್ನೂ ಚಿತ್ತೈಕಾಗ್ರತೆಯಿಂದ ಸನ್ನಿಹಿತನನ್ನಾಗಿ ಮಾಡಿಕೊಂಡು ಮಂತ್ರಗಳಿಂದ ಸ್ತೋತ್ರ ಮಾಡುವರು, ಜಪಿಸುವರು. ಹೀಗೆ ಉಪಾಸಿಸುವರು.

ಈ ಸಂಕರ್ಷಣ ಮೂರ್ತಿಯು ಪುರುಷೋತ್ತಮನ ವಾಸುದೇವ ಮೊದಲಾದ ನಾಲ್ಕು ರೂಪಗಳಲ್ಲಿ ಒಂದು(ನಾಲ್ಕನೆಯದು). ಸಂಹಾರಕ್ಕೆ ಕಾರಣವಾದ ತಮೋ ಗುಣವನ್ನು ಪ್ರವೃತ್ತಿಗೊಳಿಸುವ ರೂಪ. ಇದು ರುದ್ರದೇವರಿಗೆ ಕಾರಣವಾದುದು. ಪೂಜ್ಯರೂ, ರುದ್ರಾದಿದೇವತೆಗಳಿಗಿಂತ ಶ್ರೇಷ್ಠರೂ, ತಮಗೆ ಯೋಗ್ಯವಾದ ಸಾವಧಿ ಕಗುಣಸ್ವರೂಪರೆಂದು ಪ್ರಖ್ಯಾತರೂ, ತಮ್ಮ ಅನುಗ್ರಹವಿಲ್ಲದೇ ಭಕ್ತರಿಗೆ ಕಾಣದವರೂ, ಪ್ರಣವ ಪ್ರತಿಪಾದ್ಯನನ್ನು ಉಪಾಸಿಸುವವರೂ, ಅನಂತನೆಂದು ಕರೆಸಿಕೊಳ್ಳುವ ಶ್ರೀಹರಿಗೆ ಶರೀರರೂ ಆದ ಶೇಷದೇವರಿಗೆ ನಮಸ್ಕಾರ. ಅವರ ಅಂತರ್ಯಾಮಿಯೂ, ಸಮಗ್ರೈಶ್ವರ್ಯಸಂಪನ್ನನೂ, ಸರ್ವೋತ್ತಮನೂ, ಸಮಸ್ತಗುಣಸ್ವರೂಪನೆಂದು ಶ್ರುತಿಗಳಲ್ಲಿ ಪ್ರಸಿದ್ಧನೂ, ಅನುಗ್ರಹವಿಲ್ಲದೇ ಭಕ್ತರಿಗೆ ವ್ಯಕ್ತನಾಗದವನೂ, ಪ್ರಣವಪ್ರತಿಪಾದ್ಯನೂ, ದೇಶಕಾಲಗುಣಗಳಿಂದ ಅಂತ್ಯವಿಲ್ಲದವನೂ ಆದ ಸಂಕರ್ಷಣನಿಗೆ ಮತ್ತೆ ಮತ್ತೆ ನಮಸ್ಕಾರ ಎಂದು ರುದ್ರದೇವರು ಮಂತ್ರವನ್ನು ಪಠಿಸುವರು.

ಶೇಷದೇವ! ನೀವು ನಿಮ್ಮ ಭಕ್ತರಿಂದ ಅತಿಶಯವಾಗಿ ಧ್ಯಾನಮಾಡಲ್ಪಡುವವರು. ಇಂದ್ರಾದಿಗಳೆಲ್ಲರ ಎಲ್ಲ ಬಗೆಯ ಐಶ್ವರ್ಯಕ್ಕೂ ಶ್ರೀಹರಿಯ ಆಜ್ಞೆಯಂತೆ ಕಾರಣರು. ನಿಮಗಿಂತ ಕೆಳಗಣ ಪ್ರಾಣಿಗಳನ್ನು ಸೃಷ್ಟಿಸುವವರು. ಅಯೋಗ್ಯರಿಗೆ ಸಂಸಾರವನ್ನು ಕೊಡುವವರು. ಅವರಿಗೆಲ್ಲ ಸೇವನೀಯವಾದ ಕೆಂಪು ಪಾದಕಮಲಗಳುಳ್ಳ ನಿಮ್ಮನ್ನು ಸೇವಿಸುವೆನು.

ಶೇಷದೇವ ! ಲಕ್ಷ್ಮೀದೇವಿಯಿಂದ ಸೇವಿತವಾದ ಅರುಣಪಾದಪದ್ಮಗಳುಳ್ಳ, ಸಮಸ್ತ ತಾರತಮ್ಯೋಪೇತ ಐಶ್ವರ್ಯಪರಂಪರೆಗೆ ಕಾರಣನಾದ, ಜಗದುತ್ಪಾದಕನಾದ, ಜಗತ್ಸಂಹಾರಕನಾದ, ನಿಮ್ಮ ಅಂತರ್ಯಾಮಿಯಾದ್ದರಿಂದ ನಿಮಗಿಂತ ಉತ್ತಮನಾದ ಸಂಕರ್ಷಣನನ್ನು ಸೇವಿಸಿರಿ. ಭಕ್ತರಿಂದ ಎಲ್ಲಕ್ಕಿಂತ ಅತಿಶಯವಾಗಿ ಧ್ಯಾನ ಮಾಡಲ್ಪಡುವ ಸಂಕರ್ಷಣನೇ ! ಸೇವನೀಯವಾದ ಅರುಣಪಾದಪದ್ಮಗಳುಳ್ಳ ಎಲ್ಲ ಬಗೆಯ ಐಶ್ವರ್ಯ ಮೊದಲಾದ ಗುಣಗಳಿಗೆ ಅತ್ಯುತ್ತಮ ಆಶ್ರಯನಾದ, ಜಗದುತ್ಪಾದಕನಾದ, ನಿತ್ಯಮುಕ್ತನಾದ, ಭಕ್ತರಸಂಸಾರನಾಶಕನಾದ, ಪುಣ್ಯವೆಂಬ ಮಂಗಳದಾಯಕನಾದ, ಅಭಕ್ತರಿಗೆ ಸಂಸಾರವನ್ನು ಕೊಡುವ, ಸರ್ವಸಮರ್ಥನ-ಶೀಲನಾದ ನಿನ್ನನ್ನು ಸೇವಿಸುವೆನು. ಕೋಪದ ವೇಗವನ್ನೂ ಜಯಿಸದಿರುವ ನಮ್ಮಂತಹ ಜೀವರ ಜ್ಞಾನವು ಪ್ರಾಕೃತಗುಣ ನಿರ್ಮಿತ ಶಬ್ದಾದಿಸಂಬದ್ಧ ಮನೋವ್ಯಾಪಾರಗಳಿಂದ ತಿರೋಹಿತವಾಗುವುದು. ಆದರೆ ಜಗತ್ತಿನ ಉಪಾದಾನ(ಉತ್ಪತ್ತಿ) ಮೊದಲಾದ ಎಲ್ಲವನ್ನೂ ನೋಡುತ್ತಿರುವ ಸರ್ವಕರ್ತನೂ, ದೋಷಲೇಪ ನಾಶಮಾಡುವಲ್ಲಿ ಅತಿಶಯ ಸಮರ್ಥನೂ, ಪ್ರಾಕೃತಗುಣ ನಿಯಾಮಕನೂ ಆದ ನಿನ್ನ ಸ್ವರೂಪಜ್ಞಾನವೂ ಪ್ರಕೃತಿಗುಣನಿರ್ಮಿತ ಶಬ್ದಾದಿ ಸಂಬಂಧವುಳ್ಳ ಚಿತ್ತವೃತ್ತಿಗಳನ್ನು ಪ್ರೇರಿಸುತ್ತಿದ್ದರೂ ಸ್ವಲ್ಪವೂ ತಿರೋಹಿತವಾಗುವುದಿಲ್ಲ. ಇಂತಹ ಸಾಮರ್ಥ್ಯವುಳ್ಳ ನಿನ್ನನ್ನು, ಮನಸ್ಸನ್ನು ಗೆಲ್ಲಬಯಸುವ ಯಾವ ಅಧಿಕಾರಿಯು ತಾನೆ ಸೇವಿಸದೇ ಇದ್ದಾನು? ಶೇಷದೇವ! ಮನೋನಿಯಾಮಕರಾದ್ದರಿಂದ ಮನೋವೃತ್ತಿ ಸಂಬಂಧವಿದ್ದರೂ ಶ್ರೀಹರಿಯ ಜ್ಞಾನವು ನಿಮಗೆ ನಮ್ಮಂತೆ ಹೆಚ್ಚು ತಿರೋಹಿತವಾಗುವುದಿಲ್ಲ. ಮನೋಜಯವನ್ನು ಬಯಸುವ ಎಲ್ಲ ಭಕ್ತರೂ ನಿಮ್ಮನ್ನು ಸೇವಿಸುವರು. ನೀವು ಮಧ್ವಾಸವಮತ್ತರಾಗಿ ಕೆಂಗಣ್ಣುಗಳುಳ್ಳ ಮತ್ತರಂತೆ ಅಜ್ಞಾನಿಗಳಿಗೆ ತೋರುವಿರಿ. ನಿಮ್ಮ ಪಾದಸ್ಪರ್ಶದಿಂದ ಮನ್ಮಥ ವಿಕಾರಕ್ಕೊಳಗಾದ ನಾಗಕನ್ಯೆಯರು ನಾಚಿಕೆಯಿಂದ ನಿಮ್ಮನ್ನು ಪೂಜಿಸಲು ಸಮರ್ಥರಾಗುತ್ತಿಲ್ಲವೇ ಹೊರತು ನೀವು




ಮತ್ತರೆಂದಲ್ಲ. ಶೇಷದೇವಾಂತರ್ಯಾಮಿ ಶ್ರೀಹರಿಯೇ! ಮಧ್ವಾಸವಮತ್ತನಿಗೆ, ದುಃಶಾಸ್ತ್ರಸೇವನೆಯಿಂದ ಜ್ಞಾನಭ್ರಷ್ಟನಿಗೆ ನೀನು ಮತ್ತನಂತೆ ತೋರುವೆ. ಇದು ಕೇವಲ ಭ್ರಾಂತಿ. ಶೇಷಾಂತರ್ಯಾಮಿಯಾದ ನಿನ್ನನ್ನೂ ನಾಗಪತ್ನಿಯರು ಸೇವಿಸದಿರಲು ಮನ್ಮಥವಿಕಾರದಿಂದ ಬಂದ ನಾಚಿಕೆಯೇ ಕಾರಣ. ನಿನ್ನನ್ನು ಜಗತ್ತಿನ ಸ್ಥಿತಿ, ಉತ್ಪತ್ತಿ, ಲಯಗಳಿಗೆ ಕಾರಣನನ್ನಾಗಿಯೂ, ಈ ಸ್ಥಿತ್ಯಾದಿಗಳಿಲ್ಲದವನೆಂದೂ, ಜಾಗ್ರದಾದಿ ಅವಸ್ಥಾತ್ರಯಗಳಿಲ್ಲದವನೆಂದೂ, ಸದಾ ಅಪರಿಚ್ಛಿನ್ನ ಮಹಿಮೆ ಉಳ್ಳವನೆಂದೂ, ನಿಯಾಮಕರಿಗಿಂತ ಶ್ರೇಷ್ಠನೆಂದೂ ಹೇಳುವರು. ಶೇಷಾಂತರ್ಯಾಮಿಯಾದ ನೀನು ಶೇಷಾಕಾರನಾದ್ದರಿಂದ ಸಾವಿರ ಹೆಡೆಗಳಲ್ಲಿ ಎಲ್ಲಿಯೋ ಒಂದು ಹೆಡೆಯಲ್ಲಿ ಬ್ರಹ್ಮಾಂಡವನ್ನು ಸಾಸುವೆಕಾಳಿನಂತೆ ಹಗುರವಾದುದನ್ನು ಭಾರವೆಂದು ತಿಳಿಯುತ್ತಿಲ್ಲ. ಶ್ರೀಹರಿಯ ಆಜ್ಞೆಯಿಂದ ಶೇಷದೇವರನ್ನು ಅವರಿಗಿಂತ ಅಧಮ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣರೆಂದು, ಅನಂತ ನಾಮಕರೆಂದು ಬಲ್ಲವರು ಕರೆಯುವರು. ಅಂತರ್ಯಾಮಿ ಶ್ರೀಹರಿಯ ಸಾಮರ್ಥ್ಯದಿಂದ ಶೇಷದೇವರು ಪ್ರಪಂಚವನ್ನು ಭಾರವೆಂದು ಭಾವಿಸುತ್ತಿಲ್ಲ. ಸಂಕರ್ಷಣದೇವ! ನಿನ್ನ ದೆಶೆಯಿಂದ ಪುರುಷನಾಮಕ ಬ್ರಹ್ಮದೇವನು ಸೃಷ್ಟನಾಗಿರುವನಲ್ಲವೇ? ಅವರು ಸೃಷ್ಟವಾದ ವಸ್ತುಗಳಲ್ಲೆಲ್ಲ ಮೊದಲಿಗರು. ರಜೋಗುಣ ಪ್ರಧಾನ ಸತ್ವಾದಿಗುಣಶರೀರವುಳ್ಳವರು. ಮಹತ್ತತ್ತ್ವಕ್ಕೆ ಅಭಿಮಾನಿಗಳು. ವಿಜ್ಞಾನ ಸ್ವರೂಪರು. ವಿಜ್ಞಾನಾಭಿಮಾನಿ ಸರಸ್ವತಿಗೆ ಆಶ್ರಯರು. ಎಲ್ಲ ಜೀವರಿಂದಲೂ ಪೂಜ್ಯರು. ಈ ಬ್ರಹ್ಮದೇವರಿಂದ ಅಹಂಕಾರ ತತ್ತ್ವಾಭಿಮಾನಿಯಾದ ನಾನು ಸೃಷ್ಟನಾದೆನು. ವೈಕಾರಿಕ ಮುಂತಾದ ಮೂರು ಬಗೆಯ ಅಹಂಕಾರವನ್ನು ಪ್ರೇರಿಸುವೆನು. ಈ ನನ್ನ ಮಹಿಮೆಯಿಂದ ವೈಕಾರಿಕದೇವತಾಸಮೂಹವನ್ನೂ, ತಾಮಸ ಪಂಚಭೂತಗಳನ್ನೂ, ತೈಜಸ ಇಂದ್ರಿಯಗಳನ್ನೂ, ಅವುಗಳ ಅಭಿಮಾನಿಗಳನ್ನೂ ಸೃಷ್ಟಿಸುವೆನು. ಶೇಷದೇವ! ನಿಮ್ಮ ತಂದೆಯಾದ ಬ್ರಹ್ಮದೇವರು ಶ್ರೀಹರಿಯಿಂದ ಸೃಷ್ಟರಾದರು. ತಾಮಸ ಅಹಂಕಾರಾಭಿಮಾನಿ ನಾನು ನಿಮ್ಮಿಂದ ಸೃಷ್ಟನಾದೆ. ದಾರದಿಂದ ಕಟ್ಟಿದ ಹಕ್ಕಿಗಳಂತೆ ಸೂತ್ರನಾಮಕ ವಾಯುದೇವರಿಂದ ನಿಯಂತ್ರಿತರಾದ ನಾವೂ, ಬ್ರಹ್ಮದೇವರು, ರುದ್ರದೇವರೂ, ವೈಕಾರಿಕ ದೇವತೆಗಳು, ಭೂತಾಭಿಮಾನಿಗಳು, ಇಂದ್ರಿಯಾಭಿ-ಮಾನಿಗಳೂ ಎಲ್ಲರೂ ಮಹಾಮಹಿಮೋಪೇತನಾದ ಶ್ರೀಹರಿಯ ಅಧೀನರು. ಅವನ ಅನುಗ್ರಹದಿಂದಲೇ ನಮ ನಮಗೆ ಯೋಗ್ಯವಾದ ಎಲ್ಲ ಪದಾರ್ಥಗಳನ್ನು

ಸೃಷ್ಟಿಸುವೆವು. ಮಹಾತ್ಮರಾದ ಶೇಷದೇವರ ಅಧೀನನಾದ ನಾನು ಇಂದ್ರಾದಿಗಳಿಂದ ಪೂಜ್ಯನು. ಈ ದೇವತೆಗಳೆಲ್ಲರೂ ಅವರ ಅನುಗ್ರಹದಿಂದ ಸೃಷ್ಟಿಮೊದಲಾದ ಕಾರ್ಯಗಳನ್ನು ಮಾಡುತ್ತಿರುವರು. ಸಂಕರ್ಷಣದೇವ! ಜನರನ್ನು ಮೋಹಗೊಳಿಸಲಿ ಎಂದು ನೀನೇ ಬಂಧಕ ಶಕ್ತಿಯನ್ನು ನಿರ್ಮಿಸಿರುವೆ. ಇದು ಕರ್ಮಗ್ರಂಥಿಗಳನ್ನು ತಂದುಕೊಡುವುದು. ಇದರ ಸ್ವರೂಪವೇ ಸ್ತ್ರೀ ಪುಂ ಮೊದಲಾದ ಪ್ರಕೃತಿ. ಇದನ್ನು ಹೊಂದಿರುವ ಜೀವರು ಪ್ರಾಕೃತಶಬ್ದ ಮುಂತಾದ ವಿಷಯಗಳಿಂದ ಮೋಹಿತರಾಗಿರುವರು. ಇವರಿಗೆ ಎಂದೂ ಸರಿಯಾಗಿ ಈ ಬಂಧಕ ಶಕ್ತಿಯನ್ನು ಕಳೆದುಕೊಳ್ಳುವ ಉಪಾಯ ತಿಳಿಯದು. ಆ ಮಾಯೆಯನ್ನು ನಾಶಪಡಿಸುವ ಜ್ಞಾನ ಸ್ವರೂಪನು ನೀನು. ಅಂಥ ಉತ್ಕೃಷ್ಟ ದಯಾಸ್ವರೂಪನು ನೀನು. ಇಂತಹ ನಿನಗೆ ನಮಸ್ಕಾರ. ಶೇಷದೇವ! ಶ್ರೀಹರಿಯ ಆಜ್ಞೆಯಂತೆ ಇಂದ್ರಾದಿಗಳ ಬಂಧಕ ಮೋಚಕ ಶಕ್ತಿವಂತನು ನೀನು. ನಿನಗೆ ನಮಸ್ಕಾರ ಎಂದು ರುದ್ರದೇವರು ಮಿಶ್ರಸ್ತುತಿಯಿಂದ ಶೇಷದೇವರನ್ನೂ, ಅವರ ಅಂತರ್ಯಾಮಿ ಸಂಕರ್ಷಣನನ್ನೂ ಉಪಾಸಿಸುತ್ತಿರುವರು.

॥ ★★★ ॥






# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಅಷ್ಟಾದಶೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಇದುವರೆಗೆ ಇಲಾವೃತ ವರ್ಷದಲ್ಲಿ ಪೂಜ್ಯನಾದ ಶ್ರೀಹರಿಯ ಮೂರ್ತಿಯನ್ನು ಹಾಗೂ ಪೂಜಕರನ್ನೂ ಹೇಳಿ ಉಳಿದ ವರ್ಷಗಳಲ್ಲಿಯೂ ಪೂಜ್ಯಗಳಾದ ಶ್ರೀಹರಿಯ ಮೂರ್ತಿಗಳನ್ನೂ ಪೂಜಕರನ್ನೂ ಪೂರ್ವಾದಿಕ್ರಮದಿಂದ ಎರಡು ಅಧ್ಯಾಯಗಳಲ್ಲಿ ಹೇಳುವರು.

## ವಿವಿಧವರ್ಷಗಳಲ್ಲಿ ಉಪಾಸ್ಯ ಭಗವದ್ರೂಪಗಳು
## ಭದ್ರಾಶ್ವವರ್ಷ - ಶ್ರೀಹಯಗ್ರೀವ

ಮೊದಲಿಗೆ ಭದ್ರಾಶ್ವ ವರ್ಷದಲ್ಲಿ ಭದ್ರಶ್ರವ ಮುಂತಾದವರು ಮಾಡಿದ ಶ್ರೀಹರಿಯ ಹಯಗ್ರೀವರೂಪದ ಉಪಾಸನವನ್ನು ಹೇಳುವರು

**ತಥಾ ಚ ಭದ್ರಶ್ರವಾ ನಾಮ ಧರ್ಮಸುತಸ್ತತ್ಕುಲಪತಯಃ ಪುರುಷಾ ಭದ್ರಾಶ್ವೇ ವರ್ಷೇ ಸಾಕ್ಷಾದ್ಭಗವತೋ ವಾಸುದೇವಸ್ಯ ಪ್ರಿಯಾಂ ತನುಂ ಧರ್ಮಮಯೀಂ ಹಯಶೀರ್ಷಾಭಿಧಾನಾಂ ಪರಮೇಣ ಸಮಾಧಿನಾ ಸನ್ನಿಧಾಪ್ಯೇದಮಭಿಗೃಣಂತ ಉಪಧಾವಂತಿ ।।೧।।**

**ತಥಾ ಚ** ಇಲಾವೃತ ಖಂಡದಲ್ಲಿ ರುದ್ರದೇವರು ಸಂಕರ್ಷಣನನ್ನು ಉಪಾಸಿಸುವಂತೆ **ಭದ್ರಾಶ್ವೇ ವರ್ಷೇ** ಭದ್ರಾಶ್ವ ಖಂಡದಲ್ಲಿಯೂ **ಭದ್ರಶ್ರವಾ ನಾಮ** ಭದ್ರಶ್ರವನೆಂಬ **ಧರ್ಮಸುತಃ** ಧರ್ಮರಾಜನ ಕುವರನು **ತತ್ಕುಲಪತಯಃ ಚ** ಅವನ

ವಂಶನಾಯಕರೂ **ಪ್ರಿಯಾಂ** ಲಕ್ಷ್ಮೀದೇವಿ ಮೊದಲಾದವರಿಗೆ ಪ್ರಿಯವಾದ **ಧರ್ಮಮಯೀಂ** ಜ್ಞಾನೋಪದೇಶದಿಂದ ಎಲ್ಲ ಜಗತ್ತನ್ನು ಧರಿಸುವಲ್ಲಿ ಪ್ರಧಾನವಾದ, ಧರ್ಮಪ್ರವರ್ತಕವಾದ **ಹಯಶೀರ್ಷಾಭಿಧಾನಾಂ** ಹಯಶಿರಸ್ಸೆಂದು ಹೆಸರುಳ್ಳ (**ಹಯ ಗತೌ** ಎಂದು ಧಾತು ಇರುವುದರಿಂದ **ಹಯಂತಿ ಅವಗಚ್ಛಂತೀತಿ ಸರ್ವಂ ಹಯಾಃ** ಸರ್ವಜ್ಞರಾದ ಬ್ರಹ್ಮವಾಯ್ವಾದಿಗಳಿಗೆ **ಶೀರ್ಷಃ** ಪ್ರಧಾನನಾದ್ದರಿಂದ ಹಯಶೀರ್ಷ) **ಸಾಕ್ಷಾತ್ ಭಗವತಃ ವಾಸುದೇವಸ್ಯ** ಸಾಕ್ಷಾತ್ ಶ್ರೀಹರಿಯಾದ ವಾಸುದೇವನ **ತನುಂ** ಮೂರ್ತಿಯನ್ನು **ಪರಮೇಣ ಸಮಾಧಿನಾ** ಉತ್ತಮವಾದ ಚಿತ್ತೈಕಾಗ್ರತೆಯಿಂದ **ಸನ್ನಿಧಾಪ್ಯ** ಮನಸ್ಸಿನಲ್ಲಿರಿಸಿಕೊಂಡು **ಇದಂ** ಮುಂದೆ ಹೇಳುವ ರೀತಿಯಲ್ಲಿ **ಅಭಿಗೃಣಂತಃ** ಸ್ತೋತ್ರಮಾಡುತ್ತ **ಉಪಧಾವಂತಿ** ಉಪಾಸಿಸುವರು. ।।೧।।

**ಭದ್ರಶ್ರವಸ ಊಚುಃ -**

**ಓಂ ನಮೋ ಭಗವತೇ ಧರ್ಮಾತ್ಮಶೋಧನಾಯ ನಮ ಇತಿ ।।೨।।**

ಓಂ ಗುಣಪರಿಪೂರ್ಣನಾದ **ಭಗವತೇ** ಸಮಸ್ತೈಶ್ವರ್ಯಸಂಪನ್ನನಾದ **ಆತ್ಮಶೋಧನಾಯ** ಜ್ಞಾನವನ್ನು ನೀಡಿ ಜೀವರನ್ನು ಶುದ್ಧಿಗೊಳಿಸುವ **ಧರ್ಮಾಯ** ಜಗಜ್ಜನ್ಮಾದಿಕರ್ತೃತ್ವವೆಂಬ ಧರ್ಮಸ್ವರೂಪನಾದ ಜಗದ್ಧಾರಕನಿಗೆ **ನಮೋ ನಮಃ** ಪುನಃ ಪುನಃ ನಮಸ್ಕಾರವೆಂದು ಉಪಾಸಿಸುವರು. ।।೨।।

ಜೀವರು ಅಶುದ್ಧರಾದರೆ ಅವರನ್ನು ಜ್ಞಾನಾದಿಗಳಿಂದ ಶುದ್ಧಿ ಮಾಡಬೇಕು. ಅವರಿಗೆ ಅಶುದ್ಧತ್ವ ಹೇಗೆ ಎಂದರೆ ಅದೂ ಸಹ ಭಗವಂತನಿಂದಲೇ ಮಾಡಲ್ಪಟ್ಟಿದ್ದು ಎಂಬ ಅಭಿಪ್ರಾಯದಿಂದ ಸ್ತೋತ್ರಮಾಡುತ್ತಾರೆ

**ಅಹೋ ವಿಚಿತ್ರಂ ಭಗವದ್ವಿಚೇಷ್ಟಿತಂ**
**ಘ್ನಂತಂ ಜನೋಽಯಂ ಹಿ ಮಿಷನ್ನ ಪಶ್ಯತಿ ।**
**ಧ್ಯಾಯನ್ನಸದ್ಯರ್ಹಿ ವಿಕರ್ಮ ಸೇವತೇ**
**ನಿರ್ಹೃತ್ಯ ಪುತ್ರಃ ಪಿತರಂ ಜಿಜೀವಿಷುಃ ।।೩।।**

**ಯರ್ಹಿ** ಯಾವ ಕಾರಣ **ಅಯಂ ಜನಃ** ಈ ಜೀವರು **ಅಸತ್** ಮೋಕ್ಷಕ್ಕೆ ಪ್ರತಿಬಂಧಕವಾದ್ದರಿಂದ ಶಾಸ್ತ್ರದಲ್ಲಿ ಅಮಂಗಳವೆಂದು ಕರೆಯಲ್ಪಟ್ಟಿರುವ ಶಬ್ದ ಮೊದಲಾದ ವಿಷಯಗಳನ್ನು **ಧ್ಯಾಯನ್** ಚಿಂತಿಸುತ್ತಾ **ವಿಕರ್ಮ ಸೇವತೇ** ಪಾಪ




ಬರುವಂತೆ ಅನುಭವಿಸುವರೋ **ತರ್ಹಿ** ಪಾಪವೆಂಬ ಅಂಜನದಿಂದ ಪ್ರತಿಬದ್ಧವಾದ ಕಣ್ಣುಗಳುಳ್ಳವರಾದ್ದರಿಂದ **ಘ್ನಂತಂ** ತಮ್ಮನ್ನು ಸಂಹರಿಸುತ್ತಿರುವ ಮೃತ್ಯುವನ್ನು **ಮಿಷನ್ ಅಪಿ** ನೋಡುತ್ತಿದ್ದರೂ (ಅನುಮಾನದಿಂದ ತಿಳಿಯುತ್ತಿದ್ದರೂ) **ನ ಪಶ್ಯತಿ** ತಿಳಿಯದಿರುವರು. ದುರ್ವಿಷಯ ಸೇವನೆಯಿಂದುಂಟಾದ ಪಾಪದಿಂದ ಅವರ ಜ್ಞಾನವು ತಿರೋಹಿತವಾಗುವುದೆಂದು ಭಾವ. **ಹಿ** ಆದ್ದರಿಂದ **ಭಗವದ್ವಿಚೇಷ್ಟಿತಂ ವಿಚಿತ್ರಂ** ಭಗವಂತನ ವ್ಯಾಪಾರವು (ಪ್ರೇರಣೆ) ಅದ್ಭುತವಾದುದು **ಅಹೋ** ಆಶ್ಚರ್ಯ! ತಿಳಿಯುವುದಕ್ಕೆ ಉದಾಹರಣೆ ಹೇಳುವರು **ಪುತ್ರಃ** ಮಗನು **ಪಿತರಂ** ಮೃತನಾದ ತಂದೆಯನ್ನು **ನಿರ್ಹೃತ್ಯ** ದಹನವೇ ಮೊದಲಾದ ತಂದೆಯ ಮರಣಾನಂತರ ಕಾರ್ಯಗಳನ್ನು ಮಾಡಿ **ಯಥಾ** ಹೇಗೆ **ಜಿಜೀವಿಷುಃ** ತನ್ನ ಜೀವನವನ್ನು ಇಚ್ಛಿಸಿ ಪಾಪ ಮಾಡುವನೋ **ತಥಾ** ಹಾಗೆ ಈ ಜೀವರು ಎಂದು ಅನ್ವಯ. ತಂದೆಯು ಸತ್ತರೆ ತನಗೂ ಸಾವು ಬರಲಿದೆಯೆಂದು ಯುಕ್ತಿಯಿಂದ ತಿಳಿದಿದ್ದರೂ ತಿಳಿಯದಿರುವನಂತೆ ತಾನು ಜೀವಿಸುವೆನೆಂದೇ ಮಗನು ಬಗೆಯುವನು. ನಿದ್ರೆ ಮಾಡಲಿರುವವನು ನೋಡುತ್ತಿದ್ದರೂ ಕಾಣದಿರುವಂತೆ ಜೀವನೇಚ್ಛುವು ಕಾಲರೂಪಿಯಾದ ಮೃತ್ಯುವಿನ ಚರಿತ್ರೆಯನ್ನು ನೋಡದಿರಲು ಕಾರಣವನ್ನು **ಧ್ಯಾಯನ್** ಎಂಬುದರಿಂದ ತಿಳಿಸಿರುವರು. ಭಗವಂತನಿಂದ ಮೋಹಿತರಾಗಿ ವಿಷಯಗಳನ್ನೇ ಧ್ಯಾನಿಸುತ್ತ, ಸೇವಿಸುತ್ತ, ಪಾಪ ಮಾಡುತ್ತ, ಹುಟ್ಟಿದ ಜ್ಞಾನವನ್ನೂ ಕಳೆದುಕೊಂಡು ಅಶುದ್ಧರಾಗುವರು. ಶ್ರೀಹರಿಯ ಅನುಗ್ರಹದಿಂದ ಶುದ್ಧವಾದ ಮನಸ್ಸುಳ್ಳವರು ಕೈಯ್ಯಲ್ಲಿ ನೆಲ್ಲಿಕಾಯಿಯಂತೆ ಎಲ್ಲವನ್ನೂ ತಿಳಿಯುವರು ಎಂದು ಭಾವ. ॥೩॥

ನೀನು ಕೇವಲ ಅಜ್ಞಾನಿಗಳನ್ನು ಮಾತ್ರ ಮೋಹಗೊಳಿಸುವವನಲ್ಲ ಜ್ಞಾನಿಗಳನ್ನೂ ಮೋಹಗೊಳಿಸುವಿ. ಆದ್ದರಿಂದ ನಿರತಿಶಯ ಮಹಿಮೆಯುಳ್ಳ ನಿನ್ನ ಚರಿತ್ರೆಯು ವಿಚಿತ್ರವಾದುದು. ಈ ಕಾರಣದಿಂದ ನಿನ್ನ ಅನುಗ್ರಹವಾಗಬೇಕಾದರೆ ನಿನಗೆ ಮಾಡುವ ನಮಸ್ಕಾರವೇ ಮುಖ್ಯಸಾಧನವೆಂಬ ಅಭಿಪ್ರಾಯದಿಂದ ಹೇಳುವರು

**ವದಂತಿ ವಿಶ್ವಂ ಕವಯಶ್ಚ ನಶ್ವರಂ**
**ಪಶ್ಯಂತಿ ಚಾಧ್ಯಾತ್ಮವಿದೋ ವಿಪಶ್ಚಿತಃ ।**
**ತಥಾಪಿ ಮುಹ್ಯಂತಿ ತವಾಜ ಮಾಯಯಾ**
**ಸುವಿಸ್ಮಯಂ ಕೃತ್ಯವಿದಂ(ಮಿದಂ) ನತಾಸ್ಮ ತಮ್ ॥೪॥**

**ಕವಯಃ** ಶಾಸ್ತ್ರವನ್ನು ಬಲ್ಲ ಪರೋಕ್ಷಜ್ಞಾನಿಗಳು **ವಿಶ್ವಂ** ಜಗತ್ತನ್ನು **ನಶ್ವರಂ** ಅನಿತ್ಯವೆಂದು **ವದಂತಿ ಚ** ಶಾಸ್ತ್ರದಿಂದ ತಿಳಿಯುವರು ಮತ್ತು ಹೇಳುವರು **ಅಧ್ಯಾತ್ಮವಿದಃ** ಶ್ರೀಹರಿಯನ್ನು ತಿಳಿದ **ವಿಪಶ್ಚಿತಃ** ಅಪರೋಕ್ಷಜ್ಞಾನಿಗಳು **ಪಶ್ಯಂತಿ ಚ** ಸಮಾಧಿಯಲ್ಲಿ ಪ್ರವಾಹತಃ ಅನಾದಿ, ಸ್ವರೂಪತಃ ಅನಿತ್ಯ ಎಂದು ಕಾಣುವರು **ತಥಾಪಿ** ಆದರೂ **ಹೇ ಅಜ** ಜನನವಿಲ್ಲದ ಶ್ರೀಹರಿಯೇ **ತವ** ನಿನ್ನ **ಮಾಯಯಾ** ಇಚ್ಛೆಯಿಂದ **ಸುವಿಸ್ಮಯಂ** ಬಹಳ ಆಶ್ಚರ್ಯವಾಗುವಂತೆ **ಮುಹ್ಯಂತಿ** ಜ್ಞಾನಸಾಮಗ್ರಿ ಇದ್ದರೂ ನಿನ್ನ ಅನುಗ್ರಹವಿಲ್ಲದಿದ್ದರೆ ನಿನ್ನ ವಿಷಯದಲ್ಲಿ ಮೋಹಗೊಳ್ಳುವರು (ಸರಿಯಾಗಿ ತಿಳಿಯಲಾರರು) (ಅತಃ) ನಿನ್ನ ಮಾಯೆಯಿಂದ ಜ್ಞಾನಿಗಳು ನಿನ್ನ ಕಾರ್ಯಗಳನ್ನು ಅರಿಯದಿರುವುದರಿಂದ ಆ ಮೋಹ ನಿವೃತ್ತಿಗಾಗಿ **ಕೃತ್ಯವಿದಂ** ನಿನ್ನ ಕೆಲಸಗಳ ಪ್ರಯೋಜನವನ್ನು ಬಲ್ಲ **ಸುವಿಸ್ಮಯಂ** ಸ್ವಲ್ಪವೂ ಗರ್ವವಿಲ್ಲದ **ತಂ** ಆ ನಿನ್ನನ್ನು **ನತಾಃ ಸ್ಮಃ** ನಮಿಸುವೆವು. **ಕೃತ್ಯಮಿದಂ** ಎಂಬ ಪಾಠದಲ್ಲಿ ಈ ನಿನ್ನ ಕೃತ್ಯವು ಆಶ್ಚರ್ಯಕರವೆಂದು ಅರ್ಥ.

**ಕವಯಃ ವಿಪಶ್ಚಿತಃ** ಎಂದು ಹೇಳಿದ್ದರಿಂದ ಜಗತ್ಪ್ರವಾಹ ನಿತ್ಯತೆ, ಸತ್ಯತೆಯಲ್ಲಿ ಪರೋಕ್ಷಜ್ಞಾನಿಗಳ ಮಾತು ಅಪರೋಕ್ಷಜ್ಞಾನಿಗಳ ಪ್ರತ್ಯಕ್ಷವೂ ಪ್ರಮಾಣವೆಂದು ಹೇಳಿದಂತಾಯಿತು. **ಮುಹ್ಯಂತಿ** ಎಂಬುದರಿಂದ **ಮುಹ್ಯಂತಿ ಯಂ ಸೂರಯಃ** (೧-೧-೧) ಎಂಬುದನ್ನು ವಿವರಿಸಿದಂತಾಯಿತು. **ಕೃತ್ಯವಿದಂ** ಎಂದು ಹೇಳಿದ್ದರಿಂದ ಶ್ರೀಹರಿಯೊಬ್ಬನೇ ಅವನ ಕಾರ್ಯಗಳನ್ನು ಬಲ್ಲವನೆಂದು ತಿಳಿಸಿರುವರು. ||೪||

ಬೇರೆಯವರಿಗೆ ಯಾವುದು ಅತ್ಯಾಶ್ಚರ್ಯಕರವೋ ಅಂಥ ಜಗತ್ಕರ್ತೃತ್ವವು ಶ್ರೀಹರಿಗೆ ಆಶ್ಚರ್ಯಕರವೇನಲ್ಲ ಎಂದು ಹೇಳುವರು. ಅಥವಾ **ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ** ಎಂದು ಶ್ರುತಿಯು ಹೇಳುವಂತೆ ಕಾರ್ಯಕಾರಣಾದಿಗಳಿಲ್ಲದ ಶ್ರೀಹರಿಯು ಪ್ರಪಂಚವನ್ನು ನಿರ್ಮಿಸಿದನು ಎಂಬುದು ಹೇಗೆ ಯುಕ್ತವಾಗುವುದು ಎಂದು ಶಂಕಿಸಿ ಮಹಾಶಕ್ತಿಯುಳ್ಳವನಾದ್ದರಿಂದ ಎಂದು ತಿಳಿಸುವುದಕ್ಕಾಗಿ ಹೇಳುತ್ತಾರೆ

**ವಿಶ್ವೋದ್ಭವಸ್ಥಾನನಿರೋಧಕರ್ಮ ತೇ**
**ಹ್ಯಕರ್ತುರಂಗೀಕೃತಮಪ್ಯಪಾವೃತಮ್ ।**
**ಯುಕ್ತಂ ನ ಚಿತ್ರಂ ತ್ವಯಿ ಕಾರ್ಯಕಾರಣೇ**
**ಸರ್ವಾತ್ಮನಿ ವ್ಯತಿರಿಕ್ತೇ ಚ ವಸ್ತುನಿ** ||೫||

 

**ಹೇ ಹರೇ** ಶ್ರೀಹರಿಯೇ **ಅಕರ್ತುಃ** ಪ್ರಯಾಸವಿಲ್ಲದೆ ಕರ್ಮ ಮಾಡುವ **ತೇ** ನಿನಗೆ **ವಿಶ್ವೋದ್ಭವಸ್ಥಾನನಿರೋಧಕರ್ಮ** ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳೆಂಬ ಕಾರ್ಯಗಳು **ಅಪಾವೃತಂ ಅಂಗೀಕೃತಂ ಅಪಿ** ಸ್ಪಷ್ಟವಾಗಿಯೇ ವೇದಾದಿಗಳಲ್ಲಿ ಹೇಳಲ್ಪಟ್ಟಿವೆ **ಯುಕ್ತಂ ಹಿ** ಇದು ಯುಕ್ತಿಯುಕ್ತವೂ ಆಗಿದೆ **ಕಾರ್ಯಕಾರಣೇ** ವಿಚಿತ್ರ ಅನೇಕ ಕಾರ್ಯ ಮಾಡುವ ಶಕ್ತಿಯುಳ್ಳ **ಸರ್ವಾತ್ಮನಿ** ಎಲ್ಲಕ್ಕೂ ಸ್ವಾಮಿಯಾದ ಮತ್ತು ಪ್ರಕೃತ್ಯಾದಿಸರ್ವಕಾರಣಗಳಿಗೆ ಸತ್ತಾಪ್ರದನಾದ ಆದ್ದರಿಂದಲೇ **ವ್ಯತಿರಿಕ್ತೇ** ಲೋಕವಿಲಕ್ಷಣನಾದ ನಿಮಿತ್ತಕಾರಣನಾದ್ದರಿಂದ ಭಿನ್ನನಾದ **ವಸ್ತುನಿ** ಮೇಲೆ ಹೇಳಿದಂತೆ ಪ್ರಮಾಣ ಪ್ರಸಿದ್ಧನಾದ ಸ್ವತಂತ್ರನಾದ **ತ್ವಯಿ** ನಿನ್ನಲ್ಲಿ **ಇಹ** ಈ ಜಗತ್ಕರ್ತೃತ್ವವೂ, ಒಬ್ಬನೇ ಅನೇಕ ವಿಚಿತ್ರ ಕಾರ್ಯ ಮಾಡುವುದು **ನ ಚಿತ್ರಂ** ಆಶ್ಚರ್ಯವೇನಲ್ಲ.

## ಅಕರ್ತೃನಾದವನಿಗೂ ಕರ್ತೃತ್ವಯುಕ್ತವೇ?

ಅಕರ್ತೃನಾದವನಿಗೂ ಕರ್ತೃತ್ವಯುಕ್ತವೆಂದು ಪ್ರಾಮಾಣಿಕರು ಉಪಪಾದಿಸಿರುವರು ಎಂಬುದನ್ನು ತಿಳಿಸುವರು ಶ್ರೀಮದಾಚಾರ್ಯರು

ತಾತ್ಪರ್ಯ - 'ಅಪ್ರಯಾಸೇನ ಕರ್ತೃತ್ವಮಕರ್ತೃತ್ವಮಿಹೋಚ್ಯತೇ ।
ಮಹಾಶಕ್ತಿತ್ವತಸ್ತಚ್ಚ ಯುಜ್ಯತೇ ಪರಮಸ್ಯ ತು' ಇತಿ ತಂತ್ರಸಾರೇ ॥

**ಇಹ** ವೇದಾದಿಗಳಲ್ಲಿ **ಅಪ್ರಯಾಸೇನ ಕರ್ತೃತ್ವಂ** ಆಯಾಸವಿಲ್ಲದೇ ಮಾಡುವುದು **ಅಕರ್ತೃತ್ವಂ ಉಚ್ಯತೇ** ಅಕರ್ತೃತ್ವ ಎಂದು ಹೇಳಲ್ಪಡುವುದೇ ಹೊರತು ಯಾವ ಕ್ರಿಯೆಯನ್ನೂ ಮಾಡದಿರುವುದೆಂಬುದಲ್ಲ. ಲೋಕದಲ್ಲಿ ಒಬ್ಬನಿಗೆ ಅನೇಕ ವಿಚಿತ್ರ ಕಾರ್ಯ ಮಾಡುವುದು ಅಸಂಭಾವಿತವಾದರೂ ಮಹಾಶಕ್ತಿಯಿರುವುದರಿಂದ ಪರಮಾತ್ಮನಿಗೆ ಸಂಭಾವಿತವೇ ಎಂದು ತಂತ್ರಸಾರದಲ್ಲಿ ಹೇಳಿದೆ.

**ವಿ.ವಿ :- ಹಿ** ಎಂಬುದು ಅಕರ್ತೃವಿಗೂ ಕರ್ತೃತ್ವ ಕೊಡುವುದು ಎಂಬುದನ್ನು ಸೂಚಿಸುವುದು (ಪ್ರಮಾಣ ಪ್ರಸಿದ್ಧಿಯನ್ನು ತಿಳಿಸುವುದರಿಂದ). ವೇದದಲ್ಲಿ ಹೇಳಿದ್ದರೂ **ಮಣ್ಣು ಮಾತಾಡಿತು** ಎಂಬ ಯುಕ್ತಿವಿರುದ್ಧವಾದ ಮಾತನ್ನು ಹೇಗೆ ಒಪ್ಪುವುದಿಲ್ಲವೋ ಹಾಗೆಯೇ ಶ್ರೀಹರಿಯ ಕರ್ತೃತ್ವವೂ ನಿಷ್ಕ್ರಿಯನಾದ್ದರಿಂದ ಒಪ್ಪಲಾಗುವುದಿಲ್ಲವೆಂಬ ಶಂಕೆಯನ್ನು **ಯುಕ್ತಂ** ಎಂಬುದರಿಂದ ಪರಿಹರಿಸುವರು.

ಶ್ರೀಹರಿ ಅಕರ್ತ ಎಂಬುವುದಕ್ಕೆ ಕರ್ತನೇ ಅಲ್ಲ ಎಂದು ಹೇಳದೇ ಆಯಾಸವಿಲ್ಲದೆ ಕರ್ತೃ ಎಂದು ಹೇಳಿದ್ದು ಶ್ರೀಹರಿಮಹಾಶಕ್ತನಾದ್ದರಿಂದ ಯುಕ್ತವೆಂದೂ ತಂತ್ರಸಾರದಲ್ಲಿ ಹೇಳಿದೆ. ಮಣ್ಣು ಮಾತಾಡುವುದನ್ನು ಕಣ್ಣಿಂದ ಕಂಡಿಲ್ಲವಾದ್ದರಿಂದಲೂ ವ್ಯಾಪ್ತಿಗ್ರಹಿಸಲಾಗದ್ದರಿಂದಲೂ ಯುಕ್ತಿವಿರುದ್ಧವೆಂದು ಅಂಗೀಕರಿಸಿಲ್ಲ. ಶ್ರೀಹರಿಯು ಅಪ್ರಾಯಸದಿಂದ ಕರ್ತ ಎನ್ನಲು ಜ್ಞಾನಿಗಳ ಪ್ರತ್ಯಕ್ಷ, ವೇದ, ಮಹಾಶಕ್ತಿ ಎಂಬ ಯುಕ್ತಿ ಇದೆಯಾದ್ದರಿಂದ ಒಪ್ಪುವುದು ಯುಕ್ತ. ಆದರೂ ನಿರ್ವಿಕಾರನಾದ್ದರಿಂದ ಆರೋಪಿತಕರ್ತೃತ್ವ ಹೇಳಬಹುದೇ ಹೊರತು ಪಾರಮಾರ್ಥಿಕ ಕರ್ತೃತ್ವವನ್ನಲ್ಲ ಎಂದರೆ **ನ ಚಿತ್ರಂ** ಎಂದಿರುವರು. ಜ್ಞಾನದುರ್ಬಲರಾದ ಇತರರಿಗೆ ಇದು ಆಶ್ಚರ್ಯವೇ ಹೊರತು ಶ್ರೀಹರಿಗೆ ಅಲ್ಲ ಎಂದಭಿಪ್ರಾಯ. ಇದು ಹೇಗೆ ಎಂದರೆ **ಕಾರ್ಯಕಾರಣೇ** ಎಂದಿರುವರು. ಆಶ್ಚರ್ಯಕ್ಕೂ ಅವನೇ ಕಾರಣನಾದ್ದರಿಂದ ಅವನಲ್ಲಿ ಆಶ್ಚರ್ಯವಾದುದು ಇಲ್ಲ (ಅಲ್ಲ). ಇದಕ್ಕೆ ಮತ್ತೊಂದು ಕಾರಣ **ಸರ್ವಾತ್ಮನಿ** ಎಂದು. ಎಲ್ಲಕ್ಕೂ ಸ್ವಾಮಿಯಾದ ಅವನಿಗೇನಾಶ್ಚರ್ಯ? ಎಂದರ್ಥ. ಕಾರ್ಯಗಳಿಗೆ ಉಪಾದಾನ ಕಾರಣನಾದರೆ ಮಣ್ಣಿನಂತೆ ಕಾರ್ಯದಿಂದ ಅಭೇದವೇ ಎಂದರೆ **ವ್ಯತಿರಿಕ್ತೇ** ಎಂದುತ್ತರ. ನಿಮಿತ್ತಕಾರಣನಾದ್ದರಿಂದ ಕಾರ್ಯಜಗತ್ತಿನಿಂದ ಭಿನ್ನನೆಂದು ಅಭಿಪ್ರಾಯ. **ಲೋಕವಿಲಕ್ಷಣ** ಎಂದರೆ ಶೂನ್ಯನಂತೆಯೇ ಎಂದರೆ **ವಸ್ತುನಿ** ಎಂದುತ್ತರ. ಇವನೇ ಸತ್ತಾಪ್ರದ. ಎಲ್ಲಕ್ಕೂ ಕಾರಣ. ಶೂನ್ಯನಲ್ಲ. ಪ್ರಮಾಣಸಿದ್ಧವಾದ್ದರಿಂದ ಶ್ರೀಹರಿಯಲ್ಲಿ ಯಾವುದೂ ಅಸಂಭಾವಿತಲ್ಲವೆಂದು ಭಾವ. ಈ ವಿಷಯದಲ್ಲಿ ಪ್ರಮಾಣಗಳು

'ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ ।
ಏಕೋಽವಶೀ ಸರ್ವಭೂತಾಂತರಾತ್ಮಾ ಸರ್ವಾನ್ ದೇವಾನೇಕ ಏವಾನುವಿಷ್ಟಃ ।
ಸಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತುಹೇತುಃ ।
ಕಾರ್ಯೇಷು ಚೈವಂ ಸ ಹಿ ಕರ್ಮಕರ್ತೃ ರೂಪೈರಶೇಷೈರವತೀಹ ಸರ್ವಂ' ।

ಮುಂತಾಗಿ ಇರುವುದರಿಂದ ಅಕರ್ತೃತ್ವವಾಕ್ಯಗಳು ಅನಾಯಾಸಕರ್ತೃತ್ವವನ್ನು ಹೇಳುವವು ಎಂದು ಭಾವ. ।।೫।।

ಈಗ ಅವತಾರ ಚರಿತ್ರೆಯಿಂದ ಸ್ತುತಿಸಿ ನಮಸ್ಕರಿಸುವರು. ಧರ್ಮಾಯ ಎಂಬ ಪದದ ಅಭಿಪ್ರಾಯ ಹೇಳುವರು




**ವೇದಾನ್ಯುಗಾಂತೇ ತಮಸಾತಿರಸ್ಕೃತಾನ್**
**ರಸಾತಲಾದ್ಯೋ ನೃತುರಂಗವಿಗ್ರಹಃ ।**
**ಪ್ರತ್ಯಾದದೇ ವೈ ಕವಯೇಽಭಿಯಾಚತೇ**
**ತಸ್ಮೈ ನಮಸ್ತೇಽವಿತಯೇ ಹಿತಾಯ ತೇ ॥೬॥**

**ಯುಗಾಂತೇ** ಪ್ರಳಯದ ಕೊನೆಯಲ್ಲಿ ಸೃಷ್ಟಿಯ ಪ್ರಾರಂಭದಲ್ಲಿ **ತಮಸಾ** ಮಧು ಎಂಬ ದೈತ್ಯನಿಂದ **ತಿರಸ್ಕೃತಾನ್** ಅಪಹರಿಸಲ್ಪಟ್ಟ **ವೇದಾನ್** ವೇದಗಳನ್ನು **ನೃತುರಂಗವಿಗ್ರಹಃ** ಮನುಷ್ಯ ಮತ್ತು ಕುದುರೆಯಂತೆ ಶರೀರವುಳ್ಳ (ಕಂಠದ ಕೆಳಕ್ಕೆ ಮನುಷ್ಯ ಮೇಲಕ್ಕೆ ಕುದುರೆ ಮುಖ ಇರುವ) **ಯಃ** ಯಾವ ಹಯಗ್ರೀವ ರೂಪಿಯಾದ ನೀನು **ರಸಾತಲಾತ್** ಪಾತಾಲದಿಂದ ದೈತ್ಯನನ್ನು ಸಂಹರಿಸಿ ತಂದು **ಅಭಿಯಾಚತೇ** ಪ್ರಾರ್ಥಿಸುತ್ತಿರುವ **ಕವಯೇ** ಬ್ರಹ್ಮದೇವರಿಗೆ **ಪ್ರತ್ಯಾದದೇ ವೈ** ಮೊದಲು ಕೊಟ್ಟದ್ದನ್ನೇ ಮತ್ತೆ ಕೊಟ್ಟೆಯೋ ಅಥವಾ ಬ್ರಹ್ಮದೇವರಿಗೆ ಕೊಡಲು ಮತ್ತೆ ತೆಗೆದುಕೊಂಡೆಯೋ **ತಸ್ಮೈ ತೇ** ಅಂಥ ನಿನಗೆ **ನಮಃ** ನಮಸ್ಕಾರವು. **ಅವಿತಥೇಹಿತಾಯ** ಸತ್ಯಸಂಕಲ್ಪನಾದ, ಸತ್ಯಕರ್ಮನಾದ ನಿನಗೆ ನಮಸ್ಕಾರ. ಇದರಿಂದ **ಭಗವತೇ** ಎಂಬುದರ ಅರ್ಥ ತಿಳಿಸಿರುವರು. ಐಶ್ವರ್ಯ ಮೊದಲಾದ ಗುಣಗಳ ಸಮಗ್ರವಾಗಿರುವವನೇ ಸತ್ಯಕರ್ಮನಾಗಲೂ ಸಾಧ್ಯ . ಸತ್ಯಸೃಷ್ಟಿ ಮಾಡಲಾಗದವರು ಮಾಯಾಸೃಷ್ಟಿ ಮಾಡುವರು. ಸರ್ವಸಮರ್ಥನಾದ ಶ್ರೀಹರಿಯು ಮಾಯಾ ಸೃಷ್ಟಿಯನ್ನು ಏಕೆ ಇಚ್ಛಿಸುವನು? ಕಾರಣ ಮಾಯಾಕರ್ತೃತ್ವವಲ್ಲವೆಂದರ್ಥ. ಇಲ್ಲಿ ಹಯಗ್ರೀವಾವತಾರ ಚರಿತ್ರೆ ಹೇಳಿದಂತಾಯಿತು. ॥೬॥

## ಹರಿವರ್ಷ - ಶ್ರೀನರಹರಿ

**ಹರಿವರ್ಷೇ ಚ ಭಗವಾನ್ನರಹರಿರೂಪೇಣಾಸ್ತೇ ತದ್ರೂಪಗ್ರಹಣನಿಮಿತ್ತ-ಮುತ್ತರತ್ರ ಅಭಿಧಾಸ್ಯಾಮಃ ತದ್ದಯಿತಂ ರೂಪಂ ಮಹಾಪುರುಷಗುಣ-ಭಾಜನೋ ಮಹಾಭಾಗವತೋ ದೈತ್ಯದಾನವಕುಲತೀರ್ಥೀಕರಣಶೀಲಚರಿತಃ ಪ್ರಹ್ಲಾದೋಽವ್ಯವಧಾನಾನನ್ಯಭಕ್ತಿಯೋಗೇನ ಸಹ ತದ್ವರ್ಷಪುರುಷೈರುಪಾಸ್ತೇ ಇದಂ ಚೋದಾಹರತಿ ॥೭॥**

**ಹರಿವರ್ಷೇ ಚ** ಹರಿವರ್ಷದಲ್ಲಿಯೂ **ಭಗವಾನ್** ಶ್ರೀಹರಿಯು **ನರಹರಿರೂಪೇಣ** ನರಸಿಂಹರೂಪದಿಂದ **ಆಸ್ತೇ** ಇರುವನು **ತದ್ರೂಪಗ್ರಹಣನಿಮಿತ್ತಂ**

ಆ ರೂಪವನ್ನು ತೆಗೆದುಕೊಳ್ಳುವುದಕ್ಕೆ ಕಾರಣವನ್ನು **ಉತ್ತರತ್ರ** ಮುಂದೆ ಏಳನೇ ಸ್ಕಂಧದಲ್ಲಿ **ಅಭಿಧಾಸ್ಯಾಮಃ** ಹೇಳುವೆವು. **ಮಹಾಪುರುಷಗುಣಭಾಜನಃ** ಉತ್ತಮ ಪುರುಷರ ಗುಣಗಳಾದ ವೀರ್ಯ, ಶೌರ್ಯ, ಔದಾರ್ಯಾದಿ ಗುಣಗಳಿಗೆ ಪಾತ್ರರಾದ ಶ್ರೇಷ್ಠ ಜೀವರಾದ ಬ್ರಹ್ಮಾದಿಗಳ ಗುಣಗಳಾದ ಹರಿಭಕ್ತಿ, ಜ್ಞಾನ ಮುಂತಾದವುಗಳನ್ನು ಹೊಂದಿರುವ **ಮಹಾಭಾಗವತಃ** ಮಹಾಭಗವದ್ಭಕ್ತರಾದ **ದೈತ್ಯದಾನವಕುಲತೀರ್ಥೀಕರಣಶೀಲಚರಿತಃ** ದೈತ್ಯದಾನವಕುಲವನ್ನು ಪವಿತ್ರಗೊಳಿಸುವ ಸ್ವಭಾವ ಮತ್ತು ಆಚಾರವುಳ್ಳ **ಪ್ರಹ್ಲಾದಃ** ಪ್ರಹ್ಲಾದರಾಜರು **ಅವ್ಯವಧಾನ** ಫಲೇಚ್ಛೆ ಮುಂತಾದ ವ್ಯವಧಾನವಿಲ್ಲದ **ಅನನ್ಯ** ಅನ್ಯಾವಿಷಯಕವಾದ ಭಕ್ತಿಯೋಗೇನ ಭಕ್ತಿಯಿಂದ **ತದ್ವರ್ಷಪುರುಷೈಃ ಸಹ** ಆ ಖಂಡದಲ್ಲಿರುವ ಜನರಿಂದ ಸೇರಿಕೊಂಡು **ಉಪಾಸ್ತೇ** ಉಪಾಸಿಸುವರು. **ಇದಂ ಚ** ಮುಂದೆ ಹೇಳುವ ಮಂತ್ರವನ್ನು **ಉದಾಹರಂತಿ** ಹೇಳುವರು. ।।೭।।

**ಓಂ ನಮೋ ನೃಸಿಂಹಾಯ ತೇಜಸ್ತೇಜಸೇ ಆವಿರಾವಿರ್ಭವ ವಜ್ರನಖ ವಜ್ರದಂಷ್ಟ್ರ ಕರ್ಮಾಶಯಾನ್ ರಂಧಯ ರಂಧಯ ತಮೋ ಗ್ರಸ ಸ್ವಾಹಾ ಅಭಯಮಭಯಮಾತ್ಮನೇ ಭೂಯಿಷ್ಠಾತ್ ।।೮।।**

**ತೇಜಸ್ತೇಜಸೇ** ಸೂರ್ಯ ಮೊದಲಾದ ತೇಜಸ್ಸುಗಳಿಗಿಂತ ಅಧಿಕ ತೇಜೋರೂಪನಾದ **ನರಸಿಂಹಾಯ** ನರಸಿಂಹನಿಗೆ **ನಮಃ** ನಮಸ್ಕಾರವು **ಹೇ ವಜ್ರನಖ** ವಜ್ರದಂತೆ ಅಭೇದ್ಯಗಳಾದ ಉಗುರುಗಳುಳ್ಳ **ವಜ್ರದಂಷ್ಟ್ರ** ವಜ್ರದಂತಹ ಕೋರೆಹಲ್ಲುಗಳುಳ್ಳ ನರಸಿಂಹನೇ! **ಆವಿರಾವಿರ್ಭವ** ನಿತ್ಯವೂ ಪ್ರಕಟನಾಗು, ಅತ್ಯಂತ ಪ್ರಕಟನಾಗು **ಕರ್ಮಾಶಯಾನ್** ಕರ್ಮಗಳನ್ನು ಅಂತಃಕರಣವನ್ನು **ರಂಧಯ ರಂಧಯ** ಸುಟ್ಟುಬಿಡು **ತಮಃ** ಅಜ್ಞಾನವನ್ನು, ದೈತ್ಯಕುಲವನ್ನು **ಗ್ರಸ** ದೂರೀಕರಿಸು, ಸಂಹರಿಸು **ಸ್ವಾಹಾ** ನಿನಗಾಗಿ ಈ ದ್ರವ್ಯವನ್ನು ಹೋಮಿಸುವೆವು **ಆತ್ಮನೇ** ನಿನ್ನನ್ನು ಉಪಾಸಿಸುವ ಜೀವನಿಗೆ **ಅಭಯಂ ಅಭಯಂ** ಸಂಸಾರ ಭಯವಿಲ್ಲದಂತೆ, ಮೋಕ್ಷವಾಗುವಂತೆ **ಭೂಯಿಷ್ಠಾತ್** ಮಾಡು, ಆಗಲಿ (ಇದು ಅವ್ಯಯ) **ಓಂ** ಗುಣಪೂರ್ಣನು ನೀನು. ।।೮।।

**ರಂಧಯ** ಎಂದು ದಾಹವನ್ನು ಪ್ರಾರ್ಥಿಸಿದ್ದರಿಂದ ಸರ್ವದಾ ದಾಹವಾಗುವ ಪ್ರಸಂಗ ಬಂದರೆ ಹೇಳುವರು

 

**ಸ್ವಸ್ತ್ಯಸ್ತು ವಿಶ್ವಸ್ಯ ಖಲಃ ಪ್ರಸೀದತಾಂ**
**ಧ್ಯಾಯಂತು ಭದ್ರಾಣಿ ಶಿವಂ ಮನೋಧಿಯಾ ।**
**ಮನಶ್ಚ ಭದ್ರಂ ಭಜತಾದಧೋಕ್ಷಜೇ**
**ಆವಿಶ್ಯತಾಂ ನೋ ಮತಿರಪ್ಯಹೈತುಕೀ ॥೯॥**

**ವಿಶ್ವಸ್ಯ** ಜಗತ್ತಿಗೆ **ಸ್ವಸ್ತಿ ಅಸ್ತು** ಮಂಗಲವಿರಲಿ **ಖಲಃ** ದುರ್ಜನರಿಗೆ ದುಷ್ಟನಂತಿರುವ ಸಜ್ಜನರನ್ನು ಜ್ಞಾನದಿಂದ ಅನುಗ್ರಹಿಸುವ ನರಸಿಂಹನು **ಪ್ರಸೀದತಾಂ** ಪ್ರಸನ್ನನಾಗಲಿ. (**ಖಲುಃ** ಎಂಬ ಪಾಠದಲ್ಲಿ ಸಂಹಾರಕನಾದ ನರಸಿಂಹನೆಂದರ್ಥ) ಎಲೋ ಹರಿವರ್ಷ ನಿವಾಸಿಗಳೇ! **ಭದ್ರಾಣಿ(ಉದ್ದಿಶ್ಯ)** ಮಂಗಳಗಳಿಗಾಗಿ **ಧ್ಯಾಯಂತು** ಜನರು ಧ್ಯಾನಮಾಡಲಿ **ಮನಶ್ಚ** ಮನಸ್ಸು **ಮನೋಧಿಯಾ** ಶಾಸ್ತ್ರಮನನ ಮತ್ತು ಧ್ಯಾನದಿಂದ **ಶಿವಂ** ಶುದ್ಧನಾದ, ಸುಖರೂಪನಾದ **ಮನಃ** ಜ್ಞಾನರೂಪನಾದ **ಭದ್ರಂ** ಸಮಸ್ತ ಮಂಗಲ ಸ್ವರೂಪನಾದ ನರಹರಿಯನ್ನು **ಧಿಯಾ ಧ್ಯಾಯಂತು** ಬುದ್ಧಿಯಿಂದ ಧ್ಯಾನಿಸಲಿ ಅದಕ್ಕಾಗಿ **ಮನಃ ಭದ್ರಂ ಭಜತಾತ್** ಮನಸ್ಸು ಮಂಗಳಕರನಾದ ನೃಸಿಂಹನನ್ನು ಸೇವಿಸಲಿ **ನಃ** ನಮ್ಮ **ಮತಿಃ** ಬುದ್ಧಿಯು **ಅಹೈತುಕೀ** ಫಲಕಾಮನಾ ಮುಂತಾದ ನಿಮಿತ್ತಗಳಿಲ್ಲದೇ **ಅಧೋಕ್ಷಜೇ** ಶ್ರೀಹರಿಯಲ್ಲಿ **ಆವಿಶ್ಯತಾಂ** ಸೇರಲಿ, ಪ್ರವೇಶಿಸಲಿ **ಆವೇಶ್ಯತಾಂ** ಎಂಬ ಪಾಠದಲ್ಲಿ ನಿಮ್ಮಿಂದ ಸೇರಿಸಲ್ಪಡಲಿ ಎಂದರ್ಥ ಮಾಡಬೇಕು. ॥೯॥

## ವೈರಾಗ್ಯಕ್ಕೆ ಸಾಧನ ಸಜ್ಜನ ಸಂಗ

ಮನಸ್ಸು ಮೊದಲಾದವು ಕೇವಲ ಹರಿವಿಷಯಕವಾಗಬೇಕಾದರೆ ಇತರ ವಿಷಯಗಳಲ್ಲಿ ವೈರಾಗ್ಯಬೇಕು. ಆ ವೈರಾಗ್ಯಕ್ಕೆ ಸಾಧನ ಸಜ್ಜನಸಂಗ ಎಂದು ಹೇಳುವರು

**ಮಾಽಽಗಾರದಾರಾತ್ಮಜದೇಹಬಂಧುಷು**
**ಸಂಗೋ ಯದಿ ಸ್ಯಾದ್ಭಗವತ್ಪ್ರಿಯೇಷು ನಃ ।**
**ಯಃ ಪ್ರಾಣವೃತ್ತ್ಯಾ ಪರಿತುಷ್ಟ ಆತ್ಮವಾನ್**
**ಸಿದ್ಧ್ಯತ್ಯದೂರಾನ್ನ ತಥೇಂದ್ರಿಯಪ್ರಿಯಃ ॥೧೦॥**

**ನಃ** ನಮಗೆ **ಯದಿ** ಯಾವಾಗ **ಭಗವತ್ಪ್ರಿಯೇಷು** ಶ್ರೀಹರಿಯ ಭಕ್ತರಲ್ಲಿ **ಸಂಗಃ ಸ್ಯಾತ್** ಸಹವಾಸ ಸ್ನೇಹ ಆಗುವುದೋ **ತರ್ಹಿ** ಆಗ **ಆಗಾರದಾರಾತ್ಮಜ ದೇಹಬಂಧುಷು**

ಮನೆ, ಮಡದಿ, ಮಗ, ಶರೀರ, ಬಂಧುಗಳಲ್ಲಿ **ಸಂಗಃ ಮಾ ಸ್ಯಾತ್** ಆಸಕ್ತಿ ಉಂಟಾಗಲಾರದು. ಅದರಿಂದ ಮನಸ್ಸು ಶುದ್ಧವಾಗುವುದು. ಆದ್ದರಿಂದ ಸಜ್ಜನ ಸಂಗವಾಗಲಿ ಎಂದು ಭಾವ. ಅಥವಾ **ನಃ** ನಮಗೆ ಮನೆ, ಮಡದಿ, ಮಗ, ದೇಹ, ಬಂಧುಗಳಲ್ಲಿ ಸಂಗಬೇಡ. ಸಂಗವೂ ಆವಶ್ಯಕವೇ ಆದರೆ ಸತ್ಸಂಗವಾಗಲಿ (ಹರಿಗೆ ಪ್ರಿಯವಾದವರಲ್ಲಿ ಹರಿಸೇವೆಗೆ ಕಾರಣರಾಗುವ ಇವರಲ್ಲಿ ಎಂದರ್ಥ. ಮನೆ ಮೊದಲಾದವುಗಳಲ್ಲಿ ಆಸಕ್ತಿ ಇಲ್ಲವಾದರೆ ಜೀವನವೇ ನಡೆಯದೇ ಬಿದ್ದು ಹೋಗುವ ಪ್ರಸಂಗ ಬರುವುದಲ್ಲ ಎಂದರೆ ಹೇಳುತ್ತಾರೆ **ಯಃ** ಯಾವನು **ಪ್ರಾಣವೃತ್ತ್ಯಾ** ದೇಹಧಾರಣಗೆ ಅಗತ್ಯವಾದುದರಿಂದಷ್ಟೇ **ಪರಿತುಷ್ಟಃ** ಸಂತುಷ್ಟನೋ, ಅಲಂಬುದ್ಧಿ-ಯುಳ್ಳವನೋ **ಸಃ** ಅವನು **ಆತ್ಮವಾನ್** ಮನಸ್ಸನ್ನು ವಶದಲ್ಲಿಟ್ಟುಕೊಂಡವನು ಅವನು **ಅದೂರಾತ್** ಶೀಘ್ರದಲ್ಲಿಯೇ **ಸಿಧ್ಯತಿ** ಅಪರೋಕ್ಷವನ್ನು ಹೊಂದುವನು, ಮುಕ್ತನಾಗುವನು. ಆದರೆ **ತಥಾ** ಇವನಂತೆ **ಇಂದ್ರಿಯಪ್ರಿಯಃ** ಪ್ರಾಣಧಾರಣೆಗಿಂತ ಹೆಚ್ಚಾಗಿ ವಿಷಯಾಸಕ್ತನು **ನ ಸಿಧ್ಯತಿ** ಮುಕ್ತನಾಗಲಾರ. ಮತ್ತೆ ಮತ್ತೆ ಜನನ, ಮರಣ, ನರಕ ಮುಂತಾದ ವಿವಿಧ ದುಃಖರೂಪ ಸಂಸಾರವನ್ನೇ ಹೊಂದುವನು. ॥೧೦॥

## ಸತ್ಸಂಗ ಆವಶ್ಯಕ

ಭಗವತ್ಪ್ರಿಯರ ಸಂಗದಿಂದ ವಿಷಯವೈರಾಗ್ಯ ಹೇಗೆ ಬರುವುದು? ಎಂದರೆ ಅದನ್ನು ಉಪಪಾದಿಸುತ್ತ ಅವರ ಸಂಗದ ಆವಶ್ಯಕತೆ ಹೇಳುವರು

**ಯತ್ಸಂಗಲಬ್ಧಂ ನಿಜವೀರ್ಯವೈಭವಂ**
**ತೀರ್ಥಂ ಮುಹುಃ ಸಂಸ್ಪೃಶತಾಂ ಹಿ ಮಾನಸಂ ।**
**ಹರತ್ಯಜೋಂಹಃ ಶ್ರುತಿಭಿರ್ಗತೋಂತಃ**
**ಕೋ ವೈ ನ ಸೇವೇತ ಮುಕುಂದವಿಕ್ರಮಂ ॥೧೧॥**

**ಶ್ರುತಿಭಿಃ** ಶ್ರವಣೇಂದ್ರಿಯಗಳಿಂದ **ಅಂತಃ ಗತಃ** ಹೃದಯದಲ್ಲಿ ಪ್ರವೇಶಿಸಿದ (ಮನಸ್ಸಿನಲ್ಲಿ ತೋರಿದ) **ಅಜಃ** ಜನನ ರಹಿತನಾದ ಶ್ರೀಹರಿಯು **ಯತ್ಸಂಗಲಬ್ಧಂ** ಯಾವ ಭಗವತ್ಪ್ರಿಯರ ಸಹವಾಸದಿಂದ ದೊರೆತ **ನಿಜವೀರ್ಯವೈಭವಂ** ತನ್ನ ಸ್ವಾಭಾವಿಕ ಮಹಾತ್ಮ್ಯೆ ಮತ್ತು ವ್ಯಾಪ್ತಿ ಎಂಬ ಗುಣಗಳನ್ನು ಪ್ರತಿಪಾದಿಸುವ **ತೀರ್ಥಃ** ವೇದಾಂತ ಶಾಸ್ತ್ರವನ್ನು **ಮುಹುಃ** ನಿರಂತರವೂ **ಸಂಸ್ಪೃಶತಾಂ** ಶ್ರವಣ ಮನನಗಳಿಂದ ಸೇವಿಸುವ ಅಧಿಕಾರಿಗಳ **ಮಾನಸಂ** ಮನಸ್ಸಿನಲ್ಲಿರುವ **ಅಂಹಃ** ವಿಷಯ ಸಂಸರ್ಗದಿಂದ




ಬಂದ ದೋಷವನ್ನು(ಪಾಪವನ್ನು) **ಹರತಿ** ಪರಿಹರಿಸುವನು **ಹಿ** ಆದ್ದರಿಂದ **ಕಃ** ಯಾವ ರಸಜ್ಞನು **ಮುಕುಂದವಿಕ್ರಮಂ** ಶ್ರೀಹರಿಯ ಪರಾಕ್ರಮವನ್ನು **ನ ಸೇವತೇ** ಸಜ್ಜನರಿಂದ ಕೇಳದಿರುವನು ಅಥವಾ **ಅಂತಃ ಗತಃ** ಒಳಗೆ ಪ್ರವೇಶಿಸಿದ ಶ್ರೀಹರಿಯು **ಯತ್ಸಂಗಲಬ್ಧಂ** ಯಾವ ತನ್ನ ಪಾದಗಳ ಸಂಬಂಧದಿಂದ ಬಂದ **ನಿಜವೀರ್ಯವೈಭವಂ** ಸಮಸ್ತ ಜನರ ಪಾಪಗಳನ್ನು ಪರಿಹರಿಸುವ ಸಾಮರ್ಥ್ಯವೈಭವವುಳ್ಳ **ತೀರ್ಥಂ** ಗಂಗೆ ಮೊದಲಾದ ಪುಣ್ಯ ತೀರ್ಥಗಳನ್ನು **ಮುಹುಃ ಸಂಸ್ಪೃಶತಾಂ** ದರ್ಶನ ಸ್ಪರ್ಶನಗಳಿಂದ ಸೇವಿಸುವ ಜನರ **ಮಾನಸಂ ಅಂಹಃ** ಮನಸ್ಸಿನ ಪಾಪಗಳನ್ನು ಪರಿಹರಿಸುವ ಕಾರಣದಿಂದ **ಕಃ** ಯಾವನು ತಾನೇ **ಮುಕುಂದವಿಕ್ರಮಂ** ವಾಮನಾವತಾರ ಮಾಡಿದ ಶ್ರೀಹರಿಯು ಮೂರು ಲೋಕಗಳನ್ನು ಪಾದಗಳಿಂದ ಆಕ್ರಮಿಸಿದ ಪರಾಕ್ರಮವನ್ನು **ನ ಸೇವೇತ** ಶ್ರವಣ ಮಾಡದೇ ಇರುವನು? ಎಲ್ಲರೂ ಶ್ರವಣ ಮಾಡುವರು. ಅಥವಾ **ಯತ್ಸಂಗಲಬ್ಧಂ** ಭಗವತ್ಪ್ರಿಯರ ಸಹವಾಸದಿಂದ ತಿಳಿದು ಬಂದ ತನ್ನ ಪರಾಕ್ರಮವಿಸ್ತಾರದಿಂದ ಕೂಡಿದ **ಮುಕುಂದವಿಕ್ರಮಂ** ಶ್ರೀಹರಿಯ ಪಾದವಿಕ್ಷೇಪವನ್ನು ಜ್ಞಾಪಿಸಿಕೊಡುವ **ತೀರ್ಥಂ** ಶಾಸ್ತ್ರ ಮತ್ತು ಗಂಗೆಯನ್ನು **ಶ್ರುತಿಭಿಃ** ಶ್ರವಣ ಮಾಡುತ್ತ ಕಿವಿಗಳಿಂದಲೂ, ಸ್ನಾನದಿಂದ ತ್ವಗಿಂದ್ರಿಯದಿಂದಲೂ ಸೇವಿಸುವ ಜನರ ಮನಸ್ಸಿನ ವಿಷಯರಾಗರೂಪದೋಷವನ್ನು ಅಂತರ್ಗತನಾದ ಶ್ರೀಹರಿಯು ಪರಿಹರಿಸುವನು **ತಾನ್** ಅಂತಹ ಸಜ್ಜನರನ್ನು ಯಾರು ತಾನೇ ಸೇವಿಸುವುದಿಲ್ಲ? ಎಂದಾದರೂ ಅನ್ವಯ. **ಶ್ರುತಿಭಿಃ** ಎಂಬ ಬಹುವಚನದಿಂದ ಬಹುವಾರ ಶ್ರವಣ ಮಾಡಬೇಕು ಎಂದು ತಿಳಿಸಿರುವರು. **ಅಂತಃ ಗತಃ** ಎಂಬುದರಿಂದ ಸ್ನಾನಾದಿಗಳಿಂದ ಹೊರಗಿನ ದೋಷವನ್ನು ತನ್ನ ಜ್ಞಾನದಿಂದ ಒಳಗಿನ ದೋಷವನ್ನು ಪರಿಹರಿಸುವನೆಂದೂ ತಿಳಿಸುವರು. ||೧೧||

## ಹರಿಭಕ್ತಿಯಿಂದ ದೇವತಾನುಗ್ರಹವೂ ಆಗುವುದು

ಭಕ್ತಿಯು ಇಂದ್ರಿಯಗಳ ಅಧೀನವಾದುದು. ಇಂದ್ರಿಯಗಳು ಅವುಗಳ ಅಭಿಮಾನಿಗಳ ಅಧೀನವಾದವು. ಆ ದೇವತೆಗಳ ಅನುಗ್ರಹವಿಲ್ಲದೆ ಇಂದ್ರಿಯಗಳು ವಶವಾಗಲಾರವು. ಆದ್ದರಿಂದ ಭಕ್ತಿ ಸಾಧ್ಯವಿಲ್ಲ ಎಂದು ಶಂಕಿಸಿ ಸತ್ಸಂಗದಿಂದ ಕೇವಲ ಹರಿಭಕ್ತಿ ಮಾತ್ರ ಬರುವುದಲ್ಲ, ಅವನ ಪ್ರಸಾದ ಮಾತ್ರ ಆಗುವುದಲ್ಲ, ಉಂಟಾದ ಆ ಶ್ರೀಹರಿಯಲ್ಲಿ ಭಕ್ತಿಯಿಂದ ದೇವತೆಗಳ ಪ್ರೀತಿಯೂ ತಪ್ಪದೇ ಆಗುವುದು ಎಂಬ ಅಭಿಪ್ರಾಯದಿಂದ ಹೇಳುತ್ತಾರೆ

**ಯಸ್ಯಾಸ್ತಿ ಭಕ್ತಿರ್ಭಗವತ್ಯಕಿಂಚನಾ**
**ಸರ್ವೈರ್ಗುಣೈಸ್ತತ್ರ ಸಮಾಸತೇ ಸುರಾಃ ।**
**ಹರಾವಭಕ್ತಸ್ಯ ಕುತೋ ಮಹದ್ಗುಣಾ**
**ಮನೋರಥೇನಾಸತಿ ಧಾವತೋ ಬಹಿಃ ॥೧೨॥**

**ಯಸ್ಯ** ಯಾವನಿಗೆ **ಸರ್ವೈಃ ಗುಣೈಃ ಸಹ** ಎಲ್ಲ ಗುಣಗಳೊಂದಿಗೆ **ಅಕಿಂಚನಾ** ಯಾವ ಕಾಮನೆಯೂ ಇಲ್ಲದ **ಭಕ್ತಿಃ** ಭಕ್ತಿಯು **ಭಗವತಿ** ಶ್ರೀಹರಿಯಲ್ಲಿ **ಅಸ್ತಿ** ಇದೆಯೋ **ತತ್ರ** ಆ ಅಧಿಕಾರಿಯ ವಿಷಯದಲ್ಲಿ **ಸುರಾಃ** ದೇವತೆಗಳು **ಸರ್ವೈಃ ಗುಣೈಸ್ಸಹ** ಸತ್ಯ , ಧರ್ಮ, ವಿಜ್ಞಾನ ಮುಂತಾದ ಗುಣಸಹಿತರಾಗಿ **ಸಮಾಸತೇ** ಪ್ರಸನ್ನರಾಗುವರು. ವ್ಯತಿರೇಕದಿಂದಲೂ ತಿಳಿಸುವರು **ಹರೌ ಅಭಕ್ತಸ್ಯ** ಶ್ರೀಹರಿಯಲ್ಲಿ ಭಕ್ತಿಯಿಲ್ಲದ **ಮನೋರಥೇನ** ಇಚ್ಛೆಯಿಂದ **ಬಹಿಃ** ಹೊರಗಿರುವ **ಅಸತಿ** ಅಮಂಗಲವಾದ ವಿಷಯಗಳಲ್ಲಿ **ಧಾವತಃ** ಓಡುತ್ತಿರುವವನಿಗೆ **ಕುತಃ ಮಹದ್ಗುಣಾಃ** ದೊಡ್ಡವರ ಗುಣಗಳಾಗಲಿ, ದೊಡ್ಡವರ ಗುಣವುಳ್ಳ ದೇವತೆಗಳಾಗಲಿ ಎಲ್ಲಿಯವು? ಹೇಗೆ ಪ್ರಸನ್ನರಾದಾರು? ಆದ್ದರಿಂದ ಶ್ರೀಹರಿಯಲ್ಲಿ ಭಕ್ತಿಯು ಅವಶ್ಯಕರ್ತವ್ಯವೆಂದು ಭಾವ. **ಧಾವತಃ** ಎಂದು ಹೇಳಿದ್ದರಿಂದ ವಿಷಯಗಳನ್ನು ಕುರಿತು ಓಡುವುದಷ್ಟೇ ಹೊರತು ಅವುಗಳಿಂದ ಜೀವನು ಸುಖಪಡುತ್ತಿಲ್ಲವೆಂದು ಸೂಚಿಸಿರುವರು. ॥೧೨॥

### ಹರಿಭಕ್ತಿಯಿದ್ದವರೇ ಪೂಜ್ಯರು

ಶ್ರೀಹರಿಯಲ್ಲಿ ಭಕ್ತಿ ಮಾಡಬೇಕೆಂದು ಉಪಪಾದಿಸುತ್ತ ಹರಿಭಕ್ತಿ ಇಲ್ಲದಿದ್ದರೂ ವೃದ್ಧದಂಪತಿಗಳಿಗೆ ವಯಸ್ಸಿನ ನಿಮಿತ್ತವಾಗಿ ಲೋಕದಲ್ಲಿ ಮಹತ್ವವಿದೆ. ಆದರೆ ಎಲ್ಲ ಅಭಕ್ತರಿಗೂ ಹಾಗೆ ಮಹತ್ವವಿಲ್ಲ ಹೇಗೆ? ಎಂಬ ಶಂಕೆಯನ್ನು ಪರಿಹರಿಸುವರು

**ಹರಿರ್ಹಿ ಸಾಕ್ಷಾದ್ಭಗವಾಂಶ್ಶರೀರಿಣಾ-**
**ಮಾತ್ಮಾ ಝಷಾಣಾಮಿವ ತೋಯಮೀಪ್ಸಿತಃ ।**
**ಹಿತ್ವಾ ಮಹಾಂತಂ ಯದಿ ಸಜ್ಜತೇ ಗೃಹೇ**
**ತದಾ ಮಹತ್ವಂ ವಯಸಾ ದಂಪತೀನಾಮ್ ॥೧೩॥**

**ಹಿ** ಯಾವಕಾರಣ **ಸಾಕ್ಷಾದ್ಭಗವಾನ್ ಹರಿಃ** ಮುಖ್ಯೈಶ್ವರ್ಯ ಶಾಲಿಯಾದ ಶ್ರೀಹರಿಯು **ಶರೀರಿಣಾಂ** ಜೀವನಿಗೆ **ಆತ್ಮಾ** ಜೀವನಪ್ರದನು, ಪೋಷಕನು ಆದ್ದರಿಂದ **ಝಷಾಣಾಂ** ಮೀನುಗಳಿಗೆ **ತೋಯಂ ಇವ** ನೀರಿನಂತೆ **ಈಪ್ಸಿತಃ** ಇಷ್ಟನು.

 

ದೇವತೆಗಳಿಗೂ ಇಷ್ಟನಾದ್ದರಿಂದ ಇಂದ್ರಿಯಾಭಿಮಾನಿದೇವತೆಗಳೂ ಹರಿಭಕ್ತಿಯಿಂದ ಪ್ರಸನ್ನರಾಗುವರೆಂದು ಅಭಿಪ್ರಾಯ. **ಮಹಾಂತಂ** ಅನಾದ್ಯನಂತ ಕಾಲದಲ್ಲಿ ಪರಮೋಪಕಾರಿ ಶ್ರೀಹರಿಯನ್ನು **ಹಿತ್ವಾ** ಬಿಟ್ಟು **ಯದಿ** ಒಂದುವೇಳೆ **ಗೃಹೇಷು** ಮನೆ ಮುಂತಾದವುಗಳಲ್ಲಿ **ಸಜ್ಜತೇ ಚೇತ್** ಆಸಕ್ತನಾದರೇ **ತದಾ** ಆ ದಂಪತೀನಾಂ ಸ್ತ್ರೀಪುರುಷರಿಗೆ **ವಯಸಾ ಮಹತ್ವಂ** ವಯಸ್ಸಿನಿಂದಲೇ ದೊಡ್ಡತನವು ಹೊರತು ಗುಣದಿಂದಲ್ಲ. ಇಂತಹ ದೊಡ್ಡತನವು ಶೂದ್ರಾದಿಗಳಲ್ಲಿಯೂ ಇದೆಯಾದ್ದರಿಂದ ಅದು ಪೂಜ್ಯತೆಗೆ ಪ್ರಯೋಜಕವಲ್ಲವೆಂದು ಅಭಿಪ್ರಾಯ. ಶ್ರೀಹರಿಭಕ್ತಿಯಿಂದಲೇ ಗುಣಪ್ರಯುಕ್ತ ಮಹತ್ವ ದೊರೆಯುವುದು. ।।೧೩।।

ವಿಷಯ ವೈರಾಗ್ಯವನ್ನು ಅವಶ್ಯ ಸಂಪಾದಿಸಬೇಕೆಂದು ಹೇಳುತ್ತ ಪ್ರಲ್ಹಾದರಾಜರು ಮಾತನ್ನು ಮುಗಿಸುತ್ತಾರೆ

**ತಸ್ಮಾದ್ರಜೋರಾಗವಿಷಾದಮನ್ಯು**
**ಮಾನಸ್ಪೃಹಾಭಯದೈನ್ಯಾಧಿಮೂಲಮ್ ।**
**ಹಿತ್ವಾ ಗೃಹಂ ಸಂಸೃತಿಚಕ್ರವಾಲಂ**
**ನೃಸಿಂಹಪಾದಂ ಭಜತಾಂ ಕುತೋ ಭಯಮ್ ।।೧೪।।**

**ಯಸ್ಮಾತ್** ಯಾವ ಕಾರಣ **ಗೃಹಂ** ಆಸಕ್ತಿಗೆ ವಿಷಯವಾದ ಮನೆ ಮುಂತಾದ ವಿಷಯಗಳು **ರಜೋರಾಗ** ರಾಜಸರಾದ ಪುತ್ರಾದಿಗಳಲ್ಲಿ ಸ್ನೇಹಕ್ಕೂ **ವಿಷಾದ** ಪಶ್ಚಾತ್ತಾಪಕ್ಕೂ **ಮನ್ಯು** ಕೋಪಕ್ಕೂ **ಮಾನ** ಅಹಂಕಾರಕ್ಕೂ **ಸ್ಪೃಹಾ** ಇಚ್ಛೆಗೂ **ಭಯ** ಭಯಕ್ಕೂ **ದೈನ್ಯ** ದೀನತೆಗೂ **ಆಧಿ** ಮನೋವ್ಯಧೆಗೂ **ಮೂಲಂ** ಕಾರಣವೋ **ತಸ್ಮಾತ್** ಆದ್ದರಿಂದ **ಸಂಸೃತಿಚಕ್ರವಾಲಂ** ಸಂಸಾರದ ಮಂಡಲವೋ (ಸುಳಿವೋ) ಆದ್ದರಿಂದ **ಗೃಹಂ** ಅಸದ್ವಿಷಯಗಳನ್ನು **ಹಿತ್ವಾ** ತ್ಯಜಿಸಿ **ಅಕುತೋಭಯಂ** ಯಾವ ಭಯಕ್ಕೂ ಎಡೆಗೊಡದ **ನೃಸಿಂಹಪಾದಂ ಭಜತ** ಶ್ರೀಹರಿಯ ಪಾದವನ್ನು ಸೇವಿಸಿರಿ. **ಭಜತಾಂ** ಎಂಬ ಪಾಠದಲ್ಲಿ ಸೇವಿಸುವವರಿಗೆ **ಕುತೋ ಭಯಂ** ಯಾರಿಂದಲೂ ಭಯ ಇಲ್ಲವೆಂದು ಭಾವ. ।।೧೪।।

## ಕೇತುಮಾಲವರ್ಷ - ಕಾಮದೇವ

**ಕೇತುಮಾಲೇ ಭಗವಾನ್ಕಾಮದೇವಸ್ವರೂಪೇಣಾಸ್ತೇ ಲಕ್ಷ್ಮ್ಯಾಃ ಪ್ರಿಯಚಿಕೀರ್ಷಯಾ ಪ್ರಜಾಪತೇರ್ದುಹಿತೃಣಾಂ ಚ ತದ್ವರ್ಷಪತೀನಾಂ**

**ಪುರುಷಾಯುಷಾಽಹೋರಾತ್ರ ಪರಿಸಂಖ್ಯಾನಾನಾಂ ಯಾಸಾಂ ಗರ್ಭಾ ಮಹಾಪುರುಷಮಹಾಸ್ತ್ರತೇಜಸೋದ್ವೇಜಿತಮನಸಾಂ ವಿಧ್ವಸ್ತಾ ವ್ಯಸವಃ ಸಂವತ್ಸರಾಂತೇ ನಿಪತಂತಿ ।।೧೫।।**

**ಕೇತುಮಾಲೇ** ಕೇತುಮಾಲಾ ವರ್ಷ (ಖಂಡ) ದಲ್ಲಿ **ಭಗವಾನ್** ಶ್ರೀಹರಿಯು **ಕಾಮದೇವಸ್ವರೂಪೇಣ** ಮನ್ಮಥನಲ್ಲಿರುವ ತನ್ನದೇ ಆದ ಪ್ರದ್ಯುಮ್ನರೂಪದಿಂದ **ಲಕ್ಷ್ಮ್ಯಾಃ** ರತಿಯಲ್ಲಿ ಆವಿಷ್ಟಳಾದ ಲಕ್ಷ್ಮೀದೇವಿಯ **ಪ್ರಜಾಪತೇಃ** ಸಂವತ್ಸರಾಭಿಮಾನಿ ಬ್ರಹ್ಮದೇವರ **ದುಹಿತೃಣಾಂ** ಹೆಣ್ಣುಮಕ್ಕಳುಗಳಾದ ರಾತ್ರಿಗಳಿಗೆ ಅಭಿಮಾನಿ ದೇವತೆಗಳಿಗೆ **ಚ** ಮತ್ತು **ತದ್ವರ್ಷಪತೀನಾಂ** ಆ ಖಂಡದ ಅಧಿಪತಿಗಳ **ಪ್ರಿಯಚಿಕೀರ್ಷಯಾ** ಇಷ್ಟವನ್ನು ನೆರವೇರಿಸುವುದಕ್ಕಾಗಿಯೇ **ಆಸ್ತೇ** ಇರುವನು. ಮನ್ಮಥನೂ ಅವನಲ್ಲಿ ಪ್ರದ್ಯುಮ್ನನೂ ರತಿಯೂ ಅವಳಲ್ಲಿ ಲಕ್ಷ್ಮಿಯೂ ಇರುವರೆಂದು ತಿಳಿಯಬೇಕು. **ಪುರುಷಾಯುಷಾ** ಮನುಷ್ಯನ ಪೂರ್ಣ ಆಯುಸ್ಸಾದ ನೂರು ವರ್ಷಗಳಿಂದಾಗುವ **ಅಹೋರಾತ್ರಪರಿಸಂಖ್ಯಾನಾನಾಂ** ಹಗಲು ರಾತ್ರಿಗಳ ಗಣನೆಗೆ ಸರಿ ಹೋಗುವ ಅಂದರೆ ಮೂವತ್ತಾರು ಸಾವಿರ ಸಂಖ್ಯೆಯುಳ್ಳ **ಮಹಾಪುರುಷ** ಶ್ರೀಹರಿಯ **ಮಹಾಸ್ತ್ರತೇಜಸಾ** ಶ್ರೇಷ್ಠ ಅಸ್ತ್ರವಾದ ಸುದರ್ಶನ ಚಕ್ರದ ಕಾಂತಿಯಿಂದ **ಉದ್ವೇಜಿತಮನಸಾಂ** ಉದ್ವೇಗಗೊಂಡ ಮನಸ್ಸುಳ್ಳ **ಯಾಸಾಂ** ಯಾವ ಈ ರಾತ್ರಿ ಅಭಿಮಾನಿ ದೇವತೆಗಳ **ಗರ್ಭಾಃ** ಗರ್ಭಗಳು **ವಿಧ್ವಸ್ತಾಃ** ನಾಶವಾಗಿ **ವ್ಯಸವಃ** ಪ್ರಾಣವಿಲ್ಲವುಗಳಾಗಿ **ಸಂವತ್ಸರಾಂತೇ** ವರ್ಷದ ಕೊನೆಯಲ್ಲಿ **ನಿಪತಂತಿ** ಬೀಳುವವು. ಗರ್ಭಪಾತವಾಗುವುದೆಂದರ್ಥ. **ಪ್ರಿಯಚಿಕೀರ್ಷಯಾ** ಎಂದದ್ದರಿಂದ ಶ್ರೀಹರಿಯು ಪ್ರದ್ಯುಮ್ನ ರೂಪದಿಂದ ಆವಿಷ್ಟನಾಗಿರುವುದಕ್ಕೆ ಭಕ್ತವಾತ್ಸಲ್ಯವೇ ಪ್ರಯೋಜನವೆಂದು ಸೂಚಿತವಾಗುವುದು.।।೧೫।।

ಅವನು ಅಲ್ಲಿದ್ದು ಮಾಡುವುದೇನು? ಎಂದರೆ ಹೇಳುವರು

**ಅತೀವಸುಲಲಿತಗತಿವಿಲಾಸವಿಲಸಿತರುಚಿರಹಾಸಲೇಶಾವಲೋಕಲೀಲಯಾ ಕಿಂಚಿದುತ್ತಂಭಿತಸುಂದರಭ್ರೂಮಂಡಲಸುಭಗವದನಾರವಿಂದಶ್ರಿಯಾ ರಮಾಂ ರಮಯನ್ನಿಂದ್ರಿಯಾಣಿ ರಮಯತೇ ।।೧೬।।**

**ಅತೀವ** ಅತ್ಯಂತ **ಸುಲಲಿತ** ಸುಂದರವಾದ **ಗತಿ** ಗಮನದ **ವಿಲಾಸ** ವಿಲಾಸದಿಂದ ವಿಲಸಿತ ಪ್ರಕಾಶಿಸುವ ರುಚಿರ ಮನೋಹರವಾದ **ಹಾಸಲೇಶ** ಮುಗುಳುನಗೆಯಿಂದ




ಕೂಡಿದ **ಅವಲೋಕಲೀಲಯಾ** ನೋಟವೆಂಬ ಕ್ರೀಡೆಯಿಂದ **ಕಿಂಚಿತ್** ಸ್ವಲ್ಪ **ಉತ್ತಂಭಿತ** ಮೇಲೆ ಮಾಡಿದ **ಸುಂದರ** ಸುಂದರಗಳಾದ **ಭ್ರೂಮಂಡಲ** ಹುಬ್ಬುಗಳಿಂದ **ಸುಭಗ** ಮನೋಹರವಾದ **ವದನಾರವಿಂದಶ್ರಿಯಾ** ಮುಖಕಮಲದ ಕಾಂತಿಯಿಂದ **ರಮಾಂ** ರತಿಯಲ್ಲಿ ಆವಿಷ್ಟಳಾಗಿರುವ ಲಕ್ಷ್ಮಿಯನ್ನು **ರಮಯನ್** ಆನಂದಪಡಿಸುತ್ತ **ಇಂದ್ರಿಯಾಣಿ** ನೋಡುವವರ ಎಲ್ಲ ಇಂದ್ರಿಯಗಳನ್ನು **ರಮಯತೇ** ತೃಪ್ತಿಪಡಿಸುವನು. ಕಾಮದೇವನು ರತಿಯನ್ನು ಅವನಲ್ಲಿರುವ ಪ್ರದ್ಯುಮ್ನನು ರತಿಯಲ್ಲಿರುವ ರಮೆಯನ್ನು ಆನಂದಪಡಿಸುತ್ತಿರುವರೆಂದು ತಿಳಿಯಬೇಕು. ।।೧೬।।

**ತದ್ಭಗವತೋ ಮಾಯಾಮಯಂ ರೂಪಂ ಪರಮಸಮಾಧಿಯೋಗೇನ ರಮಾದೇವೀ ಸಂವತ್ಸರಸ್ಯ ರಾತ್ರಿಷು ಪ್ರಜಾಪತೇರ್ದುಹಿತೃಭಿರುಪೇತಾಹಸ್ಸು ತದ್ಭ ರ್ತೃಭಿರುಪೇತೋಪಾಸ್ತೇ ಇದಂ ಚ ಉದಾಹರತಿ ।।೧೭।।**

**ಭಗವತಃ** ಶ್ರೀಹರಿಯ **ಮಾಯಾಮಯಂ** ಜ್ಞಾನೇಚ್ಛಾತ್ಮಕವಾದ **ತತ್ ರೂಪಂ** ಆ ಪ್ರದ್ಯುಮ್ನ ರೂಪವನ್ನು **ರಮಾದೇವೀ** ಲಕ್ಷ್ಮೀದೇವಿಯೂ ಮತ್ತು **ಭಗವತಃ** ಶ್ರೀಹರಿಯ **ರೂಪಂ** ಪ್ರಕೃತಿವಿಕಾರವಾದ ಪ್ರತಿಮೆಯಾದ ಮನ್ಮಥನನ್ನು **ರಮಾದೇವೀ** ತನ್ನೊಳಗೆ ಪ್ರಕಾಶಿಸುವ ಲಕ್ಷ್ಮೀಯುಳ್ಳ ರತಿಯೂ **ರಾತ್ರಿಷು** ರಾತ್ರಿಗಳಲ್ಲಿ **ಸಂವತ್ಸರಸ್ಯ ಪ್ರಜಾಪತೇಃ** ಸಂವತ್ಸರನೆಂಬ ಬ್ರಹ್ಮದೇವನ **ದುಹಿತೃಭಿಃ** ಹೆಣ್ಣು ಮಕ್ಕಳಾದ ರಾತ್ರಿ ಅಭಿಮಾನಿಗಳಿಂದ **ಉಪೇತಾ** ಕೂಡಿದವರಾಗಿ **ಅಹಸ್ಸು** ಹಗಲುಗಳಲ್ಲಿ **ತದ್ಭರ್ತೃಭಿಃ** ರಾತ್ರಿ ಅಭಿಮಾನಿಯರಿಗೆ ಪತಿಗಳಾದ ಹಗಲಭಿಮಾನಿ ದೇವತೆಗಳಿಂದ **ಉಪೇತಾಃ** ಕೂಡಿದವರಾಗಿಯೂ **ಪರಮಸಮಾಧಿಯೋಗೇನ** ಅತಿಶಯ ಚಿತ್ತೈಕಾಗ್ರತೆಯಿಂದ **ಉಪಾಸ್ತೇ** ಉಪಾಸಿಸುವರು **ಇದಂ ಚ ಉದಾಹರತಿ** ಮುಂದೆ ಹೇಳುವ ಮಂತ್ರವನ್ನು ರತಿಯು ಅವಳಲ್ಲಿರುವ ಮಾಯಾ ಹೇಳುವರು. ಇಲ್ಲಿ **ಭಗವಾನ್ ಕಾಮದೇವ ಸ್ವರೂಪೇಣ** ಎಂಬುದರಿಂದ ಮನ್ಮಥನೂ ಶ್ರೀಹರಿಯೂ ಅಭಿನ್ನರೆಂದೂ **ಮಾಯಾಮಯಂ ರೂಪಂ** ಎಂಬುದರಿಂದ ಈ ರೂಪವೂ ಅವಿದ್ಯೋಪಾಧಿಕವೆಂದೂ **ರಮಾದೇವೀ ಉಪಾಸ್ತೇ** ಎಂಬುದರಿಂದ ಲಕ್ಷ್ಮಿಯು ಮನ್ಮಥನನ್ನು ಉಪಾಸಿಸುವಳು ಎಂದೂ ತೋರುವುದು. ಕಾರಣ ಶ್ರೀಮದಾಚಾರ್ಯರು ಅಭಿಪ್ರೇತವಾದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು

ತಾತ್ಪರ್ಯ - ಕಾಮದೇವಸ್ಥಿತಂ ವಿಷ್ಣುಮುಪಾಸ್ತೇ ಶ್ರೀ ರತಿಸ್ಥಿತಾ ।
ಕಾಮದೇವಂ ರತಿಶ್ಚಾಪಿ ವಿಷ್ಣೋಸ್ತು ಪ್ರಾಕೃತಾಂ ತನುಂ ।। ಇತಿ ಬ್ರಹ್ಮಾಂಡೇ

ಈ ಪ್ರಮಾಣದಂತೆ ರತಿಯಲ್ಲಿ ಸನ್ನಿಹಿತಳಾದ ರಮಾದೇವಿಯು ಮನ್ಮಥನಲ್ಲಿ ಸನ್ನಿಹಿತನಾದ ಪ್ರದ್ಯುಮ್ನನೆಂಬ ಶ್ರೀಹರಿಯನ್ನೂ, ರತಿಯು ಶ್ರೀಹರಿಯ ಪ್ರಾಕೃತ ಪ್ರತಿಮೆಯಂತಿರುವ ಮನ್ಮಥನನ್ನೂ ಉಪಾಸಿಸುತ್ತಿರುವರೆಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. ಅದರಂತೆ ಮೇಲೆ ಅರ್ಥ ಮಾಡಿದೆ. **ಮಾಯಾಮಯಂ** ಎಂಬುದಕ್ಕೆ ಪ್ರಾಕೃತವೆಂದೂ **ಚ** ಎಂಬುದರಿಂದ ಅಪ್ರಾಕೃತವೆಂದೂ ಶ್ರೀಹರಿಯ ಪ್ರತಿಮಾ ಮತ್ತು ಜ್ಞಾನಾನಂದಾತ್ಮಕ ಸ್ವರೂಪಗಳನ್ನು ಪ್ರಮಾಣವು ಬೇರ್ಪಡಿಸಿ ತೋರಿಸುತ್ತದೆ.।।೧೭।।

**ಓಂ ಹ್ರಾಂ ಹ್ರೀಂ ಹ್ರೂಂ ಓಂ ನಮೋ ಭಗವತೇ ಹೃಷೀಕೇಶಾಯ ಸರ್ವವಿಶೇಷವಿತ್ ಕ್ಷೇತ್ರಾತ್ಮನೇ ಆಕೂತೀನಾಂ ಚಿತ್ತಾನಾಂ ಚೇತಸಾಂ ವಿಶೇಷಾಣಾಂ ಚ ಅಧಿಪತಯೇ ಷೋಡಶಕಲಾಯ ಛಂದೋಮಯಾಯಾನ್ನ-ಮಯಾಯಾಮೃತಮಯಾಯ ಸರ್ವಮಯಾಯ ಮಹಸೇ ಓಜಸೇ ಬಲಾಯ ಕಾಂತಾಯ ಕಾಮಾಯ ನಮಸ್ತೇ ಉಭಯತ್ರ ಭೂಯಾತ್ ।।೧೮।।**

**ಭಗವತೇ** ಐಶ್ವರ್ಯಶಾಲಿಯಾದ **ಹೃಷೀಕೇಶಾಯ** ಇಂದ್ರಿಯಗಳಿಗೆ ನಿಯಾಮಕನಾದ **ಸರ್ವವಿಶೇಷವಿತ್ಕ್ಷೇತ್ರಾತ್ಮನೇ** ಎಲ್ಲ ವ್ಯಾವರ್ತಕಗಳನ್ನೂ ತಿಳಿದ ಬ್ರಹ್ಮದೇವರೇ ಮೊದಲಾದವರಿಗೆ ಆವಾಸ ಸ್ಥಾನವಾದ ಸ್ವರೂಪದೇಹವುಳ್ಳ **ಆಕೂತೀನಾಂ** ಅಭಿಪ್ರಾಯಗಳಿಗೆ ಸಂಸ್ಕಾರಗಳಿಗೆ **ಚಿತ್ತಾನಾಂ** ಸ್ಮರಣೆಗೆ ಕಾರಣವಾದ ಅಂತಃಕರಣವಿಶೇಷಗಳಿಗೆ ಚಿತ್ತವೃತ್ತಿಗಳಿಗೆ **ಚೇತಸಾಂ** ಬುದ್ಧಿವೃತ್ತಿಗಳಿಗೆ, ಅಂತಃಕರಣಗಳಿಗೆ **ವಿಶೇಷಾಣಾಂ ಚ** ೧) **ದ್ರವ್ಯಸ್ವಭಾವಾಶಯಕರ್ಮಕಾಲೈ-ರೇಕಾದಶಾಮೀ ಮನಸೋ ವಿಕಾರಾಃ ಸಹಸ್ರಶಃ ಶತಶಃ ಕೋಟಿಶಶ್ಚ ಕ್ಷೇತ್ರಜ್ಞತೋ ನ ಮಿಥೋ ನ ಸ್ವತಃ ಸ್ಯುಃ** ಎಂದು ಹೇಳಿದ ವೃತ್ತಿ ವಿಶೇಷಗಳಿಗೂ ೨) ಮನಸ್ಸು ಬುದ್ಧಿ ಅಹಂಕಾರಗಳೆಂಬ ಪ್ರಭೇದಗಳಿಗೂ **ಅಧಿಪತಯೇ** ಒಡೆಯನಾದ **ಷೋಡಶಕಲಾಯ** ಹದಿನಾರು ಕಲೆಗಳಿಗೂ(ಹನ್ನೊಂದು ಇಂದ್ರಿಯಗಳು ಐದು ಭೂತಗಳು) ಪ್ರವರ್ತಕನಾದ ಹದಿನಾರನೇ ಕಲೆಯಾದ ಜೀವಪ್ರವರ್ತಕನಾದ **ಛಂದೋಮಯಾಯ** ವೇದಪ್ರತಿಪಾದ್ಯರಲ್ಲಿ ಪ್ರಧಾನನಾದ **ಅನ್ನಮಯಾಯ** ಮಹಾಭೋಕ್ತನು ಮಹಾಭೋಗ್ಯನೂ ಆದ **ಅಮೃತಮಯಾಯ** ಮುಕ್ತನಿಯಾಮಕನಾದ **ಸರ್ವಮಯಾಯ** ಸರ್ವೋತ್ತಮನಾದ **ಸಹಸೇ** ಆತ್ಮಸಾಮರ್ಥ್ಯನಿಯಾಮಕನಾದ **ಓಜಸೇ** ಇಂದ್ರಿಯ ಸಾಮರ್ಥ್ಯ ನಿಯಾಮಕನಾದ **ಬಲಾಯ** ದೈಹಿಕ ಸಾಮರ್ಥ್ಯ ನಿಯಾಮಕನಾದ **ಕಾಂತಾಯ** ಭರ್ತೃವಾದ **ಕಾಮಾಯ** ಕಾಮದೇವಾಂತರ್ಗತನಾದ




ಎಲ್ಲರಿಂದ ಕಾಮಿತನಾದ **ತೇ** ನಿನಗೆ **ನಮೋ ನಮಃ** ನಮಸ್ಕಾರವು **(ಭವಾನ್)** ನೀನು **ಉಭಯತ್ರ** ಒಳಗೂ ಹೊರಗೂ **ಭೂಯಾತ್** ರಕ್ಷಣೆಗೆ ಆಗು, ರಕ್ಷಿಸೆಂದರ್ಥ. ||೧೮||

ಮತ್ತೊಬ್ಬರ ಅಪೇಕ್ಷೆಯಿಲ್ಲದೆ ನಿನ್ನನ್ನು ಭಜಿಸುವ ನಾನೇ ಧನ್ಯಳು ಮತ್ತೊಬ್ಬ ಪತಿ (ಗಂಡ)ನಿಗಾಗಿ ನಿನ್ನನ್ನು ಸೇವಿಸುವ ಸ್ತ್ರೀಯರೂ ಪರಿಪೂರ್ಣ ಮನೋರಥರಾಗುವುದಿಲ್ಲವೆಂದು ಹೇಳುವರು

**ಸ್ತ್ರಿಯೋ ವ್ರತೈಸ್ತ್ವಾಂ ಹೃಷಿಕೇಶ್ವರಂ ಸ್ವತೋ (ಹೃಷಿಕೇಶಮೀಶ್ವರಂ)**
**ಹ್ಯಾರಾಧ್ಯ ಲೋಕೇ ಪತಿಮಾಶಾಸತೇऽನ್ಯಮ್ ।**
**ಅನೇನ ತಾಸಾಂ ಪರಿಪಾಸ್ಯಪತ್ಯಂ**
**ಪ್ರಿಯಂ ಧನಾಯೂಂಷಿ ಯತೋऽಸ್ವತಂತ್ರಾಃ ||೧೯||**

**ಲೋಕೇ** ಜಗತ್ತಿನಲ್ಲಿರುವ **ಸ್ತ್ರಿಯಃ** ಹೆಣ್ಣುಮಕ್ಕಳು **ವ್ರತೈಃ** ಅನೇಕ ರೀತಿಯ ವ್ರತಗಳಿಂದ **ಸ್ವತಃ** ಮತ್ತೊಬ್ಬರ ಅಧೀನನಾಗದೇ **ಹೃಷೀಕೇಶ್ವರಂ** ಇಂದ್ರಿಯ ನಿಯಾಮಕನಾದ (ಪಾಠಾಂತರದಲ್ಲಿ **ಹೃಷೀಕೇಶಂ** ಇಂದ್ರಿಯ ನಿಯಾಮಕನಾದ **ಈಶ್ವರಂ** ಸರ್ವನಿಯಾಮಕನಾದ ಎಂದರ್ಥ) **ತ್ವಾ** ನಿನ್ನನ್ನು **ಆರಾಧ್ಯ** ಆರಾಧಿಸಿ(ಸೇವಿಸಿ) **ಅನ್ಯಂ** ನಿನಗಿಂತ ಭಿನ್ನನಾದ **ಪತಿಂ** (ಪಾಲಕನನ್ನು)ಗಂಡನನ್ನು **ಆಶಾಸತೇ** ಇಚ್ಛಿಸುವರು, ಪಡೆಯುವರು **ಯತಃ** ಯಾವ ಕಾರಣ **ಅಸ್ವತಂತ್ರಾಃ** ಆ ಸ್ತ್ರೀಯರೂ ಅವರು ಪತಿಗಳೆಂದು ಹೊಂದಿದ ಪುರುಷರೂ ರಕ್ಷಿಸಲು ಸ್ವತಂತ್ರರಲ್ಲದ್ದರಿಂದ **ತತಃ** ಆ ಕಾರಣದಿಂದ **ಅನೇನ** ವ್ರತಗಳೆಂಬ ಆರಾಧನೆಯಿಂದ **ತಾಸಾಂ** ಆ ಸ್ತ್ರೀಯರ **ಅಪತ್ಯಂ** ಮಕ್ಕಳನ್ನು **ಪ್ರಿಯಂ** ಗಂಡನನ್ನೂ **ಧನಾಯೂಂಷಿ** ಹಣ ಮತ್ತು ಆಯುಸ್ಸನ್ನೂ **ಪರಿಪಾಸಿ** ಕಾಪಾಡುತ್ತಿರುವೆ. ಪತಿಯನ್ನು ಪಡೆಯಲು ಕಾಮದೇವಾಂತರ್ಗತ ಶ್ರೀಹರಿಯ ಪೂಜೆಯು ಶ್ರುತಿಸಿದ್ಧವಾಗಿದೆ ಎಂಬುದನ್ನು **ಹಿ** ಶಬ್ದ ತಿಳಿಸುವುದು. ಹಾಗೆ ಪಡೆದ ಪತಿಗಳು ಅಸ್ವತಂತ್ರರು ಅಸಮರ್ಥರೂ ಆದ್ದರಿಂದ ಲೌಕಿಕ ವ್ಯವಹಾರಕ್ಕೆ ಪತಿಗಳೇ ಹೊರತು ನಿಜವಾದ ಪಾಲಕರಾದ ಅನ್ವರ್ಥಪತಿಗಳಲ್ಲವೆಂದು ಭಾವ. ||೧೯||

## ಮುಖ್ಯಪತಿ ಯಾರು?

ಆದರೂ ಅವರೇಕೆ ಮುಖ್ಯಪತಿಗಳಲ್ಲ ಎಂದರೆ ಮುಖ್ಯಪತಿ ಶಬ್ದಾರ್ಥವನ್ನು ತಿಳಿಸುವರು

**ಸ ವೈ ಪತಿಸ್ಯಾದಕುತೋಭಯಃ ಸ್ವಯಂ**
**ಸಮಂತತಃ ಪಾತಿ ಭಯಾತುರಂ ಜನಂ ।**
**ಸ ಏಕ ಏವೇತರಥಾ ಮಿಥೋ ಭಜನ್ (ಭಯಂ )**
**ನೈವಾತ್ಮಲಾಭಾದಧಿ ಮನ್ಯತೇ ಪರಮ್ ॥೨೦॥**

**ಯಃ** ಯಾವನು **ಸ್ವಯಂ** ತಾನು **ಅಕುತೋಭಯಃ ಸನ್** ಯಾವುದರಿಂದಲೂ ಭಯವಿಲ್ಲದವನಾಗಿ **ಭಯಾತುರಂ** ಭಯದಿಂದ ಆರ್ತರಾದ ಜನರನ್ನು **ಸಮಂತತಃ** ಎಲ್ಲ ರೀತಿಯಿಂದಲೂ **ಪಾತಿ** ರಕ್ಷಿಸುವನೋ **ಸಃ ವೈ** ಅವನೇ **ಪತಿಃ ಸ್ಯಾತ್** ಮುಖ್ಯಪತಿಯಾಗುವನು. ಇದರಿಂದ ಪತಿ ಶಬ್ದಾರ್ಥವನ್ನು ತೋರಿಸಿರುವರು. ಇಂಥವರು ಅನೇಕರೇಕಾಗಬಾರದು ಎಂದರೆ ಹೇಳುವರು **ಸಃ** ಅಂತಹ ಪತಿಯು **(ಭವಾನ್)** ನೀನು **ಏಕ ಏವ** ಒಬ್ಬನೇ, ಸ್ವತಂತ್ರನಾದ್ದರಿಂದ ಎಂದು ಭಾವ. ಅನೇಕ ಮುಖ್ಯ ಪತಿಗಳಾದಲ್ಲಿ ಬಾಧಕ ಹೇಳುವರು **ಇತರಥಾ** ಅನೇಕರು ಪತಿಗಳಾದಲ್ಲಿ **ಮಿಥಃ** ಪರಸ್ಪರ **ಭಯಂ ಸ್ಯಾತ್** ಮಾಂಡಲಿಕರಾಜರಂತೆ ಒಬ್ಬರಿಂದೋಬ್ಬರಿಗೆ ಭಯವೇ ಆಗುವುದು. ಆದ್ದರಿಂದ ಸ್ವತಂತ್ರನಾದ ನೀನೊಬ್ಬನೇ ಪತಿ ಎಂದರ್ಥ. ಈ ಮುಂದಿನ ಕಾರಣದಿಂದ ನಿನ್ನನ್ನು ಹೊಂದುವುದೇ ಪುರುಷಾರ್ಥವೆಂದು ಹೇಳುತ್ತಾರೆ. **ಭಜನ್** ನಿನ್ನನ್ನು ಸೇವಿಸುತ್ತ ಅಧಿಕಾರಿ ಚೇತನನು **ಆತ್ಮಲಾಭಾತ್** ನಿನ್ನ ಹೊಂದುವಿಕೆಗಿಂತ **ಪರಂ** ಮತ್ತೊಂದನ್ನು **ಅಧಿ** ಅಧಿಕವೆಂದು **ನೈವ ಮನ್ಯತೇ** ತಿಳಿಯುವುದಿಲ್ಲ. **ಮಿಥೋ ಭಯಂ** ಎಂಬ ಪಾಠದಲ್ಲಿ **ನೈವ** ಎಂಬ ಕೊನೆಯ ಸಾಲು ಶ್ರೀಹರಿಯ ಸ್ವತಂತ್ರಪತಿತ್ವವನ್ನು ಪ್ರತಿಪಾದಿಸುವುದು. **ಭವಾನ್** ನೀನು **ಆತ್ಮಲಾಭಾತ್** ನಿನ್ನ ಸ್ವರೂಪ ಸುಖಲಾಭಕ್ಕಿಂತ **ಅಧಿ** ಅಧಿಕವಾದ **ಪರಂ** ಮತ್ತೊಂದು ಪುರುಷಾರ್ಥವನ್ನು **ನ ಮನ್ಯತೇ** ತಿಳಿಯುತ್ತಿಲ್ಲ. ಸ್ವಸ್ವರೂಪಲಾಭದಿಂದ ತುಷ್ಟನಾದ ನಿನಗೆ ಮತ್ತೊಂದರ ಅಪೇಕ್ಷೆ ಇಲ್ಲವೆಂದು ಅಭಿಪ್ರಾಯ **ಭಜನ್** ಎಂಬ ಪಾಠದಲ್ಲಿ ಮನುಷ್ಯನು ಪರಸ್ಪರ ಸೇವಿಸುತ್ತ **ಆತ್ಮಲಾಭಾತ್** ತಾನು ಸಂಪಾದಿಸಬಹುದಾದ ಲಾಭಕ್ಕಿಂತ **ಅಧಿ** ಅಧಿಕವಾಗಿ ಕೊಡುವ **ಪರಂ** ಮತ್ತೊಬ್ಬನನ್ನು **ನೈವ ಮನ್ಯತೇ** ತಿಳಿಯುವುದಿಲ್ಲ ಎಂದೂ ಅರ್ಥ ಮಾಡಿರುವರು. ನನ್ನಂತೆ ಇವನೂ ಅಸ್ವತಂತ್ರನು ನನಗಿಂತ ಹೆಚ್ಚಿಗೆ ಕೊಡಲಾರನೆಂದೇ ತಿಳಿಯುವನು ಎಂದು ತಾತ್ಪರ್ಯ. ಆದ್ದರಿಂದ ನೀನೊಬ್ಬನೇ ಮುಖ್ಯಪತಿಯು ಎಂದನ್ವಯ. ॥೨೦॥




## ನಿಷ್ಕಾಮಭಗವತ್ಪೂಜೆ ಸರ್ವಪುರುಷಾರ್ಥಸಾಧನ

ನಿಷ್ಕಾಮನೆಯಿಂದ ನಿನ್ನ ಪಾದಕಮಲಗಳ ಪೂಜೆಯೇ ನಿನಗೆ ಇಷ್ಟ ಹೊರತು ಸಕಾಮನೆಯಿಂದಲ್ಲವೆಂದು ಹೇಳುವರು

**ಯಸ್ತಸ್ಯ ತೇ ಪಾದಸರೋರುಹಾರ್ಹಣಂ**
**ನಿಕಾಮಯೇತ್ ಸೋಽಖಿಲಕಾಮಲಂಪಟಃ ।**
**ತದೇವ ಚಾಭೀಪ್ಸಿತಮೀಪ್ಸಿತಾರ್ಚನಂ (ತಂ)**
**ಯದ್ಭಗ್ನಯಾಂಚೋ ಭಗವನ್ ಪ್ರತಪ್ಯತೇ ॥೨೦॥**

**ಯಃ** ಯಾವ ಅಧಿಕಾರಿಯು **ತಸ್ಯ** ಸ್ವತಂತ್ರನಾದ ಮುಖ್ಯಪತಿಯಾದ **ತೇ** ನಿನ್ನ **ಪಾದಸರೋರುಹಾರ್ಹಣಂ** ಪಾದಕಮಲಗಳ ಪೂಜೆಯನ್ನು **ನಿಕಾಮಯೇತ್** ಎಲ್ಲಕ್ಕಿಂತ ಹೆಚ್ಚಾಗಿ **ಅಪೇಕ್ಷಿಸುವನೋ**(ಯಾವ ಫಲಾಪೇಕ್ಷೆ ಇಲ್ಲದೇ ಇಚ್ಛಿಸುವನೋ ಮಾಡುವನೋ) **ಸಃ** ಅವನು **ಅಖಿಲಕಾಮಲಂಪಟಃ** ಅಪೇಕ್ಷಿತ ಎಲ್ಲ ಪುರುಷಾರ್ಥಗಳನ್ನು ಹೊಂದಲು ಸಮರ್ಥನು. ಅವನಿಗೆ ಎಲ್ಲ ಇಷ್ಟಾರ್ಥ ಪ್ರಾಪ್ತಿಯಾಗುವುದು. **ಹೇ ಈಪ್ಸಿತ** ಇಷ್ಟತಮನೇ **ಭಗವನ್** ಶ್ರೀಹರಿಯೇ! **ತದೇವ** ಆ ನಿಷ್ಕಾಮ ಪೂಜನವೇ **ಅಭೀಪ್ಸಿತಂ** ವಿಶೇಷ ಫಲಕ್ಕೆ ಕಾರಣವಾದ್ದರಿಂದ ಇಷ್ಟವಾದುದು. ಸಕಾಮಪೂಜೆಯಲ್ಲ. ಬೇರೆಯವರ ಪೂಜೆಯೂ ಅಲ್ಲ. ಏಕೆಂದರೆ **ಯತ್** ಯಾವ ಕಾರಣ **ಭಗ್ನಯಾಂಚಃ** ಮನೋರಥ ಈಡೇರದವನಾಗಿ ಆ ಅಧಿಕಾರಿಯು **ಪ್ರತಪ್ಯತೇ** ದುಃಖಕ್ಕೀಡಾಗುವನು **ತಸ್ಮಾತ್** ಆದ್ದರಿಂದ ನಿಷ್ಕಾಮವಾದ ನಿನ್ನ ಪೂಜೆಯೇ **ಈಪ್ಸಿತಂ** ಇಷ್ಟವೆಂದು ಅನ್ವಯ. ಪ್ರಬಲ ಪಾಪವೆಂಬ ಪ್ರತಿಬಂಧಕವಿರುವಾಗ ಸಕಾಮ ಪೂಜೆಯು ನಿನಗೆ ಇಷ್ಟವಲ್ಲದ್ದರಿಂದ ಫಲ ಬರುವುದಿಲ್ಲವೆಂದು ಭಾವ. ಬೇರೆಯವರನ್ನು ಪೂಜಿಸಿದರೆ ಅಸ್ವತಂತ್ರರಾದ ಅವರಿಂದ ಇಷ್ಟಾರ್ಥ ಸಿದ್ಧಿಯಾಗುವುದಿಲ್ಲವೆಂದು ತಾತ್ಪರ್ಯ. **ಯದ್ಭಗ್ನಯಾಂಚಃ** ಕಾಮ್ಯಫಲಾಪೇಕ್ಷೆಯಿಂದ ಮಾಡಿದ ಪೂಜೆಯು ಕ್ಷಣಿಕ ತುಚ್ಛ ಫಲಕ್ಕೆ ಮಾತ್ರ ಕಾರಣವಾದ್ದರಿಂದ ಯಾಚಿತ ಅರ್ಥಗಳು ನಷ್ಟವಾಗಿ ದುಃಖಿಸುವನು ಹೀಗೂ ಅರ್ಥ ಮಾಡಿರುವರು. **ಚ** ಶಬ್ದದಿಂದ ಹಿಂದೆ ನಿನ್ನನ್ನೇ ಅರ್ಚಿಸಿರುವೆವು. ಈಗ ಅರ್ಚಿಸುತ್ತಿರುವೆವು. ಮುಂದೆ ಅರ್ಚಿಸುವೆವು ಎಂದು ಸೂಚಿಸುವರು. ಇದರಿಂದ ನಿಷ್ಕಾಮ ಪೂಜೆಯೇ ಶ್ರೀಹರಿಗೆ ಇಷ್ಟವೆಂದು ತಿಳಿಸಿದಂತಾಯಿತು. ॥೨೦॥

ಆದ್ದರಿಂದ ನಿಷ್ಕಾಮವಾಗಿ ನಿನ್ನ ಪೂಜೆಯೇ ಎಲ್ಲ ಪುರುಷಾರ್ಥಕ್ಕೆ ಕಾರಣ. ಬೇರೆ ದೇವತೆಗಳ ಪೂಜೆಯಲ್ಲವೆಂಬುದನ್ನು ಕೈಮುತ್ಯದಿಂದ ತಿಳಿಸುತ್ತಾರೆ

**ಮತ್ಪ್ರಾಪ್ತಯೇ ಯೇ ಸಸುರಾಸುರಾದಯ-**
**ಸ್ತಪ್ಯಂತ ಉಗ್ರಂ ತಪ ಐಂದ್ರಿಯೇ ಧಿಯಃ ।**
**ಋತೇ ಭವತ್ಪಾದಪರಾಯಣಂ ನ ಮಾಂ**
**ವಿಂದಂತ್ಯಹಂ ತ್ವದ್ ಹೃದಯಾ ಯತೋಽಜಿತ ॥೨೨॥**

**ಯೇ** ಯಾವ **ಐಂದ್ರಿಯೇ** ಇಂದ್ರಿಯ ವಿಷಯಗಳಾದ ಶಬ್ದಾದಿಗಳಲ್ಲಿ **ಧಿಯಃ** ಬುದ್ಧಿಯುಳ್ಳ (ವಿಷಯಾಸಕ್ತರಾದ) **ಸಸುರಾಸುರಾದಯಃ** ದೇವತೆಗಳಿಂದ ಸಹಿತರಾದ ಅಸುರರೇ ಮೊದಲಾದವರು (ದೇವತೆಗಳೂ, ಅಸುರರೂ) **ಭವತ್ಪಾದಪರಾಯಣಂ ಋತೇ** ನಿನ್ನ ಪಾದದ ಅರ್ಚನೆಯನ್ನು ಬಿಟ್ಟು (ಮಾಡದೇ) **ಉಗ್ರಂ ತಪಃ** ತೀಕ್ಷ್ಣವಾದ ತಪಸ್ಸನ್ನು **ಮತ್ಪ್ರಾಪ್ತಯೇ** ನನ್ನಿಂದ ಬರುವ ಐಶ್ವರ್ಯಕ್ಕಾಗಿ **ತಪ್ಯಂತೇ** ಮಾಡುವರೋ **ತೇ** ಅವರು **ಮಾಂ** ನನ್ನಿಂದ ಬರುವ ಐಶ್ವರ್ಯವನ್ನು **ನ ವಿಂದಂತಿ** ಹೊಂದುವುದಿಲ್ಲ. **ಯತಃ** ಏಕೆಂದರೆ **ಹೇ ಅಜಿತ** ಸೋಲಿಲ್ಲದ ಶ್ರೀಹರಿಯೇ **ಅಹಂ** ರಮಾದೇವಿಯಾದ ನಾನು **ತ್ವದ್ಧೃದಯಾ** ನಿನ್ನಲ್ಲಿಯೇ ಮನಸ್ಸುಳ್ಳವಳು (ನಿನ್ನ ಭಕ್ತಳು) ಲಕ್ಷ್ಮೀದೇವಿಯು ನಿಷ್ಕಂಟಕ ಐಶ್ವರ್ಯ ಕೊಡದಿರುವದಕ್ಕೆ ಎರಡು ಕಾರಣಗಳು ೧) ನಿಷ್ಕಾಮವಾಗಿ ಶ್ರೀಹರಿಯ ಪಾದಾರ್ಚನೇ ಇಲ್ಲದಿರುವುದು ೨) ತಾನು ಶ್ರೀಹರಿಯ ಭಕ್ತಳಾಗಿರುವುದು. ಯಾರು ನಿನ್ನ ಪಾದಾರ್ಚಕರೋ ಅವರಿಗೆ ನನ್ನ ಅನುಗ್ರಹ. ಯಾರಲ್ಲ ಅವರಿಗಿಲ್ಲ ಎಂದು ಲಕ್ಷ್ಮೀದೇವಿಯು ಹೇಳಿರುವಳು. **ಸಸುರಾಸುರಾದಯಃ** ಎಂಬುದರಿಂದ ತಾನು ಸರ್ವಸುರಾಸುರಪೂಜಿತಳಾದರೂ ಶ್ರೀಹರಿಯ ಭಯದಿಂದ ಶ್ರೀಹರಿಯ ವಿಮುಖರಿಗೆ ಅಖಂಡಿತೈಶ್ವರ್ಯ ಕೊಡುವಲ್ಲಿ ಸಮರ್ಥಳಲ್ಲದಿರುವಾಗ ಮಿಕ್ಕ ದೇವತೆಗಳ ಪಾಡೇನು? ಎಂದು ಕೈಮುತ್ಯ ನ್ಯಾಯವನ್ನು ತೋರಿಸುವರು. ॥೨೨॥

ತನ್ನ ತಲೆಯ ಮೇಲೆ ಯಾವಾಗಲೂ ಶ್ರೀಹರಿಯ ಅಭಯಹಸ್ತವಿದ್ದರೂ ಲಕ್ಷ್ಮೀದೇವಿಯು ಶ್ರೀಹರಿಯ ಪೂಜಕರು ಕೃಪಾತಿಶಯದ್ಯೋತಕವಾದ ಅಭಯ ಹಸ್ತವನ್ನು ತಲೆಯ ಮೇಲೆ ಇಡುವುದನ್ನು ಪ್ರಾರ್ಥಿಸಬೇಕು ಎಂದು ತಿಳಿಸಲು ಪ್ರಾರ್ಥಿಸುವಳು

 

**ಸ ತ್ವಂ ಮಮಾಪಿ ಕುರು ಶೀರ್ಷಣಿ ಸ್ವಕಂ**
**ಕರಾಂಬುಜಂ ಯತ್ತ(ತ್ವ)ದಧಾಯಿ ಸಾತ್ವತಾಮ್ ।**
**ಬಿಭರ್ಷಿ ಮಾ ಲಕ್ಷ್ಮ ವರೇಣ್ಯ ಮಾಯಯಾ**
**ಕ ಈಶ್ವರಸ್ಯೇಹಿತಮೂಹಿತುಂ ವಿಭುಃ ಇತಿ ॥೨೩॥**

**ಸಃ ತ್ವಂ** ಯಾವನ ಪೂಜೆಯು ಎಲ್ಲ ಪುರುಷಾರ್ಥಸಾಧನವೋ, ನಿಷ್ಕಾಮವಾಗಿ ಯಾವನ ಪೂಜೆ ಮಾಡದೆ ನಿಷ್ಕಂಟಕ ಐಶ್ವರ್ಯ ದೊರೆಯದೋ ಅಂಥ ನೀನು **ಹೇ ಅಚ್ಯುತ** ಶ್ರೀಹರಿಯೇ **ಯತ್** ಯಾವುದನ್ನು (**ತ್ವತ್** ಎಂಬ ಪಾಠದಲ್ಲಿ **ತ್ವಯಾ** ನಿನ್ನಿಂದ ಎಂದರ್ಥ) **ಸಾತ್ವತಾಂ** ಬ್ರಹ್ಮ, ರುದ್ರ ಮೊದಲಾದ ಭಕ್ತಶ್ರೇಷ್ಠರ **ಶೀರ್ಷಣಿ** ತಲೆಯ ಮೇಲೆ **ಅಧಾಯಿ** ಕೃಪೆಯಿಂದ ಇಡಲ್ಪಟ್ಟಿತೋ (ಗೋಪಸ್ತ್ರೀಯರ ತಲೆಯ ಮೇಲೆ ಇಡಲ್ಪಟ್ಟಿತೋ) **ತತ್ ಕರಾಂಬುಜಂ** ಆ ಕರಕಮಲವನ್ನು **ಮಮ ಶೀರ್ಷಣಿ ಅಪಿ** ನನ್ನ ತಲೆಯ ಮೇಲೂ **ಕುರು** ಇಡು. ಈ ಪ್ರಾರ್ಥನೆಯು ಲಕ್ಷ್ಮೀದೇವಿಗೂ ಹರ್ಷೋತ್ಕರ್ಷಜನಕ ನವ ನವ ಮಾಹಾತ್ಮ್ಯಾತಿಶಯದರ್ಶನರೂಪ ವಿಶೇಷಾನುಗ್ರಹಕ್ಕಾಗಿ ಎಂದು ತಿಳಿಯಬೇಕು. ವಸ್ತುತಃ ನನ್ನ ಮೇಲೆ ಎಲ್ಲರಕ್ಕಿಂತ ಹೆಚ್ಚು ಅನುಗ್ರಹ ಪ್ರಸಾದ ಇದ್ದೇ ಇದೆ ಎಂದು ತಾನೇ ಹೇಳುವಳು. **ಹೇ ವರೇಣ್ಯ** ಶ್ರೇಷ್ಠನೇ **ಮಾ** ನನ್ನನ್ನು **ಲಕ್ಷ್ಮ** ಚಿನ್ಹವಾಗಿ **ಮಾಯಯಾ** ನಿನ್ನ ಇಚ್ಛೆಯಿಂದ **ಬಿಭರ್ಷಿ** ವಕ್ಷಸ್ಥಲದಲ್ಲಿ ಧರಿಸಿರುವಿ. **ಮಾಯಯಾ** ನಿನ್ನ ಇಚ್ಛೆಯಿಂದಲೇ **ಈಶ್ವರಸ್ಯ** ಸರ್ವನಿಯಾಮಕ ಶ್ರೇಷ್ಠನಾದ ನಿನ್ನ **ಈಹಿತಂ** ಅಭಿಪ್ರಾಯವನ್ನು **ಊಹಿತುಂ** ಊಹಿಸಲು **ಕಃ ವಿಭುಃ** ಯಾರು ಸಮರ್ಥರು? ಯಾರೂ ಊಹಿಸಲಾರರು ಎಂದು ಭಾವ. **ಮಾಯಯಾ** ಎಂಬುದರಿಂದ ಪ್ರಯೋಜನಾಪೇಕ್ಷೆಯಿಂದ ಚಿನ್ಹವಾಗಿ ಧರಿಸಿದವನಲ್ಲವೆಂದೂ **ಈಶ್ವರಸ್ಯ** ಎಂಬುದರಿಂದ ಆ ಬಗೆಯ ಇಚ್ಛೆಗೆ ಕಾರಣವನ್ನಾದರೂ ಯಾರೂ ಊಹಿಸಲಾರರು ಎಂದು ತಿಳಿಸಿರುವರು. ॥೨೩॥

## ರಮ್ಯಕವರ್ಷ - ಮತ್ಸ್ಯ

**ರಮ್ಯಕೇ ಚ ಭಗವತಃ ಪ್ರಿಯತಮಂ ಮಾತ್ಸ್ಯಮವತಾರೂಪಂ ತದ್ವರ್ಷಪುರುಷಸ್ಯ ಮನೋಃ ಪ್ರಾಕ್ ಪ್ರದರ್ಶಿತಂ ಸ ಇದಾನೀಮಪಿ ಮಹತಾ ಭಕ್ತಿಯೋಗೇನಾರಾಧಯನ್ನಿದಂ ಚೋದಾಹರತಿ ॥೨೪॥**

**ರಮ್ಯಕೇ ಚ** ರಮ್ಯಕ ವರ್ಷದಲ್ಲಿಯಾದರೂ **ತದ್ವರ್ಷಪುರುಷಸ್ಯ** ಆ ಖಂಡದ ಮುಖ್ಯ (ಪ್ರಧಾನ) ಪುರುಷನಾದ **ಮನೋಃ** ವೈವಸ್ವತಮನುವಿಗೆ (ಸತ್ಯವ್ರತರಾಜನಿಗೆ) **ಪ್ರಾಕ್** ಮನ್ವಂತರ ಪ್ರಾರಂಭದಲ್ಲಿ **ಪ್ರದರ್ಶಿತಂ** ಪ್ರತ್ಯಕ್ಷವಾಗಿ ತೋರಿಸಿದ **ಪ್ರಿಯತಮಂ** ಅತ್ಯಂತ ಪ್ರಿಯವಾದ **ಮತ್ಸ್ಯಾವತಾರರೂಪಂ** ಶ್ರೀಹರಿಯ ಮತ್ಸ್ಯಾವತಾರದ ರೂಪವನ್ನು **ಸಃ** ಆ ವೈವಸ್ವತಮನುವು **ಇದಾನೀಂ ಅಪಿ** ಈಗಲೂ **ಮಹತಾ ಭಕ್ತಿಯೋಗೇನ** ಅತಿಶಯ ಭಕ್ತಿಯಿಂದ **ಆರಾಧಯನ್** ಆರಾಧಿಸುತ್ತ **ಇದಂ ಚ** ಮುಂದೆ ಹೇಳುವ ಮಂತ್ರವನ್ನು **ಉದಾಹರತಿ** ಪಠಿಸುವರು. ।।೨೪।।

**ಓಂ ನಮೋ ಭಗವತೇ ಮುಖ್ಯತಮಾಯ ನಮಃ ಸತ್ವಾಯ ಪ್ರಾಣಾಯೌಜಸೇ ಬಲಾಯ ಮಹಾಮತ್ಸ್ಯಾಯ ನಮಃ ಇತಿ ।।೨೫।।**

**ಭಗವತೇ** ಷಡ್ಗುಣೈಶ್ವರ್ಯ ಸಂಪನ್ನನಾದ **ಮುಖ್ಯತಮಾಯ** ಜಗತ್ತಿಗೆ ಅತ್ಯಂತ ಪ್ರಧಾನನಾದ **ಸತ್ವಾಯ** ಸಾಧುಗುಣ ಸ್ವರೂಪನಾದ **ಪ್ರಾಣಾಯ** ಸರ್ವಪ್ರಾಣಚೇಷ್ಟಕನಾದ **ಓಜಸೇ** ಓಜೋಸ್ವರೂಪನಾದ **ಬಲಾಯ** ಬಲಸ್ವರೂಪನಾದ **ಮಹಾಮತ್ಸ್ಯಾಯ** ಲೋಕವಿಲಕ್ಷಣ ಮತ್ಸ್ಯರೂಪನಿಗೆ **ಓಂ** ಪ್ರಣವ ಪ್ರತಿಪಾದ್ಯನಿಗೆ **ನಮೋ ನಮಃ ನಮಃ** ನಮಸ್ಕಾರ **ಇತಿ** ಎಂದು ಪಠಿಸುವರು. ।।೨೫।।

**ಅಂತರ್ಬಹಿಶ್ಚಾಖಿಲಲೋಕಪಾಲಕೈ-**
**ರದೃಷ್ಟರೂಪೋ ವಿಚರಸ್ಯುರು(ಶ್ಚ)ಸ್ವನಃ ।**
**ಸ ಈಶ್ವರಸ್ತ್ವಂ ಯ ಇದಂ ವಶೇऽನಯ-**
**ನ್ನಾತ್ಮಾ ಯಥಾ ದಾರುಮಯೀಂ ನರಃ ಸ್ತ್ರಿಯಮ್ ।।೨೬।।**

**ಯಃ** ಯಾವನು **ಉರುಃ** ಗುರುವೋ **ನಃ** ಪರಮ ಪುರುಷನೋ **ಉರುಸ್ವನಃ** ಎಂಬ ಪಾಠದಲ್ಲಿ ವೇದನಾದವುಳ್ಳವನೋ **ನರಃ** ಮನುಷ್ಯನು **ದಾರುಮಯೀಂ** ಕಟ್ಟಿಗೆಯ **ಸ್ತ್ರಿಯಂ** ಹೆಣ್ಣು ಬೊಂಬೆಯನ್ನು **ವಶೇ** ತನ್ನ ಅಧೀನದಲ್ಲಿ **ಯಥಾ ನಯತಿ** ಹೇಗೆ ತಂದುಕೊಳ್ಳುವನೋ **ತಥಾ** ಹಾಗೆ **ಇದಂ** ಈ ಜಗತ್ತನ್ನು **ವಶೇ** ತನ್ನ ಅಧೀನದಲ್ಲಿ **ಅನಯತ್** ತಂದುಕೊಂಡಿರುವೆಯೋ **ಸಃ ತ್ವಂ** ಆ ನೀನು **ಈಶ್ವರಃ** ಸರ್ವನಿಯಾಮಕನು **ಆತ್ಮಾ** ಸ್ವಾಮಿಯು **ಅಖಿಲಲೋಕಪಾಲಕೈಃ** ಎಲ್ಲ ಲೋಕಪಾಲಕರಿಂದ **ಅದೃಷ್ಟರೂಪಃ**




ಸಂಪೂರ್ಣವಾಗಿ ಕಾಣದ ರೂಪವುಳ್ಳವನಾಗಿ **ಅಂತಃ ಬಹಿಃ** ಒಳಗೂ, ಹೊರಗೂ **ವಿಚರಸಿ** ವಿಶಿಷ್ಟವಾಗಿ ಸಂಚರಿಸುವಿ. ।।೨೬।।

ಲೋಕಪಾಲಕರು ಪಾಲಕರಾದ್ದರಿಂದ ಅವರ ಅಧೀನ ಜಗತ್ತು ಇದೆ ಎಂಬುದು ಸಿದ್ಧ. ಕಾರಣ ಶ್ರೀಹರಿಯು ಹೇಗೆ ತನ್ನ ಅಧೀನಕ್ಕೆ ತೆಗೆದುಕೊಂಡನು ಎಂದರೇ ಅವರಿಗೆ ಇರುವ ಪಾಲಕತ್ವ ಸ್ವತಂತ್ರವಾದುದಲ್ಲವೆಂದು ಹೇಳುವರು. ಶ್ರೀಹರಿಯ ಅಧೀನರೇ ಆದ ಮೇಲೆ ಲೋಕಪಾಲಕರಿಗೆ ತಿಳಿಯದರೂಪ ಉಳ್ಳವನು ಹೇಗೆ ಎಂದರೆ ಸ್ಪರ್ಧೆಯ ಕಾರಣದಿಂದ ಎಂದು ಹೇಳುವರು

**ಯಂ ಲೋಕಪಾಲಾಃ ಕಿಲ ಮತ್ಸರಜ್ವರಾ**
**ಹಿತ್ವಾ ಯತಂತೋऽಪಿ ಪೃಥಕ್ಸಮೇತ್ಯ ಚ ।**
**ಪಾತುಂ ನ ಶೇಕುರ್ದ್ವಿಪದಶ್ಚತುಷ್ಪದಃ ।**
**ಸರೀಸೃಪಸ್ಥಾಸ್ನು ಯದತ್ರ ದೃಶ್ಯತೇ ।।೨೭।।**

**ಮತ್ಸರಜ್ವರಾಃ** ೧) ಸ್ವಾಭಾವಿಕವಾಗಿ ಸ್ಪರ್ಧೆಯಿಲ್ಲದಿದ್ದರೂ ದೈತ್ಯಮೋಹನೆಗಾಗಿ ಸ್ಪರ್ಧಿಸುವರಂತೆ ತೋರಿಸುವ ೨) ಶ್ರೀಹರಿಯ ಆಜ್ಞೆಯಂತೆ ಸ್ಪರ್ಧೆ ಎಂಬ ದಾಹಕವುಳ್ಳ ೩) ಕಲಿ ಮೊದಲಾದ ಬಲಿಷ್ಠ ದೈತ್ಯರ ಆವೇಶದಿಂದ ಸ್ಪರ್ಧೆಗೆ ವಿಷಯರಾದ **ಲೋಕಪಾಲಾಃ** ಜಗತ್ತಿನ ಪಾಲಕರೆನಿಸಿದ ರುದ್ರೇಂದ್ರಾದಿ ದೇವತೆಗಳು **ಯಂ ತ್ವಾಂ** ಯಾವ ನಿನ್ನನ್ನು **ಹಿತ್ವಾ** ಬಿಟ್ಟು **ಪೃಥಕ್** ಬೇರೆ ಬೇರೆಯಾಗಿ **ಚ** ಅಥವಾ **ಸಮೇತ್ಯ** ಎಲ್ಲರೂ ಒಟ್ಟಿಗೆ ಸೇರಿ **ಅತ್ರ** ಈ ಬ್ರಹ್ಮಾಂಡದಲ್ಲಿ **ಯತ್** ಯಾವ **ದ್ವಿಪದಃ** ಎರಡು ಕಾಲಿನ ಪ್ರಾಣಿಗಳು (ಮನುಷ್ಯ) **ಚತುಷ್ಪದಃ** ನಾಲ್ಕು ಕಾಲಿನ ಪ್ರಾಣಿಗಳು (ಪಶುಗಳು) **ಸರೀಸೃಪಃ** ಸಂಚರಿಸುವ(ಜಂಗಮ) **ಸ್ಥಾಸ್ನು** ಒಂದೇ ಕಡೆ ಇರುವ (ಚಲಿಸದ) ಸ್ಥಾವರ ಪ್ರಪಂಚವು **ದೃಶ್ಯತೇ** ಕಾಣುವುದೋ **ತತ್** ಅದನ್ನು **ಪಾತುಂ** ರಕ್ಷಿಸಲು **ಯತಂತಃ ಅಪಿ** ಪ್ರಯತ್ನ ಮಾಡುತ್ತಿದ್ದರೂ **ನ ಶೇಕುಃ** ರಕ್ಷಿಸಲು ಸಮರ್ಥರಾಗಲಿಲ್ಲ. ಕಾರಣ ಅವರು ಸ್ವತಂತ್ರರಲ್ಲವೆಂದು ಭಾವ.

ಇಲ್ಲಿ **ಮತ್ಸರಜ್ವರಾಃ** ಎಂದು ಲೋಕಪಾಲಕರಿಗೆ (ದೇವತೆಗಳಿಗೆ) ಶ್ರೀಹರಿಯೊಡನೆ ಮಾತ್ಸರ್ಯವೆಂಬ ಸ್ಪರ್ಧೆ ತೋರುವುದು ಅದಾದರೂ ಹರಿಭಕ್ತೋತ್ತಮರಾದ ದೇವತೆಗಳಲ್ಲಿ ಪ್ರಮಾಣಬಾಧಿತ ಕಾರಣ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು

**ತಾತ್ಪರ್ಯ - 'ಸ್ಪರ್ಧಂತ ಇವ ದೇವಾಸ್ತು ಹರಿಣಾ ಯತ್ರ ಕುತ್ರಚಿತ್ ।**
**ಹರೇರೇವಾಜ್ಞಯಾ ಕ್ವಾಪಿ ದೈತ್ಯಾವೇಶಾದಥಾಪಿ ವಾ । ಇತಿ ಚ**

ಕೆಲವೆಡೆ ದೇವತೆಗಳು ಹರಿಯೊಡನೆ ಸ್ಪರ್ಧಿಸುವಂತೆ ತೋರಿಸುವರು(ದೈತ್ಯ ಮೋಹಕ್ಕಾಗಿ), ಮತ್ತೆ ಕೆಲವಡೆ ಶ್ರೀಹರಿಯ ಆಜ್ಞೆಯಿಂದಲೇ ಹಾಗೆ ಮಾಡುವರು, ಮತ್ತೆ ಕೆಲವು ವೇಳೆ ರುದ್ರಾದಿದೇವತೆಗಳು ಕಲಿಯೇ ಮೊದಲಾದ ದೈತ್ಯರ ಪ್ರಭಾವಕ್ಕೆ ಒಳಗಾಗಿ ಹಾಗೆ ಮಾಡುವರು. ಹೀಗೆ ಸ್ಪರ್ಧೆ ಅನಿಮಿತ್ತಕವಾದ್ದರಿಂದ ಜಗತ್ಪಾಲನೆಯಲ್ಲಿ ಅಶಕ್ತಿ ಇವರ ಸ್ವರೂಪಕ್ಕೆ ಹತ್ತಿದ್ದು ಎಂದು ಹೇಳಿದಂತಾಯಿತು. **ಕಿಲ** ಎಂಬುವುದರಿಂದ ಮಾತ್ಸರ್ಯದ ಸಂಭಾವನೆ ಮಾತ್ರ ಮುಖ್ಯವಲ್ಲವೆಂದೂ ಸೂಚಿಸಿರುವರು (**ವಾರ್ತಾ ಸಂಭಾವನಯೋಃ ಕಿಲ** ಎಂದಿದೆ.) ।।೨೭।।

## ಮೂಲ-ಅವತಾರರೂಪಗಳಿಗೆ ಭೇದವಿಲ್ಲ

ಶ್ರೀಹರಿಗೆ ಮೂಲರೂಪದಲ್ಲಿ ಜಗತ್ಪಾಲನ ಶಕ್ತಿಯಿದ್ದರೂ ಅವತಾರರೂಪದಲ್ಲಿ ಇಲ್ಲ ವಲ್ಲ ಎಂದು ಶಂಕಿಸಿ ಮೂಲ, ಅವತಾರ ರೂಪಗಳಿಗೆ ಯಾವ ವಿಶೇಷವೂ ಇಲ್ಲವೆಂದು ಹೇಳುತ್ತಾರೆ.

**ಭವಾನ್ಯುಗಾಂತಾರ್ಣವ ಊರ್ಮಿಮಾಲಿನಿ**
**ಕ್ಷೋಣೀಮಿಮಾಮೋಷಧಿವಿರುಧಾಂ ನಿಧಿಂ ।**
**ಮಯಾ ಸಹೋರುಕ್ರಮ ಊಹ ಓಜಸಾ**
**ತಸ್ಮೈ ಜಗತ್ಪ್ರಾಣಗುಣಾತ್ಮನೇ ನಮಃ ।।೨೮।।**

**ಹೇ ಉರುಕ್ರಮ** ಮಹಾಪರಾಕ್ರಮಿಯೇ **ಭವಾನ್** ನೀನು **ಊರ್ಮಿಮಾಲಿನಿ** ತರಂಗಗಳ ಮಾಲೆಯುಳ್ಳ **ಯುಗಾಂತಾರ್ಣವೇ** ಮನ್ವಂತರ ಪ್ರಳಯ ಸಮುದ್ರದಲ್ಲಿ **ಇಮಾಂ** ಈ **ಓಷಧಿವೀರುಧಾಂ** ಓಷಧಿಗಳಿಗೂ ಬಳ್ಳಿಗಳಿಗೂ **ನಿಧಿಂ** ನಿಕ್ಷೇಪ ಸ್ಥಾನವಾದ (ಆಶ್ರಯವಾದ) **ಮಯಾ ಸಹ** (**ವಿದ್ಯಮಾನಾಂ**) ನನ್ನಿಂದ ಕೂಡಿದ್ದ **ಕ್ಷೋಣೀಂ** ಭೂಮಿಯನ್ನು (ನೌಕಾರೂಪ) **ಓಜಸಾ** ನಿನ್ನ ಸ್ವರೂಪ ಸಾಮರ್ಥ್ಯದಿಂದ **ಊಹೇ** ವಹಿಸಿಕೊಂಡಿದ್ದೆ (ಹೊತ್ತಿದ್ದಿ) **ತಸ್ಮೈ** ಅಂಥ **ಜಗತ್ಪ್ರಾಣಗುಣಾತ್ಮನೇ** ಜಗತ್ತನ್ನು ಚೇಷ್ಟಿಸುವ ಗುಣಸ್ವರೂಪನಾದ **ತುಭ್ಯಂ ನಮಃ** ನಿನಗೆ ನಮಸ್ಕಾರ **ಇತಿ** ಎಂದು ಪಠಿಸುವರು. ಮತ್ಸ್ಯಾವತಾರ ಚರಿತ್ರೆಯಿಂದ ಸ್ತುತಿಸಿದಂತಾಯಿತು. ।।೨೮।।




## ಹಿರಣ್ಮಯವರ್ಷ - ಕೂರ್ಮ

**ಹಿರಣ್ಮಯೇ ಭಗವಾನ್ನಿವಸತಿ ಕೂರ್ಮತನುಂ ಬಿಭ್ರಾಣಸ್ತಸ್ಯ ಪ್ರಿಯತಮಾಂ ತನುಮರ್ಯಮಾ ಸಹ ತದ್ವರ್ಷಪುರುಷೈಃ ಪಿತೃಗಣಾಧಿಪತಿರುಪಧಾವತಿ ಮಂತ್ರಮಿಮಂ ಚಾನುಜಪತಿ ॥೨೯॥**

**ಹಿರಣ್ಮಯೇ(ತು)(ಅಪಿ)** ಹಿರಣ್ಮಯ ಖಂಡದಲ್ಲಿಯಾದರೂ **ಭಗವಾನ್** ಶ್ರೀಹರಿಯು **ಕೂರ್ಮತನುಂ ಬಿಭ್ರಾಣಃ ಕಿಲ** ಕೂರ್ಮದೇಹವನ್ನು ಧರಿಸಿದವನಾಗಿ **ನಿವಸತಿ** ಸನ್ನಿಹಿತನಾಗಿರುವನು **ತಸ್ಯ** ಅವನ **ಪ್ರಿಯತಮಾಂ** ಅತ್ಯಂತ ಪ್ರಿಯವಾದ **ತನುಂ** ಆ ಸ್ವರೂಪವನ್ನು **ಪಿತೃಗಣಾಧಿಪತಿಃ** ಪಿತೃಗಣಗಳಿಗೆ ಒಡೆಯನಾದ ಅರ್ಯಮಾ ಎಂಬ ದೇವತೆಯು **ತದ್ವರ್ಷಪುರುಷೈಃ ಸಹ** ಆ ಖಂಡದ ಜನರೊಂದಿಗೆ **ಉಪಧಾವತಿ** ಉಪಾಸಿಸುವನು **ಇಮಂ ಮಂತ್ರಂ ಅನುಜಪತಿ** ಈ ಮಂತ್ರವನ್ನು ಮತ್ತೆ ಮತ್ತೆ ಜಪಿಸುವರು. ॥೨೯॥

**ಓಂ ನಮೋ ಭಗವತೇ ಅಕೂಪಾರಾಯ ಸರ್ವಸತ್ವಗುಣವಿಶೇಷಣಾಯ ನೋಪಲಕ್ಷಿತಸ್ಥಾನಾಯ ನಮೋಽವರ್ಷ್ಮಣೇ ನಮಃ ಪ್ರಮಾಣಾಯ ನಮೋ ಭೂಮ್ನೇ( ಭೂಯಸೇ) ನಮೋಽವಸ್ಥಾನಾಯ ನಮಸ್ತೇ ॥೩೦॥**

**ಅಕೂಪಾರಾಯ** ಭಾವಿಯಲ್ಲಿ ಸಂಚರಿಸದ ಅಂದರೆ ಮಹಾಸಮುದ್ರದಲ್ಲಿಯೇ ಸಂಚರಿಸುವ **ಸರ್ವಸತ್ವಗುಣವಿಶೇಷಣಾಯ** ಪರಾಕ್ರಮಾದಿ ಎಲ್ಲ ಗುಣಗಳೇ ಪೂರ್ಣಜ್ಞಾನಾನಂದಾದಿಗುಣಗಳೇ ವಿಶೇಷವಾಗಿವುಳ್ಳ, ಎಲ್ಲ ಪ್ರಾಣಿಗಳ ಗುಣಗಳನ್ನು ವಿಶೇಷವಾಗಿ ಪ್ರೇರಿಸುವ **ನೋಪಲಕ್ಷಿತಸ್ಥಾನಾಯ** ಸಾಕಲ್ಯೇನ ತಿಳಿಯಲಾಗದ ಸ್ವರೂಪವುಳ್ಳ ಅಥವಾ ನೀರಿನಲ್ಲಿರುವುದರಿಂದ ಎಲ್ಲಿರುವನೆಂದು ತಿಳಿಯಲಾಗದ( ಅವಸ್ಥಾನ ತಿಳಿಯದ) **ವರ್ಷ್ಮಣೇ** ಭಕ್ತಾಭೀಷ್ಟವನ್ನು ಕರೆಯುವುದೇ ಸ್ವಭಾವವಾಗಿವುಳ್ಳ **ಅವರ್ಷ್ಮಣೇ** ಪ್ರಾಕೃತದೇಹವಿಲ್ಲದ **ಪ್ರಮಾಣಾಯ ಚ** ಚೆನ್ನಾಗಿ ಶಾಸ್ತ್ರ ಹೇಳುವ ಸಾಮರ್ಥ್ಯವುಳ್ಳ ಬ್ರಹ್ಮಾದಿಗಳಿಗೆ ಉತ್ತಮ ಜ್ಞಾನ ಕೊಡುವ **ಭೂಯಸೇ** ಅತ್ಯಂತ ದೊಡ್ಡವನಾದ **ಅವಸ್ಥಾನಾಯ** ಜಗತ್ತಿನ ಸ್ಥಿತಿಗೆ ಕಾರಣನಾದ **ತೇ** ನಿನಗೆ **ನಮಃ** ನಮಸ್ಕಾರ.

**ಅವಸ್ಥಾನಾಯ** ಎಂದು ಹೇಳಿದ್ದನ್ನೇ ವಿವರಿಸುತ್ತ ಸ್ತುತಿಸುವರು

**ಯದ್ರೂಪಮೇತನ್ನಿಜಮಾಯಯಾರ್ಪಿತ-**
**ಮರ್ಥಸ್ವರೂಪಂ ಬಹುರೂಪರೂಪಿತಮ್।**
**ಸಂಖ್ಯಾನಯಸ್ಯಾಸ್ತ್ಯಯಥೋಪಲಂಭನಾತ್**
**ತಸ್ಮೈ ನಮಸ್ತೇऽವ್ಯಪದೇಶರೂಪಿಣೇ** ॥೩೧॥

**ನಿಜಮಾಯಯಾ** ಇದು ನನ್ನ ಆದರದಿಂದ ಇರಲಿ ಎಂಬ ನಿನ್ನ ಇಚ್ಛೆಯಿಂದ **ಅರ್ಪಿತಂ** ನಿನ್ನಲ್ಲಿ ಇಡಲ್ಪಟ್ಟ **ಅರ್ಥಸ್ವರೂಪಂ** ಜ್ಞೇಯವಾದ ಅಬಾಧಿತ ಸ್ವರೂಪವುಳ್ಳ **ಬಹುರೂಪರೂಪಿತಂ** ಜರಾಯುಜ ಮುಂತಾದ ಅನೇಕ ರೂಪದಿಂದ ಕರೆಯಲ್ಪಡುವ **ಯಸ್ಯ** ಯಾವುದಕ್ಕೆ (ಜಗತ್ತಿನಲ್ಲಿರುವ ಪ್ರಾಣಿಗಳಿಗೆ) **ಸಂಖ್ಯಾ** ಇಷ್ಟೇ ಎಂಬ ಸಂಖ್ಯೆಯು **ನ ಅಸ್ತಿ** ಇಲ್ಲವೋ ಮತ್ತು **ಯತ್** ಯಾವುದು **ಉಪಲಂಭಾತ್** ಈಗ ಕಂಡದ್ದಕ್ಕಿಂತ **ಅಯಥಾ** ಬೇರೆ ರೀತಿಯಲ್ಲಿ, ವಿಕಾರ ಹೊಂದಿದ ರೀತಿಯಲ್ಲಿ ನಾಳೆ ಕಾಣುವುದೋ ಅಂತಹ **ಏತತ್** ಚರಾಚರಾತ್ಮಕ ಈ ಪ್ರಪಂಚವು **ಯದ್ರೂಪಂ** ಯಾವ ಶ್ರೀಹರಿಯ ಸನ್ನಿಧಾನ ಯೋಗ್ಯವಾದ ಪ್ರತಿಮೆಯಾಗಿರುವುದೋ, ಯಾವನನ್ನು ಅಂತರ್ಯಾಮಿಯಾಗಿ ಹೊಂದಿದೆಯೋ **ತಸ್ಮೈ** ಅಂಥಹ **ಅವ್ಯಪದೇಶರೂಪಿಣೇ** ವಾಜ್ ಮನಸ್ಸುಗಳಿಗೆ ಅಗೋಚರವಾದ ರೂಪವುಳ್ಳ **ತೇ ನಮಃ** ನಿನಗೆ ನಮಸ್ಕಾರ.

ಈ ಶ್ಲೋಕದಲ್ಲಿ **ಅಯಥೋಪಲಂಭನಾತ್** ಎಂಬುದಕ್ಕೆ ಮಿಥ್ಯೆಯಾಗಿ ತಿಳಿಯುವ ಎಂದು ಅಪಾರ್ಥವಾಗದಿರಲೆಂದು ಅನ್ವಯ ಹೇಳಿ ಅದರಿಂದ ಬಂದ ಅರ್ಥ ತಿಳಿಸುವರು

> ತಾತ್ಪರ್ಯ - ಉಪಲಂಭನಾದಯಥಾ ।
> ಯಥಾ ದೃಷ್ಟಂ ತಥಾ ನ ತಿಷ್ಠತಿ ಅನ್ಯಥಾ ಭವತಿ ಇತ್ಯರ್ಥ ॥

ಎಲ್ಲ ಪ್ರಪಂಚ ಇಂದು ಕಂಡಂತೆ ನಾಳೆ ಕಾಣುವುದಿಲ್ಲ. ಅಂದರೆ ವಿಕಾರ ಹೊಂದುತ್ತದೆ ಎಂದು ಭಾವ. ವಿಕಾರಹೊಂದಿದರೂ ಸತ್ಯವೇ, ಪ್ರವಾಹರೂಪದಿಂದ ನಿತ್ಯವೇ ಎಂದು ಅಭಿಪ್ರಾಯ. ॥೩೧॥

ಸನ್ ಘಟಃ, ಸನ್ ಪಟಃ ಮುಂತಾಗಿ ಎಲ್ಲ ಪದಾರ್ಥಗಳು ಸತ್ ಪದಾರ್ಥದಿಂದ ಕೂಡಿಕೊಂಡೇ ತೋರುವುದರಿಂದ (ಸದನುವೇಧವಿರುವುದರಿಂದ) **ಸರ್ವಂ ಖಲ್ವಿದಂ** ಬ್ರಹ್ಮ ಎಂಬ ಶ್ರುತಿಯಿರುವುದರಿಂದಲೂ ಜಗತ್ತು ಬ್ರಹ್ಮಸ್ವರೂಪವೆಂಬುದೇ ಏಕೆ ಸರಿಯಾದ ಅರ್ಥವಾಗಬಾರದು ಎಂದಾಶಂಕಿಸಿ




ಶ್ರುತಿಸ್ಮೃತಿಗಳಿಂದಲೇ ಸರ್ವಾಂತರ್ಯಾಮಿಯೂ ಸರ್ವಸತ್ತಾಪ್ರದನು ಆಗಿ ಶ್ರೀಹರಿಯು ತಿಳಿದುಬರುವುದರಿಂದ ಆ ಆ ಶಬ್ದಗಳ ಪ್ರವೃತ್ತಿನಿಮಿತ್ತವೂ ಅವನ ಅಧೀನ. ಆದ್ದರಿಂದಲೇ ಅವನು ಮುಖ್ಯವಾಗಿ ಆ ಆ ಶಬ್ದಗಳಿಂದ ವಾಚ್ಯನಾಗಿರುವನೇ ಹೊರತು ಸರ್ವಸ್ವರೂಪನಾದ್ದರಿಂದಲ್ಲ ಎಂದು ಹೇಳುತ್ತಾರೆ

**ಜರಾಯುಜಂ ಸ್ವೇದಜಮಂಡಜೋದ್ಭಿಜಂ**
**ಚರಾಚರಂ ದೇವರ್ಷಿಪಿತೃಭೂತಭೇದಮ್ ।**
**ದ್ಯೌಃ ಖಂ ಕ್ಷಿತಿಃ ಶೈಲಸರಿತ್ಸಮುದ್ರ-**
**ದ್ವೀಪಗ್ರಹರ್ಕ್ಷೇತ್ಯಭಿದೇಯ ಏಕಃ** **॥೩೨॥**

**ಜರಾಯುಜಂ** ಗರ್ಭವನ್ನು ಆವರಿಸುವ ಚರ್ಮದ ಚೀಲದಿಂದ ಸಹಿತವಾಗಿ ಹುಟ್ಟುವ **ಸ್ವೇದಜಂ** ಬೆವರಿನಿಂದ ಹುಟ್ಟುವ **ಅಂಡಜ** ಮೊಟ್ಟೆಯಿಂದ ಹುಟ್ಟುವ **ಉದ್ಭಿಜಂ** ಭೂಮಿಯನ್ನು ಭೇದಿಸಿಕೊಂಡು ಹುಟ್ಟುವ ಕ್ರಮವಾಗಿ ಮನುಷ್ಯ , ಕ್ರಿಮಿ, ಸೊಳ್ಳೆಗಳು, **ಚರಾಚರಂ** ಸಂಚರಿಸುವ(ಮನುಷ್ಯಾದಿಗಳು) ಮತ್ತು ಸಂಚರಿಸದಿರುವ ಗಿರಿತರುಗಳು **ದೇವರ್ಷಿಪಿತೃಭೇದಂ** ದೇವತೆಗಳು, ಋಷಿಗಳು, ಪಿತೃಗಳು, ಭೂತಗಳೆಂಬ ಭೇದವುಳ್ಳ **ದ್ಯೌಃ** ಸ್ವರ್ಗಲೋಕ **ಖಂ** ಆಕಾಶ **ಕ್ಷಿತಿಃ** ಭೂಮಿ **ಶೈಲ** ಬೆಟ್ಟ **ಸರಿತ್** ನದಿ **ಸಮುದ್ರ**, **ದ್ವೀಪ**, **ಗ್ರಹ** ಸೂರ್ಯಾದಿಗಳು **ಋಕ್ಷ** ಅಶ್ವಿನಿ ಮುಂತಾದ ನಕ್ಷತ್ರಗಳು **ಇತಿ** ಇವೇ ಮೊದಲಾದ ಶಬ್ದಗಳಿಂದ **ಏಕ ಏವ ಅಭಿಧೇಯಃ** ಜರಾಯುಜಾದಿಗಳಲ್ಲಿ ಅಂತರ್ಯಾಮಿಯೂ ಆ ಆ ಶಬ್ದ ಪ್ರವೃತ್ತಿನಿಮಿತ್ತಗಳಿಗೆ ಸ್ವಾಮಿಯೂ ಆದ ನೀನೊಬ್ಬನೇ ದೇವವಾಚಕ ಇಂದ್ರಾದಿ ಶಬ್ದಗಳಿಂದ, ಋಷಿವಾಚಕ ವಸಿಷ್ಠಾದಿ ಶಬ್ದಗಳಿಂದ, ಪಿತೃವಾಚಕ ಅರ್ಯಮಾದಿ ಶಬ್ದಗಳಿಂದ, ಭೂತವಾಚಕ ಆಕಾಶಾದಿ ಶಬ್ದಗಳಿಂದ, ಮನುಷ್ಯ, ಪಕ್ಷಿ, ಕ್ರಿಮಿ, ತರು, ಗಿರಿ ವಾಚಕ ಎಲ್ಲ ಶಬ್ದಗಳ ಮುಖ್ಯವಾಚ್ಯನು. ನಿನ್ನ ಅಧೀನವಾದುದು ಮುಖ್ಯವಾಚ್ಯವಲ್ಲವೆಂದು ಭಾವ.

**ತತ್ ಸೃಷ್ಟ್ವಾ ತದೇವಾನುಪ್ರಾವಿಶತ್** ಮುಂತಾದ ಶ್ರುತಿಗಳು ಸರ್ವಾಂತರ್ಯಾಮಿ ಎಂದೂ ತಿಳಿಸುವವು. ಏಕೇ ಎಂಬುದರಿಂದ **ಯೋ ದೇವಾನಾಂ ನಾಮಧಾ ಏಕ ಏವ** ಎಂಬ ಶ್ರುತಿಯನ್ನು ಸೂಚಿಸುವರು.

ಹಿಂದೆ ಹೇಳಿದ **ಯದ್ರೂಪ** ಎಂಬುದಕ್ಕೆ ಸಾಕ್ಷಾತ್ ಸ್ವರೂಪ ಎಂಬರ್ಥ ತಿಳಿಸಲೆಂದೇ ಇಲ್ಲಿ ಸರ್ವಶಬ್ದವಾಚ್ಯತ್ವ ಹೇಳಿದೆ ಎಂಬ ಶಂಕೆಯನ್ನು ಪರಿಹರಿಸಲು ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು

**ತಾತ್ಪರ್ಯ - 'ಸರ್ವಾಂತರ್ಯಾಮಿಕತ್ವಾತ್ತು ಸರ್ವನಾಮಾ ಹರಿಃ ಸ್ವಯಮ್ । ನ ತು ಸರ್ವಸ್ವರೂಪತ್ವಾತ್ ರೂಪತ್ವಮುಪಚಾರತಃ' ಇತಿ ಚ ॥**

ಸರ್ವಾಂತರ್ಯಾಮಿಯಾದ್ದರಿಂದ ಶ್ರೀಹರಿಯು ಸರ್ವನಾಮಗಳಿಂದ ವಾಚ್ಯನು. ಸರ್ವಸ್ವರೂಪನಾದ್ದರಿಂದಲ್ಲ. ಚೇತನಾಚೇತನಗಳು ಒಂದಲ್ಲ. ವಿಶಿಷ್ಟರಾದ ಚೇತನರೂ ಒಂದಲ್ಲ. ಚಿನ್ಮಾತ್ರ ಲಕ್ಷಣಾ ಮಾಡಿ ಐಕ್ಯ ಹೇಳುವುದು ಜಘನ್ಯವೆಂದು 'ತು' ಶಬ್ದದಿಂದ ತಿಳಿಸಿರುವರು. **'ದ್ವೇ ವಾವ ಬ್ರಹ್ಮಣೋ ರೂಪೇ'** ಇತ್ಯಾದಿಗಳಲ್ಲಿ ಅವನರೂಪಗಳೆಂದು ಕರೆದಿರುವುದು ಔಪಚಾರಿಕವಾಗಿ ಎಂದು ಭಾವ. ಅಂತೂ ಇಲ್ಲಿ ಹೇಳಿದ ಜರಾಯುಜಾದಿ ಸರ್ವಶಬ್ದವಾಚಕತ್ವವು **ಯದ್ರೂಪಂ** ಎಂಬಲ್ಲಿ ಹೇಳಿದ ಅಂತರ್ಯಾಮಿತ್ವಕ್ಕೆ ಉಪಪಾದಕವೆಂದು ಭಾವ. ॥೩೨॥

ಮೇಲಿನ ಮಂತ್ರದಲ್ಲಿ **ಭೂಯಸೇ** ಎಂಬುದರಿಂದ ಅನಂತರೂಪನೆಂದು ಸೂಚಿತವಾಗುವುದು. ಅದು ಸರಿಯಲ್ಲ. ಏಕೆಂದರೆ ದಶಾವತಾರ ಮುಂತಾದ ನಿಯತಸಂಖ್ಯಾ ಪ್ರಸಿದ್ಧಿಯು ತಪ್ಪಾಗಬೇಕಾಗುವುದು ಎಂದಾಶಂಕಿಸಿ ಪರಿಹಾರ ಹೇಳುತ್ತ ನಮಸ್ಕರಿಸುತ್ತಾರೆ

**ಯಸ್ಮಿನ್ನಸಂಖ್ಯೇಯವಿಶೇಷನಾಮ-**
**ರೂಪಾಕೃತೌ ಕವಿಭಿಃ ಕಲ್ಪಿತೇಯಮ್ ।**
**ಸಂಖ್ಯಾ ಯಯಾ ತತ್ತ್ವದೃಶಾ ವಿನೀಯತೇ**
**ತಸ್ಮೈ ನಮಃ ಸಾಂಖ್ಯನಿದರ್ಶನಾಯ ಹಿ ಇತಿ ॥೩೩॥**

**ಅಸಂಖ್ಯೇಯ** ಎಣಿಸಲಾಗದ **ವಿಶೇಷ** ವ್ಯಾವರ್ತಕ ಧರ್ಮಗಳು, ಗುಣಗಳು **ನಾಮ** ನಾರಾಯಣಾದಿ ಹೆಸರುಗಳು **ರೂಪ** ಬಿಳಿ, ಕೆಂಪು ಮುಂತಾದ ರೂಪಗಳು **ಆಕೃತೌ** ವಿಗ್ರಹಗಳುಳ್ಳ **ಯಸ್ಮಿನ್** ಯಾವ ನಿನ್ನಲ್ಲಿ **ಇಯಂ ಸಂಖ್ಯಾ** ದಶಾವತಾರಗಳು, ಪಂಚಾವತಾರಗಳು, ದ್ವಾದಶಾವತಾರಗಳು, ಶತಾವತಾರಗಳು, ಸಹಸ್ರಾವತಾರಗಳು ಎಂಬೀ ಸಂಖ್ಯೆಯು **ಕವಿಭಿಃ** ಜ್ಞಾನಿಗಳಿಂದ ಜಗತ್ತಿನ ರಕ್ಷಣೆಗಾಗಿ **ಕಲ್ಪಿತಾಃ** ಸಮರ್ಥವಾಗಿರುವುದು ಇದು ಇಷ್ಟೇ ಎಂಬುದು ಸರಿಯಲ್ಲ ಎಂದು ಹೇಳುತ್ತಾರೆ. **ಯಯಾ** ದಶಾವತಾರ ಮೊದಲಾದ ಸಂಖ್ಯೆಯಿಂದ **ನೀನು ತತ್ತ್ವದೃಶಾ** ನಿನ್ನ ಅನಂತತೆಯನ್ನು ಅಪರೋಕ್ಷವಾಗಿ ಕಂಡ ಜ್ಞಾನಿಗಳಿಂದ (ಜಾತ್ಯೇಕವಚನ) **ವಿನೀಯತೇ** ವಿಶೇಷದಿಂದ ನಯನ ಮಾಡಲ್ಪಡುವೆ. ಶಿಷ್ಯಪ್ರಶಿಷ್ಯರಲ್ಲಿ




ಉಪದೇಶಿಸಲ್ಪಟ್ಟು ಪ್ರವರ್ತಿತನಾಗಿರುವಿ (ಅಧಿಕಸಂಖ್ಯಾತ್ವೇನ ತಿಳಿಯಲ್ಪುಡವೆ ಎಂದು ಅರ್ಥ) ಇದರಿಂದ ಊಹೆಗೆ ತಕ್ಕಂತೆ ಹೇಳುವವರು ಅಪರೋಕ್ಷಜ್ಞಾನಿಗಳಲ್ಲವೆಂದೂ ಅಪರೋಕ್ಷದಿಂದ ಅನಂತತೆಯನ್ನು ತಿಳಿದಿರುವವರೇ ಜ್ಞಾನಿಗಳೆಂದು ಹೇಳಿದಂತಾಯಿತು. ಈ ಅಪರೋಕ್ಷವು ಬಾಹ್ಯವಾದ ವೃತ್ತಿಜ್ಞಾನವಲ್ಲ. ಹಾಗಿದ್ದಲ್ಲಿ ಸಂಖ್ಯಾಪ್ರಣಯನ, ವಿಶೇಷಜ್ಞಾನಗಳು ವ್ಯರ್ಥವಾಗುವವು. ಆದ್ದರಿಂದ ಅದನ್ನು ಸ್ವರೂಪ ಜ್ಞಾನವೆಂದೇ ಒಪ್ಪಬೇಕು. ಶ್ರೀಮದಾಚಾರ್ಯರು ಇದೇ ಅಭಿಪ್ರಾಯದಿಂದ **ತಜ್‌ಜ್ಞಾನಂ ತದ್ರೂಪಮೇವ ಹಿ** ಎಂದು ಹೇಳಿರುವರು. ಜೀವನ ಸ್ವರೂಪಜ್ಞಾನವು ತಿರೋಹಿತವಾಗಿದ್ದು ಶ್ರೀಹರಿಯ ಅನುಗ್ರಹದಿಂದ ವ್ಯಕ್ತವಾಗುವುದು ಎಂಬ ಅಭಿಪ್ರಾಯದಿಂದ ಶ್ರೀಹರಿಯನ್ನೂ ವಿಶೇಷಣದಿಂದ ತಿಳಿಸುವರು. **ಸಾಂಖ್ಯನಿದರ್ಶನಾಯ** ಎಂದು ಸ್ವರೂಪವಾದ ಯಥಾರ್ಥಜ್ಞಾನವನ್ನು ವ್ಯಕ್ತಗೊಳಿಸುವ **ತೇ** ನಿನಗೆ **ನಮಃ** ನಮಸ್ಕಾರ.

ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಂ ।
ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥

ಎಂಬ ವಚನವು ಜೀವನ ಸ್ವರೂಪವು ಶ್ರೀಹರಿಯಿಂದ ವ್ಯಕ್ತವಾಗುವುದೆಂದು ತಿಳಿಸುವುದು. ಅಥವಾ ಜೀವನ ಸ್ವರೂಪಜ್ಞಾನವಿದೆ ಎಂಬಲ್ಲಿ ಉದಾಹರಣೆ ಏನು ಎಂದರೆ ಆ ಸ್ಥಳವನ್ನು ಹೇಳುವರು **ಸಾಂಖ್ಯನಿದರ್ಶನಾಯ** ಯಥಾರ್ಥಜ್ಞಾನ ಸ್ವರೂಪಭೂತವಾದುದು ಇದೆ ಎಂಬುದಕ್ಕೆ ಉದಾಹರಣೆಯಾದ ಎಂದರ್ಥ. ಅಂದರೆ ಶ್ರೀಹರಿಯ ಜ್ಞಾನವು ಹೇಗೆ ಅವನ ಸ್ವರೂಪವೋ ಹಾಗೆಯೇ ಜೀವನ ಅಪರೋಕ್ಷಜ್ಞಾನವೂ ಅವನ (ಜೀವನ) ಸ್ವರೂಪವೇ ಎಂದು ಭಾವ. **ಸತ್ಯಂ ಜ್ಞಾನಮನಂತಂ ಬ್ರಹ್ಮ** ಎಂಬ ಶ್ರುತಿಯು ಶ್ರೀಹರಿಯ ಜ್ಞಾನ ಅವನ ಸ್ವರೂಪವೆಂದು ತಿಳಿಸುವುದು **ತಜ್‌ಜ್ಞಾನಂ ತದ್ರೂಪಮೇವ ಹಿ** ಎಂದು ಹೇಳಿದ ಆಚಾರ್ಯರಿಗೆ ಇದೇ ಅಭಿಪ್ರಾಯವೆಂದು ತಿಳಿದು ಬರುವುದು. **ಹಿ** ಎಂಬುದರಿಂದ ಆಚಾರ್ಯರು ಎರಡು ಜ್ಞಾನಗಳಲ್ಲಿನ ವ್ಯತ್ಯಾಸವನ್ನು ಸ್ಪಷ್ಟಪಡಿಸಿರುವರು. ಬ್ರಹ್ಮನ ಸ್ವರೂಪಜ್ಞಾನವು ಯಾವಾಗಲೂ ಪ್ರಕಾಶವಾಗಿಯೇ ಇರುವುದು. ಜೀವನಸ್ವರೂಪಜ್ಞಾನವಾದರೋ ಅವನ ಅದೃಷ್ಟನಿಯಾಮಕನಾದ ಶ್ರೀಹರಿಯ ಇಚ್ಛೆಯಿಂದ ಅವ್ಯಕ್ತವಾಗಿದ್ದು ಅವನ ಅನುಗ್ರಹದಿಂದ ವ್ಯಕ್ತವಾಗುವುದು ಎಂದು.

ಅಸಂಖ್ಯೇಯವಾದ ವಿಶೇಷಗುಣಗಳು, ನಾರಾಯಣಾದಿನಾಮಗಳು, ಶುಕ್ಲಾದಿರೂಪಗಳು, ವಿಗ್ರಹಗಳು ಉಳ್ಳ ನಿನ್ನಲ್ಲಿ ಜ್ಞಾನಿಗಳಿಂದ ಈ ರೀತಿಯಲ್ಲಿ ಶ್ರುತ್ಯಾದಿಗಳಿಂದ ಸಿದ್ಧವಾದ ಹತ್ತು, ಐದು, ಹನ್ನೆರಡು, ನೂರು, ಸಾವಿರ ಮೊದಲಾದ ರೀತಿಯಲ್ಲಿ ಸಂಖ್ಯೆಗಳು ಭಗವಂತನ ತತ್ತ್ವಜ್ಞಾನದಿಂದ ವಿಶೇಷದಿಂದ ಅನಂತವೆಂದು ತಿಳಿದು ಬರುವುದಾದ್ದರಿಂದ ಸತ್ಯವೆಂದು ಪ್ರತಿಪಾದಿಸಲ್ಪಟ್ಟಿರುವವು. ಆ ಭಗವಂತನ ತತ್ತ್ವಜ್ಞಾನವು ಭಗವತ್ಸ್ವರೂಪವಾದುದೇ. ಸಾಂಖ್ಯಶಾಸ್ತ್ರಪ್ರವರ್ತಕನಾದ ಶ್ರೀಹರಿಗೆ ನಮಸ್ಕಾರ ಎಂದು ಯಾದವಾರ್ಯರು ಅರ್ಥ ಮಾಡಿರುವುದು. ಶ್ರೀಹರಿಯ ಜ್ಞಾನವು ಸಾಂಖ್ಯಶಾಸ್ತ್ರಕ್ಕೆ ಮೂಲವಾದ್ದರಿಂದ ಸಾಂಖ್ಯಶಾಸ್ತ್ರಜನ್ಯವಲ್ಲ. ಅರ್ವಾಚೀನರ ತತ್ತ್ವಜ್ಞಾನವು ಆ ಶಾಸ್ತ್ರಜನ್ಯವೆಂದು ಅಭಿಪ್ರಾಯ.

## ದಶಾದಿ ಶಬ್ದಗಳು ಅನಂತ ವಾಚಕಗಳು

ದಶಾದಿ ಶಬ್ದಗಳು ಅನಂತ ವಾಚಕಗಳೆಂದು ತಿಳಿಯಬೇಕು. ಅದು ಹೇಗೆಂದರೆ **ಏತಾವತೀ ಹಿ ಸಂಖ್ಯಾ ದಶ ದಶತಃ ತತ್ ಶತಂ ದಶ ಶತಾನಿ ತತ್ ಸಹಸ್ರಂ ತತ್ ಸರ್ವಂ** ಮುಂತಾಗಿ ಶ್ರುತಿ ಇರುವುದರಿಂದ ಹತ್ತು ಹತ್ತರಿಂದ ನೂರು ಹತ್ತು ನೂರು ಎಂದರೆ ಸಾವಿರ, ಸಾವಿರದ ಹತ್ತು ಲಕ್ಷ, ಹತ್ತು ಲಕ್ಷದ ಹತ್ತು ಕೋಟಿ ಹೀಗೆ ಅನಂತಸಂಖ್ಯೆ ತಿಳಿಸುವುದು.

ತಾತ್ಪರ್ಯ - **'ದಶಾವತಾರ ಇತ್ಯಾದಿ ಸಂಖ್ಯಾ ವಿನಿಯತೇ ವಿಶೇಷೇಣ ನೀಯತೇ ತಜ್‌ಜ್ಞಾನಂ ತದ್ರೂಪಮೇವ ಹಿ ।**

ಹತ್ತು ಮೊದಲಾದ ಸಂಖ್ಯೆಗಳು ಅನಂತವೆಂದೇ ತತ್ತ್ವಜ್ಞಾನಿಗಳಿಂದ ತಿಳಿಯಲ್ಪಡುವುದು. ಆ ತತ್ತ್ವಜ್ಞಾನ ಭಗವದ್ರೂಪವಾಗಿದೆ. ।।೩೩।।

## ಉತ್ತರಕುರುವರ್ಷ - ಶ್ರೀಯಜ್ಞವರಾಹ

**ಉತ್ತರೇಷು ಕುರುಷು ಭಗವಾನ್ಯಜ್ಞಪುರುಷಃ ಕೃತವರಾಹರೂಪ ಆಸ್ತೇ । ತಂ ತು ದೇವೀ ಹೈಷಾ ಭೂಃ ಸಹಕುರುಭಿರಸ್ಖಲಿತಭಕ್ತಿಯೋಗೇನೋಪಧಾವತಿ । ಇಮಾಂ ಚ ಪರಮಾಮುಪನಿಷದಮಾವರ್ತಯತಿ ।।೩೪।।**

**ಉತ್ತರೇಷು ಕುರುಷು** ಉತ್ತರ ಕುರು ವರ್ಷದಲ್ಲಿ **ಯಜ್ಞಪುರುಷಃ** ಯಜ್ಞಕ್ಕೆ ಬೇಕಾದ ಪದಾರ್ಥಗಳನ್ನು ಸೃಷ್ಟಿಸುವ ದೇಹವುಳ್ಳ **ಭಗವಾನ್** ಶ್ರೀಹರಿಯು

 

**ಕೃತವರಾಹರೂಪಃ** ವರಾಹರೂಪ ಧರಿಸಿದವನಾಗಿ **ಆಸ್ತೇ** ಇರುವನು. **ಇಹ** ಇಲ್ಲಿ **ಏಷಾ ದೇವೀ ಭೂಃ** ಈ ಭೂದೇವಿಯು **ಸಹಕುರುಭಿಃ** ಕುರು ಖಂಡದ ಜನರೊಂದಿಗೆ **ತಂ** ಆ ಆದಿವರಾಹರೂಪಿ ಶ್ರೀಹರಿಯನ್ನು **ಅಸ್ಖಲಿತಭಕ್ತಿಯೋಗೇನ** ನಿರಂತರ ಭಕ್ತಿಯಿಂದ **ಉಪಧಾವತಿ** ಉಪಾಸಿಸುವಳು **ಇಮಾಂ** ಮುಂದೆ ಹೇಳುವ **ಪರಮಾಂ** ಉತ್ತಮವಾದ **ಉಪನಿಷದಂ** ರಹಸ್ಯ ಮಂತ್ರವನ್ನು **ಆವರ್ತಯತಿ** ಭಜಿಸುವಳು. (ಗುರುಶಿಷ್ಯರಿಬ್ಬರಿಗೆ ತಿಳಿದು ಬರುವ, ಆರು ಕಿವಿಗಳಿಗೆ ತಿಳಿಯಬಾರದ ಎಂದೂ ಅರ್ಥ ಉಪನಿಷದ್ ಶಬ್ದಕ್ಕೆ).

**ಓಂ ನಮೋ ಭಗವತೇ ಮಂತ್ರತತ್ತ್ವಲಿಂಗಾಯ ಯಜ್ಞಕ್ರತವೇ ಮಹೀಧರಾಯ ಮಹಾಪುರುಷಾಯ ನಮಃ ಕರ್ಮಶುಕ್ಲಾಯ ತ್ರಿಯುಗಾಯ ನಮಸ್ತೇ ।।೩೫।।**

**ಮಂತ್ರತತ್ತ್ವಲಿಂಗಾಯ** ಮಂತ್ರತಾತ್ಪರ್ಯವನ್ನು (ತಿಳಿಸುವ) ನಿರ್ಣಯಿಸುವ ಲಿಂಗವುಳ್ಳ ಮಂತ್ರತಾತ್ಪರ್ಯ ವಿಷಯವಾದ ದೇಹವುಳ್ಳ, ಗಾಯತ್ರ್ಯಾದಿ ಮಂತ್ರಗಳಿಂದ ಯಥಾರ್ಥವಾಗಿ ತಿಳಿಯುವ (ಗಾಯತ್ರೀತ್ವೇನ ತಿಳಿಯುವ) **ಯಜ್ಞಕ್ರತವೇ** ಯಜ್ಞಸಂಕಲ್ಪ ವಿಷಯನಾದ ಯೂಪಗಳಿಲ್ಲದ ಯಜ್ಞಗಳಿಗೆ ಯೂಪಗಳುಳ್ಳ ಕ್ರತುಗಳಿಗೂ ಪ್ರವರ್ತಕನಾದ ಆದ್ದರಿಂದಲೇ (ಆ ಶಬ್ದಗಳಿಂದ ವಾಚ್ಯನಾದ) **ಮಹೀಧರಾಯ** ಭೂಮಿಯನ್ನು ಧರಿಸಿದ **ಮಹಾಪುರುಷಾಯ** ಪುರುಷೋತ್ತಮನಾದ **ಕರ್ಮಶುಕ್ಲಾಯ** ಪರಾಕ್ರಮವೆಂಬ ಕ್ರಿಯೆಯಿಂದ ಶುದ್ಧನಾದ ಶುದ್ಧಕರ್ಮಪ್ರವರ್ತಕನಾದ **ತ್ರಿಯುಗಾಯ** ಕೃತ, ತ್ರೇತಾ, ದ್ವಾಪರ ಎಂಬ ಮೂರು ಯುಗಗಳನ್ನೇ ಅವತಾರಕ್ಕಾಗಿ ಹೊಂದಿದ **ಭಗವತೇ** ಭಗವಂತನಾದ **ತೇ** ನಿನಗೆ **ನಮಃ** ನಮಸ್ಕಾರವು ಎಂದು ಜಪಿಸುವಳು. ।।೩೫।।

ವನಗಳಲ್ಲಿ ಓಡಾಡುವ ಹಂದಿಗೆ **ಮಂತ್ರತತ್ತ್ವಲಿಂಗ** ಮೊದಲಾದ ವಿಶೇಷಣಗಳು ಹೇಗೆ ಕೂಡುವುವು? ಎಂದರೆ ಜ್ಞಾನಿಗಳಿಂದ ಆರಿಸಲ್ಪಡುವನಾದ್ದರಿಂದ ಪುರುಷೋತ್ತಮನೆಂದು ತಿಳಿದು ಬರುವನು ಅವನ ಅವತಾರವಾದ್ದರಿಂದ ಕೂಡುವುದು ಎಂದು ಹೇಳುತ್ತಾರೆ

**ಯಸ್ಯ ಸ್ವರೂಪಂ ಕವಯೋ ವಿಪಶ್ಚಿತೋ**
**ಗುಣೇಷು ಯೋನಿಷ್ವಿವ ಜಾತವೇದಸಮ್ ।**

**ಮಥ್ನಂತಿ ಮಥ್ನಾ ಮನಸಾದಿದೃಕ್ಷವೋ**
**ಗೂಢಂ ಕ್ರಿಯಾರ್ಥೈರ್ನಮ ಈರಿತಾತ್ಮನೇ ॥೩೬॥**

**ದಿದೃಕ್ಷವಃ** ಶ್ರೀಹರಿಯನ್ನು ಕಾಣಬೇಕೆಂದಿರುವ ಅದಕ್ಕಾಗಿ **ವಿಪಶ್ಚಿತಃ** ವಿಚಾರ ಶೀಲರಾದ **ಕವಯಃ** ಜ್ಞಾನಿಗಳು **ಗೂಢಂ** ಹೃದಯಗುಹೆಯಲ್ಲಿ ಅಡಗಿರುವ **ಯಸ್ಯ** ಯಾವ ನಿನ್ನ **ಗುಣೇಷು** ಪ್ರಾಕೃತ ಗುಣಕಾರ್ಯಗಳಾದ ಶರೀರೇಂದ್ರಿಯಾದಿಗಳಲ್ಲಿ ನಿಯಾಮಕವಾಗಿ ಇರುವ **ಸ್ವರೂಪಂ** ಸ್ವರೂಪವನ್ನು **ಮನಸಾ** ಮನಸ್ಸೆಂಬ **ಮಥ್ನಾ** ಕಡಗೋಲಿನಿಂದ **ಯೋನಿಷು** ಅಗ್ನಿಯು ನಿಗೂಢವಾಗಿರುವ ಕಟ್ಟಿಗೆಯಲ್ಲಿ **ಜಾತವೇದಸಂ** ಇವ ಅಗ್ನಿಯನ್ನು ಕಡೆದು ತೆಗೆಯುವಂತೆ **ಮಥ್ನಂತಿ** ಉಪಕ್ರಮ ಮೊದಲಾದ ತಾತ್ಪರ್ಯಲಿಂಗಗಳಿಂದ ವೇದವನ್ನು ವಿಚಾರ ಮಾಡಿ ತಿಳಿಯುವರು. **ಕ್ರಿಯಾರ್ಥೈಃ** ಯಜ್ಞಾದಿಕರ್ಮಗಳೇ ಪ್ರಯೋಜನವಾಗಿವುಳ್ಳ ಇಂದ್ರಾದಿ ನಾಮಗಳಿಂದ **ಈರಿತಾತ್ಮನೇ** ಮುಖ್ಯವಾಗಿ ಪ್ರತಿಪಾದಿತವಾದ ಸ್ವರೂಪ ಉಳ್ಳ ನಿನಗೆ **ನಮಃ** ನಮಸ್ಕಾರವು.

### ಈರಣ ಅರ್ಥಧರ್ಮವೇ?

ಇಲ್ಲಿ **ಅರ್ಥೈಃ ಈರಿತಾತ್ಮನೇ** ಎಂಬುದು ಸರಿಯಲ್ಲ. **ಈರಣ**(ಪ್ರತಿಪಾದನ) ಎಂಬುದು ಶಬ್ದಧರ್ಮವಾದುದೇ ಹೊರತು ಅರ್ಥದ ಧರ್ಮವಲ್ಲ. ಕಾರಣ ತಾತ್ಪರ್ಯ ಹೇಳುವರು

ತಾತ್ಪರ್ಯ - 'ಕ್ರಿಯಾರ್ಥೈರ್ಯಜ್ಞಾದ್ಯರ್ಥೈಃ ಇಂದ್ರಾದಿನಾಮಭಿರೀರಿತಾತ್ಮನೇ ।

ಕ್ರಿಯಾ ಶಬ್ದವು ಯಜ್ಞಾದಿ ಕರ್ಮವಾಚಕ. ಅರ್ಥ ಶಬ್ದ ಪ್ರಯೋಜನವಾಚಕ. ಅವುಗಳಿಗೆ ಬಹುವ್ರೀಹಿ ಮಾಡಿ ಅನ್ಯಪದಾರ್ಥವಾದ ಇಂದ್ರಾದಿ ನಾಮಗಳಿಂದ ಎಂದರ್ಥ. **ಕ್ರಿಯಾ ಅರ್ಥಃ ಯೇಷಾಂ ತೈಃ** ಎಂದು ಮಾಡಿ ಯಜ್ಞಾದಿ ಕರ್ಮನಿಷ್ಪತ್ತಿಯೇ ಪ್ರಯೋಜನವಾಗಿವುಳ್ಳ ಇಂದ್ರಾದಿನಾಮಗಳಿಂದ ಎಂದರ್ಥ.

ಇದರಿಂದ ಮಂತ್ರಲಿಂಗಾಯ ಎಂದು ಹೇಳಿದ್ದನ್ನು ವಿವರಿಸಿದಂತಾಯಿತು. **ಕವಿ** ಎಂಬುದಕ್ಕೆ ಕಾವ್ಯಕರ್ತವೆಂದರ್ಥವಲ್ಲ ಎಂದು **ವಿಪಶ್ಚಿತಃ** ಎಂಬುದರಿಂದ ತಿಳಿಸಿರುವರು. **ವಿಶೇಷಂ ಪಶ್ಯಂತಿ ವಿಪ್ರಕೃಷ್ಟಂ ಚಿಂತಯಂತೀತಿ ವಿಪಶ್ಚಿತಃ ಕವಯಃ ಭಗವನ್ಮಾಹಾತ್ಮ್ಯಸಂಸ್ತವನಪರಾ** ಜ್ಞಾನಿವರಾಃ ಎಂದಿರುವುದರಿಂದ ವೇದಾಂತವಿಚಾರ-

 

ಪೂರ್ವಕ ವೇದಪ್ರತಿಪಾದ್ಯ ವಸ್ತುವನ್ನು ಬಲ್ಲವರೇ ಕವಿಗಳೆಂದು ಭಾವ. ಶರೀರಾದಿಗಳಲ್ಲಿ ಸನ್ನಿಹಿತನಾಗಿದ್ದರೆ ಏಕೆ ಕಾಣುವುದಿಲ್ಲ ಎಂಬುದಕ್ಕೆ ಉತ್ತರ **ಗೂಢಂ** ಎಂಬುದು. ಇದರಿಂದ **ಏಕೋ ದೇವಃ ಸರ್ವಭೂತೇಷು ಗೂಢಃ, ಇದಂ ಜ್ಯೋತಿರ್ಹೃದಯ ಆಹಿತಂ ಯತ್** ಎಂಬ ಶ್ರುತಿಗಳನ್ನು ಸೂಚಿಸುವರು. ।।೩೬।।

ಶರೀರಾದಿಗಳಲ್ಲಿ ಗೂಢನಾಗಿ ಶ್ರೀಹರಿಯು ಇರುವನು ಎಂಬುದಕ್ಕೆ ಬ್ರಹ್ಮಾದಿಗಳ ಪ್ರತ್ಯಕ್ಷ ಪ್ರಮಾಣವೆಂದು ಹೇಳುವರು. ಅಥವಾ ಬಹುಜನ ಜ್ಞಾನಿಗಳು ಬಿಂಬಾಪರೋಕ್ಷ ಮಾಡಿಕೊಂಡಿರುವುದರಿಂದ ನಿಶ್ಶಂಕವಾಗಿ ಅದನ್ನು ಸಾಧಿಸಲು ಅದನ್ನಪೇಕ್ಷಿಸುವವರು ಪ್ರವರ್ತಿಸಬೇಕು ಎಂದು ಹೇಳುವರು. ಅಥವಾ ವಿಚಾರ ಮಾಡುವವರಲ್ಲಿ ಶ್ರೇಷ್ಠರಾರೆಂದು ಹೇಳುವರು

**ದ್ರವ್ಯಕ್ರಿಯಾಹೇತ್ವಯನೇಶಕರ್ತೃಭಿ-**
**ರ್ಮಾಯಾ ಗುಣೈರ್ವಸ್ತು ನಿರೀಕ್ಷಿತಾತ್ಮನೇ ।**
**ತಥೈವ ತತ್ರಾತಿಶಯಾತ್ಮಬುದ್ಧಿಭಿ-**
**ರ್ನಿರಸ್ತಮಾಯಾಕೃತಯೇ ನಮೋ ನಮಃ ।।೩೭।।**

**ತತ್ರ** ಜ್ಞಾನಿಗಳಲ್ಲಿ ವಿಚಾರಶೀಲರಾದ **ಅತಿಶಯಾತ್ಮಬುದ್ಧಿಭಿಃ** (ತಮ್ಮ ತಮ್ಮ ಯೋಗ್ಯತೆಯಂತೆ ವಿಶೇಷವನ್ನು ಕಾಣುವಲ್ಲಿ ಅತಿಶಯ ಸಮರ್ಥವಾದ ಬುದ್ಧಿಯುಳ್ಳ) ಹೆಚ್ಚು ಪರಮಾತ್ಮ ಬುದ್ಧಿಯುಳ್ಳ **ಮಾಯಾಗುಣೈಃ** ಶ್ರೀಹರಿಯ ಇಚ್ಛೆಯನ್ನು ಅನುಸರಿಸುವ **ದ್ರವ್ಯೇಶ** ದ್ರವ್ಯಕ್ಕೆ ನಿಯಾಮಕರಾದ ರುದ್ರದೇವರು **ಕ್ರಿಯೇಶ** ಕ್ರಿಯೆಗಳಿಗೆ ನಿಯಾಮಕರಾದ ಗರುಡದೇವರು **ಹೇತ್ವೀಶ** ಕಾರಣಗಳಿಗೆ ನಿಯಾಮಕರಾದ ಬ್ರಹ್ಮದೇವರು **ಅಯನೇಶ** ಆಧಾರಕ್ಕೆ ನಿಯಾಮಕರಾದ ವಾಯುದೇವರು ಮೊದಲಾದ **ಕರ್ತೃಭಿಃ** ಜಗತ್ಕರ್ತೃಗಳಿಂದ **ವಸ್ತುನಿರೀಕ್ಷಿತಾತ್ಮನೇ** ಇದ್ದದ್ದು ಇದ್ದಂತೆ ಸಾಕ್ಷಾತ್ಕರಿಸಿಕೊಂಡ ಸ್ವರೂಪವುಳ್ಳ (ದೇಹವುಳ್ಳ ) **ತಥೈವ** ಅವರು ತಿಳಿಯಲು ಅನುಕೂಲವಾಗುವಂತೆ **ನಿರಸ್ತ ಮಾಯಾಕೃತಯೇ** ದೂರೀಕರಿಸಿದ ಮಾಯಾನಿರ್ಮಿತ ಆಕೃತಿಯುಳ್ಳ ನಿನಗೆ **ನಮೋ ನಮಃ** ನಮಸ್ಕಾರವು.

ಇಲ್ಲಿ **ಮಾಯಾಗುಣೈಃ** ಎಂಬುದಕ್ಕೆ ಪ್ರಕೃತೋಪಯುಕ್ತ ಅರ್ಥ ಹೇಳುವರು **ಮಾಯಾಗುಣೈಃ ತದಿಚ್ಛಾನುಸಾರಿಭಿಃ, ದ್ರವ್ಯಕ್ರಿಯಾಹೇತ್ವಯನೇಶ** ಎಂಬುದರ ಅರ್ಥವನ್ನು ಪ್ರಮಾಣದಿಂದ ತಿಳಿಸುವರು

ತಾತ್ಪರ್ಯ - 'ದ್ರವ್ಯೇಶಃ ಶಂಕರಃ ಪ್ರೋಕ್ತಃ ಕ್ರಿಯೇಶೋ ಗರುಡಃ ಸ್ಮೃತಃ ।
ಕಾರಣೇಶಸ್ತಥಾ ಬ್ರಹ್ಮಾ ವಾಯುರಾಧಾರಕಃ ಸ್ಮೃತ' ಇತಿ ಬ್ರಹ್ಮ ತರ್ಕೇ ॥

ದೃಷ್ಟಾಂತ ಈಶ ಶಬ್ದಕ್ಕೆ ಪ್ರತ್ಯೇಕ ಅನ್ವಯ. ಹೇತು ಶಬ್ದ ಕಾರಣ ಪರ. **ಆಧಾರಕ** ಪದದಿಂದ **ಅಯನೇಶ** ಶಬ್ದಾರ್ಥ ಹೇಳಿದಂತಾಯಿತು. **ನಿರಸ್ತಮಾಯಾಕೃತಿಃ** ಎಂದು ಹೇಳಿದ್ದರಿಂದ ಅದ್ವೈತಿಗಳು ಹೇಳುವ ಮಾಯಾರೂಪವು ಶ್ರೀಹರಿಯ ರೂಪವಲ್ಲವೆಂದು ತಿಳಿಸಿರುವರು. ।।೩೭।।

ನಿನ್ನ ಅನುಗ್ರಹವಿಲ್ಲದಿದ್ದರೆ ರಮಾದಿಗಳಿಗೂ ನಿನ್ನನ್ನು ತಿಳಿಯಲಾಗುವುದಿಲ್ಲ ಬ್ರಹ್ಮಾದಿಗಳಷ್ಟೇ ಅಲ್ಲ ಲಕ್ಷ್ಮೀದೇವಿಯೂ ನಿನ್ನನ್ನಾಶ್ರಯಿಸಿಯೇ ವ್ಯಾಪಾರ ಮಾಡುವಳು ಎಂದು ದೃಷ್ಟಾಂತಪೂರ್ವಕ ತಿಳಿಸುವರು

**ಕರೋತಿ ವಿಶ್ವಸ್ಥಿಸಂಯಮೋದಯಂ**
**ಯಸ್ಯೇ(ಯಥೇ)ಪ್ಸಿತಂ ನೇಕ್ಷಿತುಮೀಶತೇ ಗುಣೈಃ ।**
**ಮಾಯಾ ಯಥಾಯೋ ಭ್ರಮತೇ ಯದಾಶ್ರಯಾ**
**ಗ್ರಾವ್ಣೋ(ವ್ಣೇ) ನಮಸ್ತೇ ಗುಣಕರ್ಮಸಾಕ್ಷಿಣೇ ।।೩೮।।**

**ಯಃ** ಯಾವನು **ವಿಶ್ವಸ್ಥಿತಿಸಂಯಮೋದಯಂ** ಜಗತ್ತಿನ ರಕ್ಷಣೆ, ಲಯ ಮತ್ತು ಸೃಷ್ಟಿಗಳನ್ನು **ಕರೋತಿ** ಮಾಡುವನೋ **ಯಸ್ಯ** ಯಾವನ **ಈಪ್ಸಿತಂ** ಇಷ್ಟವನ್ನು **ಗುಣೈಃ** ಪ್ರಾಕೃತಗುಣಸಂಬಂಧದಿಂದ ಮುಗ್ಧರಾದ ಬ್ರಹ್ಮಾದಿಗಳು **ಈಕ್ಷಿತುಂ** ತಿಳಿಯಲು **ನ ಈಶತೇ** ಸ್ವತಂತ್ರರಲ್ಲವೋ **ಯದಾಶ್ರಯಾ** ಯಾವ ನಿನ್ನನ್ನಾಶ್ರಯಿಸಿದ **ಮಾಯಾ** ಲಕ್ಷ್ಮೀದೇವಿಯು ಜಡಪ್ರಕೃತಿಯು **ಯಥಾ ಅಯಃ** ಹೇಗೆ ಕಬ್ಬಿಣವು **ಗ್ರಾವ್ಣಃ** ಅಯಸ್ಕಾಂತದಿಂದ **ಭ್ರಮತೇ** ಚಲಿಸುವುದೋ **ತಥಾ** ಹಾಗೆ **ಭ್ರಮತೇ** ಅನಂತನಾದ್ದರಿಂದ ನಿನ್ನ ಸ್ವರೂಪವನ್ನು ಇಷ್ಟೇ ಎಂದು ತಿಳಿಯಲಾರಳೋ, ಪರಿಣಾಮವನ್ನು ಹೊಂದಿ ಕಾರ್ಯದಲ್ಲಿ ಪ್ರವೃತ್ತವಾಗುವುದೋ **ತಸ್ಮೈ** ಅಂತಹ **ಗ್ರಾವ್ಣೇ** ಅಯಸ್ಕಾಂತದಲ್ಲಿ ಕಬ್ಬಿಣವನ್ನು ತಿರುಗಿಸುವ ಶಕ್ತಿಯನ್ನು ಕೊಡುವುದರಿಂದ ಸ್ಥಿರನಾದ್ದರಿಂದ **ಗ್ರಾವ** ಶಬ್ದ ವಾಚ್ಯನಾದ **ಗುಣಕರ್ಮಸಾಕ್ಷಿಣೇ** ೧) ನಿನ್ನ ಗುಣಕರ್ಮಗಳನ್ನು ಸಂಪೂರ್ಣವಾಗಿ ತಿಳಿದಿರುವ ೨) ಚೇತನಾಚೇತನಗಳ ಗುಣಕರ್ಮಗಳ ಕರ್ತನಾಗಿ ಸಾಕ್ಷಿಯಾಗಿರುವ **ತೇ** ನಿನಗೆ **ನಮಃ** ನಮಸ್ಕಾರವು. (ವಿಜಯಧ್ವಜ)




**ಯಥೇಪ್ಸಿತಂ, ಗ್ರಾವ್ಣಃ** ಎಂಬ ಪಾಠವನ್ನನುಸರಿಸಿ ಯಾದುಪತ್ಯಕಾರರು **ಯದಾಶ್ರಯಾ ಮಾಯಾ** ಯಾವ ನಿನ್ನನ್ನಾಶ್ರಯಿಸಿದ ಲಕ್ಷ್ಮೀದೇವಿಯು **ವಿಶ್ವಸ್ಥಿತಿಸಂಯಮೋದಯಂ ಕರೋತಿ** ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವಳೋ ಆದರೂ **ಗುಣೈಃ** ಜ್ಞಾನಾನಂದಾದಿಗುಣಗಳಿಂದ **ಯಥೇಪ್ಸಿತಂ ತಥಾ** ತನ್ನ ಇಚ್ಛೆಯಂತೆ ಶ್ರೀಹರಿಯನ್ನು **ಈಕ್ಷಿತುಂ ನ ಈಶತೇ** ನೋಡಲು ಸಮರ್ಥಳಲ್ಲವೋ ಅಂದರೆ ಅವಳಿಗೂ ತಿಳಿಯಬೇಕಾದುದು ಉಳಿದಿದೆ ಎಂದರ್ಥ. **ಯಥಾ ಅಯಃ ಗ್ರಾವ್ಣಃ ಭ್ರಮತೇ** ಕಬ್ಬಿಣವು ಅಯಸ್ಕಾಂತದಿಂದ ಚೇಷ್ಟಿಸುವಂತೆ **ಯದಾಶ್ರಯಾ ಭ್ರಮತೇ** ನಿನ್ನ ಆಶ್ರಯದಿಂದ ಚೇಷ್ಟೆ ಮಾಡುವಳೋ ಅಂತಹ **ಗುಣಕರ್ಮಸಾಕ್ಷಿಣೇ** ನಿನ್ನ ಗುಣಕರ್ಮಗಳಿಗೆ ಸಾಕ್ಷಿಯಾದ **ತೇ ನಮಃ** ನಿನಗೆ ನಮಸ್ಕಾರ ಎಂದು ಅನ್ವಯಾರ್ಥ ಮಾಡಿರುವರು. ಇದರಿಂದ ಬ್ರಹ್ಮಾದಿಗಳಿಗೆ ಶ್ರೀಹರಿಯನ್ನು ತಿಳಿಯಲಾಗದಿದ್ದರೂ ಜಗತ್ಸವಿತ್ರಿಯಾದ ಅವನನ್ನೇ ಅನುಸರಿಸುವ ಲಕ್ಷ್ಮಿಗೆ ತಿಳಿಯಲಾಗುವುದು ಎಂಬ ಶಂಕೆಗೆ ಉತ್ತರಿಸಿದಂತಾಯಿತು. **ಯಥಾ ಅಯಃ** ಎಂಬ ದೃಷ್ಟಾಂತದಿಂದ ಅನುಸರಿಸುವುದೂ ಸ್ವತಂತ್ರವಾಗಿ ಅಲ್ಲ ಶ್ರೀಹರಿಯ ಅಧೀನವೇ ಎಂದು ತಿಳಿಸಿರುವರು. ನಿನ್ನ ಸನ್ನಿಧಾನದಿಂದಲೇ ಅನುಸರಿಸುವಳು ಇಲ್ಲವಾದರೆ ಜಡವಿದ್ದಂತೆ ಎಂದೂ ಸೂಚಿಸಿರುವರು. ನಿನ್ನಿಂದ ಸನ್ನಿಹಿತಳಾದ ಲಕ್ಷ್ಮಿಯ ಸನ್ನಿಧಾನದಿಂದಲೇ ಜಡಪ್ರಕೃತಿಯು ಕಾರ್ಯದಲ್ಲಿ ಪ್ರವರ್ತಿಸುವುದು ಎಂಬುದಕ್ಕೂ ಇದೇ ಉದಾಹರಣೆ. ಯದಾಶ್ರಯಾ ಎಂಬುದರಿಂದ ಅಯಸ್ಕಾಂತದ ಚೇಷ್ಟಕತ್ವ ಶಕ್ತಿಯು ಶ್ರೀಹರಿನಿಯತವೆಂದು ತಿಳಿಸಿರುವರು. ಲಕ್ಷ್ಮಿಯಂತೆ ತನಗೂ ತನ್ನ ಪೂರ್ಣಜ್ಞಾನವಿಲ್ಲವೇ? ಎಂಬ ಪ್ರಶ್ನೆಗೆ ಉತ್ತರ **ಗುಣಕರ್ಮಸಾಕ್ಷಿಣೇ** ಎಂಬುದು. ಇದರಿಂದ ರಮೆಗಿಂತ ಶ್ರೀಹರಿ ಉತ್ತಮ ಎಂದಂತಾಯಿತು.

ವರಾಹಾವತಾರ ಕಾರ್ಯವನ್ನು ವಿಜ್ಞಾಪಿಸುತ್ತ ನಮಸ್ಕರಿಸುವರು

**ಪ್ರಮಥ್ಯದೈತ್ಯಂ ಪ್ರತಿವಾರಣಂ ಮೃಧೇ**
**ಯೋ ಮಾಂ ರಸಾಯಾ ಜಗದಾದಿಸೂಕರಃ ।**
**ಕೃತ್ವಾಗ್ರದಂಷ್ಟ್ರೇ ನಿರಗಾದುದನ್ವತಃ**
**ಕ್ರೀಡನ್ನಿವೇಭಃ ಪ್ರಣತಾಸ್ಮಿ ತಂ ವಿಭುಮ್ ॥೩೯॥**

**ಜಗದಾದಿಸೂಕರಃ** ಜಗತ್ತಿಗೆ ಕಾರಣನಾದ ಹಂದಿಯಂತೆ ಆಕಾರವಿರುವ (ಜಗತ್ತಿಗೆ ಕಾರಣನು **ಸು** ಸರಿಯಾಗಿ **ಕರಃ** ಕಾರ್ಯ ಮಾಡುವವನೂ ಆದ ) **ಯಃ** ಯಾವನು **ಕ್ರೀಡನ್ ಇಭ ಇವ** ಆಟವಾಡುತ್ತಿರುವ ಆನೆಯಂತೆ **ಮೃಧೇ** ಯುದ್ಧದಲ್ಲಿ **ಪ್ರತಿವಾರಣಂ** ಎದುರಾನೆಯಂತಿರುವ **ದೈತ್ಯಂ** ಹಿರಣ್ಯಾಕ್ಷನನ್ನು **ಪ್ರಮಥ್ಯ** ಕೋರೆಹಲ್ಲುಗಳಿಂದ ಸಂಹರಿಸಿ **ಅಗ್ರದಂಷ್ಟ್ರೇ** ಹಲ್ಲಿನ ಕೊನೆಯಲ್ಲಿ **ಮಾಂ ಕೃತ್ವಾ** ಭೂಮಿಯಾದ ನನ್ನನ್ನು ಇರಸಿಕೊಂಡು **ರಸಾಯಾಃ** ರಸಾತಲದಿಂದ ಆರಂಭಿಸಿ **ಉದನ್ವತಃ** ಸಮುದ್ರದಿಂದ **ನಿರಗಾತ್** ಹೊರಬಂದನೋ **ತಂ ವಿಭುಂ** ಅಂತಹ ಸ್ವಾಮಿಯಾದ ನಿನ್ನನ್ನು **ಪ್ರಣತಾಸ್ಮಿ** ಭಕ್ತಿಯಿಂದ ನಮಸ್ಕರಿಸಿದವಳಾಗಿರುವೆನು.

## ಸೂಕರಶಬ್ದದ ನಿರ್ವಚನ

**ಶುಂ** ಎಂದು ಕೂಗುವುದರಿಂದ ಸೂಕರವೆಂದು ಹಂದಿಗೆ ಹೆಸರು. ಶಕಾರ ಸಕಾರವಾಗಿರುವುದಕ್ಕೆ **ಬವೌ ಶಸಾವಿತಿ ತ್ರಚ್ಯಾಃ** ಎಂಬ ವ್ಯಾಕರಣ ಸೂತ್ರ ಪ್ರಮಾಣ. ॥೩೯॥

**॥ ಇಲ್ಲಿಗೆ ೧೮ನೇ ಅಧ್ಯಾಯವು ಮುಗಿಯಿತು ॥**

★★★




## ಹದಿನೆಂಟನೇ ಅಧ್ಯಾಯದ ಸಾರ

ಇಲಾವೃತದಲ್ಲಿ ರುದ್ರದೇವರಂತೆಯೇ ಭದ್ರಾಶ್ವ ಖಂಡದಲ್ಲಿಯೂ ಯಮಧರ್ಮನ ಮಕ್ಕಳಾದ ಭದ್ರಾಶ್ರವರೆಂಬುವರು ಅವರ ವಂಶನಾಯಕರೂ ಹಯಶಿರಸ್ಸೆಂಬ ಶ್ರೀಹರಿಯ ಮೂರ್ತಿಯನ್ನು ಅತಿಶಯವಾದ ಚಿತ್ತೈಕಾಗ್ರತೆಯಿಂದ ಮನಸ್ಸಿನಲ್ಲಿ ಸನ್ನಿಹಿತವಾಗುವಂತೆ ಮಾಡಿಕೊಂಡು ಇರುವರು. ಆ ಶ್ರೀಹರಿಯ ಮೂರ್ತಿಯು ಲಕ್ಷ್ಮೀ ಮೊದಲಾದ ದೇವತೆಗಳಿಗೆ ಅತಿ ಪ್ರಿಯವಾದುದು. ಜ್ಞಾನೋಪದೇಶ ಮಾಡಿ ಜಗತ್ತನ್ನು ಧರಿಸಿರುವುದರಿಂದ ಪ್ರಧಾನವಾಗಿರವುದು, ಧರ್ಮ ಪ್ರವರ್ತಕವಾಗಿರುವುದು. ಆ ರೂಪವನ್ನು ಭದ್ರಶ್ರವ ಮುಂತಾದವರು ಮುಂದೆ ಹೇಳುವಂತೆ ಸ್ತೋತ್ರ ಮಾಡುತ್ತಾ ಉಪಾಸಿಸುತ್ತಿರುವರು. ಗುಣಪರಿಪೂರ್ಣನೂ, ಸಮಸ್ತೈಶ್ವರ್ಯಸಂಪನ್ನನೂ, ಜ್ಞಾನೋಪದೇಶದಿಂದ ಜೀವರನ್ನು ಶುದ್ಧಗೊಳಿಸುವವನೂ, ಜಗಜನ್ಮಾದಿಕರ್ತೃತ್ವ ಸ್ವರೂಪನೂ, ಜಗದ್ಧಾರಕನೂ ಆದ ಶ್ರೀಹರಿಗೆ ನಮಸ್ಕಾರ. ಜೀವರು ಮೋಕ್ಷಕ್ಕೆ ಪ್ರತಿಬಂಧಕಗಳಾದ ಅಮಂಗಲವಾಗಿರುವ ಶಬ್ದಾದಿ ವಿಷಯಗಳನ್ನೇ ಚಿಂತಿಸುತ್ತಾ ಸೇವಿಸುವರು. ಅದು ಪಾಪಕರ್ಮವಾಗುವುದು ಕಾರಣ ಜ್ಞಾನಭ್ರಷ್ಟರಾಗಿ ಕಣ್ಣು ಕಾಣದವರಂತೆ ಮೃತ್ಯು ತಮ್ಮನ್ನು ಸಂಹರಿಸುತ್ತದೆ ಎಂದು ಊಹೆಯಿಂದ ತಿಳಿದಿದ್ದರೂ ತಿಳಿಯದಂತೆ ಇರುವರು. ಹೀಗೆ ಪ್ರೇರಿಸುವ ಭಗವಂತನ ವಿಶಿಷ್ಟ ಚೇಷ್ಟೆಯು ಅದೆಷ್ಟು ವಿಚಿತ್ರ! ಮಗನು ತಂದೆಯ ಶವಸಂಸ್ಕಾರಾದಿಗಳನ್ನು ಮಾಡಿ ಬಂದು ತನ್ನ ಜೀವನೇಚ್ಛೆಯಿಂದ ಪಾಪಕಾರ್ಯಗಳಲ್ಲಿ ತೊಡಗುವನಲ್ಲವೇ? ಪಾಮರ ಜನರೇ ಅಲ್ಲ ಶಾಸ್ತ್ರಜ್ಞಾನಿಗಳೂ ಜಗತ್ತು ನಶ್ವರವೆಂದು ತಿಳಿದಿದ್ದರೂ, ಉಪದೇಶಿಸುತ್ತಿದ್ದರೂ, ಶ್ರೀಹರಿಯನ್ನು ಕಂಡ ಅಪರೋಕ್ಷಜ್ಞಾನಿಗಳು ಪ್ರವಾಹ ರೂಪವಾಗಿ ಜಗತ್ತು ಅನಾದಿಯೆಂದು ಕಾಣುತ್ತಿದ್ದರೂ ಶ್ರೀಹರಿಯ ಜ್ಞಾನವುಳ್ಳ ಇವರೂ ನಿನ್ನ ಇಚ್ಛೆಯಿಂದ ನಿನ್ನನ್ನು ಸಂಪೂರ್ಣ ತಿಲಿಯದೇ ಮುಗ್ಧರಾಗುತ್ತಿರುವರು. ನಿನ್ನ ಅನುಗ್ರಹವಿಲ್ಲದಿರುವುದೇ ಇದಕ್ಕೆ ಕಾರಣ. ಈ

ಮೋಹನಿವೃತ್ತಿಗಾಗಿ ನಿನ್ನನ್ನು ನಮಸ್ಕರಿಸುವೆವು. ನಿನ್ನ ಕೃತ್ಯಗಳ ಪ್ರಯೋಜನವನ್ನು ನೀನೇ ಬಲ್ಲೆ. ಇಂತಹ ಮಹಾಮಹಿಮನಾದರೂ ನಿನಗೆ ಸ್ವಲ್ಪವೂ ಗರ್ವವಿಲ್ಲ. ದೇವ! ಪ್ರಯಾಸವಿಲ್ಲದೆ ಕರ್ಮ ಮಾಡುವ ನೀನು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಅಂಗೀಕರಿಸಿರುವನು. ವೇದಗಳಲ್ಲಿ ಈ ವಿಷಯವು ಸ್ಪಷ್ಟವಾಗಿ ಉಕ್ತವಾಗಿದೆ. ಅಷ್ಟೇ ಅಲ್ಲ ಯುಕ್ತಿಯುಕ್ತವೂ ಆಗಿದೆ. ನೀನೇ ಆಶ್ಚರ್ಯರೂಪ, ಕಾರ್ಯಕ್ಕೂ ಕಾರಣ. ಸರ್ವಕ್ಕೂ ಸ್ವಾಮಿ. ನಿಮಿತ್ತಕಾರಣನಾದ್ದರಿಂದ ಜಗತ್ತಿನಿಂದ ಭಿನ್ನ. ಹೀಗೆಂದೇ ಪ್ರಮಾಣ ಪ್ರಸಿದ್ಧ ಮತ್ತು ಸ್ವತಂತ್ರ. ಇಂತಹ ನಿನ್ನಲ್ಲಿ ಜಗತ್ಕರ್ತೃತ್ವ-ವಿರುವುದೇನಾಶ್ಚರ್ಯ? ಅಂದ ಮೇಲೆ ನೀನು ಲೋಕ ವಿಲಕ್ಷಣನೇ ಎಂಬುದೂ ಯುಕ್ತವೇ. ಪ್ರಳಯವು ಮುಗಿದು ಸೃಷ್ಟಿ ಪ್ರಾರಂಭವಾದಾಗ ಮಧುವೆಂಬ ದೈತ್ಯನು ವೇದಗಳನ್ನು ಅಪಹರಿಸಿದನು. ಆಗ ನೀನು ಬ್ರಹ್ಮದೇವರಿಂದ ಪ್ರಾರ್ಥಿತನಾಗಿ ಕುದುರೆ ಆಕಾರವನ್ನು ಧರಿಸಿ ಆ ದೈತ್ಯನನ್ನು ಸಂಹರಿಸಿ ಪಾತಾಳದಿಂದ ತಂದು ಮತ್ತೆ ಬ್ರಹ್ಮದೇವರಿಗೆ ವೇದಗಳನ್ನು ಉಪದೇಶಿಸಿದೆ. ನಿನಗೆ ನಮಸ್ಕಾರ. ನೀನು ಸತ್ಯಸಂಕಲ್ಪನು, ಸತ್ಯಕರ್ಮನು ಎಂದು ಸ್ತೋತ್ರ ಮಾಡಿ ಉಪಾಸಿಸುವರು.

ಹರಿವರ್ಷದಲ್ಲಿ ಶ್ರೀಹರಿಯು ನರಹರಿ ರೂಪದಿಂದ ಇರುವನು. ಅವನು ಈ ರೂಪವನ್ನು ಸ್ವೀಕರಿಸುವುದಕ್ಕೆ ಕಾರಣವನ್ನು ಮುಂದೆ ಏಳನೇ ಸ್ಕಂಧದಲ್ಲಿ ತಿಳಿಸಲಾಗುವುದು. ಭಕ್ತರಿಗೆ ಪ್ರಿಯವಾದ ಆ ನರಹರಿ ರೂಪವನ್ನು ಪ್ರಹ್ಲಾದರಾಜರು ಅಖಂಡಜನರೊಂದಿಗೆ ಯಾವ ಫಲೇಚ್ಛೆಯೂ ಇಲ್ಲದ ಅನನ್ಯ ಭಕ್ತಿಯಿಂದ ಉಪಾಸಿಸುತ್ತಿರುವರು. ಆ ಪ್ರಹ್ಲಾದರಲ್ಲಿ ಉತ್ತಮ ಪುರುಷರ ಗುಣಗಳಾದ ಶೌರ್ಯ, ವೀರ್ಯ ಮೊದಲಾದವೂ ಬ್ರಹ್ಮಾದಿ ಶ್ರೇಷ್ಠ ಜೀವರ ಗುಣಗಳಾದ ಹರಿಭಕ್ತಿ, ಜ್ಞಾನ ಮೊದಲಾದವೂ ಯಥಾಯೋಗ್ಯವಾಗಿ ಇದ್ದು ಅವರು ಮಹಾಭಗವದ್ಭಕ್ತರೆನಿಸುವರು. ಅವರ ಸ್ವಭಾವ ಮತ್ತು ಬಾಲ್ಯದ ಆಚರಣೆಗಳು ದೈತ್ಯದಾನವಕುಲವನ್ನು ಪವಿತ್ರಗೊಳಿಸುವವು. ಅವರು ಈ ಸ್ತೋತ್ರವನ್ನು ಹೇಳುವರು. ನೃಸಿಂಹನೇ! ನಿನಗೆ ನಮಸ್ಕಾರ. ನೀನು ಸೂರ್ಯ ಮೊದಲಾದ ತೇಜಃ ಪದಾರ್ಥಗಳಿಗಿಂತ ಅಧಿಕ ತೇಜೋರೂಪನು. ನಿನ್ನ ನಖಗಳು ವಜ್ರದಂತೆ ಅಭೇದ್ಯಗಳು. ನಿನ್ನ ಕೋರೆಹಲ್ಲುಗಳು ವಜ್ರದಂತೆ ಕಠಿಣವಾಗಿರುವವು. ನೀನು ಯಾವಾಗಲೂ ನಮಗೆ ಪ್ರಕಟನಾಗು. ನಮ್ಮ ಕರ್ಮಗಳನ್ನು ಅಂತಃಕರಣವನ್ನೂ ಸುಟ್ಟುಬಿಡು. ನಮ್ಮ ಅಜ್ಞಾನವನ್ನೂ ಹೋಗಲಾಡಿಸು. ಅದಕ್ಕೆ ಕಾರಣರಾದ ದೈತ್ಯರನ್ನು ಸಂಹರಿಸು. ನಿನ್ನನ್ನೂ ಉದ್ದೇಶಿಸಿ




ಹೋಮಿಸುವೆವು. ನಿನ್ನನ್ನು ಉಪಾಸಿಸುವ ದೇವನಿಗೆ ಸಂಸಾರ ಭಯವಿಲ್ಲದಂತೆ ಮಾಡು. ಮೋಕ್ಷವಾಗುವಂತೆ ಅನುಗ್ರಹಿಸು. ನೀನು ಗುಣಪೂರ್ಣನು. ಆದ್ದರಿಂದ ಓಂಕಾರ ಪ್ರತಿಪಾದ್ಯನು. ಜಗತ್ತಿಗೆ ಮಂಗಳವಾಗಲಿ. ನೀನು ಪ್ರಸನ್ನನಾಗು. ದುರ್ಜನರಿಗೆ ಹಿಂಸಕನೂ ಸಜ್ಜನರಿಗೆ ಜ್ಞಾನದನೂ ಆದ ನೀನೇ ಸಂಹಾರಕನು. ಹರಿವರ್ಷ ನಿವಾಸಿಗಳೇ! ಜನರು ಮಂಗಳಗಳಿಗಾಗಿ ಶ್ರೀಹರಿಯನ್ನು ಧ್ಯಾನ ಮಾಡಲಿ. ಶಾಸ್ತ್ರಾರ್ಥ ಮನನ ಮತ್ತು ಉಪಾಸನೆಗಳಿಂದ ಮನಸ್ಸು ನಿತ್ಯಶುದ್ಧನೂ, ಸಕಲ ಮಂಗಳ ಸ್ವರೂಪಿಯೂ ಆದ ಶ್ರೀಹರಿಯನ್ನು ಸೇವಿಸಲಿ. ನಮ್ಮ ಬುದ್ಧಿಯೂ ನಿಷ್ಕಾಮನೆಯಿಂದ ಅವನನ್ನು ಸೇರಲಿ. ಮನೆ, ಹೆಂಡತಿ, ಮಕ್ಕಳು, ದೇಹ ಮತ್ತು ಬಂಧುಗಳಲ್ಲಿ ನಮಗೆ ಆಸಕ್ತಿಯು ಬೇಡ. ಆಸಕ್ತಿಯು ಆವಶ್ಯಕವಾಗಿದ್ದಲ್ಲಿ ಶೀಹರಿಯ ಸೇವೆಗೆ ಸಾಧನಗಳಾದ ಇವುಗಳಲ್ಲಿ ಆಗಲಿ. ಭಗವತ್ಪ್ರಿಯವಸ್ತುಗಳಲ್ಲಿ ಸಂಗವಾದಾಗಲೇ ಇತರ ವಸ್ತುಗಳಲ್ಲಿ ಸಂಗವು ಇಲ್ಲವಾಗುವುದು. ಪ್ರಾಣಧಾರಣೆಗೆ ಆವಶ್ಯಕವಾದ್ದರಿಂದಲೇ ಸಂತುಷ್ಟನಾದ ಚೇತನನು ಮನಸ್ಸನ್ನು ವಶಪಡಿಸಿಕೊಂಡವ-ನಾಗುವನು. ಅವನಿಗೆ ವಿಲಂಬವಾಗದೆ ಅಪರೋಕ್ಷವಾಗುವುದು. ಸಂಸಾರದಿಂದ ಮುಕ್ತಿಯಾಗುವುದು. ಆದರೆ ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿಯೇ ಆಸಕ್ತನಿಗೆ ಅಪರೋಕ್ಷವು ಆಗುವುದಿಲ್ಲ. ಮುಕ್ತಿಯೂ ಇಲ್ಲ. ಭಗವಂತನಿಗೆ ಪ್ರಿಯರಾದ ಮಹನೀಯರ ಸಹವಾಸದಿಂದ ಶ್ರೀಹರಿಯ ಸ್ವಾಭಾವಿಕ ಮಹಾತ್ಮ್ಯೆ ಮತ್ತು ವ್ಯಾಪ್ತಿಗಳನ್ನು ತಿಳಿಸುವ ವೇದಾಂತಶಾಸ್ತ್ರವು ದೊರೆಯುವುದು. ಅದನ್ನು ಯಾವಾಗಲೂ ಶ್ರವಣ ಮನನ ಮಾಡುವ ಅಧಿಕಾರಿ ಚೇತನರ ಮನಸ್ಸಿನ ಪಾಪವನ್ನು ಶ್ರವಣದಮೂಲಕ ಮನಸ್ಸಿನಲ್ಲಿ ಪ್ರಕಟನಾದ ಶ್ರೀಹರಿಯು ಹೋಗಲಾಡಿಸುವನು. ಹೀಗೆ ಪಾಪನಾಶಕನಾದ ಶ್ರೀಹರಿಯ ಮಹಿಮೆಯನ್ನು ಯಾವ ಜೀವನೂ ಹಿರಿಯರಿಂದ ಶ್ರವಣ ಮಾಡದೇ ಇರುವುದಿಲ್ಲ. ಗಂಗಾನದಿಯು ಯಾವ ಶ್ರೀಹರಿಯ ಪಾದಸಂಬಂಧದಿಂದ ಸಮಸ್ತರ ಪಾಪಗಳನ್ನು ಹೋಗಲಾಡಿಸುವುದೋ ಅಂತಹ ಶ್ರೀಹರಿಯ ತ್ರಿವಿಕ್ರಮ ರೂಪದ ಪರಾಕ್ರಮವನ್ನು ಯಾರು ತಾನೇ ಶ್ರವಣ ಮಾಡದಿರುವರು. ಎಲ್ಲ ಗುಣಗಳೊಂದಿಗೆ ಯಾವ ಕಾಮನೆಯೂ ಇಲ್ಲದ ಭಕ್ತಿಯನ್ನು ಶ್ರೀಹರಿಯಲ್ಲಿ ಮಾಡಬೇಕು. ಹಾಗೆ ಭಕ್ತಿ ಮಾಡುವ ಅಧಿಕಾರಿಯ ವಿಷಯದಲ್ಲಿ ಎಲ್ಲ ದೇವತೆಗಳೂ ಪ್ರಸನ್ನರಾಗುವರು. ಬಾಹ್ಯಗಳಾದ್ದರಿಂದ ಅಮಂಗಲಕರಗಳಾದ ಶಬ್ದ ಮುಂತಾದ ವಿಷಯಗಳಲ್ಲಿ ಇಚ್ಛೆಯಿಟ್ಟು ಧಾವಿಸುವ ಅಭಕ್ತನಿಗೆ ಮಹನೀಯರ ಗುಣಗಳು ಹೇಗೆ ಬರುವವು? ಮಹಾಗುಣವಂತರಾದ ದೇವತೆಗಳು ಹೇಗೆ ತಾನೇ

ಪ್ರಸನ್ನರಾದಾರು? ಶ್ರೀಹರಿಯು ಜೀವರಿಗೆ ಜೀವನ ಪ್ರದನು. ಪೋಷಕನು. ಮೀನುಗಳಿಗೆ ನೀರಿನಂತೆ ಭಕ್ತರಿಗೆ ಇಷ್ಟನಾದವನು. ಅನಾದಿಯೂ ಪರಮೋಪಕಾರಿಯೂ ಆದ ಶ್ರೀಹರಿಯನ್ನು ಬಿಟ್ಟು ಮನೆ ಮುಂತಾದವುಗಳಲ್ಲಿ ಆಸಕ್ತರಾದದ್ದೇ ಆದರೆ ಸ್ತ್ರೀಪುರುಷರು ವಯಸ್ಸಿನಿಂದ ಹಿರಿಯರಾಗಬಹುದೇ ಹೊರತು ಗುಣದಿಂದಲ್ಲ. ಆಸಕ್ತಿಗೆ ವಿಷಯಗಳಾದ ಮನೆ ಮೊದಲಾದ ದುಷ್ಟವಿಷಯಗಳು ರಾಜಸ ಪುತ್ರಾದಿ ಸ್ನೇಹಕ್ಕೂ, ಪಶ್ಚಾತ್ತಾಪಕ್ಕೂ, ಅಹಂಕಾರಕ್ಕೂ, ಆಸೆಗೂ, ಭಯ, ದೈನ್ಯ , ಮನೋವ್ಯಥೆಗಳಿಗೂ ಕಾರಣವಾಗಿರುವವು. ಇದರ ಪರಿಣಾಮವಾಗಿಯೇ ಹುಟ್ಟು ಸಾವುಗಳಿಗೆ ಮತ್ತೆ ಮತ್ತೆ ಜೀವರು ಒಳಗಾಗುವರು. ಆದ್ದರಿಂದ ಅಯೋಗ್ಯ ವಿಷಯಗಳಲ್ಲಿ ಆಸಕ್ತಿ ಇಡದೆ ಯಾವ ಭಯವೂ ಇಲ್ಲದ ಶ್ರೀಹರಿಯ ಪಾದವನ್ನು ಸೇವಿಸಿರಿ ಎಂದು ಪ್ರಲ್ಹಾದರಾಜರು ಉಪದೇಶಿಸುವರು.

ಕೇತುಮಾಲಾ ವರ್ಷದಲ್ಲಿಯಾದರೂ ಶ್ರೀಹರಿಯು ಕಾಮದೇವನ ಅಂತರ್ಯಾಮಿಯಾದ ಪ್ರದ್ಯುಮ್ನರೂಪದಿಂದ ಇರುವನು. ಅವನು ಅಲ್ಲಿ ಸನ್ನಿಹಿತನಾಗಿರುವುದು ರತಿಯಲ್ಲಿ ಆವಿಷ್ಟಳಾದ ಲಕ್ಷ್ಮೀದೇವಿಗೂ ಸಂವತ್ಸರಾಭಿಮಾನಿ ಬ್ರಹ್ಮದೇವರ ಮಕ್ಕಳಾದ ರಾತ್ರಿ ಅಭಿಮಾನಿ ದೇವತೆಗಳಿಗೂ ಆ ಖಂಡದ ಅಧಿ ಪತಿಗಳಿಗೂ ಪ್ರಿಯವನ್ನು ನಡಿಸಿಕೊಡಬೇಕೆಂಬ ಇಚ್ಛೆಯಿಂದ. ಮನುಷ್ಯನಿಗೆ ಪೂರ್ಣವಾದ ಆಯಸ್ಸು ನೂರು ವರ್ಷಗಳು. ಇದರಲ್ಲಿ ಬರುವದಿವಸಗಳು ಮೂವತ್ತಾರುಸಾವಿರ. ಈ ಖಂಡದಲ್ಲಿರುವ ರಾತ್ರ್ಯಭಿಮಾನಿ ದೇವತೆಗಳು ಅಷ್ಟೇ ಮಂದಿ. ಶ್ರೀಹರಿಯ ಮಹಾಸ್ತ್ರವಾದ ಸುದರ್ಶನದ ಕಾಂತಿಯಿಂದ ಅವರ ಮನಸ್ಸು ಉದ್ವೇಗಗೊಳ್ಳುವುದರಿಂದ ಅವರ ಗರ್ಭಗಳು ನಾಶವಾಗಿ ಪ್ರಾಣವಿಲ್ಲದವುಗಳಾಗಿ ವರ್ಷದ ಕೊನೆಯಲ್ಲಿ ಬಿದ್ದುಹೋಗುವುವು. ಅಲ್ಲಿರುವ ಮನ್ಮಥದೇವನು ಅವನ ಅಂತರ್ಯಾಮಿಯಾದ ಪ್ರದ್ಯುಮ್ನನೂ, ಸುಂದರವಾದ ಮನವುಳ್ಳವರು. ಅತ್ಯಂತ ಸುಂದರವಾದ ಗಮನದ ವಿಲಾಸದಿಂದ ಪ್ರಕಾಶಿಸುವ, ಮನೋಹರವಾದ ಮುಗುಳುನಗೆಯಿಂದ ಕೂಡಿದ ನೋಟದ ಕ್ರೀಡೆಯಿಂದ ಹುಬ್ಬುಗಳು ಸ್ವಲ್ಪ ಮೇಲಕ್ಕೆ ಹಾರುವುವು. ಇದರಿಂದ ಮನೋಹರವಾದ ಅವರ ಮುಖಗಳ ಕಾಂತಿ ಕ್ರಮವಾಗಿ ರತಿಯನ್ನೂ ಆಕೆಯಲ್ಲಿ ಆವಿಷ್ಟಳಾಗಿರುವ ಲಕ್ಷ್ಮೀದೇವಿಯನ್ನೂ ಆನಂದಪಡಿಸುವುದು. ಅಲ್ಲದೇ ನೋಡುವವರ ಇಂದ್ರಿಯಗಳಿಗೂ ತೃಪ್ತಿಯನ್ನುಂಟುಮಾಡುವುದು. ಶ್ರೀಹರಿಯ ಜ್ಞಾನೇಚ್ಛಾಸ್ವರೂಪದ ಪ್ರದ್ಯುಮ್ನರೂಪವನ್ನು ಲಕ್ಷ್ಮೀದೇವಿಯೂ




ಶ್ರೀಹರಿಯ ಪ್ರಾಕೃತ ಪ್ರತಿಮೆಯಾದ ಮನ್ಮಥನ ರೂಪವನ್ನು ರಮಾದೇವಿಯಿಂದ ಆವಿಷ್ಟಳಾದ ರತಿದೇವಿಯು ರಾತ್ರಿ ಕಾಲಗಳಲ್ಲಿ ಸಂವತ್ಸರ ಪ್ರಜೇಶ್ವರನ ಪುತ್ರಿಯರಾದ ರಾತ್ರ್ಯಭಿಮಾನಿ ದೇವತೆಗಳಿಂದಲೂ ಹಗಲುಗಳಲ್ಲಿ ರಾತ್ರ್ಯಭಿಮಾನಿಗಳ ಗಂಡಂದಿರಾದ ಹಗಲಭಿಮಾನಿ ದೇವತೆಗಳಿಂದಲೂ ಕೂಡಿಕೊಂಡವರಾಗಿ ಅತ್ಯಂತ ಚಿತ್ತೈಕಾಗ್ರತೆಯಿಂದ ಉಪಾಸಿಸುವರು. ಈ ಕೆಲಕಂಡ ಮಂತ್ರ ಸ್ತೋತ್ರಗಳನ್ನು ಹೇಳುವರು.

ಸಮಗ್ರೈಶ್ವರ್ಯಸಂಪನ್ನನೂ, ಮನಸ್ಸು ಮೊದಲಾದ ಇಂದ್ರಿಯಗಳಿಗೆ ನಿಯಾಮಕನೂ, ಎಲ್ಲ ವಿಶೇಷಗಳನ್ನೂ ತಿಳಿದಿರುವನೂ, ಬ್ರಹ್ಮಾದಿಗಳಿಗೆ ಆವಾಸವಾದ ಸ್ವರೂಪದೇಹವುಳ್ಳವನೂ, ಅಭಿಪ್ರಾಯಗಳು, ಸಂಸ್ಕಾರಗಳು, ಅಂತಃಕರಣ ಅದರ ವ್ಯಾಪಾರಗಳು, ಬುದ್ಧಿ ವ್ಯಾಪಾರಗಳು, ಮನಸ್ಸು, ಅಹಂಕಾರ, ಬುದ್ಧಿ ಪ್ರಭೇದಗಳು ಇವುಗಳಿಗೆ ಅಧಿಪತಿಯೂ, ಏಕಾದಶೇಂದ್ರಿಯ, ಪಂಚ ಭೂತಗಳು ಹೀಗೆ ಹದಿನಾರು ಕಲೆಗಳಿಗೆ ಪ್ರವರ್ತಕನೂ, ವೇದಾರ್ಥಪ್ರಧಾನನೂ, ಸಹಸ್ಸು, ಓಜಸ್ಸು, ಬಲ, ಕಾಂತಿಗಳಿಗೆ ಕಾರಣನೂ ಎಲ್ಲರಿಂದ ಕಾಮಿತನೂ ಆದ ನಿನಗೆ ನಮೋ ನಮಃ. ಒಳಗೂ ಹೊರಗೂ ನಮ್ಮನ್ನು ರಕ್ಷಿಸುವ ನಿನ್ನನ್ನು ಲೋಕದ ಸ್ತ್ರೀಯರು ಅನೇಕ ಬಗೆಯ ವ್ರತಗಳಿಂದ ಇಂದ್ರಿಯ ನಿಯಾಮಕನೂ, ಸರ್ವನಿಯಾಮಕನೂ ಆದ ನಿನ್ನನ್ನು ಸೇವಿಸುವರು. ನಿನಗಿಂತ ಭಿನ್ನವಾದ ಪತಿಯನ್ನು ಅಪೇಕ್ಷಿಸುವರು. ಪಡೆಯುವರು. ಆ ಸ್ತ್ರೀಯರು ಅವರ ಗಂಡಂದಿರೂ ಅಸ್ವತಂತ್ರರು. ಸ್ವತಃ ರಕ್ಷಿಸಲು ಶಕ್ತರಲ್ಲ. ಅವರ ವ್ರತಗಳಿಂದ ಆರಾಧಿತನಾದ ನೀನೇ ಅವರ ಮಕ್ಕಳನ್ನೂ, ಗಂಡಂದಿರನ್ನೂ, ಹಣವನ್ನೂ, ಆಯುಸ್ಸನ್ನೂ ರಕ್ಷಿಸುವೆ. ನೀನೇ ಅನ್ವರ್ಥಪತಿಯು. ಪತಿಯಾಗುವವನು ಸ್ವಯಂ ಯಾವ ಭಯವೂ ಇಲ್ಲದವನಾಗಿ ಭಯಾರ್ತರನ್ನು ಸರ್ವರೀತಿಯಿಂದಲೂ ರಕ್ಷಿಸುವವನಾಗಬೇಕು. ಸ್ವತಂತ್ರನಾದ್ದರಿಂದ ನೀನೇ ಅಂತಹ ಮುಖ್ಯಪತಿ. ಅನೇಕ ಮುಖ್ಯಪತಿಗಳಿದ್ದಲ್ಲಿ ಪರಸ್ಪರ ಭಯವೇ ಆಗುವುದು. ನಿನ್ನನ್ನು ಸೇವಿಸುವ ಜೀವನು ನಿನ್ನನ್ನು ಹೊಂದುವುದಕ್ಕಿಂತ ಹೆಚ್ಚಿನ ಮತ್ತೊಂದು ಫಲವಿದೆಯೆಂದು ತಿಳಿಯುವುದೇ ಇಲ್ಲ. ನಿನಗೆ ನಿನ್ನ ಲಾಭಕ್ಕಿಂತ ಬೇರೊಂದು ಪುರುಷಾರ್ಥವಿಲ್ಲ. ಮನುಷ್ಯನು ಪರಸ್ಪರ ಸೇವಿಸುತ್ತ ತಾನು ಸಂಪಾದಿಸಬಹುದಾದ ಲಾಭಕ್ಕಿಂತ ಅಧಿಕವಾಗಿ ಕೊಡುವ ಮತ್ತೊಬ್ಬನನ್ನು ತಿಳಿಯುವುದಿಲ್ಲ. ನನ್ನಂತೆ ಇವನೂ ಅಸ್ವತಂತ್ರನು. ಅಧಿಕವಾಗಿ ಕೊಡಲಾರನೆಂದೇ

ತಿಳಿಯುವರು. ಆದ್ದರಿಂದ ಮುಖ್ಯ ಪಾಲಕನಾದ ನಿನ್ನ ಪಾದಸರೋಜ ಪೂಜೆಯನ್ನು ಎಲ್ಲಕ್ಕಿಂತ ಅಧಿಕವೆಂದು ಅಪೇಕ್ಷಿಸುವವನು ಎಲ್ಲ ಪುರುಷಾರ್ಥಗಳನ್ನೂ ಹೊಂದಲು ಯೋಗ್ಯನು. ಇಷ್ಟತಮನಾದ ಶ್ರೀಹರಿಯೇ! ಅಂತಹ ನಿಷ್ಕಾಮ ಪೂಜನೆಯೇ ನಿನಗೆ ಒಪ್ಪಿಗೆಯಾದುದು. ಆದರಿಂದಲೇ ಇಷ್ಟಾರ್ಥಸಿದ್ಧಿ. ಸಕಾಮಪೂಜೆಯಿಂದ ಇಷ್ಟವು ನೆರವೇರದೇ ಜೀವನು ದುಃಖಕ್ಕೆ ಈಡಾಗುವನು. ಇಂದ್ರಿಯ ವಿಷಯಗಳಲ್ಲಿಯೇ ಆಸಕ್ತರಾದ ಸಾಮಾನ್ಯ ದೇವತೆಗಳು, ಅಸುರರು, ನಿನ್ನ ಪಾದಾರಾಧನೆಯನ್ನು ಬಿಟ್ಟು ನನ್ನ ಅನುಗ್ರಹದಿಂದ ಐಶ್ವೈರ್ಯವನ್ನು ಹೊಂದಲು ತಪಸ್ಸನ್ನು ಮಾಡುವರು. ಆದರೆ ನಿನ್ನನ್ನು ಅವರು ತಿಳಿದಿಲ್ಲ. ನನ್ನಿಂದ ಅವರಿಗೆ ಇಷ್ಟಸಿದ್ಧಿಯಾಗುವುದಿಲ್ಲ. ಅಜಿತನೇ! ನಿನ್ನಲ್ಲಿಯೇ ಮನಸ್ಸಿಟ್ಟಿರುವವಳಾದ ಎಲ್ಲರಿಂದ ಪೂಜಿತಳಾದ ನಾನೇ ಕೊಡದಿರುವಾಗ ಮಿಕ್ಕವರು ಏನು ಕೊಟ್ಟಾರು? ಗೋಪಿಕಾಸ್ತ್ರೀಯರ, ಭಕ್ತರ ತಲೆಯ ಮೇಲೆ ಇಟ್ಟಿದ್ದ ನಿನ್ನ ಕೈಯನ್ನು ನನ್ನ ತಲೆಯ ಮೇಲೆಯೂ ಇಡು. ಸರ್ವಶ್ರೇಷ್ಠನೇ! ಈಗಾಗಲೇ ನನ್ನನ್ನು ಶ್ರೀವತ್ಸ ಚಿಹ್ನೆಯಾಗಿ ನಿನ್ನ ಇಚ್ಛೆಯಿಂದಲೇ ನಿನ್ನ ವಕ್ಷಸ್ಸಿನಲ್ಲಿ ಧರಿಸಿರುವೆ ಎಂದು ರಮಾದೇವಿಯು ಸ್ತೋತ್ರಮಾಡುವಳು.

ರಮ್ಯಕವರ್ಷದಲ್ಲಿ ವೈವಸ್ವತಮನುರಾಜನು ಶ್ರೀಹರಿಯ ಮತ್ಸ್ಯಾವತಾರದ ರೂಪವನ್ನು ಇಂದಿಗೂ ಅತಿಶಯ ಭಕ್ತಿಯೋಗದಿಂದ ಆರಾಧಿಸುತ್ತಿರುವನು. ಈ ರೂಪವನ್ನು ಶ್ರೀಹರಿಯು ಆ ಖಂಡದ ಪ್ರಧಾನ ಪುರುಷರಾದ ಅವರಿಗೆ, ಮನ್ವಂತರದ ಪ್ರಾರಂಭದಲ್ಲಿ ಸಾಕ್ಷಾತ್ತಾಗಿ ಕಾಣುವಂತೆ ಅನುಗ್ರಹಿಸಿದ್ದನು. ಅದು ಅವನಿಗೆ ಪ್ರಿಯವಾದ ರೂಪ. ಷಡ್ಗುಣ್ಯೈಶ್ವರ್ಯಸಂಪನ್ನನೂ, ಜಗತ್ತಿನಲ್ಲಿ ಅತ್ಯಂತ ಪ್ರಧಾನನೂ, ಓಂಕಾರ ಪ್ರತಿಪಾದ್ಯನೂ, ಗುಣಪೂರ್ಣನೂ, ಸಾಧುಗುಣಸ್ವರೂಪನೂ, ಪ್ರಕೃಷ್ಟಚೇಷ್ಟಕನೂ, ಓಜೋಬಲಸ್ವರೂಪನೂ ಆದ ಲೋಕವಿಲಕ್ಷಣ ಮತ್ಸ್ಯನಿಗೆ ನಮಸ್ಕಾರ ಎಂಬೀ ಮಂತ್ರವನ್ನೂ ಅವನು ಪಠಿಸುವನು. ಶ್ರೀಹರಿಯೇ! ನೀನು ಗುರುವು. ಪರಮಪುರುಷನು. ವೇದನಾದವಿಶಿಷ್ಟನು. ಮನುಷ್ಯನು ಮರದ ಹೆಣ್ಣು ಬೊಂಬೆಯನ್ನು ತನ್ನ ಅಧೀನದಲ್ಲಿ ತಂದುಕೊಳ್ಳುವಂತೆ ನೀನು ಈ ಜಗತ್ತನ್ನೇ ನಿನ್ನ ಅಧೀನದಲ್ಲಿ ತಂದುಕೊಂಡವನು. ಇಂತಹ ಸರ್ವೋತ್ತಮ ನಿಯಾಮಕನಾದ ನೀನು ಎಲ್ಲ ಲೋಕಪಾಲಕರಿಂದಲೂ ಸಂಪೂರ್ಣ ತಿಳಿಯಲಾಗದ ಸ್ವರೂಪವುಳ್ಳವನು. ಒಳಗೂ, ಹೊರಗೂ ವಿಶಿಷ್ಟ ರೀತಿಯಿಂದ ಸಂಚರಿಸುತ್ತಿರುವೆ. ಲೋಕಪಾಲಕರಾದ ದೇವತೆಗಳು ಸ್ವಾಭಾವಿಕವಾಗಿ ಶ್ರೀಹರಿಯೊಡನೆ ಸ್ಪರ್ಧೆಯಿಲ್ಲದವರಾದರೂ ಕೆಲವು




ವೇಳೆ ದೈತ್ಯಾವೇಶದಿಂದಲೋ ಶ್ರೀಹರಿಯ ಆಜ್ಞೆಯಿಂದಲೋ ದೈತ್ಯಮೋಹನಕ್ಕಾಗಿಯೋ ಸ್ಪರ್ಧೆಯುಳ್ಳವರಂತೆ ತೋರುವರು. ಇವರು ನಿನ್ನನ್ನು ಬಿಟ್ಟು ಒಬ್ಬೊಬ್ಬರೇ ಆಗಲಿ, ಎಲ್ಲರೂ ಒಟ್ಟಿಗೆ ಸೇರಿಯಾಗಲಿ ಈ ಬ್ರಹ್ಮಾಂಡದಲ್ಲಿ ಕಂಡು ಬರುವ ದ್ವಿಪಾದ, ಚತುಷ್ಪಾದ, ಸರೀಸೃಪಗಳೆಂಬ ಜಂಗಮ ಪ್ರಾಣಿಗಳನ್ನು, ಸ್ಥಾವರ ಪ್ರಾಣಿಗಳನ್ನೂ ರಕ್ಷಿಸಲು ಪ್ರಯತ್ನಿಸಿದರೂ ರಕ್ಷಿಸಲಾರರು. ಮಹಾಪರಾಕ್ರಮಿಯೇ! ಅಲೆಗಳ ಮಾಲೆಗಳುಳ್ಳ ಮನ್ವಂತರ ಪ್ರಳಯಸಮುದ್ರದಲ್ಲಿ ನೀನು ಔಷಧಿ ಬಳ್ಳಿಗಳಿಂದ ತುಂಬಿದ(ನಿಧಿ) ಈ ಭೂಮಿಯನ್ನು ಅದರಲ್ಲಿದ್ದ ನನ್ನನ್ನೂ ನಿನ್ನ ಸ್ವರೂಪ ಸಾಮರ್ಥ್ಯದಿಂದ ಹೊತ್ತುಕೊಂಡಿದ್ದೆ. ಜಗಚ್ಚೇಷ್ಟಕತೆಯೆಂಬ ಗುಣಸ್ವರೂಪನಾದ ನಿನಗೆ ನಮಸ್ಕಾರ ಎಂದು ಮನು ರಾಜರು ಸ್ತೋತ್ರ ಮಾಡುವರು.

ಹಿರಣ್ಮಯ ಖಂಡದಲ್ಲಿ ಕೂರ್ಮದೇಹವನ್ನು ಧರಿಸಿದ ಶ್ರೀಹರಿಯು ವಾಸಿಸುವನು. ಅವನ ರೂಪವು ಭಕ್ತರಿಗೆ ಅತ್ಯಂತ ಪ್ರಿಯವು. ಪಿತೃಗಣಾಧಿಪತಿಯಾದ ಅರ್ಯಮನು ಆ ಖಂಡದ ಜನರೊಂದಿಗೆ ಈ ರೂಪವನ್ನು ಉಪಾಸಿಸುವನು. ಸಮುದ್ರದಲ್ಲಿ ಸಂಚರಿಸುವ, ಜ್ಞಾನ ಆನಂದ ಪರಾಕ್ರಮ ಮುಂತಾದ ಗುಣಗಳೇ ವಿಶೇಷಣವಾಗಿರುವ, ಸಂಪೂರ್ಣವಾಗಿ ತಿಳಿಯಲಾಗದ ಸ್ವರೂಪವುಳ್ಳ, ನೀರಿನಲ್ಲಿ ಅಡಗಿರುವುದರಿಂದ ಇರುವ ಸ್ಥಳವನ್ನು ತಿಳಿಯಲಾಗದ, ಭಕ್ತರ ಅಭೀಷ್ಟವನ್ನು ದಾನ ಮಾಡುವ ಸ್ವಭಾವದ, ಅಪ್ರಾಕೃತ ಶರೀರದ, ಚೆನ್ನಾಗಿ ಮಾತನಾಡುವ ಸಾಮರ್ಥ್ಯವುಳ್ಳ, ಅತ್ಯಂತ ದೊಡ್ಡವನಾದ, ಜಗತ್ತಿನ ಇರುವಿಕೆಗೆ ಕಾರಣನಾದ ನಿನಗೆ ನಮಸ್ಕಾರವೆಂಬ ಮಂತ್ರವನ್ನು ಮತ್ತೆ ಮತ್ತೆ ಜಪಿಸುವನು. ಜಗತ್ತಿನಲ್ಲಿರುವ ಪ್ರಾಣಿಗಳಿಗೆ ಇಷ್ಟೇ ಎಂಬ ಸಂಖ್ಯೆ ಇಲ್ಲ. 'ನನ್ನ ಆಧಾರದಿಂದ ಇರಲಿ' ಎಂಬ ಶ್ರೀಹರಿಯ ಇಚ್ಛೆಯಿಂದ ಅವು ಶ್ರೀಹರಿಯನ್ನೇ ಆಶ್ರಯಿಸಿಕೊಂಡಿವೆ. ಜಗತ್ತಿನ ಪ್ರಾಣಿಗಳನ್ನು ಜರಾಯುಜ ಮೊದಲಾದ ಅನೇಕ ಶಬ್ದಗಳಿಂದ ಕರೆಯುವರು. ವಿಕಾರಹೊಂದುವ ಜಗತ್ತು ಇವತ್ತು ಕಂಡಂತೆ ನಾಳೆ ಕಾಣುವುದಿಲ್ಲ. ಇಂತಹ ಚರಾಚರಾತ್ಮಕ ಪ್ರಪಂಚವು ಶ್ರೀಹರಿಯ ಸನ್ನಿಧಾನಕ್ಕೆ ಯೋಗ್ಯವಾದ ಪ್ರತಿಮೆಯಾಗಿದೆ. ಶ್ರೀಹರಿಯೇ ಜಗತ್ತಿನ ಅಂತರ್ಯಾಮಿ. ಅವನ ರೂಪವು ವಾಙ್ಮನಸ್ಸುಗಳಿಗೆ ಗೋಚರವಲ್ಲ. ಅಂತಹ ಶ್ರೀಹರಿಗೆ ನಮಸ್ಕಾರ. ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ, ಚರ, ಅಚರ, ದೇವ, ಋಷಿ, ಪಿತೃ ಮೊದಲಾದ ಭೇದವುಳ್ಳ ಸ್ವರ್ಗ, ಆಕಾಶ, ಭೂಮಿ, ಬೆಟ್ಟ, ನದಿ, ಸಮುದ್ರ, ದ್ವೀಪ, ಗ್ರಹ

ನಕ್ಷತ್ರ ಇತ್ಯಾದಿ ಶಬ್ದಗಳಿಂದ ಮುಖ್ಯವಾಚ್ಯನು, ಆ ಆ ಪದಾರ್ಥಗಳಲ್ಲಿ ಅಂತರ್ಯಾಮಿಯಾಗಿ ಆ ಆ ಶಬ್ದ ಪ್ರವೃತ್ತಿ ನಿಮಿತ್ತಗಳಿಗೆ ಸ್ವಾಮಿಯಾದವನು ನೀನೊಬ್ಬನೇ. ನಿನ್ನ ಅಧೀನವಾದ ಆ ವಸ್ತುಗಳು ಆ ಶಬ್ದಗಳು ಅಮುಖ್ಯವಾಚ್ಯಗಳು. ಶ್ರೀಹರಿಯೇ! ನಿನ್ನಲ್ಲಿ ಜಗದ್ವ್ಯಾವರ್ತಕ ಧರ್ಮಗಳು, ಗುಣಗಳು, ನಾರಾಯಣ ಮೊದಲಾದ ಹೆಸರುಗಳು, ಶುಕ್ಲ ಮೊದಲಾದ ರೂಪಗಳು, ವಿಗ್ರಹಗಳು(ದೇಹಗಳು) ಅಸಂಖ್ಯೇಯವಾಗಿವೆ. ಹೀಗಿದ್ದರೂ ದಶಾವತಾರಗಳು, ಪಂಚಾವತಾರಗಳು, ದ್ವಾದಶಾವತಾರಗಳು, ಶತಾವತಾರಗಳು, ಸಹಸ್ರಾವತಾರಗಳು ಎಂಬ ಸಂಖ್ಯೆಯು ಜ್ಞಾನಿಗಳಿಂದ ಜಗದ್ರಕ್ಷಣೆಗಾಗಿ ಸಮರ್ಥಿತವಾಗಿದೆ. ನಿನ್ನ ಅನಂತತೆಯನ್ನು ಅಪರೋಕ್ಷಿಸಿಕೊಂಡ ಜ್ಞಾನಿಗಳು ಈ ಸಂಖ್ಯೆಯಿಂದ ವಿಶೇಷವನ್ನೇ (ಅನಂತತತ್ತ್ವವನ್ನೇ) ತಿಳಿಯುವರು. ಶಿಷ್ಯರಿಗೆ ಉಪದೇಶಿಸುವರು. ಇಂತಹ ಸ್ವರೂಪ ಜ್ಞಾನವನ್ನು ವ್ಯಕ್ತಗೊಳಿಸುವ ನಿನಗೆ ನಮಸ್ಕಾರ.

ಉತ್ತರಕುರುವರ್ಷದಲ್ಲಿ ಶ್ರೀಹರಿಯು ವರಾಹ ರೂಪದಿಂದ ಇರುವನು. ಈ ರೂಪವು ಯಜ್ಞಕ್ಕೆ ಬೇಕಾದ ಪದಾರ್ಥಗಳನ್ನು ಸೃಷ್ಟಿಸುವುದು. ಇಲ್ಲಿ ಭೂದೇವಿಯು ಈ ಖಂಡದ ಜನರೊಂದಿಗೆ ಸತತವಾದ ಭಕ್ತಿಯೋಗದಿಂದ ಈ ವರಾಹ ರೂಪಿಯನ್ನು ಉಪಾಸಿಸುತ್ತಿರುವಳು. ಗುರೂಪದೇಶದಿಂದ ಮಾತ್ರ ತಿಳಿಯಬೇಕಾದ ರಹಸ್ಯವಾದ ಈ ಉತ್ತಮ ಮಂತ್ರವನ್ನು ಜಪಿಸುವಳು. ಮಂತ್ರತತ್ತ್ವದ ಮೂರ್ತಿಯೂ, ಮಂತ್ರಾರ್ಥವನ್ನು ತಿಳಿಸುವವನೂ, ಮಂತ್ರತಾತ್ಪರ್ಯನಿರ್ಣಾಯಕ ಹೇತುವುಳ್ಳವನು, ಯಜ್ಞಸಂಕಲ್ಪಕ್ಕೆ ವಿಷಯನೂ ಯಜ್ಞಗಳಿಗೂ ಕ್ರತುಗಳಿಗೂ ಪ್ರವರ್ತಕನೂ, ಆದ್ದರಿಂದ ಆ ಶಬ್ದಗಳಿಂದ ವಾಚ್ಯನೂ, ಭೂಮಿಯನ್ನು ಧರಿಸಿದವನೂ, ಪುರುಷೋತ್ತಮನೂ, ಶುದ್ಧ ಕರ್ಮವುಳ್ಳವನೂ, ಶುದ್ಧಕರ್ಮ ಪ್ರವರ್ತಕನೂ, ಕೃತಾದಿ ಮೂರು ಯುಗಗಳಲ್ಲಿ ಮಾತ್ರ ಅವತರಿಸುವವನೂ ಆದ ಭಗವಂತನಿಗೆ ನಮಸ್ಕಾರ ಎಂಬುದೇ ಆ ಪರಮ ರಹಸ್ಯ ಮಂತ್ರ. ಶ್ರೀಹರಿಯನ್ನು ಕಾಣಬಯಸುವ, ವಿಚಾರಶೀಲರಾದ ಜ್ಞಾನಿಗಳು ಹೃದಯ ಗುಹೆಯಲ್ಲಿ ಗೂಢನಾಗಿರುವ ನಿನ್ನನ್ನು ಉಪಕ್ರಮ ಮೊದಲಾದ ತಾತ್ಪರ್ಯ ಲಿಂಗಗಳಿಂದ ಮತ್ತೆ ಮತ್ತೆ ವಿಚಾರಮಾಡಿ ವೇದದಿಂದ ತಿಳಿಯುವರು. ಶ್ರೀಹರಿಯ ಅಪ್ರಾಕೃತರೂಪವು ಪ್ರಾಕೃತಗುಣಕಾರ್ಯಗಳಾದ ಶರೀರೇಂದ್ರಿಯಾದಿಗಳಲ್ಲಿ ನಿಯಾಮಕವಾಗಿ ಸನ್ನಿಹಿತವಾಗಿರುವುದು. ಅರಣಿ(ಕಟ್ಟಿಗೆ)ಯಲ್ಲಿರುವ ಅಗ್ನಿಯನ್ನು ಮಥನ ಮಾಡಿ




ತಿಳಿಯುವಂತೆ ಮನಸ್ಸೆಂಬ ಕಡಗೋಲಿನಿಂದ ನಿನ್ನನ್ನು ಮಥನ ಮಾಡುವರು. ಯಜ್ಞ ಮೊದಲಾದ ಕರ್ಮಗಳ ನಿಷ್ಪತ್ತಿ ಎಂಬ ಪ್ರಯೋಜನವುಳ್ಳ ಇಂದ್ರಾದಿನಾಮಗಳಿಂದ ಮುಖ್ಯವಾಗಿ ಪ್ರತಿಪಾದಿತ ಸ್ವರೂಪನಾದ ನಿನಗೆ ನಮಸ್ಕಾರ. ದ್ರವ್ಯಕ್ಕೆ ನಿಯಾಮಕರಾದ ರುದ್ರದೇವರೂ, ಕ್ರಿಯಾನಿಯಾಮಕರಾದ ಗರುಡದೇವರು, ಕಾರಣ ನಿಯಾಮಕರಾದ ಬ್ರಹ್ಮದೇವರೂ, ಆಧಾರ ನಿಯಾಮಕರಾದ ವಾಯುದೇವರೇ ಮೊದಲಾದ ಜ್ಞಾನಿಗಳು ನಿನ್ನ ಅನುಗ್ರಹದಿಂದ ನಿನ್ನ ಸಾಕ್ಷಾತ್ಕಾರವನ್ನು ಹೊಂದಿರುವರು. ಅವರ ಅಪರೋಕ್ಷಜ್ಞಾನವು ಅವರವರ ಯೋಗ್ಯತೆಗೆ ತಕ್ಕಂತೆ ವಿಶೇಷವನ್ನು ಕಾಣುವುದು. ನಿನ್ನ ಇಚ್ಛೆಯನ್ನು ಅನುಸರಿಸುವ ಇವರು ನಿನ್ನ ಯಥಾರ್ಥ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡಿರುವರು. ಇವರು ತಿಳಿಯಲನುಕೂಲವಾಗುವಂತೆ ಮಾಯಾನಿರ್ಮಿತ ಆಕೃತಿಯಿಂದ ದೂರನಾದ ನಿನಗೆ ನಮೋ ನಮಃ. ಶ್ರೀಹರಿಯೇ! ನೀನು ಜಗತ್ತಿನ ರಕ್ಷಣೆ ಲಯ ಮತ್ತು ಸೃಷ್ಟಿಗಳನ್ನು ಮಾಡುವೆ. ಪ್ರಾಕೃತ ಗುಣ ಸಂಬಂಧದಿಂದ ಮುಗ್ಧರಾದ ಈ ಬ್ರಹ್ಮಾದಿಗಳು ನಿನ್ನ ಇಷ್ಟವನ್ನು ತಿಳಿಯಲು ಸ್ವತಂತ್ರರಲ್ಲ. ಅಯಸ್ಕಾಂತದ ಸನ್ನಿಧಾನದಿಂದ ಕಬ್ಬಿಣವು ಚಲಿಸುವಂತೆ ನಿನ್ನನ್ನೇ ಆಶ್ರಯಿಸಿರುವ ಲಕ್ಷ್ಮಿಯೂ ಅನಂತವಾದ ನಿನ್ನ ರೂಪವನ್ನು ಇಷ್ಟೇ ಎಂದು ತಿಳಿಯಲಾರಳು. (ಜಗತ್ ಸೃಷ್ಟ್ಯಾದಿಗಳನ್ನು ನಿನ್ನ ಅನುಗ್ರಹದಿಂದ ಸದಾ ಮಾಡುತ್ತಿದ್ದರೂ ನಿನ್ನ ಇಷ್ಟದಂತೆ ನಿನ್ನನ್ನು ತಿಳಿಯಲಾರಳು). ಆಕೆಯಿಂದ ಅಭಿಮನ್ಯಮಾನವಾದ ಜಡಪ್ರಕೃತಿಯೂ ನಿನ್ನ ಪ್ರಭಾವದಿಂದಲೇ ಪರಿಣಾಮ ಹೊಂದಿ ಕಾರ್ಯರೂಪಕ್ಕೆ ಬರುವುದು. ಅಯಸ್ಕಾಂತಕ್ಕೆ ಆ ಶಕ್ತಿಯನ್ನು ಕೊಡುವವನೂ ಸ್ಥಿರನೂ ಆದ್ದರಿಂದ ನಿನ್ನನ್ನು ಗ್ರಾವ ಎಂದು ಕರೆಯುವರು. ನಿನ್ನ ಗುಣಕರ್ಮಗಳನ್ನು ಸಂಪೂರ್ಣವಾಗಿ ನೀನೇ ಬಲ್ಲೆ. ಚೇತನಾಚೇತನರ ಗುಣಕರ್ಮಗಳಿಗೆ ನೀನೇ ಕರ್ತನಾಗಿ ಸಾಕ್ಷಿಯಾಗಿರುವೆ. ಜಗತ್ತಿನ ಆದಿಯೂ ಸರಿಯಾಗಿ ಕಾರ್ಯ ಮಾಡುವವನೂ ಆದ ನೀನು ಸೂಕರನೆನಿಸುವೆ. ಕ್ರೀಡೆಯಲ್ಲಿ ತೊಡಗಿದ ಆನೆಯಂತೆ ನೀನು ಯುದ್ಧದಲ್ಲಿ ಎದುರಾನೆಯಂತೆ ಇದ್ದ ತಡೆಯಿಲ್ಲದ ಹಿರಣ್ಯಾಕ್ಷನನ್ನು ಕೋರೆಹಲ್ಲುಗಳಿಂದ ಸಂಹರಿಸಿದೆ. ಭೂಮಿಯಾದ ನನ್ನನ್ನು ಹಲ್ಲಿನ ಕೊನೆಯಲ್ಲಿಟ್ಟುಕೊಂಡು ರಸಾತಳದಿಂದ ಹೊರಟು ಸಮುದ್ರದಿಂದ ಹೊರಬಂದೆ. ಸ್ವಾಮಿಯಾದ ನಿನಗೆ ಭಕ್ತಿಯಿಂದ ನಮಸ್ಕರಿಸುತ್ತೇನೆ ಎಂದು ಭೂದೇವಿಯು ಸ್ತೋತ್ರಮಾಡುವಳು.

II ★★★ II

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಏಕೋನವಿಂಶತಿತಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಸಮಸ್ತ ಚಿದಚಿದಾತ್ಮಕ ಪ್ರಪಂಚ ನಿಯಾಮಕನಾದ ಶ್ರೀಹರಿಯ ಅನೇಕವಿಧ ಮಾಹಾತ್ಮ್ಯವನ್ನು ಭಕ್ತಿಯಿಂದ ಚಿಂತನ ಮಾಡುವುದರಿಂದ ಕೈವಲ್ಯ ಸಾಮ್ರಾಜ್ಯ ಸಂಪ್ರಾಪ್ತಿಯಾಗುವುದು ಎಂದು ಸಮರ್ಥಿಸಲು ಉಪಾಸ್ಯ ಉಪಾಸಕ ಭಾವವನ್ನು ವರ್ಣಿಸುವರು ಈ ಅಧ್ಯಾಯದಲ್ಲಿ.

**ಉಪಾಸ್ಯ-ಉಪಾಸಕ-ನಿರೂಪಣೆ**

**ಕಿಂಪುರುಷವರ್ಷ - ಶ್ರೀರಾಮಚಂದ್ರ**

ಮೊದಲಿಗೆ ಕಿಂಪುರುಷವರ್ಷದಲ್ಲಿ ಉಪಾಸಕರಾದ ಹನುಮಂತದೇವರು ಲೋಕಾಭಿರಾಮನಾದ ಶ್ರೀರಾಮಚಂದ್ರದೇವರನ್ನು ಉಪಾಸನೆ ಮಾಡುವ ರೀತಿಯನ್ನು ವರ್ಣಿಸುವರು

**ಕಿಂಪುರುಷೇ ತು ವರ್ಷೇ ಭಗವಂತಮಾದಿಪುರುಷಂ ಲಕ್ಷ್ಮಣಾಗ್ರಜಂ ಸೀತಾಭಿರಾಮಂ ರಾಮಂ ತಚ್ಚರಣಸಂನ್ನಿಕರ್ಷಾಭಿರತಃ ಪರಮಭಾಗವತೋ ಹನೂಮಾನ್ ಸಹ ಕಿಂಪುರುಷೈರವಿರತಭಕ್ತಿರುಪಾಸ್ತೇ । ಆರ್ಷ್ಟಿಷೇಣೇನ ಸಹ ಗಂಧರ್ವೈರನುಗೀಯಮಾನಾಂ ಪರಮಕಲ್ಯಾಣೀಂ ಭರ್ತೃಭಗವತ್ಕಥಾಂ ಸಮುಪಶೃಣೋತಿ ಸ್ವಯಂ ಚೇದಂ ಗಾಯತಿ ॥೧-೨॥**




**ಕಿಂಪುರುಷೇ ತು ವರ್ಷೇ** ಕಿಂಪುರುಷ ಖಂಡದಲ್ಲಿಯಾದರೂ **ತಚ್ಚರಣ ಸನ್ನಿಕರ್ಷಾಭಿರತಃ** ಆ ರಾಮಚಂದ್ರ ದೇವರ ಪಾದಸಾಮೀಪ್ಯದಲ್ಲಿಯೇ ಸಂತೋಷ ಪಡುವ **ಪರಮಭಾಗವತಃ** ಜೀವೋತ್ತಮ ಭಗವದ್ಭಕ್ತರಾದ **ಹನೂಮಾನ್** ಹನುಮಂತದೇವರು **ಕಿಂಪುರುಷೈಃ ಸಹ** ಕಿಂಪುರುಷ ಖಂಡದ ಜನರ ಜೊತೆಗೆ **ಭಗವಂತಂ** ಪರಮ ಪೂಜ್ಯನಾದ **ಆದಿಪುರುಷಂ** ಕಾರಣ ಪುರುಷನಾದ **ಲಕ್ಷ್ಮಣಾಗ್ರಜಂ** ಲಕ್ಷ್ಮಣನ ಅಣ್ಣನಾದ **ಸೀತಾಭಿರಾಮಂ** ಸೀತೆಯನ್ನು ಸಂತೋಷಪಡಿಸುವ **ರಾಮಂ** ರಾಮದೇವರನ್ನು **ಅವಿರತಭಕ್ತಃ ಉಪಾಸ್ತೇ** ನಿರಂತರ ಭಕ್ತಿಯುಳ್ಳವನಾಗಿ ಉಪಾಸಿಸುವನು. ||೧||

**ಗಂಧರ್ವೈಃ ಸಹ** ಗಂಧರ್ವರೊಂದಿಗೆ **ಆರ್ಷ್ಟಿಷೇಣೇನ** ಆರ್ಷ್ಟಿಷೇಣನಿಂದ **ಅನುಗೀಯಮಾನಾಂ** ಯಾವಾಗಲೂ ಗಾನಮಾಡಲ್ಪಡುವ **ಪರಮಕಲ್ಯಾಣೀಂ** ಅತ್ಯಂತ ಮಂಗಲಕರವಾದ **ಭರ್ತೃಭಗವತ್ಕಥಾಂ** ಪಾಲಕನಾದ ಶ್ರೀಹರಿಯ ಕಥೆಯನ್ನು **ಸಮುಪಶೃಣೋತಿ** ಕೇಳುವರು **ಸ್ವಯಂ ಚ ಇದಂ ಗಾಯತಿ** ತಾವು ಮುಂದೆ ಹೇಳುವ ಮಂತ್ರವನ್ನು ಹೇಳುವರು.

**ಭರ್ತೃ** ಎಂದು ಹೇಳಿದ್ದರಿಂದ ಯಾರೋ ಒಬ್ಬ ಪೂಜ್ಯನ ಕಥೆಯಲ್ಲವೆಂದು ತಿಳಿಸುವರು. **ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ** ಎಂದು ಶ್ರುತಿಯನ್ನು ಇದರಿಂದ ಸಂಗ್ರಹಿಸಿರುವರು ಎಂದು ತಿಳಿಯಬೇಕು. ||೨||

**ಓಂ ನಮೋ ಭಗವತ ಉತ್ತಮಶ್ಲೋಕಾಯ ನಮಃ ಆರ್ಯಲಕ್ಷಣ-ಶೀಲವ್ರತಾಯ ನಮ (ಉಪಾಶ್ರಿತಾತ್ಮನೇ ನಮಃ) ಸಾಧುವಾದನಿಕರ್ಷಣಾಯ ನಮೋ ಬ್ರಹ್ಮಣ್ಯದೇವಾಯ ಮಹಾಪುರುಷಾಯ ಮಹಾರಾಜಾಯ ನಮಃ ಇತಿ ||೩||**

ಓಂ ಗುಣಪೂರ್ಣನಾದ **ಉತ್ತಮಶ್ಲೋಕಾಯ** ನಿರತಿಶಯ ಕೀರ್ತಿಯುಳ್ಳ **ಭಗವತೇ** ಷಡ್ಗುಣ್ಯೈಶ್ವರ್ಯಸಂಪನ್ನನಾದ ಶ್ರೀಹರಿಗೆ **ನಮಃ** ನಮಸ್ಕಾರವು. **ಆರ್ಯಲಕ್ಷಣಶೀಲವ್ರತಾಯ** ಶ್ರೀಹರಿಯ ಲಕ್ಷಣಶೀಲವಾದ ನಿತ್ಯನಿರ್ದೋಷತ್ವ ಸತ್ಯಜಗತ್ಸೃಷ್ಟಿ ಮಾಡಬೇಕೆಂಬ ವ್ರತವುಳ್ಳ, ಪೂಜ್ಯರ ಲಕ್ಷಣಶೀಲಗಳಿಗೆ ಕಾರಣನಾದ ಶ್ರೀಹರಿಗೆ **ನಮಃ** ನಮಸ್ಕಾರ. **ವಿಶ್ವಂ ಸತ್ಯಂ ಮಘವಾನಾ ಯುವೋ ರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ** ಎಂಬ ಶ್ರುತಿಯು ವ್ರತವೇನೆಂಬುದನ್ನು ತಿಳಿಸುತ್ತದೆ.

**ಉಪಾಶ್ರಿತಾತ್ಮನೇ** ಜೀವರು ಯಾವನನ್ನು ಆಶ್ರಯಿಸಿರುವರೋ ಅಂತಹವನಿಗೆ ಲೋಕವನ್ನು ಅನುಗ್ರಹಿಸುವುದಕ್ಕಾಗಿ ದೇಹವನ್ನು ಸ್ವೀಕರಿಸಿದವನಿಗೆ **ನಮಃ** ನಮಸ್ಕಾರ. **ಉಪಾಸಿತಲೋಕಾಯ** ಯಾರನ್ನು ಉದ್ದೇಶಿಸಿ ಜನರು ಉಪಾಸನಾಯುಕ್ತರಾಗಿರುವರೋ ಅವನಿಗೆ ಅಥವಾ ಲೋಕಾನುಸಾರಿಯಾದವನಿಗೆ **ನಮಃ** ನಮಸ್ಕಾರವು. **ಸಾಧುವಾದ ನಿಕರ್ಷಣಾಯ** ಇವನು ಸಾಧು ಎಂಬ ವಚನಕ್ಕೆ ಸರಿಯಾಗಿ ವಿಚಾರಕವಾದ, ಸಾಧುಗಳ ವಿವಾದಕ್ಕೆ ಪರಿಹಾರಕನಾದ, ಸಾಧು ಎಂಬ ಪ್ರಸಿದ್ಧಿಗೆ ಒರೆಗಲ್ಲಿನಂತೆ ನಿರ್ಧಾರಕನಾದ ಕೊನೆಯ ಸೀಮೆಯಾದ ಶ್ರೀಹರಿಗೆ **ನಮಃ** **ಬ್ರಹ್ಮಣ್ಯದೇವಾಯ** ಬ್ರಾಹ್ಮಣರಿಗೆ ಪ್ರಿಯನಾದ, ಕ್ರೀಡಾದಿಗುಣವಿಶಿಷ್ಟನಿಗೆ **ನಮಃ** **ಮಹಾಪುರುಷಾಯ** ಸರ್ವೋತ್ತಮನಿಗೆ ನಮಸ್ಕಾರ **ಮಹಾರಾಜಾಯ ನಮಃ** ಉತ್ತಮರಾಜನಿಗೆ ನಮಸ್ಕಾರ. ।।೩।।

ಮೇಲಿನ ಮಂತ್ರದಲ್ಲಿ ಶ್ರೀರಾಮನಿಗೆ ಭಗವತ್ಸ್ವರೂಪತೆಯನ್ನು ಹೇಳಿದೆ. ಅದನ್ನು ವಿಶದಪಡಿಸುತ್ತಾ ಸ್ತೋತ್ರ ಮಾಡುತ್ತಾರೆ

**ಯತ್ತದ್ವಿಶುದ್ಧಾನುಭವಮಾತ್ರಮೇಕಂ**
**ಸ್ವತೇಜಸಾಧ್ವಸ್ತಗುಣತ್ರ್ಯವಸ್ಥಮ್ ।**
**ಪ್ರತ್ಯಕ್ಪ್ರಶಾಂತಂ ಸುಧಿಯೋಪಲಂಭನ-**
**ಮನಾಮರೂಪಂ ನಿರಹಂ ಪ್ರಪದ್ಯೇ** ।।೪।।

**ಯತ್** ಯಾವ ನಿನ್ನ ರೂಪವು **ವಿಶುದ್ಧಾನುಭವಮಾತ್ರಂ** ಪ್ರಾಕೃತ, ವೈಕೃತ ಸಂಬಂಧರಹಿತ ಜ್ಞಾನಾತ್ಮಕವಾದ ಇಂದ್ರಿಯಾದಿಗಳುಳ್ಳದ್ದೋ ಅಥವಾ ನಿರ್ದೋಷಾನುಭವಾತ್ಮಕ ಶರೀರವುಳ್ಳದ್ದೋ **ಸ್ವತೇಜಸಾ** ತನ್ನ ಸಾಮರ್ಥ್ಯದಿಂದಲೇ **ಧ್ವಸ್ತಗುಣತ್ರ್ಯವಸ್ಥಂ** ದೂರೀಕರಿಸಿದ ಸತ್ವಾದಿ ಪ್ರಾಕೃತ ಗುಣಗಳು ಮತ್ತು ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳು ಅಥವಾ ಗುಣನಿಮಿತ್ತಕ ಮೂರು ಅವಸ್ಥೆಗಳನ್ನು ದೂರೀಕರಿಸಿದ **ಪ್ರತ್ಯಕ್** ಜೀವನಿಗೆ ಅಭಿಮುಖವಾಗಿ ಜೀವಾಂತರ್ಗತ ಬಿಂಬವಾಗಿರುವುದೋ **ಪ್ರಶಾಂತಂ** ಪ್ರಕೃಷ್ಟ ಸುಖ ರೂಪವೋ ಪ್ರಸನ್ನಾಕಾರವೋ **ಸುಧಿಯಾ** ಒಳ್ಳೆಯಬುದ್ಧಿಯಿಂದ **ಉಪಲಂಭನಂ** ಹೊಂದಲಾಗುವ **ಅನಾಮರೂಪಂ** ಸಂಪೂರ್ಣವಾಗಿ ಪ್ರತಿಪಾದಿಸುವ ಪ್ರಾಕೃತ ನಾಮವಾಗಲಿ, ಭೌತಿಕ ರೂಪವಾಗಲಿ ಇಲ್ಲದಿರುವ(ಆದ್ದರಿಂದಲೇ ಪ್ರತ್ಯಕ್ಷ ಪ್ರಮಾಣ ವಿಷಯವಲ್ಲವೋ) **ನಿರಹಂ**




ಅಹಂಕಾರವಿಲ್ಲದ್ದೋ **ತತ್** ಅಂತಹ **ಏಕಂ** ಸ್ವಗತ ಭೇದವಿಲ್ಲದ ಸಮಾಧಿಕ ರಹಿತವಾದ ಸ್ವರೂಪವುಳ್ಳ ಪರಬ್ರಹ್ಮನಾದ ನಿನ್ನನ್ನು **ಪ್ರಪದ್ಯೇ** ಶರಣುಹೊಂದುತ್ತೇನೆ. ।।೪।।

## ಶ್ರೀರಾಮನಿಗೆ ಸೀತಾವಿಯೋಗದಿಂದ ದುಃಖವೇ?

ಶ್ರೀರಾಮನಿಗೆ ಮೇಲೆ ಹೇಳಿದ ವಿಶೇಷಣಗಳು ಹೇಗೆ ಸರಿಹೋಗುವುವು? ಸೀತಾವಿಯೋಗ ಮೊದಲಾದವುಗಳಿಂದ ದುಃಖ, ಅಜ್ಞಾನಾದಿಗಳು ಕಂಡು ಬರುವುವಲ್ಲಾ ಮತ್ತು ರಾಮನಿಗೆ ದಶರಥನಿಂದ ಜನ್ಮ, ಮನುಷ್ಯರಂತೆ ಆಚರಣೆ ಏಕೆ ಎಂದರೆ ಹೇಳುವರು

**ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ**
**ರಕ್ಷೋವಧಾಯೈವ ನ ಕೇವಲಂ ವಿಭೋಃ ।**
**ಕುತೋಽನ್ಯಥಾಸ್ಯೂ ರಮತಃ ಸ್ವ ಆತ್ಮನ್**
**ಸೀತಾಕೃತಾನಿ ವ್ಯಸನಾನೀಶ್ವರಸ್ಯ** ।।೫।।

ಇಹ ಈ ಭೂಲೋಕದಲ್ಲಿ **ವಿಭೋಃ** ವ್ಯಾಪ್ತನಾದ ಸಂಕಲ್ಪ ಮಾತ್ರದಿಂದಲೇ ಎಲ್ಲವನ್ನೂ ಮಾಡಲು ಸಮರ್ಥನಾದ ಶ್ರೀಹರಿಗೆ **ಮರ್ತ್ಯಾವತಾರಸ್ತು** ಮನುಷ್ಯನಂತೆ ಆಕಾರ ಸ್ವೀಕರಿಸುವುದು(ಅವತಾರವಷ್ಟೇ ಜನ್ಮವಲ್ಲ) **ಕೇವಲಂ ರಕ್ಷೋವಧಾಯೈವ ನ** ರಾಕ್ಷಸ ಸಂಹಾರಕ್ಕೆ ಮಾತ್ರವಲ್ಲ ಕಿಂತು **ಮರ್ತ್ಯಶಿಕ್ಷಣಂ** ಮನುಷ್ಯರು ಹಿರಿಯರ ಆಜ್ಞೆಯಂತೆ ನಡೆಯಬೇಕು. ಸ್ತ್ರೀಸಂಗದಿಂದ ದುಃಖವು ಅವರ್ಜನೀಯ. ಸಾಧ್ವಿಯಾದ ಹೆಂಡತಿಯನ್ನು ಸರ್ವಥಾ ಉಪೇಕ್ಷಿಸಬಾರದು. ವಿಷಯಗಳಲ್ಲಿ ವಿಶೇಷ ಆಸಕ್ತಿಯಿಂದ ಅವುಗಳ ವಿಯೋಗದಿಂದ ಮಹಾದುಃಖವಾಗುವುದು ಕಾರಣ ವಿಶೇಷ ಆಸಕ್ತಿ ಮಾಡಬಾರದು ಎಂದು ಕಲಿಸುವುದಕ್ಕಾಗಿಯೇ ದಶರಥನ ಆಜ್ಞೆ ನಡೆಸಲು ಕಾಡಿಗೆ ಹೋದದ್ದು, ಸೀತೆಯನ್ನು ಹುಡುಕಿದ್ದು, ವ್ಯಸನವನ್ನು ತೋರಿಸಿದ್ದು, ಶರಣಾಗತನಾದ ಸುಗ್ರೀವನ ಇಷ್ಟವನ್ನು ನೇರವೇರಿಸಿದ್ದು, ವಿಭೀಷಣನಿಗೆ ಲಂಕಾರಾಜ್ಯ ದಾನಮಾಡಿದ್ದು. ಇವುಗಳಿಂದ ಮನುಷ್ಯರು ಹೇಗಿರಬೇಕೆಂಬುದನ್ನು ತಿಳಿಸಿಕೊಟ್ಟಿರುವನು ಎಂದು ತಿಳಿದು ಬರುವುದು. ಅನ್ಯಥಾ ಮನುಷ್ಯರಿಗೆ ತಿಳಿಸುವ ಉದ್ದೇಶವಿಲ್ಲದಿದ್ದರೆ **ಸ್ವೇ ಆತ್ಮನಿ** ತನ್ನ ಸ್ವರೂಪದಲ್ಲಿ **ರಮತಃ** ಕ್ರೀಡಿಸುವ **ಈಶ್ವರಸ್ಯ** ಸರ್ವನಿಯಾಮಕನಾದ ರಾಮಚಂದ್ರನಿಗೆ **ಸೀತಾಕೃತಾನಿ** ಸೀತೆಯ, ಲಕ್ಷ್ಮಣನ ವಿಯೋಗ ನಿಮಿತ್ತವಾದ **ವ್ಯಸನಾನಿ** ದುಃಖಗಳು **ಕುತಃ ಸ್ಯುಃ** ಏಕಾದಾವು?

ಆಗುತ್ತಲೇ ಇರಲಿಲ್ಲ. ಆದ್ದರಿಂದ ಮನುಷ್ಯರನ್ನು ಶಿಕ್ಷಿಸುವುದಕ್ಕಾಗಿಯೇ ಹಾಗೆ ತೋರಿಸಿದನೆಂದು ಅಭಿಪ್ರಾಯ. ।।೫।।

ಈಶ್ವರನಾದಲ್ಲಿ ದುಃಖವನ್ನು ಅನುಭವಿಸುವುದಿಲ್ಲ, ದುಃಖವನ್ನು ಅನುಭವಿಸಿದಲ್ಲಿ ಈಶ್ವರನಲ್ಲ ಎಂದರೆ ಉತ್ತರಿಸುತ್ತಾರೆ

**ನ ವೈ ಸ ಆತ್ಮಾತ್ಮವತಾಮಧೀಶ್ವರೋ**
**ಭುಂಕ್ತೇ ಹಿ ದುಃಖಂ ಭಗವಾನ್ವಾಸುದೇವಃ ।**
**ನ ಸ್ತ್ರೀಕೃತಂ ಕಶ್ಮಲಮಶ್ನುವೀತ**
**ನ ಲಕ್ಷ್ಮಣಂ ಚಾಪಿ ಜಹಾತಿ ಕರ್ಹಿಚಿತ್ ।।೬।।**

**ಆತ್ಮಾವತಾಂ** ದೇಹವುಳ್ಳ ಬ್ರಹ್ಮಾದಿಗಳಿಗೆ ಪ್ರಶಸ್ತಮನಸ್ಕರಾದ ಯೋಗೀಶ್ವರರಿಗೆ **ಅಧೀಶ್ವರಃ** ನಿಯಾಮಕನಾದ **ಆತ್ಮಾ** ಸರ್ವಾಂತರ್ಯಾಮಿಯಾದ **ಭಗವಾನ್** ಷಡ್ಗುಣಪೂರ್ಣನಾದ **ವಾಸುದೇವಃ** ಸರ್ವತ್ರ ವಾಸಿಸುವ ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವ ನಾಮಕನಾದ **ಆತ್ಮಾ** ಪರಮಾತ್ಮನಾದ ರಾಮಚಂದ್ರನು **ದುಃಖಂ** ದುಃಖವನ್ನು **ನ ಭುಂಕ್ತೇ** ಅನುಭವಿಸುವುದಿಲ್ಲ **ವೈ** ಇದು ಪ್ರಮಾಣ ಸಿದ್ಧವು **ಹಿ** ಈ ಕಾರಣದಿಂದಲೇ **ಸ್ತ್ರೀಕೃತಂ** ಸ್ತ್ರೀನಿಮಿತ್ತಕವಾದ **ಕಶ್ಮಲಂ** ಸುರತವೆಂಬ ಕೊಳೆಯನ್ನು **ನ ಅಶ್ನುವೀತ** ಅನುಭವಿಸುವುದಿಲ್ಲ **ಕರ್ಹಿಚಿತ್** ಎಂದೂ **ಲಕ್ಷ್ಮಣಂ** ಲಕ್ಷ್ಮಣನನ್ನು **ನ ಜಹಾತಿ** ಬಿಡುವುದೂ ಇಲ್ಲ **ಅಪಿ** ಸೀತಾದೇವಿಯನ್ನೂ ಬಿಡುವುದಿಲ್ಲ. ಇದರಿಂದ ಹಿಂದಿನ ಶ್ಲೋಕದಲ್ಲಿ ಸೀತಾಪದದಿಂದ ಲಕ್ಷ್ಮಣನನ್ನೂ ಇಟ್ಟುಕೊಳ್ಳಬೇಕು ಎಂದು ತಿಳಿಸಿದಂತಾಯಿತು. ।।೬।।

## ಶ್ರೀರಾಮ ವ್ಯಸನ ರಹಿತ

ವ್ಯಸನವಿಲ್ಲವೆಂಬುದನ್ನು ವಿಶದ ಪಡಿಸುವರು. ಭಕ್ತರ ಮೇಲಿನ ಕರುಣೆಯಿಂದ ಅವತಾರ ಮಾಡಿದ ಶ್ರೀರಾಮನಿಗೆ ದುಃಖಾನುಭವವಿಲ್ಲವಾದುದರಿಂದ ಅವನು ಈಶ್ವರನೆಂಬುದರಲ್ಲಿ ಯಾವ ವಿರೋಧವೂ ಇಲ್ಲ. ಈ ರಾಮದೇವರ ಪ್ರೀತಿಗೆ ಭಕ್ತಿಜ್ಞಾನಗಳೇ ಕಾರಣ ಹೊರತು ಜನ್ಮಾದಿಗಳಲ್ಲವೆನ್ನುತ್ತಾರೆ. ಕಪಿಯಾಗಿ ನೀಚಯೋನಿಯಲ್ಲಿ ಜನಿಸಿದ ನಿನಗೆ ಹೇಗೆ ಅವನ ಜ್ಞಾನವೆಂದರೆ ಹೇಳುವರು

 

**ನ ಜನ್ಮ ನೂನಂ ಮಹತೋ ನ ಸೌಭಗಂ**
**ನ ಚಾಂಗ ಬುದ್ಧಿರ್ನಾಕೃತಿಸ್ತೋಷಹೇತುಃ ।**
**ತಿರ್ಯಗ್ವಿ ಸೃಷ್ಟಾನಪಿ ನೋ ವನೌಕಸ-**
**ಶ್ಚಕಾರ ಸಖ್ಯೇ ಚ ಸ ಲಕ್ಷ್ಮಣಾಗ್ರಜಃ** ॥೭॥

**ಅಂಗ** ಆರ್ಷ್ಟಿಷೇಣನೇ **ಮಹತಃ** ಮೋಕ್ಷಾಧಿಕಾರಿಯಾದ ಜೀವನ **ಜನ್ಮ** ಹುಟ್ಟು (ಬ್ರಾಹ್ಮಣ ಮೊದಲಾದ ಸತ್ಕುಲದಲ್ಲಿ ಜನನ) **ಸೌಭಗಂ** ಸೌಂದರ್ಯವು **ಬುದ್ಧಿಃ** ಬುದ್ಧಿನೈಪುಣ್ಯವು **ಆಕೃತಿಃ** ಆಕಾರವು (ಜಾತಿ) **ಮಹತಃ** ಸರ್ವೋತ್ತಮನಾದ ಗುಣಗ್ರಾಹಿಗಳಲ್ಲಿ ಶ್ರೇಷ್ಠತಮನಾದ ಶ್ರೀರಾಮಚಂದ್ರನ **ತೋಷಹೇತುಃ** ಸಂತೋಷ ಕಾರಣವು **ನೂನಂ** ನಿಶ್ಚಯವಾಗಿ ನ ಅಲ್ಲ. ಇವುಗಳು ಕಾರಣವಲ್ಲವೆಂದು ಹೇಗೆ ತಿಳಿಯಿತು? ಎಂದರೆ ಹೇಳುವರು **ಲಕ್ಷ್ಮಣಾಗ್ರಜಃ ಸಃ** ಲಕ್ಷ್ಮಣನ ಅಣ್ಣನಾದ ಶ್ರೀರಾಮಚಂದ್ರನು **ತಿರ್ಯಗ್ವಿಸೃಷ್ಟಾನಪಿ** ತಿರ್ಯಗ್ಜಂತುಗಳ ಯೋನಿಗಳಲ್ಲಿ ವಿವಿಧರೀತಿಯಿಂದ ಸೃಷ್ಟರಾದ (ತಿರಗ್ ಎಂಬ ಪಾಠದಲ್ಲಿ ತಿರ್ಯಗ್ ಜಂತುಗಳಾಗಿ ಎಂದರ್ಥ) **ವನೌಕಸಃ ಅಪಿ** ಅಡವಿಯಲ್ಲಿ ವಾಸಿಸುವ ವಾನರ ಯೋನಿಯಲ್ಲಿ ಬಂದ **ನಃ** ನಮ್ಮನ್ನು **ಸಖ್ಯೇ ಚಕಾರ ಚ** ಸ್ನೇಹದಲ್ಲಿ ತೆಗೆದುಕೊಂಡನು. ಅವನ ಕೃಪಾಶೀಲತೆಯೇ ಇದಕ್ಕೆ ಕಾರಣವೆಂದರ್ಥ. ವಾನರ ಅಸುರ ಮುಂತಾದ ಪಾಪಯೋನಿಗಳಲ್ಲಿ ಹುಟ್ಟಿದ್ದರೂ ಭಕ್ತಿ ಜ್ಞಾನಗಳಿದ್ದಲ್ಲಿ ಮೋಕ್ಷವು ನಿಶ್ಚಿತ. ಆದ್ದರಿಂದ ಶ್ರೀಹರಿಯು ಜನ್ಮಾದಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಇದಕ್ಕೆ ಪ್ರಮಾಣ

**ಯಸ್ಯ ಸಮ್ಯಕ್ ಭಗವತಿ ಜ್ಞಾನಂ ಭಕ್ತಿಸ್ತಥೈವ ಚ । ನಿಶ್ಚಿತಸ್ತಸ್ಯ ಮೋಕ್ಷಃ ಸ್ಯಾತ್ ಸರ್ವಪಾಪಕೃತೋಽಪಿ ತು । ಯೋ ಮಮತ್ವಾದಿನಾ ದೋಷಃ ಸತ್ವನ್ಯವಿಷಯಃ ಸ್ಮೃತಃ ।** ಮಮತೆ ಮುಂತಾದ ದೋಷಗಳು ಆ ಯೋನಿಗಳಲ್ಲಿದೆಂಬುದು ದುಷ್ಟಜೀವ ವಿಷಯವೆಂದು ತಾತ್ಪರ್ಯ.

ರಾಮಸ್ಯ ಎನ್ನದೆ ಮಹತಃ ಎಂದದ್ದರಿಂದ ಎಲ್ಲ ಮಹಾತ್ಮರ ಸ್ವಭಾವವಿದು ಎಂದು ಸೂಚಿಸಿರುವರು. ॥೭॥

ಆದ್ದರಿಂದ ಪುರುಷಾರ್ಥಾಪೇಕ್ಷಿಗಳು ಭಕ್ತಿಜ್ಞಾನಗಳಿಂದ ಶ್ರೀರಾಮನನ್ನೇ ಭಜಿಸಬೇಕು ಎಂದು ಹೇಳುತ್ತಾ ರಾಮನನ್ನು ತಿಳಿಯಲು ಜನ್ಮಾದಿಗಳು ಕಾರಣವಲ್ಲವೆಂದು ಉಪಸಂಹರಿಸುವರು

**ಸುರೋಽಸುರೋ ವಾಽಥ ನರೋಽಥ ವಾನರಃ**
**ಸರ್ವಾತ್ಮನಾ ಯಃ ಸುಕೃತಜ್ಞಮುತ್ತಮಮ್ ।**
**ಭಜೇತ ರಾಮಂ ಮನುಜಾಕೃತಿಂ ಹರಿಂ**
**ಯ ಉತ್ತರಾನನಯತ್ ಕೋಸಲಾನ್ದಿವಮ್ ಇತಿ ॥೮॥**

**ಯಃ** ಯಾವ ಮುಕ್ತಿಯೋಗ್ಯ ಜೀವನು **ಸುರಃ** ದೇವತೆಯಾಗಲಿ **ಅಸುರಃ** ಅಸುರನಾಗಿ ಹುಟ್ಟಿರಲಿ **ಅಥ** ಅಥವಾ **ನರಃ** ಮನುಷ್ಯನಾಗಲಿ **ವಾನರಃ** ಕಪಿಯಾಗಲಿ **ಸಃ** ಅವನು **ಸುಕೃತಜ್ಞಂ** ತನ್ನ ಕೃತ್ಯಗಳನ್ನು ಚೆನ್ನಾಗಿ ಬಲ್ಲ **ಉತ್ತಮಂ** ಸರ್ವೋತ್ತಮನಾದ **ಮನುಜಾಕೃತಿಂ** ಮನುಷ್ಯನ ಆಕಾರವನ್ನು ಸ್ವೀಕರಿಸುವ **ಯಃ** ಯಾವ ಶ್ರೀರಾಮನು **ಉತ್ತರಾನ್ ಕೋಶಲಾನ್** ಅಯೋಧ್ಯಾ ನಿವಾಸಿಗಳಾದ **ಖಗ** ಪಕ್ಷಿ **ಮೃಗ** ಜಿಂಕೆ **ತೃಣಾದಿ** ಹುಲ್ಲು ಜೀವರನ್ನೂ **ದಿವಂ** ಸ್ವರ್ಗಕ್ಕೆ, ಮೋಕ್ಷಕ್ಕೆ, ವೈಕುಂಠಕ್ಕೆ **ಅನಯತ್** ತಲುಪಿಸಿದನೋ **ತಂ** ಅಂತಹ ರಾಮನನ್ನೇ **ಭಜೇತ** ಸೇವಿಸಬೇಕು. ಅಸುರಾದಿ ಯೋನಿಗಳಲ್ಲಿ ಮಮತೆ ಮುಂತಾದ ದೋಷಗಳೇ ಸಂಭವಿಸುವುದರಿಂದ ರಾಮಭಜನೆಯು ಅವರಿಗೆ ಹೇಗೆ ಸಾಧ್ಯ ಎನ್ನಬಾರದು. ಹಿಂದಿನ ಶ್ಲೋಕದಲ್ಲಿ ಉದಾಹರಿಸಿರುವ ಪ್ರಮಾಣದಂತೆ ಆ ದೋಷಗಳು ಮುಕ್ತಿ ಯೋಗ್ಯರಲ್ಲದೆ ಅಸುರರಿಗೆ ಹೇಳಿದ್ದು. ಯೋಗ್ಯನಾದವನು ಅಸುರಯೋನಿಯಲ್ಲಿ ಬಂದಿದ್ದರೂ ಮಮತಾದಿ ದೋಷಗಳು ಇರುವುದಿಲ್ಲ. ಮುಕ್ತಿ ಯೋಗ್ಯರೂ ಅಸುರ ಯೋನಿಗಳಲ್ಲಿ ಹುಟ್ಟುವರೆಂಬ ಅಭಿಪ್ರಾಯದಿಂದಲೇ ಅಸುರ ಎಂದು ಹೇಳಿದ್ದು. ತಮೋಯೋಗ್ಯರಾದ ಅಸುರರನ್ನಲ್ಲ( **ಮಹದ್ದೇವಾನಾಮಸುರತ್ವಮೇಕಂ** ಎಂದು ಶ್ರುತಿಯಿದೆ). ಮತ್ತು **ಮನ್ಯೇಽಸುರಾನ್ ಭಾಗವತಾನ್** ತ್ರ್ಯಧೀಶೇ, **ಅಸುರಾ ಅಪಿ ಯೇ ವಿಷ್ಣುಂ ಶಂಖಚಕ್ರಗದಾಧರಂ । ಭಕ್ತಿಪೂರ್ವಮುಪಾಸ್ಯಂತೇ ಜ್ಞೇಯಾ ಭಾಗವತಾ ಇತಿ** ಮುಂತಾಗಿ ವಾಕ್ಯಗಳಿವೆ. ಆದ್ದರಿಂದ ಭಕ್ತಿ ಸರ್ವಶ್ರೇಷ್ಠವಾದ್ದರಿಂದ ಅವಶ್ಯ ಸಂಪಾದಿಸಬೇಕೆಂದರ್ಥ. **ದಿವಂ ಅನಯತ್** ಎಂದು ಹೇಳಿದ್ದರಿಂದ ಮೂಲರೂಪದಷ್ಟೇ ಅವತಾರರೂಪಕ್ಕೂ ಮೋಕ್ಷಕೊಡುವ ಶಕ್ತಿಯಿದೆ ಎಂದು ತಿಳಿಸುವರು. ಆ ಕಾಲದಲ್ಲಿದ್ದವರ ಪ್ರತ್ಯಕ್ಷದಿಂದ ಸರ್ವರಿಗೂ ಸೇವೆಯಿಂದ ಮೋಕ್ಷಪ್ರದನೆಂದು ಸಿದ್ಧವಾಯಿತು. ॥೮॥

 

## ಭರತವರ್ಷ - ಶ್ರೀನರನಾರಾಯಣ

**ಭಾರತೇಽಪಿ ವರ್ಷೇ ಭಗವಾನ್ನರನಾರಾಯಣಾಖ್ಯ ಆಕಲ್ಪಾಂತಮುಪಚಿತ ಧರ್ಮಜ್ಞಾನವೈರಾಗ್ಯೈಶ್ವರ್ಯೋಪಶಮೋ ಪರಮಾತ್ಮೋಪಲಂಭೋಽನುಗ್ರಹಾಯಾತ್ಮವತಾಮನುಕಂಪಯಾ ತಪೋಽವ್ಯಕ್ತಗತಿಶ್ಚರತಿ ॥೯॥**

**ಭಾರತೇ ಅಪಿ ವರ್ಷೇ** ಭರತವರ್ಷದಲ್ಲಿ ಆದರೋ **ನರನಾರಾಯಣಾಖ್ಯ** ನರನಾರಾಯಣ ಎಂಬ ಹೆಸರುಗಳುಳ್ಳ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು **ಆಕಲ್ಪಾಂತಂ** ಕಲ್ಪ ಮುಗಿಯುವವರೆಗೂ **ಉಪಚಿತ** ಮಾಡಲ್ಪಟ್ಟ **ಧರ್ಮ** ಪುಣ್ಯ **ಜ್ಞಾನ** ತತ್ತ್ವಜ್ಞಾನ **ವೈರಾಗ್ಯ** ವಿಷಯ ವಿರಕ್ತಿ **ಐಶ್ವರ್ಯ** ಸಂಪತ್ತು **ಉಪಶಮಃ** ಆನಂದವುಳ್ಳವನಾಗಿ **ಪರಮಾತ್ಮೋಪಲಂಭಃ** ಪರಮಾತ್ಮನೇ ಆದ **ಆತ್ಮವತಾಂ** ಜ್ಞಾನಿಗಳಮೇಲಿನ **ಅನುಕಂಪಯಾ** ಕರುಣೆಯಿಂದ **ಅವ್ಯಕ್ತಗತಿಃ** ಯಾರಿಗೂ ಕಾಣದೇ **ತಪಃ** ತಪಸ್ಸನ್ನು **ಚರತಿ** ಆಚರಿಸುವನು.

**ತಂ ಭಗವಾನ್ನಾರದೋ ವರ್ಣಾಶ್ರಮವತೀಭಿರ್ಭಾರತೀಭಿಃ ಪ್ರಜಾಭಿರ್ಭಗವತ್ಪ್ರೋಕ್ತಾಭ್ಯಾಂ ಸಾಂಖ್ಯಯೋಗಾಭ್ಯಾಂ ಭಗವದನುಭಾವೋಪವರ್ಣನಂ ಸಾವರ್ಣೇರುಪದೇಕ್ಷ್ಯಮಾಣಃ ಪರಮಭಕ್ತಿಭಾವೇನೋಪಸರತಿ ಇದಂ ಚೋದಾಹರತಿ ॥೧೦॥**

**ಭಗವತ್ಪ್ರೋಕ್ತಾಭ್ಯಾಂ** ಶ್ರೀಹರಿಯಿಂದ ಉಪದಿಷ್ಟಗಳಾದ **ಸಾಂಖ್ಯಯೋಗಾಭ್ಯಾಂ** ಯಥಾರ್ಥಜ್ಞಾನ ಮತ್ತು ಅದರ ಸಾಧನಗಳಿಂದ, ಸಾಂಖ್ಯ, ಯೋಗ ಎಂಬ ಶಾಸ್ತ್ರಗಳಿಂದ **ಭಗವದನುಭಾವೋಪವರ್ಣನಂ** ಶ್ರೀಹರಿಯ ಮಾಹಾತ್ಮ್ಯವನ್ನು ವರ್ಣಿಸುವ ಪಂಚರಾತ್ರವೆಂಬ ಆಗಮವನ್ನು **ಸಾವರ್ಣೇಃ** ಸಾವರ್ಣಿ ಮನುವಿಗೆ **ಉಪದೇಕ್ಷ್ಯಮಾಣಃ** ಉಪದೇಶ ಮಾಡುವ **ಭಗವಾನ್** ಪೂಜ್ಯರಾದ **ನಾರದಃ** ನಾರದರು **ವರ್ಣಾಶ್ರಮವತೀಭಿಃ** ವರ್ಣಾಶ್ರಮ ಧರ್ಮಗಳನ್ನು ಅನುಸರಿಸುವ **ಭಾರತೀಭಿಃ** ಭರತಖಂಡ ನಿವಾಸಿಗಳಾದ **ಪ್ರಜಾಭಿಃ** ಪ್ರಜೆಗಳಿಂದ ಕೂಡಿಕೊಂಡು **ತಂ** ಆ ತಪೋನಿಷ್ಠನಾದ (ನರ)ನಾರಾಯಣನನ್ನು **ಪರಮಭಕ್ತಿಭಾವೇನ** ಅತಿಶಯ ಭಕ್ತಿಯಿಂದ ರೋಮಾಂಚಿತನಾಗಿ **ಉಪಸರಿತಿ** ಉಪಾಸಿಸುವರು **ಇದಂ ಚ** ಮುಂದೆ ಹೇಳುವ ಮಂತ್ರವನ್ನು **ಉದಾಹರತಿ** ಹೇಳುವರು. ॥೧೦॥

**ಓಂ ನಮೋ ಭಗವತ ಉಪಶಮಶೀಲಾಯೋಪರತಾನಾತ್ಮ್ಯಾಯಾ-ಕಿಂಚನವಿತ್ತಾಯ ಋಷಿಋಷಭಾಯ ನರನಾರಾಯಣಾಯ ಪರಮಹಂಸಾಯ ಪರಮಗುರವೇ ಆತ್ಮಾರಾಮಾಧಿಪತಯೇ ನಮೋ ನಮಃ ಇತಿ ॥೧೧॥**

**ಉಪಶಮಶೀಲಾಯ** ಭಗವನ್ನಿಷ್ಠೆಯೇ ಸ್ವಭಾವವಾಗಿವುಳ್ಳ **ಉಪರತಾನಾತ್ಮ್ಯಾಯ** ದೇಹ ಸಂಬಂಧವಾದ ದುಃಖಾದಿಗಳಿಲ್ಲದ **ಅಕಿಂಚನವಿತ್ತಾಯ** ಏನನ್ನು ಅಪೇಕ್ಷಿಸದೇ ಇದ್ದು ಭಕ್ತರೇ ಹಣದಂತೆ ಪ್ರಿಯವಾಗಿವುಳ್ಳ **ಋಷಿಋಷಭಾಯ** ಋಷಿಶ್ರೇಷ್ಠನಾದ **ಪರಮಹಂಸಾಯ** ಅತ್ಯಂತ ಶುದ್ಧನಾದ **ಪರಮಗುರವೇ** ಉತ್ತಮ ಸಂತೋಷಪಡುವ ಬ್ರಹ್ಮಾದಿಗಳಿಗೆ ಸ್ವಾಮಿಯಾದ **ಭಗವತೇ** ಐಶ್ವರ್ಯಶಾಲಿಯಾದ **ನರನಾರಾಯಣಾಯ** ನರನಾರಾಯಣನಿಗೆ **ನಮೋ ನಮಃ** ನಮಸ್ಕಾರ ಎಂದು ಹೇಳುವರು. ॥೧೧॥

ಉಪರತಾನಾತ್ಮ್ಯಾಯ ಎಂದು ಹೇಳಿದ್ದನ್ನು ವಿಶದಪಡಿಸುತ್ತಾ ಸ್ತುತಿಸುವರು

**ಗಾಯತಿ ಚೇದಂ**

ಮುಂದೆ ಹೇಳುವುದನ್ನು ಗಾನ ಮಾಡುವರು

**ಕರ್ತಾಸ್ಯ ಸರ್ಗಾದಿಷು ಯೋ ನ ಬಧ್ಯತೇ**
**ನ ಹನ್ಯತೇ ದೇಹಗತೋಽಪಿ ದೈಹಿಕೈಃ ।**
**ದ್ರಷ್ಟುರ್ನ ದೃಗ್ಯಸ್ಯ ಗುಣೈರ್ವಿದೂಷ್ಯತೇ**
**ತಸ್ಮೈ ನಮೋಽಸಕ್ತವಿವಿಕ್ತಸಾಕ್ಷಿಣೇ ॥೧೨॥**

**ಅಸ್ಯ** ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ಪ್ರಮಿತವಾದ ಈ ಜಗತ್ತಿನ **ಸರ್ಗಾದಿಷು** ಸೃಷ್ಟಿ, ಸ್ಥಿತಿ, ಲಯಗಳಿಗೆ **ಕರ್ತಾ ಅಪಿ** ಕರ್ತೃವಾದರೂ **ಯಃ** ಯಾವ ನೀನು **ನ ಬಧ್ಯತೇ** ಜೀವರಂತೆ ಸತ್ವಾದಿಗುಣ ಬಂಧನಕ್ಕೆ ಒಳಗಾಗುವುದಿಲ್ಲವೋ (ಬದ್ಧನಲ್ಲವೋ) **ದೇಹಗತೋಽಪಿ** ದೇಹದಲ್ಲಿ ಇದ್ದರೂ **ದೈಹಿಕೈಃ** ದೇಹ ನಿಮಿತ್ತಗಳಾದ ಹಸಿವು, ನೀರಡಿಕೆ, ದುಃಖಗಳಿಂದ **ನ ಹನ್ಯತೇ** ಪೀಡಿತನಾಗುವುದಿಲ್ಲವೋ **ದ್ರಷ್ಟುಃ** ಸ್ವತಂತ್ರವಾಗಿ ನೋಡುವವನಾದ **ಯಸ್ಯ** ಯಾವ ನಿನ್ನ **ದೃಕ್** ಜ್ಞಾನವು **ಗುಣೈಃ** ಪ್ರಾಕೃತ ಗುಣಗಳಿಂದ ದರ್ಶನಕ್ಕೆ ಯೋಗ್ಯವಲ್ಲದ ರೂಪ ಮೊದಲಾದವುಗಳಿಂದ **ನ ವಿದೂಷ್ಯತೇ** ವಿಕಾರ ಹೊಂದುವುದಿಲ್ಲವೋ ಪಾಪಾದಿಗಳಿಂದ ದುಷ್ಟವಾಗುವುದಿಲ್ಲವೋ **ತಸ್ಮೈ** ಅಂತಹ **ಅಸಕ್ತವಿವಿಕ್ತಸಾಕ್ಷಿಣೇ** ಅಸಂಗನೂ, ವಿಲಕ್ಷಣನೂ, ಸಾಕ್ಷಿಯೂ ಆದ **ತೇ** ನಿನಗೆ **ನಮಃ** ನಮಸ್ಕಾರವು.

ಅಸಂಗನಾದ್ದರಿಂದ ಬದ್ಧನಲ್ಲ, ಲೋಕವಿಲಕ್ಷಣನಾದ್ದರಿಂದ ಪೀಡಿತನಲ್ಲ, ಸಾಕ್ಷಿಯಾದ್ದರಿಂದ(ಉದಾಸೀನವಾಗಿ ನೋಡುವುದರಿಂದ) ಪಾಪಾದಿ ಲಿಪ್ತನಲ್ಲವೆಂದು ಅಸಕ್ತ ಮೊದಲಾದ ವಿಶೇಷಣಗಳು 'ಬದ್ಧನು' ಇತ್ಯಾದಿ ಆಗದೇ ಇರಲು ಕಾರಣವನ್ನು ತಿಳಿಸುವವು. ||೧೨||

ಉಪಶಮಶೀಲಾಯ ಎಂದು ನಾರಾಯಣನಿಗೆ ಧ್ಯಾನಯೋಗನಿಷ್ಠತ್ವವನ್ನು ಲೋಕ ಶಿಕ್ಷಣಕ್ಕಾಗಿ ಹೇಳಿತ್ತು. ಆ ಧ್ಯಾನಯೋಗದ ಸಾಮರ್ಥ್ಯವನ್ನು ನಿರೂಪಿಸುವರು

**ಇದಂ ಹಿ ಯೋಗೇಶ್ವರ ಯೋಗನೈಪುಣಂ**
**ಹಿರಣ್ಯಗರ್ಭೋ ಭಗವಾನ್ ಜಗಾದ ಯತ್ ।**
**ಯದಂತಕಾಲೇ ತ್ವಯಿ ನಿರ್ಗುಣೇ ಮನೋ**
**ಭಕ್ತ್ಯಾ ವಿಧಾಯೋಜ್ಝತಿ ದುಷ್ಕಲೇವರಮ್ ||೧೩||**

**ಹೇ ಯೋಗೇಶ್ವರ** ಯೋಗೇಶ್ವರನೇ **ಭಗವಾನ್** ಪೂಜ್ಯರಾದ **ಹಿರಣ್ಯಗರ್ಭಃ** ಬ್ರಹ್ಮದೇವರು **ಯತ್** ಯಾವ **ಯೋಗನೈಪುಣಂ** ಧ್ಯಾನಯೋಗದ ನಿಪುಣತೆಯನ್ನು **ಜಗಾದ** ಹೇಳಿದರೋ **ತತ್** ಅದು **ಇದಂ ಹಿ** ಇದೇ ಅಲ್ಲವೇ **ಅಂತಕಾಲೇ** ಮರಣಕಾಲದಲ್ಲಿ **ನಿರ್ಗುಣೇ** ಪ್ರಾಕೃತಗುಣರಹಿತನಾದ **ತ್ವಯಿ** ನಿನ್ನಲ್ಲಿ **ಭಕ್ತ್ಯಾ** ಭಕ್ತಿಯಿಂದ **ಮನಃ** ಮನಸ್ಸನ್ನು **ನಿಧಾಯ** ಇಟ್ಟು **ದುಷ್ಕಲೇವರಂ** ದುಃಖಾದಿಗಳಿಗೆ ಆಶ್ರಯವಾದ್ದರಿಂದ ದುಷ್ಟವಾದ ದೇಹವನ್ನು **ಉಜ್ಝತಿ ಇತಿ ಯತ್** ಬಿಡುವುದೆಂಬುದೇನುಂಟೋ ಇದೇ ಬ್ರಹ್ಮದೇವರು ಹೇಳಿದ ಯೋಗ ನಿಪುಣತೆಯೆಂದರ್ಥ. ಇದರಿಂದ ನಾರಾಯಣದೇವರು ಮಾಡುತ್ತಿರುವ ಧ್ಯಾನಯೋಗವು ಏನು ಲೋಕಶಿಕ್ಷಣ ಮಾಡಿತು ಎಂದು ತಿಳಿಸಿದಂತಾಯಿತು. ಅಂತೂ ಮರಣ ಕಾಲದಲ್ಲಿ ಭಗವಂತನಲ್ಲಿ ಮನಸ್ಸು ನಿಲ್ಲುವಂತೆ ಧ್ಯಾನಪಾಟವ ಸಂಪಾದಿಸಬೇಕು ಎಂದರ್ಥ. ಇಲ್ಲವಾದರೆ ಧ್ಯಾನಾಭ್ಯಾಸ ಶ್ರಮ ಅವನಿಗೆ ವ್ಯರ್ಥವೆಂದು ಹೇಳುವರು.

**ಯಥೈಹಿಕಾಮುಷ್ಮಿಕಕಾಮಲಂಪಟಃ**
**ಸುತೇಷು ದಾರೇಷು ಧನೇಷು ಚಿಂತಯನ್ ।**

**ಓಂ ನಮೋ ಭಗವತ ಉಪಶಮಶೀಲಾಯೋಪರತಾನಾತ್ಮ್ಯಾಯಾ-ಕಿಂಚನವಿತ್ತಾಯ ಋಷಿಋಷಭಾಯ ನರನಾರಾಯಣಾಯ ಪರಮಹಂಸಾಯ ಪರಮಗುರವೇ ಆತ್ಮಾರಾಮಾಧಿಪತಯೇ ನಮೋ ನಮಃ ಇತಿ ।।೧೧।।**

**ಉಪಶಮಶೀಲಾಯ** ಭಗವನ್ನಿಷ್ಠೆಯೇ ಸ್ವಭಾವವಾಗಿವುಳ್ಳ **ಉಪರತಾನಾತ್ಮ್ಯಾಯ** ದೇಹ ಸಂಬಂಧವಾದ ದುಃಖಾದಿಗಳಿಲ್ಲದ **ಅಕಿಂಚನವಿತ್ತಾಯ** ಏನನ್ನು ಅಪೇಕ್ಷಿಸದೇ ಇದ್ದು ಭಕ್ತರೇ ಹಣದಂತೆ ಪ್ರಿಯವಾಗಿವುಳ್ಳ **ಋಷಿಋಷಭಾಯ** ಋಷಿಶ್ರೇಷ್ಠನಾದ **ಪರಮಹಂಸಾಯ** ಅತ್ಯಂತ ಶುದ್ಧನಾದ **ಪರಮಗುರವೇ** ಉತ್ತಮ ಸಂತೋಷಪಡುವ ಬ್ರಹ್ಮಾದಿಗಳಿಗೆ ಸ್ವಾಮಿಯಾದ **ಭಗವತೇ** ಐಶ್ವರ್ಯಶಾಲಿಯಾದ **ನರನಾರಾಯಣಾಯ** ನರನಾರಾಯಣನಿಗೆ **ನಮೋ ನಮಃ** ನಮಸ್ಕಾರ ಎಂದು ಹೇಳುವರು. ।।೧೧।।

ಉಪರತಾನಾತ್ಮ್ಯಾಯ ಎಂದು ಹೇಳಿದ್ದನ್ನು ವಿಶದಪಡಿಸುತ್ತಾ ಸ್ತುತಿಸುವರು

**ಗಾಯತಿ ಚೇದಂ**

ಮುಂದೆ ಹೇಳುವುದನ್ನು ಗಾನ ಮಾಡುವರು

**ಕರ್ತಾಸ್ಯ ಸರ್ಗಾದಿಷು ಯೋ ನ ಬಧ್ಯತೇ**
**ನ ಹನ್ಯತೇ ದೇಹಗತೋಽಪಿ ದೈಹಿಕೈಃ ।**
**ದ್ರಷ್ಟುರ್ನ ದೃಗ್ಯಸ್ಯ ಗುಣೈರ್ವಿದೂಷ್ಯತೇ**
**ತಸ್ಮೈ ನಮೋಽಸಕ್ತವಿವಿಕ್ತಸಾಕ್ಷಿಣೇ ।।೧೨।।**

**ಅಸ್ಯ** ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ಪ್ರಮಿತವಾದ ಈ ಜಗತ್ತಿನ **ಸರ್ಗಾದಿಷು** ಸೃಷ್ಟಿ, ಸ್ಥಿತಿ, ಲಯಗಳಿಗೆ **ಕರ್ತಾ ಅಪಿ** ಕರ್ತೃವಾದರೂ **ಯಃ** ಯಾವ ನೀನು **ನ ಬಧ್ಯತೇ** ಜೀವರಂತೆ ಸತ್ವಾದಿಗುಣ ಬಂಧನಕ್ಕೆ ಒಳಗಾಗುವುದಿಲ್ಲವೋ (ಬದ್ಧನಲ್ಲವೋ) **ದೇಹಗತೋಽಪಿ** ದೇಹದಲ್ಲಿ ಇದ್ದರೂ **ದೈಹಿಕೈಃ** ದೇಹ ನಿಮಿತ್ತಗಳಾದ ಹಸಿವು, ನೀರಡಿಕೆ, ದುಃಖಗಳಿಂದ **ನ ಹನ್ಯತೇ** ಪೀಡಿತನಾಗುವುದಿಲ್ಲವೋ **ದ್ರಷ್ಟುಃ** ಸ್ವತಂತ್ರವಾಗಿ ನೋಡುವವನಾದ **ಯಸ್ಯ** ಯಾವ ನಿನ್ನ **ದೃಕ್** ಜ್ಞಾನವು **ಗುಣೈಃ** ಪ್ರಾಕೃತ ಗುಣಗಳಿಂದ ದರ್ಶನಕ್ಕೆ ಯೋಗ್ಯವಲ್ಲದ ರೂಪ ಮೊದಲಾದವುಗಳಿಂದ **ನ ವಿದೂಷ್ಯತೇ** ವಿಕಾರ ಹೊಂದುವುದಿಲ್ಲವೋ ಪಾಪಾದಿಗಳಿಂದ ದುಷ್ಟವಾಗುವುದಿಲ್ಲವೋ **ತಸ್ಮೈ** ಅಂತಹ **ಅಸಕ್ತವಿವಿಕ್ತಸಾಕ್ಷಿಣೇ** ಅಸಂಗನೂ, ವಿಲಕ್ಷಣನೂ, ಸಾಕ್ಷಿಯೂ ಆದ **ತೇ** ನಿನಗೆ **ನಮಃ** ನಮಸ್ಕಾರವು.

ಅಸಂಗನಾದ್ದರಿಂದ ಬದ್ಧನಲ್ಲ, ಲೋಕವಿಲಕ್ಷಣನಾದ್ದರಿಂದ ಪೀಡಿತನಲ್ಲ, ಸಾಕ್ಷಿಯಾದ್ದರಿಂದ(ಉದಾಸೀನವಾಗಿ ನೋಡುವುದರಿಂದ) ಪಾಪಾದಿ ಲಿಪ್ತನಲ್ಲವೆಂದು ಅಸಕ್ತ ಮೊದಲಾದ ವಿಶೇಷಣಗಳು 'ಬದ್ಧನು' ಇತ್ಯಾದಿ ಆಗದೇ ಇರಲು ಕಾರಣವನ್ನು ತಿಳಿಸುವವು. ||೧೨||

ಉಪಶಮಶೀಲಾಯ ಎಂದು ನಾರಾಯಣನಿಗೆ ಧ್ಯಾನಯೋಗನಿಷ್ಠತ್ವವನ್ನು ಲೋಕ ಶಿಕ್ಷಣಕ್ಕಾಗಿ ಹೇಳಿತ್ತು. ಆ ಧ್ಯಾನಯೋಗದ ಸಾಮರ್ಥ್ಯವನ್ನು ನಿರೂಪಿಸುವರು

**ಇದಂ ಹಿ ಯೋಗೇಶ್ವರ ಯೋಗನೈಪುಣಂ**
**ಹಿರಣ್ಯಗರ್ಭೋ ಭಗವಾನ್ ಜಗಾದ ಯತ್ ।**
**ಯದಂತಕಾಲೇ ತ್ವಯಿ ನಿರ್ಗುಣೇ ಮನೋ**
**ಭಕ್ತ್ಯಾ ವಿಧಾಯೋಜ್ಝತಿ ದುಷ್ಕಲೇವರಮ್ ||೧೩||**

**ಹೇ ಯೋಗೇಶ್ವರ** ಯೋಗೇಶ್ವರನೇ, **ಭಗವಾನ್** ಪೂಜ್ಯರಾದ **ಹಿರಣ್ಯಗರ್ಭಃ** ಬ್ರಹ್ಮದೇವರು **ಯತ್** ಯಾವ **ಯೋಗನೈಪುಣಂ** ಧ್ಯಾನಯೋಗದ ನಿಪುಣತೆಯನ್ನು **ಜಗಾದ** ಹೇಳಿದರೋ **ತತ್** ಅದು **ಇದಂ ಹಿ** ಇದೇ ಅಲ್ಲವೇ **ಅಂತಕಾಲೇ** ಮರಣಕಾಲದಲ್ಲಿ **ನಿರ್ಗುಣೇ** ಪ್ರಾಕೃತಗುಣರಹಿತನಾದ **ತ್ವಯಿ** ನಿನ್ನಲ್ಲಿ **ಭಕ್ತ್ಯಾ** ಭಕ್ತಿಯಿಂದ **ಮನಃ** ಮನಸ್ಸನ್ನು **ನಿಧಾಯ** ಇಟ್ಟು **ದುಷ್ಕಲೇವರಂ** ದುಃಖಾದಿಗಳಿಗೆ ಆಶ್ರಯವಾದ್ದರಿಂದ ದುಷ್ಟವಾದ ದೇಹವನ್ನು **ಉಜ್ಝತಿ ಇತಿ ಯತ್** ಬಿಡುವುದೆಂಬುದೇನುಂಟೋ ಇದೇ ಬ್ರಹ್ಮದೇವರು ಹೇಳಿದ ಯೋಗ ನಿಪುಣತೆಯೆಂದರ್ಥ. ಇದರಿಂದ ನಾರಾಯಣದೇವರು ಮಾಡುತ್ತಿರುವ ಧ್ಯಾನಯೋಗವು ಏನು ಲೋಕಶಿಕ್ಷಣ ಮಾಡಿತು ಎಂದು ತಿಳಿಸಿದಂತಾಯಿತು. ಅಂತೂ ಮರಣ ಕಾಲದಲ್ಲಿ ಭಗವಂತನಲ್ಲಿ ಮನಸ್ಸು ನಿಲ್ಲುವಂತೆ ಧ್ಯಾನಪಾಟವ ಸಂಪಾದಿಸಬೇಕು ಎಂದರ್ಥ. ಇಲ್ಲವಾದರೆ ಧ್ಯಾನಾಭ್ಯಾಸ ಶ್ರಮ ಅವನಿಗೆ ವ್ಯರ್ಥವೆಂದು ಹೇಳುವರು.

**ಯಥೈಹಿಕಾಮುಷ್ಮಿಕಕಾಮಲಂಪಟಃ**
**ಸುತೇಷು ದಾರೇಷು ಧನೇಷು ಚಿಂತಯನ್ ।**

**ಸಂಕೇತ ವಿದ್ವಾನ್ ಕುಕಲೇವರಾತ್ಯಯಾ-**
**ದ್ಯಸ್ತಸ್ಯ ಯತ್ನಃ ಶ್ರಮ ಏವ ಕೇವಲಂ** ॥೧೪॥

**ಯಥಾ** ಹೇಗೆ **ಐಹಿಕ** ಈ ಲೋಕದಲ್ಲಿ ಸಿಗುವ **ಆಮುಷ್ಮಿಕ** ಸ್ವರ್ಗಾದಿಗಳಲ್ಲಿ ದೊರೆಯುವ **ಕಾಮಲಂಪಟಃ** ಕಾಮಗಳಲ್ಲಿ ಆಸಕ್ತನಾದ ಅಜ್ಞಾನಿಯು **ಸುತೇಷು** ಮಕ್ಕಳಲ್ಲಿ **ದಾರೇಷು** ಹೆಂಡತಿಯಲ್ಲಿ **ಧನೇಷು** ಹಣದಲ್ಲಿ ಇವುಗಳ ವಿಷಯದಲ್ಲಿ **ಚಿಂತಯನ್** ನಾನು ಸತ್ತರೆ ದಿಕ್ಕಿಲ್ಲದ ಇವರು ಅನ್ಯಾಯವಾಗಿ ಹಾಳಾಗುವರು ಎಂದು ಆಲೋಚಿಸುತ್ತ **ಕುಕಲೇವರಾತ್ಯಯಾತ್** ಕುತ್ಸಿತ ದೇಹ ಬಿಡಲು **ಶಂಕತೇ** ಹೆದರುವನೋ **ತಥಾ** ಹಾಗೆ **ವಿದ್ವಾನ್** ಅಪರೋಕ್ಷಿಯೂ **ಶಂಕೇತ್ ಚೇತ್** ಹೆದರಿದ್ದೇ ಆದರೆ **ತಸ್ಯ** ಆ ಅಪರೋಕ್ಷಿಯ **ಯತ್ನಃ** ಶಾಸ್ತ್ರ ಶ್ರವಣಾದಿಗಳಲ್ಲಿ ಪ್ರಯತ್ನವು ಯೋಗಾಭ್ಯಾಸ ಪ್ರಯತ್ನವು ಯಾವುದಿದೆಯೋ ಅದು **ಕೇವಲಂ ಶ್ರಮಃ ಏವ** ಏನೂ ಪ್ರಯೋಜನಕಾರಿಯಾಗದಿದ್ದರಿಂದ ಶ್ರಮಮಾತ್ರವೇ ಅಂದರೆ ವ್ಯರ್ಥವೆಂದು ಅಭಿಪ್ರಾಯ. ಆದ್ದರಿಂದ ಸಾವಿಗೆ ಹೆದರಬಾರದು. ॥೧೪॥

ಇಂಥಹ ಯೋಗನೈಪುಣ್ಯವನ್ನು ತಮಗೆ ಕೊಡೆಂದು ಪ್ರಾರ್ಥಿಸುವರು

**ತನ್ನಃ ಪ್ರಭೋ ತ್ವಂ ಕುಕಲೇವರಾರ್ಪಿತಾಂ**
**ತ್ವನ್ಮಾಯಯಾಹಂಮಮತಾಮಧೋಕ್ಷಜ ।**
**ಭಿಂದ್ಯಾಮ ಯೇನಾಶು ವಯಂ ಸುದುರ್ಭಿದಾಂ**
**ವಿಧೇಹಿ ಯೋಗಂ ತ್ವಯಿ ನಃ ಸುಭಾವಿತಮ್** ॥೧೫॥

**ಪ್ರಭೋ ಅಧೋಕ್ಷಜ** ಸಮರ್ಥನಾದ ಅಧೋಕ್ಷಜನೇ **ತತ್** ಯೋಗನೈಪುಣ್ಯವು ಆವಶ್ಯಕವಾದ್ದರಿಂದ **ಸುದುರ್ಭಿದಾಂ** ಅಜ್ಞಾನಿಗಳಿಂದ ಪರಿಹರಿಸಿಕೊಳ್ಳಲಾಗದ **ತ್ವನ್ಮಾಯಯಾ** ನಿನ್ನ ಬಂಧಕ ಶಕ್ತಿಯಿಂದಲೇ **ಕುಕಲೇವರಾರ್ಪಿತಾಂ** ಕುತ್ಸಿತ ದೇಹ ಮತ್ತು ಅದರ ಅನುಬಂಧಿಗಳಲ್ಲಿ ಅಜ್ಞಾನಿಗಳಿಂದ ಮಾಡಲ್ಪಡುವ **ಅಹಂಮಮತಾಂ** ಅಹಂಕಾರ ಮಮಕಾರಗಳನ್ನು **ನಃ** ಪ್ರಾರಬ್ಧಕರ್ಮದಿಂದಾಗಿ ಜ್ಞಾನಿಗಳಾದ ನಮಗೂ ಬಂದಿರುವುದನ್ನು **ಯೇನ** ಯಾವ ಯೋಗನೈಪುಣ್ಯದಿಂದ **ಆಶು** ಶೀಘ್ರವಾಗಿ **ವಯಂ** ನಾವು **ಭಿಂದ್ಯಾಮ** ಪರಿಹರಿಸಿಕೊಳ್ಳುವವೋ **ತತ್** ಅಂತಹ **ತ್ವಯಿ** ನಿನ್ನಲ್ಲಿ **ಸುಭಾವಿತಂ** ಭಕ್ತಿಯಿಂದ ಅಭಿವೃದ್ಧವಾದ **ಯೋಗಂ** ಯೋಗ ನೈಪುಣ್ಯವನ್ನು **ವಿಧೇಹಿ** ವಿಶೇಷವಾಗಿ ಉಂಟು ಮಾಡು. ನಾರದರು ಅಪರೋಕ್ಷಜ್ಞಾನಿಗಳು. ಅವರಿಗೆ ಅಹಂಮಮತಾದಿ

 

ದೋಷಗಳಿಲ್ಲ. ಆದರೂ ಅಜ್ಞಾನಿಗಳಿಗೆ ಮೋಕ್ಷಪ್ರತಿಬಂಧಕವಾದ ಈ ಅಹಂಮಮತೆ ಕರ್ಮನಿಮಿತ್ತವಾಗಿ ಯಾವಾಗಲಾದರೂ ಅಪರೋಕ್ಷಜ್ಞಾನಿಗಳಿಗೂ ಉಂಟಾದಲ್ಲಿ ಅದನ್ನು ಶ್ರೀಹರಿಯ ಅನುಗ್ರಹದಿಂದ ಹೋಗಲಾಡಿಸಿಕೊಳ್ಳುವರು ಎಂದು ತಾತ್ಪರ್ಯ ತಿಳಿಸುವರು.

ತಾತ್ಪರ್ಯ - ''ಯಸ್ಯ ಸಮ್ಯಕ್ಷ ಭವತಿ ಜ್ಞಾನಂ ಭಕ್ತಿಸ್ತಥೈವ ಚ ।
ನಿಶ್ಚಿತಸ್ತಸ್ಯ ಮೋಕ್ಷಃ ಸ್ಯಾತ್ ಸರ್ವಪಾಪಕೃತೋಽಪಿ ತು ।
ಯೋ ಮಮತ್ವಾದಿನಾ ದೋಷಃ ಸ ತ್ವನ್ಯವಿಷಯೇ(ಸ್ಮೃತ) ಇತಿ ಚ ॥

ಅಪರೋಕ್ಷ ಜ್ಞಾನವೂ, ಭಕ್ತಿಯೂ ಶ್ರೀಹರಿಯಲ್ಲಿ ಯಾರಿಗೆ ಉಂಟಾಗಿರುವುದೋ ಅವನು ಯಾವಾಗಲಾದರೂ ಪ್ರಾರಬ್ಧಕರ್ಮದಿಂದ ಅಹಂಕಾರಮಮಕಾರಗಳಿಂದ ನಿಷಿದ್ಧಕರ್ಮ ಮಾಡಿದರೂ ಮೋಕ್ಷವನ್ನು ನಿಶ್ಚಯವಾಗಿಯೂ ಹೊಂದುತ್ತಾನೆ. ಅಹಂಕಾರ ಮಮಕಾರಗಳಿಗೆ ಪ್ರತಿಬಂಧಕತ್ವ ಹೇಳಿದ್ದು (ಅಜ್ಞಾನಿಗಳಿಗೆ) ಪರೋಕ್ಷ ಜ್ಞಾನಿಗಳಿಗೆ ಎಂದು ಭಾವ. ಜ್ಞಾನಿಗಳಿಗೆ ಉತ್ತರಾಘಕ್ಕೆ ಅಶ್ಲೇಷ ಹೇಳಿದೆ. ಈ ಅಭಿಪ್ರಾಯದಿಂದ ಪ್ರಾರ್ಥನೆ. ॥೧೫॥

ಈಗ ಈ ಭಾರತ ಖಂಡದಲ್ಲಿರುವ ಬೆಟ್ಟಗಳು ಅವುಗಳಿಂದ ಹುಟ್ಟಿದ ನದಿಗಳನ್ನು ಪ್ರಧಾನವಾಗಿ ಹೇಳುತ್ತಾರೆ

**ಭಾರತೇಽಪ್ಯಸ್ಮಿನ್ವರ್ಷೇ ಸರಿಚ್ಛೈಲಾಃ ಸಂತಿ ಬಹವೋ ಮಲಯೋ ಮಂದರಪ್ರಸ್ಥೋ ಮೈನಾಕಸ್ತ್ರಿಕೂಟ ಋಷಭಃ ಕನಕಃ ಕೋಸಲಃ ಸಹ್ಯೋ ವೇದಗಿರಿಃ ಋಷ್ಯಮೂಕಃ ಶ್ರೀಶೈಲೋ ವೇಂಕಟೋ ಮಹೇಂದ್ರೋ ವಾರಿಧಾರೋ ವಿಂಧ್ಯಃ ಶುಕ್ತಿಮಾನ್ಯಕ್ಷಗಿರಿಃ ಪಾರಿಯಾತ್ರೋ ದ್ರೋಣಶ್ಚಿತ್ರಕೂಟೋ ಗೋವರ್ಧನೋ ರೈವತಕಃ ಕಕುಭೋ ನೀಲಃ ಕೋಕಾಮುಖ ಇಂದ್ರಕೀಲಕೋ ಹಿಮಗಿರಿರಿತಿ ಚಾನ್ಯೇ ಚ ಶತಶಃ ಸಹಸ್ರಶಃ ಶೈಲಾಸ್ತೇಷಾಂ ನಿತಂಬಪ್ರಭವಾ ನದಾ ನದ್ಯಶ್ಚ ಸಂತ್ಯಸಂಖ್ಯಾತಾಃ ॥೧೬॥**

**ಅಸ್ಮಿನ್ ಭಾರತೇ ವರ್ಷೇಽಪಿ** ಇಲಾವೃತಾದಿಗಳಲ್ಲಿ ಅಷ್ಟೇ ಅಲ್ಲ ಈ ಭಾರತ ಖಂಡದಲ್ಲಿಯೂ **ಬಹವಃ** ಅನೇಕ **ಸರಿತ್ ಶೈಲಾಃ** ನದಿಗಳೂ ಬೆಟ್ಟಗಳೂ **ಸಂತಿ** ಇರುವವು. **ಮಲಯ, ಮಂದರಪ್ರಸ್ಥ** (ಮಂಗಳಪ್ರಸ್ಥ), **ಮೈನಾಕ, ತ್ರಿಕೂಟ, ಋಷಭ, ಕನಕ, ಕೋಸಲ**(ಕೋಲ್ಲಕ ಅಥವಾ ಕೊಲ್ಲ), **ಸಹ್ಯ, ವೇದಗಿರಿ,**

**ಋಷ್ಯಮೂಕ**, **ಶ್ರೀಶೈಲ**, **ವೇಂಕಟ**, **ಮಹೇಂದ್ರ**, **ವಾರಿಧಾರ**, **ವಿಂಧ್ಯ ಶುಕ್ತಿಮಂತ**, **ಋಕ್ಷಗಿರಿ (ದಕ್ಷಗಿರಿ)**, **ಪಾರಿಯಾತ್ರ**, **ದ್ರೋಣ**, **ಚಿತ್ರಕೂಟ**, **ಗೋವರ್ಧನ**, **ರೈವತಕ**, **ಕಕುಭ**, **ನೀಲ**, **ಕೋಕಾಮುಖ**, **ಇಂದ್ರಕೀಲ**(ಶ) **ಹಿಮಗಿರಿ (ಕಾಮಗಿರಿ) ಇತಿ** ಎಂದೂ **ಅನ್ಯೇ ಚ ಶೈಲಾಃ** ಇವುಗಳಲ್ಲದೆ ಬೇರೆ ಪರ್ವತಗಳು **ಶತಶಃ** ನೂರುಗಟ್ಟಲೇ **ಸಹಸ್ರಶಃ** ಸಾವಿರಗಟ್ಟಲೇ **ಸಂತಿ** ಇರುವವು. **ತೇಷಾಂ** ಪರ್ವತಗಳ **ನಿತಂಬಪ್ರಭವಾಃ** ತಪ್ಪಲುಗಳಿಂದ ಹೊರಬಂದ **ಅಸಂಖ್ಯಾತಾಃ** ಎಣಿಸಲಾಗದ **ನದಾಃ** ಗಂಡು ನದಿಗಳು **ನದ್ಯಃ** ಹೆಣ್ಣು ನದಿಗಳೂ **ಸಂತಿ** ಇವೆ. ।।೧೬।।

**ಏತಾಸಾಮಾಪೋ ಭಾರತ್ಯಃ ಪ್ರಜಾಃ ನಾಮಭಿರೇವ ಪುನಂತೀನಾಂ ಆತ್ಮನಾ ಚೋಪಸ್ಪೃಶಂತಿ ।।೧೭।।**

**ಭಾರತ್ಯಃ ಪ್ರಜಾಃ** ಭಾರತ ಭೂಮಿಯ ಪ್ರಜೆಗಳು(ಜನರು) **ನಾಮಭಿಃ ಏವ** ಹೆಸರುಗಳಿಂದಲೇ **ಪುನಂತೀನಾಂ** ಪವಿತ್ರಗೊಳಿಸುವ **ಏತಾಸಾಂ** ಈ ನದಿಗಳ **ಆಪಃ** ನೀರನ್ನು **ಆತ್ಮನಾ** ದೇಹದಿಂದ **ಚ** ಅಂತರವಾಗಿಯೂ **ಉಪಸ್ಪೃಶಂತಿ** ಆಚಮನ ಸ್ನಾನ ಪಾನಗಳಿಂದ ಉಪಯೋಗಿಸುವರು. ।।೧೭।।

ನದಿಗಳನ್ನು ಹೇಳುವರು

**ಚಂದ್ರವಟಾ**, **ತಾಮ್ರಪರ್ಣೀ**, **ಅವಟೋದಕಾ**, **ಕೃತಮಾಲಾ**,**ವೈಹಾಯಸೀ**, **ಕಾವೇರೀ**, **ವೇಣೀ**, **ಪಯೋದಾ**, **ಯಮುನಾ**, **ಸರಸ್ವತೀ**, **ಶರ್ಕರಾವರ್ತಾ**, **ತುಂಗಭದ್ರಾ** , **ಕೃಷ್ಣಾ**, **ಭೀಮರಥೀ**, **ಗೋದಾವರೀ**, **ನಿರ್ವಿಂಧ್ಯಾ** , **ಪಯೋಷ್ಣೀ**, **ತಾಪೀ**, **ಸುರಸಾ**, **ನರ್ಮದಾ**, **ಚರ್ಮಣ್ವತೀ**, **ಸಿಂಧುಃ**, **ಅಂಧಃ**, **ಶೋಣಶ್ಚ**, **ಮಹಾನದೀ**, **ವೇದಸ್ಮೃತಿ**, **ಋಷಿಕುಲ್ಯಾ** , **ತ್ರಿಸೋಮಾ**, **ಕೌಶಿಕೀ**, **ಮಂದಾಕಿನೀ**, **ದೃಷದ್ವತೀ**, **ಗೋಮತೀ**, **ಸರಯೂ**, **ಓಘುವತೀ**, **ಸಪ್ತಶತೀ**, **ಘೋಷಣಾ**, **ಸುಷೋಮಾ**, **ಶತಮಾಲಾ**, **ಚಂದ್ರಭಾಗಾ**, **ಶತದ್ರು** , **ಮರುದ್ಧೃತಾ**, **ವಿತಸ್ತಾ**, **ಅಸಿಕ್ನೀ**, **ವಿಶ್ವೇತಿ ಮಹಾನದ್ಯಃ** ।।೧೮।।

ಈ ಹೆಸರಿನ ಮಹಾನದಿಗಳು ಇವೆ. ಇವುಗಳಲ್ಲಿ **ಅಂಧಃ**, **ಸೋಮಃ** ಇವೆರಡು ನದಿಗಳು. ಗಂಗಾನದಿಯನ್ನು ಹಿಂದೆಯೇ ಹೇಳಿದ್ದರಿಂದ ಇಲ್ಲಿ ಹೇಳಿಲ್ಲ. ಕಾವೇರಿಯನ್ನು ಪ್ರತ್ಯೇಕ ಹೇಳಿದ್ದರಿಂದ ಮರುದ್ಧೃತಾ ಎಂಬುದು ಬೇರೆ ನದಿ ಎಂದು

 

ತಿಳಿಯಬೇಕು. ವಿಜಯಧ್ವಜರ ಪಾಠದಲ್ಲಿ ಮಂದಾಕೀನೀ ಎಂದು ಗಂಗೆಯನ್ನೂ ಹೇಳಿರುವರು. ।।೧೮।।

**ಅಸ್ಮಿನ್ನೇವ ವರ್ಷೇ ಪುರುಷೈರ್ಲಬ್ಧಜನ್ಮಭಿಃ ಶುಕ್ಲಲೋಹಿತಕೃಷ್ಣವರ್ಣೇನ ಸ್ವಾರಬ್ಧೇನ ಕರ್ಮಣಾ ದಿವ್ಯಮಾನುಷನಾರಕಗತಯೋ ಬಹ್ವ್ಯಃ ಆತ್ಮನ ಆನುಪೂರ್ವೇಣ ಸರ್ವಾಹ್ಯೇವ ಸರ್ವೇಷಾಂ ವಿಧೀಯಂತೇ ಯಥಾವರ್ಣ-ವಿಧಾನಮಪವರ್ಗಶ್ಚ ಭವತಿ ।।೧೯।।**

**ಅಸ್ಮಿನ್ ಏವ ವರ್ಷೇ** ಈ ಭರತ ಖಂಡದಲ್ಲಿಯೇ **ಲಬ್ಧಜನ್ಮಭಿಃ ಪುರುಷೈಃ** ಹುಟ್ಟನ್ನು ಪಡೆದ ಜನರಿಂದ **ಶುಕ್ಲ** ಸಾತ್ವಿಕ **ಲೋಹಿತ** ರಾಜಸ **ಕೃಷ್ಣವರ್ಣೇನ** ತಾಮಸವೆಂಬ **ಸ್ವಾರಬ್ಧೇನ ಕರ್ಮಣಾ** ತನ್ನ ಫಲವನ್ನು ಕೊಡಲಾರಂಭಿಸಿದ ತಾವು ಮಾಡಿದ ಕರ್ಮಗಳಿಂದ **ಆನುಪೂರ್ವೇಣ** ಒಂದಾದಮೇಲೊಂದು ಕ್ರಮವಾಗಿ **ಬಹ್ವ್ಯಃ** ಅನೇಕ **ದಿವ್ಯ** ಸಾತ್ವಿಕರಿಂದ ಸ್ವರ್ಗ **ಮಾನುಷ** ರಾಜಸರಿಂದ ಭೂಮಿ **ನಾರಕ** ತಾಮಸರಿಂದ **ನರಕಗತಯಃ** ನರಕವಾಸಗಳು **ಸರ್ವಂ** ಎಲ್ಲವೂ **ಸರ್ವೇಷಾಂ** ಎಲ್ಲರಿಗೂ **ಆತ್ಮನಃ** ಶ್ರೀಹರಿಯಿಂದ **ವಿಧೀಯಂತೇ** ಉಂಟಾಗುವುವು **ಹಿ** ಇದು ಪ್ರಮಾಣ ಸಿದ್ಧ **ಚ** ಸ್ವರ್ಗಾದಿಗತಿಗಳಷ್ಟೇ ಅಲ್ಲ ಸಂಸಾರ ದುಃಖವನ್ನು ಕಳೆಯುವ **ಅಪವರ್ಗಃ** ಮೋಕ್ಷವೂ **ಯಥಾವರ್ಣವಿಧಾನಂ** ವರ್ಣಧರ್ಮಕ್ಕನುಗುಣವಾಗಿ **ಭವತಿ** ಆಗುವುದು. ।।೧೯।।

ಸಾಧನ ಸಹಿತ ಮೋಕ್ಷ ಸ್ವರೂಪವನ್ನು ತಿಳಿಸುವರು

**ಯೋಽಸೌ ಭಗವತಿ ಸರ್ವಾತ್ಮನ್ಯನಾತ್ಮ್ಯೇಽನಿರುಕ್ತೇಽನಿಲಯನೇ ಪರಮಾತ್ಮನಿ ವಾಸುದೇವೇಽನನ್ಯಭಕ್ತಿಯೋಗಲಕ್ಷಣೋ ನಾನಾಗತಿನಿಮಿತ್ತಾ-ವಿದ್ಯಾಗ್ರಂಥಿರಂಧನದ್ವಾರೇಣ ಯದಾ ಹಿ ಮಹಾಪುರುಷಸಂಗತಿಃ ಏತದೇವ ಹಿ ದೇವಾ ಗಾಯಂತಿ ।।೨೦।।**

**ಯದಾ** ಯಾವಾಗ **ಮಹಾಪುರುಷಸಂಗತಿಃ** ಶ್ರೀಹರಿಪರಾಯಣರಾದ ಮಹನೀಯರ ಸಹವಾಸವು **ಭವತಿ** ಆಗುವುದೋ **ತದಾ** ಆಗ **ನಾನಾಗತಿನಿಮಿತ್ತ** ಸ್ವರ್ಗ ಭೂ ನರಕಕ್ಕೆ ಮುಂತಾದ ಅನೇಕ ಗತಿಗಳಿಗೆ ಕಾರಣವಾದ **ಅವಿದ್ಯಾಗ್ರಂಥಿ** ಅಜ್ಞಾನವೆಂಬ ಗಂಟಿನ **ರಂಧನ** ಸುಡುವ **ದ್ವಾರೇಣ** ಮೂಲಕ **ಯಃ** ಯಾವ **ಅಸೌ** ಈ **ಸರ್ವಭೂತಾತ್ಮನಿ** ಎಲ್ಲ ಪ್ರಾಣಿಗಳ ಅಂತರ್ಯಾಮಿಯಾದ **ಅನಾತ್ಮ್ಯೇ** ಜೀವ

ಧರ್ಮಗಳಾದ ಅಜ್ಞಾನಾದಿಗಳಿಲ್ಲದ **ಅನಿರುಕ್ತೇ** ವೇದಗಳಿಂದಲೂ ಸಂಪೂರ್ಣ ಹೇಳಲಾಗದ **ಅನಿಲಯನೇ** ಮತ್ತೊಬ್ಬರನ್ನಾಶ್ರಯಿಸದ **ಪರಮಾತ್ಮನಿ** ಲಕ್ಷ್ಮಿಯೇ ಉತ್ತಮಳಾಗಿವುಳ್ಳ ಮುಕ್ತ ಬ್ರಹ್ಮರಿಗೂ ಸ್ವಾಮಿಯಾದ ಅಂದರೆ ಆನಂದ ಮುಂತಾದುವನ್ನು ನೀಡುವ **ಭಗವತಿ ವಾಸುದೇವೇ** ಮೋಕ್ಷಪ್ರದ ವಾಸುದೇವನಾಮಕ ಪರಮಾತ್ಮನಲ್ಲಿ **ಅನನ್ಯನಿಮಿತ್ತ** ಐಶ್ವರ್ಯ ಮುಂತಾದ ಯಾವ ನಿಮಿತ್ತವಿಲ್ಲದ (ನಿಷ್ಕಾಮ) **ಭಕ್ತಿ ಯೋಗಲಕ್ಷಣಃ** ಭಕ್ತಿ ಎಂಬ ಉಪಾಯವೇನಿದೆಯೋ **ಸಃ** ಅದು **ಭವತಿ** ಉಂಟಾಗುವುದು **ಹಿ** ಭಕ್ತಿ ಹುಟ್ಟಲು ಸಜ್ಜನ ಸಹವಾಸವು ಕಾರಣವು **ಏತತ್ ಏವ** ಅಂತಹ ಭಕ್ತಿಯಿಂದ ಮುಕ್ತಿಯಾಗುವುದು ಎಂಬುದನ್ನೇ **ದೇವಾಃ** ಜ್ಞಾನಿಗಳಾದ ದೇವತೆಗಳು **ಗಾಯಂತಿ** ಗಾನಮಾಡುವರು. ಅಥವಾ ಭಕ್ತಿಯೋಗವೇ ಕಾರಣವಾಗಿವುಳ್ಳ ಯಾವ ಸ್ವರೂಪಾನಂದಾವಿರ್ಭಾವವಿದೆಯೋ ಅದೇ **ಅಪವರ್ಗಃ** ಮೋಕ್ಷವು ಎಂದೂ ಅನ್ವಯ ತೋರಿಸಿರುವರು. **ಏತದೇವ** ಭಾರತ ವರ್ಷದಲ್ಲಿ ಜನಿಸಿದ ಜನರಿಗೆ ವಾಸುದೇವನಲ್ಲಿ ಅನನ್ಯ ನಿಮಿತ್ತಕ ಭಕ್ತಿಯೋಗದಿಂದ ತಮ್ಮ ತಮ್ಮ ವರ್ಣಾಶ್ರಮ ವಿಹಿತಧರ್ಮದ ಅನುಷ್ಠಾನ ಮಾಡುವವರಿಗೆ ಮುಕ್ತಿಯಾಗುವುದು ಎಂಬುದನ್ನೇ ದೇವತೆಗಳು ಹಾಡುವರು ಎಂದೂ ಅರ್ಥ. ॥೨೦॥

**ಅಹೋ ಬತೈಷಾಂ ಕಿಮಕಾರಿಶೋಭನಂ**
**ಪ್ರಸನ್ನ ಏಷಾಂ ಸ್ವಿದುತ ಸ್ವಯಂ ಹರಿಃ ।**
**ಯೈರ್ಜನ್ಮ ಲಬ್ಧಂ ನೃಷು ಭಾರತಾಜಿರೇ**
**ಮುಕುಂದಸೇವೋಪಯಿಕಂ ಸ್ಪೃಹಾತ್ಮಭಿಃ ॥೨೧॥**

**ಮುಕುಂದಸೇವೋಪಯಿಕಂ ಸ್ಪೃಹಾತ್ಮಭಿಃ** ಮೋಕ್ಷಪ್ರದನಾದ ಶ್ರೀಹರಿಯ ಸೇವೆಗೆ ಕಾರಣವಾದ ಭಾರತಭೂಮಿಯಲ್ಲಿ ಮನುಷ್ಯ ಜನ್ಮವನ್ನು ಇಚ್ಛಿಸುವ ಮನಸ್ಸುಳ್ಳ **ಯೈಃ** ಯಾವ ಮುಮುಕ್ಷು ಜೀವರಿಂದ **ಭಾರತಾಜಿರೇ** ಭಾರತಭೂಮಿ ಎಂಬ ಅಂಗಳದಲ್ಲಿ **ನೃಷು** ಮನುಷ್ಯರಲ್ಲಿ **ಜನ್ಮ** ಹುಟ್ಟು **ಲಬ್ಧಂ** ಹೊಂದಲ್ಪಟ್ಟಿತೋ **ಏಷಾಂ** ಇವರಿಂದ **ಕಿಂ ಶೋಭನಂ ಅಕಾರಿ?** ಯಾವ ಪುಣ್ಯ ಕರ್ಮಮಾಡಲ್ಪಟ್ಟಿತೋ? **ಅಹೋ ಬತ** ಆಶ್ಚರ್ಯವು! **ಉತ ಸ್ವಿತ್** ಅಥವಾ **ಹರಿಃ** ಶ್ರೀಹರಿಯು **ಸ್ವಯಂ** ಯಾವ ಕರ್ಮವನ್ನೂ ಅಪೇಕ್ಷಿಸದೇ ತಾನಾಗಿಯೇ **ಪ್ರಸನ್ನಃ** ಇವರಿಗೆ ಅನುಗ್ರಹ ಮಾಡಿರುವನೇ? ಭಾರತದಲ್ಲಿ ಮನುಷ್ಯಜನ್ಮ ಶ್ರೀಹರಿಯು ಪ್ರಸನ್ನನಾಗದಿದ್ದರೆ ದೊರೆಯುವುದಿಲ್ಲವೆಂದು ಭಾವ. ॥೨೧॥




ಈ ರೀತಿಯಾಗಿ ಭರತಖಂಡದಲ್ಲಿ ಜನಿಸಿದ ಮುಮುಕ್ಷುಗಳನ್ನು ಪ್ರಶಂಸಿಸಿ ಸ್ವರ್ಗಕ್ಕಾಗಿ ಕಾಮ್ಯಕರ್ಮಗಳನ್ನು ಮಾಡುವವರನ್ನು ನಿಂದಿಸುವರು

**ಕಿಂ ದುಷ್ಕರೈರ್ನಃ ಕ್ರತುಭಿಸ್ತಪೋವ್ರತೈ-**
**ರ್ದಾನಾದಿಭಿರ್ವಾದ್ಯುಜಯೇನ ಫಲ್ಗುನಾ ।**
**ನ ಯತ್ರ ನಾರಾಯಣಪಾದಪಂಕಜ-**
**ಸ್ಮೃತಿಃ ಪ್ರಮುಷ್ಟಾsತಿಶಯೇಂದ್ರಿಯೋತ್ಸವಾತ್ ॥೨೨॥**

**ದುಷ್ಕರೈಃ** ಕಷ್ಟದಿಂದ ಮಾಡಲ್ಪಡುವ **ನಃ** ನಮ್ಮನ್ನುದ್ದೇಶಿಸಿ ಮಾಡಿದ **ಕ್ರತುಭಿಃ** ಯಾಗಗಳಿಂದ **ಕಿಂ** ಏನು ಪ್ರಯೋಜನ? **ತಪೋವ್ರತೈಃ** ತಪಸ್ಸುಗಳಿಂದಾಗಲಿ ವ್ರತಗಳಿಂದಾಗಲಿ **ದಾನಾದಿಭಿಃ ವಾ** ದಾನಾದಿಗಳಿಂದಾಗಲಿ **ಕಿಂ** ಏನು ಪ್ರಯೋಜನ? **ಯತ್ರ** ಯಾವ ಸ್ವರ್ಗದಲ್ಲಿ **ಅತಿಶಯೇಂದ್ರಿಯೋತ್ಸವಾತ್** ಅತಿಯಾದ ವಿಷಯ ಭೋಗದಿಂದ **ನಾರಾಯಣಪಾದಪಂಕಜಸ್ಮೃತಿಃ** ಶ್ರೀಹರಿಯ ಚರಣಾರವಿಂದ ಸ್ಮರಣವು **ಪ್ರಮುಷ್ಟಾ** ನಷ್ಟವಾಗಿದೆಯೋ ನ ಸ್ಮರಣವಿಲ್ಲವೋ ಅಂತಹ **ಫಲ್ಗುನಾ** ತುಚ್ಛವಾದ **ದ್ಯುಜಯೇನ** ಸ್ವರ್ಗವನ್ನು ಗೆಲ್ಲುವುದರಿಂದ(ಹೊಂದುವುದರಿಂದ) **ಕಿಂ** ಏನು ಪ್ರಯೋಜನ? ಏನೂ ಇಲ್ಲವೆಂದರ್ಥ. ಇದರಿಂದ ಸ್ವರ್ಗಪ್ರಾಪ್ತಿಯೇ ಪ್ರಯೋಜನ ವೆಂಬುದನ್ನು ನಿರಾಸಮಾಡಿರುವರು. ಹರಿಸ್ಮರಣೆಯಿಲ್ಲದ ಸ್ವರ್ಗಕ್ಕಿಂತ ಹರಿಸ್ಮರಣೆಗೆ ಕಾರಣವಾದ ಭಾರತ ಜನ್ಮ ಶ್ರೇಷ್ಠವೆಂದು ಭಾವ. ಕರ್ಮಮಾಡಿ ಸ್ವರ್ಗ ಪಡೆದ ಜೀವರಿಗೆ ಹೇಳಿದ ಮಾತಿದು. ಸ್ವರೂಪತಃ ಸ್ವರ್ಗದಲ್ಲಿರುವ ದೇವತೆಗಳಿಗಲ್ಲ. ಅವರು ಯಾವಾಗಲೂ ಹರಿಸ್ಮರಣೆ ಮಾಡುವರೆಂದು ಪ್ರಮಾಣಗಳಿವೆ. ॥೨೨॥

ಹಾಗಾದರೆ ಶ್ರವಣಾದಿಗಳಿಂದ ಸಿಗುವ ಮಹರ್ಲೋಕ ಪ್ರಾಪ್ತಿಯು ಹರಿಸ್ಮರಣ ಸಂಪಾದಕವಾದ್ದರಿಂದ ಶ್ರೇಷ್ಠವಾಗಲಿ ಎಂದರೆ ಹೇಳುತ್ತಾರೆ. ಕಲ್ಪಾಯುಷ್ಕಪರ ಮಹರ್ಲೋಕಾದಿ ಪ್ರಾಪ್ತಿಗಿಂತ ಕ್ಷಣಾಯುಷ್ಕಪ್ರದ ಭಾರತವರ್ಷಪ್ರಾಪ್ತಿಯೇ ಅತ್ಯಂತ ಶ್ರೇಷ್ಠ ಎಂದು ಹೇಳುವರು

**ಕಲ್ಪಾಯುಷಾಂ ಸ್ಥಾನಜಯಾತ್ ಪುನರ್ಭವಾತ್**
**ಕ್ಷಣಾಯುಷಾಂ ಭಾರತಭೋಜಯೋ ವರಃ ।**
**ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ**
**ಸಂನ್ಯಸ್ಯ ಸಂಯಾತ್ಯಭಯಂ ಪದಂ ಹರೇಃ ॥೨೩॥**

**ಪುನರ್ಭವಾತ್** ಮತ್ತೆ ಸಂಸಾರಕ್ಕೆ ಬರುವ **ಕಲ್ಪಾಯುಷಾಂ** ಬ್ರಹ್ಮದೇವರ ಒಂದು ದಿನದ ಕಲ್ಪ ಆಯುಷ್ಯವುಳ್ಳವರ **ಸ್ಥಾನಜಯಾತ್** ಸ್ಥಳವಾದ ಮಹರ್ಲೋಕ ಪ್ರಾಪ್ತಿಗಿಂತಲೂ **ಕ್ಷಣಾಯುಷಾಂ** ಅಲ್ಪ ಆಯುಷ್ಯವುಳ್ಳವರ (ಸ್ಥಳವಾದ) **ಭಾರತಭೂಜಯಃ** ಭಾರತ ಭೂಮಿಯಲ್ಲಿ ಜನ್ಮಲಾಭವು **ವರಃ** ಶ್ರೇಷ್ಠವು. ಭಾರತದಲ್ಲಿ ಹುಟ್ಟಿದವರಿಗೂ ಮತ್ತೆ ಹುಟ್ಟು ಸಾವುಗಳಿರುವುದರಿಂದ ಶ್ರೇಷ್ಠವೆಂದು ಹೇಳಿದ್ದು ಹೇಗೆ ಎಂದರೆ ಹೇಳುತ್ತಾರೆ **ಮನಸ್ವಿನಃ** ಭಾರತದಲ್ಲಿ ಜನ್ಮವೆತ್ತಿದ ಯೋಗಿಗಳು **ಕ್ಷಣೇನ** ಕ್ಷಣಕಾಲವಿರುವ (ಅಲ್ಪಕಾಲವಿರುವ) **ಮರ್ತ್ಯೇನ** ನಶ್ವರವಾದ ದೇಹದಿಂದ **ಕೃತಂ** ಮಾಡಿದ ಕರ್ಮವನ್ನು **ಸಂನ್ಯಸ್ಯ** ಭಕ್ತಿಯಿಂದ ಶ್ರೀಹರಿಯಲ್ಲಿ ಸಮರ್ಪಿಸಿ **ಅಭಯಂ** ಪುನರ್ಜನ್ಮದ ಭಯವಿಲ್ಲದ **ಹರೇಃ ಪದಂ** ಶ್ರೀಹರಿಯ ಸ್ಥಾನವನ್ನು **ಸಂಯಾಂತಿ** ಸಾರ್ವಕಾಲಿಕವಾಗಿ ಹೊಂದುವರು. ಆದ್ದರಿಂದ ಮಹರ್ಲೋಕ ಪ್ರಾಪ್ತಿಗಿಂತ ಭಾರತದ ಭೂಲೋಕ ಪ್ರಾಪ್ತಿಯೇ ಉತ್ತಮವೆಂದು ತಾತ್ಪರ್ಯ.

**ಮಹರ್ಲೋಕೇ ತು ಕಾಲ್ಪಿಕಾಃ** ಎಂದು ಹೇಳಿದ್ದರಿಂದ ಬ್ರಹ್ಮದೇವರ ಒಂದು ದಿನ ಪರ್ಯಂತ ಆಯುಷ್ಯವುಳ್ಳವರ ಸ್ಥಾನ ಎಂದರೆ ಮಹರ್ಲೋಕ. **ಕಲ್ಪಾಯುಷೋ ಯದ್ವಿಬುಧಾ ರಮಂತೇ (ಭಾಗ. ೨.೨)** ಎಂದೂ ಹೇಳಿದೆ. ಹೀಗೆ ಸತ್ಸಂಗತಿಯಿಂದ ಹರಿಕಥಾ ಶ್ರವಣಾದಿಗಳಿಂದ ಭಕ್ತಿಯುಳ್ಳವರಿಗೆ ನಿವೃತ್ತಕರ್ಮಾನುಷ್ಠಾನದಿಂದ ಮೋಕ್ಷವಾಗುವುದರಿಂದ ಭಾರತವರ್ಷ ಶ್ರೇಷ್ಠವೆಂದು ಉಪಪಾದಿಸುವರು. ।।೨೩।।

ಈಗ ಹರಿಕಥಾ ಶ್ರವಣ, ಭಕ್ತ್ಯಾದಿಗಳು ಇಲ್ಲದಿದ್ದರೆ ಭರತ ಭೂಮಿಯೂ ಸೇವಿಸಲು ಯೋಗ್ಯವಲ್ಲವೆಂದು ಕೈಮುತ್ಯದಿಂದ ಹೇಳುವರು. ಸ್ವರ್ಗಲೋಕ, ಮಹರ್ಲೋಕ ಮೊದಲಾದವುಗಳಲ್ಲಿ ಅತಿಶಯ ವಿಷಯ ಸುಖಕ್ಕೆ ಅವಕಾಶವಿರುವುದರಿಂದ ಅವುಗಳನ್ನು ಭರತಖಂಡಕ್ಕಿಂತ ಕಡಿಮೆ ಎಂದು ಹೇಗೆ ಹೇಳುತ್ತೀರಿ ಎಂದರೆ ಹೇಳುತ್ತಾರೆ. (ಸ್ವರ್ಗದಲ್ಲಿ ಕಲ್ಪವೃಕ್ಷ ಮುಂತಾದ ಗಿಡಗಳೂ ಸರ್ವಾಭೀಷ್ಟ ಕೊಡುವವು. ಎಲ್ಲಿ ತಾಪತ್ರಯ ಪರಿಹರಿಸುವ ನಂದನವನವಿದೆ. ಅಮೃತಮಯ ಸರೋವರಗಳು, ಸ್ತ್ರೀಯರೂ ಕೂಡ ಮುಪ್ಪಿಲ್ಲದ ಸುಂದರವಾದ ದೇಹವುಳ್ಳವರು. ಅವರ ಹಾಡುಗಳು ಪ್ರಮೋದ, ಪಾರವಶ್ಯ ನೀಡುವುವು. ಪುರುಷರೂ ನಿತ್ಯ ತರುಣರು. ಭೋಗಗಳೂ ಕೂಡಾ ಇಚ್ಛಾಮಾತ್ರದಿಂದ ಸಾಧ್ಯವಾದವುಗಳು. ಶ್ರೇಷ್ಠವಾದವುಗಳು. ಈ ರೀತಿ ಪ್ರತಿಕ್ಷಣ ಇಂದ್ರಿಯಗಳಿಗೆ ಹಬ್ಬ.




ಇಂಥ ದೇವತೆಗಳ ಲೋಕ ಏಕೆ ಹೀಯಾಳಿಸಲ್ಪಡುವುದು ತಿಳಿದವರಿಂದ ಎಂದರೆ ಹೇಳುತ್ತಾರೆ

**ನ ಯತ್ರ ವೈಕುಂಠಕಥಾ(ಮೃತಾ)ಸುಧಾಪಗಾ**
**ನ ಸಾಧವೋ ಭಾಗವತಾಸ್ತದಾಶ್ರಯಾಃ ।**
**ನ ಯತ್ರ ಯಜ್ಞೇಶಮಖಾ ಮಹೋತ್ಸವಾಃ**
**ಸುರೇಶಲೋಕೋಽಪಿ ನ ಯಾತಿ ಸೇವ್ಯತಾಮ್ ॥೨೪॥**

**ಯತ್ರ** ಯಾವ ಸ್ವರ್ಗ ಲೋಕಗಳಲ್ಲಿ **ತದಾಶ್ರಯಾಃ ಚ** ಶ್ರೀಹರಿಯ ಪಾದಾರವಿಂದಗಳ ಸ್ಮರಣೆಯನ್ನು ತಂದುಕೊಡುವ ಅಥವಾ ಶ್ರೀಹರಿಯ ಕಥಾಮೃತ ನದಿಯನ್ನು ಆಶ್ರಯಿಸಿದ ಅಂದರೆ ಕಥೆ ಹೇಳುವ **ಸಾಧವಃ** ರಾಗದ್ವೇಷ ಮೊದಲಾದ ದೋಷಲೇಶವೂ ಇಲ್ಲದ **ಭಾಗವತಾಃ** ಭಗವದ್ಭಕ್ತರು **ನ(ಸುಲಭಾಃ)** ಇಲ್ಲಿಯಂತೆ ಕಷ್ಟವಿಲ್ಲದೆ ದೊರೆಯುವುದಿಲ್ಲವೋ ಆದ್ದರಿಂದಲೇ **ವೈಕುಂಠಕಥಾಸುಧಾಪಗಾಃ** ಅವರುಗಳಿಂದ ಹೇಳಲ್ಪಡುವ ಶ್ರೀಹರಿಯ ಕಥಾಮೃತದ ನದಿಗಳು **ನ** ಇಲ್ಲವೋ **ಯತ್ರ** ಯಾವ ಈ ಮಹರಾದಿ ಲೋಕಗಳಲ್ಲಿ **ಮಹೋತ್ಸವಾಃ** ನೃತ್ಯ ಮುಂತಾದ ಉತ್ಸವಗಳುಳ್ಳ **ಯಜ್ಞೇಶಮಖಾಃ** ಯಜ್ಞನಿಯಾಮಕ ಶ್ರೀಹರಿಯನ್ನುದ್ದೇಶಿಸಿ ಮಾಡುವ ಯಾಗಗಳೂ ನ ಇಲ್ಲವೋ **ಸಃ** ಅಂತಹ **ಸುರೇಶಲೋಕಃ ಅಪಿ** ಇಂದ್ರಾದಿಗಳ ಲೋಕಗಳೂ ಕೂಡ **ಸೇವ್ಯತಾಂ ನ ಯಾಂತಿ** ಪ್ರಾಪ್ಯ ಫಲವಿಶೇಷಕ್ಕಾಗಿ (ಮತ್ತೊಂದು ಫಲಕ್ಕಾಗಿ) ಸೇವಾಯೋಗ್ಯತೆಯನ್ನು ಹೊಂದುವುದಿಲ್ಲವೋ, ಈ ಲೋಕಗಳಲ್ಲಿ ಯಜ್ಞಗಳಿಲ್ಲವೆಂದು ಹೇಳಿದ್ದು ಅವುಗಳಿಂದ ಹೊಂದಬೇಕಾದ ಫಲವಿಲ್ಲವಾದ್ದರಿಂದ ಎಂದು ತಿಳಿಯಬೇಕು. ಅದೂ ಅಲ್ಲದೇ ಅಲ್ಲಿಗೆ ಬಂದಿರುವವರಿಗೆ ಹಿಂದೆ ತಾವು ಮಾಡಿದ ಪುಣ್ಯಕರ್ಮಗಳ ಫಲವನ್ನು ಅನುಭವಿಸುವುದರಲ್ಲಿಯೇ ಕಾಲವು ಹೋಗುವುದರಿಂದ ಯಜ್ಞಮಾಡಲು ಸಮಯವೇ ಇಲ್ಲವೆಂದು ಪರಸ್ಪರ ಸುಮ್ಮನಿರುವರೆಂದೂ ಅಭಿಪ್ರಾಯ. **ಧ್ಯಾಯಂತೀವ ದೇವಮನಷ್ಯಾಃ** ಎಂಬ ಶ್ರುತಿಯು ಇದನ್ನೇ ಸ್ಪಷ್ಟಪಡಿಸುವುದು. ಇದರಿಂದ ಶ್ರೀಹರಿಯ ಸ್ಮರಣೆಗೆ ಅವಕಾಶವಿಲ್ಲದ ಸ್ವರ್ಗಾದಿಗಳೇ ಸೇವ್ಯವಲ್ಲವೆಂದಮೇಲೆ ಭಾರತವರ್ಷವೂ ಸೇವ್ಯವಲ್ಲವೆಂದು ಬೇರೆ ಹೇಳಬೇಕಿಲ್ಲವೆಂಬ ಕೈಮುತ್ಯನ್ಯಾಯ ತಿಳಿದುಬರುವುದು. ॥೨೪॥

## ಭಕ್ತಿಯಿದ್ದರೆ ಸಾಕೇ? ಭರತಭೂಮಿಯೇ ಬೇಕೇ?

ಇದರಿಂದ ಭಗವದ್ಭಕ್ತಿ ಇದ್ದರೆ ಭಾರತ ಭೂಮಿಯೇ ಬೇಕೆಂಬ ನಿಯಮವಿಲ್ಲ ಎಂದಂತಾಯಿತು. ಭಕ್ತಿಯಿದ್ದ ಎಲ್ಲ ಲೋಕಗಳು ಸೇವ್ಯವೆಂದು ತಿಳಿಯುವುದಲ್ಲ ಎಂದರೆ ಹಾಗಲ್ಲ. ಭಾರತ ಭೂಮಿಯಲ್ಲೇ ಭಕ್ತಿಯು ಪ್ರಚುರವಾಗಿರುವುದರಿಂದ ಭಕ್ತಿಯು ಪ್ರಾಚುರವಾಗಿ ಇಲ್ಲದಿರುವ ಇತರ ಲೋಕಗಳಿಗಿಂತ ಇದೇ ಶ್ರೇಷ್ಠವೆಂದು ಸ್ತುತಿಯಲ್ಲಿಯೇ ತಾತ್ಪರ್ಯ.

ಭರತಖಂಡದಲ್ಲಿ ಜನ್ಮಪಡೆದವರು ಮೋಕ್ಷಪ್ರಯತ್ನ ಮಾಡಲೇಬೇಕು ಎಂಬ ಅಭಿಪ್ರಾಯದಿಂದ ಮೋಕ್ಷಕ್ಕಾಗಿ ಪ್ರಯತ್ನ ಮಾಡದವರನ್ನು ನಿಂದಿಸುವರು

**ಪ್ರಾಪ್ತಾ ನೃಜಾತಿಂ ತ್ವಿಹ ಯೇ ಚ ಜಂತವೋ**
**ಜ್ಞಾನಕ್ರಿಯಾದ್ರವ್ಯಕಲಾಪಸಂಭೃತಾಃ ।**
**ನ ಚೇದ್ಯತೇರನ್ನಪುನರ್ಭವಾಯ ತೇ**
**ಭೂಯೋ ವನೌಕಾ ಇವ ಯಾಂತಿ ಬಂಧನಂ ॥೨೫॥**

**ಜ್ಞಾನ** ತಿಳುವಳಿಕೆ **ಕ್ರಿಯಾ** ಕೆಲಸ(ಕರ್ಮ) **ದ್ರವ್ಯ** ಧನ ಪದಾರ್ಥಗಳ **ಕಲಾಪ** ಸಾಮಾಗ್ರಿಯಿಂದ **ಸಂಭೃತಾಃ** ಕೂಡಿದ **ಯೇ ಜಂತವಃ** ಯಾವ ಪ್ರಾಣಿ ಸಾಮಾನ್ಯವು ಇಹ ಭಾರತದಲ್ಲಿ **ಅಪುನರ್ಭವಾಯ** ಮೋಕ್ಷಕ್ಕಾಗಿ **ನ ಯತೇರನ್ ಚೇತ್** ಪ್ರಯತ್ನಿಸದಿದ್ದಲ್ಲಿ **ತೇ** ಅವು **ಭೂಯಃ** ಮತ್ತೆ ಮತ್ತೆ **ವನೌಕಾ ಇವ** ನರಕವಾಸಿಗಳಂತೆ (ಸಂಸಾರವನ್ನು) **ಬಂಧನಂ** ದುಃಖವನ್ನು **ಯಾಂತಿ** ಹೊಂದುವರು ಅದ್ದರಿಂದ ಬಿಡುಗಡೆ ಇಲ್ಲ **ಯೇ ಚ** ಯಾರು ಇಹ ಈ ಭಾರತದಲ್ಲಿ **ನೃಜಾತಿಂ** ಮನುಷ್ಯ ಜನ್ಮವನ್ನು **ಪ್ರಾಪ್ತಾಃ** ಹೊಂದಿರುವರೋ **ತೇ** ಅವರು **ಅಪುನರ್ಭವಾಯ** ಮೋಕ್ಷಕ್ಕೆ **ನ ಯತೇರನ್ ಚೇತ್** ಪ್ರಯತ್ನಿಸದಿದ್ದರೆ **ಭೂಯೋ ವನೌಕಾಃ** ಮಹಾತಮಸ್ಸಿಗೆ ಸೇರಲು ಯೋಗ್ಯರು **ಯೇ ಚ** ಯಾರು **ನೃಜಾತಿ**(ನೃ-ಭಯೇ ಎಂದು ಧಾತು) ಜ್ಞಾನ ಕರ್ಮಗಳಿಗೆ ಯೋಗ್ಯವಾದ ಬ್ರಾಹ್ಮಣ ಜನ್ಮವನ್ನು ಈ ಭಾರತದಲ್ಲಿ ಹೊಂದಿರುವರೋ ಅವರು ಮೋಕ್ಷಕ್ಕೆ ಪ್ರಯತ್ನಿಸದಿದ್ದರೇ **ಭೂಯೋ ವನೌಕಾಃ** ನಿತ್ಯನರಕವಾದ ಅಂಧಂತಮಸ್ಸಿಗೆ ಹೋಗಲು ಯೋಗ್ಯರು. (ವನೌಕಾ ಶಬ್ದವು ಅಕಾರಾಂತವೂ ಇದೆ ಎಂದಾಗಲಿ ಆರ್ಷ ಪ್ರಯೋಗವೆಂದಾಗಲಿ ತಿಳಿಯಬೇಕು). **ವನೌಕಾ ಇವ** ಮೃಗಗಳಂತೆ **ಬಂಧನಂ ಯಾಂತಿ** ಬಲೆಗೆ ಸಿಕ್ಕಿ ಬೀಳುವರು ಎಂದೂ ಅರ್ಥ

 

ಮಾಡಿರುವರು. ಬೇಡನ ಬಲೆಯಿಂದ ಹೇಗೋ ತಪ್ಪಿಸಿಕೊಂಡ ಮೃಗಗಳು ಮತ್ತೆ ಮತ್ತೆ ಅದೇ ಪ್ರದೇಶದಲ್ಲಿಯೇ ಓಡಾಡುತ್ತಿದ್ದರೆ ಹೇಗೆ ಸಿಕ್ಕಿಬೀಳುವುವೋ ಹಾಗೆ ಸಾಧನ ಭೂಮಿಯಾದ ಭಾರತಕ್ಕೆ ಬಂದೂ ಸಾಧನ ಮಾಡಿಕೊಳ್ಳದಿದ್ದವನು ಸಂಸಾರಕ್ಕೆ ಸಿಕ್ಕಿಬೀಳುವವನು ಎಂದು ಅಭಿಪ್ರಾಯ. ಹೀಗೆ ಮೋಕ್ಷಕ್ಕೆ ಪ್ರಯತ್ನ ಮಾಡದವರನ್ನು ನಿಂದಿಸಿದ್ದರಿಂದ ಭಾರತದಲ್ಲಿ ಹುಟ್ಟಿದವರು ಅವಶ್ಯವಾಗಿ ಮೋಕ್ಷಕ್ಕೆ ಪ್ರಯತ್ನ ಮಾಡಲೇಬೇಕೆಂದು ತಿಳಿಸಿದಂತಾಯಿತು. ।।೨೫।।

ಭಾರತ ಭೂಮಿಯಲ್ಲಿ ಮಾಡುವ ಯಜ್ಞ ಮೊದಲಾದ ಕರ್ಮಗಳು ಶ್ರೀಹರಿ ಪ್ರೀತಿಜನಕವಾದ್ದರಿಂದ ಎಲ್ಲ ಸಾಧನೆಗೆ ಆವಾಸವಾದ ಈ ಖಂಡವು ಮಿಕ್ಕ ಖಂಡಗಳಿಗಿಂತ ಉತ್ತಮವಾದ್ದರಿಂದಲೇ ಇದನ್ನು ಸ್ತೋತ್ರಮಾಡುವರು ಎಂದು ಹೇಳುತ್ತಾರೆ

**ಯೈಃ ಶ್ರದ್ಧಯಾ ಬರ್ಹಿಷಿ ಭಾಗಶೋ ಹವಿ-**
**ರ್ನಿರುಪ್ತಮಿಷ್ಟಂ ವಿಧಿಮಂತ್ರವಸ್ತುತಃ ।**
**ಏಕಃ ಪೃಥಙ್ನಾಮಭಿರಾಹುತೋ ಮುದಾ**
**ಗೃಹ್ಣಾತಿ ಪೂರ್ಣಃ ಸ್ವಯಮಾಶಿಷಾಂ ಪ್ರಭುಃ ।।೨೬।।**

**ಯೈಃ** ಯಾವ ಭಾರತ ನಿವಾಸಿಗಳಿಂದ **ವಿಧಿಮಂತ್ರವಸ್ತುತಃ(ವಸ್ತೂನಿ ಅನುಸೃತ್ಯ)** ಆ ಆ ಯಜ್ಞ ಮಾಡುವ ರೀತಿ ಮಂತ್ರ ಮತ್ತು ದ್ರವ್ಯಗಳನ್ನು ಅನುಸರಿಸಿ (ವೇದೋಕ್ತ ರೀತಿಯಲ್ಲಿ) **ಶ್ರದ್ಧಯಾ** ಆಸ್ತಿಕ್ಯ ಬುದ್ಧಿಯಿಂದ **ಬರ್ಹಿಷಿ** ಯಜ್ಞದಲ್ಲಿ **ಭಾಗಶಃ** ಇಂದ್ರಾದಿಗಳಿಗೆಂದು ಪ್ರತ್ಯೇಕವಾಗಿ **ನಿರುಪ್ತಂ 'ಅಗ್ನಯೇ ಜುಷ್ಟಂ ನಿರ್ವಪಾಮಿ'** ಎಂದು ಪಾಕ ಮಾಡಿ ಪ್ರತ್ಯೇಕ ಸಿದ್ಧಪಡಿಸಿದ **ಭಾಗಶಃ ಇಷ್ಟಂ 'ಇಂದ್ರಂ ಯಜೇ' 'ಅಗ್ನಿಂ ಯಜೇ'** ಎಂದು ಬೇರೆ ಬೇರೆ ಹೋಮ ಮಾಡಿದ ಹವಿಸ್ಸನ್ನು **ಪೃಥಙನಾಮಭಿಃ** ಇಂದ್ರಮುಂತಾದ ಬೇರೆ ಬೇರೆ ಹೆಸರುಗಳಿಂದ **ಆಹೂತಃ** ಕರೆಯಲ್ಪಟ್ಟ **ಏಕಃ** ಒಬ್ಬನೇ **ಆಶಿಷಾಂ ಪ್ರಭುಃ** ಎಲ್ಲರ ಯೋಗ್ಯವಾದ ಎಲ್ಲ ಬಯಕೆಗಳನ್ನು ಪೂರೈಸುವ ಸಾಮರ್ಥ್ಯವುಳ್ಳ ಆದ್ದರಿಂದಲೇ **ಪೂರ್ಣಃ** ಪೂರ್ಣನಾದ ಶ್ರೀಹರಿಯು **ಸ್ವಯಂ** ತಾನೇ **ಮುದಾ** ಸಂತೋಷದಿಂದ **ಗೃಹ್ಣಾತಿ** ಸ್ವೀಕರಿಸುವನು. **ಪೃಥಙನಾಮಭಿಃ** ಎಂದು ಹೇಳಿದ್ದರಿಂದ ಇಂದ್ರ ಮೊದಲಾದ ಹೆಸರುಗಳಿಂದಲೂ ಮುಖ್ಯವಾಗಿ ಇವನೇ ಕರೆಯಲ್ಪಡುವನು ಎಂದು ತಿಳಿಸಿರುವರು. ಆದ್ದರಿಂದ ಒಬ್ಬನೇ ಸ್ವೀಕರಿಸಬಲ್ಲನೆಂದು

ಸಮರ್ಥಿಸಿದಂತಾಯಿತು. **ಪೂರ್ಣ** ಎಂದು ಹೇಳಿದ್ದರಿಂದ ವಿಘ್ನೇಶ್ವರ ಮೊದಲಾದವರಂತೆ ಹೊಂದಬೇಕಾದ ಫಲಾಪೇಕ್ಷೆ ಇವನಿಗೇನು ಇಲ್ಲವೆಂದು ತಿಳಿಸಿರುವರು. ಪೂರ್ಣ ಹೇಗೆ ಎಂದರೆ ಆಶಿಷಾಂ ಪ್ರಭುವಾದ್ದರಿಂದ ಎಂದು ಹೇಳಿರುವರು.

ಯಾಗ ಮಾಡುವುದರಿಂದ ಹವಿಸ್ಸನ್ನು ಸ್ವೀಕರಿಸಿ ಏನುಫಲ ಕೊಡುವನೆಂದು ಹೇಳುವರು

**ಸತ್ಯಂ ದಿಶತ್ಯರ್ಥಿತಮರ್ಥಿತೋ ನೃಣಾಂ**
**ನೈವಾರ್ಥಿತೋ ಯತ್ಪುನರರ್ಥಿನೋ ಮದಃ ।**
**ಸ್ವಯಂ ವಿಧತ್ತೇ ಭಜತಾಮನಿಚ್ಛತಾ**
**ಮಿಚ್ಛಾವಿಧಾನಂ ನಿಜಪಾದಪಲ್ಲವಮ್** ॥೨೭॥

**ಅರ್ಥಿತಃ** ಪ್ರಾರ್ಥಿತನಾದ ಶ್ರೀಹರಿಯು **ನೃಣಾಂ** ಯಾಗ ಮಾಡುವ ಜನರಿಗೆ **ಅರ್ಥಿತಂ** ಅಪೇಕ್ಷಿತವಾದ ಸ್ವರ್ಗಾದಿಗಳನ್ನು, ಧನಾದಿಗಳನ್ನು **ದಿಶತಿ** ಕೊಡುವನು **ಇತಿ** ಎಂಬುದು **ಸತ್ಯಂ** ನಿಶ್ಚಯ(ನಿಜ) **ಯತ್** ಯಾವ ಕಾರಣ **ಅರ್ಥಿನಃ** ಫಲಾಪೇಕ್ಷಿಗಳಿಗೆ **ಮದಃ** ಗರ್ವವು **ಭವತಿ** ಬರುವುದೋ **ತತಃ** ಆ ಕಾರಣ **ಅರ್ಥಿತಃ** ಪುನಃ ಪ್ರಾರ್ಥಿತನಾದರೂ **ನೈವ ದಿಶತಿ** ಫಲವನ್ನು ಕೊಡುವುದಿಲ್ಲ. ಇದು ಸತ್ಯವೇ? ಅಂದರೆ ಅಪೇಕ್ಷಿಸುವ ಕೆಲವರಿಗೆ ಮದ ಬರುವುದು. ಅವರಿಗೆ ಕೊಡುವುದಿಲ್ಲ. ಮದಬರದಿರುವವರಿಗೆ ಫಲ ಕೊಡುವನು ಎಂದೂ ಭಾವ. **ಇಚ್ಛಾವಿಧಾನಂ** ಇಷ್ಟವನ್ನು ಕೊಡುವ **ನಿಜಪಾದಪಲ್ಲವಂ** ತನ್ನ ಕೋಮಲ ಪಾದಗಳನ್ನು **ಅನಿಚ್ಛಯಾ** ಭಕ್ತಿಯನ್ನು ಬಿಟ್ಟು ಬೇರೊಂದನ್ನು ಅಪೇಕ್ಷಿಸದೇ **ಭಜತಾಂ** ಸೇವಿಸುವವರಿಗೆ (ನಿಷ್ಕಾಮ ಭಕ್ತರಿಗೆ) **ಸ್ವಯಂ** ತಾನಾಗಿಯೇ **ವಿಧತ್ತೇ** ಕೊಡುವನು(ತನ್ನನ್ನೇ ಕೊಡುವನು).

''**ಅಪಾಮ ಸೋಮಂ ಅಮೃತಾ ಅಭೂಮ**'' ಎಂದು ಹೆಮ್ಮೆ ಬರುವುದೆಂಬುದನ್ನು **ಮದಃ** ಎಂಬುದರಿಂದ ಹೇಳಿರುವರು. **ಅಮದಃ** ಎಂದು ಪದಚ್ಛೇದ ಮಾಡಿದಲ್ಲಿ ಮದವಿಲ್ಲದ ಶ್ರೀಹರಿಯು ಎಂದನ್ವಯ. ಅಂತೂ ಭಕ್ತರು ಸಕಾಮವಾಗಿ ಮಾಡಿದರೆ ಕಾಮಿತ ಫಲವನ್ನೂ ನಿಷ್ಕಾಮನೆಯಿಂದ ಮಾಡಿದರೆ ಮೋಕ್ಷವನ್ನು ಕೊಡುವನೆಂದರ್ಥ. ॥೨೭॥




ಇದುವರೆಗೆ ಭಾರತದಲ್ಲಿ ಜನಿಸುವುದು ಶ್ರೇಷ್ಠವೆಂದು ಪ್ರಶಂಸಿಸಿ ತಮಗೂ ಭಾರತದಲ್ಲಿ ಜನ್ಮಬರಲಿ ಎಂದು ಪ್ರಾರ್ಥಿಸುವರು

**ಯದ್ಯತ್ರ ನಃ ಸ್ವರ್ಗಸುಖಾವಶೇಷಿತಂ**
**ಸ್ವಿಷ್ಟಸ್ಯ ದತ್ತಸ್ಯ ಕೃತಸ್ಯ ಶೋಭನಮ್ ।**
**ತೇನಾಬ್ಜನಾಭಸ್ಮೃತಿಜನ್ಮ ನಃ ಸ್ಯಾ-**
**ದ್ವರ್ಷೇ ಹರಿರ್ಯದ್ಭಜತಾಂ ಶಂ ತನೋತಿ ॥೨೮॥**

**ಯತ್ರ ವರ್ಷೇ** ಯಾವ ಭಾರತ ಖಂಡದಲ್ಲಿ **ಯತ್** ಯಾವ ಕಾರಣ **ಭಜತಾಂ** ತನ್ನನ್ನು ಸೇವಿಸುವುದರಿಂದ **ಶಂ** ಸುಖವನ್ನು **ಹರಿಃ** ಶ್ರೀಹರಿಯು **ತನೋತಿ** ಉಂಟುಮಾಡುವನೋ **ತತ್** ಆ ಕಾರಣ **ನಃ** ನಮಗೆ **ಸ್ವಿಷ್ಟಸ್ಯ** ಚೆನ್ನಾಗಿ ಯಾಗ ಮಾಡಿದ **ದತ್ತಸ್ಯ** ಸರಿಯಾಗಿ ದಾನ ಮಾಡಿದ **ಕೃತಸ್ಯ** ಸರಿಯಾಗಿ ಮಾಡಿದ ಕರ್ಮದ **ಸ್ವರ್ಗಸುಖಾವಶೇಷಿತಂ** ಸ್ವರ್ಗದಲ್ಲಿ ಸುಖಾನುಭವವನ್ನಿತ್ತು ಉಳಿದ **ಯತ್ ಶೋಭನಂ** ಯಾವ ಪುಣ್ಯವಿದೆಯೋ **ತೇನ** ಅದರಿಂದ **ನಃ ಅಬ್ಜನಾಭಸ್ಮೃತಿಜನ್ಮ** ಶ್ರೀಹರಿಯ ಸ್ಮರಣೆಯನ್ನು ಕೊಡುವ ಭಾರತ ಭೂಮಿಯಲ್ಲಿ ಜನ್ಮವು **ಸ್ಯಾತ್** ಆಗಲಿ **ಯದಿ ಶೋಭನಮಸ್ತಿ** ಪುಣ್ಯ ಉಳಿದಿದ್ದಾದರೆ ಅದರಿಂದ **ಅತ್ರ** ಭಾರತದಲ್ಲಿ ಜನ್ಮ ಬರಲಿ ಎಂದು ಅನ್ವಯ.

### ದೇವತೆಗಳೂ ಭರತವರ್ಷದಲ್ಲಿ ಹುಟ್ಟಲಿಚ್ಛಿಸುವರೇ?

ಇಲ್ಲಿ ದೇವತೆಗಳೂ ಭಾರತವರ್ಷದಲ್ಲಿ ಹುಟ್ಟನ್ನು ಪ್ರಾಥಿಸುವರೆಂದು ಹೇಳಿದೆ. ಇದು ವ್ಯರ್ಥ. ಏಕೆಂದರೇ ಅವರಿಗೆ ಮೋಕ್ಷಾತಿರಿಕ್ತ ಪುರುಷಾರ್ಥೇಚ್ಛೆಯಿಲ್ಲ. ಮೋಕ್ಷವಾದರೋ ಅವರಿಗೆ ನಿಶ್ಚಿತ ಎಂಬ ಶಂಕೆಗೆ ಶ್ರೀಮದಾಚಾರ್ಯರು ಪ್ರಮಾಣದಿಂದ ಉತ್ತರಿಸುವರು

''ಅನಧೀಕಾರಿಣೋ ದೇವಾಃ ಸ್ವರ್ಗಸ್ಥಾ ಭಾರತೋದ್ಭವಂ ।
ವಾಂಛಂತ್ಯಾತ್ಮವಿಮೋಕ್ಷಾರ್ಥಂ ಉದ್ರೇಕಾರ್ಥೇಽಧಿಕಾರಿಣಃ'' ಇತಿ ಕೌರ್ಮೇ ।

ದೇವತೆಗಳು ಎರಡು ಬಗೆ - ಆಧಿಕಾರಿಕರು ಆಧಿಕಾರಿಕರಲ್ಲದವರು. ಅದರಲ್ಲಿ ಮೊದಲನೆಯವರು ಸ್ವರೂಪದಿಂದಲೇ ದೇವತೆಗಳು. ಎರಡನೆಯವರು ಭೂಲೋಕದಲ್ಲಿ ಯಾಗಾದಿಗಳನ್ನು ಮಾಡಿ ಸ್ವರ್ಗವನ್ನು ಪಡೆದವರು. ದೇವತ್ವ

ಯೋಗ್ಯ ಮನುಷ್ಯರು. ಈ ಅನಧಿಕಾರಿ ದೇವತೆಗಳು ತಮ್ಮ ಮೋಕ್ಷಕ್ಕಾಗಿ ಭಾರತದಲ್ಲಿ ಸಾಧನ ಮಾಡಲು ಜನ್ಮವನ್ನು ಅಪೇಕ್ಷಿಸುವರು. ಆಧಿಕಾರಿಕ ಇಂದ್ರಾದಿಗಳು ಮೋಕ್ಷದಲ್ಲಿ ಆನಂದಾತಿಶಯಕ್ಕಾಗಿ ಸಾಧನ ಮಾಡಲು ಭಾರತದಲ್ಲಿ ಜನ್ಮ ಅಪೇಕ್ಷಿಸುವರು. ಕಾರಣ ಸಂದೇಹಕ್ಕೆ ಅವಕಾಶವಿಲ್ಲ. ಈ ಪ್ರಮಾಣದಂತೆ ಹಿಂದೆ **ದೇವಾ ಗಾಯಂತಿ** (೫.೧೯.೨೦) ಎಂಬಲ್ಲಿ ಈ ಎರಡು ಬಗೆಯ ದೇವತೆಗಳನ್ನೂ ತೆಗೆದುಕೊಳ್ಳಬೇಕು. ।।೨೮।।

### ಶ್ರೀಶುಕ ಉವಾಚ

**ಜಂಬೂದ್ವೀಪಸ್ಯ ಚ ರಾಜನ್ನುಪದ್ವೀಪಾನಷ್ಟೌ ಹ್ಯೇಕ ಉಪದಿಶಂತಿ ಸಗರಾತ್ಮಜೈರಶ್ವಾನ್ವೇಷಣ ಇಮಾಂ ಮಹೀಂ ಪರೀತೋ ನಿಖನದ್ಭಿರುಪಕಲ್ಪಿತಾಃ ।।೨೯।।**

**ತದ್ಯಥಾ ಸ್ವರ್ಣಪ್ರಸ್ಥಶ್ಚೇಂದ್ರಶುಕ್ಲ ಆವರ್ತನೋ ರಮಣಕೋ ಮಂದೋರುಣಃ ಪಾಂಚಜನ್ಯಂ ಸಿಂಹಲೋ ಲಂಕೇತಿ ।।೩೦।।**

**ಏವಂ ತವ ಭಾರತೋತ್ತಮ ಜಂಬೂದ್ವೀಪವರ್ಷವಿಭಾಗೋ ಯಥೋಪದೇಶಂ ಉಪವರ್ಣಿತಃ ।।೩೧।।**

**ರಾಜನ್** ಪರೀಕ್ಷಿತನೇ **ಏಕೇ** ವಿಶೇಷವನ್ನು ಹೇಳಬೇಕೆಂದು ಕೆಲವರು **ಜಂಬೂದ್ವೀಪಸ್ಯ** ಜಂಬೂದ್ವೀಪಕ್ಕೆ (ಸಂಬಂಧಿಸಿದಂತೆ) **ಅಷ್ಟೌ** ಎಂಟು **ಉಪದ್ವೀಪಾನ್** ಉಪದ್ವೀಪಗಳನ್ನು **ಉಪದಿಶಂತಿ** ಹೇಳುವರು. ಈ ದ್ವೀಪಗಳು **ಸಗರಾತ್ಮಜೈಃ** ಸಗರ ಚಕ್ರವರ್ತಿಯ ಮಕ್ಕಳಾದ ಅರವತ್ತು ಸಾವಿರ ಜನರಿಂದ **ಅಶ್ವಾನ್ವೇಷಣೇ** ಯಜ್ಞಾಶ್ವವನ್ನು ಹುಡುಕುವ ಸಂದರ್ಭದಲ್ಲಿ **ಇಮಾಂ ಮಹೀಂ ಪರಿತಃ** ಈ ಭೂಮಿಯ ಸುತ್ತಲೂ **ನಿಖನದ್ಭಿಃ** ಆಳವಾಗಿ ಅಗಿಯುವುದರಿಂದ **ಉಪಕಲ್ಪಿತಾಃ** ಪ್ರಾಸಂಗಿಕವಾಗಿ ರೂಪಗೊಂಡವು. ।।೨೯।।

ಸಾಮಾನ್ಯವಾಗಿ ಹೇಳುವವರು ಇವುಗಳನ್ನು ಸಮುದ್ರ ಪ್ರದೇಶಗಳೆಂದೇ ಭಾವಿಸುವರು. **ತದ್ಯಥಾ** ಅದು ಹೇಗೆಂದರೆ **ಸ್ವರ್ಣಪ್ರಸ್ಥ, ಚಂದ್ರ, ಶುಕ್ಲ, ಆವರ್ತನ, ರಮಣಕ, ಮಂದೋರುಣ, ಪಾಂಚಜನ್ಯ, ಸಿಂಹಳ, ಲಂಕಾ ಇತಿ** ಎಂದು ಎಂಟು. ।।೩೦।।




**ಭಾರತೋತ್ತಮ** ಭರತಕುಲೋತ್ತಮನೇ **ತವ** ನಿನಗೆ **ಏವಂ** ಈ ರೀತಿಯಾಗಿ **ಜಂಬೂದ್ವೀಪವರ್ಷವಿಭಾಗಃ** ಜಂಬೂದ್ವೀಪದಲ್ಲಿಯ ಖಂಡಗಳ ವಿಭಾಗವು **ಯಥೋಪದೇಶಂ** ವೇದವ್ಯಾಸರು ನನಗೆ ಉಪದೇಶಿಸಿದಂತೆ **ಉಪವರ್ಣಿತಃ** ಹೇಳಲ್ಪಟ್ಟಿತು. ।।೩೧।।

**।। ಇಲ್ಲಿಗೆ ೧೯ನೇ ಅಧ್ಯಾಯವು ಮುಗಿಯಿತು ।।**

★★★



# ಹತ್ತೊಂಬತ್ತನೇ ಅಧ್ಯಾಯದ ಸಾರ

ಸಮಸ್ತ ಚಿದಚಿದಾತ್ಮಕ ಪ್ರಪಂಚ ನಿಯಾಮಕನಾದ ಶ್ರೀಹರಿಯ ಅನೇಕವಿಧ ಮಾಹಾತ್ಮ್ಯವನ್ನು ಭಕ್ತಿಯಿಂದ ಚಿಂತನ ಮಾಡುವುದರಿಂದ ಕೈವಲ್ಯಸಾಮ್ರಾಜ್ಯ ಸಂಪ್ರಾಪ್ತಿಯಾಗುವುದು. ಇದಕ್ಕೆ ವಿವಿಧವರ್ಷಗಳಲ್ಲಿರುವ ಉಪಾಸ್ಯ ಉಪಾಸಕ ಭಾವವನ್ನು ಈ ಅಧ್ಯಾಯದಲ್ಲಿ ತಿಳಿಸುವರು. ಮೊದಲಿಗೆ ಕಿಂಪುರುಷವರ್ಷದಲ್ಲಿ ಉಪಾಸಕರಾದ ಹನುಮಂತದೇವರು ಲೋಕಾಭಿರಾಮನಾದ ಶ್ರೀರಾಮಚಂದ್ರ ದೇವರನ್ನು ಉಪಾಸನೆ ಮಾಡುವ ರೀತಿಯನ್ನು ವರ್ಣಿಸುವರು. ಕಿಂಪುರುಷಖಂಡದಲ್ಲಿ ರಾಮಚಂದ್ರದೇವರ ಪಾದಸಾಮೀಪ್ಯದಲ್ಲಿಯೇ ಸಂತೋಷಪಡುವ ಜೀವೋತ್ತಮ ಭಗವದ್ಭಕ್ತರಾದ ಹನುಮಂತದೇವರು ಕಿಂಪುರುಷಖಂಡದ ಜನರ ಜೊತೆಗೆ ಪರಮಪೂಜ್ಯನಾದ ಕಾರಣಪುರುಷನಾದ ಲಕ್ಷ್ಮಣಾಗ್ರಜನಾದ ಸೀತಾಮನೋಹರನಾದ ಶ್ರೀರಾಮನನ್ನು ನಿರಂತರ ಭಕ್ತಿಯುಳ್ಳವರಾಗಿ ಉಪಾಸಿಸುವರು.

ಹನುಮಂತದೇವರು ಗಂಧರ್ವರೊಂದಿಗೆ ಆರ್ಷ್ಟಿಷೇಣನಿಂದ ಯಾವಾಗಲೂ ಗಾನಮಾಡಲ್ಪಡುವ ಅತ್ಯಂತ ಮಂಗಲಕರವಾದ ಪಾಲಕನಾದ ಶ್ರೀಹರಿಯ ಕಥೆಯನ್ನು ಕೇಳುವರು ತಾವು ಕೆಲಕಂಡಂತೆ ಹೇಳುವರು.

ಗುಣಪೂರ್ಣನಾದ ನಿರತಿಶಯ ಕೀರ್ತಿಯುಳ್ಳ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಗೆ ನಮಸ್ಕಾರವು. ಶ್ರೀಹರಿಯ ಲಕ್ಷಣಶೀಲವಾದ ನಿತ್ಯನಿರ್ದೋಷತತ್ತ್ವ ಸತ್ಯಜಗತ್ಸೃಷ್ಟಿ ಮಾಡಬೇಕೆಂಬ ವ್ರತವುಳ್ಳ, ಪೂಜ್ಯರ ಲಕ್ಷಣಶೀಲಗಳಿಗೆ ಕಾರಣನಾದ ಶ್ರೀಹರಿಗೆ ನಮಸ್ಕಾರ. ಜೀವರಿಗೆ ಆಶ್ರಯಪ್ರದನಾದ, ಲೋಕವನ್ನು ಅನುಗ್ರಹಿಸುವುದಕ್ಕಾಗಿ ದೇಹವನ್ನು ಸ್ವೀಕರಿಸಿದವನಾದ, ಯಾರನ್ನು ಉದ್ದೇಶಿಸಿ




ಜನರು ಉಪಾಸನಾಯುಕ್ತರಾಗಿರುವರೋ ಅವನಿಗೆ ಅಥವಾ ಲೋಕಾನುಸಾರಿ-ಯಾದವನಿಗೆ, 'ಇವನು ಸಾಧು' ಎಂಬ ವಚನಕ್ಕೆ ಸರಿಯಾಗಿ ವಿಚಾರಕವಾದ ಸಾಧುಗಳ ವಿವಾದಕ್ಕೆ ಪರಿಹಾರಕನಾದ, ಸಾಧು ಎಂಬ ಪ್ರಸಿದ್ಧಿಗೆ ಓರೆಗಲ್ಲಿನಂತೆ ನಿರ್ಧಾರಕನಾದ (ಕೊನೆಯ ಸೀಮೆಯಾದ), ಬ್ರಾಹ್ಮಣರಿಗೆ ಪ್ರಿಯನಾದ, ಕ್ರೀಡಾದಿಗುಣವಿಶಿಷ್ಟನಾದ, ಸರ್ವೋತ್ತಮನಾದ, ಉತ್ತಮರಾಜನಾದ ಸಾಕ್ಷಾತ್ ಭಗವತ್ಸ್ವರೂಪನಾದ ಶ್ರೀರಾಮನಿಗೆ ನಮಸ್ಕಾರ.

ಯಾವ ನಿನ್ನ ರೂಪವು ಪ್ರಾಕೃತ, ವೈಕೃತ ಸಂಬಂಧರಹಿತ ಜ್ಞಾನಾತ್ಮಕವಾದ ಇಂದ್ರಿಯಾದಿಗಳುಳ್ಳದ್ದೋ ಅಥವಾ ನಿರ್ದೋಷಾನುಭವಾತ್ಮಕ ಶರೀರವುಳ್ಳದ್ದೋ, ತನ್ನ ಸಾಮರ್ಥ್ಯದಿಂದಲೇ ದೂರೀಕರಿಸಿದ ಸತ್ವಾದಿ ಪ್ರಾಕೃತಗುಣಗಳು ಮತ್ತು ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳು ಅಥವಾ ಗುಣನಿಮಿತ್ತಕ ಮೂರು ಅವಸ್ಥೆಗಳನ್ನು ದೂರೀಕರಿಸಿದ ಜೀವನಿಗೆ ಅಭಿಮುಖವಾಗಿ ಜೀವಾಂತರ್ಗತ ಬಿಂಬವಾಗಿರುವುದೋ, ಪ್ರಕೃಷ್ಟ ಸುಖರೂಪವೋ, ಪ್ರಸನ್ನಾಕಾರವೋ, ಒಳ್ಳೆಯಬುದ್ಧಿಯಿಂದ ಹೊಂದಲಾಗುವ ಸಂಪೂರ್ಣವಾಗಿ ಪ್ರತಿಪಾದಿಸುವ ಪ್ರಾಕೃತ ನಾಮವಾಗಲಿ, ಭೌತಿಕ ರೂಪವಾಗಲಿ ಇಲ್ಲದಿರುವುದೋ (ಆದ್ದರಿಂದಲೇ ಪ್ರತ್ಯಕ್ಷಪ್ರಮಾಣ ವಿಷಯವಲ್ಲವೋ), ಅಹಂಕಾರವಿಲ್ಲದ್ದೋ, ಅಂತಹ ಸ್ವಗತ ಭೇದವಿಲ್ಲದ, ಸಮಾಧಿಕ ರಹಿತವಾದ ಸ್ವರೂಪವುಳ್ಳ, ಪರಬ್ರಹ್ಮನಾದ ನಿನ್ನನ್ನು ಶರಣುಹೊಂದುತ್ತೇನೆ ಎಂದು ಹೇಳುವರು.

ಶ್ರೀರಾಮನಿಗೆ ದಶರಥನಿಂದ ಜನ್ಮ, ಸೀತಾವಿಯೋಗ ಮೊದಲಾದವುಗಳಿಂದ ದುಃಖ ಅಜ್ಞಾನಾದಿಗಳು, ಮನುಷ್ಯರಂತೆ ಆಚರಣೆ ಏಕೆ ಎಂದರೆ ಈ ಭೂಲೋಕದಲ್ಲಿ ವ್ಯಾಪ್ತನಾದ, ಸಂಕಲ್ಪ ಮಾತ್ರದಿಂದಲೇ ಎಲ್ಲವನ್ನೂ ಮಾಡಲು ಸಮರ್ಥನಾದ ಶ್ರೀಹರಿಗೆ ಮನುಷ್ಯನಂತೆ ಅವತಾರಮಾಡುವುದು ಕೇವಲ ರಾಕ್ಷಸ ಸಂಹಾರಕ್ಕೆ ಮಾತ್ರ ಎಂದು ಸರ್ವಥಾ ತಿಳಿಯಬಾರದು. ಮನುಷ್ಯರು ಹಿರಿಯರ ಆಜ್ಞೆಯಂತೆ ನಡೆಯಬೇಕು. ಸ್ತ್ರೀಸಂಗದಿಂದ ದುಃಖವು ಅವರ್ಜನೀಯ. ಸಾಧ್ವಿಯಾದ ಹೆಂಡತಿಯನ್ನು ಸರ್ವಥಾ ಉಪೇಕ್ಷಿಸಬಾರದು. ವಿಷಯಗಳಲ್ಲಿ ವಿಶೇಷ ಆಸಕ್ತಿಯಿದ್ದರೆ ಅವುಗಳ ವಿಯೋಗದಿಂದ ಮಹಾದುಃಖವಾಗುವುದು. ಕಾರಣ ವಿಶೇಷ ಆಸಕ್ತಿ ಮಾಡಬಾರದು ಎಂದು ಎಲ್ಲ ಜೀವರಿಗೆ ಕಲಿಸುವುದಕ್ಕಾಗಿಯೇ ಭಗವಂತ ಮನುಷ್ಯರಂತೆ ನಡೆದದ್ದು, ದಶರಥನ ಆಜ್ಞೆ ನಡೆಸಲು ಕಾಡಿಗೆ ಹೋದದ್ದು,

ಸೀತೆಯನ್ನು ಹುಡುಕಿದ್ದು, ವ್ಯಸನವನ್ನು ತೋರಿಸಿದ್ದು, ಶರಣಾಗತನಾದ ಸುಗ್ರೀವನ ಇಷ್ಟವನ್ನು ನೇರವೇರಿಸಿದ್ದು, ವೀಭೀಷಣನಿಗೆ ಲಂಕಾರಾಜ್ಯ ದಾನಮಾಡಿದ್ದು. ಮನುಷ್ಯರಿಗೆ ತಿಳಿಸುವ ಉದ್ದೇಶವಿಲ್ಲದಿದ್ದರೆ ತನ್ನ ಸ್ವರೂಪದಲ್ಲಿ ಕ್ರೀಡಿಸುವ ಸರ್ವನಿಯಾಮಕನಾದ ರಾಮಚಂದ್ರನಿಗೆ ಸೀತೆಯ, ಲಕ್ಷ್ಮಣನ ವಿಯೋಗ ನಿಮಿತ್ತವಾದ ದುಃಖಗಳು ಏಕಾದಾವು? ಶ್ರೀರಾಮನು ಈಶ್ವರನಾದಲ್ಲಿ ದುಃಖವನ್ನು ಅನುಭವಿಸುವುದಿಲ್ಲ, ದುಃಖವನ್ನು ಅನುಭವಿಸಿದಲ್ಲಿ ಈಶ್ವರನಲ್ಲ. ಆದ್ದರಿಂದ ಮನುಷ್ಯರಿಗೆ ತಿಳಿಸಿಕೊಡುವುದಕ್ಕಾಗಿಯೇ ಹಾಗೆ ತೋರಿಸಿದನೇ ಹೊರತು ನಿಜವಾದ ದುಃಖ ಎಂದಿಗೂ ಅವನಿಗೆ ಇಲ್ಲ.

ದೇಹವುಳ್ಳ ಬ್ರಹ್ಮಾದಿಗಳಿಗೆ ಪ್ರಶಸ್ತಮನಸ್ಕರಾದ ಯೋಗೀಶ್ವರರಿಗೆ ನಿಯಾಮಕನಾದ ಸರ್ವಾಂತರ್ಯಾಮಿಯಾದ ಷಡ್ಗುಣಪೂರ್ಣನಾದ ಸರ್ವತ್ರ ವಾಸಿಸುವ ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವ ನಾಮಕನಾದ ಪರಮಾತ್ಮನಾದ ರಾಮಚಂದ್ರನು ದುಃಖವನ್ನು ಅನುಭವಿಸುವುದಿಲ್ಲ ಎಂಬುದು ಪ್ರಮಾಣಸಿದ್ಧವು. ಈ ಕಾರಣದಿಂದಲೇ ಸ್ತ್ರೀನಿಮಿತ್ತಕವಾದ ಸುರತವೆಂಬ ಕೊಳೆಯನ್ನು ಅನುಭವಿಸುವುದಿಲ್ಲ. ಎಂದೂ ಲಕ್ಷ್ಮಣನನ್ನು ಬಿಡುವುದೂ ಇಲ್ಲ . ಸೀತಾದೇವಿಯನ್ನೂ ಬಿಡುವುದಿಲ್ಲ.

ಭಕ್ತರ ಮೇಲಿನ ಕರುಣೆಯಿಂದ ಅವತಾರ ಮಾಡಿದ ಶ್ರೀರಾಮನಿಗೆ ದುಃಖಾನುಭವವಿಲ್ಲವಾದುದರಿಂದ ಅವನು ಈಶ್ವರನೆಂಬುದರಲ್ಲಿ ಯಾವ ವಿರೋಧವೂ ಇಲ್ಲ. ಈ ರಾಮದೇವರ ಪ್ರೀತಿಗೆ ಭಕ್ತಿಜ್ಞಾನಗಳೇ ಕಾರಣ ಹೊರತು ಜನ್ಮಾದಿಗಳಲ್ಲ.

ಹನುಮಂತದೇವರು ಹೇಳುವರು - ''ಕಪಿಯಾಗಿ ನೀಚಯೋನಿಯಲ್ಲಿ ಜನಿಸಿದಮಾತ್ರದಿಂದ ಜ್ಞಾನವಾಗುವುದಿಲ್ಲ ಎಂದಲ್ಲ. ಗುಣಗ್ರಾಹಿಗಳಲ್ಲಿ ಶ್ರೇಷ್ಠತಮನಾದ ಶ್ರೀರಾಮನಿಗೆ ಮೋಕ್ಷಾಧಿಕಾರಿ ಜೀವನ ಹುಟ್ಟು, ಸೌಂದರ್ಯ, ಬುದ್ಧಿನೈಪುಣ್ಯ, ಆಕಾರ(ಜಾತಿ) ಇವಾವುವೂ ಸಂತೋಷಕ್ಕೆ ಕಾರಣವಲ್ಲ. ಏಕೆಂದರೆ ಆ ಶ್ರೀರಾಮಚಂದ್ರನು ತಿರ್ಯಗ್ಜಂತುಗಳ ಯೋನಿಗಳಲ್ಲಿ ವಿವಿಧರೀತಿಯಿಂದ ಸೃಷ್ಟರಾದ, ತಿರ್ಯಗ್ ಜಂತುಗಳಾಗಿ ಬಂದ ಅಡವಿಯಲ್ಲಿ ವಾಸಿಸುವ, ವಾನರಯೋನಿಯಲ್ಲಿ ಬಂದ ನಮ್ಮನ್ನು ಸ್ನೇಹದಲ್ಲಿ ತೆಗೆದುಕೊಂಡಿರಲಿಲ್ಲವೇ? ಅವನ

 

ಕೃಪಾಶೀಲತೆಯೇ ಇದಕ್ಕೆ ಕಾರಣ. ಇದು ಎಲ್ಲ ಮಹಾತ್ಮರ ಸ್ವಭಾವ. ವಾನರ ಅಸುರ ಮುಂತಾದ ಪಾಪಯೋನಿಗಳಲ್ಲಿ ಹುಟ್ಟಿದ್ದರೂ ಭಕ್ತಿಜ್ಞಾನಗಳಿದ್ದಲ್ಲಿ ಮೋಕ್ಷವು ನಿಶ್ಚಿತ. ಆದ್ದರಿಂದ ಶ್ರೀಹರಿಯು ಜನ್ಮಾದಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ದುಷ್ಟಜೀವರಿಗೆ ಮಾತ್ರ ಅಂತಹ ಯೋನಿಗಳಲ್ಲಿ ಮಮತೆ ಮುಂತಾದ ದೋಷಗಳು ಇರುವುವು. ಮುಕ್ತಿಯೋಗ್ಯರಿಗಲ್ಲ. ಆದ್ದರಿಂದ ಪುರುಷಾರ್ಥಾಪೇಕ್ಷಿಗಳು ಭಕ್ತಿಜ್ಞಾನಗಳಿಂದ ಶ್ರೀರಾಮನನ್ನೇ ಭಜಿಸಬೇಕು. ರಾಮನನ್ನು ತಿಳಿಯಲು ಜನ್ಮಾದಿಗಳು ಕಾರಣವಲ್ಲ.

ಮುಕ್ತಿಯೋಗ್ಯನಾದ ಜೀವನು ದೇವತೆಯಾಗಲಿ, ಅಸುರನಾಗಿ ಹುಟ್ಟಿರಲಿ, ಮನುಷ್ಯನಾಗಲಿ, ಕಪಿಯಾಗಲಿ ತನ್ನ ಕೃತ್ಯಗಳನ್ನು ಚೆನ್ನಾಗಿ ಬಲ್ಲ ಸರ್ವೋತ್ತಮನಾದ ಮನುಷ್ಯನ ಆಕಾರವನ್ನು ಸ್ವೀಕರಿಸುವ ಅಯೋಧ್ಯಾನಿವಾಸಿಗಳಾದ ಪಕ್ಷಿ, ಜಿಂಕೆ, ಹುಲ್ಲು ಮೊದಲಾದ ಜೀವರನ್ನೂ ಸ್ವರ್ಗಕ್ಕೆ, ಮೋಕ್ಷಕ್ಕೆ, ವೈಕುಂಠಕ್ಕೆ ತಲುಪಿಸಿದ ಶ್ರೀರಾಮನನ್ನೇ ಸೇವಿಸಬೇಕು. ಅಸುರಾದಿ ಯೋನಿಗಳಲ್ಲಿ ಮಮತೆ ಮುಂತಾದ ದೋಷಗಳೇ ಸಂಭವಿಸುವುದರಿಂದ ರಾಮಭಜನೆಯು ಅವರಿಗೆ ಹೇಗೆ ಸಾಧ್ಯ ಎನ್ನಬಾರದು. ಆ ದೋಷಗಳು ಮುಕ್ತಿಯೋಗ್ಯರಲ್ಲದ ಅಸುರರಿಗೆ ಹೇಳಿದ್ದು. ಯೋಗ್ಯನಾದವನು ಅಸುರಯೋನಿಯಲ್ಲಿ ಬಂದಿದ್ದರೂ ಮುಕ್ತಿಯೋಗ್ಯರಾಗಿದ್ದರೆ ಮಮತಾದಿ ದೋಷಗಳು ಇರುವುದಿಲ್ಲ. ಈ ವಿಷಯದಲ್ಲಿ ಅನೇಕ ಶ್ರುತಿವಾಕ್ಯಗಳಿವೆ. ಆದ್ದರಿಂದ ಭಕ್ತಿ ಸರ್ವಶ್ರೇಷ್ಠವಾದ್ದರಿಂದ ಅವಶ್ಯ ಸಂಪಾದಿಸಬೇಕು. ಮೂಲರೂಪದಷ್ಟೇ ಅವತಾರರೂಪಕ್ಕೂ ಮೋಕ್ಷಕೊಡುವ ಶಕ್ತಿಯಿದೆ. ಆ ಕಾಲದಲ್ಲಿದ್ದವರ ಪ್ರತ್ಯಕ್ಷದಿಂದ ಸರ್ವರಿಗೂ ಸೇವೆಯಿಂದ ಮೋಕ್ಷಪ್ರದನು ಶ್ರೀರಾಮ.

ಭರತವರ್ಷದಲ್ಲಾದರೋ ನರನಾರಾಯಣ ಎಂಬ ಹೆಸರುಗಳುಳ್ಳ ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು ಕಲ್ಪಮುಗಿಯುವವರೆಗೂ ಮಾಡಲ್ಪಟ್ಟ ಪುಣ್ಯ ತತ್ತ್ವಜ್ಞಾನ ವಿಷಯ ವಿರಕ್ತಿ ಸಂಪತ್ತು ಆನಂದವುಳ್ಳವನಾಗಿ ಪರಮಾತ್ಮನೇ ಆದ ಜ್ಞಾನಿಗಳಮೇಲಿನ ಕರುಣೆಯಿಂದ ಯಾರಿಗೂ ಕಾಣದೇ ತಪಸ್ಸನ್ನು ಆಚರಿಸುವನು.

ಶ್ರೀಹರಿಯಿಂದ ಉಪದಿಷ್ಟಗಳಾದ ಯಥಾರ್ಥಜ್ಞಾನ ಮತ್ತು ಅದರ ಸಾಧನಗಳಿಂದ, ಸಾಂಖ್ಯ, ಯೋಗ ಎಂಬ ಶಾಸ್ತ್ರಗಳಿಂದ ಶ್ರೀಹರಿಯ ಮಾಹಾತ್ಮ್ಯವನ್ನು ವರ್ಣಿಸುವ ಪಂಚರಾತ್ರವೆಂಬ ಆಗಮವನ್ನು ಸಾವರ್ಣಿ ಮನುವಿಗೆ

ಉಪದೇಶ ಮಾಡುವ ಪೂಜ್ಯರಾದ ನಾರದರು ವರ್ಣಾಶ್ರಮ ಧರ್ಮಗಳನ್ನು ಅನುಸರಿಸುವ ಭರತಖಂಡ ನಿವಾಸಿಗಳಾದ ಪ್ರಜೆಗಳಿಂದ ಕೂಡಿಕೊಂಡು ಆ ತಪೋನಿಷ್ಠನಾದ (ನರ)ನಾರಾಯಣನನ್ನು ಅತಿಶಯ ಭಕ್ತಿಯಿಂದ ರೋಮಾಂಚಿತರಾಗಿ ಉಪಾಸಿಸುವರು. ಮುಂದೆ ಹೇಳುವ ಮಂತ್ರವನ್ನು ಹೇಳುವರು. ಭಗವನ್ನಿಷ್ಠೆಯೇ ಸ್ವಭಾವವಾಗಿವುಳ್ಳ ದೇಹ ಸಂಬಂಧವಾದ ದುಃಖಾದಿಗಳಿಲ್ಲದ ಏನನ್ನೂ ಅಪೇಕ್ಷಿಸದೇ ಇದ್ದು ಭಕ್ತರೇ ಹಣದಂತೆ ಪ್ರಿಯವಾಗಿವುಳ್ಳ ಋಷಿಶ್ರೇಷ್ಠನಾದ ಅತ್ಯಂತ ಶುದ್ಧನಾದ ಉತ್ತಮ ಸಂತೋಷಪಡುವ ಬ್ರಹ್ಮಾದಿಗಳಿಗೆ ಸ್ವಾಮಿಯಾದ ಐಶ್ವರ್ಯಶಾಲಿಯಾದ ನರನಾರಾಯಣನಿಗೆ ನಮಸ್ಕಾರ ಎಂದು ವಿಶದಪಡಿಸುತ್ತಾ ಸ್ತುತಿಸುವರು. ಮುಂದೆ ಹೇಳುವುದನ್ನು ಗಾನ ಮಾಡುವರು.

ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ಪ್ರಮಿತವಾದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕರ್ತೃವಾದರೂ ಯಾವ ನೀನು ಜೀವರಂತೆ ಸತ್ವಾದಿಗುಣ ಬಂಧನಕ್ಕೆ ಒಳಗಾಗುವುದಿಲ್ಲವೋ, ದೇಹದಲ್ಲಿ ಇದ್ದರೂ ದೇಹ ನಿಮಿತ್ತಗಳಾದ ಹಸಿವು, ನೀರಡಿಕೆ, ದುಃಖಗಳಿಂದ ಪೀಡಿತನಾಗುವುದಿಲ್ಲವೋ, ಸ್ವತಂತ್ರವಾಗಿ ನೋಡುವವನಾದ ಯಾವ ನಿನ್ನ ಜ್ಞಾನವು ಪ್ರಾಕೃತ ಗುಣಗಳಿಂದ ದರ್ಶನಕ್ಕೆ ಯೋಗ್ಯವಲ್ಲದ ರೂಪ ಮೊದಲಾದವುಗಳಿಂದ ವಿಕಾರ ಹೊಂದುವುದಿಲ್ಲವೋ, ಪಾಪಾದಿಗಳಿಂದ ದುಷ್ಟವಾಗುವುದಿಲ್ಲವೋ, ಅಂತಹ ಅಸಂಗನೂ, ವಿಲಕ್ಷಣನೂ, ಸಾಕ್ಷಿಯೂ ಆದ ನಿನಗೆ ನಮಸ್ಕಾರವು.

ಅಸಂಗನಾದ್ದರಿಂದ ಬದ್ಧನಲ್ಲ, ಲೋಕವಿಲಕ್ಷಣನಾದ್ದರಿಂದ ಪೀಡಿತನಲ್ಲ, ಸಾಕ್ಷಿಯಾದ್ದರಿಂದ (ಉದಾಸೀನವಾಗಿ ನೋಡುವುದರಿಂದ) ಪಾಪಾದಿ ಲಿಪ್ತನಲ್ಲವೆಂದು ನಾರಾಯಣನಿಗೆ ಧ್ಯಾನಯೋಗನಿಷ್ಠತ್ವವನ್ನು ಲೋಕ ಶಿಕ್ಷಣಕ್ಕಾಗಿ ಹೇಳಿತ್ತು. ಆ ಧ್ಯಾನಯೋಗದ ಸಾಮರ್ಥ್ಯವನ್ನು ನಿರೂಪಿಸುವರು.

ಯೋಗೇಶ್ವರನೇ! ಪೂಜ್ಯರಾದ ಬ್ರಹ್ಮದೇವರು ಯಾವ ಧ್ಯಾನಯೋಗದ ನಿಪುಣತೆಯನ್ನು ಹೇಳಿದರೋ ಅದು ಇದೇ ಅಲ್ಲವೇ. ಮರಣಕಾಲದಲ್ಲಿ ಪ್ರಾಕೃತಗುಣರಹಿತನಾದ ನಿನ್ನಲ್ಲಿ ಭಕ್ತಿಯಿಂದ ಮನಸ್ಸನ್ನು ಇಟ್ಟು ದುಃಖಾದಿಗಳಿಗೆ ಆಶ್ರಯವಾದ್ದರಿಂದ ದುಷ್ಟವಾದ ದೇಹವನ್ನು ಬಿಡುವುದೆಂಬುದೇನುಂಟೋ ಇದೇ ಬ್ರಹ್ಮದೇವರು ಹೇಳಿದ ಯೋಗ ನಿಪುಣತೆಯು. ಹೀಗೆ ನಾರಾಯಣದೇವರು




ಮಾಡುತ್ತಿರುವ ಧ್ಯಾನಯೋಗವು ಲೋಕಶಿಕ್ಷಣ ಮಾಡಿತು. ಪ್ರತಿಯೊಬ್ಬರೂ ಮರಣ ಕಾಲದಲ್ಲಿ ಭಗವಂತನಲ್ಲಿ ಮನಸ್ಸು ನಿಲ್ಲುವಂತೆ ಧ್ಯಾನಪಾಟವ ಸಂಪಾದಿಸಬೇಕು. ಇಲ್ಲವಾದರೆ ಧ್ಯಾನಾಭ್ಯಾಸ ಶ್ರಮ ವ್ಯರ್ಥವಾಗುವುದು.

ಹೇಗೆ ಐಹಿಕ, ಆಮುಷ್ಮಿಕ ಕಾಮಗಳಲ್ಲಿ ಆಸಕ್ತನಾದ ಅಜ್ಞಾನಿಯು ಮಕ್ಕಳಲ್ಲಿ ಹೆಂಡತಿಯಲ್ಲಿ ಹಣದಲ್ಲಿ ಇವುಗಳ ವಿಷಯದಲ್ಲಿ ನಾನು ಸತ್ತರೆ ದಿಕ್ಕಿಲ್ಲದ ಇವರು ಅನ್ಯಾಯವಾಗಿ ಹಾಳಾಗುವರು ಎಂದು ಆಲೋಚಿಸುತ್ತ ಕುತ್ಸಿತ ದೇಹ ಬಿಡಲು ಹೆದರುವನೋ ಹಾಗೆ ಅಪರೋಕ್ಷಿಯೂ ಹೆದರಿದ್ದೇ ಆದರೆ ಆ ಅಪರೋಕ್ಷಿಯ ಶಾಸ್ತ್ರ ಶ್ರವಣಾದಿಗಳಲ್ಲಿ ಪ್ರಯತ್ನವು ಯೋಗಾಭ್ಯಾಸ ಪ್ರಯತ್ನವು ಏನೂ ಪ್ರಯೋಜನಕಾರಿಯಾಗದಿದ್ದರಿಂದ ಶ್ರಮಮಾತ್ರವೇ. ಆದ್ದರಿಂದ ಸಾವಿಗೆ ಹೆದರಬಾರದು.

ಸಮರ್ಥನಾದ ಅಧೋಕ್ಷಜನೇ! ಅಜ್ಞಾನಿಗಳಿಂದ ಪರಿಹರಿಸಿಕೊಳ್ಳಲಾಗದ ನಿನ್ನ ಬಂಧಕ ಶಕ್ತಿಯಿಂದಲೇ ಕುತ್ಸಿತದೇಹ ಮತ್ತು ಅದರ ಅನುಬಂಧಿಗಳಲ್ಲಿ ಅಜ್ಞಾನಿಗಳಿಂದ ಮಾಡಲ್ಪಡುವ ಅಹಂಕಾರ ಮಮಕಾರಗಳು ಪ್ರಾರಬ್ಧಕರ್ಮದಿಂದಾಗಿ ಜ್ಞಾನಿಗಳಾದ ನಮಗೂ ಬರುವುವು. ಅವುಗಳನ್ನು ಯಾವ ಯೋಗನೈಪುಣ್ಯದಿಂದ ಶೀಘ್ರವಾಗಿ ನಾವು ಪರಿಹರಿಸಿಕೊಳ್ಳಬಹುದೋ ಅಂತಹ ನಿನ್ನಲ್ಲಿ ಭಕ್ತಿಯಿಂದ ಅಭಿವೃದ್ಧವಾದ ಯೋಗ ನೈಪುಣ್ಯವನ್ನು ವಿಶೇಷವಾಗಿ ಉಂಟು ಮಾಡು. ನಾರದರು ಅಪರೋಕ್ಷಜ್ಞಾನಿಗಳು. ಅವರಿಗೆ ಅಹಂಮಮತಾದಿ ದೋಷಗಳಿಲ್ಲ. ಆದರೂ ಅಜ್ಞಾನಿಗಳಿಗೆ ಮೋಕ್ಷಪ್ರತಿಬಂಧಕವಾದ ಈ ಅಹಂಮಮತೆ ಕರ್ಮನಿಮಿತ್ತವಾಗಿ ಯಾವಾಗಲಾದರೂ ನಾರದರಂತಹ ಅಪರೋಕ್ಷಜ್ಞಾನಿಗಳಿಗೂ ಉಂಟಾದಲ್ಲಿ ಅದನ್ನು ಶ್ರೀಹರಿಯ ಅನುಗ್ರಹದಿಂದ ಹೋಗಲಾಡಿಸಿಕೊಳ್ಳುವರು.

ಅಪರೋಕ್ಷ ಜ್ಞಾನವೂ, ಭಕ್ತಿಯೂ ಶ್ರೀಹರಿಯಲ್ಲಿ ಯಾವನಿಗೆ ಉಂಟಾಗಿರುವುದೋ ಅವನು ಯಾವಾಗಲಾದರೂ ಪ್ರಾರಬ್ಧಕರ್ಮದಿಂದ ಅಹಂಕಾರಮಮಕಾರಗಳಿಂದ ನಿಷಿದ್ಧಕರ್ಮ ಮಾಡಿದರೂ ಮೋಕ್ಷವನ್ನು ನಿಶ್ಚಯವಾಗಿಯೂ ಹೊಂದುತ್ತಾನೆ. ಅಹಂಕಾರ ಮಮಕಾರಗಳಿಗೆ ಪ್ರತಿಬಂಧಕತ್ವ ಹೇಳಿದ್ದು (ಅಜ್ಞಾನಿಗಳಿಗೆ) ಪರೋಕ್ಷ ಜ್ಞಾನಿಗಳಿಗೆ ಮಾತ್ರ. ಜ್ಞಾನಿಗಳಿಗೆ ಉತ್ತರಾಘಕ್ಕೆ ಅಶ್ಲೇಷ ಹೇಳಿದೆ.

ಇಲಾವೃತಾದಿಗಳಲ್ಲಿ ಅಷ್ಟೇ ಅಲ್ಲ ಈ ಭಾರತ ಖಂಡದಲ್ಲಿಯೂ ಅನೇಕ ನದಿಗಳೂ ಬೆಟ್ಟಗಳೂ ಇರುವುವು. ಮಲಯ, ಮಂದರಪ್ರಸ್ಥ (ಮಂಗಳಪ್ರಸ್ಥ), ಮೈನಾಕ, ತ್ರಿಕೂಟ, ಋಷಭ, ಕನಕ, ಕೋಸಲ(ಕೋಲ್ಲಕ ಅಥವಾ ಕೊಲ್ಲ), ಸಹ್ಯ, ವೇದಗಿರಿ, ಋಷ್ಯಮೂಕ, ಶ್ರೀಶೈಲ, ವೇಂಕಟ, ಮಹೇಂದ್ರ, ವಾರಿಧಾರ, ವಿಂಧ್ಯ ಶುಕ್ತಿಮಂತ, ಋಕ್ಷಗಿರಿ (ದಕ್ಷಗಿರಿ), ಪಾರಿಯಾತ್ರ, ದ್ರೋಣ, ಚಿತ್ರಕೂಟ, ಗೋವರ್ಧನ, ರೈವತಕ, ಕಕುಭ, ನೀಲ, ಕೋಕಾಮುಖ, ಇಂದ್ರಕೀಲ(ಶ), ಹಿಮಗಿರಿ (ಕಾಮಗಿರಿ) ಎಂದೂ ಇವುಗಳಲ್ಲದೆ ಬೇರೆ ಪರ್ವತಗಳು ನೂರುಗಟ್ಟಲೇ ಸಾವಿರಗಟ್ಟಲೇ ಇರುವುವು. ಆ ಪರ್ವತಗಳ ತಪ್ಪಲುಗಳಿಂದ ಹೊರಬಂದ ಎಣಿಸಲಾಗದ ಗಂಡು ನದಿಗಳು ಹೆಣ್ಣು ನದಿಗಳೂ ಇವೆ.

ಭಾರತ ಭೂಮಿಯ ಪ್ರಜೆಗಳು(ಜನರು) ಹೆಸರುಗಳಿಂದಲೇ ಪವಿತ್ರಗೊಳಿಸುವ ಈ ನದಿಗಳ ನೀರನ್ನು ದೇಹದಿಂದ ಅಂತರವಾಗಿಯೂ ಆಚಮನ ಸ್ನಾನ ಪಾನಗಳಿಂದ ಉಪಯೋಗಿಸುವರು. ನದಿಗಳನ್ನು ಹೇಳುವರು.

ಚಂದ್ರವಟಾ, ತಾಮ್ರಪರ್ಣೀ, ಅವಟೋದಕಾ, ಕೃತಮಾಲಾ, ವೈಹಾಯಸೀ, ಕಾವೇರೀ, ವೇಣೀ, ಪಯೋದಾ, ಯಮುನಾ, ಸರಸ್ವತೀ, ಶರ್ಕರಾವರ್ತಾ, ತುಂಗಭದ್ರಾ, ಕೃಷ್ಣಾ, ಭೀಮರಥೀ, ಗೋದಾವರೀ, ನಿರ್ವಿಂಧ್ಯಾ, ಪಯೋಷ್ಣೀ, ತಾಪೀ, ಸುರಸಾ, ನರ್ಮದಾ, ಚರ್ಮಣ್ವತೀ, ಸಿಂಧುಃ, ಅಂಧಃ, ಶೋಣ, ಮಹಾನದೀ, ವೇದಸ್ಮೃತಿ, ಋಷಿಕುಲ್ಯಾ, ತ್ರಿಸೋಮಾ, ಕೌಶಿಕೀ, ಮಂದಾಕಿನೀ, ದೃಷದ್ವತೀ, ಗೋಮತೀ, ಸರಯೂ, ಓಘವತೀ, ಸಪ್ತಶತೀ, ಘೋಷಣಾ, ಸುಷೋಮಾ, ಶತಮಾಲಾ, ಚಂದ್ರಭಾಗಾ, ಶತದ್ರು, ಮರುದ್ವೃತಾ, ವಿತಸ್ತಾ, ಅಸಿಕ್ನೀ, ವಿಶ್ವಾ ಎಂದು ಈ ಹೆಸರಿನ ಮಹಾನದಿಗಳು ಇವೆ. ಇವುಗಳಲ್ಲಿ ಅಂಧಃ, ಸೋಮಃ ಇವೆರಡು ನದಿಗಳು. ಗಂಗಾನದಿಯನ್ನು ಹಿಂದೆಯೇ ಹೇಳಿದ್ದರಿಂದ ಇಲ್ಲಿ ಹೇಳಿಲ್ಲ. ಕಾವೇರಿಯನ್ನು ಪ್ರತ್ಯೇಕ ಹೇಳಿದ್ದರಿಂದ ಮರುದ್ವೃತಾ ಎಂಬುದು ಬೇರೆ ನದಿ ಎಂದು ತಿಳಿಯಬೇಕು. ವಿಜಯಧ್ವಜರ ಪಾಠದಲ್ಲಿ ಮಂದಾಕಿನೀ ಎಂದು ಗಂಗೆಯನ್ನೂ ಹೇಳಿರುವರು.

ಈ ಭರತ ಖಂಡದಲ್ಲಿಯೇ ಹುಟ್ಟನ್ನು ಪಡೆದ ಜನರಿಂದ ಸಾತ್ವಿಕ ರಾಜಸ ತಾಮಸವೆಂಬ ತನ್ನ ಫಲವನ್ನು ಕೊಡಲಾರಂಭಿಸಿದ ತಾವು ಮಾಡಿದ ಕರ್ಮಗಳಿಂದ




ಒಂದಾದಮೇಲೊಂದು ಕ್ರಮವಾಗಿ ಅನೇಕ ಸಾತ್ವಿಕರಿಂದ ಸ್ವರ್ಗ, ರಾಜಸರಿಂದ ಭೂಮಿ, ತಾಮಸರಿಂದ ನರಕವಾಸಗಳು ಎಲ್ಲವೂ ಎಲ್ಲರಿಗೂ ಶ್ರೀಹರಿಯಿಂದ ಉಂಟಾಗುವುವು. ಇದು ಪ್ರಮಾಣಸಿದ್ಧ. ಸ್ವರ್ಗಾದಿಗತಿಗಳಷ್ಟೇ ಅಲ್ಲ ಸಂಸಾರ ದುಃಖವನ್ನು ಕಳೆಯುವ ಮೋಕ್ಷವೂ ವರ್ಣಧರ್ಮಕ್ಕನುಗುಣವಾಗಿ ಆಗುವುದು. ಯಾವಾಗ ಶ್ರೀಹರಿಪರಾಯಣರಾದ ಮಹನೀಯರ ಸಹವಾಸವು ಆಗುವುದೋ ಆಗ ಸ್ವರ್ಗ, ಭೂ, ನರಕ ಮುಂತಾದ ಅನೇಕ ಗತಿಗಳಿಗೆ ಕಾರಣವಾದ ಅಜ್ಞಾನವೆಂಬ ಗಂಟನ್ನು ಸುಡುವರು. ತದ್ವಾರಾ ಎಲ್ಲ ಪ್ರಾಣಿಗಳ ಅಂತರ್ಯಾಮಿಯಾದ, ಅಜ್ಞಾನಾದಿಗಳಿಲ್ಲದ, ವೇದಗಳಿಂದಲೂ ಸಂಪೂರ್ಣ ಹೇಳಲಾಗದ, ಮತ್ತೊಬ್ಬರನ್ನಾಶ್ರಯಿಸದ, ಲಕ್ಷ್ಮಿಯೇ ಉತ್ತಮಳಾಗಿವುಳ್ಳ, ಮುಕ್ತಬ್ರಹ್ಮರಿಗೂ ಸ್ವಾಮಿಯಾದ, ಆನಂದ ಮುಂತಾದುವನ್ನು ನೀಡುವ ಮೋಕ್ಷಪ್ರದ ವಾಸುದೇವನಾಮಕ ಪರಮಾತ್ಮನಲ್ಲಿ ನಿಷ್ಕಾಮಭಕ್ತಿ ಉಂಟಾಗುವುದು. ಭಕ್ತಿ ಹುಟ್ಟಲು ಸಜ್ಜನ ಸಹವಾಸವು ಕಾರಣವು. ಅಂತಹ ಭಕ್ತಿಯಿಂದ ಮುಕ್ತಿಯಾಗುವುದೊಂಬುದನ್ನೇ ಜ್ಞಾನಿಗಳಾದ ದೇವತೆಗಳು ಗಾನಮಾಡುವರು. ಅಥವಾ ಭಕ್ತಿಯೋಗವೇ ಕಾರಣವಾಗಿವುಳ್ಳ ಸ್ವರೂಪಾನಂದಾವಿರ್ಭಾವವೇ ಮೋಕ್ಷವು. ಭಾರತ ವರ್ಷದಲ್ಲಿ ಜನಿಸಿದ ಜನರಿಗೆ ವಾಸುದೇವನಲ್ಲಿ ಅನನ್ಯ ನಿಮಿತ್ತಕ ಭಕ್ತಿಯೋಗದಿಂದ ತಮ್ಮ ತಮ್ಮ ವರ್ಣಾಶ್ರಮ ವಿಹಿತಧರ್ಮಾನುಷ್ಠಾನ ಮಾಡುವವರಿಗೆ ಮುಕ್ತಿಯಾಗುವುದು ಎಂಬುದನ್ನೇ ದೇವತೆಗಳು ಹಾಡುವರು.

ಮೋಕ್ಷಪ್ರದನಾದ ಶ್ರೀಹರಿಯ ಸೇವೆಗೆ ಕಾರಣವಾದ ಭಾರತ ಭೂಮಿಯಲ್ಲಿ ಮನುಷ್ಯ ಜನ್ಮವನ್ನು ಇಚ್ಛಿಸುವ ಮನಸ್ಸುಳ್ಳ ಮುಮುಕ್ಷು ಜೀವರಿಂದ ಈ ಭಾರತಭೂಮಿ ಎಂಬ ಅಂಗಳದಲ್ಲಿ ಮನುಷ್ಯರಲ್ಲಿ ಹುಟ್ಟುಲು ಯಾವ ಪುಣ್ಯ ಕರ್ಮಮಾಡಲ್ಪಟ್ಟಿತ್ತೋ? ಆಶ್ಚರ್ಯವು! ಶ್ರೀಹರಿಯು ಯಾವ ಕರ್ಮವನ್ನೂ ಅಪೇಕ್ಷಿಸದೇ ತಾನಾಗಿಯೇ ಇವರಿಗೆ ಅನುಗ್ರಹ ಮಾಡಿರುವನೇ? ಭಾರತದಲ್ಲಿ ಮನುಷ್ಯಜನ್ಮ ಶ್ರೀಹರಿಯು ಪ್ರಸನ್ನನಾಗದಿದ್ದರೆ ದೊರೆಯುವುದಿಲ್ಲ.

ಈ ರೀತಿಯಾಗಿ ಭರತಖಂಡದಲ್ಲಿ ಜನಿಸಿದ ಮುಮುಕ್ಷುಗಳನ್ನು ಪ್ರಶಂಸಿಸಿ ಸ್ವರ್ಗಕ್ಕಾಗಿ ಕಾಮ್ಯಕರ್ಮಗಳನ್ನು ಮಾಡುವವರನ್ನು ನಿಂದಿಸುವರು.

ಕಷ್ಟದಿಂದ ಮಾಡಲ್ಪಡುವ ನಮ್ಮನ್ನುದ್ದೇಶಿಸಿ ಮಾಡಿದ ಯಾಗಗಳಿಂದ ಏನು ಪ್ರಯೋಜನ? ತಪಸ್ಸುಗಳಿಂದಾಗಲಿ ವ್ರತಗಳಿಂದಾಗಲಿ ದಾನಾದಿಗಳಿಂದಾಗಲಿ ಏನು ಪ್ರಯೋಜನ? ಯಾವ ಸ್ವರ್ಗದಲ್ಲಿ ಅತಿಯಾದ ವಿಷಯ ಭೋಗದಿಂದ ಶ್ರೀಹರಿಯ ಚರಣಾರವಿಂದ ಸ್ಮರಣವು ನಷ್ಟವಾಗಿದೆಯೋ ಅಂತಹ ತುಚ್ಛವಾದ ಸ್ವರ್ಗವನ್ನು ಪಡೆಯುವುದರಿಂದ ಏನು ಪ್ರಯೋಜನ? ಹರಿಸ್ಮರಣೆಯಿಲ್ಲದ ಸ್ವರ್ಗಕ್ಕಿಂತ ಹರಿಸ್ಮರಣೆಗೆ ಕಾರಣವಾದ ಭಾರತ ಜನ್ಮ ಶ್ರೇಷ್ಠ. ಕರ್ಮಮಾಡಿ ಸ್ವರ್ಗ ಪಡೆದ ಜೀವರಿಗೆ ಹೇಳಿದ ಮಾತಿದು. ಸ್ವರೂಪತಃ ಸ್ವರ್ಗದಲ್ಲಿರುವ ದೇವತೆಗಳಿಗಲ್ಲ. ಅವರು ಯಾವಾಗಲೂ ಹರಿಸ್ಮರಣೆ ಮಾಡುವರೆಂದು ಪ್ರಮಾಣಗಳಿವೆ.

ಹಾಗಾದರೆ ಶ್ರವಣಾದಿಗಳಿಂದ ಸಿಗುವ ಮಹರ್ಲೋಕ ಪ್ರಾಪ್ತಿಯು ಹರಿಸ್ಮರಣ ಸಂಪಾದಕವಾದ್ದರಿಂದ ಶ್ರೇಷ್ಠವಾಗಲಿ ಎಂದರೆ ಕಲ್ಪಾಯುಷ್ಯಪರ ಮಹರ್ಲೋಕಾದಿ ಪ್ರಾಪ್ತಿಗಿಂತ ಕ್ಷಣಾಯುಷ್ಯಪ್ರದ ಭಾರತವರ್ಷಪ್ರಾಪ್ತಿಯೇ ಅತ್ಯಂತ ಶ್ರೇಷ್ಠ.

ಮತ್ತೆ ಸಂಸಾರಕ್ಕೆ ಬರುವ ಬ್ರಹ್ಮದೇವರ ಒಂದು ದಿನದ ಕಲ್ಪ ಆಯುಷ್ಯವುಳ್ಳವರ ಸ್ಥಳವಾದ ಮಹರ್ಲೋಕ ಪ್ರಾಪ್ತಿಗಿಂತಲೂ ಅಲ್ಪ ಆಯುಷ್ಯವುಳ್ಳವರ (ಸ್ಥಳವಾದ) ಭಾರತ ಭೂಮಿಯಲ್ಲಿ ಜನ್ಮಲಾಭವು ಶ್ರೇಷ್ಠವು. ಭಾರತದಲ್ಲಿ ಹುಟ್ಟಿದವರಿಗೂ ಮತ್ತೆ ಹುಟ್ಟು ಸಾವುಗಳಿರುವುದರಿಂದ ಹೇಗೆ ಶ್ರೇಷ್ಠವೆಂದರೆ ಭಾರತದಲ್ಲಿ ಜನ್ಮವೆತ್ತಿದ ಯೋಗಿಗಳು ಕ್ಷಣಕಾಲವಿರುವ (ಅಲ್ಪಕಾಲವಿರುವ) ನಶ್ವರವಾದ ದೇಹದಿಂದ ಮಾಡಿದ ಕರ್ಮವನ್ನು ಭಕ್ತಿಯಿಂದ ಶ್ರೀಹರಿಯಲ್ಲಿ ಸಮರ್ಪಿಸಿ ಪುನರ್ಜನ್ಮದ ಭಯವಿಲ್ಲದ ಶ್ರೀಹರಿಯ ಸ್ಥಾನವನ್ನು ಸಾರ್ವಕಾಲಿಕವಾಗಿ ಹೊಂದುವರು. ಆದ್ದರಿಂದ ಮಹರ್ಲೋಕ ಪ್ರಾಪ್ತಿಗಿಂತ ಭಾರತದ ಭೂಲೋಕ ಪ್ರಾಪ್ತಿಯೇ ಉತ್ತಮವೆಂದು ತಾತ್ಪರ್ಯ.

ಬ್ರಹ್ಮದೇವರ ಒಂದು ದಿನ ಪರ್ಯಂತ ಆಯುಷ್ಯವುಳ್ಳವರ ಸ್ಥಾನ ಎಂದರೆ ಮಹರ್ಲೋಕ. ಹೀಗೆ ಸತ್ಸಂಗತಿಯಿಂದ ಹರಿಕಥಾ ಶ್ರವಣಾದಿಗಳಿಂದ ಭಕ್ತಿಯುಳ್ಳವರಿಗೆ ನಿವೃತ್ತಕರ್ಮಾನುಷ್ಠಾನದಿಂದ ಮೋಕ್ಷವಾಗುವುದರಿಂದ ಭಾರತವರ್ಷ ಶ್ರೇಷ್ಠ. ಹರಿಕಥಾ ಶ್ರವಣ, ಭಕ್ತ್ಯಾದಿಗಳು ಇಲ್ಲದಿದ್ದರೆ ಭರತ ಭೂಮಿಯೂ ಸೇವಿಸಲು ಯೋಗ್ಯವಲ್ಲ.




ಸ್ವರ್ಗಲೋಕ, ಮಹರ್ಲೋಕ ಮೊದಲಾದವುಗಳಲ್ಲಿ ಅತಿಶಯ ವಿಷಯಸುಖಕ್ಕೆ ಅವಕಾಶವಿರುವುದರಿಂದ ಅವುಗಳನ್ನು ಭರತಖಂಡಕ್ಕಿಂತ ಕಡಿಮೆ ಎಂದು ಹೇಗೆ ಹೇಳುತ್ತೀರಿ ಎಂದರೆ ಹೇಳುತ್ತಾರೆ. ಯದ್ಯಪಿ ಸ್ವರ್ಗದಲ್ಲಿ ಕಲ್ಪವೃಕ್ಷ ಮುಂತಾದ ಗಿಡಗಳೂ ಸರ್ವಾಭೀಷ್ಟ ಕೊಡುವುವು. ಅಲ್ಲಿ ತಾಪತ್ರಯ ಪರಿಹರಿಸುವ ನಂದನವನವಿದೆ. ಅಮೃತಮಯ ಸರೋವರಗಳು, ಸ್ತ್ರೀಯರೂ ಕೂಡ ಮುಪ್ಪಿಲ್ಲದ ಸುಂದರವಾದ ದೇಹವುಳ್ಳವರು. ಅವರ ಹಾಡುಗಳು ಪ್ರಮೋದ, ಪಾರವಶ್ಯ ನೀಡುವುವು. ಪುರುಷರೂ ನಿತ್ಯ ತರುಣರು. ಭೋಗಗಳೂ ಕೂಡಾ ಇಚ್ಛಾಮಾತ್ರದಿಂದ ಸಾಧ್ಯವಾದವುಗಳು. ಶ್ರೇಷ್ಠವಾದವುಗಳು. ಈ ರೀತಿ ಪ್ರತಿಕ್ಷಣ ಇಂದ್ರಿಯಗಳಿಗೆ ಹಬ್ಬ. ಇಂಥ ದೇವತೆಗಳ ಲೋಕವೂ ಸಹ ತಿಳಿದವರಿಂದ ಹೀಯಾಳಿಸಲ್ಪಡುವುದು. ಏಕೆಂದರೆ ಸ್ವರ್ಗಾದಿಲೋಕಗಳಲ್ಲಿ ಶ್ರೀಹರಿಯ ಕಥೆಯನ್ನು ಹೇಳುವ, ರಾಗದ್ವೇಷರಹಿತರಾದ ಭಗವದ್ಭಕ್ತರು ಇಲ್ಲಿಯಂತೆ ಸುಲಭವಾಗಿ ದೊರೆಯುವುದಿಲ್ಲ. ಅಲ್ಲಿ ಹೊಂದಬೇಕಾದ ಫಲವಿಲ್ಲವಾದ್ದರಿಂದ ಯಜ್ಞನಿಯಾಮಕ ಶ್ರೀಹರಿಯನ್ನುದ್ದೇಶಿಸಿ ಮಾಡುವ ಯಾಗಗಳೂ ಇಲ್ಲ. ಆದ್ದರಿಂದ ಇಂದ್ರಾದಿಗಳ ಲೋಕಗಳೂ ಕೂಡ ಫಲಕ್ಕಾಗಿ ಸೇವಾಯೋಗ್ಯತೆಯನ್ನು ಹೊಂದುವುದಿಲ್ಲ.

ಅದೂ ಅಲ್ಲದೇ ಅಲ್ಲಿಗೆ ಬಂದಿರುವವರಿಗೆ ಹಿಂದೆ ತಾವು ಮಾಡಿದ ಪುಣ್ಯಕರ್ಮಗಳ ಫಲವನ್ನು ಅನುಭವಿಸುವುದರಲ್ಲಿಯೇ ಕಾಲವು ಹೋಗುವುದರಿಂದ ಯಜ್ಞಮಾಡಲು ಸಮಯವೇ ಇಲ್ಲವೆಂದು ಪರಸ್ಪರ ಸುಮ್ಮನಿರುವರು. **ಧ್ಯಾಯಂತೀವ ದೇವಮನಷ್ಯಾಃ** ಎಂಬ ಶ್ರುತಿಯು ಇದನ್ನೇ ಸ್ಪಷ್ಟಪಡಿಸುವುದು. ಇದರಿಂದ ಶ್ರೀಹರಿಯ ಸ್ಮರಣೆಗೆ ಅವಕಾಶವಿಲ್ಲದ ಸ್ವರ್ಗಾದಿಗಳೇ ಸೇವ್ಯವಲ್ಲವೆಂದಮೇಲೆ ಭಾರತವರ್ಷವೂ ಸೇವ್ಯವಲ್ಲವೆಂದು ಬೇರೆ ಹೇಳಬೇಕಿಲ್ಲವೆಂಬ ಕೈಮುತ್ಯನ್ಯಾಯ ತಿಳಿದುಬರುವುದು.

ಕಾರಣ ಭಗವದ್ಭಕ್ತಿ ಇದ್ದರೆ ಭಾರತ ಭೂಮಿಯೇ ಬೇಕೆಂಬ ನಿಯಮವಿಲ್ಲ. ಆದರೆ, ಭಕ್ತಿಯಿದ್ದ ಎಲ್ಲ ಲೋಕಗಳು ಸೇವ್ಯವೆಂದು ತಿಳಿಯುವಂತಿಲ್ಲ. ಭಾರತ ಭೂಮಿಯಲ್ಲೇ ಭಕ್ತಿಯು ಪ್ರಚುರವಾಗಿರುವುದರಿಂದ ಭಕ್ತಿಯು ಪ್ರಾಚುರವಾಗಿ ಇಲ್ಲದಿರುವ ಇತರ ಲೋಕಗಳಿಗಿಂತ ಇದೇ ಶ್ರೇಷ್ಠವೆಂದು ಸ್ತುತಿಯಲ್ಲಿಯೇ ತಾತ್ಪರ್ಯ.

ಭರತಖಂಡದಲ್ಲಿ ಜನ್ಮಪಡೆದವರು ಮೋಕ್ಷಪ್ರಯತ್ನ ಮಾಡಲೇಬೇಕು. ಮೋಕ್ಷಕ್ಕಾಗಿ ಪ್ರಯತ್ನ ಮಾಡದವರು ನಿಂದೆಗೆ ಯೋಗ್ಯರು. ತಿಳುವಳಿಕೆ, ಕೆಲಸ(ಕರ್ಮ), ಧನ ಪದಾರ್ಥಗಳ ಸಾಮಾಗ್ರಿಯಿಂದ ಕೂಡಿದ ಯಾರು ಭಾರತದಲ್ಲಿ ಮೋಕ್ಷಕ್ಕಾಗಿ ಪ್ರಯತ್ನಮಾಡುವುದಿಲ್ಲವೋ ಅವರು ಮತ್ತೆ ಮತ್ತೆ ನರಕವಾಸಿಗಳಂತೆ ಸಂಸಾರದುಃಖವನ್ನು ಹೊಂದುವರು. ಆದರಿಂದ ಬಿಡುಗಡೆ ಇರುವುದಿಲ್ಲ. ಮೋಕ್ಷಕ್ಕೆ ಪ್ರಯತ್ನಿಸದ ಮನುಷ್ಯರು ಮಹಾತಮಸ್ಸಿಗೆ ಸೇರಲು ಯೋಗ್ಯರು. ಇನ್ನು ಯಾರು ಜ್ಞಾನ ಕರ್ಮಗಳಿಗೆ ಯೋಗ್ಯವಾದ ಬ್ರಾಹ್ಮಣ ಜನ್ಮವನ್ನು ಈ ಭಾರತದಲ್ಲಿ ಹೊಂದಿರುವರೋ ಅವರು ಮೋಕ್ಷಕ್ಕೆ ಪ್ರಯತ್ನಿಸದಿದ್ದರೆ ನಿತ್ಯನರಕವಾದ ಅಂಧಂತಮಸ್ಸಿಗೆ ಹೋಗಲು ಯೋಗ್ಯರು. ಬೇಡನ ಬಲೆಯಿಂದ ಹೇಗೋ ತಪ್ಪಿಸಿಕೊಂಡ ಮೃಗಗಳು ಮತ್ತೆ ಮತ್ತೆ ಅದೇ ಪ್ರದೇಶದಲ್ಲಿಯೇ ಓಡಾಡುತ್ತಿದ್ದರೆ ಹೇಗೆ ಸಿಕ್ಕಿಬೀಳುವವೋ ಹಾಗೆ ಸಾಧನ ಭೂಮಿಯಾದ ಭಾರತಕ್ಕೆ ಬಂದೂ ಸಾಧನ ಮಾಡಿಕೊಳ್ಳದಿದ್ದವನು ಸಂಸಾರಕ್ಕೆ ಸಿಕ್ಕಿಬೀಳುವನು.ಹೀಗೆ ಮೋಕ್ಷಕ್ಕೆ ಪ್ರಯತ್ನ ಮಾಡದವರನ್ನು ನಿಂದಿಸಿದ್ದರಿಂದ ಭಾರತದಲ್ಲಿ ಹುಟ್ಟಿದವರು ಅವಶ್ಯವಾಗಿ ಮೋಕ್ಷಕ್ಕೆ ಪ್ರಯತ್ನ ಮಾಡಲೇಬೇಕು.

ಭಾರತ ಭೂಮಿಯಲ್ಲಿ ಮಾಡುವ ಯಜ್ಞಮೊದಲಾದ ಕರ್ಮಗಳು ಶ್ರೀಹರಿ ಪ್ರೀತಿಜನಕವಾದ್ದರಿಂದ ಎಲ್ಲ ಸಾಧನೆಗೆ ಆವಾಸವಾದ ಈ ಖಂಡವು ಮಿಕ್ಕ ಖಂಡಗಳಿಗಿಂತ ಉತ್ತಮವಾದುದು. ಆದ್ದರಿಂದಲೇ ಇದನ್ನು ಸ್ತೋತ್ರಮಾಡುವರು. ಭಾರತನಿವಾಸಿಗಳಿಂದ ವೇದೋಕ್ತರೀತಿಯಲ್ಲಿ ವಿಧಿಪೂರ್ವಕವಾಗಿ ಆಸ್ತಿಕ್ಯ ಬುದ್ಧಿಯಿಂದ ಮಾಡಲ್ಪಡುವ, ಇಂದ್ರಾದಿಗಳಿಗೆಂದು ಪ್ರತ್ಯೇಕವಾಗಿ '**ಅಗ್ನಯೇ ಜುಷ್ಟಂ ನಿರ್ವಪಾಮಿ**' ಎಂದು ಪಾಕ ಮಾಡಿ ಪ್ರತ್ಯೇಕ ಸಿದ್ಧಪಡಿಸಿದ '**ಇಂದ್ರಂ ಯಜೇ**' '**ಅಗ್ನಿಂ ಯಜೇ**' ಎಂದು ಬೇರೆ ಬೇರೆ ಹೋಮ ಮಾಡಿದ ಹವಿಸ್ಸನ್ನು ಇಂದ್ರಮುಂತಾದ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟ ಒಬ್ಬನೇ ಎಲ್ಲರ ಯೋಗ್ಯವಾದ ಎಲ್ಲ ಬಯಕೆಗಳನ್ನು ಪೂರೈಸುವ ಸಾಮರ್ಥ್ಯವುಳ್ಳ ಆದ್ದರಿಂದಲೇ ಸ್ವಯಂ ಪೂರ್ಣನಾದ ಶ್ರೀಹರಿಯು ತಾನೇ ಸಂತೋಷದಿಂದ ಸ್ವೀಕರಿಸುವನು. ಆದ್ದರಿಂದಲೇ ಅವನು ಆಶಿಷಾಂ ಪ್ರಭುಃ ಎಂದು ಹೇಳಲ್ಪಡುವನು. ಇಂದ್ರಮೊದಲಾದ ಹೆಸರುಗಳಿಂದಲೂ ಮುಖ್ಯವಾಗಿ ಇವನೇ ಕರೆಯಲ್ಪಡುವನು.




ಆದ್ದರಿಂದ ಒಬ್ಬನೇ ಸ್ವೀಕರಿಸಬಲ್ಲನು. ವಿಘ್ನೇಶ್ವರ ಮೊದಲಾದವರಂತೆ ಹೊಂದಬೇಕಾದ ಫಲಾಪೇಕ್ಷೆ ಇವನಿಗೇನು ಇಲ್ಲ.

ಭಕ್ತರಿಂದ ಪ್ರಾರ್ಥಿತನಾದ ಶ್ರೀಹರಿಯು ಯಾಗ ಮಾಡುವ ಜನರಿಗೆ ಅಪೇಕ್ಷಿತವಾದ ಸ್ವರ್ಗಾದಿಗಳನ್ನು, ಧನಾದಿಗಳನ್ನು ಕೊಡುವನು ಎಂಬುದು ನಿಶ್ಚಯ. ಯಾವ ಕಾರಣ ಫಲಾಪೇಕ್ಷಿಗಳಿಗೆ ಗರ್ವವು ಬರುವುದೋ ಆ ಕಾರಣ ಪುನಃ ಪ್ರಾರ್ಥಿತನಾದರೂ ಫಲವನ್ನು ಕೊಡುವುದಿಲ್ಲ. ಇದು ಸತ್ಯವೇ? ಅಂದರೆ ಅಪೇಕ್ಷಿಸುವ ಕೆಲವರಿಗೆ ಮದ ಬರುವುದು. ಅವರಿಗೆ ಕೊಡುವುದಿಲ್ಲ. ಮದಬರದಿರುವವರಿಗೆ ಫಲ ಕೊಡುವನು. ಇಷ್ಟವನ್ನು ಕೊಡುವ ತನ್ನ ಕೋಮಲ ಪಾದಗಳನ್ನು ಭಕ್ತಿಯನ್ನು ಬಿಟ್ಟು ಬೇರೊಂದನ್ನು ಅಪೇಕ್ಷಿಸದೇ ಸೇವಿಸುವವರಿಗೆ (ನಿಷ್ಕಾಮ ಭಕ್ತರಿಗೆ) ತಾನಾಗಿಯೇ ಕೊಡುವನು(ತನ್ನನ್ನೇ ಕೊಡುವನು). ಭಕ್ತರು ಸಕಾಮವಾಗಿ ಮಾಡಿದರೆ ಕಾಮಿತ ಫಲವನ್ನೂ ನಿಷ್ಕಾಮನೆಯಿಂದ ಮಾಡಿದರೆ ಮೋಕ್ಷವನ್ನು ಶ್ರೀಹರಿ ದಯಪಾಲಿಸುವನು.

ಭರತಖಂಡದಲ್ಲಿ ತನ್ನನ್ನು ಸೇವಿಸುವುದರಿಂದ ಶ್ರೀಹರಿಯು ಸುಖವನ್ನು ಉಂಟುಮಾಡುವನು. ಕಾರಣ ಚೆನ್ನಾಗಿ ಯಾಗ ಮಾಡಿದ, ಸರಿಯಾಗಿ ದಾನ ಮಾಡಿದ ಸರಿಯಾಗಿ ಮಾಡಿದ ಕರ್ಮದಿಂದ ಸ್ವರ್ಗದಲ್ಲಿ ಸುಖಾನುಭವವನ್ನಿತ್ತು ಉಳಿದ ಯಾವ ಪುಣ್ಯವಿದೆಯೋ ಆದರಿಂದ ಶ್ರೀಹರಿಯ ಸ್ಮರಣೆಯನ್ನು ಕೊಡುವ ಭಾರತ ಭೂಮಿಯಲ್ಲಿ ಜನ್ಮವು ಆಗಲಿ. ಪುಣ್ಯ ಉಳಿದಿದ್ದಾದರೆ ಅದರಿಂದ ಭಾರತದಲ್ಲಿ ಜನ್ಮ ಬರಲಿ. ದೇವತೆಗಳೂ ಭಾರತವರ್ಷದಲ್ಲಿ ಹುಟ್ಟನ್ನು ಪ್ರಾರ್ಥಿಸುವರು. ಅವರಿಗೆ ಮೋಕ್ಷಾತಿರಿಕ್ತ ಪುರುಷಾರ್ಥೇಚ್ಛೆಯಿಲ್ಲ. ಮೋಕ್ಷವು ಅವರಿಗೆ ನಿಶ್ಚಿತ ಕಾರಣ ಅವರಿಗೆ ಜನ್ಮ ವ್ಯರ್ಥವಾಗುತ್ತದಲ್ಲಾ ಎಂದರೆ ದೇವತೆಗಳು ಎರಡು ಬಗೆ - ಆಧಿಕಾರಿಕರು, ಆಧಿಕಾರಿಕರಲ್ಲದವರು. ಅದರಲ್ಲಿ ಮೊದಲನೆಯವರು ಸ್ವರೂಪದಿಂದಲೇ ದೇವತೆಗಳು. ಎರಡನೆಯವರು ಭೂಲೋಕದಲ್ಲಿ ಯಾಗಾದಿಗಳನ್ನು ಮಾಡಿ ಸ್ವರ್ಗವನ್ನು ಪಡೆದವರು. ದೇವತ್ವ ಯೋಗ್ಯ ಮನುಷ್ಯರು. ಈ ಅನಧಿಕಾರಿ ದೇವತೆಗಳು ತಮ್ಮ ಮೋಕ್ಷಕ್ಕಾಗಿ ಭಾರತದಲ್ಲಿ ಸಾಧನ ಮಾಡಲು ಜನ್ಮವನ್ನು ಅಪೇಕ್ಷಿಸುವರು. ಆಧಿಕಾರಿಕ ಇಂದ್ರಾದಿಗಳು ಮೋಕ್ಷದಲ್ಲಿ ಆನಂದಾತಿಶಯಕ್ಕಾಗಿ ಸಾಧನ ಮಾಡಲು ಭಾರತದಲ್ಲಿ ಜನ್ಮ ಅಪೇಕ್ಷಿಸುವರು. ಕಾರಣ ಸಂದೇಹಕ್ಕೆ ಅವಕಾಶವಿಲ್ಲ.

ಪರೀಕ್ಷಿತನೇ! ವಿಶೇಷವನ್ನು ಹೇಳಬೇಕೆಂದು ಕೆಲವರು ಜಂಬೂದ್ವೀಪಕ್ಕೆ ಎಂಟು ಉಪದ್ವೀಪಗಳನ್ನು ಹೇಳುವರು. ಈ ದ್ವೀಪಗಳು ಸಗರ ಚಕ್ರವರ್ತಿಯ ಮಕ್ಕಳಾದ ಅರವತ್ತು ಸಾವಿರ ಜನರಿಂದ ಯಜ್ಞಾಶ್ವವನ್ನು ಹುಡುಕುವ ಸಂದರ್ಭದಲ್ಲಿ ಈ ಭೂಮಿಯ ಸುತ್ತಲೂ ಆಳವಾಗಿ ಅಗಿಯುವುದರಿಂದ ಪ್ರಾಸಂಗಿಕವಾಗಿ ರೂಪಗೊಂಡವು. ಸಾಮಾನ್ಯವಾಗಿ ಹೇಳುವವರು ಇವುಗಳನ್ನು ಸಮುದ್ರ ಪ್ರದೇಶಗಳೆಂದೇ ಭಾವಿಸುವರು. ಆ ಉಪದ್ವೀಪಗಳು ಯಾವುವೆಂದರೆ **ಸ್ವರ್ಣಪ್ರಸ್ಥ, ಚಂದ್ರ, ಶುಕ್ಲ, ಆವರ್ತನ, ರಮಣಕ, ಮಂದೋರುಣ, ಪಾಂಚಜನ್ಯ, ಸಿಂಹಳ, ಲಂಕಾ ಇತಿ** ಎಂದು ಎಂಟು.

ಭರತಕುಲೋತ್ತಮನೇ! ನಿನಗೆ ಈ ರೀತಿಯಾಗಿ ಜಂಬೂದ್ವೀಪದಲ್ಲಿಯ ಖಂಡಗಳ ವಿಭಾಗವು ವೇದವ್ಯಾಸರು ನನಗೆ ಉಪದೇಶಿಸಿದಂತೆ ಹೇಳಲ್ಪಟ್ಟಿತು ಎಂದು ಶುಕಾಚಾರ್ಯರು ನುಡಿದರು.

॥ ★★★ ॥




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ವಿಂಶತಿತಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಶ್ರೀಹರಿಯ ಅನೇಕ ವಿಧ ಮಾಹಾತ್ಮ್ಯಜ್ಞಾನಸಂಪಾದನೆಯಲ್ಲಿ ಆಸಕ್ತರಾದವರಿಗೆ ಭಗವಂತನ ಅತಿಶಯ ಪ್ರಸಾದವಾಗುವುದು ಎಂಬ ಕಾರಣದಿಂದ ಪ್ಲಕ್ಷ ಮುಂತಾದ ಆರು ದ್ವೀಪಗಳ ಪ್ರಮಾಣಾದಿಗಳನ್ನು ಆರು ಸಮುದ್ರಗಳನ್ನು ಲೋಕಾಲೋಕ ಪರ್ವತದ ವರ್ಣನವನ್ನು ಈ ಅಧ್ಯಾಯದಲ್ಲಿ ಮಾಡುವರು.

## ಪ್ಲಕ್ಷಾದಿದ್ವೀಪಗಳ ವರ್ಣನೆ

**ಶ್ರೀಶುಕ ಉವಾಚ -**

**ಅತಃ ಪರಂ ಪ್ಲಕ್ಷಾದಿದ್ವೀಪಾನಾಂ ಪ್ರಮಾಣಲಕ್ಷಣಸಂಸ್ಥಾನತೋ ವರ್ಷವಿಭಾಗಃ ಉಪವರ್ಣ್ಯತೇ ॥೧॥**

**ಅತಃ ಪರಂ** ಇನ್ನು ಮುಂದೆ **ಪ್ಲಕ್ಷಾದಿದ್ವೀಪಾನಾಂ** ಪ್ಲಕ್ಷ ಮುಂತಾದ ದ್ವೀಪಗಳ **ಪ್ರಮಾಣ** ಅಳತೆ **ಲಕ್ಷಣ** ಅಲ್ಲಿರುವ ಮರ, ನದಿ, ಗುಡ್ಡ ಮುಂತಾದವುಗಳನ್ನು (ಅಸಾಧಾರಣ ಚಿನ್ಹವನ್ನು ) **ಸಂಸ್ಥಾನತಃ** ಆಕಾರ (ಗುಂಡು, ಚೌಕು ಮುಂತಾದ ಸ್ವರೂಪ) ಇವುಗಳ ಮೂಲಕ ಅವುಗಳ **ವರ್ಷವಿಭಾಗಃ** ಖಂಡ ವಿಭಾಗವು **ಉಪವರ್ಣ್ಯತೇ** ಸಂಕ್ಷೇಪವಾಗಿ ವರ್ಣಿಸಲ್ಪಡುವುದು. ॥೧॥

**ಜಂಬೂದ್ವೀಪೋಽಯಂ ಯಾವಾನ್ವಿಸ್ತಾರತಸ್ತಾವತಾ ಕ್ಷಾರೋದಧಿನಾ ಪರಿವೇಷ್ಟಿತೋ ಯಥಾ ಮೇರುರ್ಜಂಬ್ವಾಖ್ಯೇನ ಲವಣೋದಧಿರಪಿ ತತೋ**

**ದ್ವಿಗುಣವಿಶಾಲೇನ ಪ್ಲಕ್ಷಾಖ್ಯೇನ ಪರಿಕ್ಷಿಪ್ತೋ ಯಥಾ ಪರಿಖಾ ಬಾಹ್ಯೋಪವನೇನ ಪ್ಲಕ್ಷೋ ಜಂಬೂಪ್ರಮಾಣೋ ದ್ವೀಪಾಖ್ಯಾತಿಕರೋ ಹಿರಣ್ಮಯಃ ಪ್ಲಕ್ಷ ಉತ್ಥಿತೋ ಯತ್ರಾಗ್ನಿರುಪಾಸ್ತೇ ಸಪ್ತಜಿಹ್ವಃ ತಸ್ಯಾಧಿಪತಿಃ ಪ್ರಿಯವ್ರತಾತ್ಮಜ ಇಧ್ಮಜಿಹ್ವಃ ಸ್ವಂ ದ್ವೀಪಂ ಸಪ್ತವರ್ಷಾಣಿ ವಿಭಜ್ಯ ಸಪ್ತವರ್ಷನಾಮಭ್ಯಃ ಆತ್ಮಜೇಭ್ಯ ಆಕಲಯ್ಯ ಸ್ವಯಮಾತ್ಮಯೋಗೇನೋಪರರಾಮ ॥೨॥**

**ಜಂಬ್ವಾಖ್ಯೇನ** ಜಂಬೂದ್ವೀಪದಿಂದ **ಮೇರುಃ ಯಥಾ** ಮೇರು ಪರ್ವತವು ಹೇಗೆ **ಪರಿವೇಷ್ಟಿತಃ** ಸುತ್ತುವರೆಯಲ್ಪಟ್ಟಿದೆಯೋ **ತಥಾ** ಹಾಗೆ **ಅಯಂ ಜಂಬೂದ್ವೀಪಃ** ಈ ಜಂಬೂದ್ವೀಪವು **ಪ್ರಮಾಣವಿಸ್ತಾರತಃ** ಇಯತ್ತೆಯ ವಿಸ್ತಾರದಿಂದ **ಯಾವಾನ್** ಎಷ್ಟಿದೆಯೋ **ತಾವತಾ** ಅಷ್ಟೇ ಅಂದರೆ ಒಂದು ಲಕ್ಷಯೋಜನ ವಿಸ್ತಾರದ **ಕ್ಷಾರೋದಧಿನಾ** ಲವಣ ಸಮುದ್ರದಿಂದ **ಪರಿವೇಷ್ಟಿತಃ** ಸುತ್ತುವರೆಯಲ್ಪಟ್ಟಿರುವುದು **ಲವಣೋದಧಿರಪಿ** ಈ ಲವಣಸಮುದ್ರವೂ ಕೂಡ **ತತಃ** ಆ ಜಂಬೂದ್ವೀಪಕ್ಕಿಂತ **ದ್ವಿಗುಣವಿಶಾಲೇನ** ಎರಡು ಪಟ್ಟು ವಿಸ್ತಾರವಾದ ಅಂದರೆ ಎರಡು ಲಕ್ಷಯೋಜನ ವಿಸ್ತಾರವುಳ್ಳ **ಪ್ಲಕ್ಷಾಖ್ಯೇನ** ಹೊರಗಿನ ಪ್ಲಕ್ಷವೆಂಬ ದ್ವೀಪದಿಂದ **ಪರಿಖಾ** ಕಂದಕವು **ಯಥಾ** ಹೇಗೆ **ಬಾಹ್ಯೋ ಪವನೇನ** ಹೊರಗಿನ ಉದ್ಯಾನವನದಿಂದ ಸುತ್ತುವರೆದಿರುವುದೋ **ತಥಾ** ಹಾಗೆ **ಪರಿಕ್ಷಿಪ್ತಃ** ಸುತ್ತುವರೆದಿರುವುದು **ಯತ್ರ** ಯಾವ ಪ್ಲಕ್ಷದ್ವೀಪದಲ್ಲಿ **ಉತ್ಥಿತಃ** ಹುಟ್ಟಿರುವ **ಜಂಬೂಪ್ರಮಾಣಃ** ಹಿಂದೆ ಹೇಳಿದ ಜಂಬೂವೃಕ್ಷದಷ್ಟೇ ಗಾತ್ರದ ಅಂದರೆ ಹನ್ನೊಂದು ನೂರು ಯೋಜನ ಎತ್ತರ ಟೊಂಗೆಗಳಿಂದ ಹನ್ನೊಂದು ನೂರು ಯೋಜನ ವಿಸ್ತಾರವಾದ ನೂರುಯೋಜನ ದಪ್ಪವಾದ **ಹಿರಣ್ಮಯಃ** ಬಂಗಾರದ **ಪ್ಲಕ್ಷಃ** ಬಸರಿ ಮರವು **ದ್ವೀಪಾಖ್ಯಾತಿಕರೋ** ಈ ದ್ವೀಪಕ್ಕೆ ಪ್ಲಕ್ಷವೆಂಬ ಹೆಸರನ್ನು ತಂದುಕೊಟ್ಟಿರುವುದು. ಜಂಬೂವೃಕ್ಷವು ಹೇಗೆ ಜಂಬೂದ್ವೀಪದ ಹೆಸರಿಗೆ ಕಾರಣವೋ ಹಾಗೆ ಎಂದು ತಿಳಿಸಲು ಜಂಬೂಪ್ರಮಾಣಃ ಎಂದಿರುವರು **ಯತ್ರ** ಯಾವ ಈ ಪ್ಲಕ್ಷದ್ವೀಪದಲ್ಲಿ **ಸಪ್ತಜಿಹ್ವಃ** ಏಳು ನಾಲಿಗೆಗಳುಳ್ಳ **ಅಗ್ನಿಃ** ಅಗ್ನಿದೇವರು **ಉಪಾಸಕ್ತಃ** ಶ್ರೀಹರಿಯಲ್ಲಿ ಆಸಕ್ತರಾಗಿ **ಉಪಾಸ್ತೇ** ಶ್ರೀಹರಿಯನ್ನು ಉಪಾಸಿಸುವರು **ತಸ್ಯ** ಆ ಪ್ಲಕ್ಷದ್ವೀಪದ **ಅಧಿಪತಿಃ** ಒಡೆಯನಾದ **ಪ್ರಿಯವ್ರತಾತ್ಮಜಃ** ಪ್ರಿಯವ್ರತರಾಜನ ಮಗನಾದ **ಇಧ್ಮಜಿಹ್ವಃ** ಇಧ್ಮಜಿಹ್ವನು **ಸ್ವಯಂ ದ್ವೀಪ** ತನ್ನ ಅಧೀನವಾದ ಈ ದ್ವೀಪವನ್ನು **ಸಪ್ತವರ್ಷಾಣಿ** ಏಳು ಖಂಡಗಳಾಗಿ **ವಿಭಜ್ಯ** ವಿಭಾಗಮಾಡಿ **ಸಪ್ತವರ್ಷನಾಮಭ್ಯಃ** ಆ ಏಳು ಖಂಡಗಳ ಹೆಸರುಗಳನ್ನೇ ಹೊಂದಿರುವ **ಆತ್ಮಜೇಭ್ಯಃ**




ಮಕ್ಕಳಿಗೆ **ಆಕಲಯ್ಯ** ಹಂಚಿಕೊಟ್ಟು **ಸ್ವಯಂ** ಆತ್ಮಯೋಗೇನ **ಉಪರರಾಮ** ತಾನು ಶ್ರೀಹರಿಯ ಧ್ಯಾನದಿಂದ ರಾಜ್ಯಭಾರವನ್ನು ಬಿಟ್ಟು ವಾನಪ್ರಸ್ಥನಾಗಿ ಪರಮಾತ್ಮನಲ್ಲಿ ರಮಿಸಿದನು.

**ಶಿವಂ ಯಶಸ್ಯಂ ಸುಭದ್ರಂ ಶಾಂತಂ ಕ್ಷೇಮಮಮೃತಮಭಯಮಿತಿ ವರ್ಷಾಣಿ ತೇಷು ಗಿರಯೋ ನದ್ಯಶ್ಚ ಸಪ್ತಸಪ್ತೈವಾಸನ್ನಭಿಜ್ಞಾತಾಃ ।।೩।।**

ಶಿವ, ಯಶಸ್ಯ , ಸುಭದ್ರ , ಶಾಂತ, ಕ್ಷೇಮ, ಅಮೃತ, ಅಭಯ ಇತಿ ಎಂದು **ವರ್ಷಾಣಿ** ಏಳು ಖಂಡಗಳು **ತೇಷು** ಆ ಖಂಡಗಳಲ್ಲಿ **ಅಭಿಜ್ಞಾತಾಃ** ಪ್ರಸಿದ್ಧವಾದ ಪ್ರಧಾನವಾದ **ಗಿರಯಃ** ಬೆಟ್ಟಗಳು **ನದ್ಯಃ** ನದಿಗಳು **ಸಪ್ತ ಸಪ್ತ ಏವ** ಏಳು ಏಳು ಮಾತ್ರ **ಆಸನ್** ಇವೆ. ಅಪ್ರಸಿದ್ಧ ಅಪ್ರಧಾನ ಬೆಟ್ಟ, ನದಿಗಳು, ಸಾವಿರಾರು ಇವೆ ಎಂದು ಭಾವ. ।।೩।।

**ಮಣಿಕೂಟೋ, ವಜ್ರಕೂಟ, ಇಂದ್ರಸೇನೋ, ಜ್ಯೋತಿಷ್ಮಾನ್, ಧೂಮ್ರವರ್ಣೋ ಹಿರಣ್ಯಗ್ರೀವೋ, ಮೇಘಮಾಲ ಇತಿ ಸೇತುಶೈಲಾಃ ಅರುಣಾ, ಅನುಗುಣಾ, ಆಂಗೀರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ, ಸತ್ಯಂಭರೇತಿ ಮಹಾನದ್ಯಃ ಯಾಸಾಂ ಜಲೋಪಸ್ಪರ್ಶನವಿಧೂತರಜಸ್ತಮಸೋ ಹಂಸಪತಂಗಗೋರ್ಧ್ವಾಯನಸಪ್ತಾಂಗ ಸಂಜ್ಞಾಶ್ಚತ್ವಾರೋ ವರ್ಣಾಃ ಸಹಸ್ರಾಯುಷೋ ವಿಬುಧೋಪಮಸಂದರ್ಶನಪ್ರಜನನಾಃ ಸ್ವರ್ಗದ್ವಾರಂ ತ್ರಯ್ಯಾ ವಿದ್ಯಯಾ ಭಗವಂತಂ ತ್ರಯೀಮಯಂ ಸೂರ್ಯಾತ್ಮಾನಂ ಯಜಂತೇ ।।೪।।**

ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಧೂಮ್ರವರ್ಣ, ಹಿರಣ್ಯಗ್ರೀವ, ಮೇಘಮಾಲಗಳೆಂಬ ಏಳು **ಸೇತುಶೈಲಾಃ** ಮರ್ಯಾದಾ ಪರ್ವತಗಳು ಇವೆ. ಅರುಣಾ, ಅನುಗುಣಾ, ಆಂಗಿರಸಿ, ಸಾವಿತ್ರೀ, ಸುಪ್ರಭಾತಾ, ಋತಂಭರಾ, ಸತ್ಯಂಭರಾ ಎಂದು ಏಳು **ಮಹಾನದ್ಯಃ** ಮಹಾನದಿಗಳು ಇವೆ. **ಯಾಸಾಂ** ಯಾವ ಈ ಮಹಾನದಿಗಳ **ಜಲೋಪಸ್ಪರ್ಶನ** ನೀರಿನ ಆಚಮನ ಸ್ನಾನ ಪಾನಾದಿಗಳಿಂದ **ವಿಧೂತ** ನಾಶವಾದ **ರಜಸ್ತಮಸಃ** ರಜೋಗುಣ ತಮೋಗುಣಗಳುಳ್ಳ **ಸಹಸ್ರಾಯುಷಃ** ಸಾವಿರ ವರ್ಷ ಆಯುಷ್ಯವುಳ್ಳ **ವಿಬುಧೋಪಮ** ದೇವತೆಗಳಿಗೆ ಸಮಾನವಾದ **ಸಂದರ್ಶನ** ಸುಂದರರೂಪ **ಪ್ರಜನನಾಃ**

ಪುತ್ರೋತ್ಪಾದನೆಯುಳ್ಳ (ಸಂಭೋಗಶಕ್ತಿಯುಳ್ಳ) **ಹಂಸ, ಪತಂಗ, ಗೂರ್ಧ್ವಾಯನ, ಸತ್ಯಾಂಗ(ಸಪ್ತಾಂಗ) ಸಂಜ್ಞಾಃ** ಈ ಹೆಸರಿನ **ಚತ್ವಾರೋ ವರ್ಣಾಃ** ಬ್ರಾಹ್ಮಣಾದಿ ವರ್ಣದ ಪ್ರಜೆಗಳು **ಸ್ವರ್ಗದ್ವಾರಃ** ಸ್ವರ್ಗಪ್ರಾಪ್ತಿಗೆ ಸಾಧನವಾದ **ತ್ರಯೀಮಯಂ** ಋಗ್ಯಜುಃಸಾಮವೇದಪ್ರತಿಪಾದ್ಯನಾದ **ಭಗವಂತಂ** ಶ್ರೀಹರಿಯನ್ನು **ತ್ರಯ್ಯಾ ವಿದ್ಯಯಾ** ಮೂರು ವೇದಗಳಿಂದ **ಯಜಂತೇ** ಯಾಗಾದಿಗಳಿಂದ ಸೇವಿಸುವರು. ।।೪।।

**ಪ್ರತ್ನಸ್ಯ ವಿಷ್ಣೋ ರೂಪಂ ಯತ್ಸತ್ಯರ್ತಸ್ಯ ಬ್ರಹ್ಮಣಃ ।**
**ಅಮೃತಸ್ಯ ಚ ಮೃತ್ಯೋಶ್ಚ ಸೂರ್ಯಾತ್ಮಾನಮೀಮಹಿ ಇತಿ ।।೫।।**

**ಪ್ರತ್ನಸ್ಯ** ಪುರಾತನನಾದ **ವಿಷ್ಣೋಃ** ವ್ಯಾಪ್ತನಾದ ಶ್ರೀಹರಿಯ **ರೂಪಂ** ಪ್ರತಿಮಾಸ್ಥಾನವು **ಯತ್** ಯಾವುದೋ ಮತ್ತು **ಸತ್ಯರ್ತಸ್ಯ** ವಾಚಿಕ, ಕಾಯಿಕ, ಸುಕೃತಕ್ಕೆ ಪ್ರೇರಕರಾದ **ಬ್ರಹ್ಮಣಃ** ಬ್ರಹ್ಮದೇವರ **ರೂಪಂ** ಸನ್ನಿಧಾನ ನಿಮಿತ್ತವು ಯಾವುದೋ ಮತ್ತು **ಅಮೃತಸ್ಯ** ದೇವತಾಸಮೂಹಕ್ಕೆ **ಮೃತ್ಯೋಃ** ಮಾರಕರಾದ ರುದ್ರದೇವರ **ರೂಪಂ** ಸನ್ನಿಧಾನಕ್ಕೆ ನಿಮಿತ್ತವು ಯಾವುದೋ ಅಂತಹ ತ್ರಿಮೂರ್ತಿಗಳ ನಿವಾಸಯೋಗ್ಯವಾದ **ಸೂರ್ಯಂ** ಸೂರ್ಯಮಂಡಲದಲ್ಲಿರುವ ಜ್ಞಾನಿಗಮ್ಯನಾದ್ದರಿಂದ ಸೂರ್ಯನೆಂದು ಕರೆಸಿಕೊಳ್ಳುವ ಸೂರ್ಯಾಂತರ್ಯಾಮಿ **ಆತ್ಮಾನಂ** ಆದಾನಾದಿಕರ್ತನಾದ ಸೂರ್ಯನಾಮಕ ಶ್ರೀಹರಿಯನ್ನು **ಈಮಹಿ** ಶರಣು ಹೊಂದುತ್ತೇವೆ ಎಂದನ್ವಯ.

ಇಲ್ಲಿ ಪ್ಲಕ್ಷಾದಿ ಆರು ದ್ವೀಪಗಳನ್ನು ಉಪಾಸ್ಯರೆಂದು ಹೇಳಿದ ಸೂರ್ಯ, ಸೋಮ, ಅಗ್ನಿ, ಅಪ, ವಾಯು, ಬ್ರಹ್ಮರುಗಳು ಶ್ರೀಹರಿಯಿಂದ ಭಿನ್ನರಾದವರು ಎಂದರೆ **ಪ್ರತ್ನಸ್ಯ** ಮುಂತಾದ ಮಂತ್ರಾರ್ಥ ಅಸಂಭಾವಿತವಾಗುವುದು ಕಾರಣ ಆರೂ ಪದಗಳಿಗೆ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು

> **ತಾತ್ಪರ್ಯ -'ಸೂರ್ಯಸೋಮಾಗ್ನಿವಾರೀರವಿಧಾತೃಷು ಯಥಾಕ್ರಮಮ್ ।**
> **ಪ್ಲಕ್ಷಾದಿದ್ವೀಪಸಂಸ್ಥಾಸು ಸ್ಥಿತಂ ಹರಿಮುಪಾಸತೇ' ಇತಿ ಚ ।**

ಪ್ಲಕ್ಷ ಮೊದಲಾದ ಆರು ದ್ವೀಪಗಳಲ್ಲಿ ವಾಸಿಸುವ ಜೀವರು ಕ್ರಮವಾಗಿ ಸೂರ್ಯ, ಸೋಮ, ಅಗ್ನಿ, ನೀರು, ಈರ, ವಾಯು, ಬ್ರಹ್ಮರಲ್ಲಿರುವ ಶ್ರೀಹರಿಯನ್ನು ಉಪಾಸಿಸುವರು ಎಂದು ಭಾವ. ಇದನ್ನು ಸೂಚಿಸಲೆಂದೇ **ಸೂರ್ಯಂ**




ಎಂದು ಹೇಳದೇ **ಸೂರ್ಯಮಾತ್ಮಾನಂ** ಎಂದೂ ಮುಂದೆಯೂ **ಸೋಮಮಾತ್ಮಾನಂ** ಮುಂತಾಗಿ ಹೇಳಿರುವರು ಎಂದು ತಿಳಿಯಬೇಕು.

**ಪ್ಲಕ್ಷಾದಿಷು ಪಂಚಸು ಪುರುಷಾಣಾಮಾಯುರಿಂದ್ರಿಯಮೋಜಃ ಸಹೋ ಬಲಂ ಬುದ್ಧಿರ್ವಿಕ್ರಮ ಇತಿ ಚ ಸರ್ವೇಷಾಮೌತ್ಪತ್ತಿಕೀ ಸಿದ್ಧಿರವಿಶೇಷೇಣ ವರ್ತತೇ ।।೬।।**

**ಪ್ಲಕ್ಷಾದಿಷು ಪಂಚಸು** ಪ್ಲಕ್ಷ ಮುಂತಾದ ಐದು ದ್ವೀಪಗಳಲ್ಲಿ **ಸರ್ವೇಷಾಂ ಪುರುಷಾಣಾಂ** ಎಲ್ಲ ಜನರಿಗೂ **ಆಯುಃ** ಆಯುಸ್ಸು **ಇಂದ್ರಿಯ** ಇಂದ್ರಿಯ ಶಕ್ತಿ **ಓಜಸ್ಸು** ಸ್ವರೂಪಸಾಮರ್ಥ್ಯ **ಸಹಃ** ಸಹನಶಕ್ತಿ **ಬಲಂ** ದೇಹಬಲ **ಬುದ್ಧಿ** ಬುದ್ಧಿಯು **ವಿಕ್ರಮ** ಪರಾಕ್ರಮ **ಇತಿ** ಎಂಬುವು **ಸರ್ವೇಷಾಂ** ಎಲ್ಲರಿಗೂ **ಔತ್ಪತ್ತಿಕೀ** ಸ್ವಾಭಾವಿಕವಾದ **ಸಿದ್ಧಿಃ** ಸಿದ್ಧಿಯು **ಅವಿಶೇಷೇಣ ವರ್ತತೇ** ಸಮಾನವಾಗಿರುವುದು. ।।೬।।

**ಪ್ಲಕ್ಷಸ್ತು ಸಮಾನೇನೇಕ್ಷುರಸೋದೇನ ಯಥಾ ದ್ವೀಪೋಽಪಿ ಶಾಲ್ಮಲೋ ದ್ವಿಗುಣವಿಶಾಲಃ ಸಮಾನೇನ ಸುರೋದೇನಾವೃತಃ ಪರಿವೃತ್ತೇನ ।।೭।।**

**ಯಥಾ** ಹೇಗೆ **ದ್ವಿಗುಣವಿಶಾಲಃ** ಪ್ಲಕ್ಷದ್ವೀಪಕ್ಕೆ ಎರಡರಷ್ಟು ವಿಶಾಲವಾದ **ಶಾಲ್ಮಲಃ** ಶಾಲ್ಮಲ ದ್ವೀಪವು **ಪರಿವೃತ್ತೇನ** ಸುತ್ತುವರೆದಿರುವ **ಸಮಾನೇನ** ಆದರಷ್ಟೇ ವಿಶಾಲವಾದ **ಸುರೋದೇನ** ಸುರಾ ಸಮುದ್ರದಿಂದ ಆವೃತವಾಗಿದೆಯೋ **ತಥಾ** ಹಾಗೆ **ಪ್ಲಕ್ಷಸ್ತು** ಪ್ಲಕ್ಷದ್ವೀಪವೂ **ಸಮಾನೇನ** ಆದರಷ್ಟೇ ವಿಸ್ತಾರವಾದ **ಪರಿವೃತ್ತೇನ** ಸುತ್ತುವರೆದಿರುವ **ಇಷುರಸೋದೇನ** ಕಬ್ಬಿನ ರಸದ ಸಮುದ್ರದಿಂದ **ಆವೃತಃ** ಆವರಿಸಲ್ಪಟ್ಟಿರುವುದು. **ಪರಿವೃತ್ತೇನ** ವರ್ತುಲಾವಾದ ಎಂಬುದನ್ನು ಎಲ್ಲ ದ್ವೀಪ ಸಮುದ್ರಗಳ ವಿಷಯದಲ್ಲಿಯೂ ತಿಳಿಯಬೇಕು. ।।೭।।

**ಯತ್ರ ಹ ವೈ ಶಾಲ್ಮಲೀ ಪ್ಲಕ್ಷಾಯಾಮಾ ಯಸ್ಯಾಂ ವಾ ವ ಕಿಲ ನಿಲಯಮಾಹುರ್ಭಗವತಚ್ಛಂದಃಸ್ತುತಃ ಪತತ್ರಿರಾಜಸ್ಯ ಸಾಧ್ಯರ್ಧಾ ಜಂಬೂತ ಉಪಲಕ್ಷ್ಯತೇ ।।೮।।**

**ಯತ್ರ** ಯಾವ ಈ ಶಾಲ್ಮಲಿ ದ್ವೀಪದಲ್ಲಿ **ಪ್ಲಕ್ಷಾಯಾಮಾ** ಪ್ಲಕ್ಷದಂತೆ ವಿಸ್ತಾರವಾದ **ಶಾಲ್ಮಲೀ** ಬುರಗ ಮರವು (**ಸಮುತ್ಪನ್ನಾ** ಉಂಟಾಗಿದೆಯೋ ಆದ್ದರಿಂದ ಈ ದ್ವೀಪಕ್ಕೆ

**ಶಾಲ್ಮಲೀ ನಾಮ** ಶಾಲ್ಮಲೀ ಎಂದು ಹೆಸರು) **ಹ ವೈ** ಪುರಾಣ ಪ್ರಸಿದ್ಧವು. **ಯಸ್ಯಾಂ** ವಾವ ಯಾವ ಈ ವೃಕ್ಷದಲ್ಲಿಯೇ **ಭಗವತಃ** ಪೂಜ್ಯರಾದ **ಛಂದಸ್ತುತಃ** **'ಸುಪರ್ಣೋSಸಿ ಗರುತ್ಮಾನ್'** ಮೊದಲಾದ ವೇದಗಳಿಂದ ಸ್ತೋತ್ರ ಮಾಡಿಸಿಕೊಳ್ಳುವ **ಪತತ್ರಿರಾಜಸ್ಯ** ಪಕ್ಷಿಗಳಿಗೆ ರಾಜರಾದ ಗರುಡದೇವರ **ನಿಲಯಂ** ವಾಸಿಸುವ ಗೂಡನ್ನು **ಆಹುಃ ಕಿಲ** ಜ್ಞಾನಿಗಳು ಹೇಳುವರು ಅಲ್ಲವೇ. **ಸಾ** ಆ ಶಾಲ್ಮಲೀ ವೃಕ್ಷವು **ಜಂಬೂತಃ** ಜಂಬೂದ್ವೀಪದ ಜಂಬೂ ವೃಕ್ಷಕ್ಕಿಂತ **ಅಧ್ಯರ್ಧಾ** ಒಂದುವರೆಯಷ್ಟು ಎತ್ತರವಿರುವುದಾಗಿ **ಉಪಲಕ್ಷ್ಯತೇ** ತಿಳಿದು ಬರುವುದು. **ಪ್ಲಕ್ಷಾಯಾಮಾ** ಎಂಬುದರಿಂದ ಶಾಲ್ಮಲಿಯ ಪರಿಮಾಣವು ಸರಿಯಾಗಿ ತಿಳಿಯುವುದಿಲ್ಲ ಕಾರಣ ಅಧ್ಯರ್ಧಾ ಎಂದು ಹೇಳಿರುವರು. **ಛಂದಃಸ್ತುತಃ** ವೇದಗಳಿಂದ ವಿಷ್ಣುವನ್ನು ಸ್ತುತಿಸುವ ಎಂದೂ ಅರ್ಥ.।।೮।।

**ತದ್ವೀಪಾಧಿಪತಿಃ ಪ್ರಿಯವ್ರತಾತ್ಮಜೋ ಯಜ್ಞಬಾಹುಃ ಸ್ವಸುತೇಭ್ಯಸ್ತನ್ನಾಮಾನಿ ಸಪ್ತವರ್ಷಾಣಿ ವ್ಯಭಜತ್ ಸುರೋಚನಂ ಸೌಮನಸ್ಯಂ ರಮಣಕಂ ದೇವಬರ್ಹಂ ಪಾರಿಭದ್ರಂ ಆಪ್ಯಾಯನಂ ಅಭಿಜಾತಮಿತಿ ।।೯।।**

**ತದ್ದ್ವೀಪಾಧಿಪತಿಃ** ಆ ಶಾಲ್ಮಲಿ ದ್ವೀಪಕ್ಕೆ ಒಡೆಯರಾದ **ಪ್ರಿಯವ್ರತಾತ್ಮಜಃ** ಪ್ರಿಯವರ್ತನ ಮಗನಾದ **ಯಜ್ಞಬಾಹುಃ** ಯಜ್ಞಬಾಹು ಎಂಬುವರು **ಸ್ವಸುತೇಭ್ಯಃ** ತಮ್ಮ ಮಕ್ಕಳಿಗೆ **ತನ್ನಾಮಾನಿ** ಆ ಮಕ್ಕಳ ಹೆಸರುಳ್ಳ ಸುರೋಚನ, ಸೌಮನಸ್ಯ, ರಮಣಕ, ದೇವಬರ್ಹ, ಪಾರಿಭದ್ರ, ಆಪ್ಯಾಯನ, ಅಭಿಜಾತಗಳೆಂಬ **ಸಪ್ತವರ್ಷಾಣಿ** ಏಳು ಖಂಡಗಳನ್ನು **ವ್ಯಭಜತ್** ವಿಭಾಗಮಾಡಿಕೊಟ್ಟನು. (ತಾನು ಶ್ರೀಹರಿಯಲ್ಲಿ ಆಸಕ್ತನಾದನು ಎಂದು ಹಿಂದಿನಂತೆ ತಿಳಿಯುವುದು.)

**ತೇಷು ಅದ್ರಯೋ ನದ್ಯಶ್ಚ ಸಪ್ತೈವಾಭಿಜ್ಞಾತಾಃ ಸುರಸಃ ಶತಶೃಂಗೋ ವಾಮದೇವಃ ಕುಂದೋ ಮುಕುಂದಃ ಪುಷ್ಪವರ್ಷಃ ಸಹಶ್ರುತಿರಿತಿ ಅನುಮತಿಃ ಸಿನೀವಾಲಿ ಸರಸ್ವತೀ ಕುಹೂ ರಜನೀ ನಂದಾ ರಾಕಾ ಇತಿ ।।೧೦।।**

**ತೇಷು** ಆ ಖಂಡಗಳಲ್ಲಿ **ಅದ್ರಯಃ** ಪ್ರಧಾನ ಪರ್ವತಗಳು **ನದ್ಯಃ** ಮುಖ್ಯ ನದಿಗಳು **ಸಪ್ತೈವ** ಏಳು ಏಳು ಮಾತ್ರ **ಸುರಸ, ಶತಶೃಂಗ, ವಾಮದೇವ, ಕುಂದ, ಮುಕುಂದ, ಪುಷ್ಪವರ್ಷ, ಸಹಶ್ರುತಿ** ಎಂದು (ಏಳು ಪರ್ವತಗಳು) **ಅನುಮತಿ ಸಿನೀವಾಲೀ, ಸರಸ್ವತೀ, ಕುಹೂ, ರಜನೀ, ನಂದಾ, ರಾಕಾ** ಇತಿ ಎಂದು ಏಳು ಮಹಾನದಿಗಳು. ।।೧೦।।




ಈ ಖಂಡದ ಬ್ರಾಹ್ಮಣಾದಿ ನಾಲ್ಕು ವರ್ಣಗಳ ಹೆಸರು ಹೇಳುವರು

**ತದ್ವರ್ಷಪುರುಷಾಃ ಶ್ರುತಧರವೀರ್ಯಧರವಸುಂಧರೋರ್ಧ್ವಧರಸಂಜ್ಞಾ ಭಗವಂತಂ ವೇದಮಯಂ ಸೋಮಮಾತ್ಮಾನಂ ಯಜಂತೇ ॥೧೧॥**

**ಶ್ರುತಧರ, ವೀರ್ಯಧರ, ವಸುಂಧರ, ಊರ್ಧ್ವಧರ**ರೆಂಬ ಹೆಸರಿನ ನಾಲ್ಕು ವರ್ಣದ ಜನರು ಆ ಖಂಡ ನಿವಾಸಿಗಳು **ವೇದಮಯಂ** ಮುಖ್ಯವಾಗಿ ವೇದಪ್ರತಿಪಾದ್ಯನಾದ **ಸೋಮಂ ಆತ್ಮಾನಂ** ಚಂದ್ರನ ಅಂತರ್ಯಾಮಿಯಾದ ಸೋಮನಾಮಕ ಶ್ರೀಹರಿಯನ್ನು **ವೇದೇನ ಯಜಂತೇ** ವೇದದಿಂದ ಪೂಜಿಸುವರು. ॥೧೧॥

**ಸ್ವಗೋಭಿಃ ಪಿತೃದೇವೇಭ್ಯೋ ವಿಭಜನ್ ಶುಕ್ಲಕೃಷ್ಣಯೋಃ ।**
**ಅಂಧಃ ಪ್ರಜಾನಾಂ ಸರ್ವಾಸಾಂ ರಾಜಾ ನಃ ಸೋಮಮಸ್ತ್ವಿತಿ ॥೧೨॥**

**ಶುಕ್ಲಕೃಷ್ಣಯೋಃ** ಶುಕ್ಲ ಕೃಷ್ಣ ಪಕ್ಷಗಳಲ್ಲಿ **ಸ್ವಗೋಭಿಃ** ಅಮೃತಮಯವಾದ ತನ್ನ ಕಿರಣಗಳಿಂದ **ಪಿತೃದೇವೇಭ್ಯಃ** ಪಿತೃದೇವತೆಗಳಿಗೆ ಮತ್ತು ದೇವತೆಗಳಿಗೂ **ಸೋಮಂ** ಸೋಮರಸವೆಂಬ **ಅಂಧಃ** ಅನ್ನವನ್ನು **ವಿಭಜನ್** ಹಂಚುತ್ತಿರುವ **ರಾಜಾ** ಚಂದ್ರನ ಅಂತರ್ಯಾಮಿಯಾದ ಸೋಮನಾಮಕನಾದ ಶ್ರೀಹರಿಯು **ಸರ್ವಾಸಾಂ ಪ್ರಜಾನಾಂ ನಃ ಚ** ಎಲ್ಲ ಪ್ರಜೆಗಳಿಗೂ ನಮಗೂ **ರಾಜಾ** ರಂಜಕನಾಗಿ **ಅಸ್ತು** ಆಗಲಿ ಎಂದು ಪೂಜಿಸುವರು. ॥೧೨॥

**ಏವಂ ಸುರೋದಾದ್ಬಹಿಸ್ತದ್ದ್ವಿಗುಣಃ ಸಮಾನೇನಾವೃತೋ ಘೃತೋದೇನ ಯಥಾ ಪೂರ್ವಃ ಕುಶದ್ವಿಪೋ ಯಸ್ಮಿನ್ ಕುಶಸ್ತಂಭೋ ದೇವಕೃತಸ್ತದ್ದ್ವೀಪಾ-ಖ್ಯಾಪನೋ ಜ್ವಲನ ಇವಾಪರಃ ಶಶ್ವತ್ ಸ್ವಶಷ್ಪರೋಚಿಷಾ ದಿಶೋ ವಿರಾಜಯತಿ ॥೧೩॥**

ಏವಂ ಹೀಗೆಯೇ **ಸುರೋದಾದ್ಬಹಿಃ** ಸುರಾಸಮುದ್ರದ ಹೊರಗೆ **ತದ್ದ್ವಿಗುಣಃ** ಶಾಲ್ಮಲ ದ್ವೀಪಕ್ಕೆ ಎರಡರಷ್ಟು (ಎಂಟು ಲಕ್ಷ ಯೋಜನ) ವಿಸ್ತಾರವುಳ್ಳ **ಕುಶದ್ವೀಪವು ಪೂರ್ವಃ ಯಥಾ** ಹಿಂದಿನ ಶಾಲ್ಮಲ ದ್ವೀಪವು ಹೇಗೋ **ಅದರಷ್ಟೇ** ವಿಸ್ತಾರದ ಸುರಾಸಮುದ್ರದಿಂದ ಸುತ್ತುವರೆದಿದೆಯೋ ಹಾಗೆ **ಸಮಾನೇನ** ತನಗೆ ಸಮಾನವಾದ **ಘೃತೋದೇನ** ತುಪ್ಪದ ಸಮುದ್ರದಿಂದ **ಆವೃತಃ** ಆವರಿಸಲ್ಪಟ್ಟಿರುವುದು. **ಯಸ್ಮಿನ್**

ಯಾವ ಈ ಕುಶದ್ವೀಪದಲ್ಲಿ **ತದ್ದ್ವೀಪಾಖ್ಯಾಪನಃ** ಆ ದ್ವೀಪಕ್ಕೆ ಆ ಹೆಸರನ್ನು ತಂದುಕೊಟ್ಟಿರುವ **ದೇವಕೃತಃ** ದೇವಸೃಷ್ಟವಾದ **ಕುಶಸ್ತಂಭಃ** ದರ್ಭೆಯ ಹುಲ್ಲು **ಅಪರಜ್ವಲನ ಇವ** ಬೇರೊಂದು ಅಗ್ನಿಯಂತೆ **ಶಶ್ವತ್** ಯಾವಾಗಲೂ **ಸ್ವಶಷ್ಪರೋಚಿಷಾ** ತನ್ನ ಎಳೆ ಹುಲ್ಲುಗಳ ಕಾಂತಿಯಿಂದ **ದಿಶಃ** ದಿಕ್ಕುಗಳನ್ನು **ವಿರಾಜಯತಿ** ಪ್ರಕಾಶಗೊಳಿಸುವುದು.

**ತಸ್ಯಾಪಿ (ತದ್ದ್ವೀಪಾಧಿಪತಿಃ) ಪ್ರೈಯ್ಯವ್ರತೋ ರಾಜಾ(ರಾಜನ್) ಹಿರಣ್ಯರೇತಾ ನಾಮ ಸ್ವದ್ವೀಪಂ ಸಪ್ತಭ್ಯಃ ಪುತ್ರೇಭ್ಯೋ ಯಥಾಭಾಗಂ ವಿಭಜ್ಯ ಸ್ವಯಂ ತು ತಪ ಆತಿಷ್ಠತ್ ॥೧೪॥**

**ರಾಜನ್** ಪರೀಕ್ಷಿತನೇ **ತದ್ದ್ವೀಪಪತಿಃ** ಆ ಕುಶದ್ವೀಪಕ್ಕೆ ಅಧಿಪತಿಯಾದ **ಪ್ರಯ್ಯವ್ರತಃ** ಪ್ರಿಯವ್ರತನ ಮಗನಾದ **ಹಿರಣ್ಯರೇತಾ ನಾಮ** ಹಿರಣ್ಯರೇತನೆಂಬು-ವನು **ಸ್ವದ್ವೀಪಂ** ತನ್ನ ದ್ವೀಪವನ್ನು **ಸಪ್ತಭ್ಯಃ ಪುತ್ರೇಭ್ಯಃ** ಏಳು ಜನ ಮಕ್ಕಳಿಗೆ **ಯಥಾಭಾಗಂ** ಅವರವರಿಗೆ ಸಲ್ಲಬೇಕಾದ ಭಾಗದಂತೆ **ವಿಭಜ್ಯ** ಹಂಚಿಕೊಟ್ಟು **ಸ್ವಯಂ** ತಾನು **ತಪಃ ತು** ತಪಸ್ಸನ್ನೇ **ಆತಿಷ್ಠತ್** ಆಚರಿಸಿದನು. **ತಸ್ಯಾಪಿ ರಾಜಾ** ಎಂಬ ಪಾಠದಲ್ಲಿ ಆ ಕುಶದ್ವೀಪಕ್ಕೆ ರಾಜನು ಎಂದರ್ಥ. ॥೧೪॥

**ವಸುದಾನ, ದೃಢರುಚಿ, ನಾಭಿ, ಗುಪ್ತ, ಸತ್ಯವ್ರತ, ವಿಪ್ರ, ವಾಮದೇವ ನಾಮಭ್ಯಃ ತೇಷಾಂ ವರ್ಷೇಷು ಸೀಮಾಗಿರಯೋ ನದ್ಯಶ್ಚ ಅಭಿಜ್ಞಾತಾಃ ಸಪ್ತಸಪ್ತೈವ ತು ಬಭೂವುಃ ಚಕ್ರಃ ಶೃಂಗಃ ಕಪಿಲಶ್ಚಿನ್ನಕೂಟೋ ದೇವಾನೀಕ ಊರ್ಧ್ವರೋಮಾ ದ್ರವಿಣ ಇತಿ ॥೧೫॥**

**ರಸಕುಲ್ಯಾ, ಮಧುಕುಲ್ಯಾ, ಶ್ರುತವಿಂದಾ, ಮಿತ್ರವಿಂದಾ, ದೇವಗರ್ಭಾ, ಘೃತಚ್ಯುತಾ, ಮಂತ್ರಮಾಲಾ ಇತಿ ನದ್ಯಃ ಯಾಸಾಂ ಪಯೋಭಿಃ ಕುಶದ್ವೀಪೌಕಸಃ ಕುಶಲಕೋವಿದಾಭಿಯುಕ್ತಕುಶಲಕಸಂಜ್ಞಾ ಭಗವಂತಂ ಜಾತವೇದಸ್ವರೂಪಿಣಂ ಕರ್ಮಕೌಶಲೇನ ಯಜಂತೇ ॥೧೬॥**

**ವಸುದಾನ, ದೃಡರುಚಿ, ನಾಭಿ, ಗುಪ್ತ , ಸತ್ಯವ್ರತ, ವಿಪ್ರ , ವಾಮದೇವ ನಾಮಭ್ಯಃ** ಈ ಹೆಸರಿನ ಮಕ್ಕಳಿಗೆ ಎಂದನ್ವಯ **ತೇಷಾಂ** ಅವರ **ವರ್ಷೇಷು** ಖಂಡಗಳಲ್ಲಿ **ಸೀಮಾಗಿರಯಃ** ಎಲ್ಲೆ ಪರ್ವತಗಳು **ನದ್ಯಃ** ನದಿಗಳು **ಅಭಿಜ್ಞಾತಾಃ** ಪ್ರಸಿದ್ಧ, ಪ್ರಧಾನವಾದವು **ಸಪ್ತಸಪ್ತೈವ** ಏಳು ಏಳು **ಬಭೂವುಃ** ಇರುವವು. **ಚಕ್ರ ,**

**ಶೃಂಗ, ಕಪಿಲ, ಭಿನ್ನಕೂಟ, ದೇವಾನೀಕ, ಊರ್ಧ್ವರೋಮಾ ದ್ರವಿಣ ಇತಿ** ಎಂಬುವು ಪರ್ವತಗಳು. **ರಸಕುಲ್ಯಾ , ಮಧುಕುಲ್ಯಾ , ಶ್ರುತವಿಂದಾ, ಮಿತ್ರವೃಂದಾ, ದೇವಗರ್ಭಾ, ಘೃತಚ್ಯುತಾ, ಮಂತ್ರಮಾಲಾ ಇತಿ** ಎಂಬ **ನದ್ಯಃ** ನದಿಗಳು **ಯಾಸಾಂ** ಯಾವ ನದಿಗಳ **ಪಯೋಭಿಃ** ನೀರುಗಳಿಂದ **ಕುಶಲ, ಕೋವಿದ, ಅಭಿಯುಕ್ತ, ಕುಶಲಕರೆಂಬ** ನಾಲ್ಕು ವರ್ಣದ **ಕುಶದ್ವೀಪೌಕಸಃ** ಕುಶದ್ವೀಪವಾಸಿಗಳು **ಜಾತವೇದಸ್ವರೂಪಿಣಂ** ಅಗ್ನ್ಯಂತರ್ಗತ ಅಗ್ನಿ ನಾಮಕ **ಭಗವಂತಂ** ಶ್ರೀಹರಿಯನ್ನು **ಕರ್ಮಕೌಶಲೇನ ಯಜಂತೇ** ಶ್ರೀಹರಿಗೆ ಪ್ರಿಯವಾದ ಕರ್ಮಗಳಿಂದ ಸೇವಿಸುವರು.

**ಪರಸ್ಯ ಬ್ರಹ್ಮಣಃ ಸಾಕ್ಷಾಜ್ಜಾತವೇದೋಽಸಿ ಹವ್ಯವಾಟ್ ।**
**ದೇವಾನಾಂ ಪುರುಷಾಂಗಾನಾಂ ಯಜ್ಞೇನ ಪುರುಷಂ ಯಜ ಇತಿ ॥೧೭॥**

**ಹೇ ಜಾತವೇದಃ** ಎಲೋ ಅಗ್ನಿಯೇ (ಅಂತರ್ಗತ ಶ್ರೀಹರಿಯೇ) ನೀನು **ಸಾಕ್ಷಾತ್ ಪರಸ್ಯ ಬ್ರಹ್ಮಣಃ** ನಾರಾಯಣನಿಗಾಗಿ **ಹವ್ಯವಾಟ್ ಅಸಿ** ಹವಿಸ್ಸನ್ನು ಕೊಂಡೊಯ್ಯುವವನಾಗಿರುವೆ ಮತ್ತು **ಪುರುಷಾಂಗಾನಾಂ** ಶ್ರೀಹರಿಯ ಅಂಗದಿಂದ ಜನಿಸಿ ಅಂಗವನ್ನು ಆಶ್ರಯಿಸಿದ್ದರಿಂದ ಪುರುಷಾಂಗರೆನಿಸುವ **ದೇವಾನಾಂ** ದೇವತೆಗಳಿಗೂ **ಹವ್ಯವಾಟ್ ಅಸಿ** ಹವಿಸ್ಸು ಕೊಡವವನಾಗಿರುವಿ ಕಾರಣ ನೀನು ನಮ್ಮಲ್ಲಿ ಸನ್ನಿಹಿತನಾಗಿ **ಯಜ್ಞೇನ** ಯಾಗದಿಂದ **ಪುರುಷಂ** ಯಜ್ಞನಾಮಕ ಶ್ರೀಹರಿಯನ್ನು **ಯಜ** ನಮ್ಮಿಂದ ಯಾಗ ಮಾಡಿಸು.

**ಯಾದವಾರ್ಯರ ವ್ಯಾಖ್ಯಾನರೀತ್ಯಾ** - ಹೇ ಅಗ್ನಿಯೇ! ನೀನು **ಸಾಕ್ಷಾತ್** ಔಪಚಾರಿಕವಲ್ಲದೇ **ಪರಸ್ಯ ಬ್ರಹ್ಮಣಃ** ಪರಬ್ರಹ್ಮನ ಸನ್ನಿಧಾನವುಳ್ಳವನಾಗಿರುವೆ **ಪುರುಷಾಂಗಾನಾಂ ದೇವತಾನಾಂ** ಪರಮಪುರುಷ ಶ್ರೀಹರಿಯೇ ಶರೀರನಾಗಿರುವ ದೇವತೆಗಳಿಗೆ **ಹವ್ಯವಾಟ್** ಹವ್ಯವಾಹಕನಾಗಿರುವೆ ಆದ್ದರಿಂದ **ಯಜ್ಞೇನ ಪುರುಷಂ ಯಜ** ನಾವು ಮಾಡಿದ ಯಜ್ಞದಿಂದ ದೇವತಾಂತರ್ಗತ ಶ್ರೀಹರಿಯನ್ನು ಪೂಜಿಸು. ಯಜ್ಞದ ಹವಿಸ್ಸನ್ನು ಅವನಿಗೆ ಸಮರ್ಪಿಸು ಎಂದರ್ಥ. ॥೧೭॥

**(ಘೃತೋದಾತ್) ತಥಾ ಬಹಿಃ ಕ್ರೌಂಚದ್ವೀಪೋ ಕುಶದ್ವೀಪಾತ್ಸಮಾನೇನ ಕ್ಷೀರೋದೇನ ಪರಿತ ಉಪಕ್ಲೃಪ್ತೋ ವೃತೋ ಯಥಾ ಕುಶದ್ವೀಪೋ ಘೃತೋದೇನ ಯಸ್ಮಿನ್ ಕ್ರೌಂಚೋ ನಾಮ ಪರ್ವತರಾಜೋ ದ್ವೀಪನಾಮ-ನಿರ್ವರ್ತಕ ಆಸ್ತೇ ॥೧೮॥**

**ತಥಾ** ಹಾಗೆಯೇ **ಕುಶದ್ವೀಪಾತ್ ದ್ವಿಗುಣಃ** ಕುಶದ್ವೀಪದ ಎರಡು ಪಟ್ಟು (ಹದಿನಾರು ಲಕ್ಷಯೋಜನ) ವಿಸ್ತಾರವುಳ್ಳ **ಕ್ರೌಂಚದ್ವೀಪಃ** ಕ್ರೌಂಚದ್ವೀಪವು **ಬಹಿಃ** ಹೊರಗಡೆ **ಸಮಾನೇನ ಕ್ಷೀರೋದೇನ** ತನ್ನಷ್ಟೇ ವಿಸ್ತಾರವಾದ (ಹಳಿಯಿಲ್ಲದ) ಮೊಸರಿನ ಸಮುದ್ರದಿಂದ **ಪರಿತಃ** ಸುತ್ತಲೂ **ಉಪಕ್ಲೃಪ್ತಃ** ಸುತ್ತುವರೆಯಲ್ಪಟ್ಟು **ಯಥಾ ಕುಶದ್ವೀಪಃ ಘೃತೋದೇನ ವೃತಃ** ಕುಶದ್ವೀಪವು ತುಪ್ಪದ ಸಮುದ್ರದಿಂದ ಆವೃತವಾಗಿರುವಂತೆ ಆವೃತವಾಗಿದೆ **ಯಸ್ಮಿನ್** ಯಾವ ಈ ದ್ವೀಪದಲ್ಲಿ **ದ್ವೀಪನಾಮನಿರ್ವರ್ತಕಃ** ದ್ವೀಪಕ್ಕೆ ಹೆಸರನ್ನು ತಂದುಕೊಟ್ಟಿರುವ **ಕ್ರೌಂಚೋ ನಾಮ ಪರ್ವತರಾಜಃ ಆಸ್ತೇ** ಕ್ರೌಂಚವೆಂಬ ದೊಡ್ಡ ಪರ್ವತವಿದೆ.

**ವಿ.ವಿ :-** ಇಲ್ಲಿ ದಧಿಮಂಡೋದವೆಂದು ಹೇಳದೆ ಕ್ಷೀರೋದವೆಂದು ಹೇಳಿದ್ದು ಅಸುರಜನ ಮೋಹನಕ್ಕೆಂದು ತಿಳಿಯಬೇಕು. **ಮಂಡೋದೇಃ ಪೂರಣಂ ಚೈವ ವ್ಯತ್ಯಾಸಂ ಕ್ಷೀರಸಾಗರೇ** ಎಂದು ಹಿಂದೆ ಹೇಳಿದ ಪ್ರಮಾಣವೇ ಇದಕ್ಕೆ ಆಧಾರ. **ಅನಾಮ್ಲಂ ತು ದಧಿ ಕ್ಷೀರಂ** ಎಂಬ ಪ್ರಮಾಣಾನುಸಾರ ಹುಳಿಯಿಲ್ಲದ ಕಾರಣ ಮೊಸರು ಹಾಲು ಎಂದು ಕರೆಸಿಕೊಂಡಿದೆ. ಹಾಗೆ ಅರ್ಥಮಾಡಿದೆ. ಅದರಂತೆ **ಕ್ಷೀರಂ ಸಾಂದ್ರಂ ತಥಾ ದಧಿ** ಎಂದೂ ಇರುವುದರಿಂದ ಮುಂದೆ **ದಧಿಮಂಡೋದೇನ ಪರಿತ** ಎಂಬಲ್ಲಿ ಗಟ್ಟಿಯಾದ ಹಾಲು ಎಂದು ತಿಳಿಸಲು ಹಾಲನ್ನು ದಧಿಯೆಂದು ಕರೆದಿರುವರು ಎಂದು ಭಾವ. ಇದರಿಂದ

**ಜಂಬುಪ್ಲಕ್ಷಾಹ್ವಯೌ ದ್ವೀಪೌ ಶಾಲ್ಮಶ್ಚಾಪರೋ ದ್ವಿಜ । ಕುಶಃ ಕ್ರೌಂಚಸ್ತಥಾ ಶಾಕಃ ಪುಷ್ಕರಂ ಚೈವ ಸಪ್ತಮಃ । ಏತೇ ದ್ವೀಪಾಃ ಸಮುದ್ರೈಸ್ತು ಸಪ್ತಸಪ್ತಭಿರಾವೃತಾಃ । ಲವಣೇಷುಸುರಾಸರ್ಪಿರ್ದಧಿದುಗ್ಧಜಲೈಃ ಸಮಮ್ ।।** ಎಂಬ ವಾಕ್ಯವಿರೋಧ ಪರಿಹರಿಸಿದಂತಾಯಿತು ।।೧೮।।

**ಯೋಽಸೌ ಗುಹಪ್ರಹರಣೋನ್ಮಥಿತನಿತಂಬಕುಂಜೋಽಪಿ ಕ್ಷೀರೋದೇನ ಆಸಿಚ್ಯಮಾನೋ ಭಗವತಾ ವರುಣೇನಾಭಿಗುಪ್ತೋ ವಿಭಯೋ ಬಭೂವ ।।೧೯।।**

**ಯಃ ಅಸೌ** ಯಾವ ಈ ಕ್ರೌಂಚ ಪರ್ವತವು **ಗುಹಪ್ರಹರಣ** ಷಣ್ಮುಖನ ಶಕ್ತ್ಯಾಯುಧದಿಂದ **ಉನ್ಮಥಿತ** ಪೀಡಿತಗಳಾದ **ನಿತಂಬಕುಂಜಃ** ನಿತಂಬ ಪರ್ವತಗಳೂ ಲತಾಮಂಟಪಗಳೂ ಉಳ್ಳದ್ದಾಗಿದ್ದರೂ (ಈ ಕುಂಜಗಳಲ್ಲಿ ದಂಪತಿಗಳು

 

ವಿಹರಿಸುವವರು ಎಂದು ಭಾವ) **ಕ್ಷೀರೋದೇನ** ಮೊಸರಿನ ಸಮುದ್ರದಿಂದ **.ಆಸಿಚ್ಯಮಾನಃ** ಅಭಿಷೇಕ್ಸಿಸಲ್ಪಟ್ಟದ್ದಾಗಿ **ಭಗವತಾ ವರುಣೇನ** ಪೂಜ್ಯರಾದ ವರುಣದೇವರಿಂದ **ಅಭಿಗುಪ್ತಃ** ರಕ್ಷಿತವಾಗಿ **ವಿಭಯಃ** ಷಣ್ಮುಖನ ಭಯವಿಲ್ಲದ್ದಾಗಿ **ಬಭೂವ** ಆಯಿತು ॥೧೯॥

**ತಸ್ಮಿನ್ (ಅಪಿ) ಪ್ರೈಯ್ಯವ್ರತೋ ಘೃತಪೃಷ್ಠೋ ನಾಮ ಅಧಿಪತಿಃ ಸ ತು ತದ್ದ್ವೀಪವರ್ಷಾಣಿ ಸಪ್ತಧಾ ವಿಭಜ್ಯ ತೇಷು ಪುತ್ರನಾಮಸು ನಪ್ತಾರಿಕ್ಥಾದಾನ್ ವರ್ಷಾನ್ನಿವೇಶ್ಯ ಸ್ವಯಂ ಭಗವತಃ ಪರಮಕಲ್ಯಾಣಸ್ಯಾತ್ಮಭೂತಸ್ಯ ಹರೇಶ್ಚರಣಾರವಿಂದಮುಪಜಗಾಮ ॥೨೦॥**

**ತಸ್ಮಿನ್ ಅಪಿ** ಆ ಕ್ರೌಂಚದ್ವೀಪದಲ್ಲಿಯೂ **ಪ್ರೈಯ್ಯವ್ರತಃ** ಪ್ರಿಯವ್ರತನ ಮಗನಾದ **ಘೃತಪೃಷ್ಠೋ ನಾಮ ಅಧಿಪತಿಃ** ಘೃತಪೃಷ್ಠನೆಂಬ ರಾಜನು (**ಸ ತು** ಅವರೂ ಸಹ) **ತದ್ವೀಪವರ್ಷಾಣಿ** ಆ ದ್ವೀಪದ ಖಂಡಗಳನ್ನು **ಸಪ್ತಧಾ ವಿಭಜ್ಯ** ಏಳು ಭಾಗ ಮಾಡಿ **ಪುತ್ರನಾಮಸು ತೇಷು** ತಮ್ಮ ಮಕ್ಕಳ ಹೆಸರುಳ್ಳ ಆ ಏಳು ಖಂಡಗಳಲ್ಲಿ **ಸಪ್ತರಿಕ್ಥಾದಾನ್** ಏಳು ದಾಯಾದಿಗಳನ್ನು, ಸಹೋದರರನ್ನು **ವರ್ಷಪಾನ್** ಆ ಖಂಡಗಳ ಪಾಲಕರನ್ನಾಗಿ **ನಿವೇಶ್ಯ** ಇಟ್ಟು **ಸ್ವಯಂ** ತಾವು **ಪರಮಕಲ್ಯಾಣಸ್ಯ** ಅತ್ಯಂತ ಮಂಗಳಮೂರ್ತಿಯಾದ **ಆತ್ಮಭೂತಸ್ಯ** ತಮ್ಮ ಅಂತರ್ಯಾಮಿಯಾಗಿರುವ ಶ್ರೀಹರಿಯ ಪಾದಕಮಲಗಳನ್ನು ಸೇರಿದನು.

**ಅಭಯಾಽಮೃತೌಘಾ ಆರ್ಯಕಾ ತೀರ್ಥವತೀ ರೂಪವತೀ (ತೃಪ್ತಿರೋಘವತೀ) ಪವಿತ್ರಾ ಶುಕ್ಲೇತಿ ಯಾಸಾಮಂಭಃ ಪವಿತ್ರಮಮಲ-ಮುಪಯುಂಜಾನಾ ಗುರು ಋಷಭದ್ರವಿಣದೇವಕಸಂಜ್ಞಾ ವರ್ಷಪುರುಷಾ ಅಮ್ಮಯಂ ದೇವಮಪಾಂಪೂರ್ಣೇನಾಂಜಲಿನಾ ಯಜಂತೇ ॥೨೨॥**

**ಆಮ, ಮಧುಮೋಹ, ಮೇಘಪೃಷ್ಠ, ಸುಧಾಮ, ಋಷಿಜ್ಯೋತಿ, ಲೋಹಿತಾರ್ಣ, ವನಸ್ಪತಿ ಇತಿ** ಎಂಬುವರು **ಘೃತಪೃಷ್ಠಸುತಾಃ** ಘೃತಪೃಷ್ಠರಾಜನ ಮಕ್ಕಳು **ತೇಷಾಂ ವರ್ಷಗಿರಯಃ** ಅವರ ಹೆಸರಿನ ಆ ಖಂಡಗಳ **ಗಿರಯಃ** ಪರ್ವತಗಳು ಸುತ್ತ ಏಳು **ಅಭಿಖ್ಯಾತಾಃ** ಪ್ರಸಿದ್ಧವಾದವು **ನದ್ಯಶ್ಚ** ಮಹಾನದಿಗಳೂ **ಸಪ್ತ ಏವ** ಏಳೇ **ಶುಕ್ಲ, ವರ್ಧಮಾನ, ಉಪಬರ್ಹಣ ಉಪಭೋಜನ, ನಂದ, ನಂದನ, ಸರ್ವತೋಭದ್ರ, ಇತಿ** ಎಂದು ಪರ್ವತಗಳು **ಅಭಯಾ, ಅಮೃತೌಘಾ, ಆರ್ಯಕಾ,**

**ತೀರ್ಥವತೀ, ರೂಪವತೀ, ಪವಿತ್ರಾ, ಶುಕ್ಲಾ** ಎಂದು ನದಿಗಳು. **ಯಾಸಾಂ** ಯಾವ ನದಿಗಳ **ಪವಿತ್ರಂ** ಶುದ್ಧವಾದ **ಅಮಲಂ** ನಿರ್ಮಲವಾದ **ಅಂಭಃ** ನೀರನ್ನು **ಉಪಯುಂಜಾನಾಃ** ಉಪಯೋಗಿಸುವ **ಗುರು, ಋಷಭ, ದ್ರವಿಣ, ದೇವಕ** ಎಂಬ **ಸಂಜ್ಞಾಃ** ಹೆಸರುಳ್ಳ ನಾಲ್ಕು ವರ್ಣದ **ವರ್ಷಪುರುಷಾಃ** ಆ ದ್ವೀಪನಿವಾಸಿಗಳು **ಅಮ್ಮಯಂ** ನೀರಿನ ನಿಯಾಮಕನಾದ **ದೇವಂ** ಕ್ರೀಡಾದಿಗುಣ ವಿಶಿಷ್ಟನಾದ ಜಲಾಂತರ್ಯಾಮಿ ಪೂರ್ಣನಾದ ಶ್ರೀಹರಿಯನ್ನು **ಅಪಾಂ ಪೂರ್ಣೇನ** ನೀರಿನಿಂದ ತುಂಬಿದ **ಅಂಜಲಿನಾ** ಬೊಗಸೆಯಿಂದ **ಯಜಂತೇ** ಪೂಜಿಸುವರು. ।।೨೨।।

**ಆಪಃ ಪುರುಷವೀರ್ಯಾಶ್ಚ ಪುನಂತೀರ್ಭೂರ್ಭುವಃ ಸುವಃ ।**
**ತಾ ನಃ ಪುನೀಯುರಘಘ್ನೀಃ ಸಂಸ್ಪೃಶೇತಾತ್ಮನಾಽಭವ ಇತಿ ।।೨೩।।**

**ಯಾಃ ಆಪಃ** ಯಾವ ನೀರಿನಲ್ಲಿರುವ ಭಗವದ್ರೂಪಗಳು **ಪುರುಷವೀರ್ಯಾಃ** ಶ್ರೀನಾರಾಯಣನ ರೇತಸ್ಸಾಗಿರುವುವೋ, ನೀರಿನ ಪರವಾಗಿ ಶ್ರೀಹರಿಯ ಪರಾಕ್ರಮದಿಂದ ನಿಯಮ್ಯವಾಗಿರುವುವೋ **ಭೂಃ ಭುವಃ ಸುವಃ** ಎಂಬ ಮೂರು ಲೋಕಗಳನ್ನೂ **ಪುನಂತೀಃ** ಪಾವನ ಮಾಡಿರುವುವೋ **ಚ** ಮತ್ತು **ಅಘಘ್ನೀಃ** ಪಾಪನಾಶಕವಾಗಿರುವವೋ **ಭವೇ** ಶುದ್ಧಿ ಎಂಬ ಸುಖಕ್ಕಾಗಿ **ಅಭವೇ** ಮೋಕ್ಷಕ್ಕಾಗಿ ಲೋಕದಲ್ಲಿ **ಆತ್ಮನಾ** ದೇಹದ ಹೊರಗಿನಿಂದಲೂ ಒಳಗಿನಿಂದಲೂ **ಸಂಸ್ಪೃಶೇತ್** ಸ್ನಾನ ಪಾನಾದಿಗಳಿಂದ ಸೇವಿಸಲ್ಪಡುವವೋ **ತಾಃ ಆಪಃ** ಆ ನೀರಿನಲ್ಲಿರುವ ಭಗವದ್ರೂಪಗಳು, ನೀರುಗಳು **ನಃ** ನಮ್ಮನ್ನು **ಪುನೀಯುಃ** ಪವಿತ್ರ ಮಾಡಲಿ **ಇತಿ** ಎಂದು ಪೂಜಿಸುವರು. ।।೨೩।।

**ಏವಂ ಪರಸ್ತಾತ್ ಕ್ಷೀರೋದಾತ್ ಪರಿತಃ ಉಪವೇಶಿತಃ ಶಾಕದ್ವೀಪೋ ದ್ವಾತ್ರಿಂಶಲ್ಲಕ್ಷಯೋಜನಾಯಾಮಃ ಸಮಾನೇನ ದಧಿಮಂಡೋದೇನ ಪರಿತ ಉಪಕ್ಲೃಪ್ತಃ ಯಸ್ಮಿನ್ ಹಿ ಶಾಕೋ ನಾಮ ಮಹೀರುಹಃ ಸ್ವಕ್ಷೇತ್ರವ್ಯಪದೇಶಕೋ ಯಸ್ಯ ಹಿ ಮಹಾನ್ ಸುರಭಿಗಂಧಸ್ತದ್ವರ್ಷಮನುವಾಸಯತಿ ।।೨೪।।**

**ಏವಂ** ಹೀಗೆಯೇ **ಕ್ಷೀರೋದಾತ್** ಮೊಸರಿನ ಸಮುದ್ರದಿಂದ **ಪರಸ್ತಾತ್** ಹೊರಗೆ **ದ್ವಾತ್ರಿಂಶಲ್ಲಕ್ಷಯೋಜನಾಯಾಮಃ** ಮೂವತ್ತೆರಡು ಲಕ್ಷಯೋಜನ ವಿಸ್ತಾರವುಳ್ಳ **ಶಾಕದ್ವೀಪಃ** ಶಾಕದ್ವೀಪವು **ಉಪಕ್ಲೃಪ್ತಃ** ಇರಿಸಲ್ಪಟ್ಟಿದೆ **ಸಮಾನೇನ** ಅದರಷ್ಟೇ ವಿಸ್ತಾರದ **ದಧಿಮಂಡೋದೇನ** ಕ್ಷೀರಸಮುದ್ರದಿಂದ **ಪರಿತಃ** ಸುತ್ತಲೂ **ಉಪವೇಶಿತಃ**

ಸುತ್ತುವರೆಯಲ್ಪಟ್ಟಿದೆ **ಯಸ್ಮಿನ್** ಯಾವ ಈ ದ್ವೀಪದಲ್ಲಿ **ಸ್ವಕ್ಷೇತ್ರವ್ಯಪದೇಶಕಃ** ತಾನಿರುವ ದ್ವೀಪಕ್ಕೆ ತನ್ನ ಹೆಸರನ್ನಿತ್ತಿರುವ **ಶಾಕೋ ನಾಮ ಮಹೀರುಹಃ** ಶಾಕವೆಂಬ ದೊಡ್ಡಮರವು ಇರುವುದು **ಯಸ್ಯ** ಯಾವ ಮರದ **ಮಹಾನ್ ಸುರಭಿಗಂಧಃ** ವಿಪುಲವಾದ ಸುವಾಸನೆಯು **ತದ್ವರ್ಷಂ** ಆ ದ್ವೀಪವನ್ನು **ಅನುವಾಸಯತಿ** ಸುವಾಸನೆ ಗೊಳಿಸಿರುವುದು **ಹಿ** ಪ್ರಸಿದ್ಧವು.

ಹಿಂದೆ ಕ್ಷೀರೋದ ಶಬ್ದದಿಂದ ದಧಿಮಂಡೋದವನ್ನು ಇಲ್ಲಿ ದಧಿಮಂಡೋದ ಶಬ್ದದಿಂದ ಕ್ಷೀರೋದವನ್ನು ಅಮುಖ್ಯ ವೃತ್ತಿಯಿಂದ ಸ್ವೀಕರಿಸಬೇಕು ಎಂಬ ಅಭಿಪ್ರಾಯದಿಂದ ಎರಡೂ ಸ್ಥಳದಲ್ಲಿ ಪ್ರವೃತ್ತಿನಿಮಿತ್ತವಾದ ಗುಣವನ್ನು ಪ್ರಮಾಣದಿಂದ ತಿಳಿಸುವರು.

ತಾತ್ಪರ್ಯ - 'ಅನಾಮ್ಲಂ ತು ದಧಿಕ್ಷೀರಂ ಕ್ಷೀರಂ ಸಾಂದ್ರಂ ತಥಾ ದಧಿ ।
-ಇತಿ ಶಬ್ದನಿರ್ಣಯೇ '

**ತು** ಶಬ್ದ ಅವಧಾರಣಾರ್ಥಕ. **ಅನಾಮ್ಲಂ ತು ದಧಿ ಕ್ಷೀರಂ** ಸಿಹಿಯಾದ ಮೊಸರೇ ಹಾಲೆಂದು ಕರಿಸಿಕೊಳ್ಳುವುದು. ಗಟ್ಟಿಯಾದ ಹಾಲೇ ಮೊಸರೆನಿಸುವುದು. ಆದ್ದರಿಂದ ಹಿಂದೆ ದಧಿಮಂಡೋದ ಮೊಸರಿನ ಸಮುದ್ರವು ಮಾಧುರ್ಯ ಎಂಬ ಹಾಲಿನ ಗುಣವಿದ್ದುದರಿಂದ ಹಾಲೆಂದು ಕರೆಯಲ್ಪಟ್ಟಿತು. ಇಲ್ಲಿ ಮೊಸರಿನಲ್ಲಿರುವ ಗಟ್ಟಿತನ ಎಂಬ ಗುಣವಿರುವುದರಿಂದ ಹಾಲಿನ ಸಮುದ್ರ ಮೊಸರಿನ ಸಮುದ್ರ (ದಧಿ ಮಂಡೋದ) ಎಂದು ವ್ಯವಹರಿಸಲ್ಪಟ್ಟಿದೆ. ಇದರಿಂದ **ಯೋಜನಾಭೇದತೋऽತ್ರತು** ಎಂದು ಹೇಳಿದ ಯೋಜನಾವಿಶೇಷವನ್ನು ತೋರಿಸಿದಂತಾಯಿತು . **ವ್ಯತ್ಯಾಸಃ ಕ್ಷೀರಸಾಗರೇ** ಎಂದು ಹೇಳಿದ ವ್ಯತ್ಯಾಸವನ್ನು ತಿಳಿಸಿದಂತಾಯಿತು. ।।೨೪।।

**ತಸ್ಯಾಪಿ ಪ್ರೈಯ್ಯವ್ರತ ಏವಾಧಿಪತಿರ್ನಾಮ್ನಾ ಮೇಧಾತಿಥಿಃ ಸೋऽಪಿ ವಿಭಜ್ಯ ಸಪ್ತವರ್ಷಾಣಿ ಪುತ್ರನಾಮಾನಿ ತೇಷು ಸ್ವಾತ್ಮಜಾನ್ ಪುರೋಜವ, ಮನೋಜವ, ವೇಪಮಾನ ಧೂಮ್ರಾನೀಕ, ಚಿತ್ರರೇಫ, ಬಹುರೂಪ, ವಿಶ್ವಾಧಾರ ಸಂಜ್ಞಾನ್ ನಿಧಾಯಾಧಿಪತೀನ್ ಸ್ವಯಂ ಭಗವತ್ಯನಂತ ಆವೇಶಿತಮತಿಸ್ತಪೋವನಂ ಪ್ರವಿವೇಶ ।।೨೫।।**

ತಸ್ಯಾಪಿ ಆ ಶಾಕದ್ವೀಪಕ್ಕೂ **ನಾಮ್ನಾ** ಹೆಸರಿನಿಂದ **ಮೇಧಾತಿಥಿಃ** ಮೇಧಾತಿಥಿ ಎಂಬ **ಪ್ರಯ್ಯವ್ರತ ಏವ ಅಧಿಪತಿಃ** ಪ್ರಿಯವ್ರತರಾಜನ ಮಗನೇ ಅಧಿ

ಪತಿಯು(ರಾಜನು) **ಸಃ ಅಪಿ** ಅವನೂ ಸಹ **ಪುತ್ರನಾಮಾನಿ** ತಮ್ಮ ಮಕ್ಕಳ ಹೆಸರುಳ್ಳ **ಸಪ್ತವರ್ಷಾಣಿ** ಏಳು ಖಂಡಗಳನ್ನು **ವಿಭಜ್ಯ** ವಿಭಾಗಮಾಡಿ **ತೇಷು** ಅವುಗಳಲ್ಲಿ ಪುರೋಜವ, ಮನೋಜವ, ವೇಪಮಾನ, ಧೂಮ್ರಾನೀಕ, ವಿಚಿತ್ರರೇಫ, ಬಹುರೂಪ, ವಿಶ್ವಾಧಾರ ಎಂಬ **ಸಂಜ್ಞಾನ್** ಹೆಸರಿನ ತನ್ನ ಮಕ್ಕಳನ್ನು **ಅಧಿಪತೀನ್ ನಿಧಾಯ** ಅಧಿಪತಿಗಳನ್ನಾಗಿಟ್ಟು **ಸ್ವಯಂ** ತಾನು **ಅನಂತೇ** ದೇಶಕಾಲಗುಣಗಳಿಂದ ಅಪರಿಚ್ಛಿನ್ನನಾದ **ಭಗವತಿ** ಶ್ರೀಹರಿಯಲ್ಲಿ **ಆವೇಶಿತಮತಿಃ** ಮನಸ್ಸಿಟ್ಟು **ತಪೋವನಂ ಪ್ರವಿವೇಶ** ತಪಸ್ಸಿಗಾಗಿ ತಪೋವನವನ್ನು ಪ್ರವೇಶಿಸಿದನು. ।।೨೫।।

**ತೇಷು ವರ್ಷಮರ್ಯಾದಾಗಿರಯೋ ನದ್ಯಶ್ಚ ಸಪ್ತ ಸಪ್ತೈವ ಈಶಾನ ಉರುಶೃಂಗೋ ಬಲಭದ್ರಃ ಶತಕೇಸರಃ ಸಹಸ್ರಸ್ರೋತೋ ದೇವಪಾಲೋ ಮಹಾನಸ ಇತಿ ।।೨೬।।**

**ಅನಘೋ ಆಯುರ್ದಾ ಉಭಯ ಸ್ಪೃಷ್ಟಿರಪರಾಜಿತಾ ಪಂಚಪದೀ ಸಹಸ್ರಶೃತಿರ್ನಿಜಧೃತಿರಿತಿ ।।೨೭।।**

**ತೇಷು** ಆ ಖಂಡಗಳಲ್ಲಿ **ಮರ್ಯಾದಾಗಿರಯಃ** ಎಲ್ಲೆಯ ಪರ್ವತಗಳು **ಚ** ಮತ್ತು **ನದ್ಯಃ** ಮಹಾನದಿಗಳು **ಸಪ್ತ ಸಪ್ತ ಏವ** ಏಳು ಏಳು ಮಾತ್ರ ಇರುವವು. **ಈಶಾನ, ಉರುಶೃಂಗ, ಬಲಭದ್ರ , ಶತಕೇಸ, ಸಹಸ್ರಸ್ರೋತ, ದೇವಪಾಲ, ಮಹಾನಸ ಇತಿ** ಎಂದು ಏಳು ಪರ್ವತಗಳು ।।೨೬।।

**ಅನಘ, ಆಯುರ್ದಾ, ಉಭಯಸ್ಪೃಷ್ಟಿ, ಅಪರಾಜಿತಾ, ಪಂಚಪದೀ, ಸಹಸ್ರಶೃತಿ, ನಿಜಧೃತಿ ಇತಿ** ಎಂದು ಏಳು ಮಹಾನದಿಗಳು. ।।೨೭।।

**ತದ್ವರ್ಷೇಷು ಪುರುಷಾ ಧೃತವ್ರತಸತ್ಯವ್ರತದಾನವ್ರತಾನುವ್ರತನಾಮಾನೋ ಭಗವಂತಂ ವಾಯ್ವಾತ್ಮಕಂ ಪ್ರಾಣಾಯಾಮವಿಧೂತರಜಸ್ತಮಸಃ ಪರಮಸಮಾಧಿನಾ ಯಜಂತೇ ।।೨೮।।**

**ತದ್ವರ್ಷೇಷು** ಆ ಖಂಡಗಳಲ್ಲಿ (ಅರ್ಥಾತ್ ಆ ದ್ವೀಪದಲ್ಲಿ) **ಧೃತವ್ರತ, ಸತ್ಯವ್ರತ, ದಾನವ್ರತ, ಅನುವ್ರತ**ರೆಂಬ ಹೆಸರಿನ **ಪುರುಷಾಃ** ನಾಲ್ಕು ವರ್ಣದವರು ಜನರು **ಪ್ರಾಣಾಯಾಮವಿಧೂತರಜಸ್ತಮಸಃ** ಪ್ರಾಣಾಯಾಮದಿಂದ ತಮ್ಮ ಮನಸ್ಸಿನ ರಜೋಗುಣತಮೋಗುಣ ಪ್ರಯುಕ್ತ ದೋಷಗಳನ್ನು ಪರಿಹರಿಸಿಕೊಂಡವರಾಗಿ




**ವಾಯ್ವಾತ್ಮಕಂ ಭಗವಂತಂ** ವಾಯುದೇವರ ಅಂತರ್ಯಾಮಿಯಾದ ವಾಯುನಾಮಕ ವಾಯುವಿಗೆ ಆದಾನಾದಿ ಕರ್ತೃವಾದ **ಭಗವಂತಂ** ಶ್ರೀಹರಿಯನ್ನು **ಪರಮಸಮಾಧಿನಾ** ಅತಿಶಯ ಚಿತ್ತೈಕಾಗ್ರತೆಯಿಂದ **ಯಜಂತೇ** ಉಪಾಸಿಸುವರು. ॥೨೮॥

**'ಅಂತಃ ಪ್ರವಿಶ್ಯ ಭೂತಾನಿ ಯೋ ಬಿಭರ್ತ್ಯಾತ್ಮಕೇತುಭಿಃ ।**
**ಅಂತರ್ಯಾಮೀಶ್ವರಃ ಸಾಕ್ಷಾತ್ಪಾತು ನೋ ಯದ್ವಶೇ ಇದಂ' ಇತಿ ॥೨೯॥**

**ಯಃ** ಯಾವ ವಾಯ್ವಂತರ್ಗತ ಶ್ರೀಹರಿಯು **ಭೂತಾನಿ** ಪ್ರಾಣಿಸಮೂಹವನ್ನು **ಅಂತಃ ಪ್ರವಿಶ್ಯ** ಶರೀರದ ಒಳಗೆ ಹೊಕ್ಕು **ಆತ್ಮಕೇತುಭಿಃ** ತನ್ನ ಪ್ರಾಣಾಪಾನ ವ್ಯಾನೋದಾನಸಮಾನವೆಂಬ ರೂಪಗಳಿಂದ **ಬಿಭರ್ತಿ** ಧರಿಸುವನೋ **ಇದಂ** ಈ ಜಗತ್ತು ಎಲ್ಲವೂ **ಯದ್ವಶೇ** ಯಾವನ ಅಧೀನದಲ್ಲಿದೆಯೋ **ಸಃ** ಅಂತಹ ವಾಯುವಿನ ಅಂತರ್ಯಾಮಿಯಾದ **ಸಾಕ್ಷಾತ್ ಈಶ್ವರಃ** ನಿರುಪಚರಿತ ನಿಯಾಮಕ ಶ್ರೇಷ್ಠನಾದ ಶ್ರೀಹರಿಯು **ನಃ** ನಮ್ಮನ್ನು **ಪಾತು** ರಕ್ಷಿಸಲಿ **ಇತಿ** ಎಂದು **ಯಜಂತೇ** ಉಪಾಸಿಸುವರು. ॥೨೯॥

**ಏವಮೇವ ದಧಿಮಂಡೋದಾತ್ಪರತಃ ಪುಷ್ಕರದ್ವೀಪಸ್ತತೋ ದ್ವಿಗುಣಾಯಾಮಃ ಸಮಂತತ ಉಪಕಲ್ಪಿತಃ ಸಮಾನೇನ ಸ್ವಾದೋದಕಸಮುದ್ರೇಣ ಬಹಿರಾವೃತೋ ಯಸ್ಮಿನ್ ಬೃಹತ್ ಪುಷ್ಕರಂ ಜ್ವಲನಶಿಖಾಮಲಕನಕಪತ್ರಾಯುತಂ ಭಗವತಃ ಕಮಲಾಸನಸ್ಯಾಧ್ಯಾಸನಂ ಪರಿಕಲ್ಪಿತಂ ತದ್ದ್ವೀಪಮಧ್ಯೇ ಮಾನಸೋತ್ತರನಾಮೈಕ ಏವಾರ್ವಾಚೀನ ಪರಾಚೀನಯೋರ್ವರ್ಷಯೋರ್ಮರ್ಯಾದಾಚಲೋऽಯುತಯೋಜನೋಚ್ಛ್ರಾಯಾಯಾಮೋ ಯತ್ರ ತು ಚತಸೃಷು ದಿಕ್ಷು ಚತ್ವಾರಿ ಪುರಾಣಿ ಲೋಕಪಾಲಾನಾಮಿಂದ್ರಾದೀನಾಂ ಯದುಪರಿಷ್ಟಾತ್ಸೂರ್ಯರಥಸ್ಯ ಮೇರುಂ ಪರಿಕ್ರಮತಃ ಸಂವತ್ಸರಾತ್ಮಕಮಹೋರಾತ್ರಾಭ್ಯಾಂ ಚಕ್ರಂ ಪರಿಭ್ರಮತಿ ॥೩೦॥**

**ಏವಮೇವ** (ಹಿಂದಿನಂತೆ) ಇದರಂತೆಯೇ **ದಧಿಮಂಡೋದಾತ್** ಕ್ಷೀರಸಮುದ್ರದಿಂದ **ಪರತಃ** ಹೊರಗೆ **ತತಃ** ಕ್ಷೀರಸಮುದ್ರಕ್ಕಿಂತ **ದ್ವಿಗುಣಾಯಾಮಃ** ಎರಡರಷ್ಟು ವಿಸ್ತಾರವುಳ್ಳ (ಅರವತ್ತುನಾಲ್ಕುಲಕ್ಷಯೋಜನ ವಿಸ್ತಾರವಾದ) **ಪುಷ್ಕರದ್ವೀಪಃ** ಪುಷ್ಕರದ್ವೀಪವು **ಸಮಂತತಃ** ಸುತ್ತಲೂ **ಉಪಕಲ್ಪಿತಃ** ಸೃಷ್ಟವಾಗಿರುವುದು ಅದು **ಸಮಾನೇನ** ಅದರಷ್ಟೇ ವಿಸ್ತಾರದ **ಸ್ವಾದೂದಕಸಮುದ್ರೇಣ** ಸಿಹಿ ನೀರಿನ

ಸಮುದ್ರದಿಂದ **ಬಹಿಃ** ಹೊರಗೆ **ಆವೃತಃ** ಸುತ್ತುವರೆಯಲ್ಪಟ್ಟಿರುವುದು **ಯಸ್ಮಿನ್** ಯಾವ ದ್ವೀಪದಲ್ಲಿ **ಜ್ವಲನ** ಬೆಂಕಿಯ **ಶಿಖಾ** ಜ್ವಾಲೆಯಂತೆ **ಅಮಲ** ನಿರ್ಮಲವಾದ **ಕನಕಪತ್ರಾಯುತಂ(ತಾಯುತಂ)** ಹತ್ತುಸಾವಿರ ಬಂಗಾರದ ಎಸಳುಗಳುಳ್ಳ **ಬೃಹತ್** ದೊಡ್ಡದಾದ **ಪುಷ್ಕರಂ** ಕಮಲವು **ಕಮಲಾಸನಸ್ಯ** ಕಮಲವೇ ಪೀಠವಾಗಿರುವ ಬ್ರಹ್ಮದೇವರಿಗೆ **ಅಧ್ಯಾಸನಂ** ಅಧಿಕವಾದ ಪೀಠವಾಗಿ **ಪರಿಕಲ್ಪಿತಂ** ಸ್ಪಷ್ಟವಾಗಿದೆ **ತದ್ದ್ವೀಪಮಧ್ಯೇ** ಆ ದ್ವೀಪದ ಮಧ್ಯದಲ್ಲಿ **ಆಯುತಯೋಜನೋಚ್ಛ್ರಾಯಾಯಾಮಃ** ಹತ್ತು ಸಾವಿರ ಯೋಜನ ಎತ್ತರ ಮತ್ತು ಅಗಲ (ಗಾತ್ರದ)ವಾದ **ಮಾನಸೋತ್ತರನಾಮಾ** ಮಾನೋಸತ್ತರವೆಂಬ **ಏಕ ಏವ** ಒಂದೇ ಒಂದು **ಅರ್ವಾಚೀನಪರಾಚೀನಯೋಃ** ಒಳಗಿನ ಹೊರಗಿನ **ವರ್ಷಯೋಃ** ಖಂಡಗಳಿಗೆ **ಮರ್ಯಾದಾಚಲಃ** ಸೀಮಾ ಪರ್ವತವು ಇದೆ. **ಯತ್ರ ತು** ಯಾವ ಪರ್ವತಗಳಲ್ಲಿ **ಚತಸೃಷು ದಿಕ್ಷು** ನಾಲ್ಕು ದಿಕ್ಕುಗಳಲ್ಲಿ **ಇಂದ್ರಾದೀನಾಂ ಲೋಕಪಾಲಾನಾಂ** ಇಂದ್ರ ಮೊದಲಾದ ನಾಲ್ವರು ಲೋಕಪಾಲಕರ **ಚತ್ವಾರಿ ಪುರಾಣಿ** ನಾಲ್ಕು ಪಟ್ಟಣಗಳು ಇವೆ **ಯದುಪರಿಷ್ಟಾತ್** ಯಾವ ಪರ್ವತದ ಮೇಲ್ಭಾಗದಲ್ಲಿ **ಮೇರುಂ ಪರಿಕ್ರಮತಃ** ಮೇರುಪರ್ವತವನ್ನು ಸುತ್ತುವ **ಸೂರ್ಯರಥಸ್ಯ** ಸೂರ್ಯನ ರಥದ **ಅಹೋರಾತ್ರಾಭ್ಯಾಂ ಸಂವತ್ಸರಾತ್ಮಕಂ** ಹಗಲು ರಾತ್ರಿಗಳನ್ನು ಉಂಟುಮಾಡುವುದರಿಂದ ಒಂದು ವರ್ಷದ ಕಾಲವನ್ನು ಅಳೆದು ತಿಳಿಸುವ **ಚಕ್ರಂ** ಸಂವತ್ಸರರೂಪ ಚಕ್ರವು **ಪರಿಭ್ರಮತಿ** ಹಗಲು ರಾತ್ರಿಗಳಲ್ಲಿ ಸುತ್ತುವುದು. **ಅಹಸ್ತ್ರಿನಾಭಿಃ ಸೂರ್ಯಸ್ಯ ಏಕಚಕ್ರಸ್ಯ ವೈ ಸ್ಮೃತಂ । ಅರಾ ಸಂವತ್ಸರಾಃ ಪಂಚ ತೇಭ್ಯಃ ಷಡೃತವಃ ಸ್ಮೃತಾಃ** ಎಂಬ ಮತ್ಸ್ಯಪುರಾಣ ವಾಕ್ಯವು ಸೂರ್ಯಚಕ್ರಕ್ಕೆ ಸಂವತ್ಸರರೂಪವನ್ನು ತಿಳಿಸುವುದು. **ತ್ರಿಣಾಭಿ ಚಕ್ರಮಜರಮನರ್ವಂ, ಪಂಚಾರೇ ಚಕ್ರ:** ಎಂಬ ಶ್ರುತಿ ವಾಕ್ಯಗಳನ್ನು ನೋಡಬಹುದು. ॥೩೦॥

**ತದ್ದ್ವೀಪಸ್ಯಾಧಿಪತಿಃ ಪ್ರೈಯವ್ರತೋ ವೀತಿಹೋತ್ರನಾಮಾ ಸ್ವಸ್ಯಾತ್ಮಜೌ ರಮಣಕ ಧಾತುಕನಾಮಾನೌ ವರ್ಷಪತೀ ನಿಯುಜ್ಯ ಸ್ವಯಂ ಪೂರ್ವಜವದ್ಭಗವತ್ಕರ್ಮಶೀಲ ಏವಾಸ್ತೇ ॥೩೧॥**

**ತದ್ದ್ವೀಪಸ್ಯ** ಆ ಪುಷ್ಕರ ದ್ವೀಪಕ್ಕೆ **ಅಧಿಪತಿಃ** ಒಡೆಯನಾದ **ಪ್ರೈಯವ್ರತಃ** ಪ್ರಿಯವ್ರತನ ಮಗನಾದ **ವೀತಿಹೋತ್ರನಾಮಾ** ವೀತಿಹೋತ್ರನೆಂಬುವನು **ಸ್ವಸ್ಯ ಆತ್ಮಜೌ** ತನ್ನ ಮಕ್ಕಳಾದ **ರಮಣಕಧಾತುಕನಾಮಾನೌ** ರಮಣಕ ಧಾತುಕರೆಂಬುವರನ್ನು




**ವರ್ಷಪತಿ** ಎರಡು ಖಂಡಗಳ ಅಧಿಪತಿಗಳನ್ನಾಗಿ **ನಿಯುಜ್ಯ** ನಿಯಮಿಸಿ **ಸ್ವಯಂ** ತಾನು **ಪೂರ್ವಜವತ್** ಅಣ್ಣಂದಿರಂತೆಯೇ **ಭಗವತ್ಕರ್ಮಶೀಲ ಏವ ಆಸ್ತೇ** ಶ್ರೀಹರಿಯ ಧ್ಯಾನ ಕರ್ಮರತನಾಗಿಯೇ ಇರುವನು. ||೩೦||

**ತದ್ವರ್ಷಪುರುಷಾ ಭಗವಂತಂ ಬ್ರಹ್ಮರೂಪಿಣಮಕರ್ಮಕೇಣ ಕರ್ಮಣಾ ಚಾರಾಧಯಂತೀದಂ ಚೊದಾಹರಂತಿ ||೩೨||**

**ತದ್ವರ್ಷಪುರುಷಾಃ** ಆ ಖಂಡ ನಿವಾಸಿಗಳು **ಬ್ರಹ್ಮರೂಪಿಣಂ** ಬ್ರಹ್ಮದೇವರ ಅಂತರ್ಯಾಮಿಯಾದ ಬ್ರಹ್ಮನಾಮಕನಾದ **ಭಗವಂತಂ** ಶ್ರೀಹರಿಯನ್ನು **ಅಕರ್ಮಕೇಣ** ಧ್ಯಾನದಿಂದಲೂ, ಜ್ಞಾನಮಾರ್ಗದಿಂದಲೂ **ಕರ್ಮಣಾ ಚ** ಮನೋನಿರೋಧರೂಪ-ಕರ್ಮದಿಂದಲೂ ನಿಷ್ಕಾಮವಾದ ನಿವೃತ್ತಕರ್ಮದಿಂದಲೂ **ಆರಾಧಯಂತಿ** ಆರಾಧಿಸುವರು **ಇದಂ ಚ ಉದಾಹರಂತಿ** ಮುಂದೆ ಹೇಳುವ ಸ್ತೋತ್ರವನ್ನು ಹೇಳುವರು. ||೩೨||

**'ಯತ್ತೇ (ತತ್) ಕರ್ಮಮಯಂ ಲಿಂಗಂ ಬ್ರಹ್ಮಲಿಂಗಂ ಜನೋಽರ್ಚತಿ ।
ಭೇದೇನೈಕಾಂತಮದ್ವೈತಂ ತಸ್ಮೈ ಭಗವತೇ ನಮಃ' ಇತಿ ||೩೩||**

**ಹೇ ಭಗವನ್** ಹೇ ಶ್ರೀಹರಿಯೇ **ಯತ್** ಯಾವ **ತೇ** ನಿನ್ನ (**ತತ್** ಎಂಬ ಪಾಠದಲ್ಲಿ ಪ್ರಸಿದ್ಧವಾದ ಎಂದರ್ಥ) ಸರ್ವಲಕ್ಷಣಗಳಿಂದ ಕೂಡಿದ ಸ್ವರೂಪವು **ಕರ್ಮಮಯಂ** ಶ್ರುತಿಸ್ಮೃತಿವಿಹಿತಕರ್ಮಫಲರೂಪವೋ (ಕರ್ಮಗಳಿಂದ ತಿಳಿಯಲ್ಪಡುವುದೋ, ವೇದಪ್ರತಿಪಾದ್ಯವಾದ ಕರ್ಮಗಳಿಗೆ ಮುಖ್ಯೋದ್ದೇಶ್ಯವೋ ಪ್ರಧಾನವೋ) **ಬ್ರಹ್ಮಲಿಂಗಂ** ಚತುರ್ಮುಖ ಬ್ರಹ್ಮದೇವರು, ಮುಖ್ಯಪ್ರಾಣದೇವರು ಪ್ರತಿಮೆಯಾಗಿವುಳ್ಳ ಯಾವುದನ್ನು **ಜನಃ** ಜನರು (ಭಕ್ತರು) **ಭೇದೇನ** ರಮಾಬ್ರಹ್ಮಾದಿ ಸಮಸ್ತಜಗತ್ತಿನಿಂದ ವಿಲಕ್ಷಣನೆಂದು **ಅರ್ಚತಿ** ಪೂಜಿಸುವರೋ ಮತ್ತು ಯಾವುದು **ಏಕಾಂತಂ** ನಿಯಮದಿಂದ **ಅದ್ವೈತಂ** ಸ್ವಗತಭೇದವಿಲ್ಲದುದೋ **ತಸ್ಮೈ** ಅಂತಹ ಸ್ವರೂಪಿಯಾದ **ಭಗವತೇ ತೇ** ಭಗವಂತನಾದ ನಿನಗೆ **ನಮಃ** ನಮಸ್ಕಾರ.

ಬ್ರಹ್ಮದೇವರ ಪರವಾಗಿಯೂ ಈ ಮಂತ್ರಕ್ಕೆ ಅರ್ಥ **ಯತ್** ಯಾವ ಬ್ರಹ್ಮದೇವರ ಶರೀರವು **ಕರ್ಮಮಯಂ** ಪುಣ್ಯಕರ್ಮದಿಂದ ನಿರ್ಮಿತವೋ **ಬ್ರಹ್ಮಲಿಂಗಂ** ಶ್ರೀಹರಿಯ ವಿಶೇಷ ಸನ್ನಿಧಾನಕ್ಕೆ ಯೋಗ್ಯವೋ **ಏಕಾಂತಂ** ಪ್ರಳಯದಲ್ಲಿ ಕೇವಲ

ಅಂದರೆ ವ್ಯಾಪಾರವಿಲ್ಲದುದೋ **ಅದ್ವೈತಂ** ಮುಕ್ತಿಯಲ್ಲಿಯೂ ಸಂಸಾರಾವಸ್ಥೆಯಲ್ಲಿಯೂ ಶ್ರೀಹರಿಯ ಅಭಿಪ್ರಾಯದಂತೆಯೇ ಪ್ರವರ್ತಿಸುವುದೋ ಮತ್ತು ಯಾವುದನ್ನು **ಜನಾಃ** ಜನರು **ಭೇದೇನ** ಶ್ರೀಹರಿಯಿಂದ ಭಿನ್ನವೆಂದು **ಅರ್ಚತಿ** ಪೂಜಿಸುವರೋ **ತಸ್ಮೈ** ಅಂತಹ **ಭಗವತೇ** ಪೂಜ್ಯರಾದ ಬ್ರಹ್ಮದೇವರಿಗೆ **ನಮಃ** ನಮಸ್ಕಾರ. ಮುಕ್ತಿಯಲ್ಲಿ **ಗಚ್ಛಾಮಿ ವಿಷ್ಣುಪಾದಾಭ್ಯಾಂ** ಎಂಬ ಅನುಸಂಧಾನ ಬ್ರಹ್ಮದೇವರಿಗೆ ಉಂಟೆಂದು ಪ್ರಮಾಣಗಳು ತಿಳಿಸುವುವು. **ಭೇದೇನ** ಎಂದು ಹೇಳಿ ಶ್ರೀಹರಿಗೂ ಬ್ರಹ್ಮದೇವರಿಗೂ ಸ್ವರೂಪೈಕ್ಯವಿಲ್ಲ ಅದನ್ನು ತಿಳಿಯಬಾರದು ಎಂದು ಸೂಚಿಸಿರುವರು. ।।೩೩।।

**ತತಃ(ತಸ್ಮಾತ್) ಪರಸ್ತಾತ್ ಲೋಕಾಲೋಕನಾಮಾಚಲಃ ಲೋಕಾಲೋಕ-ಯೋರಂತರಾಲೇ ಉಪಕ್ಲೃಪ್ತಃ ।।೩೪।।**

**ತತಃ** ಸಿಹಿ ನೀರಿನ ಸಮುದ್ರದ **ಪರಸ್ತಾತ್** ಹೊರಗೆ (ಕಾಂಚನ ಭೂಮಿಯ ನಂತರ) **ಲೋಕಾಲೋಕಯೋರಂತರಾಲೇ** ದೇವಮನುಷ್ಯವ್ಯವಹಾರಯೋಗ್ಯವಾದ ಅಥವಾ ಸೂರ್ಯಾದಿಗಳ ಪ್ರಕಾಶವಿರುವ ಪ್ರದೇಶ **ಲೋಕ** ಅವರ ವ್ಯವಹಾರಾಯೋಗ್ಯವಾದ ಸೂರ್ಯಾದಿ ಪ್ರಕಾಶವಿಲ್ಲದಿರುವ ಪ್ರದೇಶ **ಅಲೋಕ** ಇವುಗಳ ಮಧ್ಯದಲ್ಲಿ ಇವುಗಳ ವಿಭಾಗಕ್ಕಾಗಿ **ಲೋಕಾಲೋಕೋ ನಾಮಾ ಅಚಲಃ** ಲೋಕಾಲೋಕವೆಂಬ ಪರ್ವತವು **ಪರಿತಃ** ಸುತ್ತಲೂ **ಉಪಕ್ಲೃಪ್ತಃ** ನಿರ್ಮಿತವಾಗಿರುವುದು. ।।೩೪।।

**ಪರಸ್ತಾತ್** ಎಂದು ಹೇಳಿದ್ದು ಅವ್ಯವಧಾನದಿಂದಲ್ಲವೆಂಬ ಅಭಿಪ್ರಾಯದಿಂದ. ಅದರ ಮಧ್ಯದಲ್ಲಿರುವ ಭೂಮಿಯನ್ನು ಹೇಳುವರು

**ಯಾವನ್ಮಾನಸೋತ್ತರಮೇರ್ವೋರ್‌ರುತ್ತರಂ(ರಂತರಂ) ತಾವತೀ ಭೂಮಿಃ ಕಾಂಚನ್ಯಾದರ್ಶತಲೋಪಮಾ ಯಸ್ಯಾಂ ಪ್ರಹಿತಃ ಪದಾರ್ಥೋ ನ ಕಥಂಚಿತ್ ಪುನಃ ಪ್ರತ್ಯುಪಲಕ್ಷ್ಯತೇ ತಸ್ಮಾತ್ಸರ್ವಸತ್ವಪರಿಹೃತಾಽಽಸೀತ್ ।।೩೫।।**

**ಮಾನಸೋತ್ತರಮೇರ್ವೋಃ** ಪುಷ್ಕರ ದ್ವೀಪದ ಮಧ್ಯದಲ್ಲಿರುವ ಮಾನಸೋತ್ತರ ಪರ್ವತಕ್ಕೂ ಜಂಬೂದ್ವೀಪದ ಒಳಗೆ ಇರುವ ಮೇರುಪರ್ವತಕ್ಕೂ ಅಂತರಂ ಮಧ್ಯದಲ್ಲಿ ಇರುವ ಸ್ಥಳವು **ಯಾವತ್** ಎಷ್ಟು ಪರಿಮಾಣವುಳ್ಳದ್ದೋ **ತಾವತೀ** ಅಷ್ಟು ಪರಿಮಾಣವುಳ್ಳ **ಆದರ್ಶತಲೋಪಮಾ** ಕನ್ನಡಿಯಂತಿರುವ **ಕಾಂಚನೀ ಭೂಮಿಃ** ಚಿನ್ನದ ಭೂಮಿಯು ಇರುವುದು **ಯಸ್ಯಾಂ** ಯಾವ ಭೂಮಿಯಲ್ಲಿ **ಪ್ರಹಿತಃ** ಹೋದ




**ಪದಾರ್ಥಃ** ದೇವತೆಗಳು ಅವರ ಅನುಚರರನ್ನು ಬಿಟ್ಟು ಉಳಿದ ಪ್ರಾಣಿ ಸಮೂಹವು **ಕಥಂಚಿತ್** ಏನು ಮಾಡಿದರೂ (ಯಾವ ಉಪಾಯದಿಂದಲೂ) **ಪುನಃ** ಮತ್ತೆ ನ **ಪ್ರತಿಲಭ್ಯತೇ** ದೊರೆಯುವುದಿಲ್ಲ (ಸತ್ತುಹೋಗುವುದೆಂದರ್ಥ) **ತಸ್ಮಾತ್** ಆದ್ದರಿಂದ **ಸರ್ವಸತ್ವಪರಿಹೃತಾ** ದೇವತೆಗಳು, ಅವರ ಅನುಚರರನ್ನು ಬಿಟ್ಟು ಮಿಕ್ಕ ಯಾವ ಪ್ರಾಣಿಯೂ ಇಲ್ಲದಿರುವುದಾಗಿ **ಆಸೀತ್** ಇರುವುದು.

**ವಿ.ವಿ :- ತತೋ ಹೇಮಮಯೀ ಭೂಮಿರ್ದಶಕೋಟ್ಯೋ ವರಾನನೇ । ದೇವಾನಾಂ ಕ್ರೀಡನಾರ್ಥಾಯ ಲೋಕಾಲೋಕೋತ್ತರಃ ಪರಃ ॥** ಎಂಬ ಗ್ರಂಥಾಂತರ ವಚನದಂತೆ ಲೋಕಾಲೋಕಪರ್ವತಕ್ಕೂ ಸಿಹಿ ನೀರಿನ ಸಮುದ್ರಕ್ಕೂ ಮಧ್ಯದಲ್ಲಿ ದೇವತಾ ವಿಹಾರ ಸ್ಥಳವಾದ ಕಾಂಚನಭೂಮಿ **ತತೋ ಹಿರಣ್ಮಯೀ ಭೂಮಿಃ** ಎಂದು ಪ್ರಸಿದ್ಧವಾದುದು ಇದೆಯೆಂದರ್ಥ. ಇದರ ಪರಿಮಾಣ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ವಿಜಯಧ್ವಜತೀರ್ಥರು ಹತ್ತು ಕೋಟಿ ಹದಿನಾರು ಲಕ್ಷವೆಂದು ಅಭಿಪ್ರಾಯ ಪಟ್ಟಿರುವರು. ಅದರಂತೆ **ದ್ವಿಗುಣಾ ಕಾಂಚನೀ ಭೂಮಿಃ ಸರ್ವಸತ್ವವಿವರ್ಜಿತಾ** ಎಂಬ ವಚನಕ್ಕೆ ಹಿಂದಿನ ಭೂಮಿಗಿಂತಲೂ ದೇವತೆಗಳಿಗೆ ಎರಡು ಪಟ್ಟು ಸುಖನೀಡುವ ಸ್ವರ್ಣಭೂಮಿಯೆಂದರ್ಥವೇ ಹೊರತು ಎರಡರಷ್ಟು ಪರಿಮಾಣವೆಂದಲ್ಲ. ಹಾಗೆ ಹೇಳಿದಲ್ಲಿ ಬೇರೆ ಗ್ರಂಥಗಳ ವಿರೋಧ ಬರುವುದು ಎಂದು ಅವರ ಅಭಿಪ್ರಾಯ. ತೊಂಭತ್ತಾರು ಲಕ್ಷಯೋಜನ ಪರಿಮಾಣವೆಂದು ಕೆಲವರು ಹೇಳುವರು. ಇದನ್ನು ಅನುಸರಿಸಿ ಯಾದುಪತ್ಯಕಾರರು ಸಮುದ್ರಗಳನ್ನು ಬಿಟ್ಟು ದ್ವೀಪಗಳೆಂಬ ಭೂಮಿಯನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡಲ್ಲಿ ತೊಂಭತ್ತಾರು ಲಕ್ಷಯೋಜನ ಕಾಂಚನ ಭೂಮಿಯೆಂದು ಅರ್ಥ ಮಾಡಿರುವರು. ಸಮುದ್ರಗಳನ್ನು ಸೇರಿಸಿಕೊಂಡರೆ ಒಂದುಕೋಟಿ ಐವತ್ತೇಳುವರಿ ಲಕ್ಷಯೋಜನಗಳಾಗುವುದೆಂದೂ ಅಷ್ಟು ಸ್ವರ್ಣಭೂಮಿ ಪರಿಮಾಣವೆಂದೊಪ್ಪಿದಲ್ಲಿ **ಅಂತ್ಯಾಧ್ಯರ್ಧಸ್ಥಲಂ ಹೈಮಂ (ಮ.ತಾ.ನಿ ೨೧.೪೧)** ಎಂಬ **ಮಹಾಭಾರತತಾತ್ಪರ್ಯನಿರ್ಣಯ** ವಾಕ್ಯಕ್ಕೆ ವಿರೋಧ ಬರುವುದೆಂದು ಅವರ ಅಭಿಪ್ರಾಯ. ದ್ವೀಪಗಳನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡಾಗಲೂ ಅರ್ಧಲಕ್ಷಯೋಜನ ಕಮ್ಮಿ ಬರುವುದೆಂದು ಶಂಕಿಸಿದರೆ ಕಾಂಚನ ಭೂಮಿಯ ಅಂಚಿನಲ್ಲಿರುವ ವಜ್ರಪ್ರದೇಶವು ಅರ್ಧಲಕ್ಷಯೋಜನ ವಿರುವುದೆಂದು ಅದನ್ನು ಸೇರಿಸಿಕೊಂಡು ತೊಂಭತ್ತಾರು ಲಕ್ಷವೆಂದೂ ಆದ್ದರಿಂದಲೇ **ಬಾಹ್ಯತೋ ವಜ್ರಲೇಪಕಂ** ಎಂಬ ತಾತ್ಪರ್ಯನಿರ್ಣಯದ ಮುಂದಿನ ವಾಕ್ಯವು ಹೊರಟಿದೆ ಎಂದೂ ಅಭಿಪ್ರಾಯ ಪಟ್ಟಿರುವರು. ।।೩೫।।

**ಲೋಕಾಲೋಕ ಇತಿ ಸಮಾಖ್ಯಾ ಯದನೇನಾಚಲೇನ ಲೋಕಾಲೋಕಾ-ವಂತರವರ್ತಿನಾ ಸ್ಥಾಪ್ಯೇತ ಇತಿ ।।೩೬।।**

**ಲೋಕಾಲೋಕ ಇತಿ** ಲೋಕಾಲೋಕವೆಂಬುವುದು **ಸಮಾಖ್ಯಾ** ಅನ್ವರ್ಥವಾದ ಹೆಸರು **ಯತ್** ಏಕೆಂದರೆ **ಅಂತರವರ್ತಿನಾ** ಲೋಕ ಮತ್ತು ಅಲೋಕಗಳ ಮಧ್ಯದಲ್ಲಿರುವ **ಅನೇನ ಅಚಲೇನ** ಈ ಪರ್ವತದಿಂದ **ಲೋಕಾಲೋಕೌ** ಲೋಕ ಮತ್ತು ಅಲೋಕಗಳು **ಸ್ಥಾಪ್ಯೇತೇ** ಬೇರೆ ಬೇರೆಯಾಗಿ ತಿಳಿಯಲ್ಪಡುವುವು **ಇತಿ** ಈ ಕಾರಣದಿಂದ ಇದಕ್ಕೆ ಲೋಕಾಲೋಕವೆಂಬ ಹೆಸರು ಅನ್ವರ್ಥವೆಂದು ಭಾವ. ।।೩೬।।

**ಸ ಲೋಕತ್ರಯಾಂತೇ ಪರಿತ ಈಶ್ವರೇಣ ವಿಹಿತಃ ಯಸ್ಮಾತ್ ಸೂರ್ಯಾದೀನಾಂ ಧ್ರುವಾಪವರ್ಗಾಣಾಂ ಜ್ಯೋತಿರ್ಗಣಾನಾಂ ಗಭಸ್ತಯೋಽ-ರ್ವಾಚೀನಾಂ ಸ್ತ್ರಿಲೋಕಾನ್ವಿತನ್ವಾನಾ ನ ಕದಾಚಿತ್ ಪರಾಚೀನಾ ಭವಿತುಮುತ್ಸಹಂತೇ ತಾವದುನ್ನಹನಾಯಾಮಃ ।।೩೭।।**

**ಸಃ** ಆ ಲೋಕಾಲೋಕಪರ್ವತವು **ಯಸ್ಮಾತ್** ಯಾವ ಕಾರಣ **ಲೋಕತ್ರಯಾಂತೇ** ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳ (ಸೃಷ್ಟಿಯ) ನಂತರ ಮೂರು ಲೋಕಗಳ ಕೊನೆಯಲ್ಲಿ ಸೂರ್ಯಾದಿ ಪ್ರಕಾಶವುಳ್ಳ ಮೂರು ಲೋಕಗಳ ನಿರ್ಣಯಕ್ಕಾಗಿ **ಈಶ್ವರೇಣ** ಶ್ರೀಹರಿಯಿಂದ **ಪರಿತಃ** ಸುತ್ತಲೂ **ವಿಹಿತಃ** ನಿರ್ಮಿತವಾಗಿದೆಯೋ **ತಸ್ಮಾತ್** ಆ ಉದ್ದೇಶದ ಭಂಗ ಬರದಿರಲೆಂದು **ಸೂರ್ಯಾದೀನಾಂ** ಸೂರ್ಯ ಮೊದಲಾದ **ಧ್ರುವಾಪವರ್ಗಾಣಾಂ** ಧ್ರುವಪರ್ಯಂತವಾದ **ಜ್ಯೋತಿರ್ಗಣಾನಾಂ** ಜ್ಯೋತಿಸ್ಸಮೂಹಗಳ **ಗಭಸ್ತಯಃ** ಕಿರಣಗಳು **ಅರ್ವಾಚೀನಾನ್** ಬೆಟ್ಟದ ಒಳಭಾಗದಲ್ಲಿರುವ (ಕಾಂಚನ ಭೂಮಿಯ ಕಡೆಗಿರುವ) **ತ್ರೀನ್ ಲೋಕಾನ್** ಮೂರು ಲೋಕಗಳನ್ನು **ವಿತನ್ವಾನಾಃ** ಪ್ರಕಾಶಗೊಳಿಸುವುವುಗಳಾಗಿ **ಪರಾಚೀನಾಃ** ಹೊರಗೆ ಇರುವುವುಗಳಾಗಿ **ಭವಿತುಂ** ಆಗಲು **ಕದಾಚಿತ್** ಎಂದೂ **ನ ಉತ್ಸಹಂತೇ** ಸಮರ್ಥವಾಗುವುದಿಲ್ಲ. ಹೊರಗೆ ಹೋಗವುದಿಲ್ಲವೆಂದರ್ಥ. (**ಅತಃ** ಆದ್ದರಿಂದ) **ಸಃ** ಲೋಕಾಲೋಕಪರ್ವತವು **ತಾವತ್** ಆ ಮೂರು ಲೋಕಗಳಷ್ಟೇ **ಉನ್ನಹನಾಯಾಮಃ** ಎತ್ತರ ಮತ್ತು ವಿಸ್ತಾರವುಳ್ಳದ್ದು. ಇಲ್ಲಿ ಲೋಕತ್ರಯಗಳು ಐವತ್ತೊಂದು ಲಕ್ಷಯೋಜನ ಎತ್ತರವಿರುವುವು. ಪರ್ವತದ ಎತ್ತರವೂ ಅಷ್ಟೇ ಇರುವುದು. ಇಲ್ಲವಾದರೆ ಜ್ಯೋತಿಸ್ಸುಗಳ ಕಿರಣಗಳು ಹೊರಗೆ




ಹೋಗಲು ಪ್ರತಿಬಂಧಕವಾಗಲಾರದು (ಅವಕಾಶವಾಗುವುದು) ವಿಸ್ತಾರದಲ್ಲಿಯಾದರೋ **ತಾವತ್** ಸುಮಾರು ಅಷ್ಟು ಅಂದರೆ ಸ್ವಲ್ಪ ಕಡಿಮೆ ಅಷ್ಟು ಅರ್ಥಾತ್ ಐವತ್ತು ಲಕ್ಷ ಐವತ್ತು ಸಾವಿರ ವಿಸ್ತಾರವಾದುದು. ಹೀಗೆ ಅರ್ಥಮಾಡಲು **ಲೋಕಾಲೋಕ-ಪ್ರದೇಶಸ್ತು ಪಂಚಾಶಲ್ಲಕ್ಷವಿಸ್ತೃತಃ ಸಪಂಚಾಶತ್ಸಹಸ್ರಶ್ಚ** (ಮ.ತಾ.ನಿ ೨೧.೪೬) ಎಂಬ ಭಾರತತಾತ್ಪರ್ಯನಿರ್ಣಯ ವಾಕ್ಯವೇ ಆಧಾರ. ||೩೭||

**|| ಇಲ್ಲಿಗೆ ೨೦ನೇ ಅಧ್ಯಾಯವು ಮುಗಿಯಿತು ||**

★★★



**ಲೋಕಾಲೋಕ ಇತಿ ಸಮಾಖ್ಯಾ ಯದನೇನಾಚಲೇನ ಲೋಕಾಲೋಕಾ-ವಂತರವರ್ತಿನಾ ಸ್ಥಾಪ್ಯೇತ ಇತಿ ।।೩೬।।**

**ಲೋಕಾಲೋಕ ಇತಿ** ಲೋಕಾಲೋಕವೆಂಬುವುದು **ಸಮಾಖ್ಯಾ** ಅನ್ವರ್ಥವಾದ ಹೆಸರು **ಯತ್** ಏಕೆಂದರೆ **ಅಂತರವರ್ತಿನಾ** ಲೋಕ ಮತ್ತು ಅಲೋಕಗಳ ಮಧ್ಯದಲ್ಲಿರುವ **ಅನೇನ ಅಚಲೇನ** ಈ ಪರ್ವತದಿಂದ **ಲೋಕಾಲೋಕೌ** ಲೋಕ ಮತ್ತು ಅಲೋಕಗಳು **ಸ್ಥಾಪ್ಯೇತೇ** ಬೇರೆ ಬೇರೆಯಾಗಿ ತಿಳಿಯಲ್ಪಡುವುವು **ಇತಿ** ಈ ಕಾರಣದಿಂದ ಇದಕ್ಕೆ ಲೋಕಾಲೋಕವೆಂಬ ಹೆಸರು ಅನ್ವರ್ಥವೆಂದು ಭಾವ. ।।೩೬।।

**ಸ ಲೋಕತ್ರಯಾಂತೇ ಪರಿತ ಈಶ್ವರೇಣ ವಿಹಿತಃ ಯಸ್ಮಾತ್ ಸೂರ್ಯಾದೀನಾಂ ಧ್ರುವಾಪವರ್ಗಾಣಾಂ ಜ್ಯೋತಿರ್ಗಣಾನಾಂ ಗಭಸ್ತಯೋಽ-ರ್ವಾಚೀನಾಂ ಸ್ತ್ರಿಲೋಕಾನ್ವಿತನ್ವಾನಾ ನ ಕದಾಚಿತ್ ಪರಾಚೀನಾ ಭವಿತುಮುತ್ಸಹಂತೇ ತಾವದುನ್ನಹನಾಯಾಮಃ ।।೩೭।।**

**ಸಃ** ಆ ಲೋಕಾಲೋಕಪರ್ವತವು **ಯಸ್ಮಾತ್** ಯಾವ ಕಾರಣ **ಲೋಕತ್ರಯಾಂತೇ** ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳ (ಸೃಷ್ಟಿಯ) ನಂತರ ಮೂರು ಲೋಕಗಳ ಕೊನೆಯಲ್ಲಿ ಸೂರ್ಯಾದಿ ಪ್ರಕಾಶವುಳ್ಳ ಮೂರು ಲೋಕಗಳ ನಿರ್ಣಯಕ್ಕಾಗಿ **ಈಶ್ವರೇಣ** ಶ್ರೀಹರಿಯಿಂದ **ಪರಿತಃ** ಸುತ್ತಲೂ **ವಿಹಿತಃ** ನಿರ್ಮಿತವಾಗಿದೆಯೋ **ತಸ್ಮಾತ್** ಆ ಉದ್ದೇಶದ ಭಂಗ ಬರದಿರಲೆಂದು **ಸೂರ್ಯಾದೀನಾಂ** ಸೂರ್ಯ ಮೊದಲಾದ **ಧ್ರುವಾಪವರ್ಗಾಣಾಂ** ಧ್ರುವಪರ್ಯಂತವಾದ **ಜ್ಯೋತಿರ್ಗಣಾನಾಂ** ಜ್ಯೋತಿಸ್ಸಮೂಹಗಳ **ಗಭಸ್ತಯಃ** ಕಿರಣಗಳು **ಅರ್ವಾಚೀನಾನ್** ಬೆಟ್ಟದ ಒಳಭಾಗದಲ್ಲಿರುವ (ಕಾಂಚನ ಭೂಮಿಯ ಕಡೆಗಿರುವ) **ತ್ರೀನ್ ಲೋಕಾನ್** ಮೂರು ಲೋಕಗಳನ್ನು **ವಿತನ್ವಾನಾಃ** ಪ್ರಕಾಶಗೊಳಿಸುವುವುಗಳಾಗಿ **ಪರಾಚೀನಾಃ** ಹೊರಗೆ ಇರುವುವುಗಳಾಗಿ **ಭವಿತುಂ** ಆಗಲು **ಕದಾಚಿತ್** ಎಂದೂ **ನ ಉತ್ಸಹಂತೇ** ಸಮರ್ಥವಾಗುವುದಿಲ್ಲ. ಹೊರಗೆ ಹೋಗವುದಿಲ್ಲವೆಂದರ್ಥ. (**ಅತಃ** ಆದ್ದರಿಂದ) **ಸಃ** ಲೋಕಾಲೋಕಪರ್ವತವು **ತಾವತ್** ಆ ಮೂರು ಲೋಕಗಳಷ್ಟೇ **ಉನ್ನಹನಾಯಾಮಃ** ಎತ್ತರ ಮತ್ತು ವಿಸ್ತಾರವುಳ್ಳದ್ದು. ಇಲ್ಲಿ ಲೋಕತ್ರಯಗಳು ಐವತ್ತೊಂದು ಲಕ್ಷಯೋಜನ ಎತ್ತರವಿರುವುವು. ಪರ್ವತದ ಎತ್ತರವೂ ಅಷ್ಟೇ ಇರುವುದು. ಇಲ್ಲವಾದರೆ ಜ್ಯೋತಿಸ್ಸುಗಳ ಕಿರಣಗಳು ಹೊರಗೆ

ಹೋಗಲು ಪ್ರತಿಬಂಧಕವಾಗಲಾರದು (ಅವಕಾಶವಾಗುವುದು) ವಿಸ್ತಾರದಲ್ಲಿಯಾದರೋ **ತಾವತ್** ಸುಮಾರು ಅಷ್ಟು ಅಂದರೆ ಸ್ವಲ್ಪ ಕಡಿಮೆ ಅಷ್ಟು ಅರ್ಥಾತ್ ಐವತ್ತು ಲಕ್ಷ ಐವತ್ತು ಸಾವಿರ ವಿಸ್ತಾರವಾದುದು. ಹೀಗೆ ಅರ್ಥಮಾಡಲು **ಲೋಕಾಲೋಕ-ಪ್ರದೇಶಸ್ತು ಪಂಚಾಶಲ್ಲಕ್ಷವಿಸ್ತೃತಃ ಸಪಂಚಾಶತ್ಸಹಸ್ರಶ್ಚ** (ಮ.ತಾ.ನಿ ೨೧.೪೬) ಎಂಬ ಭಾರತತಾತ್ಪರ್ಯನಿರ್ಣಯ ವಾಕ್ಯವೇ ಆಧಾರ. ।।೩೭।।

**।। ಇಲ್ಲಿಗೆ ೨೦ನೇ ಅಧ್ಯಾಯವು ಮುಗಿಯಿತು ।।**

★★★



## ಇಪ್ಪನೇ ಅಧ್ಯಾಯದ ಸಾರ

ಈ ಅಧ್ಯಾಯದಲ್ಲಿ ಪ್ಲಕ್ಷ ಮುಂತಾದ ದ್ವೀಪಗಳ ಅಳತೆ, ಅಲ್ಲಿರುವ ಮರ, ನದಿ, ಗುಡ್ಡ ಮುಂತಾದವುಗಳನ್ನು ಆಕಾರ (ಗುಂಡು, ಚೌಕು ಮುಂತಾದ ಸ್ವರೂಪ) ಇವುಗಳ ಮೂಲಕ ಅವುಗಳ ಖಂಡ ವಿಭಾಗವು ಸಂಕ್ಷೇಪವಾಗಿ ವರ್ಣಿಸಲ್ಪಡುವುದು ಎಂದು ಶುಕಾಚಾರ್ಯರು ಉಪಕ್ರಮಿಸುವರು.

ಜಂಬೂದ್ವೀಪದಿಂದ ಮೇರು ಪರ್ವತವು ಹೇಗೆ ಸುತ್ತುವರೆಯಲ್ಪಟ್ಟಿದೆಯೋ ಹಾಗೆ ಈ ಜಂಬೂದ್ವೀಪವು ಒಂದು ಲಕ್ಷಯೋಜನ ವಿಸ್ತಾರದ ಲವಣ ಸಮುದ್ರದಿಂದ ಸುತ್ತುವರೆಯಲ್ಪಟ್ಟಿರುವುದು. ಈ ಲವಣಸಮುದ್ರವೂ ಕೂಡ ಆ ಜಂಬೂದ್ವೀಪಕ್ಕಿಂತ ಎರಡು ಪಟ್ಟು ವಿಸ್ತಾರವಾದ ಅಂದರೆ ಎರಡು ಲಕ್ಷಯೋಜನ ವಿಸ್ತಾರವುಳ್ಳ ಹೊರಗಿನ ಪ್ಲಕ್ಷವೆಂಬ ದ್ವೀಪದಿಂದ ಕಂದಕವು ಹೊರಗಿನ ಉದ್ಯಾನವನದಿಂದ ಸುತ್ತುವರೆದಿರುವಂತೆ ಸುತ್ತುವರೆದಿರುವುದು. ಹಿಂದೆ ಹೇಳಿದ ಜಂಬೂವೃಕ್ಷದಷ್ಟೇ ಗಾತ್ರದ ಅಂದರೆ ಹನ್ನೊಂದು ನೂರು ಯೋಜನ ಎತ್ತರ ಟೊಂಗೆಗಳಿಂದ, ಹನ್ನೊಂದು ನೂರು ಯೋಜನ ವಿಸ್ತಾರವಾದ, ನೂರುಯೋಜನ ದಪ್ಪವಾದ ಪ್ಲಕ್ಷದ್ವೀಪದಲ್ಲಿ ಹುಟ್ಟಿರುವ ಬಂಗಾರದ ಬಸರಿ ಮರವು ಈ ದ್ವೀಪಕ್ಕೆ ಪ್ಲಕ್ಷವೆಂಬ ಹೆಸರನ್ನು ತಂದುಕೊಟ್ಟಿರುವುದು. ಈ ಪ್ಲಕ್ಷದ್ವೀಪದಲ್ಲಿ ಏಳು ನಾಲಿಗೆಗಳುಳ್ಳ ಅಗ್ನಿದೇವರು ಶ್ರೀಹರಿಯಲ್ಲಿ ಆಸಕ್ತರಾಗಿ ಉಪಾಸಿಸುವರು. ಆ ಪ್ಲಕ್ಷದ್ವೀಪದ ಒಡೆಯನಾದ ಪ್ರಿಯವ್ರತರಾಜನ ಮಗನಾದ ಇಧ್ಮಜಿಹ್ವನು ತನ್ನ ಅಧೀನವಾದ ಈ ದ್ವೀಪವನ್ನು ಏಳು ಖಂಡಗಳಾಗಿ ವಿಭಾಗಮಾಡಿ ಆ ಏಳು ಖಂಡಗಳ ಹೆಸರುಗಳನ್ನೇ ಹೊಂದಿರುವ ಮಕ್ಕಳಿಗೆ ಹಂಚಿಕೊಟ್ಟು ಆತ್ಮಯೋಗೇನ ತಾನು ಶ್ರೀಹರಿಯ ಧ್ಯಾನದಿಂದ ರಾಜ್ಯಭಾರವನ್ನು ಬಿಟ್ಟು ವಾನಪ್ರಸ್ಥನಾಗಿ ಪರಮಾತ್ಮನಲ್ಲಿ ರಮಿಸಿದನು.




ಶಿವ, ಯಶಸ್ಯ , ಸುಭದ್ರ , ಶಾಂತ, ಕ್ಷೇಮ, ಅಮೃತ, ಅಭಯ ಎಂದು ಏಳು ಖಂಡಗಳು. ಆ ಖಂಡಗಳಲ್ಲಿ ಪ್ರಸಿದ್ಧವಾದ ಪ್ರಧಾನವಾದ ಬೆಟ್ಟಗಳು ನದಿಗಳು ಏಳು ಏಳು ಮಾತ್ರ ಇವೆ. ಅಪ್ರಸಿದ್ಧ ಅಪ್ರಧಾನ ಬೆಟ್ಟ, ನದಿಗಳು, ಸಾವಿರಾರು ಇವೆ.

ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಧೂಮ್ರವರ್ಣ, ಹಿರಣ್ಯಗ್ರೀವ, ಮೇಘಮಾಲಗಳೆಂಬ ಏಳು ಮರ್ಯಾದಾ ಪರ್ವತಗಳು ಇವೆ. ಅರುಣಾ, ಅನುಗುಣಾ, ಆಂಗೀರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ, ಸತ್ಯಂಭರಾ ಎಂದು ಏಳು ಮಹಾನದಿಗಳು ಇವೆ. ಈ ಮಹಾನದಿಗಳ ನೀರಿನ ಆಚಮನ, ಸ್ನಾನ ಪಾನಾದಿಗಳಿಂದ ನಾಶವಾದ ರಜೋಗುಣ ತಮೋಗುಣಗಳುಳ್ಳ ಸಾವಿರವರ್ಷ ಆಯುಷ್ಯವುಳ್ಳ ದೇವಸಮರಾದ ಪುತ್ರರನ್ನು ಪಡೆಯುವ ಸಾಮರ್ಥ್ಯವುಳ್ಳ ಹಂಸ, ಪತಂಗ, ಗೂರ್ಧ್ವಾಯನ, ಸತ್ಯಾಂಗ(ಸಪ್ತಾಂಗ) ಎಂಬ ಈ ಹೆಸರಿನ ಬ್ರಾಹ್ಮಣಾದಿ ವರ್ಣದ ಪ್ರಜೆಗಳು ಸ್ವರ್ಗಪ್ರಾಪ್ತಿಗೆ ಸಾಧನವಾದ ಋಗ್ಯಜುಃಸಾಮವೇದಪ್ರತಿಪಾದ್ಯನಾದ ಶ್ರೀಹರಿಯನ್ನು ಮೂರು ವೇದಗಳಿಂದ ಯಾಗಾದಿಗಳಿಂದ ಸೇವಿಸುವರು. ಅವರು ಹೀಗೆ ಪ್ರಾರ್ಥಿಸುವರು.

ಪುರಾತನನಾದ ವ್ಯಾಪ್ತನಾದ ಶ್ರೀಹರಿಯ ಪ್ರತಿಮಾಸ್ಥಾನವು ಯಾವುದೋ ಮತ್ತು ವಾಚಿಕ, ಕಾಯಿಕ ಸುಕೃತಕ್ಕೆ ಪ್ರೇರಕರಾದ ಬ್ರಹ್ಮದೇವರ ಸನ್ನಿಧಾನ ನಿಮಿತ್ತವು ಯಾವುದೋ ಮತ್ತು ದೇವತಾಸಮೂಹಕ್ಕೆ ಮಾರಕರಾದ ರುದ್ರದೇವರ ಸನ್ನಿಧಾನಕ್ಕೆ ನಿಮಿತ್ತವು ಯಾವುದೋ ಅಂತಹ ತ್ರಿಮೂರ್ತಿಗಳ ನಿವಾಸಯೋಗ್ಯವಾದ ಸೂರ್ಯಮಂಡಲದಲ್ಲಿರುವ ಜ್ಞಾನಿಗಮ್ಯನಾದ್ದರಿಂದ ಸೂರ್ಯನೆಂದು ಕರೆಸಿಕೊಳ್ಳುವ ಸೂರ್ಯಾಂತರ್ಯಾಮಿ ಆದಾನಾದಿಕರ್ತನಾದ ಸೂರ್ಯನಾಮಕ ಶ್ರೀಹರಿಯನ್ನು ಶರಣು ಹೊಂದುತ್ತೇವೆ ಎಂದು.

ಇಲ್ಲಿ ಪ್ಲಕ್ಷಾದಿ ಆರು ದ್ವೀಪಗಳಲ್ಲಿ ಉಪಾಸ್ಯರೆಂದು ಹೇಳಿದ ಸೂರ್ಯ, ಸೋಮ, ಅಗ್ನಿ, ಅಪ, ವಾಯು, ಬ್ರಹ್ಮರುಗಳು ಶ್ರೀಹರಿಯಿಂದ ಭಿನ್ನರಾದವರಲ್ಲ. ಪ್ಲಕ್ಷ ಮೊದಲಾದ ಆರು ದ್ವೀಪಗಳಲ್ಲಿ ವಾಸಿಸುವ ಜೀವರು ಕ್ರಮವಾಗಿ ಸೂರ್ಯ, ಸೋಮ, ಅಗ್ನಿ, ನೀರು, ವಾಯು, ಬ್ರಹ್ಮರಲ್ಲಿರುವ ಶ್ರೀಹರಿಯನ್ನು ಉಪಾಸಿಸುವರು. ಇದನ್ನು ಸೂಚಿಸಲೆಂದೇ ಸೂರ್ಯಂ ಎಂದು ಹೇಳದೇ ಸೂರ್ಯಮಾತ್ಮಾನಂ ಎಂದೂ ಮುಂದೆಯೂ ಸೋಮಮಾತ್ಮಾನಂ ಮುಂತಾಗಿ ಹೇಳಿರುವರು.

ಪ್ಲಕ್ಷ ಮುಂತಾದ ಐದು ದ್ವೀಪಗಳಲ್ಲಿ ಎಲ್ಲ ಜನರಿಗೂ ಆಯುಸ್ಸು, ಇಂದ್ರಿಯಶಕ್ತಿ, ಸ್ವರೂಪಸಾಮರ್ಥ್ಯ, ಸಹನಶಕ್ತಿ, ದೇಹಬಲ, ಬುದ್ಧಿ, ಪರಾಕ್ರಮ ಎಂಬುವು ಎಲ್ಲರಿಗೂ ಸ್ವಾಭಾವಿಕವಾದ ಸಿದ್ಧಿಯು ಸಮಾನವಾಗಿರುವುದು.

ಹೇಗೆ ಪ್ಲಕ್ಷದ್ವೀಪಕ್ಕೆ ಎರಡರಷ್ಟು ವಿಶಾಲವಾದ ಶಾಲ್ಮಲ ದ್ವೀಪವು ಸುತ್ತುವರೆದಿರುವ ಅದರಷ್ಟೇ ವಿಶಾಲವಾದ ಸುರಾ ಸಮುದ್ರದಿಂದ ಆವೃತವಾಗಿದೆಯೋ ಹಾಗೆ ಪ್ಲಕ್ಷದ್ವೀಪವೂ ಅದರಷ್ಟೇ ವಿಸ್ತಾರವಾದ ಸುತ್ತುವರೆದಿರುವ ಕಬ್ಬಿನ ರಸದ ಸಮುದ್ರದಿಂದ ವರ್ತುಲಾಕಾರವಾಗಿ ಆವರಿಸಲ್ಪಟ್ಟಿರುವುದು. ಇದು ಎಲ್ಲ ದ್ವೀಪ ಸಮುದ್ರಗಳ ವಿಷಯದಲ್ಲಿಯೂ ತಿಳಿಯಬೇಕು.

ಶಾಲ್ಮಲೀ ದ್ವೀಪದಲ್ಲಿ ಪ್ಲಕ್ಷದಂತೆ ವಿಸ್ತಾರವಾದ ಬುರಗ ಮರವು ಉಂಟಾಗಿದೆ ಕಾರಣ ಈ ದ್ವೀಪಕ್ಕೆ ಶಾಲ್ಮಲೀ ಎಂದು ಹೆಸರು ಪುರಾಣ ಪ್ರಸಿದ್ಧವು. ಈ ವೃಕ್ಷದಲ್ಲಿಯೇ ಪೂಜ್ಯರಾದ **ಸುಪರ್ಣೋಽಸಿ ಗರುತ್ಮಾನ್** ಮೊದಲಾದ ವೇದಗಳಿಂದ ಸ್ತೋತ್ರ ಮಾಡಿಸಿಕೊಳ್ಳುವ ಪಕ್ಷಿಗಳಿಗೆ ರಾಜರಾದ ಗರುಡದೇವರು ವಾಸಿಸುವ ಗೂಡಿದೆಯೆಂದು ಜ್ಞಾನಿಗಳು ಹೇಳುವರು. ಆ ಶಾಲ್ಮಲೀ ವೃಕ್ಷವು ಜಂಬೂದ್ವೀಪದ ಜಂಬೂವೃಕ್ಷಕ್ಕಿಂತ ಒಂದುವರೆಯಷ್ಟು ಎತ್ತರವಿರುವುದಾಗಿ ತಿಳಿದು ಬರುವುದು.

ಆ ಶಾಲ್ಮಲೀ ದ್ವೀಪಕ್ಕೆ ಒಡೆಯನಾದ ಪ್ರಿಯವ್ರತನ ಮಗನಾದ ಯಜ್ಞಬಾಹು ಎಂಬುವನು ತನ್ನ ಮಕ್ಕಳಿಗೆ ಆ ಮಕ್ಕಳ ಹೆಸರುಳ್ಳ ಸುರೋಚನ, ಸೌಮನಸ್ಯ, ರಮಣಕ, ದೇವಬರ್ಹ, ಪಾರಿಭದ್ರ, ಆಪ್ಯಾಯನ, ಅಭಿಜಾತಗಳೆಂಬ ಏಳು ಖಂಡಗಳನ್ನು ವಿಭಾಗಮಾಡಿಕೊಟ್ಟನು.

ಆ ಖಂಡಗಳಲ್ಲಿ ಪ್ರಧಾನ ಪರ್ವತಗಳು ಮುಖ್ಯ ನದಿಗಳು ಏಳು ಏಳು ಮಾತ್ರ. ಸುರಸ, ಶತಶೃಂಗ, ವಾಮದೇವ, ಕುಂದ, ಮುಕುಂದ, ಪುಷ್ಪವರ್ಷ, ಸಹಶ್ರುತಿ ಎಂದು (ಏಳು ಪರ್ವತಗಳು) ಅನುಮತಿ ಸಿನೀವಾಲೀ, ಸರಸ್ವತೀ, ಕುಹೂ, ರಜನೀ, ನಂದಾ, ರಾಕಾ ಎಂದು ಏಳು ಮಹಾನದಿಗಳು.

ಶ್ರುತಧರ, ವೀರ್ಯಧರ, ವಸುಂಧರ, ಊರ್ಧ್ವಧರರೆಂಬ ಹೆಸರಿನ ನಾಲ್ಕು ವರ್ಣದ ಜನರು ಆ ಖಂಡ ನಿವಾಸಿಗಳು. ಮುಖ್ಯವಾಗಿ ವೇದಪ್ರತಿಪಾದ್ಯನಾದ ಚಂದ್ರನ ಅಂತರ್ಯಾಮಿಯಾದ ಸೋಮನಾಮಕ ಶ್ರೀಹರಿಯನ್ನು ವೇದದಿಂದ ಪೂಜಿಸುವರು.

ಶುಕ್ಲ ಕೃಷ್ಣ ಪಕ್ಷಗಳಲ್ಲಿ ಅಮೃತಮಯವಾದ ತನ್ನ ಕಿರಣಗಳಿಂದ ಪಿತೃದೇವತೆಗಳಿಗೆ ಮತ್ತು ದೇವತೆಗಳಿಗೂ ಸೋಮರಸವೆಂಬ ಅನ್ನವನ್ನು ಹಂಚುತ್ತಿರುವ ಚಂದ್ರನ ಅಂತರ್ಯಾಮಿಯಾದ ಸೋಮನಾಮಕನಾದ ಶ್ರೀಹರಿಯು ಎಲ್ಲ ಪ್ರಜೆಗಳಿಗೂ ನಮಗೂ ರಂಜಕನಾಗಿ ಆಗಲಿ ಎಂದು ಸ್ತುತಿಸುವರು.

ಹೀಗೆಯೇ ಸುರಾಸಮುದ್ರದ ಹೊರಗೆ ಶಾಲ್ಮಲೀ ದ್ವೀಪಕ್ಕೆ ಎರಡರಷ್ಟು (ಎಂಟು ಲಕ್ಷ ಯೋಜನ) ವಿಸ್ತಾರವುಳ್ಳ ಕುಶದ್ವೀಪವು, ಶಾಲ್ಮಲೀ ದ್ವೀಪವು ಸುರಾಸಮುದ್ರದಿಂದ ಸುತ್ತುವರೆದಂತೆ ತನಗೆ ಸಮಾನವಾದ ತುಪ್ಪದ ಸಮುದ್ರದಿಂದ ಆವರಿಸಲ್ಪಟ್ಟಿರುವುದು. ಈ ಕುಶದ್ವೀಪದಲ್ಲಿ ಆ ದ್ವೀಪಕ್ಕೆ ಆ ಹೆಸರನ್ನು ತಂದುಕೊಟ್ಟಿರುವ ದೇವಸೃಷ್ಟವಾದ ದರ್ಭೆಯ ಹುಲ್ಲು ಅಗ್ನಿಯಂತೆ ಯಾವಾಗಲೂ ತನ್ನ ಎಳೆ ಹುಲ್ಲುಗಳ ಕಾಂತಿಯಿಂದ ದಿಕ್ಕುಗಳನ್ನು ಪ್ರಕಾಶಗೊಳಿಸುವುದು.

ಪರೀಕ್ಷಿತನೇ! ಆ ಕುಶದ್ವೀಪಕ್ಕೆ ಅಧಿಪತಿಯಾದ ಪ್ರಿಯವ್ರತನ ಮಗನಾದ ಹಿರಣ್ಯರೇತನೆಂಬುವನು ತನ್ನ ದ್ವೀಪವನ್ನು ವಸುದಾನ, ದೃಢರುಚಿ, ನಾಭಿ, ಗುಪ್ತ, ಸತ್ಯವ್ರತ, ವಿಪ್ರ, ವಾಮದೇವ ಎಂಬ ಏಳು ಜನ ಮಕ್ಕಳಿಗೆ ಅವರವರಿಗೆ ಸಲ್ಲಬೇಕಾದ ಭಾಗದಂತೆ ಹಂಚಿಕೊಟ್ಟು ತಾನು ತಪಸ್ಸನ್ನೇ ಆಚರಿಸಿದನು.

ಅವರ ಖಂಡಗಳಲ್ಲಿ ಎಲ್ಲೆ ಪರ್ವತಗಳು ನದಿಗಳು ಪ್ರಸಿದ್ಧವಾದವು, ಪ್ರಧಾನವಾದವು ಏಳು ಏಳು ಇರುವುವು. ಚಕ್ರ, ಶೃಂಗ, ಕಪಿಲ, ಛಿನ್ನಕೂಟ, ದೇವಾನೀಕ, ಊರ್ಧ್ವರೋಮಾ, ದ್ರವಿಣ ಎಂಬುವು ಪರ್ವತಗಳು.

ರಸಕುಲ್ಯಾ, ಮಧುಕುಲ್ಯಾ, ಶ್ರುತವಿಂದಾ, ಮಿತ್ರವೃಂದಾ, ದೇವಗರ್ಭಾ, ಘೃತಚ್ಯುತಾ, ಮಂತ್ರಮಾಲಾ ಎಂಬ ನದಿಗಳು. ಆ ನದಿಗಳ ನೀರುಗಳಿಂದ ಕುಶಲ, ಕೋವಿದ, ಅಭಿಯುಕ್ತ, ಕುಶಲಕರೆಂಬ ನಾಲ್ಕು ವರ್ಣದ ಕುಶದ್ವೀಪವಾಸಿಗಳು ಅಗ್ನ್ಯಂತರ್ಗತ ಅಗ್ನಿ ನಾಮಕ ಶ್ರೀಹರಿಯನ್ನು ಶ್ರೀಹರಿಗೆ ಪ್ರಿಯವಾದ ಕರ್ಮಗಳಿಂದ ಸೇವಿಸುವರು. ಹೀಗೆ ಸ್ತುತಿಸುವರು – ಎಲೋ ಅಗ್ನಿಯೇ! ನೀನು ನಾರಾಯಣನಿಗಾಗಿ ಹವಿಸ್ಸನ್ನು ಕೊಂಡೊಯ್ಯುವವನಾಗಿರುವೆ. ಶ್ರೀಹರಿಯ ಅಂಗದಿಂದ ಜನಿಸಿ ಅಂಗವನ್ನು ಆಶ್ರಯಿಸಿದ್ದರಿಂದ ಪುರುಷಾಂಗರೆನಿಸುವ ದೇವತೆಗಳಿಗೂ ನೀನು ಹವಿಸ್ಸು ಕೊಡುವವನಾಗಿರುವಿ ಕಾರಣ ನೀನು ನಮ್ಮಲ್ಲಿ ಸನ್ನಿಹಿತನಾಗಿ ಯಾಗದಿಂದ ಯಜ್ಞನಾಮಕ ಶ್ರೀಹರಿಯನ್ನು ನಮ್ಮಿಂದ ಯಾಗ ಮಾಡಿಸು ಎಂದು.

ಯಾದವಾರ್ಯರ ವ್ಯಾಖ್ಯಾನರೀತ್ಯಾ - ಹೇ ಅಗ್ನಿಯೇ! ನೀನು ಪರಬ್ರಹ್ಮನ ಸನ್ನಿಧಾನವುಳ್ಳವನಾಗಿರುವೆ. ಪರಮಪುರುಷ ಶ್ರೀಹರಿಯೇ ಶರೀರನಾಗಿರುವ ದೇವತೆಗಳಿಗೆ ಹವ್ಯವಾಹಕನಾಗಿರುವೆ. ಆದ್ದರಿಂದ ನಾವು ಮಾಡಿದ ಯಜ್ಞದಿಂದ ದೇವತಾಂತರ್ಗತ ಶ್ರೀಹರಿಯನ್ನು ಪೂಜಿಸು. ಯಜ್ಞದ ಹವಿಸ್ಸನ್ನು ಅವನಿಗೆ ಸಮರ್ಪಿಸು.

ಶುಶದ್ವೀಪದ ಹೊರಗಡೆ ಇರುವ ದ್ವೀಪವೇ ಕ್ರೌಂಚದ್ವೀಪ. ಇದು ಕುಶದ್ವೀಪದ ಎರಡು ಪಟ್ಟು (ಹದಿನಾರು ಲಕ್ಷಯೋಜನ) ವಿಸ್ತಾರವುಳ್ಳದ್ದು. ಇದು ತನ್ನಷ್ಟೇ ವಿಸ್ತಾರವಾದ ಕ್ಷೀರೋದ ಅಂದರೆ ಹಳಿಯಿಲ್ಲದ ಮೊಸರಿನ ಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ. ಈ ದ್ವೀಪದಲ್ಲಿ ದ್ವೀಪಕ್ಕೆ ಹೆಸರನ್ನು ತಂದುಕೊಟ್ಟಿರುವ ಕ್ರೌಂಚವೆಂಬ ದೊಡ್ಡ ಪರ್ವತವಿದೆ.

ಇಲ್ಲಿ ಮೊಸರಿನ ಸಮುದ್ರವನ್ನು ದಧಿಮಂಡೋದವೆಂದು ಹೇಳದೆ ಕ್ಷೀರೋದವೆಂದು ಅಸುರಜನ ಮೋಹನಕ್ಕಾಗಿ ಹೇಳಿರುವರು. **ಮಂಡೋದೇಃ ಪೂರಣಂ ಚೈವ ವ್ಯತ್ಯಾಸಂ ಕ್ಷೀರಸಾಗರೇ** ಎಂದು ಹಿಂದೆ ಹೇಳಿದ ಪ್ರಮಾಣವೇ ಇದು ಅಸುರಜನ ಮೋಹನಕ್ಕಾಗಿ ಹೇಳಿದ್ದು ಅನ್ನುವುದಕ್ಕೆ ಆಧಾರ. ಮುಮುಕ್ಷುಗಳಾದರೋ **ಅನಾಮ್ಲಂ ತು ದಧಿ ಕ್ಷೀರಂ** ಎಂಬ ಪ್ರಮಾಣಾನುಸಾರ ಹುಳಿಯಿಲ್ಲದ ಕಾರಣ ಮೊಸರು ಹಾಲು ಎಂದು ಕರೆಸಿಕೊಂಡಿದೆ ಎಂದು ತಿಳಿಯಬೇಕು. ಅದರಂತೆ **ಕ್ಷೀರಂ ಸಾಂದ್ರಂ ತಥಾ ದಧಿ** ಎಂದೂ ಇರುವುದರಿಂದ ಮುಂದೆ **ದಧಿಮಂಡೋದೇನ ಪರಿತಃ** ಎಂಬಲ್ಲಿ ಗಟ್ಟಿಯಾದ ಹಾಲು ಎಂದು ತಿಳಿಸಲು ಹಾಲನ್ನು ದಧಿಯೆಂದು ಕರೆದಿರುವರೆಂದು ತಿಳಿಯಬೇಕು.

ಈ ಕ್ರೌಂಚ ಪರ್ವತದಲ್ಲಿರುವ ನಿತಂಬ ಪರ್ವತಗಳಲ್ಲಿ ಲತಾಮಂಟಪಗಳಲ್ಲಿ ದಂಪತಿಗಳು ವಿಹರಿಸುವರು. ಷಣ್ಮುಖನ ಶಕ್ತ್ಯಾಯುಧದಿಂದ ನಿತಂಬ ಪರ್ವತಗಳು ಲತಾಮಂಟಪಗಳೂ ಪೀಡಿತಗಳಾಗುತ್ತಿದ್ದರೂ ಈ ದ್ವೀಪವು ಮೊಸರಿನ ಸಮುದ್ರದಿಂದ ಅಭಿಷೇಕ್ತಿಸಲ್ಪಡುವುದಾಗಿ ಪೂಜ್ಯರಾದ ವರುಣದೇವರಿಂದ ರಕ್ಷಿತವಾಗಿ ಷಣ್ಮುಖನ ಭಯವಿಲ್ಲದ್ದಾಗಿ ಆಯಿತು.

ಆ ಕ್ರೌಂಚದ್ವೀಪದಲ್ಲಿಯೂ ಪ್ರಿಯವ್ರತನ ಮಗನಾದ ಘೃತಪೃಷ್ಠನೆಂಬ ರಾಜನು ಆ ದ್ವೀಪದ ಖಂಡಗಳನ್ನು ಏಳು ಭಾಗ ಮಾಡಿ ತಮ್ಮ ಮಕ್ಕಳ ಹೆಸರುಳ್ಳ




ಆ ಏಳು ಖಂಡಗಳಲ್ಲಿ ಏಳು ದಾಯಾದಿಗಳಾದ ಸಹೋದರರನ್ನು ಆ ಖಂಡಗಳ ಪಾಲಕರನ್ನಾಗಿ ಇಟ್ಟು ತಾವು ಅತ್ಯಂತ ಮಂಗಳಮೂರ್ತಿಯಾದ ತಮ್ಮ ಅಂತರ್ಯಾಮಿಯಾಗಿರುವ ಶ್ರೀಹರಿಯ ಪಾದಕಮಲಗಳನ್ನು ಸೇರಿದನು.

ಆಮ, ಮಧುಮೇಹ, ಮೇಘಪೃಷ್ಠ, ಸುಧಾಮ, ಋಷಿಜ್ಯೋತಿ, ಲೋಹಿತಾರ್ಣ, ವನಸ್ಪತಿ ಎಂಬುವರು ಘೃತಪೃಷ್ಠರಾಜನ ಮಕ್ಕಳು. ಅವರ ಹೆಸರಿನ ಆ ಖಂಡಗಳ ಪರ್ವತಗಳು ಸುತ್ತ ಏಳು ಪ್ರಸಿದ್ಧವಾದವು. ಮಹಾನದಿಗಳೂ ಏಳೇ. ಶುಕ್ಲ, ವರ್ಧಮಾನ, ಉಪಬರ್ಹಣ ಉಪಭೋಜನ, ನಂದ, ನಂದನ, ಸರ್ವತೋಭದ್ರ ಎಂದು ಪರ್ವತಗಳು. ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ರೂಪವತೀ, ಪವಿತ್ರಾ, ಶುಕ್ಲಾ ಎಂದು ನದಿಗಳು. ಈ ನದಿಗಳ ಶುದ್ಧವಾದ ನಿರ್ಮಲವಾದ ನೀರನ್ನು ಉಪಯೋಗಿಸುವ ಗುರು, ಋಷಭ, ದ್ರವಿಣ, ದೇವಕ ಎಂಬ ಹೆಸರುಳ್ಳ ನಾಲ್ಕು ವರ್ಣದ ಆ ದ್ವೀಪನಿವಾಸಿಗಳು ನೀರಿನ ನಿಯಾಮಕನಾದ ಕ್ರೀಡಾದಿಗುಣವಿಶಿಷ್ಟನಾದ ಜಲಾಂತರ್ಯಾಮಿಯಾದ ಪೂರ್ಣನಾದ ಶ್ರೀಹರಿಯನ್ನು ನೀರಿನಿಂದ ತುಂಬಿದ ಬೊಗಸೆಯಿಂದ ಪೂಜಿಸುವರು.

ಅವರು, ಯಾವ ನೀರಿನಲ್ಲಿರುವ ಭಗವದ್ರೂಪಗಳು ಶ್ರೀನಾರಾಯಣನ ರೇತಸ್ಸಾಗಿರುವವೋ (ನೀರಿನ ಪರವಾಗಿ ಅರ್ಥಮಾಡುವುದಾದರೆ - ಶ್ರೀಹರಿಯ ಪರಾಕ್ರಮದಿಂದ ನಿಯಮ್ಯವಾಗಿರುವವೋ) ಭೂಃ ಭುವಃ ಸುವಃ ಎಂಬ ಮೂರು ಲೋಕಗಳನ್ನೂ ಪಾವನ ಮಾಡಿರುವುವೋ, ಪಾಪನಾಶಕವಾಗಿರುವುವೋ, ಶುದ್ಧಿ ಎಂಬ ಸುಖಕ್ಕಾಗಿ, ಮೋಕ್ಷಕ್ಕಾಗಿ ಲೋಕದಲ್ಲಿ ದೇಹದ ಹೊರಗಿನಿಂದಲೂ ಒಳಗಿನಿಂದಲೂ ಸ್ನಾನ ಪಾನಾದಿಗಳಿಂದ ಸೇವಿಸಲ್ಪಡುವುವೋ ಆ ನೀರನಲ್ಲಿರುವ ಭಗವದ್ರೂಪಗಳು, ನೀರುಗಳು ನಮ್ಮನ್ನು ಪವಿತ್ರ ಮಾಡಲಿ ಎಂದು ಪೂಜಿಸುವರು.

ಹೀಗೆಯೇ ಮೊಸರಿನ ಸಮುದ್ರದಿಂದ ಹೊರಗೆ ಮೂವತ್ತೆರಡು ಲಕ್ಷಯೋಜನ ವಿಸ್ತಾರವುಳ್ಳ ಶಾಕದ್ವೀಪವು ಇರಿಸಲ್ಪಟ್ಟಿದೆ. ಅದರಷ್ಟೇ ವಿಸ್ತಾರದ ದಧಿ ಮಂಡೋದ ಅಂದರೆ ಕ್ಷೀರಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ. ಹಿಂದೆ ಕ್ಷೀರೋದ ಶಬ್ದದಿಂದ ದಧಿಮಂಡೋದವನ್ನು ಇಲ್ಲಿ ದಧಿಮಂಡೋದ ಶಬ್ದದಿಂದ ಕ್ಷೀರೋದವನ್ನು ಅಮುಖ್ಯ ವೃತ್ತಿಯಿಂದ ಸ್ವೀಕರಿಸಬೇಕು ಎಂದು ಹೇಳಿತಷ್ಟೇ! ಸಿಹಿಯಾದ ಮೊಸರೇ ಹಾಲೆಂದು ಕರಿಸಿಕೊಳ್ಳುವುದು. ಗಟ್ಟಿಯಾದ ಹಾಲೇ ಮೊಸರೆನಿಸುವುದು. ಆದ್ದರಿಂದ

ಹಿಂದೆ ದಧಿಮಂಡೋದ ಮೊಸರಿನ ಸಮುದ್ರವು ಮಾಧುರ್ಯ ಎಂಬ ಹಾಲಿನ ಗುಣವಿದ್ದುದರಿಂದ ಹಾಲೆಂದು ಕರೆಯಲ್ಪಟ್ಟಿತು. ಇಲ್ಲಿ ಮೊಸರಿನಲ್ಲಿರುವ ಗಟ್ಟಿತನ ಎಂಬ ಗುಣವಿರುವುದರಿಂದ ಹಾಲಿನ ಸಮುದ್ರ ಮೊಸರಿನ ಸಮುದ್ರ (ದಧಿ ಮಂಡೋದ) ಎಂದು ವ್ಯವಹರಿಸಲ್ಪಟ್ಟಿದೆ.

ಈ ದ್ವೀಪದಲ್ಲಿ ತಾನಿರುವ ದ್ವೀಪಕ್ಕೆ ತನ್ನ ಹೆಸರನ್ನಿತ್ತಿರುವ ಶಾಕವೆಂಬ ದೊಡ್ಡಮರವು ಇರುವುದು. ಆ ಮರದ ವಿಪುಲವಾದ ಸುವಾಸನೆಯು ಆ ದ್ವೀಪವನ್ನು ಸುವಾಸನೆ ಗೊಳಿಸಿರುವುದು ಪ್ರಸಿದ್ಧವು.

ಆ ಶಾಕದ್ವೀಪಕ್ಕೂ ಮೇಧಾತಿಥಿ ಎಂಬ ಪ್ರಿಯವ್ರತರಾಜನ ಮಗನೇ ಅಧಿ ಪತಿಯು. ಅವನೂ ಸಹ ತಮ್ಮ ಮಕ್ಕಳ ಹೆಸರುಳ್ಳ ಏಳು ಖಂಡಗಳನ್ನು ವಿಭಾಗಮಾಡಿ ಅವುಗಳಲ್ಲಿ ಪುರೋಜವ, ಮನೋಜವ, ವೇಪಮಾನ, ಧೂಮ್ರಾನೀಕ, ವಿಚಿತ್ರರೇಫ, ಬಹುರೂಪ, ವಿಶ್ವಾಧಾರ ಎಂಬ ಹೆಸರಿನ ತನ್ನ ಮಕ್ಕಳನ್ನು ಅಧಿ ಪತಿಗಳನ್ನಾಗಿಟ್ಟು ತಾನು ದೇಶಕಾಲಗುಣಗಳಿಂದ ಅಪರಿಚ್ಛಿನ್ನನಾದ ಶ್ರೀಹರಿಯಲ್ಲಿ ಮನಸ್ಸಿಟ್ಟು ತಪಸ್ಸಿಗಾಗಿ ತಪೋವನವನ್ನು ಪ್ರವೇಶಿಸಿದನು.

ಆ ಖಂಡಗಳಲ್ಲಿ ಎಲ್ಲೆಯ ಪರ್ವತಗಳು ಮತ್ತು ಮಹಾನದಿಗಳು ಏಳು ಏಳು ಮಾತ್ರ ಇರುವುವು. ಈಶಾನ, ಉರುಶೃಂಗ, ಬಲಭದ್ರ , ಶತಕೇಸ, ಸಹಸ್ರಸ್ರೋತ, ದೇವಪಾಲ, ಮಹಾನಸ ಎಂದು ಏಳು ಪರ್ವತಗಳು. ಅನಘ, ಆಯುರ್ದಾ, ಉಭಯಸ್ಪೃಷ್ಟಿ, ಅಪರಾಜಿತಾ, ಪಂಚಪದೀ, ಸಹಸ್ರಶೃತಿ, ನಿಜಧೃತಿ ಎಂದು ಏಳು ಮಹಾನದಿಗಳು.

ಆ ದ್ವೀಪದಲ್ಲಿ ಧೃತವ್ರತ, ಸತ್ಯವ್ರತ, ದಾನವ್ರತ, ಅನುವ್ರತರೆಂಬ ಹೆಸರಿನ ನಾಲ್ಕು ವರ್ಣದ ಜನರು ಪ್ರಾಣಾಯಾಮದಿಂದ ತಮ್ಮ ಮನಸ್ಸಿನ ರಜೋಗುಣತಮೋಗುಣ ಪ್ರಯುಕ್ತ ದೋಷಗಳನ್ನು ಪರಿಹರಿಸಿಕೊಂಡವರಾಗಿ ವಾಯುದೇವರ ಅಂತರ್ಯಾಮಿಯಾದ ವಾಯುವಿಗೆ ಆದಾನಾದಿ ಕರ್ತೃವಾದ ವಾಯುನಾಮಕ ಶ್ರೀಹರಿಯನ್ನು ಅತಿಶಯ ಚಿತ್ತೈಕಾಗ್ರತೆಯಿಂದ ಉಪಾಸಿಸುವರು.

ಯಾವ ವಾಯ್ವಂತರ್ಗತ ಶ್ರೀಹರಿಯು ಪ್ರಾಣಸಮೂಹವನ್ನು ಶರೀರದ ಒಳಗೆ ಹೊಕ್ಕು ತನ್ನ ಪ್ರಾಣಾಪಾನವ್ಯಾನೋದಾನಸಮಾನವೆಂಬ ರೂಪಗಳಿಂದ

 

ಧರಿಸುವನೋ, ಈ ಜಗತ್ತು ಎಲ್ಲವೂ ಯಾವನ ಅಧೀನದಲ್ಲಿದೆಯೋ, ಅಂತಹ ವಾಯುವಿನ ಅಂತರ್ಯಾಮಿಯಾದ ನಿರುಪಚರಿತ ನಿಯಾಮಕ ಶ್ರೇಷ್ಠನಾದ ಶ್ರೀಹರಿಯು ನಮ್ಮನ್ನು ರಕ್ಷಿಸಲಿ ಎಂದು ಉಪಾಸಿಸುವರು.

ಹಿಂದಿನಂತೆಯೇ ಕ್ಷೀರಸಮುದ್ರದಿಂದ ಹೊರಗೆ ಕ್ಷೀರಸಮುದ್ರಕ್ಕಿಂತ ಎರಡರಷ್ಟು ವಿಸ್ತಾರವುಳ್ಳ (ಅರವತ್ತುನಾಲ್ಕುಲಕ್ಷಯೋಜನ ವಿಸ್ತಾರವಾದ) ಪುಷ್ಕರದ್ವೀಪವು ಸುತ್ತಲೂ ಸೃಷ್ಟವಾಗಿರುವುದು. ಅದು ಅದರಷ್ಟೇ ವಿಸ್ತಾರದ ಸಿಹಿ ನೀರಿನ ಸಮುದ್ರದಿಂದ ಹೊರಗೆ ಸುತ್ತುವರೆಯಲ್ಪಟ್ಟಿರುವುದು. ಈ ದ್ವೀಪದಲ್ಲಿ ಬೆಂಕಿಯ ಜ್ವಾಲೆಯಂತೆ ನಿರ್ಮಲವಾದ ಹತ್ತುಸಾವಿರ ಬಂಗಾರದ ಎಸಳುಗಳುಳ್ಳ ದೊಡ್ಡದಾದ ಕಮಲವು ಕಮಲವೇ ಪೀಠವಾಗಿರುವ ಬ್ರಹ್ಮದೇವರಿಗೆ ಅಧಿಕವಾದ ಪೀಠವಾಗಿ ಸೃಷ್ಟವಾಗಿದೆ. ಈ ದ್ವೀಪದ ಮಧ್ಯದಲ್ಲಿ ಹತ್ತುಸಾವಿರ ಯೋಜನ ಎತ್ತರ ಮತ್ತು ಅಗಲವಾದ ಮಾನೋಸತ್ತರವೆಂಬ ಒಳಗಿನ ಹೊರಗಿನ ಖಂಡಗಳಿಗೆ ಸೀಮಾ ಪರ್ವತವು ಇದೆ. ಆ ಪರ್ವತಗಳಲ್ಲಿ ನಾಲ್ಕು ದಿಕ್ಕುಗಳಲ್ಲಿ ಇಂದ್ರ ಮೊದಲಾದ ನಾಲ್ವರು ಲೋಕಪಾಲಕರ ನಾಲ್ಕು ಪಟ್ಟಣಗಳು ಇವೆ. ಆ ಪರ್ವತದ ಮೇಲ್ಭಾಗದಲ್ಲಿ ಮೇರುಪರ್ವತವನ್ನು ಸುತ್ತುವ ಸೂರ್ಯನ ರಥದ ಹಗಲು ರಾತ್ರಿಗಳನ್ನು ಉಂಟುಮಾಡುವುದರಿಂದ ಒಂದು ವರ್ಷದ ಕಾಲವನ್ನು ಅಳೆದು ತಿಳಿಸುವ ಸಂವತ್ಸರರೂಪ ಚಕ್ರವು ಸುತ್ತುವುದು. **ಅಹಸ್ತ್ರಿನಾಭಿಃ ಸೂರ್ಯಸ್ಯ ಏಕಚಕ್ರಸ್ಯ ವೈ ಸ್ಮೃತಂ । ಅರಾ ಸಂವತ್ಸರಾಃ ಪಂಚ ತೇಭ್ಯಃ ಷಡೃತವಃ ಸ್ಮೃತಾಃ** ಎಂಬ ಮತ್ಸ್ಯಪುರಾಣ ವಾಕ್ಯವು ಸೂರ್ಯಚಕ್ರಕ್ಕೆ ಸಂವತ್ಸರರೂಪವನ್ನು ತಿಳಿಸುವುದು. **ತ್ರಿಣಾಭಿ ಚಕ್ರಮಜರಮನರ್ವಂ, ಪಂಚಾರೇ ಚಕ್ರಃ** ಎಂಬ ಶ್ರುತಿ ವಾಕ್ಯಗಳನ್ನು ನೋಡಬಹುದು. ಆ ಪುಷ್ಕರ ದ್ವೀಪಕ್ಕೆ ಒಡೆಯನಾದ ಪ್ರಿಯವ್ರತನ ಮಗನಾದ ವೀತಿಹೋತ್ರ ನೆಂಬುವನು ತನ್ನ ಮಕ್ಕಳಾದ ರಮಣಕ ಧಾತುಕರೆಂಬುವರನ್ನು ಎರಡು ಖಂಡಗಳ ಅಧಿಪತಿಗಳನ್ನಾಗಿ ನಿಯಮಿಸಿ ತಾನು ಅಣ್ಣಂದಿರಂತೆಯೇ ಶ್ರೀಹರಿಯ ಧ್ಯಾನಕರ್ಮರತನಾಗಿಯೇ ಇರುವನು.

ಆ ಖಂಡ ನಿವಾಸಿಗಳು ಬ್ರಹ್ಮದೇವರ ಅಂತರ್ಯಾಮಿಯಾದ ಬ್ರಹ್ಮನಾಮಕನಾದ ಶ್ರೀಹರಿಯನ್ನು ಧ್ಯಾನದಿಂದಲೂ, ಜ್ಞಾನಮಾರ್ಗದಿಂದಲೂ ಮನೋನಿರೋಧ-ರೂಪಕರ್ಮದಿಂದಲೂ ನಿಷ್ಕಾಮವಾದ ನಿವೃತ್ತಕರ್ಮದಿಂದಲೂ ಆರಾಧಿಸುವರು ಮುಂದೆ ಹೇಳುವ ಸ್ತೋತ್ರವನ್ನು ಹೇಳುವರು.

ಹೇ ಶ್ರೀಹರಿಯೇ! ಯಾವ ನಿನ್ನ ಸರ್ವಲಕ್ಷಣಗಳಿಂದ ಕೂಡಿದ ಸ್ವರೂಪವು ಶ್ರುತಿಸ್ಮೃತಿವಿಹಿತಕರ್ಮಫಲರೂಪವೋ (ಕರ್ಮಗಳಿಂದ ತಿಳಿಯಲ್ಪಡುವುದೋ, ವೇದ ಪ್ರತಿಪಾದ್ಯವಾದ ಕರ್ಮಗಳಿಗೆ ಮುಖ್ಯೋದ್ದೇಶ್ಯವೋ ಪ್ರಧಾನವೋ), ಚತುರ್ಮುಖ ಬ್ರಹ್ಮದೇವರು, ಮುಖ್ಯಪ್ರಾಣದೇವರೇ ಪ್ರತಿಮೆಯಾಗಿವುಳ್ಳದ್ದೋ, ಯಾರನ್ನು ಭಕ್ತರು ರಮಾಬ್ರಹ್ಮಾದಿಸಮಸ್ತಜಗತ್ತಿನಿಂದ ವಿಲಕ್ಷಣನೆಂದು ಪೂಜಿಸುವರೋ ಅಂಥಹ ನಿಯಮದಿಂದ ಸ್ವಗತಭೇದವಿಲ್ಲದ ಸ್ವರೂಪವುಳ್ಳ ಭಗವಂತನಾದ ನಿನಗೆ ನಮಸ್ಕಾರ ಎಂದು.

ಬ್ರಹ್ಮದೇವರ ಪರವಾಗಿಯೂ ಈ ಮಂತ್ರಕ್ಕೆ ಅರ್ಥ - ಯಾವ ಬ್ರಹ್ಮದೇವರ ಶರೀರವು ಪುಣ್ಯಕರ್ಮದಿಂದ ನಿರ್ಮಿತವೋ, ಶ್ರೀಹರಿಯ ವಿಶೇಷ ಸನ್ನಿಧಾನಕ್ಕೆ ಯೋಗ್ಯವೋ, ಪ್ರಳಯದಲ್ಲಿ ವ್ಯಾಪಾರವಿಲ್ಲದುದೋ, ಮುಕ್ತಿಯಲ್ಲಿಯೂ ಸಂಸಾರಾವಸ್ಥೆಯಲ್ಲಿಯೂ ಶ್ರೀಹರಿಯ ಅಭಿಪ್ರಾಯದಂತೆಯೇ ಪ್ರವರ್ತಿಸುವುದೋ, ಮತ್ತು ಯಾವುದನ್ನು ಜನರು ಶ್ರೀಹರಿಯಿಂದ ಭಿನ್ನವೆಂದು ಪೂಜಿಸುವರೋ ಅಂತಹ ಪೂಜ್ಯರಾದ ಬ್ರಹ್ಮದೇವರಿಗೆ ನಮಸ್ಕಾರ. ಮುಕ್ತಿಯಲ್ಲಿ **ಗಚ್ಛಾಮಿ ವಿಷ್ಣುಪಾದಾಭ್ಯಾಂ** ಎಂಬ ಅನುಸಂಧಾನ ಬ್ರಹ್ಮದೇವರಿಗೆ ಉಂಟೆಂದು ಪ್ರಮಾಣಗಳು ತಿಳಿಸುವುವು. ಆದರೆ ಭೇದೇನ ಎಂದು ಹೇಳಿ ಶ್ರೀಹರಿಗೂ ಬ್ರಹ್ಮದೇವರಿಗೂ ಸ್ವರೂಪೈಕ್ಯವಿಲ್ಲ ಅದನ್ನು ತಿಳಿಯಬಾರದು ಎಂದು ಸೂಚಿಸಿರುವರು.

ದೇವಮನುಷ್ಯವ್ಯವಹಾರಯೋಗ್ಯವಾದ ಅಥವಾ ಸೂರ್ಯಾದಿಗಳ ಪ್ರಕಾಶವಿರುವ ಪ್ರದೇಶ ಲೋಕವೆನಿಸುವುದು. ಅವರ ವ್ಯವಹಾರಾಯೋಗ್ಯವಾದ ಸೂರ್ಯಾದಿ ಪ್ರಕಾಶವಿಲ್ಲದಿರುವ ಪ್ರದೇಶ ಅಲೋಕ ಎಂದು ಕರೆಸಿಕೊಳ್ಳುವುದು. ಈ ಲೋಕಾಲೋಕಗಳ ಮಧ್ಯದಲ್ಲಿ ಇವುಗಳ ವಿಭಾಗಕ್ಕಾಗಿ ಲೋಕಾಲೋಕವೆಂಬ ಪರ್ವತವು ಸಿಹಿನೀರಿನ ಸಮುದ್ರದ ಹೊರಗೆ (ಕಾಂಚನ ಭೂಮಿಯ ನಂತರ) ಸುತ್ತಲೂ ನಿರ್ಮಿತವಾಗಿರುವುದು. ಲೋಕಾಲೋಕವೆಂಬುವುದು ಅನ್ವರ್ಥವಾದ ಹೆಸರು. ಏಕೆಂದರೆ ಲೋಕ ಮತ್ತು ಅಲೋಕಗಳ ಮಧ್ಯದಲ್ಲಿರುವ ಈ ಪರ್ವತದಿಂದ ಲೋಕ ಮತ್ತು ಅಲೋಕಗಳು ಬೇರೆ ಬೇರೆಯಾಗಿ ತಿಳಿಯಲ್ಪಡುವುವು. ಈ ಕಾರಣದಿಂದ ಇದಕ್ಕೆ ಲೋಕಾಲೋಕವೆಂಬ ಹೆಸರು ಅನ್ವರ್ಥವಾಗಿದೆ.




**'ತತೋ ಹೇಮಮಯೀ ಭೂಮಿರ್ದಶಕೋಟ್ಯೋ ವರಾನನೇ । ದೇವಾನಾಂ ಕ್ರೀಡನಾರ್ಥಾಯ ಲೋಕಾಲೋಕೋತ್ತರಃ ಪರಃ ॥'** ಎಂಬ ಗ್ರಂಥಾಂತರ ವಚನದಂತೆ ಲೋಕಾಲೋಕಪರ್ವತಕ್ಕೂ ಸಿಹಿ ನೀರಿನ ಸಮುದ್ರಕ್ಕೂ ಮಧ್ಯದಲ್ಲಿ ದೇವತಾ ವಿಹಾರ ಸ್ಥಳವಾದ **ತತೋ ಹಿರಣ್ಮಯೀ ಭೂಮಿಃ** ಎಂದು ಪ್ರಸಿದ್ಧವಾದ ಕಾಂಚನಭೂಮಿಯು ಇದೆ. ಪುಷ್ಕರ ದ್ವೀಪದ ಮಧ್ಯದಲ್ಲಿರುವ ಮಾನಸೋತ್ತರ ಪರ್ವತಕ್ಕೂ ಜಂಬೂದ್ವೀಪದ ಒಳಗೆ ಇರುವ ಮೇರುಪರ್ವತಕ್ಕೂ ಮಧ್ಯದಲ್ಲಿ ಇರುವ ಸ್ಥಳವು ಎಷ್ಟು ಪರಿಮಾಣವುಳ್ಳದ್ದೋ ಅಷ್ಟು ಪರಿಮಾಣವುಳ್ಳ ಕನ್ನಡಿಯಂತಿರುವ ಚಿನ್ನದ ಭೂಮಿಯಿದು. ಈ ಕಾಂಚನ ಭೂಮಿಯಲ್ಲಿ ದೇವತೆಗಳು ಮತ್ತು ಅವರ ಅನುಚರರನ್ನು ಬಿಟ್ಟು ಮಿಕ್ಕ ಯಾವ ಪ್ರಾಣಿಯೂ ಇರುವುದಿಲ್ಲ. ಅವರನ್ನು ಬಿಟ್ಟು ಅಲ್ಲಿಗೆ ಹೊಗುವ ಉಳಿದ ಪ್ರಾಣಿ ಸಮೂಹವು ಯಾವ ಉಪಾಯದಿಂದಲೂ ಮತ್ತೆ ದೊರೆಯುವುದಿಲ್ಲ .

ಈ ಕಾಂಚನ ಭೂಮಿಯ ಪರಿಮಾಣ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ವಿಜಯಧ್ವಜತೀರ್ಥರು ೧೦ ಕೋಟಿ ೧೬ ಲಕ್ಷವೆಂದು ಅಭಿಪ್ರಾಯ ಪಟ್ಟಿರುವರು. ಆದರಂತೆ **ದ್ವಿಗುಣಾ ಕಾಂಚನೀ ಭೂಮಿಃ ಸರ್ವಸತ್ವವಿವರ್ಜಿತಾ** ಎಂಬ ವಚನಕ್ಕೆ ಹಿಂದಿನ ಭೂಮಿಗಿಂತಲೂ ದೇವತೆಗಳಿಗೆ ಎರಡು ಪಟ್ಟು ಸುಖನೀಡುವ ಸ್ವರ್ಣಭೂಮಿಯೆಂದರ್ಥವೇ ಹೊರತು ಎರಡರಷ್ಟು ಪರಿಮಾಣವೆಂದಲ್ಲ. ಹಾಗೆ ಹೇಳಿದಲ್ಲಿ ಬೇರೆ ಗ್ರಂಥಗಳ ವಿರೋಧ ಬರುವುದು ಎಂದು ಅವರ ಅಭಿಪ್ರಾಯ. ತೊಂಭತ್ತಾರು ಲಕ್ಷಯೋಜನ ಪರಿಮಾಣವೆಂದು ಕೆಲವರು ಹೇಳುವರು. ಇದನ್ನು ಅನುಸರಿಸಿ ಯಾದುಪತ್ಯಕಾರರು ಸಮುದ್ರಗಳನ್ನು ಬಿಟ್ಟು ದ್ವೀಪಗಳೆಂಬ ಭೂಮಿಯನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡಲ್ಲಿ ತೊಂಭತ್ತಾರು ಲಕ್ಷಯೋಜನ ಕಾಂಚನ ಭೂಮಿಯೆಂದು ಅರ್ಥ ಮಾಡಿರುವರು. ಸಮುದ್ರಗಳನ್ನು ಸೇರಿಸಿಕೊಂಡರೆ ಒಂದುಕೋಟಿ ಐವತ್ತೇಳುವರಿ ಲಕ್ಷಯೋಜನಗಳಾಗುವುದೆಂದೂ ಅಷ್ಟು ಸ್ವರ್ಣಭೂಮಿ ಪರಿಮಾಣವೆಂದೊಪ್ಪಿದಲ್ಲಿ **ಅಂತ್ಯಾಧ್ಯರ್ಧಸ್ಥಲಂ ಹೈಮಂ** ಎಂಬ **ಮಹಾಭಾರತತಾತ್ಪರ್ಯನಿರ್ಣಯ** ವಾಕ್ಯಕ್ಕೆ ವಿರೋಧ ಬರುವದೆಂದು ಅವರ ಅಭಿಪ್ರಾಯ. ದ್ವೀಪಗಳನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡಾಗಲೂ ಅರ್ಧ ಲಕ್ಷಯೋಜನ ಕಮ್ಮಿ ಬರುವುದೆಂದು ಶಂಕಿಸಿದರೆ ಕಾಂಚನ ಭೂಮಿಯ ಅಂಚಿನಲ್ಲಿರುವ ವಜ್ರಪ್ರದೇಶವು ಅರ್ಧಲಕ್ಷಯೋಜನವಿರುವುದೆಂದು ಅದನ್ನು

ಸೇರಿಸಿಕೊಂಡು ತೊಂಭತ್ತಾರು ಲಕ್ಷವೆಂದೂ ಆದ್ದರಿಂದಲೇ **ಬಾಹ್ಯತೋ ವಜ್ರಲೇಪಕಂ** ಎಂಬ ತಾತ್ಪರ್ಯನಿರ್ಣಯದ ಮುಂದಿನ ವಾಕ್ಯವು ಹೊರಟಿದೆ ಎಂದೂ ಅಭಿಪ್ರಾಯ ಪಟ್ಟಿರುವರು.

ಆ ಲೋಕಾಲೋಕಪರ್ವತವು ಯಾವ ಕಾರಣ ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳ (ಸೃಷ್ಟಿಯ) ನಂತರ ಮೂರು ಲೋಕಗಳ ಕೊನೆಯಲ್ಲಿ ಸೂರ್ಯಾದಿ ಪ್ರಕಾಶವುಳ್ಳ ಮೂರು ಲೋಕಗಳ ನಿರ್ಣಯಕ್ಕಾಗಿ ಶ್ರೀಹರಿಯಿಂದ ಸುತ್ತಲೂ ನಿರ್ಮಿತವಾಗಿದೆಯೋ ಆ ಉದ್ದೇಶದ ಭಂಗಬರದಿರಲೆಂದು ಸೂರ್ಯ ಮೊದಲಾದ ಧ್ರುವಪರ್ಯಂತವಾದ ಜ್ಯೋತಿಸ್ಸಮೂಹಗಳ ಕಿರಣಗಳು ಬೆಟ್ಟದ ಒಳಭಾಗದಲ್ಲಿರುವ (ಕಾಂಚನ ಭೂಮಿಯ ಕಡೆಗಿರುವ) ಮೂರು ಲೋಕಗಳನ್ನು ಪ್ರಕಾಶಗೊಳಿಸುವವುಗಳಾಗಿ ಹೊರಗೆ ಹೋಗುವುದಿಲ್ಲ. ಆದ್ದರಿಂದ ಲೋಕಾಲೋಕಪರ್ವತವು ಆ ಮೂರು ಲೋಕಗಳಷ್ಟೇ ಎತ್ತರ ಮತ್ತು ವಿಸ್ತಾರವುಳ್ಳದ್ದು. ಇಲ್ಲಿ ಲೋಕತ್ರಯಗಳು ಐವತ್ತೊಂದು ಲಕ್ಷಯೋಜನ ಎತ್ತರವಿರುವುವು. ಪರ್ವತದ ಎತ್ತರವೂ ಅಷ್ಟೇ ಇರುವುದು. ಇಲ್ಲವಾದರೆ ಜ್ಯೋತಿಸ್ಸುಗಳ ಕಿರಣಗಳು ಹೊರಗೆ ಹೋಗಲು ಅವಕಾಶವಾಗುವುದು. ವಿಸ್ತಾರದಲ್ಲಿಯಾದರೋ ಸ್ವಲ್ಪ ಕಡಿಮೆ ಅಷ್ಟು ಅರ್ಥಾತ್ ಐವತ್ತು ಲಕ್ಷ ಐವತ್ತು ಸಾವಿರ ವಿಸ್ತಾರವಾದುದು. ಹೀಗೆ ಅರ್ಥಮಾಡಲು '**ಲೋಕಾಲೋಕಪ್ರದೇಶಸ್ತು ಪಂಚಾಶಲ್ಲಕ್ಷವಿಸ್ಮತಃ ಸಪಂಚಾಶತ್ಸಹಸ್ರಶ್ಚ**' ಎಂಬ ಭಾರತತಾತ್ಪರ್ಯನಿರ್ಣಯ ವಾಕ್ಯವೇ ಆಧಾರ.

|| ★★★ ||




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಏಕವಿಂಶತಿತಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

**'ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಂರವೀವಿಪತ್', 'ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ'** ಮುಂತಾದ ಶ್ರುತಿಗಳು ಶ್ರೀಹರಿಯನ್ನೇ ಅಖಂಡಸ್ವಾಮಿಯೆಂದು ತಿಳಿಸುವವು. ಅವನ ಆಜ್ಞೆಯಿಂದಲೇ ಸೂರ್ಯ ಮೊದಲಾದ ದೇವತೆಗಳು ತಮ್ಮ ತಮ್ಮ ಅಧಿಕಾರಗಳಲ್ಲಿ ಪ್ರವರ್ತಿಸುವರು. ಈ ದೇವತೆಗಳನ್ನು ಜನರು ತಮ್ಮ ಇಷ್ಟ ದೇವತೆಗಳೆಂದು ಸೇವಿಸುವರು. ಈ ದೇವತೆಗಳೆಲ್ಲರು ಶ್ರೀಹರಿಯ ವಿಶೇಷ ಸನ್ನಿಧಾನಕ್ಕೆ ಸ್ಥಾನವಾಗಿರುವರು. ಇವರ ಸ್ವರೂಪಜ್ಞಾನವು ಶ್ರೀಹರಿಯ ಜ್ಞಾನಕ್ಕೆ ಉಪಯುಕ್ತವಾದುದೆಂಬ ಅಭಿಪ್ರಾಯದಿಂದ ಈ ಅಧ್ಯಾಯದಲ್ಲಿ ಇವರ ಸ್ವರೂಪವನ್ನು ನಿರೂಪಿಸುವರು. ಅದರಲ್ಲಿ ಹಿಂದಿನ ಅಧ್ಯಾಯದ ವಿಷಯವನ್ನು ಅನುವಾದ ಮಾಡುವ ಮೂಲಕ ಅತಿದೇಶ ಮಾಡಿ ದ್ಯುಲೋಕ ಅಂತರಿಕ್ಷಲೋಕಗಳ ಪ್ರಮಾಣಾದಿಗಳನ್ನು ತಿಳಿಸುವರು.

### ಅಂತರಿಕ್ಷಲೋಕಗಳಲ್ಲಿ ಸೂರ್ಯಾದಿ ಸಂಚಾರ

**ಶ್ರೀ ಶುಕ ಉವಾಚ -**

**ಏತಾವಾನೇವ ಭೂವಲಯಸ್ಯ ಸನ್ನಿವೇಶಃ ಪ್ರಮಾಣಲಕ್ಷಣತಶ್ಚ ವ್ಯಾಖ್ಯಾತ ಏತೇನೈವ ಹಿ ದಿವೋ ಮಂಡಲಮಾನಂ ತದ್ವಿದ ಉಪದಿಶಂತಿ ||೧||**

**ಯಥಾ ದ್ವಿದಲನಿಷ್ಪಾವಾದೀನಾಂ ತದಂತರೇಣಾಂತರಿಕ್ಷಮುಪಸಂಧಿತಮ್ ||೨||**

**ಭೂವಲಯಸ್ಯ** ಬ್ರಹ್ಮಾಂಡದ **ಸನ್ನಿವೇಶಃ** ವಿಸ್ತಾರ ವಿಶೇಷವು **ಏತಾವಾನೇವ** ಐವತ್ತುಕೋಟಿ ಯೋಜನವೇ ಪರಿಮಿತವಾದುದೆಂದು **ಪ್ರಮಾಣಲಕ್ಷಣತಶ್ಚ** ಪ್ರಮಾಣದಿಂದಲೂ ಲಕ್ಷಣದಿಂದಲೂ **ವ್ಯಾಖ್ಯಾತಃ** ನನ್ನಿಂದ ವಿವರಿಸಲ್ಪಟ್ಟಿರುವುದು **ಏತೇನ** ಇದರಿಂದಲೇ **ದಿವೋ ಮಂಡಲಮಾನಂ** ಸ್ವರ್ಗವಿಸ್ತಾರ ಪ್ರಮಾಣವನ್ನು **ತದ್ವಿದಃ** ಅವುಗಳ ವಿಸ್ತಾರ ಬಲ್ಲವರು ಉಪದೇಶಿಸುವರು. **ಯಥಾ** ಹೇಗೆ **ದ್ವಿದಲ ನಿಷ್ಪಾವಾದೀನಾಂ** ರಾಜಮಾಷ (ಅಲಸಂದ) ಮೊದಲಾದ ಎರಡು ಬೇಳೆಯಾಗುವ ಧಾನ್ಯಗಳ ಒಂದು ಬೇಳೆಯ ಅಳತೆಯನ್ನು ಹೇಳುವುದರಿಂದ ಮತ್ತೊಂದು ಬೇಳೆಯ ಅಳತೆಯು ಹೇಳಿದಂತೆ ಆಗುವುದೋ ತಥಾ ಹಾಗೆ ಎಂದು ದೃಷ್ಟಾಂತ. ಎರಡು ಬೇಳೆಗಳು ಎಲ್ಲ ರೀತಿಯಿಂದ ಪರಿಮಾಣದಲ್ಲಿ ಹೇಗೆ ಸಮಾನವೋ ಹಾಗೆ ಭೂವಲಯ, ಸ್ವರ್ಗ ಅಂತರಿಕ್ಷ ಎಲ್ಲದರ ಪರಿಮಾಣ ಸಮಾನವೆಂದರ್ಥ. **ತತ್ ಅಂತರಿಕ್ಷಂ** ಸೂರ್ಯನು ಮಧ್ಯದಲ್ಲಿರುವ ಆ ಅಂತರಿಕ್ಷವು **ತದಂತರೇಣ** ದ್ಯುಲೋಕ ಭೂಲೋಕಗಳ ಮಧ್ಯದಲ್ಲಿ **ಉಪಸಂಧಿತಂ** ಸ್ಥಾಪಿತವಾಗಿರುವುದು. ಇದರಿಂದ ಅಂತರಿಕ್ಷವು ಸ್ವರ್ಗಲೋಕ ಭೂಲೋಕಗಳಿಗೆ ಸಮಾನ ವಿಸ್ತಾರವುಳ್ಳದ್ದೆಂದು ಹೇಳಿದಂತಾಯಿತು **ಭುವಃ ಸ್ವರ್ಗಶ್ಚ ಕೋಟ್ಯೈವ ಯೋಜನಾನಾಂ ಪ್ರವಿಸ್ತೃತಾ** ಎಂಬ ಭಾರತತಾತ್ಪರ್ಯನಿರ್ಣಯದ ಮಾತಿಗೆ ಅಲ್ಲಿರುವವರ ಭೋಗಸ್ಥಾನವು ಕೋಟಿಯೋಜನ ವಿಸ್ತಾರವೆಂದು ಅಭಿಪ್ರಾಯ. ಆದ್ದರಿಂದ ನಿರ್ಣಯ ವಿರೋಧವಿಲ್ಲ. ॥೧-೨॥

ಅಂತರಿಕ್ಷಲೋಕದ ಲಕ್ಷಣ ಸೂಚಿಸಲು ಅಲ್ಲಿರುವ ಸೂರ್ಯನ ಮಾಹಾತ್ಮ್ಯವನ್ನು ಸಂಕ್ಷೇಪವಾಗಿ ಹೇಳಿದ್ದನ್ನು ವಿಸ್ತಾರಮಾಡುವರು

**ಯನ್ಮಧ್ಯಗೋ(ಗತೋ) ಭಗವಾಂಸ್ತಪತಾಂ ಪತಿಸ್ತಪನ ಆತಪೇನ ತ್ರಿಲೋಕಾನ್ ಪ್ರತಪತ್ಯವಭಾಸಯತ್ಯಾತ್ಮಭಾಸಾ ಏಷ ಉದಗಯನ್ ದಕ್ಷಿಣಾಯನವೈಷುವಸಂಜ್ಞಾಭಿರಾರೋಹಣಾವರೋಹಣಾದಿಭಿರ್ದೀರ್ಘ-ಹ್ರಸ್ವಸಮಾನಾಭಿರ್ಗತಿ ಭಿರಾರೋಹಣಾವರೋಹಣಸಮಸ್ಥಾನೇಷು ಯಥಾಸವನಮಭಿಪದ್ಯಮಾನೋ ಮಕರಾದಿ ರಾಶಿಷ್ವಹೋರಾತ್ರಾಣಿ ದೀರ್ಘಹ್ರಸ್ವ ಸಮಾನಾನಿವಿಧತ್ತೇ ॥೩॥**



**ಯನ್ಮಧ್ಯಗಃ (ಗತಃ)** ಯಾವ ಅಂತರಿಕ್ಷಲೋಕದ ಮಧ್ಯದಲ್ಲಿರುವ **ತಪತಾಂ** ಜ್ವಲಿಸುವ ಜೋತಿಸ್ಸುಗಳ **ಪತಿಃ** ಸ್ವಾಮಿಯಾದ **ಭಗವಾನ್ ತಪನಃ** ಪೂಜ್ಯನಾದ ಸೂರ್ಯದೇವನು **ಆತ್ಮಭಾಸಾ** ಶ್ರೀಹರಿಯ ಕಾಂತಿಯಿಂದ ತಮ್ಮ ಬೆಳಕಿನಿಂದ **ಆತಪೇನ** ಬಿಸಿಲಿನಿಂದ **ತ್ರಿಲೋಕಾನ್** ಮೂರು ಲೋಕಗಳನ್ನು **ಪ್ರತಪತಿ** ಸಂತಾಪಗೊಳಿಸುವನು **ಅವಭಾಸಯತಿ** ಪ್ರಕಾಶಗೊಳಿಸುವನು. ಇಂತಹ ಸೂರ್ಯನಿರುವುದೇ ಅಂತರಿಕ್ಷದ ಲಕ್ಷಣವೆಂದು ಸೂಚಿಸಿದಂತಾಯಿತು. **ಏಷಃ** ಈ ಸೂರ್ಯದೇವನು (ಸೂರ್ಯನಾಮಕ ಶ್ರೀಹರಿಯು) **ಉದಗಯನ** ಉತ್ತರಾಯಣ **ದಕ್ಷಿಣಾಯನ ವೈಷುವ** ಎಂದು ಹೆಸರುಳ್ಳ **ದೀರ್ಘ** ಮಂದವಾದ **ಹ್ರಸ್ವ** ಶೀಘ್ರವಾದ **ಸಮಾನಾಭಿಃ** ಸಮವಾದ(ಮಂದವೂ ತ್ವರಿತವೂ ಅಲ್ಲದ) **ಗತಿಭಿಃ** ಗತಿಗಳಿಂದ **ಆರೋಹಣ** ಎತ್ತರದ **ಅವರೋಹಣ** ಇಳಿಯುವ ಮತ್ತು **ಸಮಸ್ಥಾನೇಷು** ಸಮಸ್ಥಳಗಳಲ್ಲಿ **ಮಕರಾದಿರಾಶಿಷು** ಮಕರ ಮುಂತಾದ ರಾಶಿಗಳಲ್ಲಿ **ಯಥಾಸವನಂ** ಆ ಆ ಕಾಲವನ್ನು ಮೀರದೆ **ಅಭಿಪದ್ಯಮಾನಃ** ಆ ಆ ನಕ್ಷತ್ರಗಳಿಂದ ಉದಯ ಹೊಂದುವವನಾಗಿ ಅಂದರೆ ಆರೋಹಣವೆಂದು ಕರೆಸುವ ಮಕರದಿಂದ ಹಿಡಿದು ಮಿಥುನ ಪರ್ಯಂತ ರಾಶಿಗಳಲ್ಲಿ ಆಯಾ ಕಾಲದಲ್ಲಿ ಉದಯವನ್ನು ಹೊಂದಿ ಉತ್ತರಾಯಣವೆಂಬ ದೀರ್ಘಗತಿಯಿಂದ **ಅಹೋರಾತ್ರಾಣಿ ದೀರ್ಘಹ್ರಸ್ವಸಮಾನಾನಿ ವಿಧತ್ತೇ ಅಹಃ** ಹಗಲುಗಳನ್ನು ದೀರ್ಘಗಳನ್ನಾಗಿಯೂ ಅವರೋಹಣ ಸಂಜ್ಞೆಯ ಕರ್ಕಾಟಕದಿಂದ ಹಿಡಿದು ಧನುಸ್ಸಿನವರೆಗಿನ ರಾಶಿಗಳಲ್ಲಿ ಆಯಾ ನಕ್ಷತ್ರಗಳಿಂದ ಆಯಾ ಕಾಲದಲ್ಲಿ ಉದಯವನ್ನು ಹೊಂದಿ **ದಕ್ಷಿಣಾಯನ**ವೆಂಬ ಹ್ರಸ್ವ ಗತಿಯಿಂದ (ಶೀಘ್ರಗತಿ) ಹಗಲುಗಳನ್ನು ಹ್ರಸ್ವವನ್ನಾಗಿಯೂ **ವೈಷುವ** ಸಂಜ್ಞೆಯ ಮೇಷ ತುಲಾಗಳಲ್ಲಿ ಆ ಆ ನಕ್ಷತ್ರಗಳಿಂದ ಆ ಆ ಕಾಲದಲ್ಲಿ ಉದಯವನ್ನು ಹೊಂದಿ ಸಮಗತಿಯಿಂದ ಅಹೋರಾತ್ರಿಗಳನ್ನು ಸಮಗಳನ್ನಾಗಿಯೂ **ವಿಧತ್ತೇ** ಮಾಡುವನು. (ದೀರ್ಘವೆಂದರೆ ಮೂವತ್ತು ಘಳಿಗೆಗಳಿಗಿಂತ ಹೆಚ್ಚಿನಕಾಲ. ಹ್ರಸ್ವವೆಂದರೆ ಅದಕ್ಕಿಂತ ಕಡಿಮೆ ಕಾಲ. ಸಮವೆಂದರೆ ಮೂವತ್ತು ಘಳಿಗೆಗಳ ಕಾಲ). ।।೩।।

**ಯದಾ ತು ಮೇಷತುಲಯೋರ್ವರ್ತತೇ ತದಾऽಹೋರಾತ್ರಾಣಿ ಸಮಾನಾನಿ ಭವಂತಿ ।।೪।।**

**ಯದಾ** ಯಾವಾಗ **ಮೇಷತುಲಯೋಃ ವರ್ತತೇ** ಮೇಷ ಅಥವಾ ತುಲಾರಾಶಿಗಳಲ್ಲಿ ಸೂರ್ಯನಿರುವನೋ **ತದಾ** ಆಗ **ಅಹೋರಾತ್ರಾಣಿ** ಹಗಲು

ರಾತ್ರಿಗಳು **ಸಮಾನಾನಿ ಭವಂತಿ** ಸಮಾನವಾಗಿ ಅಂದರೆ ಮೂವತ್ತು ಘಳಿಗೆಗಳಾಗಿ ಇರುವುವು. ।।೪।।

**ಯದಾ ವೃಷಭಾದಿಷು ಪಂಚಸು ರಾಶಿಷು ಚರತಿ ತದಾ ಅಹಾನ್ಯೇವ ವರ್ಧಂತೇ ಹ್ರಸಂತಿ ಚ ರಾತ್ರಯಃ ಮಾಸಿ ಮಾಸ್ಯೇಕೈಕಾ ಘಟಿಕಾ ತುಲ್ಯಂ ದಿವಸಂ ವರ್ಧಮಾನಾನ್ಯಹಾನಿ ತಾವತೀರನುಸಂಕ್ಷೀಯಮಾಣಾ ರಾತ್ರಯ ಸಮುದ್ಧೃತ್ಯ ಸಮಾನ್ಯಹೋರಾತ್ರಾಣಿ ತ್ರಿಂಶನ್ಮುಹೂರ್ತಾನ್ಯೇವ ಭವಂತಿ ಯದಾ ವೃಶ್ಚಿಕಾದಿಷು ಪಂಚಸು ವರ್ತತೇ ತದಾ ಅಹೋರಾತ್ರಾಣಿ ವಿಪರೀತಾನಿ ಭವಂತಿ ।।೫।।**

**ಯದಾ** ಯಾವಾಗ **ವೃಷಭಾದಿಷು ಪಂಚಸು** ವೃಷಭ ಮುಂತಾದ ಐದು ರಾಶಿಗಳಲ್ಲಿ **ವರ್ತತೇ** ಸಂಚರಿಸುತ್ತಿರುವನೋ **ತದಾ** ಆಗ **ಅಹಾನಿ ಏವ** ಹಗಲುಗಳೇ **ವರ್ಧಂತೇ** ಹೆಚ್ಚಾಗುವುವು **ಚ** ಮತ್ತು **ಹ್ರಸಂತಿ** ಕಡಿಮೆಯಾಗುವುವು. **ರಾತ್ರಯಃ** ರಾತ್ರಿಗಳೂ **ಹ್ರಸಂತಿ** ಕಡಿಮೆಯಾಗುವುವು **ವರ್ಧಂತೇ ಚ** ಹೆಚ್ಚೂ ಆಗುವವು. ವೃದ್ಧಿಹ್ರಾಸಗಳ ಪರಿಮಾಣವೆಷ್ಟೆಂದು ಹೇಳುವರು **ಮಾಸಿ ಮಾಸಿ** ತಿಂಗಳೊಂದಕ್ಕೆ **ಏಕೈಕಾ ಘಟಿಕಾ** ಒಂದೊಂದು ಘಳಿಗೆ (ಹೆಚ್ಚು ಕಡಿಮೆಯಾಗುವಂತೆ) ವೃದ್ಧಿಯಾಗುವುದು ಅದರಂತೆಯೇ ಹ್ರಾಸವಾಗುವುದು ಎಂದು ತಿಳಿಯಬೇಕು. ಇಲ್ಲಿ ಹೇಳಿದ ಒಂದೊಂದು ಘಳಿಗೆ ಎಂದರೆ ಅಷ್ಟೇ ಎಂದು ನಿಯಮವಿಲ್ಲ. ಸ್ಥೂಲದೃಷ್ಟಿಯಿಂದ ಹೇಳಿದ್ದು. ಪ್ರತಿತಿಂಗಳು ವ್ಯತ್ಯಾಸವಿರುವುದು. ಮೂರು ನಾಲ್ಕು ಘಳಿಗೆಗಳ ವೃದ್ಧಿಹ್ರಾಸಗಳು ಪ್ರಮಾಣಸಿದ್ಧವಾಗಿದೆ. (ಇಲ್ಲಿ ವೃದ್ಧಿಯೆಂದರೆ ರಾತ್ರಿಗಿಂತ ಹೆಚ್ಚು ಎಂದರ್ಥಮಾಡಿಕೊಂಡಲ್ಲಿ ಕಡಿಮೆಯೂ ಆಗುವುವು ಎಂದು ಸೇರಿಸಿಕೊಳ್ಳಬೇಕಿಲ್ಲ. ಕರ್ಕಾಟಕ ಮಾಸದಿಂದ ಹಗಲಿನ ಪರಿಮಾಣವು ಕಡಿಮೆಯಾಗುತ್ತ ಹೋದರೂ ರಾತ್ರಿಗಿಂತ ಹೆಚ್ಚಾಗಿಯೇ ಇರುವುದು. ರಾತ್ರಿಯು ವೃದ್ಧಿಯಾಗುತ್ತಾ ಬಂದರೂ ಹಗಲಿಗಿಂತ ಕಡಿಮೆಯಾದ್ದರಿಂದ ಹ್ರಾಸವಾಗುವುದೆಂದು ಹೇಳಿದ್ದು . ಹಾಗಾದರೆ ಒಂದು ದಿವಸಕ್ಕೆ ಮೂವತ್ತೇ ಮುಹೂರ್ತಗಳೆಂಬುದು ಹೇಗೆ ಎಂದರೆ ಹೇಳುವರು **ತುಲ್ಯಂ ದಿವಸಂ** ಹಗಲು ರಾತ್ರಿಗಳು ಹೆಚ್ಚು ಕಡಿಮೆಯಾದರೂ ಮೂವತ್ತು ಮುಹೂರ್ತವೆಂಬ ದಿವಸವು ಎಲ್ಲ ಕಾಲದಲ್ಲಿ ಸಮವಾಗಿಯೇ ಇರುವುದು. ಇದು ಹೇಗೆ ಎಂದರೆ ಹೇಳುತ್ತಾರೆ **ಅಹಾನಿ** ಹಗಲುಗಳು **ವರ್ಧಮಾನಾನಿ (ಭವಂತಿ)** ಮೂವತ್ತು ಘಳಿಗೆಗಳಿಗಿಂತ ಹೆಚ್ಚಾಗುತ್ತ ಹೋಗುವುವು. **ತಾವತೀಃ** ಅಷ್ಟೇ

**ರಾತ್ರಯಃ** ರಾತ್ರಿಗಳು **ಸಂಕ್ಷೀಯಮಾಣಾಃ** ಮೂವತ್ತು ಘಳಿಗೆಗಳಿಗಿಂತ ಕಡಿಮೆಯಾಗುತ್ತ ಹೋಗುವುವು. ಹಗಲು ಕಡಿಮೆಯಾದಂತೆಲ್ಲ ಅಷ್ಟೇ ರಾತ್ರಿಗಳು ಹೆಚ್ಚುತ್ತ ಹೋಗುವುವು ಎಂದೂ ಇಟ್ಟುಕೊಳ್ಳಬೇಕು. **ಸಮುದ್ಧೃತ್ಯ** ಇವೆರಡರ ಘಳಿಗೆಗಳನ್ನು ಒಟ್ಟಿಗೆ ಕೂಡಿಸಿದರೆ **ಅಹೋರಾತ್ರಾಣಿ** ಹಗಲುರಾತ್ರಿಗಳು ಅಂದರೆ ದಿವಸವು ಒಟ್ಟು **ತ್ರಿಂಶನ್ಮುಹೂರ್ತಾನಿ ಸಂತಿ** ಮೂವತ್ತು ಮುಹೂರ್ತಗಳಾಗಿ **ಸಮಾನಿ ಭವಂತಿ ಏವ** ಎಲ್ಲ ಕಾಲಗಳಲ್ಲಿಯೂ ಸಮವಾಗಿಯೇ ಇರುವುವು. ರಾತ್ರಿಹಗಲು ಸೇರಿ ಎಂದೂ ಅರವತ್ತು ಘಳಿಗೆಗಿಂತ ಹೆಚ್ಚಾಗುವುದೇ ಇಲ್ಲವೆಂದರ್ಥ. **ಯದಾ** ಯಾವಾಗ ಸೂರ್ಯನು **ವೃಶ್ಚಿಕಾದಿಷು ಪಂಚಸು ವರ್ತತೇ** ವೃಶ್ಚಿಕ ಮೊದಲಾದ ಐದು ರಾಶಿಗಳಲ್ಲಿ (ಮೀನಾಂತ) ಇರುವನೋ **ತದಾ** ಆಗ **ಅಹೋರಾತ್ರಾಣಿ ವಿಪರೀತಾನಿ ಭವಂತಿ** ಹಗಲು ರಾತ್ರಿಗಳು ಇದಕ್ಕೆ ವಿರುದ್ಧವಾಗಿ ಅಂದರೆ ಹಗಲುಗಳು ಮೂವತ್ತು ಘಳಿಗೆಗಿಂತ ಕಡಿಮೆಯೂ ರಾತ್ರಿಗಳು ಅವುಗಳಿಗಿಂತ ಹೆಚ್ಚಾಗಿಯೂ ಆಗುವುವು. ಮೇಲಿನ ಕ್ರಮಗಳನ್ನು ಇಲ್ಲಿಯೂ ಇಟ್ಟುಕೊಳ್ಳಬೇಕು. ।।೫।।

ಮಕರಾದಿಷು, ವೃಶ್ಚಿಕಾದಿಷು, ಮೇಷತುಲಯೋ ಎಂದು ಮೇಲೆ ಹೇಳಿದ್ದನ್ನು ಸಂಗ್ರಹಿಸಿ ಹೇಳುತ್ತಾರೆ

**ಯಾವದ್ದಕ್ಷಿಣಾಯನಮಹಾನಿ ವರ್ಧಂತೇ ಹ್ರಸಂತಿ ಚ ರಾತ್ರಯ ಯಾವದುದಗಯನ ಮಹಾನಿ ಹ್ರಸಂತಿ ರಾತ್ರಯೋ ವರ್ಧಂತೇ ।।೬।।**

**ಯಾವದ್ದಕ್ಷಿಣಾಯನಂ** ದಕ್ಷಿಣಾಯನ ಬರುವವರೆಗೂ **ಅಹಾನಿ ವರ್ಧಂತೇ** ಹಗಲುಗಳು ವೃದ್ಧಿಯಾಗುವುವು **ಹ್ರಸಂತಿ ಚ ರಾತ್ರಯಃ** ರಾತ್ರಿಗಳು ಕಡಿಮೆಯಾಗುವುವು **ಯಾವದುದಗಯನಂ** ಉತ್ತರಾಯಣ ಬರುವವರೆಗೂ **ಅಹಾನಿ ಹ್ರಸಂತಿ** ಹಗಲುಗಳು ಕಡಿಮೆಯಾಗುವುವು **ರಾತ್ರಯೋ ವರ್ಧಂತೇ** ರಾತ್ರಿಗಳು ಹೆಚ್ಚುತ್ತ ಹೋಗುವುವು.

**ವಿ.ವಿ :-** ಆವಹ, ಪ್ರವಹ, ಉದ್ವಹ, ಸಂವಹ, ವಿವಹ, ಪರಾವಹ, ಪರಿವಹಗಳೆಂಬ ಹೆಸರಿನ ಏಳು ವಾಯುಗಳು ಜ್ಯೋತಿಶ್ಚಕ್ರವನ್ನು ಸುತ್ತುತ್ತಿರುವಂತೆ ಮಾಡುವುವು. ಆದರಲ್ಲಿ ಜ್ಯೋತಿರ್ಗಣಕ್ಕೆ ಅಧಿಪತಿಯಾದ ಸೂರ್ಯನ ಸಂಚಾರಕ್ಕೆ ಮಧ್ಯಮ, ಉತ್ತರ, ದಕ್ಷಿಣಗಳೆಂದು ಮೂರು ಮಾರ್ಗಗಳು. ಇದರಲ್ಲಿ ಮಧ್ಯಮಮಾರ್ಗಕ್ಕೆ '**ಜಾರದ್ಗವ**' ವೆಂದೂ ಉತ್ತರ ಮಾರ್ಗಕ್ಕೆ '**ಐರಾವತ**' ವೆಂದೂ

ದಕ್ಷಿಣ ಮಾರ್ಗಕ್ಕೆ '**ವೈಶ್ವಾನರ**'ವೆಂದೂ ಹೆಸರು. ಈ ಒಂದೊಂದು ಮಾರ್ಗವೂ ಮೂರು ಮೂರು ಅವಾಂತರ ಮಾರ್ಗಗಳನ್ನು ಹೊಂದಿರುವುವು. ಅಶ್ವಿನಿ, ಭರಣಿ, ಕೃತ್ತಿಕೆಗಳು ಸೇರಿ ನಾಗವೀಥಿಯೆಂದು, ರೋಹಿಣಿ, ಮೃಗಶಿರ, ಆರಿದ್ರಾಗಳು ಸೇರಿ ಗಜವೀಥಿಯೆಂದೂ, ಪುನರ್ವಸು, ಪುಷ್ಯ, ಆಶ್ಲೇಷಾಗಳು ಸೇರಿ ಐರಾವತೀ ವೀಥಿಯೆಂದೂ ಉತ್ತರ ಮಾರ್ಗದಲ್ಲಿರುವ ಮೂರು ವೀಥಿಗಳು. ಮಖ, ಪುಬ್ಬ, ಉತ್ತರೆಗಳು ಸೇರಿ ಆರ್ಷಭಿಯೆಂದೂ, ಹಸ್ತ , ಚಿತ್ತ , ಸ್ವಾತಿಗಳು ಸೇರಿ ಗೋವೀಥಿಯೆಂದೂ, ವಿಶಾಖಾ, ಅನುರಾಧಾ, ಜ್ಯೇಷ್ಠೆಗಳು ಸೇರಿ ಜಾರದ್ಗವಿಯೆಂದೂ ಮಧ್ಯಮ (ವೈಷುವ) ಮಾರ್ಗದಲ್ಲಿ ಮೂರು ವೀಥಿಗಳು. ಮೂಲ, ಪೂರ್ವಾಷಾಢ, ಉತ್ತರಾಷಾಢಗಳು ಸೇರಿ ಅಜವೀಥಿಯೆಂದೂ, ಶ್ರವಣ, ಧನಿಷ್ಠ, ಶತಭಿಷಾಗಳು ಸೇರಿ ಮೃಗವೀಥಿಯೆಂದೂ, ಪೂರ್ವಾಭಾದ್ರಪದ, ಉತ್ತರಾಭಾದ್ರಪದ, ರೇವತಿಗಳು ಸೇರಿ ವೈಶ್ವಾನರೀ ವೀಥಿಯೆಂದು ದಕ್ಷಿಣ ಮಾರ್ಗದಲ್ಲಿ ಮೂರು ವೀಥಿಗಳು. ಇವುಗಳಲ್ಲಿ ನಗದ ಕೊನೆಗೆ ಸೇರಿಕೊಂಡಿರುವ ವಾಯುಪಾಶಗಳೆರಡನ್ನು ಧ್ರುವಮಂಡಲಾಧಿಪತಿಯು( ಧ್ರುವರಾಜ) ಎಳೆದಾಗ ಒಳಮಂಡಲಕ್ಕೆ ಹೋಗುವದಕ್ಕಾಗಿ ರಥನೀಡ(ಕುಳಿತುಕೊಳ್ಳುವ ಸ್ಥಳ)ದ ಹತ್ತುವಿಕೆ ವಾಯುಪಾಶ ಸಡಿಲುಬಿಟ್ಟಾಗ ಹೊರಮಂಡಲಕ್ಕೆ ಹೋಗುವುದಕ್ಕಾಗಿ ರಥನೀಡದ ದಶೆಯಿಂದ ಇಳಿಯುವಿಕೆ ಆಗಿ ಹೊರ ಮಾರ್ಗದಲ್ಲಿ ಬಂದ ಸೂರ್ಯನ ಗಮನವೂ ತ್ವರಿತವಾಗುವುದು. ದಿನವು ಕಡಿಮೆಯಾಗಿ ರಾತ್ರಿಯು ಹೆಚ್ಚಾಗುವುದು. ಒಳಮಾರ್ಗದಲ್ಲಿ ಬಂದಾಗ ಗಮನವು ನಿಧಾನ(ಮಂದ)ವಾಗುವುದರಿಂದ ರಾತ್ರಿಗಳು ಕಡಿಮೆ ಹಗಲು ಹೆಚ್ಚು. ಮಧ್ಯಮಾರ್ಗದಲ್ಲಿ ಬಂದಾಗ ಸಮಗತಿಯಾದ್ದರಿಂದ ಹಗಲು ರಾತ್ರಿಗಳು ಸಮ ಇತ್ಯಾದಿ ವಿಶೇಷಗಳು ಕಾಲವಿಶೇಷಬಲ್ಲವರಿಗೆ ತಿಳಿಯುವುವು. ಅದಕ್ಕೆ ಸಂಬಂಧಪಟ್ಟ ಶಾಸ್ತ್ರಕ್ಕೆ ವಿಷಯವಾದ್ದರಿಂದ ಇಲ್ಲಿ ಹೆಚ್ಚು ವಿವರಿಸುವುದಿಲ್ಲವೆಂದು ಶ್ರೀವಿಜಯಧ್ವಜತೀರ್ಥರು ತಿಳಿಸಿರುವರು. ಈ ವಿಶೇಷಗಳನ್ನು ತಿಳಿಸುವ ಪ್ರಮಾಣಗಳು ಇಂತಿವೆ. '**ಸರ್ವಗ್ರಹಾಣಾಂ ತ್ರೀಣ್ಯೇವ ಸ್ಥಾನಾನಿ ದ್ವಿಜಸತ್ತಮಾಃ । ಸ್ಥಾನಂ ಜಾರದ್ಗವಂ ಮಧ್ಯಂ ತಥೈರಾವತಮುತ್ತರಂ । ವೈಶ್ವಾನರಂ ದಕ್ಷಿಣತೋ ನಿರ್ದಿಷ್ಟಮಿಹ ತತ್ತ್ವತಃ ।**

**ಅಶ್ವಿನೀ ಕೃತ್ತಿಕಾ ಯಾಮ್ಯಾ(ಭರಣೀ) ನಾಗವೀಥೀತಿ ಶಬ್ದಿತಾ । ರೋಹಿಣ್ಯಾದ್ರಾ ಮೃಗಶಿರೋ ಗಜವೀಥ್ಯಭಿಧೀಯತೇ ॥ ಪುಷ್ಯಾಽಶ್ಲೇಷಾ ತಥಾದಿತ್ಯಾ(ಪುನರ್ವಸು)**

 




ವೀಥೀ ಚೈರಾವತೀ ಮತಾ । ಏತಾಸ್ತು ವೀಥಯಸ್ತಿಸ್ರ ಉತ್ತರೋ ಮಾರ್ಗ ಉಚ್ಯತೇ । ತಥಾ ದ್ವೇ ಚಾಪಿ ಫಲ್ಗುಸ್ಯಾತ್ ಮಘಾ ಚೈವಾರ್ಷಭೀ ಮತಾ । ಹಸ್ತಚಿತ್ರೇ ತಥಾ ಸ್ವಾತೀ ಗೋವೀಥೀ ತು ಶಬ್ದಿತಾ । ಜ್ಯೇಷ್ಠಾ ವಿಶಾಖಾಽನುರಾಧಾ ವೀಥೀ ಜಾರದ್ಗವೀ ಮತಾ । ಏತಾಸ್ತು ವೀಥಯಸ್ತಿಸ್ರೋ ಮಧ್ಯಮೋ ಮಾರ್ಗ ಉಚ್ಯತೇ । ಮೂಲಾಷಾಢೋತ್ತ-ರಾಷಾಢೌ ಅಜವೀಥೀತಿ ಶಬ್ದಿತೌ । ಶ್ರವಣಶ್ಚ ಧನಿಷ್ಠಾ ಚ ಮಾರ್ಗೀ(ಮೃಗವೀಥಿ) ಶತಭಿಷಕ್ ತಥಾ । ವೈಶ್ವಾನರೀ ಭಾದ್ರಪದಾ ರೇವತೀ ಚೇತಿ ಕೀರ್ತಿತಾ । ಏತಾಸ್ತು ವೀಥಯಸ್ತಿಸ್ರೋ ದಕ್ಷಿಣೋ ಮಾರ್ಗ ಉಚ್ಯತೇ ।। ಇತ್ಯಾದಿ ವಾಯುಪುರಾಣ ವಚನಗಳು.

'ಆಕೃಷ್ಯೇತೇ ಯದಾ ತೌ ತು ಧ್ರುವೇಣ ಸಮಧಿಷ್ಠಿತೌ । ತದಾಭ್ಯಂತರತಃ ಸೂರ್ಯೋ ಭ್ರಮತೇ ಮಂಡಲಾನಿ ತು । ಧ್ರುವೇಣ ಮುಚ್ಯಮಾನೇನ ಪುನಾ

**ರಶ್ಮಿಯುಗೇನ ತು । ತಥೈವ ಬಾಹ್ಯಸೂರ್ಯೋ ಭ್ರಮತೇ ಮಂಡಲಾನಿ ಚ ॥'** ಇತ್ಯಾದಿ ಪ್ರಮಾಣಗಳು ಕ್ಷಿಪ್ರಮಂದಗತಿಗಳನ್ನು ತಿಳಿಸುವುವು.

**ಯಾದುಪತ್ಯ ಸಂಪ್ರದಾಯ**

ಯಾದುಪತ್ಯಕಾರರಂತೆ ಸಂಪ್ರದಾಯವೇನೆಂದರೆ ಸೂರ್ಯನು ವೃಷಭಾದಿರಾಶಿಗಳಲ್ಲಿ ಉತ್ತರಾಯಣವೆಂಬ ಗಮನವನ್ನು ಹೊಂದಿದಾಗ ಧ್ರುವನು ಮೇರುವಿನ ದಕ್ಷಿಣಭಾಗದಲ್ಲಿ ನಗದ ಅಚ್ಚಿನ ಕೊನೆಗೆ ಕಟ್ಟಿರುವ ವಾಯುಪಾಶಗಳೆರಡನ್ನು ಎಳೆಯಲು ರಥವು ಆರೋಹಣಸ್ಥಾನದಲ್ಲಿ ಸಂಚರಿಸುವುದು. ಆಗ ಗಮನವು (ಏರುವಾಗ) ಮಂದವಾಗಿ ಹಗಲಿನ ಪರಿಮಾಣ ಹೆಚ್ಚಾಗುವುದು. ವೃಶ್ಚಿಕಾದಿ ರಾಶಿಗಳಲ್ಲಿ ದಕ್ಷಿಣಾಯನವೆಂಬ ಗಮನವನ್ನು ಹೊಂದಿದಾಗ ಧ್ರುವನು ಮೇರುವಿನ ಉತ್ತರದಲ್ಲಿ ಮೇಲೆ ಹೇಳಿದ ಎರಡು ಪಾಶಗಳನ್ನು ಸಡಿಲ ಬಿಡಲು ರಥವು ಅವರೋಹಣ ಸ್ಥಾನದಲ್ಲಿ ಸಂಚರಿಸುವುದು (ಇಳಿಯುವುದು) ಆಗ ಗಮನವು ಕ್ಷಿಪ್ರವಾಗಿ ರಾತ್ರಿಯು ಹೆಚ್ಚಾಗುವುದು. ಮೇಷ ತುಲಾಗಳಲ್ಲಿ ವೈಷುವವೆಂಬ ಗಮನವನ್ನು ಹೊಂದಿದಾಗ ಮೇಲೆ ಹೇಳಿದ ಪಾಶಗಳೆರಡನ್ನು ಸಮವಾಗಿ (ಬಿಗಿಯಾಗಿ ಎಳೆಯದೇ ಸಡಿಲವೂ ಬಿಡದೇ) ಎಳೆಯುವುದರಿಂದ ಸಮಗತಿಯ ಹಗಲುರಾತ್ರಿಗಳ ಸಾಮ್ಯವಾಗುವುದು. ॥೬॥

ಈಗ ಒಂದು ದಿನದಲ್ಲಿ ಹೋಗುವ ಮಾರ್ಗದ ಸಂಖ್ಯೆಯನ್ನು ಹೇಳುತ್ತಾರೆ

**ಏವಂ ನವಕೋಟಿ(ಟ್ಯಃ) ಏಕಪಂಚಾಶಲ್ಲಕ್ಷಾಣಿ ಚ ಯೋಜನಾನಾಂ ಮಾನಸೋತ್ತರಗಿರಿಪರಿವರ್ತಮಾನಸ್ಯೋಪದಿಶಂತಿ ತಸ್ಮಿನ್ನೈಂದ್ರೀ ಪುರೀ ಮೇರೋಃ ಪೂರ್ವಸ್ಮಾದ್ದೇವಧಾನೀ ನಾಮ ದಕ್ಷಿಣತೋ ಯಾಮ್ಯಾ ಸಂಯಮನೀ ನಾಮ ಪಶ್ಚಾದ್ವಾರುಣೀ ನಿಮ್ಲೋಚನೀ ನಾಮೋತ್ತರತಃ ಸೌಮ್ಯಾ ವಿಭಾವರೀ ನಾಮ ತಾಸೂದಯಮಧ್ಯಾನ್ಹಾಸ್ತಮಯನಿಶೀಥಾನೀತಿ ಭೂತಾನಾಂ ಪ್ರವೃತ್ತಿನಿವೃತ್ತಿನಿಮಿತ್ತಾನಿ ಸಮಯವಿಶೇಷೇಣ ಮೇರೋಃ ಚತುರ್ದಿಶಮ್ ॥೭॥**

ಏವಂ ಹೀಗೆ ಮೂರು ಬಗೆಯ ಗಮನದಿಂದ ಮೂರು ಬಗೆಯ ರಾಶಿಗಳಲ್ಲಿ ಇರುವ ಸೂರ್ಯನ ರಥಚಕ್ರದ ಒಂದು ಹಗಲು ರಾತ್ರಿಯಲ್ಲಿ **ಮಾನಸೋತ್ತರಗಿರಿಪರಿವರ್ತಮಾನಸ್ಯ** ಮಾನಸೋತ್ತರ ಪರ್ವತದ ಶಿಖರದಲ್ಲಿ




ಸುತ್ತಲು ಸುತ್ತುವ ಮಾರ್ಗದ ಸಂಖ್ಯೆಯನ್ನು (ದೂರವನ್ನು) **ಯೋಜನಾನಾಂ ನವಕೋಟ್ಯಃ ಏಕಪಂಚಾಶಲ್ಲಕ್ಷಾಣಿ ಚ ಉಪದಿಶಂತಿ** ಒಂಭತ್ತು ಕೋಟಿ ಐವತ್ತೊಂದು ಲಕ್ಷಯೋಜನಗಳೆಂದು (ಆ ಮಾರ್ಗ ಬಲ್ಲವರು) ಹೇಳುವರು. **ತಸ್ಮಿನ್** ಆ ಮಾನಸೋತ್ತರ ಪರ್ವತದಲ್ಲಿ **ಮೇರೋಃ ಪೂರ್ವಸ್ಮಾತ್** ಮೇರು ಪರ್ವತದ ಪೂರ್ವದಿಕ್ಕಿಗೆ ಸರಿಯಾಗಿ **ದೇವಧಾನೀ ನಾಮಾ ಐಂದ್ರಿಪುರೀ** ದೇವಧಾನಿ ಎಂಬ ಇಂದ್ರದೇವರ ಪಟ್ಟಣವಿರುವುದು **ದಕ್ಷಿಣತಃ** ದಕ್ಷಿಣಕ್ಕೆ ಸರಿಯಾಗಿ **ಯಾಮ್ಯಾ** ಯಮದೇವರ **ಸಂಯಮನೀ ನಾಮ** ಸಂಯಮನೀ ಎಂಬ ಪಟ್ಟಣವಿರುವುದು. **ಪಶ್ಚಾತ್ ವಾರುಣೀ ನಿಮ್ಲೋಚನೀ ನಾಮ** ಪಶ್ಚಿಮಕ್ಕೆ ವರುಣದೇವರ ನಿಮ್ಲೋಚನೀ ಎಂಬ ಪಟ್ಟಣವಿರುವುದು. **ಉತ್ತರತಃ** ಉತ್ತರಕ್ಕೆ ಸರಿಯಾಗಿ **ಸೌಮ್ಯಾ** ಚಂದ್ರನ **ವಿಭಾವರೀ ನಾಮ** ವಿಭಾವರೀ ಎಂಬ ಪಟ್ಟಣವಿರುವುದು(ದ್ವಿತಿಯಾಂತ ಪಾಠವಿರುವಾಗ ಪಟ್ಟಣಗಳನ್ನು ಉಪದೇಶಿಸುವರು ಎಂದು ಅನ್ವಯಿಸಬೇಕು). **ತಾಸು** ಆ ಪಟ್ಟಣಗಳ ಪ್ರವೇಶ ದ್ವಾರಗಳಲ್ಲಿ ಸೂರ್ಯನ ಸಂಚಾರವು **ಸಮಯವಿಶೇಷೇಣ** ಸಂಕೇತ ವಿಶೇಷದಿಂದ **ಉದಯಮಧ್ಯಾಹ್ನಾಸ್ತಮಯನಿಶೀಥಾನಿ ಇತಿ** ಉದಯ, ಮಧ್ಯಾಹ್ನ, ಅಸ್ತಮಯ, ನಿಶೀಥ (ಅರ್ಧರಾತ್ರಿ) ಎಂಬ ಹೆಸರನ್ನು ಹೊಂದುವುದು. ಸರ್ವದಾ ಸಂಚರಿಸುವ ಸೂರ್ಯನಿಗೆ ಉದಯಾಸ್ತಗಳು ವಾಸ್ತವಿಕವಾಗಿ ಇಲ್ಲ. ಇದು ಕೇವಲ ಸಂಕೇತವೆಂದು ಹೇಳಿದೆ. ಇವು **ಮೇರೋಃ ಚತುರ್ದಿಶಂ** ಮೇರುವಿನ ನಾಲ್ಕು ದಿಕ್ಕುಗಳಲ್ಲಿರುವ **ಭೂತಾನಾಂ** ಪ್ರಾಣಿಗಳಿಗೆ **ಪ್ರವೃತ್ತಿನಿವೃತ್ತಿನಿಮಿತ್ತಾನಿ** ಕೆಲಸಗಳಲ್ಲಿ ತೊಡಗುವುದಕ್ಕೂ ತೊಡಗದಿರುವುದಕ್ಕೂ ಕಾರಣಗಳಾಗಿರುವುವು. ಉದಯಮಧ್ಯಾಹ್ನಗಳು ಪ್ರವೃತ್ತಿಗೂ ಅಸ್ತಮಯನೀಶಿಥಗಳು ನಿವೃತ್ತಿಗೂ ಕಾರಣಗಳೆಂದು ತಿಳಿಯಬೇಕು. ಮೇರುವಿನ ದಕ್ಷಿಣದಲ್ಲಿ ವಾಸಿಸುವವರಿಗೆ ಪೂರ್ವಸಂಚಾರವು ಉದಯ, ದಕ್ಷಿಣ ಸಂಚಾರ ಮಧ್ಯಾಹ್ನ, ಪಶ್ಚಿಮ ಸಂಚಾರ ಅಸ್ತಮಯ, ಉತ್ತರ ಸಂಚಾರ ಅರ್ಧರಾತ್ರಿ. ಪಶ್ಚಿಮದಲ್ಲಿರುವವರಿಗೆ ದಕ್ಷಿಣಸಂಚಾರದಿಂದ ಪ್ರಾರಂಭಿಸಿ, ಉತ್ತರದಲ್ಲಿರುವರಿಗೆ ಪಶ್ಚಿಮದಿಂದ ಪ್ರಾರಂಭಿಸಿ ಪೂರ್ವದಲ್ಲಿರುವವರಿಗೆ ಉತ್ತರದಿಂದ ಪ್ರಾರಂಭಿಸಿ ಇವುಗಳನ್ನು ವಿವೇಚಿಸಿ ತಿಳಿಯಬೇಕು. ॥೭॥

**ತತ್ರತ್ಯಾನಾಂ ದಿವಸಮಧ್ಯಗತ ಏವ ಸದಾಽದಿತ್ಯಸ್ತಪತಿ ಸವ್ಯೇನಾಚಲಂ ದಕ್ಷಿಣೇನ ಕರೋತಿ ॥೮॥**

**ತತ್ರತ್ಯಾನಾಂ** ಮೇರುಸಮೀಪದ ಇಲಾವೃತದಲ್ಲಿ ಇರುವವರಿಗೆ **ಸದಾ ದಿವಸ ಮಧ್ಯಗತಃ ಏವ** ಯಾವಾಗಲೂ ಮಧ್ಯಾಹ್ನದಲ್ಲಿ ಇದ್ದುಕೊಂಡೇ **ಆದಿತ್ಯಃ** ಸೂರ್ಯನು **ತಪತಿ** ತಾಪಕೊಡುವನು **ಸವ್ಯೇನ ಅಚಲಂ** ಮೇರು ಪರ್ವತದ ಎಡಕ್ಕೆ ಹೋಗುತ್ತ **ದಕ್ಷಿಣೇನ ಕರೋತಿ** ತನ್ನ ಬಲಕ್ಕೆ ಬೆಟ್ಟವಿರುವಂತೆ ಮಾಡುವನು. ಸೂರ್ಯನು ಮಕರ ಸಂಕ್ರಾಂತಿ ಗತಿಯಿಂದ ತನ್ನ ಎಡಕ್ಕಿರುವ ಮೇರುವನ್ನು ಜ್ಯೋತಿಶ್ಚಕ್ರದ ತಿರುಗುವಿಕೆಯಿಂದ ಪ್ರತಿದಿನವು ಬಲಕ್ಕೆ ಮಾಡಿಕೊಳ್ಳುವನು ಎಂದು ಯಾದವಾರ್ಯರು ಅರ್ಥಮಾಡಿರುವರು.

ಹಿಂದೆ ವಿಜಯಧ್ವಜರು ಹೇಳಿದ್ದು ಎಲ್ಲ ದ್ವೀಪಗಳಿಗೂ ಖಂಡಗಳಿಗೂ ಮೇರುವು ಉತ್ತರದಲ್ಲಿಯೇ ಇದೆ ಎಂಬ ನ್ಯಾಯದಿ(ಯುಕ್ತಿಯಿ)ಂದ ಮೇರುವಿಗೆ ದಿಕ್ಕುಗಳು ಸಮಾನವಾದರೂ ಪೂರ್ವಕ್ಕೆ ಅಭಿಮುಖವೆಂದಿಟ್ಟುಕೊಂಡು ಅದನ್ನು ಸುತ್ತುವ ಸೂರ್ಯನು ಎಡಕ್ಕೆ ಹೋಗುವನೆಂದು ಹೇಳಿದೆ. ಇದು ಹೊಂದುವರೀತಿಯನ್ನು ಮುಂದೆ ಹೇಳುತ್ತಾರೆ.॥೮॥

ಉದಯಾಸ್ತಮಯಗಳ ದೇಶನಿಯಮ ಹೇಳುವರು

**ಯತ್ರೋದೇತಿ ತತ್ಸಮಾನಸೂತ್ರನಿಪಾತೇ ನಿಮ್ಲೋಚತಿ ಯತ್ರ ಕ್ವ ಚ ನ ಸ್ಯಂದತೇ ತತ್ರ ಹ್ಯೆಷ ಸಮಾನಸೂತ್ರನಿಪಾತೇ ಪ್ರಸ್ವಾಪಯತಿ ತತ್ರ ಗತಂ ನ ಪಶ್ಯಂತಿ ಯೇ ತಮನು ಪಶ್ಯೇರನ್ ॥೯॥**

**ಯತ್ರ** ಯಾವ ಅಂಶದಲ್ಲಿ **ಉದೇತಿ** ಉದಯಸಂಜ್ಞೆಯನ್ನು ಹೊಂದುವ ಸಂಚಾರ ಹೊಂದುವನೋ **ತತ್ಸಮಾನಸೂತ್ರನಿಪಾತೇ** ಅದಕ್ಕೆ ಸರಿಯಾಗಿ ಎದುರು ಭಾಗದಲ್ಲಿ **ನಿಮ್ಲೋಚತಿ** ಅಸ್ತಮಾನ ಸಂಜ್ಞೆಯನ್ನು ಹೊಂದುವ ಗಮನವುಳ್ಳವನಾಗುವನು. ದಕ್ಷಿಣಾಯನದಲ್ಲಿ ಸ್ವಲ್ಪ ಸ್ವಲ್ಪ ದಕ್ಷಿಣದ ಕಡೆ ಪೂರ್ವ ಪಶ್ಚಿಮಗಳಲ್ಲಿ ಉದಯಾಸ್ತಮಾನಗಳಾಗುವುವು. ಉತ್ತರಾಯಣದಲ್ಲಿ ಸ್ವಲ್ಪಸ್ವಲ್ಪ ಉತ್ತರದ ಕಡೆ ಪೂರ್ವಪಶ್ಚಿಮಗಳಲ್ಲಿ ಉದಯಾಸ್ತಗಳು ಆಗುವುವು. (ಸೂತ್ರನಿಪಾತವೆಂದರೆ ಸರಳರೇಖೆಯಲ್ಲಿ ಎಂದು ತಾತ್ಪರ್ಯ.)

**ಯತ್ರ ಕ್ವ ಚ ನ ಸ್ಪಂದತೇ** ಹೀಗೆ ಉದಯವನ್ನು ಹೊಂದಿದ ಅಂಶಕ್ಕೆ ಸರಿಯಾದ ಪಶ್ಚಿಮದ ಅಂಶದಲ್ಲಿ ಅಸ್ತನಾಗುವುದನ್ನು ಬಿಟ್ಟು ಮತ್ತೆಲ್ಲಿಯೂ ಚಲಿಸುವುದಿಲ್ಲ.




**ಅಭಿತಪತಿ** ಉದಯ ಭಾಗದಿಂದ ಅಸ್ತಮಯ ಭಾಗದವರೆಗೆ ಇರುವ ಜನರಿಗೆ ಬೆಳಕನ್ನು ಕೊಡುವನು. **ತತ್ರ ಹ** ಉದಯಸ್ಥಾನದ ಎದುರಿಗೆ ಸರಿಯಾಗಿ ಅಸ್ತಮಾನ ಹೊಂದಿದ **ಏಷಃ** ಈ ಸೂರ್ಯನು '**ವಿಭಾವರೀ**' ಪಟ್ಟಣದ ದ್ವಾರದಲ್ಲಿದ್ದುಕೊಂಡು **ಸಮಾನಸೂತ್ರನಿಪಾತೇ** ಅದರ ಎದುರಿಗೆ ಮೇರುವಿನ ದಕ್ಷಿಣದಲ್ಲಿರುವ ಜನರಿಗೆ **ಪ್ರಸ್ವಾಪಯತಿ** ಮಧ್ಯರಾತ್ರಿಯನ್ನುಂಟುಮಾಡುವನು (ನಿದ್ರೆ ಬರುವಂತೆ ಮಾಡುವನು) **ಯೇ** ಮೇರುವಿನ ದಕ್ಷಿಣದಲ್ಲಿರುವ ಯಾವ ಜನರು **ತಂ** ಅಸ್ತಮಾನವಾಗುವವರೆಗೂ ಇದ್ದ ಸೂರ್ಯನನ್ನು **ಅನುಪಶ್ಯೇರನ್** ನೋಡುತ್ತಿದ್ದರೋ **ತೇ** ಆ ಜನರು **ತತ್ರ ಗತಂ** ವಿಭಾವರಿಯನ್ನು ಸೇರಿದ ಸೂರ್ಯನನ್ನು **ನ ಪಶ್ಯಂತಿ** ನೋಡುವುದಿಲ್ಲ. ಮೇರುವಿನ ಎತ್ತರದ ಕೋಡಗಲ್ಲಿನ ನೆರಳಿನಿಂದ ಮುಚ್ಚಿಹೋದ ಕಾರಣದಿಂದ ಕಾಣುವದಿಲ್ಲ. ಅಥವಾ ಅಸ್ತಮಯ ಭಾಗದಲ್ಲಿರುವ ಸೂರ್ಯನು ಅದರ ಎದುರಿಗೆ ಉದಯ ಪ್ರದೇಶದಲ್ಲಿರುವ ಜನರನ್ನು ನಿದ್ರೆಗೊಳಿಸುವನು. ಅಸ್ತದೇಶದಲ್ಲಿರುವವರನ್ನು ಉದಯಪ್ರದೇಶದ ಜನರು ಕಾಣುವುದಿಲ್ಲ. ದಕ್ಷಿಣದಲ್ಲಿರುವವರು ಅವನನ್ನು ನೋಡಬಹುದಾದರೂ ಆ ಕಾಲದಲ್ಲಿ ವಿಹಿತವಾದ ಧ್ಯಾನವನ್ನು ಮಾಡಲು ಉದ್ಯುಕ್ತರಾಗಿ ಆಗ ಅವನನ್ನು ಕಾಣುವುದಿಲ್ಲವೆಂದೂ ಅರ್ಥಮಾಡಿರುವರು. ಇದರಿಂದ **ನಿಮ್ಲೋಚನ** ಶಬ್ದಾರ್ಥವನ್ನು ತೋರಿಸಿದಂತಾಯಿತು. ||೯||

**ಯದಾ ಚೈಂದ್ರ್ಯಾಃ ಪುರ್ಯಾಃ ಪ್ರತಿಚಲತಿ ಪಂಚದಶಭಿರ್ಘಟಿಕಾಭಿ-ರ್ಯಾಮ್ಯಾಂ ಸಪಾದಕೋಟಿದ್ವಯಂ ಯೋಜನಾನಾಂ ಸಾರ್ಧದ್ವಾದಶಲಕ್ಷಾಣಿ ಸಾಧಿಕಾನಿ ಚೋಪಯಾತಿ ||೧೦||**

ಈ ಸೂರ್ಯನು **ಯದಾ ಚ** ಯಾವಾಗ **ಐಂದ್ರ್ಯಾಃ ಪುರ್ಯಾಃ** ಇಂದ್ರನ ಪಟ್ಟಣದಿಂದ **ಪಂಚದಶಭಿಃ ಘಟಿಕಾಭಿಃ** ಹದಿನೈದು ಘಳಿಗೆಗಳಲ್ಲಿ **ಯಾಮ್ಯಾಂ** ದಕ್ಷಿಣದಲ್ಲಿರುವ **ಸಂಯಮನೀ** ಪಟ್ಟಣಕ್ಕೆ **ಪ್ರತಿಚಲತಿ** ಹೋಗುವನೋ **ತದಾ** ಆಗ **ಯೋಜನಾನಾಂ** ಯೋಜನಗಳ **ಸಪಾದಕೋಟಿದ್ವಯಂ** ಎರಡೂಕಾಲು ಕೋಟಿಗಳನ್ನು **ಸಾಧಿಕಾನಿ** ಇಪ್ಪತ್ತೈದು ಸಾವಿರ ಹೆಚ್ಚಿಗೆ ಇರುವ **ಸಾರ್ಧದ್ವಾದಶಲಕ್ಷಾಣಿ ಚ** ಹನ್ನೆರಡೂವರೆ ಲಕ್ಷಗಳನ್ನು ಅಂದರೆ ಎರಡುಕೋಟಿ ಮೂವತ್ತೇಳುಲಕ್ಷ ಎಪ್ಪತ್ತೈದುಸಾವಿರ ಯೋಜನಗಳನ್ನು **ಉಪಯಾತಿ** ಸಂಚರಿಸುವನು. ಒಂದು ದಿನಕ್ಕೆ ಇದರ ನಾಲ್ಕರಷ್ಟು ಅಂದರೆ ಒಂಭತ್ತುಕೋಟಿ ಐವತ್ತೊಂದು ಲಕ್ಷ ಯೋಜನಗಳನ್ನು ಸಂಚರಿಸಿ ಮತ್ತೆ ಉದಯದ ಸ್ಥಳಕ್ಕೆ ಬರುವನು ಎಂದು ತಿಳಿಯಬೇಕು. ||೧೦||

**ಏವಂ ತತೋ ವಾರುಣೀಂ ಸೌಮ್ಯಾಮೈಂದ್ರೀಂ ಚ ಪುನಃ ಪುನಸ್ತಥಾऽನ್ಯೇ ಚ ಗ್ರಹಾಃ ಸೋಮಾದಯೋ ನಕ್ಷತ್ರೈಃ ಸಹ ಜ್ಯೋತಿಶ್ಚಕ್ರೇಣ ಸಮಭ್ಯುದ್ಯಂತಿ ಸಹ ಚಾಭಿನಿಮ್ಲೋಚಂತಿ ||೧೧||**

**ಏವಂ** ಹೀಗೆಯೇ **ತತಃ** ಯಮನಪಟ್ಟಣದಿಂದ **ವಾರುಣೀಂ** ವರುಣನ ಪಟ್ಟಣವನ್ನೂ ಅದರಿಂದ **ಸೌಮ್ಯಾಂ** ಸೋಮನ ಪಟ್ಟಣವನ್ನೂ ಸೇರುವನು. **ಪುನಃ ಪುನಃ** ಪ್ರತಿದಿನವೂ **ಐಂದ್ರೀಂ ಚ** ಮತ್ತೆ ಇಂದ್ರಪಟ್ಟಣ ಮುಂತಾದುವನ್ನು ಸೇರುತ್ತಲೇ ಇರುವನು **ತಥಾ** ಇದೇ ರೀತಿಯಲ್ಲಿ **ಸೋಮಾದಯಃ** ಚಂದ್ರನೇ ಮೊದಲಾದ **ಅನ್ಯೇ ಗ್ರಹಾಃ ಚ** ಇತರ ಗ್ರಹಗಳೂ **ನಕ್ಷತ್ರೈಸ್ಸಹ** ಅಶ್ವಿನೀ ಮೊದಲಾದ ನಕ್ಷತ್ರಗಳೊಡನೆ **ಜ್ಯೋತಿಶ್ಚಕ್ರೇಣ** ಪ್ರಕಾಶ ಸಮೂಹದೊಂದಿಗೆ **ಸಮಭ್ಯುದ್ಯಂತಿ** ಉದಯವನ್ನು ಹೊಂದುವವು **ಸಹ ಚ** ಅವುಗಳೊಂದಿಗೆ **ಅಭಿನಿಮ್ಲೋಚಂತಿ** ಅಸ್ತಂಗತವಾಗುವುವು. ||೧೧||

**ಏವಂ ಮುಹೂರ್ತೇನ ಚತುಸ್ತ್ರಿಂಶಲ್ಲಕ್ಷಯೋಜನಾನ್ಯಷ್ಟಶತಾಧಿಕಾನಿ ಸೌರೋ ರಥಸ್ತ್ರಯೀಮಯೋಽಸೌ ಚತಸೃಷು ಪರಿವರ್ತತೇ ಪುರೀಷು ||೧೨||**

**ಏವಂ** ಹೀಗೆ **ಅಸೌ** ಈ **ತ್ರಯೀಮಯಃ** ವೇದಪ್ರಧಾನವಾದ ಅಂದರೆ ವೇದೋದಿತವಾದ **ಸೌರಃ** ಸೂರ್ಯನ **ರಥಃ** ರಥವು **ಮುಹೂರ್ತೇನ** ಎರಡು ಘಳಿಗೆಗಳಲ್ಲಿ **ಅಷ್ಟಶತಾಧಿಕಾನಿ** ಎಂಟುನೂರು ಹೆಚ್ಚಿಗೆ ಇರುವ **ಚತುಸ್ತ್ರಿಂಶಲ್ಲಕ್ಷ-ಯೋಜನಾನಿ** ಮೂವತ್ತುನಾಲ್ಕು ಲಕ್ಷಯೋಜನಗಳನ್ನು ಅತಿಕ್ರಮಿಸುತ್ತ **ಚತಸೃಷು ಪುರೀಷು** ದೇವಧಾನೀ, ಸಂಯಮನೀ, ನಿಮ್ಲೋಚನೀ, ವಿಭಾವರಿಗಳೆಂಬ ನಾಲ್ಕು ಪಟ್ಟಣಗಳಲ್ಲಿ **ಪರಿವರ್ತತೇ** ಸುತ್ತುತ್ತಿರುವುದು. ||೧೨||

(ಯದ್ಯಪಿ ಸೂರ್ಯನಿಗೂ ನಕ್ಷತ್ರಗಳೊಡನೆ ಉದಯಾಸ್ತಗಳಿವೆ ಆದರೂ ಆ ಸಾಹಿತ್ಯ ಕಾಣದಿರುವುದರಿಂದ ಚಂದ್ರಾದಿಗಳಿಗೆ ಮಾತ್ರ ನಕ್ಷತ್ರ ಸಾಹಿತ್ಯ ಹೇಳಿದೆ ಎಂದು ತಿಳಿಯಬೇಕು).

**ಯಸ್ಯೈಕಂ ಚಕ್ರಂ ದ್ವಾದಶಾರಂ ಷಣ್ನೇಮಿ ತ್ರಿನಾಭಿ ಸ್ವಯಂ ಸಂವತ್ಸರಾತ್ಮಕಂ ಸಮಾಮನಂತಿ ತಸ್ಯಾಕ್ಷೋ ಮೇರೋರ್ಮೂರ್ಧನಿ ಕೃತೋ ಮಾನಸೋತ್ತರೇ ಕೃತೇತರಭಾಗೋ ಯತ್ರ ಪ್ರೋತಂ ರವಿರಥಚಕ್ರಂ ತೈಲಯಂತ್ರವನ್ಮಾನ-ಸೋತ್ತರೇ ಗಿರೌ ಪರಿಭ್ರಮತಿ ||೧೩||**




**ಯಸ್ಯ** ಯಾವ ಸೂರ್ಯ ರಥದ **ಏಕಂ ಚಕ್ರಂ** ಒಂದು ಚಕ್ರವು **ದ್ವಾದಶಾರಂ** ದ್ವಾದಶಮಾಸಾಭಿಮಾನಿದೇವತೆಗಳಿಂದ ಅಭಿಮನ್ಯಮಾನವಾದ ಹನ್ನೆರಡು ಅರಗಳಿಂದ (ಸಲಾಕಿಗಳಿಂದ) ಕೂಡಿದ **ಷಣ್ನೇಮಿ** ಆರು ಋತ್ವಭಿಮಾನಿದೇವತೆಗಳಿಂದ ಅಭಿಮನ್ಯಮಾನವಾದ ರಥಚಕ್ರದ ಅಂಚುಗಳಿಂದ ಕೂಡಿದ **ತ್ರಿನಾಭಿ** ಮೂರು ಚಾತುರ್ಮಾಸ್ಯಾಭಿಮಾನಿದೇವತೆಗಳಿಂದ ಅಭಿಮನ್ಯಮಾನವಾದ ಚಕ್ರದ ತೂಬುಗಳುಳ್ಳ **ಸ್ವಯಂ ಸಂವತ್ಸರಾತ್ಮಕಂ** ಸ್ವತಃ ಸಂವತ್ಸರಾಭಿಮಾನಿದೇವತೆಯಿಂದ ಅಭಿಮನ್ಯಮಾನವಾದುದೆಂದು **ಸಮಾಮನಂತಿ** ಹೇಳುವರು **ತಸ್ಯ** ಆ ಸೂರ್ಯನ ರಥದ **ಅಕ್ಷಃ** ಅಚ್ಚು (ಅಚ್ಚಿನ ಒಂದು ಭಾಗವು) **ಮೇರೋಃ** ಮೇರುಪರ್ವತದ **ಮೂರ್ಧನಿ** ಶಿಖರದಮೇಲೆ **ಕೃತಃ** ಇಡಲ್ಪಟ್ಟಿದೆ **ಮಾನಸೋತ್ತರೇ** ಮಾನಸೋತ್ತರಪರ್ವತದಲ್ಲಿ **ಕೃತೇತರಭಾಗಃ** ಇನ್ನೊಂದು ಭಾಗವು ಇಡಲ್ಪಟ್ಟಿದ್ದಾಗಿ **ಯತ್ರ** ಎಲ್ಲಿ **ಪ್ರೋತಂ** ಇಡಲ್ಪಟ್ಟ **ರವಿರಥಚಕ್ರಂ** ಸೂರ್ಯನ ರಥಚಕ್ರವು **ತೈಲಯಂತ್ರವತ್** ಗಾಣದಂತೆ **ಮಾನಸೋತ್ತರೇ** ಮಾನಸೋತ್ತರಪರ್ವತದ ಮೇಲೆ **ಪರಿಭ್ರಮತಿ** ತಿರುಗುತ್ತದೆ.

**ತಸ್ಮಿನ್ನಕ್ಷೇ ಕೃತಮೂಲೋ ದ್ವಿತೀಯೋಽಕ್ಷಸ್ತುರೀಯಮಾನೇನ ಸಂಮಿತಃ ।।೧೪।।**

**ತಸ್ಮಿನ್ ಅಕ್ಷೇ** ಯಾವ ಮಾನಸೋತ್ತರದ ಒಂದು ಭಾಗದಲ್ಲಿ ಜೋಡಿಸಲ್ಪಟ್ಟ ಸೂರ್ಯ ರಥಚಕ್ರವು ತಿರುಗುವುದೋ ಆ ಉದ್ದವಾದ ಅಚ್ಚಿನಲ್ಲಿ ಚಕ್ರವನ್ನು ಹೊಂದಿರುವ ಭಾಗದಲ್ಲಿ **ಕೃತಮೂಲಃ** ಕೆಳಭಾಗವು ಇಡಲ್ಪಟ್ಟಿರುವ **ತುರೀಯಮಾನೇನ ಸಂಮಿತಃ** ಈ ಉದ್ದ ಅಚ್ಚಿನ ನಾಲ್ಕನೇ ಒಂದರಷ್ಟು ಅಂದರೆ ಐವತ್ತೊಂದು ಲಕ್ಷ ಎಪ್ಪತ್ತೈದು ಸಾವಿರ ಯೋಜನ ಉದ್ದವಿರುವ **ದ್ವಿತಿಯಃ ಅಕ್ಷಃ** ಎರಡನೆಯ ಸಣ್ಣ ಅಚ್ಚು **ಅಸ್ತಿ** ಇರುವುದು. ।।೧೪।।

**ತೈಲಯಂತ್ರಾಕ್ಷವದ್ಧ್ರುವೇ ಕೃತೋಪರಿಭಾಗೋ ರಥನೀಡಸ್ತು ಷಟ್ತ್ರಿಂಶಲ್ಲಕ್ಷ-ಯೋಜನಾಯತಸ್ತುರೀಯಭಾಗವಿಶಾಲಃ ತಾವಾನ್ ರವಿರಥಯುಗೋ ಯತ್ರ ಹಯಾಶ್ಛಂದೋನಾಮಾನಃ ಸಪ್ತಾರುಣಯೋಜಿತಾ ವಹಂತಿ ದೇವಮಾದಿತ್ಯಮ್ ।।೧೫।।**

**ತೈಲಯಂತ್ರಾಕ್ಷವತ್** ಗಾಣದ ಅಚ್ಚಿನಂತೆ **ಧ್ರುವೇ** ಧ್ರುವಮಂಡಲದಲ್ಲಿ **ಕೃತೋಪರಿಭಾಗಃ** ಮೇಲ್ಭಾಗವುಳ್ಳದ್ದಾಗಿ ಇರುವುದು. ಇದು ವಾಯುಪಾಶದಿಂದ ಅಲ್ಲಿ

ಬದ್ಧವಾಗಿರುವುದು **ರಥನೀಡಃ ತು** ರಥದಲ್ಲಿ ಸೂರ್ಯನು ಕೂಡುವ ಪೀಠವು **ಷಟ್‌ತ್ರಿಂಶಲ್ಲಕ್ಷಯೋಜನಾಯತಃ** ಮೂವತ್ತಾರು ಲಕ್ಷ ಯೋಜನ ಎತ್ತರವಿರುವುದು **ತುರೀಯಭಾಗವಿಶಾಲಃ** ಒಂಭತ್ತು ಲಕ್ಷಯೋಜನ ಅಗಲವಿರುವುದು **ತಾವಾನ್** ಒಂಭತ್ತು ಲಕ್ಷ ಯೋಜನಗಳು ಉದ್ದವಿರುವ **ರವಿರಥಯುಗಃ** ಸೂರ್ಯರಥದ ನಗವಿರುವುದು **ಯತ್ರ** ಯಾವ ನಗದಲ್ಲಿ **ಅರುಣಯೋಜಿತಾಃ** ಅರುಣನಿಂದ ಹೊಂದಲ್ಪಟ್ಟ **ಛಂದೋನಾಮಾನಃ** ಗಾಯತ್ರಿ ಮುಂತಾದ ಛಂದಸ್ಸಿನ ಹೆಸರಿನ **ಸಪ್ತಹಯಾ** ಏಳು ಕುದುರೆಗಳು **ಆದಿತ್ಯಂ ದೇವಂ** ಸೂರ್ಯದೇವನನ್ನು **ವಹಂತಿ** ಹೊತ್ತಿರುವುವು. ।।೧೫।।

'**ಏಕೋಽಶ್ವೋ ವಹತಿ ಸಪ್ತನಾಮಾ**' ಎಂದು ಶ್ರುತಿಯಿರುವುದರಿಂದ ಒಂದೇ ಕುದುರೆ ಏಳು ವಿಭಾಗವಾಗಿ ಏಳು ಹೆಸರಿನಿಂದ ವಹಿಸುವುದು ಎಂದು ತಿಳಿಯಬೇಕು. ।।೧೫।।

**ಪುರಸ್ತಾತ್ ಸವಿತುರರುಣಃ ಪಶ್ಚಾನ್ನಿಯುಕ್ತ ಸೌತ್ಯೇ ಕರ್ಮಣಿ ಕಿಲಾಸ್ತೇ ।।೧೬।।**

**ಸವಿತುಃ** ಸೂರ್ಯನ **ಪುರಸ್ತಾತ್** ಮುಂಭಾಗದಲ್ಲಿ **ಪಶ್ಚಾತ್** ಕುದುರೆಗಳ ಹಿಂಭಾಗದಲ್ಲಿ ವಿಮುಖವಾಗಿ (ವಾಲಖಿಲ್ಯರಂತೆ ಸಮ್ಮುಖವಲ್ಲವೆಂದರ್ಥ) **ಅರುಣಃ** ಅರುಣನು **ಸೌತ್ಯೇ ಕರ್ಮಣಿ ನಿಯುಕ್ತ ಆಸ್ತೇ ಕಿಲ** ಸಾರಥಿಯ ಕೆಲಸದಲ್ಲಿ ನಿಯೋಜಿಸಲ್ಪಟ್ಟಿರುವನಷ್ಟೇ. ।।೧೬।।

**ತಥಾ ವಾಲಖಿಲ್ಯಾ ಋಷಯೋಽಂಗುಷ್ಠಪರ್ವಮಾತ್ರಾಃ ಷಷ್ಟಿಸಹಸ್ರಾಣಿ ಪುರತಃ ಸೂರ್ಯಂ ಸೂಕ್ತವಾಕಾಯ ನಿಯುಕ್ತಾಃ ಸಂಸ್ತುವಂತಿ ।।೧೭।।**

**ತಥಾ** ಹಾಗೆಯೇ **ಸೂರ್ಯಂ ಪುರತಃ** ಸೂರ್ಯನ ಎದುರಿನಲ್ಲಿ **ಅಭಿಮುಖವಾಗಿ ಷಷ್ಟಿಸಹಸ್ರಾಣಿ** ಅರವತ್ತು ಸಾವಿರ **ಅಂಗುಷ್ಠಪರ್ವಮಾತ್ರಾಃ** ಹೆಬ್ಬೆರಳಿನ ಗೆಣ್ಣಿನ ಪರಿಮಾಣದ **ವಾಲಖಿಲ್ಯಾಃ ಋಷಯಃ** ವಾಲಖಿಲ್ಯರೆಂಬ ಋಷಿಗಳು **ಸೂಕ್ತವಾಕಾಯ** ಸೂರ್ಯನನ್ನು (ಅಮುಖ್ಯವಾಗಿ) ಪ್ರತಿಪಾದಿಸುವ ಸೂಕ್ತಗಳಿಂದ **ನಿಯುಕ್ತಾಃ (ಸಂತಃ) ಸಂಸ್ತುವಂತಿ** ನಿಯೋಜಿತರಾಗಿ ಸ್ತೋತ್ರಮಾಡುವರು. ।।೧೭।।




**ತಥಾಽನ್ಯೇ ಚ ಋಷಯೋ ಗಂಧರ್ವಾಪ್ಸರಸೋ ನಾಗಾ ಗ್ರಾಮಣ್ಯೋ ಯಾತುಧಾನಾ ದೇವಾ ಇತ್ಯೇಕೈಕಶೋ ಗಣಾಃ ಸಪ್ತ ಚೈಕೈಕಶೋ ರಥಸ್ಥಾ ಮಾಸಿ ಮಾಸಿ ಭಗವಂತಂ ಸೂರ್ಯಮಾತ್ಮಾನಂ ನಾನಾನಾಮಾನಂ ಪೃಥಙ್‌ನಾಮಾನಃ ಪೃಥಕ್ಕರ್ಮಭಿರ್ದ್ವಾದಶ ಉಪಾಸ್ತೇ ॥೧೮॥**

**ತಥಾ** ಹಾಗೆಯೇ **ಅನ್ಯೇ ಚ** ಬೇರೆ **ಋಷಯಃ** ಋಷಿಗಳು **ಗಂಧರ್ವಾಪ್ಸರಸಃ** ಗಂಧರ್ವರು ಅಪ್ಸರೆಯರೂ **ನಾಗಾಃ** ನಾಗಗಳು **ಗ್ರಾಮಣ್ಯಃ** ಬಡಗಿಗಳು (**ಗ್ರಾಮಾಧಿಪೇ ತಕ್ಷಣಿ ಚ ಗ್ರಾಮಣೀಃ ಪರಿಕೀರ್ತಿತಾ**) ಎಂದು ಅಭಿಧಾನವಿದೆ. **ಯಾತುಧಾನಾಃ** ಯಾತುಧಾನರು **ದೇವಾಃ** ದೇವತೆಗಳು **ಇತಿ ಸಪ್ತ ಚ** ಈ ಏಳು ಬಗೆಯವರೂ **ಏಕೈಕಶಃ ಗಣಾಃ** ಒಂದೊಂದು ಗುಂಪಾಗಿ **ಪೃಥಙ್‌ನಾಮಾನಃ** ಬೇರೆ ಬೇರೆ ಹೆಸರುಳ್ಳ **ದ್ವಾದಶ** ಹನ್ನೆರಡು **ಗಣಾಃ** ಗಣಗಳು **ಮಾಸಿ ಮಾಸಿ** ಚೈತ್ರ ಮುಂತಾದ ತಿಂಗಳುಗಳಲ್ಲಿ **ಏಕೈಕಶಃ** ಒಂದೊಂದು ಗಣವು **ರಥಸ್ಥಾಃ ಸಂತಃ** ರಥದಲ್ಲಿದ್ದುಕೊಂಡು **ಪೃಥಕ್ ಕರ್ಮಭಿಃ** ಬೇರೆ ಬೇರೆ ತಮ್ಮ ತಮ್ಮ ಕೆಲಸಗಳ ಮೂಲಕ **ನಾನಾನಾಮಾನಂ** ಆ ತಿಂಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಸಿಕೊಳ್ಳುವ **ಆತ್ಮಾನಂ** ಸೂರ್ಯಾಂತರ್ಯಾಮಿಯಾದ **ಭಗವಂತಂ** ಸೂರ್ಯನಾಮಕ ಪರಮಾತ್ಮನನ್ನು **ಉಪಾಸತೇ** ಸೇವಿಸುವರು (ಇದರ ವಿವರವು ವಿಷ್ಣುಪುರಾಣದಲ್ಲಿ ಬರುವುದು). ॥೧೮॥

**ಲಕ್ಷೋತ್ತರಸಾರ್ಧನವಕೋಟಿಯೋಜನಪರಿಮಂಡಲಭೂವಲಯಸ್ಯ ಕ್ಷಣೇನ ಗವ್ಯೂತ್ಯುತ್ತರದ್ವಿಸಹಸ್ರಯೋಜನಾನಿ ಸ ಭುಂಕ್ತೇ ॥೧೯॥**

**ಸಃ** ಆ ಸೂರ್ಯದೇವನು **ಕ್ಷಣೇನ** ಒಂದು ಕ್ಷಣದಲ್ಲಿ **ಲಕ್ಷೋತ್ತರಸಾರ್ಧನವಕೋಟಿಯೋಜನಪರಿಮಂಡಲಭೂವಲಯಸ್ಯ** ಒಂಭತ್ತು ಕೋಟಿ ಐವತ್ತೊಂದು ಲಕ್ಷಯೋಜನ ಸುತ್ತಳತೆಯುಳ್ಳ ಭೂಮಂಡಲದ **ಗವ್ಯೂತ್ಯುತ್ತರ** ಎರಡು ಹರದಾರಿ(ಕ್ರೋಶ) ಹೆಚ್ಚಾದ **ದ್ವಿಸಹಸ್ರಯೋಜನಾನಿ** ಎರಡುಸಾವಿರ ಯೋಜನಗಳನ್ನು **ಭುಂಕ್ತೇ** ಅನುಭವಿಸುವನು, ಸಂಚರಿಸಿ ಮುಗಿಸುವನು. ॥೧೯॥

**॥ ಇಲ್ಲಿಗೆ ೨೧ನೇ ಅಧ್ಯಾಯವು ಮುಗಿಯಿತು ॥**

★★★

## ಇಪ್ಪತ್ತೊಂದನೇ ಅಧ್ಯಾಯದ ಸಾರ

**'ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಂರವೀವಿಪತ್', 'ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ'** ಮುಂತಾದ ಶ್ರುತಿಗಳು ಶ್ರೀಹರಿಯನ್ನೇ ಅಖಂಡಸ್ವಾಮಿಯೆಂದು ತಿಳಿಸುವುವು. ಅವನ ಆಜ್ಞೆಯಿಂದಲೇ ಸೂರ್ಯ ಮೊದಲಾದ ದೇವತೆಗಳು ತಮ್ಮ ತಮ್ಮ ಅಧಿಕಾರಗಳಲ್ಲಿ ಪ್ರವರ್ತಿಸುವರು. ಈ ದೇವತೆಗಳನ್ನು ಜನರು ತಮ್ಮ ಇಷ್ಟ ದೇವತೆಗಳೆಂದು ಸೇವಿಸುವರು. ಈ ದೇವತೆಗಳೆಲ್ಲರು ಶ್ರೀಹರಿಯ ವಿಶೇಷ ಸನ್ನಿಧಾನಕ್ಕೆ ಸ್ಥಾನವಾಗಿರುವರು. ಇವರ ಸ್ವರೂಪಜ್ಞಾನವು ಶ್ರೀಹರಿಯ ಜ್ಞಾನಕ್ಕೆ ಉಪಯುಕ್ತವಾದುದೆಂಬ ಅಭಿಪ್ರಾಯದಿಂದ ಈ ಅಧ್ಯಾಯದಲ್ಲಿ ಇವರ ಸ್ವರೂಪವನ್ನು ನಿರೂಪಿಸುವರು.

ಅದರಲ್ಲಿ ಹಿಂದಿನ ಅಧ್ಯಾಯದ ವಿಷಯವನ್ನು ಅನುವಾದ ಮಾಡುವ ಮೂಲಕ ಈ ಅತಿದೇಶ ಮಾಡಿ ದ್ಯುಲೋಕ ಅಂತರಿಕ್ಷಲೋಕಗಳ ಪ್ರಮಾಣಾದಿಗಳನ್ನು ತಿಳಿಸುವರು.

ಬ್ರಹ್ಮಾಂಡದ ವಿಸ್ತಾರವಿಶೇಷವು ಐವತ್ತುಕೋಟಿ ಯೋಜನ ಪರಿಮಿತವಾದುದೆಂದು ಪ್ರಮಾಣದಿಂದಲೂ ಲಕ್ಷಣದಿಂದಲೂ ನನ್ನಿಂದ ವಿವರಿಸಲ್ಪಟ್ಟಿರುವುದು. ಇದರಿಂದಲೇ ಸ್ವರ್ಗವಿಸ್ತಾರ ಪ್ರಮಾಣವನ್ನು ಅವುಗಳ ವಿಸ್ತಾರ ಬಲ್ಲವರು ಉಪದೇಶಿಸುವರು. ಹೇಗೆ ರಾಜಮಾಷ (ಅಲಸಂದ) ಮೊದಲಾದ ಎರಡು ಬೇಳೆಯಾಗುವ ಧಾನ್ಯಗಳ ಒಂದು ಬೇಳೆಯ ಅಳತೆಯನ್ನು ಹೇಳುವುದರಿಂದ ಮತ್ತೊಂದು ಬೇಳೆಯ ಅಳತೆಯು ಹೇಳಿದಂತೆ ಆಗುವುದೋ ತಥಾ ಹಾಗೆ. ಎರಡು ಬೇಳೆಗಳು ಎಲ್ಲ ರೀತಿಯಿಂದ ಪರಿಮಾಣದಲ್ಲಿ ಹೇಗೆ ಸಮಾನವೋ ಹಾಗೆ ಭೂವಲಯ, ಸ್ವರ್ಗ, ಅಂತರಿಕ್ಷ




ಎಲ್ಲದರ ಪರಿಮಾಣ ಸಮಾನವೆಂದರ್ಥ. ಸೂರ್ಯನು ಅಂತರಿಕ್ಷದ ಮಧ್ಯದಲ್ಲಿರುವನು. ಆ ಅಂತರಿಕ್ಷವು ದ್ಯುಲೋಕ ಭೂಲೋಕಗಳ ಮಧ್ಯದಲ್ಲಿ ಸ್ಥಾಪಿತವಾಗಿರುವುದಾಗಿ ಅವುಗಳಿಗೆ ಸಮಾನ ವಿಸ್ತಾರವುಳ್ಳದ್ದಾಗಿದೆ. **ಭುವಃ ಸ್ವರ್ಗಶ್ಚ ಕೋಟ್ಯೈವ ಯೋಜನಾನಾಂ ಪ್ರವಿಸ್ತೃತಾ** ಎಂಬ ಭಾರತತಾತ್ಪರ್ಯನಿರ್ಣಯದ ಮಾತಿಗೆ ಅಲ್ಲಿರುವವರ ಭೋಗಸ್ಥಾನವು ಕೋಟಿಯೋಜನ ವಿಸ್ತಾರವೆಂದು ಅಭಿಪ್ರಾಯ. ಆದ್ದರಿಂದ ನಿರ್ಣಯ ವಿರೋಧವಿಲ್ಲ .

ಮುಂದೆ ಅಂತರಿಕ್ಷಲೋಕದ ಲಕ್ಷಣ ಸೂಚಿಸಲು ಅಲ್ಲಿರುವ ಸೂರ್ಯನ ಮಾಹಾತ್ಮ್ಯವನ್ನು ಸಂಕ್ಷೇಪವಾಗಿ ಹೇಳಿದ್ದನ್ನು ವಿಸ್ತಾರಮಾಡುವರು. ಅಂತರಿಕ್ಷಲೋಕದ ಮಧ್ಯದಲ್ಲಿರುವ ಜ್ವಲಿಸುವ ಜೋತಿಸ್ಸುಗಳ ಸ್ವಾಮಿಯಾದ ಪೂಜ್ಯನಾದ ಸೂರ್ಯದೇವನು ಶ್ರೀಹರಿಯ ಕಾಂತಿಯಿಂದ ತಮ್ಮ ಬೆಳಕಿನಿಂದ ಬಿಸಿಲಿನಿಂದ ಮೂರು ಲೋಕಗಳನ್ನು ಪ್ರಕಾಶಗೊಳಿಸುವನು. ಇಂತಹ ಸೂರ್ಯನಿರುವುದೇ ಅಂತರಿಕ್ಷದ ಲಕ್ಷಣ. ಈ ಸೂರ್ಯದೇವನು (ಸೂರ್ಯನಾಮಕ ಶ್ರೀಹರಿಯು) ಉತ್ತರಾಯಣ ದಕ್ಷಿಣಾಯನ ವೈಷುವ ಎಂದು ಹೆಸರುಳ್ಳ ಮಂದವಾದ, ಶೀಘ್ರವಾದ, ಸಮವಾದ(ಮಂದವೂ ತ್ವರಿತವೂ ಅಲ್ಲದ) ಗತಿಗಳಿಂದ ಎತ್ತರದ, ಇಳಿಯುವ ಮತ್ತು ಸಮಸ್ಥಳಗಳಲ್ಲಿ ಮಕರ ಮುಂತಾದ ರಾಶಿಗಳಲ್ಲಿ ಆ ಆ ಕಾಲವನ್ನು ಮೀರದೆ ಆ ಆ ನಕ್ಷತ್ರಗಳಿಂದ ಉದಯ ಹೊಂದುವವನಾಗಿ ಅಂದರೆ ಆರೋಹಣವೆಂದು ಕರೆಸುವ ಮಕರದಿಂದ ಹಿಡಿದು ಮಿಥುನ ಪರ್ಯಂತ ರಾಶಿಗಳಲ್ಲಿ ಆಯಾ ಕಾಲದಲ್ಲಿ ಉದಯವನ್ನು ಹೊಂದಿ ಉತ್ತರಾಯಣವೆಂಬ ದೀರ್ಘಗತಿಯಿಂದ ಹಗಲುಗಳನ್ನು ದೀರ್ಘಗಳನ್ನಾಗಿಯೂ ಅವರೋಹಣ ಸಂಜ್ಞೆಯ ಕರ್ಕಾಟಕದಿಂದ ಹಿಡಿದು ಧನುಸ್ಸಿನವರೆಗಿನ ರಾಶಿಗಳಲ್ಲಿ ಆಯಾ ನಕ್ಷತ್ರಗಳಿಂದ ಆಯಾ ಕಾಲದಲ್ಲಿ ಉದಯವನ್ನು ಹೊಂದಿ ದಕ್ಷಿಣಾಯನವೆಂಬ ಹ್ರಸ್ವ ಗತಿಯಿಂದ (ಶೀಘ್ರಗತಿ) ಹಗಲುಗಳನ್ನು ಹ್ರಸ್ವವನ್ನಾಗಿಯೂ ವೈಷುವ ಸಂಜ್ಞೆಯ ಮೇಷ ತುಲಾಗಳಲ್ಲಿ ಆ ಆ ನಕ್ಷತ್ರಗಳಿಂದ ಆ ಆ ಕಾಲದಲ್ಲಿ ಉದಯವನ್ನು ಹೊಂದಿ ಸಮಗತಿಯಿಂದ ಅಹೋರಾತ್ರಿಗಳನ್ನು ಸಮಗಳನ್ನಾಗಿಯೂ ಮಾಡುವನು. (ದೀರ್ಘವೆಂದರೆ ಮೂವತ್ತು ಘಳಿಗೆಗಳಿಗಿಂತ ಹೆಚ್ಚಿನಕಾಲ. ಹ್ರಸ್ವವೆಂದರೆ ಅದಕ್ಕಿಂತ ಕಡಿಮೆ ಕಾಲ. ಸಮವೆಂದರೆ ಮೂವತ್ತು ಘಳಿಗೆಗಳ ಕಾಲ).

ಯಾವಾಗ ಮೇಷ ಅಥವಾ ತುಲಾರಾಶಿಗಳಲ್ಲಿ ಸೂರ್ಯನಿರುವನೋ ಆಗ ಹಗಲು ರಾತ್ರಿಗಳು ಸಮಾನವಾಗಿ ಅಂದರೆ ಮೂವತ್ತು ಘಳಿಗೆಗಳಾಗಿ ಇರುವವು.

ಯಾವಾಗ ವೃಷಭ ಮುಂತಾದ ಐದು ರಾಶಿಗಳಲ್ಲಿ ಸಂಚರಿಸುತ್ತಿರುವನೋ ಆಗ ಹಗಲುಗಳೇ ಹೆಚ್ಚಾಗುವವು ಮತ್ತು ಕಡಿಮೆಯಾಗುವವು. ರಾತ್ರಿಗಳೂ ಕಡಿಮೆಯಾಗುವವು ಹೆಚ್ಚೂ ಆಗುವವು. ವೃದ್ಧಿಹ್ರಾಸಗಳ ಪರಿಮಾಣವೆಷ್ಟೆಂದು ಹೇಳುವರು ತಿಂಗಳೊಂದಕ್ಕೆ ಒಂದೊಂದು ಘಳಿಗೆ (ಹೆಚ್ಚು ಕಡಿಮೆಯಾಗುವಂತೆ) ವೃದ್ಧಿಯಾಗುವುದು ಅದರಂತೆಯೇ ಹ್ರಾಸವಾಗುವುದು ಎಂದು ತಿಳಿಯಬೇಕು. ಇಲ್ಲಿ ಹೇಳಿದ ಒಂದೊಂದು ಘಳಿಗೆ ಎಂದರೆ ಅಷ್ಟೇ ಎಂದು ನಿಯಮವಲ್ಲ. ಸ್ಥೂಲದೃಷ್ಟಿಯಿಂದ ಹೇಳಿದ್ದು. ಪ್ರತಿತಿಂಗಳು ವ್ಯತ್ಯಾಸವಿರುವುದು. ಮೂರು ನಾಲ್ಕು ಘಳಿಗೆಗಳ ವೃದ್ಧಿಹ್ರಾಸಗಳು ಪ್ರಮಾಣಸಿದ್ಧವಾಗಿದೆ. (ಇಲ್ಲಿ ವೃದ್ಧಿಯೆಂದರೆ ರಾತ್ರಿಗಿಂತ ಹೆಚ್ಚು ಎಂದರ್ಥಮಾಡಿಕೊಂಡಲ್ಲಿ ಕಡಿಮೆಯೂ ಆಗುವವು ಎಂದು ಸೇರಿಸಿಕೊಳ್ಳಬೇಕಿಲ್ಲ. ಕರ್ಕಾಟಕ ಮಾಸದಿಂದ ಹಗಲಿನ ಪರಿಮಾಣವು ಕಡಿಮೆಯಾಗುತ್ತ ಹೋದರೂ ರಾತ್ರಿಗಿಂತ ಹೆಚ್ಚಾಗಿಯೇ ಇರುವುದು ರಾತ್ರಿಯು ವೃದ್ಧಿಯಾಗುತ್ತಾ ಬಂದರೂ ಹಗಲಿಗಿಂತ ಕಡಿಮೆಯಾದ್ದರಿಂದ ಹ್ರಾಸವಾಗುವುದೆಂದು ಹೇಳಿದ್ದು ) ಹಾಗಾದರೆ ಒಂದು ದಿವಸಕ್ಕೆ ಮೂವತ್ತೇ ಮುಹೂರ್ತಗಳೆಂಬುದು ಹೇಗೆ ಎಂದರೆ ಹಗಲು ರಾತ್ರಿಗಳು ಹೆಚ್ಚು ಕಡಿಮೆಯಾದರೂ ಮೂವತ್ತು ಮುಹೂರ್ತವೆಂಬ ದಿವಸವು ಎಲ್ಲ ಕಾಲದಲ್ಲಿ ಸಮವಾಗಿಯೇ ಇರುವುದು. ಇದು ಹೇಗೆ ಎಂದರೆ ಹಗಲುಗಳು ಮೂವತ್ತು ಘಳಿಗೆಗಳಿಗಿಂತ ಹೆಚ್ಚಾಗುತ್ತ ಹೋಗುಚಿಜವು. ಅಷ್ಟೇ ರಾತ್ರಿಗಳು ಮೂವತ್ತು ಘಳಿಗೆಗಳಿಗಿಂತ ಕಡಿಮೆಯಾಗುತ್ತ ಹೋಗುಚಿಜವು. ಹಗಲು ಕಡಿಮೆಯಾದಂತೆಲ್ಲ ಅಷ್ಟೇ ರಾತ್ರಿಗಳು ಹೆಚ್ಚುತ್ತ ಹೋಗುವುವು. ಇವೆರಡರ ಘಳಿಗೆಗಳನ್ನು ಒಟ್ಟಿಗೆ ಕೂಡಿಸಿದರೆ ಹಗಲುರಾತ್ರಿಗಳು ಅಂದರೆ ದಿವಸವು ಒಟ್ಟು ಮೂವತ್ತು ಮುಹೂರ್ತಗಳಾಗಿ ಎಲ್ಲ ಕಾಲಗಳಲ್ಲಿಯೂ ಸಮವಾಗಿಯೇ ಇರುವುವು. ರಾತ್ರಿಹಗಲು ಸೇರಿ ಎಂದೂ ಅರವತ್ತು ಘಳಿಗೆಗಿಂತ ಹೆಚ್ಚಾಗುವುದೇ ಇಲ್ಲ. ಯಾವಾಗ ಸೂರ್ಯನು ವೃಶ್ಚಿಕ ಮೊದಲಾದ ಐದು ರಾಶಿಗಳಲ್ಲಿ (ಮೀನಾಂತ) ಇರುವನೋ ಆಗ ಹಗಲು ರಾತ್ರಿಗಳು ಇದಕ್ಕೆ ವಿರುದ್ಧವಾಗಿ ಅಂದರೆ ಹಗಲುಗಳು ಮೂವತ್ತು ಘಳಿಗೆಗಿಂತ ಕಡಿಮೆಯೂ ರಾತ್ರಿಗಳು ಅವಕ್ಕಿಂತ ಹೆಚ್ಚಾಗಿಯೂ ಆಗುವುವು. ದಕ್ಷಿಣಾಯನ ಬರುವವರೆಗೂ ಹಗಲುಗಳು ವೃದ್ಧಿಯಾಗುವುವು ರಾತ್ರಿಗಳು

 

ಕಡಿಮೆಯಾಗುವುವು ಉತ್ತರಾಯಣ ಬರುವವರೆಗೂ ಹಗಲುಗಳು ಕಡಿಮೆಯಾಗುವುವು ರಾತ್ರಿಗಳು ಹೆಚ್ಚುತ್ತ ಹೋಗುವುವು.

ಆವಹ, ಪ್ರವಹ, ಉದ್ವಹ, ಸಂವಹ, ವಿವಹ, ಪರಾವಹ, ಪರಿವಹಗಳೆಂಬ ಹೆಸರಿನ ಏಳು ವಾಯುಗಳು ಜ್ಯೋತಿಶ್ಚಕ್ರವನ್ನು ಸುತ್ತುತ್ತಿರುವಂತೆ ಮಾಡುವುವು. ಅದರಲ್ಲಿ ಜ್ಯೋತಿರ್ಗಣಕ್ಕೆ ಅಧಿಪತಿಯಾದ ಸೂರ್ಯನ ಸಂಚಾರಕ್ಕೆ ಮಧ್ಯಮ, ಉತ್ತರ ದಕ್ಷಿಣಗಳೆಂದು ಮೂರು ಮಾರ್ಗಗಳು. ಇದರಲ್ಲಿ ಮಧ್ಯಮಮಾರ್ಗಕ್ಕೆ '**ಜಾರದ್ಗವ**' ವೆಂದೂ ಉತ್ತರ ಮಾರ್ಗಕ್ಕೆ '**ಐರಾವತ**' ವೆಂದೂ ದಕ್ಷಿಣ ಮಾರ್ಗಕ್ಕೆ '**ವೈಶ್ವಾನರ**'ವೆಂದೂ ಹೆಸರು. ಈ ಒಂದೊಂದು ಮಾರ್ಗವೂ ಮೂರು ಮೂರು ಅವಾಂತರ ಮಾರ್ಗಗಳನ್ನು ಹೊಂದಿರುವುವು. ಅಶ್ವಿನೀ, ಭರಣೀ, ಕೃತ್ತಿಕೆಗಳು ಸೇರಿ ನಾಗವೀಥಿಯೆಂದು, ರೋಹಿಣೀ, ಮೃಗಶಿರ, ಆರಿದ್ರಾಗಳು ಸೇರಿ ಗಜವೀಥಿ ಯೆಂದೂ, ಪುನರ್ವಸು, ಪುಷ್ಯ, ಆಶ್ಲೇಷಾಗಳು ಸೇರಿ ಐರಾವತೀವೀಥಿಯೆಂದೂ ಉತ್ತರ ಮಾರ್ಗದಲ್ಲಿರುವ ಮೂರು ವೀಥಿಗಳು. ಮಖ, ಪುಬ್ಬ, ಉತ್ತರೆಗಳು ಸೇರಿ ಆರ್ಷಭಿಯೆಂದೂ, ಹಸ್ತ, ಚಿತ್ತ, ಸ್ವಾತಿಗಳು ಸೇರಿ ಗೋವೀಥಿಯೆಂದೂ, ವಿಶಾಖಾ, ಅನುರಾಧಾ, ಜ್ಯೇಷ್ಠೆಗಳು ಸೇರಿ ಜಾರದ್ಗವಿಯೆಂದೂ ಮಧ್ಯಮ (ವೈಷುವ) ಮಾರ್ಗದಲ್ಲಿ ಮೂರು ವೀಥಿಗಳು. ಮೂಲ, ಪೂರ್ವಾಷಾಡ, ಉತ್ತರಾಷಾಢಗಳು ಸೇರಿ ಅಜವೀಥಿಯೆಂದೂ, ಶ್ರವಣ, ಧನಿಷ್ಠ, ಶತಭಿಷಾಗಳು ಸೇರಿ ಮೃಗವೀಥಿಯೆಂದೂ, ಪೂರ್ವಾಭಾದ್ರಪದ, ಉತ್ತರಾಭಾದ್ರಪದ, ರೇವತಿಗಳು ಸೇರಿ ವೈಶ್ವಾನರೀವೀಥಿಯೆಂದು ದಕ್ಷಿಣ ಮಾರ್ಗದಲ್ಲಿ ಮೂರು ವೀಥಿಗಳು. ಇವುಗಳಲ್ಲಿ ನಗದ ಕೊನೆಗೆ ಸೇರಿಕೊಂಡಿರುವ ವಾಯುಪಾಶಗಳೆರಡನ್ನು ಧ್ರುವಮಂಡಲಾಧಿ ಪತಿಯು(ಧ್ರುವರಾಜ) ಎಳೆದಾಗ ಒಳಮಂಡಲಕ್ಕೆ ಹೋಗುವುದಕ್ಕಾಗಿ ರಥನೀಡ(ಕುಳಿತುಕೊಳ್ಳುವ ಸ್ಥಳ)ದ ಹತ್ತುವಿಕೆ, ವಾಯುಪಾಶ ಸಡಿಲುಬಿಟ್ಟಾಗ ಹೊರಮಂಡಲಕ್ಕೆ ಹೋಗುವುದಕ್ಕಾಗಿ ರಥನೀಡದ ದಶೆಯಿಂದ ಇಳಿಯುವಿಕೆ ಆಗಿ ಹೊರ ಮಾರ್ಗದಲ್ಲಿ ಬಂದ ಸೂರ್ಯನ ಗಮನವೂ ತ್ವರಿತವಾಗುವುದು. ದಿನವು ಕಡಿಮೆಯಾಗಿ ರಾತ್ರಿಯು ಹೆಚ್ಚಾಗುವುದು. ಒಳಮಾರ್ಗದಲ್ಲಿ ಬಂದಾಗ ಗಮನವು ನಿಧಾನ(ಮಂದ)ವಾಗುವುದರಿಂದ ರಾತ್ರಿಗಳು ಕಡಿಮೆ ಹಗಲು ಹೆಚ್ಚು. ಮಧ್ಯಮಾರ್ಗದಲ್ಲಿ ಬಂದಾಗ ಸಮಗತಿಯಾದ್ದರಿಂದ ಹಗಲು ರಾತ್ರಿಗಳು ಸಮ ಇತ್ಯಾದಿ ವಿಶೇಷಗಳು ಕಾಲವಿಶೇಷಬಲ್ಲವರಿಗೆ ತಿಳಿಯುವುವು. ಅದಕ್ಕೆ ಸಂಬಂಧಪಟ್ಟ

ಶಾಸ್ತ್ರಕ್ಕೆ ವಿಷಯವಾದ್ದರಿಂದ ಇಲ್ಲಿ ಹೆಚ್ಚು ವಿವರಿಸುವುದಿಲ್ಲವೆಂದು ಶ್ರೀವಿಜಯಧ್ವಜತೀರ್ಥರು ತಿಳಿಸಿರುವರು.

ಯಾದುಪತ್ಯಕಾರರಂತೆ ಸಂಪ್ರದಾಯವೇನೆಂದರೆ ಸೂರ್ಯನು ವೃಷಭಾದಿರಾಶಿಗಳಲ್ಲಿ ಉತ್ತರಾಯಣವೆಂಬ ಗಮನವನ್ನು ಹೊಂದಿದಾಗ ಧ್ರುವನು ಮೇರುವಿನ ದಕ್ಷಿಣಭಾಗದಲ್ಲಿ ನಗದ ಅಚ್ಚಿನ ಕೊನೆಗೆ ಕಟ್ಟಿರುವ ವಾಯುಪಾಶ-ಗಳೆರಡನ್ನು ಎಳೆಯಲು ರಥವು ಆರೋಹಣಸ್ಥಾನದಲ್ಲಿ ಸಂಚರಿಸುವುದು. ಆಗ ಗಮನವು (ಏರುವಾಗ) ಮಂದವಾಗಿ ಹಗಲಿನ ಪರಿಮಾಣ ಹೆಚ್ಚಾಗುವುದು. ವೃಶ್ಚಿಕಾದಿ ರಾಶಿಗಳಲ್ಲಿ ದಕ್ಷಿಣಾಯನವೆಂಬ ಗಮನವನ್ನು ಹೊಂದಿದಾಗ ಧ್ರುವನು ಮೇರುವಿನ ಉತ್ತರದಲ್ಲಿ ಮೇಲೆ ಹೇಳಿದ ಎರಡು ಪಾಶಗಳನ್ನು ಸಡಿಲ ಬಿಡಲು ರಥವು ಅವರೋಹಣ ಸ್ಥಾನದಲ್ಲಿ ಸಂಚರಿಸುವುದು (ಇಳಿಯುವುದು) ಆಗ ಗಮನವು ಕ್ಷಿಪ್ರವಾಗಿ ರಾತ್ರಿಯು ಹೆಚ್ಚಾಗುವುದು. ಮೇಷ ತುಲಾಗಳಲ್ಲಿ ವೈಷುವವೆಂಬ ಗಮನವನ್ನು ಹೊಂದಿದಾಗ ಮೇಲೆ ಹೇಳಿದ ಪಾಶಗಳೆರಡನ್ನು ಸಮವಾಗಿ (ಬಿಗಿಯಾಗಿ ಎಳೆಯದೆ ಸಡಿಲವೂ ಬಿಡದೇ) ಎಳೆಯುವುದರಿಂದ ಸಮಗತಿಯ ಹಗಲುರಾತ್ರಿಗಳ ಸಾಮ್ಯವಾಗುವುದು.

ಹೀಗೆ ಮೂರು ಬಗೆಯ ಗಮನದಿಂದ ಮೂರು ಬಗೆಯ ರಾಶಿಗಳಲ್ಲಿ ಇರುವ ಸೂರ್ಯನ ರಥಚಕ್ರದ ಒಂದು ಹಗಲು ರಾತ್ರಿಯಲ್ಲಿ ಮಾನಸೋತ್ತರ ಪರ್ವತದ ಶಿಖರದಲ್ಲಿ ಸುತ್ತಲು ಸುತ್ತುವ ಮಾರ್ಗದ ಸಂಖ್ಯೆಯನ್ನು (ದೂರವನ್ನು) ಒಂಬತ್ತು ಕೋಟಿ ಐವತ್ತೊಂದು ಲಕ್ಷಯೋಜನಗಳೆಂದು ಆ ಮಾರ್ಗ ಬಲ್ಲವರು ಹೇಳುವರು. ಆ ಮಾನಸೋತ್ತರ ಪರ್ವತದಲ್ಲಿ ಮೇರು ಪರ್ವತದ ಪೂರ್ವದಿಕ್ಕಿಗೆ ಸರಿಯಾಗಿ ದೇವಧಾನಿ ಎಂಬ ಇಂದ್ರದೇವರ ಪಟ್ಟಣವಿರುವುದು. ದಕ್ಷಿಣಕ್ಕೆ ಸರಿಯಾಗಿ ಯಮದೇವರ ಸಂಯಮನೀ ಎಂಬ ಪಟ್ಟಣವಿರುವುದು. ಪಶ್ಚಿಮಕ್ಕೆ ವರುಣದೇವರ ನಿಮ್ಲೋಚನೀ ಎಂಬ ಪಟ್ಟಣವಿರುವುದು. ಉತ್ತರಕ್ಕೆ ಸರಿಯಾಗಿ ಚಂದ್ರನ ವಿಭಾವರೀ ಎಂಬ ಪಟ್ಟಣವಿರುವುದು. ಆ ಪಟ್ಟಣಗಳ ಪ್ರವೇಶ ದ್ವಾರಗಳಲ್ಲಿ ಸೂರ್ಯನ ಸಂಚಾರವು ಸಂಕೇತ ವಿಶೇಷದಿಂದ ಉದಯ, ಮಧ್ಯಾಹ್ನ, ಅಸ್ತಮಯ, ನಿಶೀಥ (ಅರ್ಧರಾತ್ರಿ) ಎಂಬ ಹೆಸರನ್ನು ಹೊಂದುವುದು. ಸರ್ವದಾ ಸಂಚರಿಸುವ ಸೂರ್ಯನಿಗೆ ಉದಯಾಸ್ತಗಳು ವಾಸ್ತವಿಕವಾಗಿ ಇಲ್ಲ. ಇದು ಕೇವಲ ಸಂಕೇತಮಾತ್ರ. ಇವು ಮೇರುವಿನ ನಾಲ್ಕು ದಿಕ್ಕುಗಳಲ್ಲಿರುವ ಪ್ರಾಣಿಗಳಿಗೆ

 

ಕೆಲಸಗಳಲ್ಲಿ ತೊಡಗುವುದಕ್ಕೂ ತೊಡಗದಿರುವುದಕ್ಕೂ ಕಾರಣಗಳಾಗಿರುವುವು. ಉದಯಮಧ್ಯಾಹ್ನಗಳು ಪ್ರವೃತ್ತಿಗೂ ಅಸ್ತಮಯನೀಶಿಥಗಳು ನಿವೃತ್ತಿಗೂ ಕಾರಣಗವಾಗುವುವು. ಮೇರುವಿನ ದಕ್ಷಿಣದಲ್ಲಿ ವಾಸಿಸುವವರಿಗೆ ಪೂರ್ವ ಸಂಚಾರವು ಉದಯ, ದಕ್ಷಿಣ ಸಂಚಾರ ಮಧ್ಯಾಹ್ನ, ಪಶ್ಚಿಮ ಸಂಚಾರ ಅಸ್ತಮಯ, ಉತ್ತರ ಸಂಚಾರ ಅರ್ಧರಾತ್ರಿ . ಪಶ್ಚಿಮದಲ್ಲಿರುವವರಿಗೆ ದಕ್ಷಿಣಸಂಚಾರದಿಂದ ಪ್ರಾರಂಭಿಸಿ, ಉತ್ತರದಲ್ಲಿರುವರಿಗೆ ಪಶ್ಚಿಮದಿಂದ ಪ್ರಾರಂಭಿಸಿ ಪೂರ್ವದಲ್ಲಿರುವವರಿಗೆ ಉತ್ತರದಿಂದ ಪ್ರಾರಂಭಿಸಿ ಇವುಗಳನ್ನು ವಿವೇಚಿಸಿ ತಿಳಿಯಬೇಕು.

ಮೇರುಸಮೀಪದ ಇಲಾವೃತದಲ್ಲಿ ಇರುವವರಿಗೆ ಯಾವಾಗಲೂ ಮಧ್ಯಾಹ್ನದಲ್ಲಿ ಇದ್ದುಕೊಂಡೇ ಸೂರ್ಯನು ತಾಪಕೊಡುವನು. ಮೇರು ಪರ್ವತದ ಎಡಕ್ಕೆ ಹೋಗುತ್ತ ತನ್ನ ಬಲಕ್ಕೆ ಬೆಟ್ಟವಿರುವಂತೆ ಮಾಡುವನು. ಸೂರ್ಯನು ಮಕರ ಸಂಕ್ರಾಂತಿ ಗತಿಯಿಂದ ತನ್ನ ಎಡಕ್ಕಿರುವ ಮೇರುವನ್ನು ಜ್ಯೋತಿಶ್ಚಕ್ರದ ತಿರುಗುವಿಕೆಯಿಂದ ಪ್ರತಿದಿನವು ಬಲಕ್ಕೆ ಮಾಡಿಕೊಳ್ಳುವನು ಎಂದು ಯಾದವಾರ್ಯರು ಅರ್ಥಮಾಡಿರುವರು.

ಹಿಂದೆ ವಿಜಯಧ್ವಜರು ಹೇಳಿದ್ದು ಎಲ್ಲ ದ್ವೀಪಗಳಿಗೂ ಖಂಡಗಳಿಗೂ ಮೇರುವು ಉತ್ತರದಲ್ಲಿಯೇ ಇದೆ ಎಂಬ ಯುಕ್ತಿಯಿಂದ ಮೇರುವಿಗೆ ದಿಕ್ಕುಗಳು ಸಮಾನವಾದರೂ ಪೂರ್ವಕ್ಕೆ ಅಭಿಮುಖವೆಂದಿಟ್ಟುಕೊಂಡು ಅದನ್ನು ಸುತ್ತುವ ಸೂರ್ಯನು ಎಡಕ್ಕೆ ಹೋಗುವನೆಂದು ಹೇಳಿದೆ. ಇದು ಹೊಂದುವರೀತಿಯನ್ನು ಮುಂದೆ ಹೇಳುತ್ತಾರೆ.

ಯಾವ ಅಂಶದಲ್ಲಿ ಉದಯಸಂಜ್ಞೆಯನ್ನು ಹೊಂದುವ ಸಂಚಾರ ಹೊಂದುವನೋ ಅದಕ್ಕೆ ಸರಿಯಾಗಿ ಎದುರು ಭಾಗದಲ್ಲಿ ಅಸ್ತಮಾನ ಸಂಜ್ಞೆಯನ್ನು ಹೊಂದುವ ಗಮನವುಳ್ಳವನಾಗುವನು. ದಕ್ಷಿಣಾಯನದಲ್ಲಿ ಸ್ವಲ್ಪ ಸ್ವಲ್ಪ ದಕ್ಷಿಣದ ಕಡೆ ಪೂರ್ವ ಪಶ್ಚಿಮಗಳಲ್ಲಿ ಉದಯಾಸ್ತಮಾನಗಳಾಗುವುವು. ಉತ್ತರಾಯಣದಲ್ಲಿ ಸ್ವಲ್ಪಸ್ವಲ್ಪ ಉತ್ತರದ ಕಡೆ ಪೂರ್ವಪಶ್ಚಿಮಗಳಲ್ಲಿ ಉದಯಾಸ್ತಗಳು ಆಗುವವು.

ಹೀಗೆ ಉದಯವನ್ನು ಹೊಂದಿದ ಅಂಶಕ್ಕೆ ಸರಿಯಾದ ಪಶ್ಚಿಮದ ಅಂಶದಲ್ಲಿ ಅಸ್ತನಾಗುವುದನ್ನು ಬಿಟ್ಟು ಮತ್ತೆಲ್ಲಿಯೂ ಚಲಿಸುವುದಿಲ್ಲ. ಉದಯ ಭಾಗದಿಂದ ಅಸ್ತಮಯ ಭಾಗದವರೆಗೆ ಇರುವ ಜನರಿಗೆ ಬೆಳಕನ್ನು ಕೊಡುವನು. ಉದಯಸ್ಥಾನದ

ಎದುರಿಗೆ ಸರಿಯಾಗಿ ಅಸ್ತಮಾನ ಹೊಂದಿದ ಈ ಸೂರ್ಯನು '**ವಿಭಾವರೀ**' ಪಟ್ಟಣದ ದ್ವಾರದಲ್ಲಿದ್ದುಕೊಂಡು ಅದರ ಎದುರಿಗೆ ಮೇರುವಿನ ದಕ್ಷಿಣದಲ್ಲಿರುವ ಜನರಿಗೆ ಮಧ್ಯರಾತ್ರಿಯನ್ನುಂಟುಮಾಡುವನು (ನಿದ್ರೆ ಬರುವಂತೆ ಮಾಡುವನು) ಮೇರುವಿನ ದಕ್ಷಿಣದಲ್ಲಿರುವ ಜನರು ಅಸ್ತಮಾನವಾಗುವವರೆಗೂ ಇದ್ದ ಸೂರ್ಯನನ್ನು ನೋಡುತ್ತಿದ್ದರೋ ಆ ಜನರು ವಿಭಾವರಿಯನ್ನು ಸೇರಿದ ಸೂರ್ಯನನ್ನು ನೋಡುವುದಿಲ್ಲ. ಮೇರುವಿನ ಎತ್ತರದ ಕೋಡಗಲ್ಲಿನ ನೆರಳಿನಿಂದ ಮುಚ್ಚಿಹೋದ ಕಾರಣದಿಂದ ಕಾಣುವುದಿಲ್ಲ. ಅಥವಾ ಅಸ್ತಮಯ ಭಾಗದಲ್ಲಿರುವ ಸೂರ್ಯನು ಅದರ ಎದುರಿಗೆ ಉದಯ ಪ್ರದೇಶದಲ್ಲಿರುವ ಜನರನ್ನು ನಿದ್ರೆಗೊಳಿಸುವನು. ಅಸ್ತದೇಶದಲ್ಲಿರುವವರನ್ನು ಉದಯಪ್ರದೇಶದ ಜನರು ಕಾಣುವುದಿಲ್ಲ. ದಕ್ಷಿಣದಲ್ಲಿರುವವರು ಅವನನ್ನು ನೋಡಬಹುದಾದರೂ ಆ ಕಾಲದಲ್ಲಿ ವಿಹಿತವಾದ ಧ್ಯಾನವನ್ನು ಮಾಡಲು ಉದ್ಯುಕ್ತರಾಗಿ ಆಗ ಅವನನ್ನು ಕಾಣುವುದಿಲ್ಲ.

ಈ ಸೂರ್ಯನು ಯಾವಾಗ ಇಂದ್ರನ ಪಟ್ಟಣದಿಂದ ಹದಿನೈದು ಘಳಿಗೆಗಳಲ್ಲಿ ದಕ್ಷಿಣದಲ್ಲಿರುವ ಸಂಯಮನೀ ಪಟ್ಟಣಕ್ಕೆ ಹೋಗುವನೋ ಆಗ ಯೋಜನಗಳ ಎರಡೂಕಾಲು ಕೋಟಿಗಳನ್ನು ಇಪ್ಪತ್ತೈದು ಸಾವಿರ ಹೆಚ್ಚಿಗೆ ಇರುವ ಹನ್ನೆರಡೂವರೆ ಲಕ್ಷಗಳನ್ನು ಅಂದರೆ ಎರಡುಕೋಟಿ ಮೂವತ್ತೇಳುಲಕ್ಷ ಎಪ್ಪತ್ತೈದುಸಾವಿರ ಯೋಜನಗಳನ್ನು ಸಂಚರಿಸುವನು. ಒಂದು ದಿನಕ್ಕೆ ಇದರ ನಾಲ್ಕರಷ್ಟು ಅಂದರೆ ಒಂಭತ್ತುಕೋಟಿ ಐವತ್ತೊಂದು ಲಕ್ಷ ಯೋಜನಗಳನ್ನು ಸಂಚರಿಸಿ ಮತ್ತೆ ಉದಯದ ಸ್ಥಳಕ್ಕೆ ಬರುವನು.

ಹೀಗೆಯೇ ಯಮನಪಟ್ಟಣದಿಂದ ವರುಣನ ಪಟ್ಟಣವನ್ನೂ ಅದರಿಂದ ಸೋಮನ ಪಟ್ಟಣವನ್ನೂ ಸೇರುವನು. ಪ್ರತಿದಿನವೂ ಮತ್ತೆ ಇಂದ್ರಪಟ್ಟಣ ಮುಂತಾದುವನ್ನು ಸೇರುತ್ತಲೇ ಇರುವನು. ಇದೇ ರೀತಿಯಲ್ಲಿ ಚಂದ್ರನೇ ಮೊದಲಾದ ಇತರ ಗ್ರಹಗಳೂ ಅಶ್ವಿನೀ ಮೊದಲಾದ ನಕ್ಷತ್ರಗಳೊಡನೆ ಪ್ರಕಾಶ ಸಮೂಹದೊಂದಿಗೆ ಉದಯವನ್ನು ಹೊಂದುವುವು ಅವುಗಳೊಂದಿಗೆ ಅಸ್ತಂಗತವಾಗುವುವು.




ಹೀಗೆ ಈ ವೇದೋದಿತವಾದ ಸೂರ್ಯನ ರಥವು ಎರಡು ಘಳಿಗೆಗಳಲ್ಲಿ ಎಂಟುನೂರು ಹೆಚ್ಚಿಗೆ ಇರುವ ಮೂವತ್ತುನಾಲ್ಕು ಲಕ್ಷಯೋಜನಗಳನ್ನು ಅತಿಕ್ರಮಿಸುತ್ತ ದೇವಧಾನೀ, ಸಂಯಮನೀ, ನಿಮ್ಲೋಚನೀ, ವಿಭಾವರಿಗಳೆಂಬ ನಾಲ್ಕು ಪಟ್ಟಣಗಳಲ್ಲಿ ಸುತ್ತುತ್ತಿರುವುದು. ಯದ್ಯಪಿ ಸೂರ್ಯನಿಗೂ ನಕ್ಷತ್ರಗಳೊಡನೆ ಉದಯಾಸ್ತಗಳಿವೆ ಆದರೂ ಆ ಸಾಹಿತ್ಯ ಕಾಣದಿರುವುದರಿಂದ ಚಂದ್ರಾದಿಗಳಿಗೆ ಮಾತ್ರ ನಕ್ಷತ್ರ ಸಾಹಿತ್ಯ ಹೇಳಿದೆ.

ಸೂರ್ಯರಥದ ಒಂದು ಚಕ್ರವು ದ್ವಾದಶಮಾಸಾಭಿಮಾನಿದೇವತೆಗಳಿಂದ ಅಭಿಮನ್ಯಮಾನವಾದ ಹನ್ನೆರಡು ಅರಗಳಿಂದ (ಸಲಾಕೆಗಳಿಂದ) ಕೂಡಿದ ಆರು ಋತ್ವಭಿಮಾನಿದೇವತೆಗಳಿಂದ ಅಭಿಮನ್ಯಮಾನವಾದ ರಥಚಕ್ರದ ಅಂಚುಗಳಿಂದ ಕೂಡಿದ ಮೂರು ಚಾತುರ್ಮಾಸ್ಯಾಭಿಮಾನಿದೇವತೆಗಳಿಂದ ಅಭಿಮನ್ಯಮಾನವಾದ ಚಕ್ರದ ತೂಬುಗಳುಳ್ಳ ಸ್ವತಃ ಸಂವತ್ಸರಾಭಿಮಾನಿದೇವತೆಯಿಂದ ಅಭಿಮನ್ಯಮಾನವಾದುದು. ಆ ಸೂರ್ಯನ ರಥದ ಅಚ್ಚು (ಅಚ್ಚಿನ ಒಂದು ಭಾಗವು) ಮೇರುಪರ್ವತದ ಶಿಖರದಮೇಲೆ ಇಡಲ್ಪಟ್ಟಿದೆ. ಮಾನಸೋತ್ತರಪರ್ವತದಲ್ಲಿ ಇನ್ನೊಂದು ಭಾಗವು ಇಡಲ್ಪಟ್ಟಿದ್ದಾಗಿ ಗಾಣದಂತೆ ಮಾನಸೋತ್ತರಪರ್ವತದ ಮೇಲೆ ತಿರುಗುತ್ತದೆ.

ಯಾವ ಮಾನಸೋತ್ತರದ ಒಂದು ಭಾಗದಲ್ಲಿ ಜೋಡಿಸಲ್ಪಟ್ಟ ಸೂರ್ಯರಥಚಕ್ರವು ತಿರುಗುವುದೋ ಆ ಉದ್ದವಾದ ಅಚ್ಚಿನಲ್ಲಿ ಚಕ್ರವನ್ನು ಹೊಂದಿರುವ ಭಾಗದಲ್ಲಿ ಕೆಳಭಾಗವು ಇಡಲ್ಪಟ್ಟಿರುವ ಈ ಉದ್ದ ಅಚ್ಚಿನ ನಾಲ್ಕನೇ ಒಂದರಷ್ಟು ಅಂದರೆ ಐವತ್ತೊಂದು ಲಕ್ಷ ಎಪ್ಪತ್ತೈದು ಸಾವಿರ ಯೋಜನ ಉದ್ದವಿರುವ ಎರಡನೆಯ ಸಣ್ಣ ಅಚ್ಚು ಇರುವುದು. ಗಾಣದ ಅಚ್ಚಿನಂತೆ ಧ್ರುವಮಂಡಲದಲ್ಲಿ ಮೇಲ್ಭಾಗವುಳ್ಳದ್ದಾಗಿ ಇರುವುದು. ಇದು ವಾಯುಪಾಶದಿಂದ ಅಲ್ಲಿ ಬದ್ಧವಾಗಿರುವುದು. ರಥದಲ್ಲಿ ಸೂರ್ಯನು ಕೂಡುವ ಪೀಠವು ಮೂವತ್ತಾರು ಲಕ್ಷ ಯೋಜನ ಎತ್ತರವಿರುವುದು ಒಂಭತ್ತು ಲಕ್ಷಯೋಜನ ಅಗಲವಿರುವುದು. ಒಂಭತ್ತು ಲಕ್ಷ ಯೋಜನಗಳು ಉದ್ದವಿರುವ ಸೂರ್ಯರಥದ ನಗವಿರುವುದು. ಯಾವ ನಗದಲ್ಲಿ ಅರುಣನಿಂದ ಹೊಂದಲ್ಪಟ್ಟ ಗಾಯತ್ರಿ ಮುಂತಾದ ಛಂದಸ್ಸಿನ ಹೆಸರಿನ ಏಳು ಕುದುರೆಗಳು ಸೂರ್ಯದೇವನನ್ನು ಹೊತ್ತಿರುವವು. **ಏಕೋಽಶ್ವೋ ವಹತಿ ಸಪ್ತನಾಮಾ**

ಎಂದು ಶ್ರುತಿಯಿರುವುದರಿಂದ ಒಂದೇ ಕುದುರೆ ಏಳು ವಿಭಾಗವಾಗಿ ಏಳು ಹೆಸರಿನಿಂದ ವಹಿಸುವುದು.

ಸೂರ್ಯನ ಮುಂಭಾಗದಲ್ಲಿ ಕುದುರೆಗಳ ಹಿಂಭಾಗದಲ್ಲಿ ವಿಮುಖವಾಗಿ ಅರುಣನು ಸಾರಥಿಯ ಕೆಲಸದಲ್ಲಿ ನಿಯೋಜಿಸಲ್ಪಟ್ಟಿರುವನು. ಹಾಗೆಯೇ ಸೂರ್ಯನ ಎದುರಿನಲ್ಲಿ ಅಭಿಮುಖವಾಗಿ ಅರವತ್ತು ಸಾವಿರ ಹೆಬ್ಬೆರಳಿನ ಗೆಣ್ಣಿನ ಪರಿಮಾಣದ ವಾಲಖಿಲ್ಯರೆಂಬ ಋಷಿಗಳು ಸೂರ್ಯನನ್ನು ಅಮುಖ್ಯವಾಗಿ ಪ್ರತಿಪಾದಿಸುವ ಸೂಕ್ತಗಳಿಂದ ನಿಯೋಜಿತರಾಗಿ ಸ್ತೋತ್ರಮಾಡುವರು.

ಹಾಗೆಯೇ ಬೇರೆ ಋಷಿಗಳು ಗಂಧರ್ವರು ಅಪ್ಸರೆಯರೂ ನಾಗಗಳು ಬಡಗಿಗಳು ಯಾತುಧಾನರು ದೇವತೆಗಳು ಈ ಏಳು ಬಗೆಯವರೂ ಒಂದೊಂದು ಗುಂಪಾಗಿ ಬೇರೆ ಬೇರೆ ಹೆಸರುಳ್ಳ ಹನ್ನೆರಡು ಗಣಗಳು. ಚೈತ್ರ ಮುಂತಾದ ತಿಂಗಳುಗಳಲ್ಲಿ ಒಂದೊಂದು ಗಣವು ರಥದಲ್ಲಿದ್ದುಕೊಂಡು ಬೇರೆ ಬೇರೆ ತಮ್ಮ ತಮ್ಮ ಕೆಲಸಗಳ ಮೂಲಕ ಆ ತಿಂಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಸಿಕೊಳ್ಳುವ ಸೂರ್ಯಾಂತರ್ಯಾಮಿಯಾದ ಸೂರ್ಯನಾಮಕ ಪರಮಾತ್ಮನನ್ನು ಸೇವಿಸುವರು.

ಆ ಸೂರ್ಯದೇವನು ಒಂದು ಕ್ಷಣದಲ್ಲಿ ಒಂಭತ್ತು ಕೋಟಿ ಐವತ್ತೊಂದುಲಕ್ಷಯೋಜನ ಸುತ್ತಳತೆಯುಳ್ಳ ಭೂಮಂಡಲದ ಎರಡು ಹರದಾರಿ(ಕ್ರೋಶ) ಹೆಚ್ಚಾದ ಎರಡುಸಾವಿರ ಯೋಜನಗಳನ್ನು ಅನುಭವಿಸುವನು, ಸಂಚರಿಸಿ ಮುಗಿಸುವನು.

|| ★★★ ||




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ದ್ವಾವಿಂಶತಿತಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ಮತ್ತೆ ಮತ್ತೆ ದೊಡ್ಡ ಚೇಳು ಕಚ್ಚಿ ದುಃಖಪಡುವಜನರಂತೆ ವಿವಿಧ ಪಾಪಗಳಿಂದುಂಟಾದ ಸಂತಾಪಗಳಿಂದ ಅತ್ಯಂತ ತಾಪಗೊಂಡ ಸಜ್ಜನರಿಗೆ ಮೂರು ಕಾಲದಲ್ಲಿ ಮಾಡಿದ ಪಾಪಸಮೂಹ ನಿರಸನವಾಗಿ ಶ್ರೇಯೋಭಿವೃದ್ಧಿಯಾಗಲೆಂದು ಶ್ರೀಹರಿಯ ಜ್ಞಾನಾನಂದಾತ್ಮಕ ಶಿಂಶುಮಾರರೂಪ ಮಾಹಾತ್ಮ್ಯವನ್ನು ನಿರೂಪಿಸುವರು ಈ ಅಧ್ಯಾಯದಲ್ಲಿ .

**ರಾಜೋವಾಚ -**

**ಯದೇತಸ್ಯ ಭಗವತ ಆದಿತ್ಯಸ್ಯ ಮೇರುಂ ಧ್ರುವಂ ಚ ಪ್ರದಕ್ಷಿಣೇನ ಪರಿಕ್ರಮತೋ ರಾಶೀನಾಮಭಿಮುಖಂ ಚ ಪ್ರಚಲನಂ ಭಗವತೋಪವರ್ಣಿತಂ ಅಮುಷ್ಯ ವಯಂ ಕಥಮನುಮೀಮಹೀತಿ ॥೧॥**

**ಯತ್** ಯಾವಕಾರಣ ಮೇಷಾದಿರಾಶಿಗಳು ಮೇರುವನ್ನು ಪ್ರದಕ್ಷಿಣೆಯಾಗಿ ಸುತ್ತುವುವೋ ಆ ಕಾರಣ **ಮೇರುಂ ಧ್ರುವಂ ಚ** ಮೇರುವನ್ನೂ ಧ್ರುವನನ್ನೂ **ಪ್ರದಕ್ಷಿಣೇನ ಪರಿಕ್ರಮತಃ** ಪ್ರದಕ್ಷಿಣೆಯಾಗಿ ಸುತ್ತುವ **ಭಗವತಃ ಆದಿತ್ಯಸ್ಯ** ಪೂಜ್ಯನಾದ ಸೂರ್ಯನಿಗೆ **ರಾಶೀನಾಂ** ರಾಶಿಗಳಲ್ಲಿ **ಅಭಿಮುಖಂ** ಎದುರಾಗಿ **ಪ್ರಚಲನಂ** ಮೇಷದಿಂದ ವೃಷಭ ಇತ್ಯಾದಿ ಸಂಚಾರವು **ನ ಘಟತೇ** ಯುಕ್ತಿಯುಕ್ತವಲ್ಲ. ಆದರೆ **ಭಗವತಾ** ಪೂಜ್ಯರಾದ ತಮ್ಮಿಂದ **ಉಪವರ್ಣಿತಂ** ಸೂರ್ಯನು ಅಭಿಮುಖವಾಗಿ ಸಂಚರಿಸುವನೆಂದು ಹೇಳಲ್ಪಟ್ಟಿತು **ಅಮುಷ್ಯ** ಯುಕ್ತಿ ವಿರುದ್ಧವಾದ ಈ ಸೂರ್ಯಾದಿ

ಗ್ರಹಗಳ ರಾಶ್ಯಭಿಮುಖಗಮನವನ್ನು (ಅದರ ಅಭಿಪ್ರಾಯವನ್ನು) **ಕಥಂ** ಹೇಗೆ **ಅನುಮೀಮಹಿ** ಯುಕ್ತಿ ಪೂರ್ವಕವಾಗಿ ತಿಳಿಯೋಣ? ।।೧।।

**ವಿ.ವಿ** ಃ- ಮೇಷಾದಿರಾಶಿಗಳೊಂದಿಗೆ ಸೂರ್ಯಾದಿಗ್ರಹಗಳು ಪ್ರದಕ್ಷಿಣೆಯಾಗಿ ಸಂಚರಿಸುವಾಗ ಮೇಷಾದಿಗಳಿಗೆ ಅಭಿಮುಖವಾಗಿ ಬರುವುದು ಸಾಧ್ಯವಿಲ್ಲ. ಇದು ಮೇಷಾದಿಗಳು ಅಪ್ರದಕ್ಷಿಣೆಯಾಗಿ ಹೋಗುತ್ತಿದ್ದರೆ ಸಂಭವಿಸುತ್ತಿತ್ತು. ಆದರೆ, ಹಾಗಿಲ್ಲ. ಆದ್ದರಿಂದ ಈ ಹೇಳಿಕೆಯು ಯುಕ್ತಿಯುಕ್ತವಿದ್ದಂತೆ ತೋರುತ್ತಿಲ್ಲವೆಂದು ಪ್ರಶ್ನೆಯ ಅಭಿಪ್ರಾಯ. '**ಸವ್ಯೇನಾಚಲಂ ದಕ್ಷಿಣೇನ ಕರೋತಿ**' '**ಯದಾ ವೃಷಭಾದಿಷು ರಾಶಿಷು ಚರತಿ**' ಮುಂತಾಗಿ ಹೇಳಿದಾಗ ಪ್ರದಕ್ಷಿಣೆಯಾಗಿ ಎಂಬುದನ್ನು ಮತ್ತು ರಾಶಿಗಳಲ್ಲಿ ಸಂಚರಣ ಅಭಿಮುಖವಾಗಿಯೇ ಎಂದು ಶಾಸ್ತ್ರಾಂತರದಲ್ಲಿ ಪ್ರಸಿದ್ಧವಿರುವುದರಿಂದ ಅಭಿಪ್ರಾಯತಃ ಅಭಿಮುಖ ಸಂಚಾರವೂ ಹೇಳಲ್ಪಟ್ಟಿದೆ. ।।೧।।

**ಸ ಹೋವಾಚ ಶುಕಃ ಯಥಾ ಕುಲಾಲಚಕ್ರೇಣ ಭ್ರಮತಾ ಸಹ ಭ್ರಮತಾಂ ತದಾಶ್ರಯಾಣಾಂ ಪಿಪೀಲಿಕಾದೀನಾಂ ಗತಿರನ್ಯೈವ ಪ್ರದೇಶಾಂತರೇಷ್ವ-ಪ್ಯುಪಲಭ್ಯಮಾನತ್ವಾತ್ ಏವಂ ನಕ್ಷತ್ರರಾಶಿಭಿರುಪಲಕ್ಷಿತೇನ ಕಾಲಚಕ್ರೇಣ ಧ್ರುವಂ ಮೇರುಂ ಪ್ರದಕ್ಷಿಣತಃ ಪರಿಧಾವತಾ ಸಹ ಪರಿಧಾವಮಾನಾನಾಂ ತದಾಶ್ರಯಾಣಾಂ ಸೂರ್ಯಾದೀನಾಂ ಗ್ರಹಾಣಾಂ ಗತಿರನ್ಯೈವ ನಕ್ಷತ್ರಾಂತರೆ ರಾಶ್ಯಂತರೇ ವೋಪಲಭ್ಯಮಾನತ್ವಾತ್ ।।೨।।**

**ಸಃ ಶುಕಃ ಉವಾಚ ಹ** ಆ ಶುಕಾಚಾರ್ಯರು ಉತ್ತರ ಕೊಟ್ಟರು **ಯಥಾ** ಹೇಗೆ **ಭ್ರಮತಾ** ಪ್ರದಕ್ಷಿಣೆಯಾಗಿ ಸುತ್ತುತ್ತಿರುವ **ಕುಲಾಲ ಚಕ್ರೇಣ ಸಹ** ಕುಂಭಾರನ ಚಕ್ರದೊಂದಿಗೆ **ಭ್ರಮತಾಂ** ಸುತ್ತುತ್ತಿರುವ **ತದಾಶ್ರಯಾಣಾಂ** ಆ ಚಕ್ರದ ಮೇಲಿರುವ **ಪಿಪೀಲಿಕಾದೀನಾಂ** ಇರುವೆ ಮುಂತಾದ ಪ್ರಾಣಿಗಳ **ಗತಿಃ** ನಡಿಗೆಯು(ವೇಗವು) **ಪ್ರದೇಶಾಂತರೇಷು ಅಪಿ ಉಪಲಭ್ಯಮಾನತ್ವಾತ್** ಆ ಕುಂಭಾರನ ಚಕ್ರದ ಬೇರೇ ಭಾಗಗಳಲ್ಲಿಯೂ ಇರುವುದರಿಂದ (ಕಂಡು ಬರುವುದರಿಂದ) **ಅನ್ಯಾ ಏವ** ಚಕ್ರದ ವೇಗಕ್ಕಿಂತ ಭಿನ್ನವೆಂದು ಸಿದ್ಧವೋ(ಚಕ್ರದ ವೇಗವೇ ಅವುಗಳ ವೇಗವಾಗಿದ್ದರೆ ಯಾವಾಗಲೂ ಚಕ್ರದ ಒಂದೇ ಸ್ಥಳದಲ್ಲಿ ಅವು ಕಂಡು ಬರಬೇಕಿತ್ತು) **ಏವಂ** ಇದೇ ರೀತಿಯಲ್ಲಿ **ನಕ್ಷತ್ರರಾಶಿಭಿಃ** ನಕ್ಷತ್ರಗಳ ಒಂಭತ್ತು ಪಾದಗಳೆಂಬ ಮೇಷಾದಿ




ರಾಶಿಗಳಿಂದ **ಉಪಲಕ್ಷಿತೇನ** ಯುಕ್ತವಾದ **ಧ್ರುವಂ ಮೇರುಂ ಪ್ರದಕ್ಷಿಣತಃ ಪರಿಧಾವತಾ ಕಾಲಚಕ್ರೇಣ** ಧ್ರುವನನ್ನು ಮೇರುವನ್ನು ಪ್ರದಕ್ಷಿಣೆಯಾಗಿ ಸುತ್ತುವ ಕಾಲವನ್ನು ತಿಳಿಸುವ ಸೂರ್ಯರಥದಿಂದ **ಸಹ** ಕೂಡಿಕೊಂಡು (ವಾಯುಪಾಶ ವಿಶೇಷದಿಂದ ಸೂರ್ಯರಥಕ್ಕೂ ನಕ್ಷತ್ರರಾಶಿಗಳಿಗೂ ಸಂಬಂಧವೆಂದು ತಿಳಿಯಬೇಕು) **ಪರಿಧಾವಮಾನಾನಾಂ** ಪ್ರದಕ್ಷಿಣೆಯಾಗಿ ಸುತ್ತುತ್ತಿರುವ **ತದಾಶ್ರಯಾಣಾಂ** ಸೂರ್ಯರಥವನ್ನಾಶ್ರಯಿಸಿದ (ಚಂದ್ರಾದಿ ಗ್ರಹಗಳಿಗೆ ಸೂರ್ಯರಥಾಶ್ರಯತ್ವವೂ ವಾಯುಪಾಶವಿಶೇಷ ಮೂಲಕವೆಂದು ತಿಳಿಯಬೇಕು) **ಸೂರ್ಯಾದೀನಾಂ ಗ್ರಹಾಣಾಂ** ಸೂರ್ಯಮೊದಲಾದ ಗ್ರಹಗಳಿಗೆ **ನಕ್ಷತ್ರಾಂತರೇ** ಬೇರೆ ಬೇರೆ ನಕ್ಷತ್ರ(ಭಾಗಗಳಲ್ಲಿ) **ರಾಶ್ಯಂತರೇ ಚ** ಬೇರೇ ಬೇರೇ ರಾಶಿಗಳಲ್ಲಿ **ಉಪಲಭ್ಯಮಾನತ್ವಾತ್** ಕಂಡು ಬರುವುದರಿಂದ **ಗತಿಃ** ಗಮನವು(ವೇಗ) **ಅನ್ಯೈವ** ಬೇರೆಯೇ. ಪ್ರದಕ್ಷಿಣೆಯಾಗಿ ಹೋಗುವುದರ ಜೊತೆಗೆ ಪ್ರದಕ್ಷಿಣೆಯಾಗಿ ಹೋಗುತ್ತಿದ್ದರೂ ತಮ್ಮ ತಮ್ಮ ಗತಿ ವಿಶೇಷದಿಂದ(ಹಿಂದೆ ಬೀಳುವ ಮೂಲಕ) ಅಪ್ರದಕ್ಷಿಣೆಯಾದಂತೆ ಆಗುವುದರಿಂದ ಮೇಷಾದಿಗಳಿಗೆ ಅಭಿಮುಖ ಗಮನವು ಯುಕ್ತಿವಿರುದ್ಧವಲ್ಲ. ಉತ್ತರಾಯಣಾದಿಗತಿವಿಶೇಷಗಳು ಸೂರ್ಯನಿಗಿರುವುದನ್ನು ಇಲ್ಲಿ ಗಮನಿಸಬೇಕು. ರಾಶಿ ಮೊದಲಾದವುಗಳು ಸೂರ್ಯನಿಗೆದುರಾಗಿ ತಮ್ಮ ಹಿಂದೆ ಹೋಗುವುವೆಂದು ಕೆಲವುರು ಹೇಳುವರು. ಇದು ಬಿಂಬ ಮತ್ತು ಅದರ ನೆರಳಿನಂತೆ ಎಂದು ಅವರ ಅಭಿಪ್ರಾಯ. ॥೨॥

**ಸ ಏಷ ಭಗವಾನಾದಿಪುರುಷಃ ಸಾಕ್ಷಾನ್ನಾರಾಯಣೋ ಲೋಕಾನಾಂ ಸ್ವಸ್ತಯೇ ಆತ್ಮಾನಂ ತ್ರಯೀಮಯಂ ಕರ್ಮವಿಶುದ್ಧಿನಿಮಿತ್ತಂ ಕವಿಭಿರಪಿ ವೇದೇನ ವಿಜ್ಞಾಸ್ಯಮಾನೋ ದ್ವಾದಶಧಾ ವಿಭಜ್ಯ ಷಟ್ಸು ವಸಂತಾದಿಷು ಋತುಷು ಯಥೋಪಜೋಷಮೃತುಗುಣಾನ್ ವಿಧಧಾತಿ ॥೩॥**

**ಸಃ ಏಷಃ** ಆ ಸೂರ್ಯಾಂತರ್ಯಾಮಿಯಾದ **ಆದಿಪುರುಷಃ** ಎಲ್ಲರಿಗೂ ಮೊದಲನೆಯವನಾದ **ಭಗವಾನ್ ಸಾಕ್ಷಾನ್ನಾರಾಯಣಃ** ಭಗವಂತನಾದ ಸಾಕ್ಷಾನ್ನಾರಾಯಣನು **ಲೋಕಾನಾಂ** ಜನರ **ಸ್ವಸ್ತಯೇ** ಕ್ಷೇಮಕ್ಕಾಗಿ **ತ್ರಯೀಮಯಂ** ವೇದಪ್ರತಿಪಾದಿತವಾದ **ಆತ್ಮಾನಂ** ತನ್ನ ರೂಪವನ್ನು **ಕರ್ಮವಿಶುದ್ಧಿನಿಮಿತ್ತಂ** ಆ ಆ ತಿಂಗಳುಗಳಲ್ಲಿ ಋತುಗಳಲ್ಲಿ ಮಾಡುವ ಕರ್ಮಗಳ ಆ ಆ ಮಾಸನಿಯಾಮಕ-ರೂಪಗಳಿಗೆ ಸಮರ್ಪಣವೆಂಬ ಶುದ್ಧಿಗಾಗಿ (ಮಾಸದೇವತಾ ಪರಿಜ್ಞಾನವಿಲ್ಲದೇ

ಹೋದರೆ ಕರ್ಮಗಳು ಶುದ್ಧವಾಗಲಾರವು ಎಂದು ಭಾವ) **ದ್ವಾದಶಧಾ** ಹನ್ನೆರಡು ರೂಪಗಳಾಗಿ **ವಿಭಜ್ಯ** ಬೇರೇ ಬೇರೇ ವ್ಯಕ್ತನಾಗಿ **ವೇದೇನ** ವೇದಗಳಿಂದಲೂ **ಕವಿಭಿಃ ಅಪಿ** ಭೂತ ಭವಿಷ್ಯತ್ ವರ್ತಮಾನಗಳನ್ನು ಬಲ್ಲ ಬ್ರಹ್ಮಜ್ಞಾನಿಗಳಿಂದಲೂ **ವಿಜ್ಞಾಸ್ಯಮಾನಃ** ತಿಳಿಯಲ್ಪಡುವವನಾಗಿ **ವಸಂತಾದಿಷು ಷಟ್ಸು ಋತುಷು** ವಸಂತ ಮೊದಲಾದ ಆರು ಋತುಗಳಲ್ಲಿ **ಯಥೋಪಜೋಷಂ** ಆ ಆ ಕ್ರಮಗಳನ್ನು ಮೀರದೇ ತನ್ನ ಪ್ರೀತಿಗೆ ತಕ್ಕಂತೆ **ಋತುಗುಣಾನ್** ಆ ಆ ಋತುಗಳಲ್ಲಿ ಅರಳುವ ಹೂಮೊದಲಾದ ಪದಾರ್ಥಗಳನ್ನು **ವಿದಧಾತಿ** ಸೃಷ್ಟಿಸುವನು (ಆ ಆ ಕಾಲದ ಪದಾರ್ಥಗಳು ಆ ಆ ಕಾಲನಿಯಾಮಕನಿಗೆ ಪ್ರೀತಿಕರವೆಂದು ತಿಳಿಯಬೇಕು). ।।೩।।

**ತಮೇತಮಿಹ ಪುರುಷಾಸ್ತ್ರಯ್ಯಾಂ ವಿದ್ಯಾಯಾಂ ವರ್ಣಾಶ್ರಮಾಚಾರಾನುಪಥಾ ಉಚ್ಚಾವಚೈಃ ಕರ್ಮಭಿರಾಮ್ನಾತೈರ್ಯೋಗವಿತಾನೈಶ್ಚ ಶ್ರದ್ಧಯಾ ಯಜಂತೋಽಂಜಸಾ ಶ್ರೇಯಃ ಸಮಧಿಗಚ್ಛಂತಿ ।।೪।।**

**ಇಹ** ಈ ಭೂಮಂಡಲದಲ್ಲಿ **ವರ್ಣಾಶ್ರಮಾಚಾರಾನುಪಥಾಃ** ಬ್ರಾಹ್ಮಣಾದಿ ವರ್ಣಗಳ, ಬ್ರಹ್ಮಚರ್ಯಾದಿ ಆಶ್ರಮಗಳ ಆಚಾರಗಳನ್ನು ಅನುಸರಿಸುವ **ಪುರುಷಾಃ** ಪುರುಷರು **ತ್ರಯ್ಯಾಂ ವಿದ್ಯಾಯಾಂ** ವೇದವಿದ್ಯೆಯಲ್ಲಿ **ಆಮ್ನಾತೈಃ** ಪ್ರತಿಪಾದಿತಗಳಾದ **ಉಚ್ಚಾವಚೈಃ** ದೊಡ್ಡ ಮತ್ತು ಸಣ್ಣ **ಕರ್ಮಭಿಃ** ಕರ್ಮಗಳಿಂದಲೂ **ಯೋಗವಿತಾನೈಶ್ಚ** ಈಶ್ವರಾರ್ಪಣ ಬುದ್ಧಿ ಎಂಬ ಉಪಾಯ ವಿಸ್ತಾರಗಳಿಂದಲೂ **ಶ್ರದ್ಧಯಾ** ಶ್ರದ್ಧೆಯಿಂದ **ತಂ ಏತಂ** ಈ ಸೂರ್ಯಾಂತರ್ಯಾಮಿ ಶ್ರೀಹರಿಯನ್ನು **ಇಹ** ಆ ಆ ಕಾಲಗಳಲ್ಲಿ **ಯಜಂತಃ** ಪೂಜಿಸುವರಾಗಿ **ಶ್ರೇಯಃ** ಶ್ರೇಯಸ್ಸನ್ನು **ಅಂಜಸಾ** ಸಂಪೂರ್ಣವಾಗಿ ಅಥವಾ **ಅಂಜಸಾ ಶ್ರೇಯಃ** ಮುಖ್ಯ ಶ್ರೇಯಸ್ಸಾದ ಮೋಕ್ಷವನ್ನು **ಸಮಧಿಗಚ್ಛಂತಿ** ಹೊಂದುವರು. ಇದರಿಂದ ಹನ್ನೆರಡು ಭಾಗವಾಗಬೇಕೆಂದು ಹೇಳಿದಂತಾಯಿತು. ।।೪।।

**ಅಥ ಸ ಏಷ ಆತ್ಮಾಲೋಕಾನಾಂ ದ್ಯಾವಾಪೃಥಿವ್ಯೋರಂತರೇಣ ನಭೋವಲಯಸ್ಯ ಕಾಲಚಕ್ರಗತೋ ದ್ವಾದಶಮಾಸಾನ್ ಭುಂಕ್ತೇ ತಾನೇವ ರಾಶಿಸಂಜ್ಞಾನ್ ಸಂವತ್ಸರಾವಯವಾನ್ ಮಾಸಾನ್ ಪಕ್ಷದ್ವಯಂ ಸಪಾದರ್ಕ್ಷದ್ವಯಮುಪದಿಶಂತಿ ಯಾವತಾ ಷಷ್ಠಮಾಂಶಂ ಭುಂಜೀತ ಸವೈ ಋತುರಿತ್ಯುಪದಿಶ್ಯತೇ ಸಂವತ್ಸರಾವಯವಃ ।।೫।।**

**ಅಥಃ** ಹನ್ನೆರಡು ಭಾಗವಾದುದರಿಂದ **ಲೋಕಾನಾಂ ಆತ್ಮಾ** ಜನರ ಅಂತರ್ಯಾಮಿಯೂ, ಸ್ವಾಮಿಯೂ ಆದ **ಸಃ ಏಷಃ** ಈ ಸೂರ್ಯಾಂತರ್ಯಾಮಿಯು (ಅವನಿಗೆ ಅಧಿಷ್ಠಾನನನಾದ ಸೂರ್ಯನು) **ದ್ಯಾವಾಪೃಥಿವ್ಯೋಃ** ದ್ಯುಲೋಕ ಭೂಲೋಕಗಳ ಅಂತರೇಣ ಮಧ್ಯದಲ್ಲಿರುವ **ನಭೋವಲಯಸ್ಯ** ಅಂತರಿಕ್ಷದ ಮಧ್ಯದಲ್ಲಿದ್ದು **ಕಾಲಚಕ್ರಗತಃ** ಕಾಲಚಕ್ರವನ್ನಾಶ್ರಯಿಸಿ **ದ್ವಾದಶಮಾಸಾನ್ ಭುಂಕ್ತೇ** ಹನ್ನೆರಡು ತಿಂಗಳುಗಳನ್ನು ಪ್ರವರ್ತಿಸುವನು. ಜನರಿಗೆ ತಿಳಿಸಿಕೊಡುವನೆಂದರ್ಥ **ತಾನೇವ** ಅವುಗಳನ್ನು **ಸಂವತ್ಸರಾವಯವಾನ್** ಸಂವತ್ಸರದ ಅವಯವಗಳಾದ **ರಾಶಿಸಂಜ್ಞಾನ್** ಮೇಷಾದಿಸಂಜ್ಞೆಗಳುಳ್ಳ ಆ ಆ ಸಂಕ್ರಮಣದಿಂದ ಕೂಡಿದ **ಮಾಸಾನ್** ಮೇಷಮುಂತಾದ ಸೌರಮಾಸಗಳನ್ನಾಗಿಯೂ ಚೈತ್ರ ಮೊದಲಾದ ಚಾಂದ್ರಮಾಸಗಳನ್ನಾಗಿಯೂ **ಉಪದಿಶಂತಿ** ಹೇಳುವರು. ಸೌರಮಾಸವು **ಸಪಾದರ್ಕ್ಷದ್ವಯಂ** ಒಂದು ಪಾದ ಹೆಚ್ಚಿಗೆ ಇರುವ ಎರಡು ನಕ್ಷತ್ರಗಳ (೯ ಪಾದಗಳ) ಸಂಚಾರ ಕಾಲ ಚಾಂದ್ರಮಾಸವು **ಪಕ್ಷದ್ವಯಂ** ಶುಕ್ಲಕೃಷ್ಣಗಳೆಂಬ ಎರಡು ಪಕ್ಷಗಳ ಕಾಲವೆಂದು ಹೇಳುವರು **ಯಾವತಾ** ಎಷ್ಟು ಕಾಲದಲ್ಲಿ **ಷಷ್ಠಮಂಶಂ** ವರ್ಷದ ಆರನೆಯ ಒಂದಂಶವನ್ನು **ಭುಂಜೀತ** ಈ ಸೂರ್ಯನು ಮುಗಿಸುವನೋ **ಸವೈ** ಅಷ್ಟು ಕಾಲವು **ಸಂವತ್ಸರಾವಯವಃ** ಸಂವತ್ಸರದ ಭಾಗವಾದ **ಋತುಃ ಇತಿ ಉಪದಿಶ್ಯತೇ** ಋತುವೆಂದು ಕರಿಸಿಕೊಳ್ಳುವುದು. ಸಂವತ್ಸರಾವಯವ ಎಂದು ಹೇಳಿದ್ದರಿಂದ ವರ್ಷದ ಹನ್ನೆರಡನೆಯ ಒಂದು ಭಾಗಕ್ಕೆ ಮಾಸವೆಂಬ ಹೆಸರೆಂದು ತಿಳಿಸಿರುವರು **ಪಕ್ಷದ್ವಯಂ** ಎಂಬುದರಿಂದ ಮಾಸಪರಿಮಾಣವನ್ನು **ಸಪಾದರ್ಕ್ಷದ್ವಯಂ** ಎಂಬುದರಿಂದ ನಕ್ಷತ್ರನಿಮಿತ್ತ ಮಾಸಪರಿಮಾಣ ಇದರಿಂದಲೇ ತಿಥಿ ಎಂಬ ಕಾಲಾಂಶ ಸಂಚಾರವನ್ನೂ ಹೇಳಿರುವರು. ಅಶ್ವಿನಿಭರಣಿಗಳ ನಾಲ್ಕೂ ಪಾದಗಳು ಮತ್ತು ಕೃತ್ತಿಕೆಯ ಒಂದು ಪಾದಸೇರಿ ಒಟ್ಟ ಒಂಭತ್ತುಪಾದದವರೆಗೆ ಸಂಚಾರ ಕಾಲವು ಮೇಷ ಮಾಸವೆಂದು ಮುಂತಾದ ಕ್ರಮದಲ್ಲಿ ಮಾಸಗಳನ್ನು ತಿಳಿಯಬೇಕು. ಎರಡು ಪಕ್ಷಗಳ ವೇಳೆಗೆ ಈ ಒಂಬತ್ತು ಪಾದಗಳನ್ನು ಸಂಚರಿಸುವುದರಿಂದ ಮಾಸಕ್ಕೆ ಹೇಳಿದ ಎರಡೂ ಪರಿಮಾಣವೂ ಸಮಂಜಸವೆಂದೇ ತಿಳಿಯಬೇಕು. ।।೫।।

**ಅಥ ಚ ಯಾವತಾऽರ್ಧೇನ ನಭೋವೀಥ್ಯಾಃ ಪ್ರಚರತಿ ತಂ ಕಾಲಮಯನಮಾಚಕ್ಷತೇ ।।೬।।**

**ಅಥ ಚ** ಮತ್ತು **ಯಾವತಾ** ಎಷ್ಟು ಕಾಲದಲ್ಲಿ **ನಭೋವೀಥ್ಯಾಃ ಅರ್ಧೇನ ಪ್ರಚರತಿ** ಅಂತರಿಕ್ಷಮಾರ್ಗದ ಅರ್ಧವನ್ನು ಸಂಚರಿಸುವನೋ **ತಂ ಕಾಲಂ** ಆ ಕಾಲವನ್ನು **ಅಯನಂ ಆಚಕ್ಷತೇ** ಅಯನವೆಂದು ಕರೆಯುವರು. ಅಂತರಿಕ್ಷದಲ್ಲಿ ಅಶ್ವಿನೀ ಮೊದಲಾದ ಮೂರು ಮೂರು ನಕ್ಷತ್ರಗಳ ಒಂಭತ್ತು ಮಾರ್ಗಗಳಿವೆಯೆಂದು ಹಿಂದೆ ಹೇಳಿದ್ದನ್ನು ಇಲ್ಲಿ ತಿಳಿಯಬೇಕು. ಉತ್ತರಾಯಣದಲ್ಲಿ ಮಂದಗತಿ ದಕ್ಷಿಣಾಯನದಲ್ಲಿ ಶೀಘ್ರಗತಿ ವೈಷುವದಲ್ಲಿ ಸಮಾನಗತಿ ಎಂಬ ವಿಶೇಷವನ್ನೂ ಮರೆಯಬಾರದು. ಆಕಾಶದಲ್ಲಿರುವ ನಕ್ಷತ್ರರೂಪ ವೀಥಿಯ ಅರ್ಧ ಅಂದರೆ ಹದಿನಾಲ್ಕು ನಕ್ಷತ್ರಾತ್ಮಕ ಮಾರ್ಗದಿಂದ ಆರು ತಿಂಗಳ ಕಾಲ ಪ್ರಚರಿಸುವನು ಅದನ್ನೇ ಅಯನವೆನ್ನುವರು ಎಂದು ಭಾವ. ॥೬॥

**ಅಥ ಚ ಯನ್ನಭೋಮಂಡಲಂ ಸಹ ದ್ಯಾವಾಪೃಥಿವ್ಯೋಃ ಮಂಡಲಾಭ್ಯಾಂ ಕಾರ್ತ್ಸ್ನ್ಯೇನ ಭುಂಜೀತ ತಂ ಕಾಲಂ ಸಂವತ್ಸರಂ ಪರಿವತ್ಸರಂ ಇಡಾವತ್ಸರಂ ಅನುವತ್ಸರಂ ವತ್ಸರಂ ಇತಿ ಭಾನೋರ್ಮಾಂದ್ಯಶೈಘ್ರ್ಯಸಮಾಗತಿಭಿಃ ಸಮಾಮನಂತಿ ॥೭॥**

**ಅಥ ಚ** ಮತ್ತು **ದ್ಯಾವಾಪೃಥಿವ್ಯೋಃ ಮಂಡಲಾಭ್ಯಾಂ ಸಹ** ದ್ಯು ಮಂಡಲ ಪೃಥಿವೀ ಮಂಡಲಗಳೊಂದಿಗೆ ಇರುವ **ನಭೋಮಂಡಲಂ** ಅಂತರಿಕ್ಷ ಮಂಡಲವನ್ನು **ಕಾರ್ತ್ಸ್ನ್ಯೇನ** ಇಪ್ಪತ್ತೆಂಟು ನಕ್ಷತ್ರಗಳನ್ನೂ ಮುಗಿಸಿ **ಯತ್** ಎಷ್ಟು ಕಾಲದಲ್ಲಿ **ಭುಂಜೀತ** ಸಂಚರಿಸುವನೋ **ತಂ ಕಾಲಂ** ಆ ಕಾಲವನ್ನು, ಕಾಲಜ್ಞರು **ಭಾನೋಃ** ಸೂರ್ಯನ **ಮಾಂದ್ಯ** ನಿಧಾನ **ಶೈಘ್ರ್ಯ** ತ್ವರಿತ ಮತ್ತು **ಸಮಾನಗತಿಭಿಃ** ಸಮಾನಗತಿ ಭೇದದಿಂದ **ಸಂವತ್ಸರ ಪರಿವತ್ಸರ ಇಡಾವತ್ಸರ ಅನುವತ್ಸರ ವತ್ಸರ**ಗಳೆಂದು **ಸಮಾಮನಂತಿ** ಹೇಳುವರು. ಈ ಐದರ ಅರ್ಥವ್ಯತ್ಯಾಸವನ್ನು ತೃತೀಯ ಸ್ಕಂಧದಲ್ಲಿ ಹೇಳಿದೆ (ಭಾಗ. ೩.೧೨.೧೪).

ಇಡಾವತ್ಸರ ನಾಮಾಸೌ ನಕ್ಷತ್ರದ್ವಾದಶೇ ಸ್ಥಿತಃ ತಿಥೀನಾಂ ದ್ವಾದಶಾವರ್ತೇ ಯೋ ಹರಿಃ ಸೋನುವತ್ಸರಃ ವತ್ಸರೋ ಯಃ ಸ್ಥಿತಸ್ತ್ವನ್ಹಾಂ ಷಷ್ಠ್ಯುತ್ತರಶತತ್ರಯೇ । ಗುರ್ವಾವರ್ತ ದ್ವಾದಶಾಂಶೇ ಯಃ ಸ್ಥಃ ಸ ಪರಿವತ್ಸರಃ । ಸೌರದ್ವಾದಶಕೇ ಮಾಸೇ ಯಃ ಸ್ಥಃ ಸಂವತ್ಸರೋ ಹರಿಃ । ಏವಂ ಸ ಕಾಲನಾಮಾಪಿ ಕಾಲಸ್ಥಂ ಪರಮೇಶ್ವರಃ ಇತಿ ಬ್ರಹ್ಮತರ್ಕೇ




ಎಂದಿದೆ ವಿವರ ತೃತೀಯ ಸ್ಕಂದದಲ್ಲಿದೆ. (ಭಾಗವತ ತಾತ್ಪರ್ಯ ೩.೧೨.೧೪)

ಉತ್ತರಾಷಾಡ ನಾಲ್ಕನೇ ಪಾದ ಶ್ರವಣ ಮೊದಲನೇ ಪಾದ ಇವೆರಡು ಸೇರಿ ಅಭಿಜಿನ್ನಕ್ಷತ್ರ ಎಂದು ಬೇರೆ ಎಣಿಸಿದಾಗ ಇಪ್ಪತ್ತೆಂಟು ಆಗುವುದು. ॥೭॥

ಹೀಗೆ ಸೂರ್ಯನ ಸ್ಥಾನ, ಕಾರ್ಯಗಳನ್ನು ತಿಳಿಸಿ ಚಂದ್ರಾದಿಗ್ರಹಗಳಿಗೂ ಅವುಗಳನ್ನು ಹೇಳುತ್ತಾರೆ

**ಏವಂ ಚಂದ್ರಮಾ ಅರ್ಕಗಭಸ್ತಿಭ್ಯ ಉಪರಿಷ್ಟಾಲ್ಲಕ್ಷಯೋಜನತಃ ಉಪಲಭ್ಯಮಾನೋಽರ್ಕಸ್ಯ ಸಂವತ್ಸರಭುಕ್ತಿಂ ಪಕ್ಷಾಭ್ಯಾಂ ಮಾಸಭುಕ್ತಿಂ ಸಪಾದರ್ಷಾಭ್ಯಾಂ ದಿನೇನೈವ ಪಕ್ಷಭುಕ್ತಿಮಗ್ರಚಾರೀ ದ್ರುತತರಗಮನೋ ಭುಂಕ್ತೇ ನಕ್ಷತ್ರಾಣಾಮಗ್ರಣೀತ್ವಂ ಚ ॥೮॥**

**ಏವಂ** ಹೇಳಿದ ರೀತಿಯಲ್ಲಿಯೇ **ಅರ್ಕಗಭಸ್ತಿಭ್ಯಃ** ಸೂರ್ಯಮಂಡಲದ **ಉಪರಿಷ್ಠಾತ್** ಮೇಲೆ **ಲಕ್ಷಯೋಜನತಃ** ಒಂದುಲಕ್ಷಯೋಜನ ದೂರದಲ್ಲಿ **ಉಪಲಭ್ಯಮಾನಃ** ದೊರೆಯುವ **ಚಂದ್ರಮಾಃ** ಚಂದ್ರನು **ಅರ್ಕಸ್ಯ** ಸೂರ್ಯನ ಸಂವತ್ಸರ **ಭುಕ್ತಿಂ** ಹನ್ನೆರಡು ರಾಶಿಗಳ (ಎಲ್ಲ ನಕ್ಷತ್ರಗಳ) ಸಂಚಾರವನ್ನು **ಪಕ್ಷಾಭ್ಯಾಂ** ಶುಕ್ಲ ಕೃಷ್ಣಪಕ್ಷಗಳೆರಡರಿಂದಲೂ (ತಿಂಗಳಿಂದಲೂ) **ಅರ್ಕಸ್ಯ ಮಾಸಭುಕ್ತಿಂ** ಸೂರ್ಯನ ಒಂದು ತಿಂಗಳ ಒಂಬತ್ತು ಪಾದಗಳ ಸಂಚಾರವನ್ನು **ಸಪಾದರ್ಕ್ಷಾಭ್ಯಾಂ** ಎರಡೂ ಕಾಲು ನಕ್ಷತ್ರಗಳಿಂದಲೂ (ದಿನದಿಂದ) (ಕೃತ್ತಿಕಾ ಪಾದ ಸಹಿತ ಅಶ್ವಿನೀ, ಭರಿಣೀಗಳಿಂದ ಮುಂತಾದ ಕ್ರಮದಿಂದ) **ಅರ್ಕಸ್ಯ ಪಕ್ಷಭುಕ್ತಿಂ** ಸೂರ್ಯನ ಒಂದು ಪಕ್ಷ(ಹದಿಮೂರು ದಿನ)ದ ಒಂದು ನಕ್ಷತ್ರ ಸಂಚಾರವನ್ನು **ದಿನೇನೈವ** ಒಂದೇ ದಿನದಿಂದಲೂ **ಅಗ್ರಚಾರೀ** ಸೂರ್ಯನಿಗಿಂತ ಮುಂದೆ ಚರಿಸುವುದರಿಂದ **ನಕ್ಷತ್ರಾಣಾಂ ಅಗ್ರಣೀತ್ವಂ ಚ** ನಕ್ಷತ್ರಗಳ ಅಗ್ರಣಿಯಾದ್ದರಿಂದಲೂ **ಭುಂಕ್ತೇ** ಮುಗಿಸುವನು **ದ್ರುತತರಗಮನಃ** ಸೂರ್ಯ ಯಾವ ನಕ್ಷತ್ರದಲ್ಲಿ ಇರುವನೋ ಆ ನಕ್ಷತ್ರವನ್ನು ಒಂದೇ ದಿನದಲ್ಲಿ ಸಂಚರಿಸಿ ಮುಂದೆ ಬೇರೆ ನಕ್ಷತ್ರಕ್ಕೆ ಪ್ರವೇಶಿಸುವನು ಎಂದರ್ಥ. ಮುಗಿಸುವುದಕ್ಕೆ ಕಾರಣವನ್ನು ಅಗ್ರಚಾರೀ ಎಂಬುದರಿಂದ ಅದಕ್ಕೆ ಕಾರಣ **ದ್ರುತತರಗಮನ** ಎಂಬುದರಿಂದ ಹೇಳಿರುವರು. **ದ್ರುತತರಗಮನಃ** ಅತ್ಯಂತ ಶೀಘ್ರಗಾಮಿ ಎಂದರ್ಥ.

**ಅಥ ಚ ಆಪೂರ್ಯಮಾಣಾಭಿರುಪಕ್ಷೀಯಮಾಣಾಭಿಶ್ಚ ಕಲಾಭಿಃ ಪಿತೄಣಾ ಮಹೋರಾತ್ರಾಣಿ ಪೂರ್ವಪಕ್ಷಾಪರಪಕ್ಷಾಭ್ಯಾಂ ವಿತನ್ವಾನಃ ಸರ್ವಜೀವ-ನಿವಹಪ್ರಾಣೋ ಜೀವಶ್ಚೈಕಮೇಕಂ ನಕ್ಷತ್ರಂ ತ್ರಿಂಶನ್ಮುಹೂರ್ತೈಃ ಭುಂಕ್ತೇ ॥೯॥**

**ಅಥ ಚ** ಮತ್ತು **ಆಪೂರ್ಯಮಾಣಾಭಿಃ** ದಿನದಿನಕ್ಕೂ ವೃದ್ಧಿ ಹೊಂದುವ **ಉಪಕ್ಷೀಯಮಾಣಾಭಿಃ ಚ** ದಿನದಿನಕ್ಕೂ ಕ್ಷೀಣವಾಗುವ **ಕಲಾಭಿಃ** ಕಲೆಗಳಿಂದ ಕ್ರಮವಾಗಿ **ಪಿತೄಣಾಂ ಅಹೋರಾತ್ರಾಣಿ** ಪಿತೃದೇವತೆಗಳಿಗೆ ಹಗಲು ರಾತ್ರಿಗಳನ್ನು **ಪೂರ್ವಪಕ್ಷಾಪರಪಕ್ಷಾಭ್ಯಾಂ** ಶುಕ್ಲಪಕ್ಷ ಕೃಷ್ಣಪಕ್ಷಗಳ ಮೂಲಕ **ವಿತನ್ವಾನಃ** ಉಂಟು ಮಾಡುತ್ತ **ಸರ್ವಜೀವನಿವಹಪ್ರಾಣಃ** ಆಹಾರ ವೃದ್ಧಿಯನ್ನು ಮಾಡುವುದರಿಂದ ಎಲ್ಲ ಪ್ರಾಣಿರಾಶಿ ಚೇಷ್ಟಕನಾಗಿ **ಜೀವಃ** ಜೀವನಪ್ರದನಾಗಿ ಚಂದ್ರನು **ಏಕಂ ನಕ್ಷತ್ರಂ** ಒಂದೊಂದು ನಕ್ಷತ್ರವನ್ನು **ತ್ರಿಂಶನ್ಮೂಹೂರ್ತೈಃ** ಅರವತ್ತು ಘಳಿಗೆಗಳಿಂದ **ಭುಂಕ್ತೇ** ಸಂಚರಿಸುವನು. ಇದರಿಂದ ಸೂರ್ಯನ ಪಕ್ಷಸಂಚಾರವನ್ನು ಒಂದು ದಿನದಲ್ಲಿ ಮುಗಿಸುವನು ಎಂದು ಹೇಳಿದ್ದನ್ನು ಸ್ಪಷ್ಟಪಡಿಸಿರುವರು. ॥೯॥

ಚಂದ್ರಾಂತರ್ಯಾಮಿಯ ಮಹಿಮಾಂತರವನ್ನು ಹೇಳುತ್ತ ಜೀವನಿವಹಪ್ರಾಣಃ ಎಂದು ಹೇಳಿದ್ದನ್ನು ವಿಶದಪಡಿಸುವರು.

**ಯ ಏಷ ಷೋಡಶಕಲಃ ಪುರುಷೋ ಭಗವಾನ್ಮನೋಮಯೋಽ-ನ್ನಮಯೋಽಮೃತಮಯೋ ದೇವಪಿತೃಮನುಷ್ಯಭೂತ ಪಶುಪಕ್ಷಿಸರೀಸೃಪ-ವೀರುಧಾಂ ಪ್ರಾಣಾಪ್ಯಾಯನಶೀಲತ್ವಾತ್ಸರ್ವಮಯ ಇತಿ ವರ್ಣಯಂತಿ ॥೧೦॥**

**ಯ ಏಷಃ ಷೋಡಶಕಲಃ ಪುರುಷಃ** ಯಾವ ಈ ಹದಿನಾರು ಕಲೆಗಳುಳ್ಳ ಪುರುಷ ನಾಮಕ ಶ್ರೀಹರಿಯು **ಮನೋಮಯಃ** ಎಲ್ಲರ ಮನಸ್ಸನ್ನು ಪ್ರೇರಿಸುವನು ಚಂದ್ರನ ಪಕ್ಷದಲ್ಲಿ ಮನೋಭಿಮಾನಿ ಎಂದರ್ಥ **ಅನ್ನಮಯಃ** ಆಹಾರವನ್ನು ಕೊಡುವವನು **ಅಮೃತಮಯಃ** ಅಮೃತವನ್ನು ಸುರಿಸುವ ಕಿರಣಗಳುಳ್ಳವನು ಆದ್ದರಿಂದ **ದೇವಪಿತೃಮನುಷ್ಯಭೂತಪಕ್ಷಿಸರೀಸೃಪವೀರುಧಾಂ** ದೇವತೆಗಳು, ಪಿತೃಗಳು ಮನುಷ್ಯರು, ಭೂತಗಳು, ಪಶುಗಳು, ಪಕ್ಷಿಗಳು, ಸರ್ಪಗಳು, ಬಳ್ಳಿಗಳು ಇವೆಲ್ಲಕ್ಕೂ **ಪ್ರಾಣಾಪ್ಯಾಯನಶೀಲತ್ವಾತ್** ಅನ್ನವನ್ನು ವೃದ್ಧಿಗೊಳಿಸುವ ಮೂಲಕ ಪ್ರಾಣಕ್ಕೆ ಸಂತೋಷವನ್ನುಂಟುಮಾಡುವ ಸ್ವಭಾವದವನಾದ್ದರಿಂದ **ಸರ್ವಮಯಃ** ಸರ್ವಜೀವ




ಪ್ರಧಾನನು, ಸರ್ವಕ್ಕೂ ಉಪಜೀವ್ಯನು ಇತಿ ಎಂದು **ವರ್ಣಯಂತಿ** ಜ್ಞಾನಿಗಳು ಹೇಳುವರು. ।।೧೦।।

**ತತ ಉಪರಿಷ್ಟಾಲ್ಲಕ್ಷಯೋಜನತೋ ನಕ್ಷತ್ರಾಣಿ ಮೇರುಂ ದಕ್ಷಿಣೇನೈವ ಕಾಲಾ(ನ)ಯನ ಈಶ್ವರಯೋಜಿತಾನಿ ಸಹಾಭಿಜಿತಾಷ್ಟಾವಿಂಶತಿಃ ।।೧೧।।**

**ತತಃ** ಆ ಚಂದ್ರಲೋಕಕ್ಕೂ **ಉಪರಿಷ್ಟಾತ್** ಮೇಲೆ **ಲಕ್ಷಯೋಜನತಃ** ಒಂದು ಲಕ್ಷ ಯೋಜನ ದೂರದಲ್ಲಿ **ನಕ್ಷತ್ರಾಣಿ** ಅಶ್ವಿನೀ ಮೊದಲಾದ ನಕ್ಷತ್ರಗಳು (ಇರುವುವು) ಅವು **ಮೇರುಂ** ಮೇರು ಪರ್ವತವನ್ನು **ದಕ್ಷಿಣೇನೈವ** ಪ್ರದಕ್ಷಿಣೆಯಾಗಿಯೇ ಹೋಗುವುವು. ಏವಕಾರದಿಂದ ಅವುಗಳಿಗೆ ಸೂರ್ಯಾದಿಗಳಿಗಿರುವಂತೆ ಮಂದಮಧ್ಯಾದಿ ಗತಿಗಳಿಲ್ಲವೆಂದು ಸೂಚಿಸಿರುವರು. **ಕಾಲಾ(ನ)ಯನೇ** ಕಾಲಜ್ಞಾಪನೆಗಾಗಿ ಸೂರ್ಯರಥ ಚಕ್ರವಾದ ಕಾಲಚಕ್ರದಲ್ಲಿ **ಈಶ್ವರಯೋಜಿತಾನಿ** ಶ್ರೀಹರಿಯಿಂದ ನಿಯುಕ್ತವಾಗಿರುವುವು. ಅದಕ್ಕನುಸಾರವಾಗಿ ಪ್ರವರ್ತಿಸುವುದೇ ಅದರಲ್ಲಿ ನಿಯುಕ್ತವಾಗಿರುವಿಕೆಯು. ನಕ್ಷತ್ರ ಮಂಡಲವು ಎತ್ತರದಲ್ಲಿ ಇದ್ದಮೇಲೆ ಸೂರ್ಯಾದಿಗಳಿಗೆ ಆ ಆ ನಕ್ಷತ್ರ ಪ್ರಾಪ್ತಿಯೆಂದರೆ ಅವುಗಳಿಗೆ ಸಮಾನ ಸ್ಥಳಕ್ಕೆ ಬರುವುದೆಂದರ್ಥ.

ಅವು **ಅಭಿಜಿತಾ ಸಹ** ಉತ್ತರಾಷಾಢಾ ಮತ್ತು ಶ್ರವಣಗಳ ಸಂಧಿರೂಪವಾದ ಅಥವಾ ರೇವತೀ ಅಶ್ವಿನಿಗಳ ಸಂಧಿರೂಪವಾದ ಅಭಿಜಿತ್ ನಕ್ಷತ್ರವನ್ನು ಲೆಕ್ಕಕ್ಕೆ ತೆಗೆದುಕೊಂಡಾಗ **ಅಷ್ಟಾವಿಶಂತಿಃ** ಇಪ್ಪತ್ತೆಂಟು (**ಉಪಲಭ್ಯಂತೇ**) ದೊರೆಯುವುವು. ।।೧೧।।

**ತತ ಉಪರಿಷ್ಟಾದುಶನಾ ದ್ವಿಲಕ್ಷಯೋಜನತ ಉಪಲಭ್ಯತೇ ಪುರತಃ- ಪಶ್ಚಾತ್ಸಹೈವ ಚಾರ್ಕಸ್ಯ ಶೈಘ್ರ್ಯಮಾಂದ್ಯಸಾಮ್ಯಾದಿಭಿರ್ಗತಿಭಿರರ್ಕವಚ್ಚರತಿ ಲೋಕಾನಾಂ ನಿತ್ಯಾನೂಕೂಲ ಏವ ಪ್ರಾಯೇಣ ವರ್ಷಂ ಯತ್ ಸ್ಥಿತಿದ್ವಾರೇಣಾನುಮೀಯತೇ ಸ ವೃಷ್ಟಿವಿಷ್ಟಂಭಗ್ರಹೋಪಶಮನಃ ಉಶನಸಾ ಬುಧೋಽಪಿ ವ್ಯಾಖ್ಯಾತಃ ।।೧೨।।**

**ತತ ಉಪರಿಷ್ಟಾತ್** ಅಶ್ವಿನ್ಯಾದಿ ನಕ್ಷತ್ರಕ್ಕಿಂತ ಮೇಲೆ **ದ್ವಿಲಕ್ಷಯೋಜನತಃ** ಎರಡು ಲಕ್ಷಯೋಜನಗಳಲ್ಲಿ **ಉಶನಾಃ** ಶುಕ್ರನು(ಗ್ರಹವು) **ಉಪಲಭ್ಯತೇ** ದೊರೆಯುವನು

(ವುದು) ಅವನು **ಅರ್ಕವತ್** ಸೂರ್ಯನಂತೆಯೇ **ಶೈಘ್ರ್ಯಮಾಂದ್ಯಸಾಮ್ಯಾದಿಗತಿಭಿಃ** ಶೀಘ್ರಮಂದಸಮಗತಿಗಳಿಂದ ಕ್ರಮವಾಗಿ **ಅರ್ಕಸ್ಯ** ಸೂರ್ಯನ **ಪುರತಃ** ಮುಂದೆ ಅಂದರೆ ತನ್ನ ಶೀಘ್ರಗತಿಯಿಂದ ಸೂರ್ಯನಿಂದ ಭುಕ್ತನಕ್ಷತ್ರದಲ್ಲಿ ಸಮಗತಿಯಿಂದ **ಸಹೈವ** ಸೂರ್ಯನಿಂದ ಭುಜ್ಯಮಾನ ನಕ್ಷತ್ರದಲ್ಲಿ **ಚರತಿ** ಸಂಚರಿಸುವನು. ಆದಿಪದದಿಂದ ಅತಿಚಾರವನ್ನು ತೆಗೆದುಕೊಳ್ಳಬೇಕು. **ಪ್ರಾಯೇಣ** ಬಹುತೇಕ (ಬಹಳವಾಗಿ) **ನಿತ್ಯದಾ** ಯಾವಾಗಲೂ **ಲೋಕಾನಾಂ** ಜನರಿಗೆ **ಅನುಕೂಲ ಏವ** ಹಿತಕರನೇ ಆದ ಶುಕ್ರನ **ಸ್ಥಿತಿದ್ವಾರೇಣ** ಇರುವಿಕೆಯ ಮೂಲಕ **ವರ್ಷಂ** ಮಳೆಯು **ಅನುಮೀಯತೇ** ನಿರ್ಣಯಿಸಲ್ಪಡುವುದು. **ಸಃ** ಶುಕ್ರನು **ವೃಷ್ಟಿ** ಮಳೆಯನ್ನು **ವಿಷ್ಟಂಭ** ತಡೆಯುವ **ಗ್ರಹ** ಅಂಗರಾಕಗ್ರಹದ **ಉಪಶಮನಃ** ಕಾರ್ಯವನ್ನು ತಡೆಯುವನು **ವ್ಯಾಖ್ಯಾತಃ ಉಶನಸಾ** ಶುಕ್ರನ ಗತ್ಯಾದಿಗಳನ್ನು ತಿಳಿದಿದ್ದರಿಂದ **ಬುಧಃ ಅಪಿ** ಬುಧನನ್ನು ತಿಳಿಸಿದಂತಾಯಿತು. ||೧೨||

ಸೂರ್ಯನ ಮುಂದೆ, ಹಿಂದೆ, ಜೊತೆಗೆ ಸಂಚರಿಸುವಲ್ಲಿ ವಿಶೇಷ ಹೇಳುವರು ಮುಂದಿನ ವಾಕ್ಯದಲ್ಲಿ (ಗತ್ಯಾದಿಗಳಲ್ಲಿ ಬುಧನು ಶುಕ್ರನನ್ನು ಹೋಲುವನು ಎಂದರ್ಥ).

**ತತ ಉಪರಿಷ್ಟಾತ್ ದ್ವಿಲಕ್ಷಯೋಜನತೋ ಬುಧಃ ಸೋಮಸುತಃ ಉಪಲಭ್ಯಮಾನಃ ಪ್ರಾಯೇಣ ಶುಭಕೃದ್ಯದಾರ್ಕಮತಿರಿಚ್ಯೇತ ತದಾಽತಿವಾತಾಭ್ರಪ್ರಾಯಾಽನಾವೃಷ್ಟ್ಯಾ(ದಿ) ಭಯಮಾಶಂಸತೇ ||೧೩||**

**ತತ ಉಪರಿಷ್ಟಾತ್** ಶುಕ್ರ ಮಂಡಲದ ಮೇಲೆ **ದ್ವಿಲಕ್ಷಯೋಜನತಃ** ಎರಡು ಲಕ್ಷ ಯೋಜನಗಳಲ್ಲಿ (ಅಂದರೆ ಎರಡು ಲಕ್ಷಯೋಜನದ ಮೇಲೆ) **ಸೋಮಸುತಃ ಬುಧಃ** ಚಂದ್ರನ ಮಗನಾದ ಬುಧನು **ಉಪಲಭ್ಯಮಾನಃ** ದೊರೆಯುವವನಾಗಿ **ಪ್ರಾಯೇಣ** ಬಹಳವಾಗಿ (ಯಾವ ಪಾಪಗ್ರಹದ ಸಂಬಂಧವೂ ಇಲ್ಲದ ಕಾಲದಲ್ಲಿ) **ಶುಭಕೃತ್** ಜನರಿಗೆ ಒಳ್ಳೆಯದನ್ನೇ ಮಾಡುವನು **ಯದಾ** ಯಾವಾಗ **ಅರ್ಕಂ** ಸೂರ್ಯನನ್ನು **ಅತಿರಿಚ್ಯೇತ** ಅತಿಚಾರಗತಿಯಿಂದ ಕ್ರಮಪ್ರಾಪ್ತನಕ್ಷತ್ರವನ್ನು ಬಿಟ್ಟು ಮುಂದಿನ ನಕ್ಷತ್ರಕ್ಕೆ ಹೋಗಿ ಅತಿಕ್ರಮಿಸುವನೋ **ತದಾ** ಆಗ **ಅತಿವಾತ** ಹೆಚ್ಚಾದ ಗಾಳಿ **ಅಭ್ರಪ್ರಾಯಾನಾವೃಷ್ಟಿ** ಮೋಡಮುಸುಕಿದ್ದರೂ ಮಳೆಬಾರದಿರುವುದು **ಆದಿ** ಮುಂತಾದ **ಭಯಂ** ಭಯವನ್ನು **ಆಶಂಸತೇ** ಸೂಚಿಸುವನು. ||೧೩||




**ತತ ಊರ್ಧ್ವಮಂಗಾರಕೋಽಪಿ ಯೋಜನಲಕ್ಷದ್ವಿತಯ ಉಪಲಭ್ಯಮಾನ-ಸ್ತ್ರಿಭಿಸ್ತ್ರಿಭಿಃ ಪಕ್ಷೈರೇಕೈಕಶೋ ರಾಶೀನ್ ದ್ವಾದಶಾನುಭುಂಕ್ತೇ ಯದಿ ನ ವಕ್ರೇಣಾಭಿವರ್ತತೇ ಪ್ರಾಯೇಣಾಶುಭಗ್ರಹೋಽಘಶಂಸಃ ||೧೪||**

**ತತ ಊರ್ಧ್ವಂ** ಆ ಬುಧಮಂಡಲದ ಮೇಲೆ **ಯೋಜನಲಕ್ಷದ್ವಿತಯೇ** ಎರಡು ಲಕ್ಷಯೋಜನಗಳಲ್ಲಿ **ಉಪಲಭ್ಯಮಾನಃ** ದೊರೆಯುವ **ಅಂಗಾರಕಃ ಅಪಿ** ಅಂಗಾರಕನೂ **ಯದಿ ನ ವಕ್ರಃ** ವಕ್ರನಾಗದಿದ್ದರೆ **ತ್ರಿಭಿಃ ತ್ರಿಭಿಃ ಪಕ್ಷೈಃ** ಮೂರು ಮೂರು ಪಕ್ಷಗಳಿಗೆ (ಒಂದುವರೆ ತಿಂಗಳಿಗೆ) **ಏಕೈಕಶಃ** ಒಂದೊಂದು ರಾಶಿಯಂತೆ **ದ್ವಾದಶರಾಶೀನ್** ಹನ್ನೆರಡು ರಾಶಿಗಳನ್ನು **ಅನುಭುಂಕ್ತೇ** ಒಂದುವರೆ ವರ್ಷದಲ್ಲಿ ಅನುಭವಿಸುವನು **ಅಘಶಂಸಃ** ಜನರಿಗೆ ದುಃಖ ಸೂಚಿಸುವನು **ಪ್ರಾಯೇಣ** ಶುಭಗ್ರಹ ಸಂಪರ್ಕವಿಲ್ಲದಿರುವಾಗ **ಅಶುಭಗ್ರಹಃ** ಅಹಿತಕರವಾದ ಗ್ರಹವು. ಇದರಿಂದ ಶುಭಗ್ರಹ ಸಂಪರ್ಕವಿದ್ದಾಗ ಶುಭಸೂಚಕನೆಂದು ಹೇಳಿದಂತಾಯಿತು. ||೧೪||

**ತತ ಉಪರಿಷ್ಠಾದ್ದ್ವಿಲಕ್ಷಯೋಜನಾಂತರಗತೋ ಭಗವಾನ್ ಬೃಹಸ್ಪತಿ-ರೇಕೈಕಸ್ಮಿನ್ ರಾಶೌ ಪರಿವತ್ಸರಂ ಪ್ರಚರತಿ ಯದಿ ನ ವಕ್ರಃ ಸ್ಯಾತ್ ಪ್ರಾಯಶೋಽನುಕೂಲೋ ಬ್ರಾಹ್ಮಣಕುಲಸ್ಯ ||೧೫||**

**ತತ ಉಪರಿಷ್ಠಾತ್** ಅಂಗಾರಕ ಮಂಡಲದ ಮೇಲೆ **ದ್ವಿಲಕ್ಷಯೋಜನಾಂತರಗತಃ** ಎರಡು ಲಕ್ಷ ಯೋಜನ ದೂರದಲ್ಲಿರುವ **ಭಗವಾನ್** ಪೂಜ್ಯನಾದ **ಬೃಹಸ್ಪತಿಃ** ಬೃಹಸ್ಪತಿಯು(ಗುರು) **ಏಕೈಕಸ್ಮಿನ್ ರಾಶೌ** ಒಂದೊಂದು ರಾಶಿಯಲ್ಲಿ **ಯದಿ ವಕ್ರಃ ನ ಸ್ಯಾತ್** ವಕ್ರನಾಗದಿರುವಾಗ **ಪರಿವತ್ಸರಂ** ಬೃಹಸ್ಪತಿ ಮಾನದ ಒಂದು ವರ್ಷದಲ್ಲಿ (ಬೃಹಸ್ಪತಿಯು ಹನ್ನೆರಡು ರಾಶಿಗಳನ್ನೂ ಸಂಚರಿಸುವ ಕಾಲ ಹನ್ನೆರಡನೆ ಒಂದು ಭಾಗಕ್ಕೆ ಪರಿವತ್ಸರವೆಂದು ಹೆಸರು) **ಪ್ರಚರತಿ** ಸಂಚರಿಸುವನು **ಪ್ರಾಯಶಃ** ಅಷ್ಟಮಾದಿ ಪಾಪ ಸ್ಥಾನಗಳನ್ನು ಬಿಟ್ಟು ಉಳಿದ ಸ್ಥಾನಗಳಲ್ಲಿ **ಬ್ರಾಹ್ಮಣಕುಲಸ್ಯ ಅನುಕೂಲಃ** ಬ್ರಾಹ್ಮಣ ಕುಲಕ್ಕೆ ಹಿತಕರನು. ||೧೫||

**ತತ ಉಪರಿಷ್ಠಾದ್ಯೋಜನಲಕ್ಷದ್ವಯಾತ್ಪ್ರತೀಯಮಾನಃ ಶನೈಶ್ಚರ ಏಕೈಕಸ್ಮಿನ್ ರಾಶೌ ತ್ರಿಂಶತ್ ಮಾಸಾನ್ ವಿಲಂಬಮಾನಃ ಸರ್ವಾನೇವಾನುಪರ್ಯೇತಿ ತಾವದ್ಭಿರನುವತ್ಸರೈಃ ಪ್ರಾಯೇಣ ಹಿ ಸರ್ವೇಷಾಂ ಅಶಾಂತಿಕರಃ ||೧೬||**

**ತತ ಉಪರಿಷ್ಟಾತ್** ಬೃಹಸ್ಪತಿ ಮಂಡಲದ ಮೇಲೆ **ಯೋಜನಲಕ್ಷದ್ವಯಾತ್ ಪ್ರತೀಯಮಾನಃ** ಎರಡುಲಕ್ಷ ಯೋಜನಗಳಲ್ಲಿ ಕಂಡುಬರುವ **ಶನೈಶ್ಚರಃ** ಶನೈಶ್ಚರನು **ಏಕೈಕಸ್ಮಿನ್ ರಾಶೌ** ಒಂದೊಂದು ರಾಶಿಯಲ್ಲಿ **ತ್ರಿಂಶತ್ ಮಾಸಾನ್** ಮೂವತ್ತು ತಿಂಗಳು ಕಾಲ **ವಿಲಂಬಮಾನಃ** ನಿಧಾನವಾಗಿ ಸಂಚರಿಸುತ್ತ **ತಾವದ್ಭಿಃ ಅನುವತ್ಸರೈಃ** ಮೂವತ್ತು ಅನುವತ್ಸರ ಕಾಲಗಳಲ್ಲಿ **ಸರ್ವಾನ್ ಏವ ಅನುಪರ್ಯೇತಿ** ಎಲ್ಲ ರಾಶಿಗಳನ್ನೂ ಸುತ್ತುವನು **ಪ್ರಾಯೇಣ** ಹನ್ನೊಂದನೇ ಸ್ಥಾನ ಒಂದನ್ನು ಬಿಟ್ಟು ಉಳಿದೆಲ್ಲ ಸ್ಥಾನಗಳಲ್ಲಿ **ಸರ್ವೇಷಾಂ** ಎಲ್ಲ ಪ್ರಾಣಿಗಳಿಗೂ **ಅಶಾಂತಿಕರಃ** ದುಃಖಕರನೆಂದು ಅನ್ವರ್ಥವಾದ ಹೆಸರು. ।।೧೬।।

**ತತ ಉತ್ತರಸ್ಮಾತ್ ಋಷಯ ಏಕಾದಶಲಕ್ಷಯೋಜನನಾಂತರ ಉಪಲಕ್ಷ್ಯಂತೇ ಯ ಏವ ಲೋಕಾನ್ ಸಮನುಭಾವಯಂತೋ ಭಗವತೋ ವಿಷ್ಣೋರ್ಯತ್ಪರಮಂ ಪದಂ ಪ್ರದಕ್ಷಿಣಂ ಪ್ರಕ್ರಮಂತಿ ।।೧೭।।**

**ತತಃ** ಶನಿಮಂಡಲದ **ಉತ್ತರಸ್ಮಾತ್** ಉತ್ತರಕ್ಕೆ **ಏಕಾದಶಲಕ್ಷಯೋಜನಾಂತರೇ** ಹನ್ನೊಂದುಲಕ್ಷ ಯೋಜನ ದೂರದಲ್ಲಿ **ಋಷಯಃ** ಸಪ್ತಋಷಿಗಳು **ಏವಂ** ಈ ರೀತಿ **ಲೋಕಾನ್** ಲೋಕಗಳನ್ನು (ಜನರನ್ನು) **ಸಮನುಭಾವಯಂತಃ** ತಮ್ಮ ಅನುಗ್ರಹದಿಂದ ಅಭಿವೃದ್ಧಿಗೊಳಿಸುತ್ತಾ **ಭಗವತಃ** ಸರ್ವೈಶ್ವರ್ಯಸಂಪನ್ನನಾದ **ವಿಷ್ಣೋಃ** ಶ್ರೀಹರಿಯ **ಯತ್** ಯಾವ **ಪರಮಂ ಪದಂ** ಶಿಂಶುಮಾರ ರೂಪದಿಂದಿರುವ ಸ್ಥಾನವನ್ನು **ಪ್ರದಕ್ಷಿಣಂ ಪ್ರಕ್ರಮಂತಿ** ಪ್ರದಕ್ಷಿಣೆಯಾಗಿ ಸಂಚರಿಸುವರು.।।೧೭।।

**ಅಥ ತಸ್ಮಾತ್ಪರತಸ್ತ್ರಯೋದಶಲಕ್ಷಯೋಜನಾಂತರತೋ ಯತ್ತದ್ವಿಷ್ಣೋಃ ಪರಮಂ ಪದಮಭಿವದಂತಿ ಯತ್ರ ಮಹಾಭಾಗವತೋ ಧ್ರುವ ಔತ್ತಾನಪಾದಿ-ರಗ್ನಿನೇಂದ್ರೇಣ ಪ್ರಜಾಪತಿನಾ ಕಶ್ಯಪೇನ ಧರ್ಮೇಣ ಚ ಸಮಕಾಲಯುಗ್ಭಿಃ ಸಬಹುಮಾನಂ ದಕ್ಷಿಣತಃ ಕ್ರಿಯಮಾಣ ಇದಾನೀಮಪಿ ಕಲ್ಪಜೀವಿನಾ-ಮಾಜೀವ್ಯ ಉಪಾಸ್ತೇ ತಸ್ಯೇಹಾನುಭಾವ ಉಪವರ್ಣಿತಃ ।।೧೮।।**

**ಅಥ** ಮತ್ತು **ತಸ್ಮಾತ್** ಆ ಸಪ್ತರ್ಷಿ ಮಂಡಲಕ್ಕೆ **ಪರತಃ** ಮೇಲೆ **ತ್ರಯೋದಶಲಕ್ಷ ಯೋಜನಾಂತರತೋ** ಹದಿಮೂರು ಲಕ್ಷ ಯೋಜನ ದೂರದಲ್ಲಿ **ಯತ್** ಯಾವ ಧ್ರುವ ಮಂಡಲವನ್ನು **ವಿಷ್ಣೋಃ ಪರಮಂ ಪದಂ ಅಭಿವದಂತಿ** ಶ್ರೀಹರಿಯ ಸರ್ವೋಚ್ಚವಾದ ಶಿಂಶುಮಾರ ಸ್ಥಾನವೆಂದು ಜ್ಞಾನಿಗಳು ಹೇಳುವರೋ **ಯತ್ರ**

 

ಯಾವ ಸ್ಥಳದಲ್ಲಿ **ಮಹಾಭಾಗವತಃ** ಪರಮ ಭಗವದ್ಭಕ್ತನಾದ **ಔತ್ತಾನಪಾದಿಃ** ಉತ್ತಾನ ಪಾದರಾಜನ ಮಗನಾದ **ಧ್ರುವಃ** ಧ್ರುವನು **ಸಮಕಾಲಯುಗ್ಭಿಃ ಚ** ತಾನಿರುವಷ್ಟು ಕಾಲವೂ ಇರುವ (ದಿನಕಲ್ಪ ಪೂರ್ತಿ ಇರುವ) **ಅಗ್ನಿನಾ** ಅಗ್ನಿಯಿಂದ **ಇಂದ್ರೇಣ** ಇಂದ್ರನಿಂದ **ಪ್ರಜಾಪತಿನಾ** ದಕ್ಷ ಪ್ರಜೇಶ್ವರನಿಂದ **ಕಶ್ಯಪೇನ** ಕಶ್ಯಪರಿಂದ **ಧರ್ಮೇಣ ಚ** ಯಮಧರ್ಮನಿಂದಲೂ **ಸಬಹುಮಾನಂ** ಗೌರವಪುರಸ್ಸರವಾಗಿ **ದಕ್ಷಿಣತಃ** ಪ್ರದಕ್ಷಿಣೆಯಾಗಿ **ಕ್ರಿಯಮಾಣಃ** ಮಾಡಲ್ಪಡುವವನಾಗಿ(ಪ್ರದಕ್ಷಿಣೆ ಮಾಡಿಸಿ ಕೊಳ್ಳುವವನಾಗಿ) **ಕಲ್ಪಜೀವಿನಾಂ** ಮಹರ್ಲೋಕ ವಾಸಿಗಳಾದ ಜೀವರಿಗೆ **ಆಜೀವ್ಯಃ** ತತ್ತ್ವೋಪದೇಶಾದಿಗಳಿಂದ ಉಪಜೀವ್ಯನಾಗಿ **ಇದಾನೀಮಪಿ** ಈಗಲೂ **ಉಪಾಸ್ತೇ** ಶ್ರೀಹರಿಯನ್ನು ಉಪಾಸಿಸುವನೋ **ತತ್** ಆ ಶಿಂಶುಮಾರ ಸ್ಥಾನವು ಇರುವುದು.

**ತಸ್ಯ** ಆ ಧ್ರುವರಾಜನ **ಅನುಭಾವಃ** ಮಹಿಮೆಯು **ಇಹ** ಈ ಗ್ರಂಥದ ಚತುರ್ಥಸ್ಕಂಧದಲ್ಲಿ **ಉಪವರ್ಣಿತಃ** ವಿವರವಾಗಿ ಹೇಳಲ್ಪಟ್ಟಿರುವುದು. ಧ್ರುವ ಮಹಿಮೆಯನ್ನೇ ಹೇಳುತ್ತಾರೆ.

**ಸ ಹಿ ಸರ್ವೇಷಾಂ ಜ್ಯೋತಿರ್ಗಣಾನಾಂ ಗ್ರಹನಕ್ಷತ್ರಾದೀನಾಮ-ನಿಮೇಷೇಣಾವ್ಯಕ್ತರಂಹಸಾ ಭಗವತಾ ಕಾಲೇನ ಭ್ರಾಮ್ಯಮಾಣಾನಾಂ ಸ್ಥಾಣುರಿವಾವಷ್ಟಂಭ ಈಶ್ವರೇಣ ವಿಹಿತಃ ಶಶ್ವದವಭಾಸತೇ ಯಥಾ ಮೇಢೀಸ್ತಂಭ ಆಕ್ರಮಣಪಶವಃ ಸಂಯೋಜಿತಾಸ್ತ್ರಿಭಿಃ ಸವನೈರ್ಯಥಾಸ್ಥಾನಂ ಮಂಡಲಾನಿ ಚರಂತಿ ||೧೯||**

**ಸ ಹಿ** ಆ ಧ್ರುವರಾಜನಾದರೂ **ಅನಿಮೇಷೇಣ** ಸದಾ ಕಣ್ಣು ತೆರೆದಿರುವ **ಅವ್ಯಕ್ತರಂಹಸಾ** ತಿಳಿಯದ ವೇಗವುಳ್ಳ **ಭಗವತಾ ಕಾಲೇನ** ಕಾಲನಾಮಕ ಶ್ರೀಹರಿಯಿಂದ **ಭ್ರಾಮ್ಯಮಾಣಾನಾಂ** ತಿರುಗಿಸಲ್ಪಡುವ **ಗ್ರಹನಕ್ಷತ್ರಾದೀನಾಂ ಜ್ಯೋತಿರ್ಗಣಾನಾಂ** ಗ್ರಹನಕ್ಷತ್ರಮುಂತಾದ ಜ್ಯೋತಿಸ್ಸಮೂಹಕ್ಕೆ **ಅವಷ್ಟಂಭಃ** ಆಶ್ರಯವಾದ **ಸ್ಥಾಣುಃ ಇವ** ಗೂಟಿಯ(ಕಂಬದ)ಂತೆ **ಈಶ್ವರೇಣ** ಸರ್ವನಿಯಾಮಕ ಶ್ರೀಹರಿಯಿಂದ **ವಿಹಿತಃ ಸನ್** ಇಡಲ್ಪಟ್ಟವನಾಗಿ **ಶಶ್ವತ್** ಎಲ್ಲ ಕಾಲದಲ್ಲಿಯೂ **ಅವಭಾಸತೇ** ಪ್ರಕಾಶಿಸುತ್ತಿರುವನು **ಯಥಾ** ಹೇಗೆ **ಮೇಢೀಸ್ತಂಭೇ** ಮಧ್ಯದಲ್ಲಿ ನೆಟ್ಟಿರುವ ಕಂಬದಲ್ಲಿ (ಮೇಟಿ) **ಸಂಯೋಜಿತಾಃ** ಹಗ್ಗದಿಂದ ಕಟ್ಟಿರುವ **ಆಕ್ರಮಣ ಪಶವಃ** ಧಾನ್ಯಗಳನ್ನು ತುಳಿದು ಬೇರ್ಪಡಿಸುವ ಸಾಲಾಗಿರುವ ಎತ್ತು ಮೊದಲಾದವು

**ತ್ರಿಭಿಃ ಸವನೈಃ** ತ್ವರಿತ, ಮಂದ, ಸಮ ಗತಿಗಳಿಂದ **ಯಥಾಸ್ಥಾನಂ** ತಮ್ಮ ತಮ್ಮ ನಿಯಮಿತ ಸ್ಥಳಗಳನ್ನು ಬಿಡದೇ **ಮಂಡಲಾನಿ ಚರಂತಿ** ಆ ಕಂಬವನ್ನು ಸುತ್ತುವವೋ ಹಾಗೆ. ॥೧೯॥

**ಏವಂ ಭಗಣಾ ಗ್ರಹಾದಯ ಏತಸ್ಮಿನ್ನಂತರ್ಬಹಿರ್ಯೋಗೇನ ಕಾಲಚಕ್ರ ಆಯೋಜಿತಾ ಧ್ರುವಮೇವಾವಲಂಬ್ಯ ವಾಯುನೋದೀರ್ಯಮಾಣಾ ಆಕಲ್ಪಾಂತಂ ಪರಿತಃ ಕ್ರಮಂತಿ ॥೨೦॥**

**ಏವಂ** ಅದೇ ರೀತಿಯಲ್ಲಿ **ಕಾಲಚಕ್ರೇ** ಸೂರ್ಯನ ರಥಚಕ್ರದಲ್ಲಿ **ಆಯೋಜಿತಾಃ** ಶ್ರೀಹರಿಯಿಂದ ವಾಯುಪಾಶದಿಂದ ಕಟ್ಟಲ್ಪಟ್ಟಿರುವ **ಭಗಣಾಃ** ನಕ್ಷತ್ರಗಣಗಳು **ಗ್ರಹಾದಯಃ** ಗ್ರಹಗಳು ಸಪ್ತರ್ಷಿಗಳು ಮುಂತಾದವು **ಏತಸ್ಮಿನ್** ಈ ಧ್ರುವ ಮಂಡಲದಲ್ಲಿ **ಅಂತರ್ಬಹಿರ್ಯೋಗೇನ** ಕೆಲವು ಒಳ, ಹಲವು ಹೊರ ಸಂಬಂಧದಿಂದ **ಧ್ರುವಮೇವ ಅವಲಂಬ್ಯ** ಧ್ರುವಮಂಡಲವನ್ನೇ ಆಶ್ರಯಿಸಿ **ವಾಯುನಾ** ಆತಿವಾಹಿಕ ವಾಯುವಿನಿಂದ **ಉದೀರ್ಯಮಾಣಾಃ** ಪ್ರೇರಿಸಲ್ಪಡುವವುಗಳಾಗಿ **ಆಕಲ್ಪಾಂತಂ** ದಿನಕಲ್ಪ ಮುಗಿಯುವವರೆಗೂ **ಪರಿತಃ** ಧ್ರುವನ ಸುತ್ತಲೂ **ಚಂಕ್ರಮಂತಿ** ಸಂಚರಿಸುವವು. ॥೨೦॥

**ನಭಸಿ ಯಥಾ ಮೇಘಾಃ ಶ್ಯೇನಾದಯೋ ವಾಯುವಶಾಃ ಕರ್ಮಸಾರಥಯಃ ಪರಿವರ್ತಂತೇ ॥೨೧॥ ಏವಂ ಜ್ಯೋತಿರ್ಗಣಾಃ ಪ್ರಕೃತಿಪುರುಷ-ಸಂಯೋಗಾನುಗೃಹೀತ ಕರ್ಮನಿರ್ಮಿತಗತಯೋ ಭುವಿ ನ ಪತಂತಿ॥೨೨॥**

**ಕೇಚನೈತಜ್ಜ್ಯೋತಿರನೀಕಂ ಶಿಂಶುಮಾರಸಂಸ್ಥಾನಸ್ಯ ಭಗವತೋ ವಾಸುದೇವಸ್ಯ ಯೋಗಧಾರಣಾಯಾಮನುವರ್ಣಯಂತಿ ॥೨೩॥**

ಇಲ್ಲಿವರೆಗೆ ಆಕಾಶದಲ್ಲಿ ನಿರಾಶ್ರಯವಾಗಿ ತೋರುವ ಗ್ರಹಾದಿಗಳಿಗೆ ನಿರಾಶ್ರಯತೆಯನ್ನು ಒಪ್ಪಿಕೊಂಡು ಬೀಳದಿರುವುದನ್ನು ಉಪಪಾದಿಸಿದರು. ಈಗ ವಾಸ್ತವಿಕವಾಗಿ ಈ ಗ್ರಹಾದಿಗಳು ನಿರಾಶ್ರಯಗಳಲ್ಲ. ಶಿಂಶುಮಾರರೂಪಿ ಶ್ರೀಹರಿಯ ಅವಯವಗಳನ್ನೇ ಆಶ್ರಯಿಸಿರುವುವು ಎಂದೂ ಆ ಕಾರಣದಿಂದಲೂ ಬೀಳಲಾರವೆಂದು ಹೇಳುವ ಕೆಲವು ಜ್ಞಾನಿಗಳ ಪಕ್ಷವನ್ನಿಟ್ಟುಕೊಂಡು ಉತ್ತರ ಕೊಡುತ್ತಾರೆ.




**ಕೇಚನ** ಕೆಲವರು ಜ್ಞಾನಿಗಳು **ಏತತ್** ಈ **ಜ್ಯೋತಿರನೀಕಂ** ಗ್ರಹ ಮುಂತಾದ ಜ್ಯೋತಿಸ್ಸಮೂಹವು **ಶಿಂಶುಮಾರಸಂಸ್ಥಾನಸ್ಯ** ಪ್ರಸಿದ್ಧ ಚೇಳಿನ ಅವಯವಗಳಂತೆ ಅವಯವಗಳುಳ್ಳ **ಭಗವತಃ ವಾಸುದೇವಸ್ಯ** ಐಶ್ವರ್ಯಶಾಲಿಯಾದ ಶ್ರೀಹರಿಯ **ಯೋಗಧಾರಣಾಯಾಂ (ಸತ್ಯಾಂ)** ಯೋಗ ಸಾಮರ್ಥ್ಯದಿಂದ ಧಾರಣ ಕ್ರಿಯೆಯು ಇರುತ್ತಿರಲು **ಅನುವರ್ಣಯಂತಿ** ಭೂಮಿಗೆ ಬೀಳಲಾರವೆಂದು ಪ್ರತಿಪಾದಿಸುವರು. ||೨೩||

ಧಾರಣ ಕ್ರಿಯೆಯನ್ನು ವಿವರಿಸುತ್ತಾರೆ

**ಯಸ್ಯ ಪುಚ್ಛಾಗ್ರೇಽವಾರ್ಕ್‌ಶಿರಸಃ ಕುಂಡಲೀಭೂತದೇಹಸ್ಯ ಧ್ರುವ ಉಪಕಲ್ಪಿತಸ್ತಸ್ಯ ಲಾಂಗಲೇ ಪ್ರಜಾಪತಿರಗ್ನಿರಿಂದ್ರೋ ಧರ್ಮ ಇತಿ ||೨೪||**

**ಕುಂಡಲೀಭೂತದೇಹಸ್ಯ** ಶರೀರವನ್ನು ಗುಂಡಗೆ ಮುದುರಿಸಿಕೊಂಡ **ಅವಾರ್ಕ್ ಶಿರಸಃ** ತಲೆಯನ್ನು ಕೆಳಗೆ ಮಾಡಿಕೊಂಡಿರುವ **ಯಸ್ಯ** ಯಾವ ಶಿಂಶುಮಾರ ಮೂರ್ತಿಯ **ಪುಚ್ಛಾಗ್ರೇ** ಬಾಲದ ಕೊನೆಯಲ್ಲಿ **ಧ್ರುವಃ ಉಪಕಲ್ಪಿತಃ** ಧ್ರುವರಾಜನು ನಕ್ಷತ್ರವಾಗಿರುವನು **ತಸ್ಯ** ಆ ಶಿಂಶುಮಾರನ **ಲಾಂಗೂಲೇ** ಬಾಲದ ಮಧ್ಯದಲ್ಲಿ **ಪ್ರಜಾಪತಿಃ** ದಕ್ಷನು **ಅಗ್ನಿಃ** ಅಗ್ನಿಯು **ಇಂದ್ರಃ** ಇಂದ್ರನು **ಧರ್ಮಃ** ಧರ್ಮನೂ **ಇತಿ** ಎಂಬುವರು ನಕ್ಷತ್ರರೂಪವಾಗಿರುವರು.||೨೪||

**ಪುಚ್ಛಮೂಲೇ ಧಾತಾ ವಿಧಾತಾ ಚ ಕಟ್ಯಾಂ ಸಪ್ತರ್ಷಯಸ್ತಸ್ಯ ದಕ್ಷಿಣಾವರ್ತಕುಂಡಲೀ ಭೂತಶರೀರಸ್ಯ ಯಾನ್ಯುದಗಯನಾನಿ ದಕ್ಷಿಣಪಾರ್ಶ್ವೇ ತು ನಕ್ಷತ್ರತ್ರಾಣಿ ಉಪಕಲ್ಪಯಂತಿ ||೨೫||**

**ದಕ್ಷಿಣಾಯನಾನಿ ತು ಸವ್ಯೇ ಯಥಾ ಶಿಂಶುಮಾರಸ್ಯ ಕುಂಡಲೀಭೋಗ-ಸನ್ನಿವೇಶಸ್ಯ ಪಾರ್ಶ್ವಯೋರುಭಯೋರಪ್ಯವಯವಾಃ ಸಮಸಂಖ್ಯಾ ಭವಂತಿ ||೨೬||**

**ಪುಚ್ಛಮೂಲೇ** ಬಾಲದ ಬುಡದಲ್ಲಿ **ಧಾತಾ ವಿಧಾತಾ ಚ** ಧಾತೃ ವಿಧಾತೃಗಳೂ **ಕಟ್ಯಾಂ** ನಡುವಿನಲ್ಲಿ (ಸೊಂಟ, ಟೊಂಕ) **ಸಪ್ತರ್ಷಯಃ** ಏಳು ಋಷಿಗಳು ಇರುವರು **ದಕ್ಷಿಣಾವರ್ತಕುಂಡಲೀಭೂತಶರೀರಸ್ಯ** ಬಲಸುತ್ತಿನಿಂದ ಕುಂಡಲವಾಗಿರುವ ದೇಹವುಳ್ಳ **ತಸ್ಯ** ಆ ಶಿಂಶುಮಾರನ **ದಕ್ಷಿಣಪಾರ್ಶ್ವೇ ತು** ಬಲಭಾಗದಲ್ಲಿ

**ತ್ರಿಭಿಃ ಸವನೈಃ** ತ್ವರಿತ, ಮಂದ, ಸಮ ಗತಿಗಳಿಂದ **ಯಥಾಸ್ಥಾನಂ** ತಮ್ಮ ತಮ್ಮ ನಿಯಮಿತ ಸ್ಥಳಗಳನ್ನು ಬಿಡದೇ **ಮಂಡಲಾನಿ ಚರಂತಿ** ಆ ಕಂಬವನ್ನು ಸುತ್ತುವವೋ ಹಾಗೆ. ।।೧೯।।

**ಏವಂ ಭಗಣಾ ಗ್ರಹಾದಯ ಏತಸ್ಮಿನ್ನಂತರ್ಬಹಿರ್ಯೋಗೇನ ಕಾಲಚಕ್ರ ಆಯೋಜಿತಾ ಧ್ರುವಮೇವಾವಲಂಬ್ಯ ವಾಯುನೋದೀರ್ಯಮಾಣಾ ಆಕಲ್ಪಾಂತಂ ಪರಿತಃ ಕ್ರಮಂತಿ ।।೨೦।।**

ಏವಂ ಅದೇ ರೀತಿಯಲ್ಲಿ **ಕಾಲಚಕ್ರೇ** ಸೂರ್ಯನ ರಥಚಕ್ರದಲ್ಲಿ **ಆಯೋಜಿತಾಃ** ಶ್ರೀಹರಿಯಿಂದ ವಾಯುಪಾಶದಿಂದ ಕಟ್ಟಲ್ಪಟ್ಟಿರುವ **ಭಗಣಾಃ** ನಕ್ಷತ್ರಗಣಗಳು **ಗ್ರಹಾದಯಃ** ಗ್ರಹಗಳು ಸಪ್ತರ್ಷಿಗಳು ಮುಂತಾದವು **ಏತಸ್ಮಿನ್** ಈ ಧ್ರುವ ಮಂಡಲದಲ್ಲಿ **ಅಂತರ್ಬಹಿರ್ಯೋಗೇನ** ಕೆಲವು ಒಳ, ಹಲವು ಹೊರ ಸಂಬಂಧದಿಂದ **ಧ್ರುವಮೇವ ಅವಲಂಬ್ಯ** ಧ್ರುವಮಂಡಲವನ್ನೇ ಆಶ್ರಯಿಸಿ **ವಾಯುನಾ** ಆತಿವಾಹಿಕ ವಾಯುವಿನಿಂದ **ಉದೀರ್ಯಮಾಣಾಃ** ಪ್ರೇರಿಸಲ್ಪಡುವವುಗಳಾಗಿ **ಆಕಲ್ಪಾಂತಂ** ದಿನಕಲ್ಪ ಮುಗಿಯುವವರೆಗೂ **ಪರಿತಃ** ಧ್ರುವನ ಸುತ್ತಲೂ **ಚಂಕ್ರಮಂತಿ** ಸಂಚರಿಸುವವು. ।।೨೦।।

**ನಭಸಿ ಯಥಾ ಮೇಘಾಃ ಶ್ಯೇನಾದಯೋ ವಾಯುವಶಾಃ ಕರ್ಮಸಾರಥಯಃ ಪರಿವರ್ತಂತೇ ।।೨೧।। ಏವಂ ಜ್ಯೋತಿರ್ಗಣಾಃ ಪ್ರಕೃತಿಪುರುಷ-ಸಂಯೋಗಾನುಗೃಹೀತ ಕರ್ಮನಿರ್ಮಿತಗತಯೋ ಭುವಿ ನ ಪತಂತಿ।।೨೨।।**

**ಕೇಚನೈತಜ್ಜ್ಯೋತಿರನೀಕಂ ಶಿಂಶುಮಾರಸಂಸ್ಥಾನಸ್ಯ ಭಗವತೋ ವಾಸುದೇವಸ್ಯ ಯೋಗಧಾರಣಾಯಾಮನುವರ್ಣಯಂತಿ ।।೨೩।।**

ಇಲ್ಲಿವರೆಗೆ ಆಕಾಶದಲ್ಲಿ ನಿರಾಶ್ರಯವಾಗಿ ತೋರುವ ಗ್ರಹಾದಿಗಳಿಗೆ ನಿರಾಶ್ರಯತೆಯನ್ನು ಒಪ್ಪಿಕೊಂಡು ಬೀಳದಿರುವುದನ್ನು ಉಪಪಾದಿಸಿದರು. ಈಗ ವಾಸ್ತವಿಕವಾಗಿ ಈ ಗ್ರಹಾದಿಗಳು ನಿರಾಶ್ರಯಗಳಲ್ಲ. ಶಿಂಶುಮಾರರೂಪಿ ಶ್ರೀಹರಿಯ ಅವಯವಗಳನ್ನೇ ಆಶ್ರಯಿಸಿರುವುವು ಎಂದೂ ಆ ಕಾರಣದಿಂದಲೂ ಬೀಳಲಾರವೆಂದು ಹೇಳುವ ಕೆಲವು ಜ್ಞಾನಿಗಳ ಪಕ್ಷವನ್ನಿಟ್ಟುಕೊಂಡು ಉತ್ತರ ಕೊಡುತ್ತಾರೆ.




**ಕೇಚನ** ಕೆಲವರು ಜ್ಞಾನಿಗಳು **ಏತತ್** ಈ **ಜ್ಯೋತಿರನೀಕಂ** ಗ್ರಹ ಮುಂತಾದ ಜ್ಯೋತಿಸ್ಸಮೂಹವು **ಶಿಂಶುಮಾರಸಂಸ್ಥಾನಸ್ಯ** ಪ್ರಸಿದ್ಧ ಚೇಳಿನ ಅವಯವಗಳಂತೆ ಅವಯವಗಳುಳ್ಳ **ಭಗವತಃ ವಾಸುದೇವಸ್ಯ** ಐಶ್ವರ್ಯಶಾಲಿಯಾದ ಶ್ರೀಹರಿಯ **ಯೋಗಧಾರಣಾಯಾಂ (ಸತ್ಯಾಂ)** ಯೋಗ ಸಾಮರ್ಥ್ಯದಿಂದ ಧಾರಣ ಕ್ರಿಯೆಯು ಇರುತ್ತಿರಲು **ಅನುವರ್ಣಯಂತಿ** ಭೂಮಿಗೆ ಬೀಳಲಾರವೆಂದು ಪ್ರತಿಪಾದಿಸುವರು. ।।೨೩।।

ಧಾರಣ ಕ್ರಿಯೆಯನ್ನು ವಿವರಿಸುತ್ತಾರೆ

**ಯಸ್ಯ ಪುಚ್ಛಾಗ್ರೇऽವಾರ್ಕ್‌ಶಿರಸಃ ಕುಂಡಲೀಭೂತದೇಹಸ್ಯ ಧ್ರುವ ಉಪಕಲ್ಪಿತಸ್ತಸ್ಯ ಲಾಂಗಲೇ ಪ್ರಜಾಪತಿರಗ್ನಿರಿಂದ್ರೋ ಧರ್ಮ ಇತಿ ।।೨೪।।**

**ಕುಂಡಲೀಭೂತದೇಹಸ್ಯ** ಶರೀರವನ್ನು ಗುಂಡಗೆ ಮುದುರಿಸಿಕೊಂಡ **ಅವಾರ್ಕ್ ಶಿರಸಃ** ತಲೆಯನ್ನು ಕೆಳಗೆ ಮಾಡಿಕೊಂಡಿರುವ **ಯಸ್ಯ** ಯಾವ ಶಿಂಶುಮಾರ ಮೂರ್ತಿಯ **ಪುಚ್ಛಾಗ್ರೇ** ಬಾಲದ ಕೊನೆಯಲ್ಲಿ **ಧ್ರುವಃ ಉಪಕಲ್ಪಿತಃ** ಧ್ರುವರಾಜನು ನಕ್ಷತ್ರವಾಗಿರುವನು **ತಸ್ಯ** ಆ ಶಿಂಶುಮಾರನ **ಲಾಂಗೂಲೇ** ಬಾಲದ ಮಧ್ಯದಲ್ಲಿ **ಪ್ರಜಾಪತಿಃ** ದಕ್ಷನು **ಅಗ್ನಿಃ** ಅಗ್ನಿಯು **ಇಂದ್ರಃ** ಇಂದ್ರನು **ಧರ್ಮಃ** ಧರ್ಮನೂ **ಇತಿ** ಎಂಬುವರು ನಕ್ಷತ್ರರೂಪವಾಗಿರುವರು.।।೨೪।।

**ಪುಚ್ಛಮೂಲೇ ಧಾತಾ ವಿಧಾತಾ ಚ ಕಟ್ಯಾಂ ಸಪ್ತರ್ಷಯಸ್ತಸ್ಯ ದಕ್ಷಿಣಾವರ್ತಕುಂಡಲೀ ಭೂತಶರೀರಸ್ಯ ಯಾನ್ಯುದಗಯನಾನಿ ದಕ್ಷಿಣಪಾರ್ಶ್ವೇ ತು ನಕ್ಷತ್ರತ್ರಾಣಿ ಉಪಕಲ್ಪಯಂತಿ ।।೨೫।।**

**ದಕ್ಷಿಣಾಯನಾನಿ ತು ಸವ್ಯೇ ಯಥಾ ಶಿಂಶುಮಾರಸ್ಯ ಕುಂಡಲೀಭೋಗ-ಸನ್ನಿವೇಶಸ್ಯ ಪಾರ್ಶ್ವಯೋರುಭಯೋರಪ್ಯವಯವಾಃ ಸಮಸಂಖ್ಯಾ ಭವಂತಿ ।।೨೬।।**

**ಪುಚ್ಛಮೂಲೇ** ಬಾಲದ ಬುಡದಲ್ಲಿ **ಧಾತಾ ವಿಧಾತಾ ಚ** ಧಾತೃ ವಿಧಾತೃಗಳೂ **ಕಟ್ಯಾಂ** ನಡುವಿನಲ್ಲಿ (ಸೊಂಟ, ಟೊಂಕ) **ಸಪ್ತರ್ಷಯಃ** ಏಳು ಋಷಿಗಳು ಇರುವರು **ದಕ್ಷಿಣಾವರ್ತಕುಂಡಲೀಭೂತಶರೀರಸ್ಯ** ಬಲಸುತ್ತಿನಿಂದ ಕುಂಡಲವಾಗಿರುವ ದೇಹವುಳ್ಳ **ತಸ್ಯ** ಆ ಶಿಂಶುಮಾರನ **ದಕ್ಷಿಣಪಾರ್ಶ್ವೇ ತು** ಬಲಭಾಗದಲ್ಲಿ

**ಉದಗಯನಾನಿ** ಸೂರ್ಯನ ಉತ್ತರಾಯಣ ಗಮನಕ್ಕೆ ಮಾರ್ಗಗಳಾದ **ನಕ್ಷತ್ರಾಣಿ** ಅಭಿಜಿತ್ತಿನಿಂದ ಹಿಡಿದು ಪುನರ್ವಸು ಪರ್ಯಂತ ನಕ್ಷತ್ರಗಳನ್ನು **ಉಪಕಲ್ಪಯಂತಿ** ಇವೆಯೆಂದು ಹೇಳುವರು. ।।೨೫।।

**ದಕ್ಷಿಣಾಯನಾನಿ ತು** ದಕ್ಷಿಣಾಯನ ಗಮನಕ್ಕೆ ಮಾರ್ಗಗಳಾದ ಪುಷ್ಯ ಮೊದಲುಗೊಂಡು ಉತ್ತರಾಷಾಢ ಪರ್ಯಂತ ನಕ್ಷತ್ರಗಳನ್ನಾದರೋ **ಸವ್ಯೇ** ಎಡಭಾಗದಲ್ಲಿ ಹೇಳುವರು. **ಯಥಾ** ಹೇಗೆ **ಕುಂಡಲೀಭೋಗಸನ್ನಿವೇಶಸ್ಯ ಶಿಂಶುಮಾರಸ್ಯ** ದುಂಡಗೆ ಸುತ್ತಿಕೊಂಡ ದೇಹವಿನ್ಯಾಸವುಳ್ಳ ಶಿಂಶುಮಾರ ರೂಪಿಯ **ಉಭಯೋಃ ಪಾರ್ಶ್ವಯೋಃ ಅಪಿ** ಎರಡೂ ಪಕ್ಕಗಳಲ್ಲಿಯೂ **ಅವಯವಾಃ** ಅವಯವಗಳು **ಸಮಸಂಖ್ಯಾಃ ಭವಂತಿ** ಹದಿನಾಲ್ಕು ಹದಿನಾಲ್ಕು ಆಗುವವೋ **ತಥಾ** ಹಾಗೆ ಹೇಳುವರು. ।।೨೬।।

**ಪೃಷ್ಠೇ ತ್ವಜವೀಥೀ ಆಕಾಶಗಂಗಾ ಚೋತ್ತರತಃ ಪುನರ್ವಸುಪುಷ್ಯೌ ದಕ್ಷಿಣವಾಮಯೋಃ ಶ್ರೋಣ್ಯೋರಾರ್ದ್ರಾಽಶ್ಲೇಷಾ ಚ ದಕ್ಷಿಣವಾಮ-ಪಾದಯೋರಭಿಜಿದುತ್ತರಾಷಾಢೇ ಚ ದಕ್ಷಿಣವಾಮಯೋಃ ನಾಸಿಕಯೋ-ರ್ಯಥಾಸಂಖ್ಯಂ ಚ ಶ್ರವಣಪೂರ್ವಾಷಾಢೇ ಚ ದಕ್ಷಿಣವಾಮಯೋ-ರ್ಲೋಚನಯೋರ್ಧನಿಷ್ಠಾಮೂಲಂ ಚ ದಕ್ಷಿಣವಾಮಯೋಃ ಕರ್ಣಯೋ-ರ್ಮಘಾದೀನ್ಯಷ್ಟನಕ್ಷತ್ರಾಣಿ ದಕ್ಷಿಣಾಯನಾನಿ ವಾಮಪಾರ್ಶ್ವಪಂಕ್ತಿಷು ಯುಂಜೀತ ।।೨೭।।**

**ಪೃಷ್ಠೇ ತು** ಬೆನ್ನಿನಲ್ಲಿ **ಅಜವೀಥೀ** (ಹಿಂದೆ ಹೇಳಿದ ವಾಯುಪುರಾಣೋಕ್ತ ನಕ್ಷತ್ರರೂಪವಾದುದಲ್ಲ ಇದು ಪ್ರಮಾಣಾಂತರದಲ್ಲಿ ಹೇಳಿದ ಬೇರೆಯೇ ಎಂದು ತಿಳಿಯಬೇಕು) **ಉತ್ತರತಃ** ಉತ್ತರದಲ್ಲಿ **ಆಕಾಶಗಂಗಾ ಚ** ಆಕಾಶಗಂಗೆಯು ಬಲ **ದಕ್ಷಿಣವಾಮಯೋಃ ಶ್ರೋಣ್ಯೋಃ** ಎಡ ಬಲ ಕಟಿ ಪಶ್ಚಾದ್ಭಾಗಗಳಲ್ಲಿ (ನಿತಂಬಗಳಲ್ಲಿ) ಕ್ರಮವಾಗಿ **ಪುನರ್ವಸುಪುಷ್ಯೌ** ಪುನರ್ವಸು ಪುಷ್ಯಗಳು **ದಕ್ಷಿಣವಾಮಯೋಃ ಪಾದಯೋಃ** ಬಲ ಎಡ ಪಾದಗಳಲ್ಲಿ **ಆರ್ದ್ರಾ ಆಶ್ಲೇಷಾ ಚ** ಆರ್ದ್ರಾ ಆಶ್ಲೇಷಗಳು **ದಕ್ಷಿಣವಾಮನಾಸಿಕಯೋಃ** ಬಲ ಎಡ ಮೂಗುಗಳಲ್ಲಿ **ಅಭಿಜಿತ್‌ಉತ್ತರಾಷಾಢೇ** ಅಭಿಜಿತ್ ಉತ್ತರಾಷಾಡಗಳು **ದಕ್ಷಿಣವಾಮಲೋಚನಯೋಃ** ಬಲ ಎಡ ಕಣ್ಣುಗಳಲ್ಲಿ **ಶ್ರವಣಪೂರ್ವಾಷಾಢೇ** ಶ್ರವಣಪೂರ್ವಾಷಾಢಗಳು

**ದಕ್ಷಿಣವಾಮಕರ್ಣಯೋಃ** ಬಲ ಎಡ ಕಿವಿಗಳಲ್ಲಿ **ಧನಿಷ್ಠಾ ಮೂಲಂ ಚ** ಧನಿಷ್ಠಾಮೂಲಗಳು **ಮಘಾದೀನಿ ಅಷ್ಟ** ಮಘಾ ಮೊದಲಾದ ಎಂಟು ನಕ್ಷತ್ರಗಳನ್ನು **ದಕ್ಷಿಣಾಯನಾನಿ** ದಕ್ಷಿಣಾಯನ ಮಾರ್ಗಕ್ಕೆ ಸೇರಿದವುಗಳನ್ನು **ವಾಮಪಾರ್ಶ್ವಪಂಕ್ತಿಷು** ಎಡಭಾಗದ ಸಾಲುಗಳಲ್ಲಿ **ಯುಂಜೀತ** ಇವೆ ಎಂದು ತಿಳಿಯಬೇಕು. ।।೨೭।।

**ತಥೈವ ಮೃಗಶೀರ್ಷಾದೀನ್ಯುದಗಯನಾನಿ ದಕ್ಷಿಣಪಾರ್ಶ್ವೇಷು ಪ್ರಾತಿಲೋಮ್ಯೇನ ಪ್ರತಿಯುಂಜೀತ ।।೨೮।।**

**ತಥಾ** ಹಾಗೆಯೇ **ಮೃಗಶೀರ್ಷಾದೀನಿ** ಮೃಗಶಿರ ಮೊದಲಾದ ಪೂರ್ವಾಭಾದ್ರಪದದಿಂದ ಪ್ರಾರಂಭವಾಗುವ ಎಂಟು ನಕ್ಷತ್ರಗಳನ್ನು **ಉದಗಯನಾನಿ** ಉತ್ತರಾಯಣ ಮಾರ್ಗಕ್ಕೆ ಸೇರಿದವುಗಳನ್ನು **ದಕ್ಷಿಣಪಾರ್ಶ್ವೇಷು** ಬಲಭಾಗದಲ್ಲಿ **ಪ್ರಾತಿಲೋಮ್ಯೇನ** ಮೃಗಶಿರ, ರೋಹಿಣಿ, ಕೃತ್ತಿಕ, ಭರಣಿ, ಅಶ್ವಿನಿ, ರೇವತಿ ಉತ್ತರಾಭಾದ್ರಪದ, ಪೂರ್ವಾಭಾದ್ರಪದ ಕ್ರಮದಲ್ಲಿ **ಪ್ರತಿಯುಂಜೀತ** ಹಿಂದೆ ಹಿಂದೆ ತಿಳಿಯಬೇಕು. ।।೨೮।।

**ಶತಭಿಷಜ್ಯೇಷ್ಠೇ ದ್ವೇ ಸ್ಕಂದಯೋರ್ದಕ್ಷಿಣವಾಮಯೋರ್ನ್ಯಸೇತ್।।೨೯।।**

**ಶತಿಭಿಷಜ್ಯೇಷ್ಠೇ** ಶತಭಿಷ, ಜ್ಯೇಷ್ಠಾ **ದ್ವೇ** ಎರಡು ನಕ್ಷತ್ರಗಳನ್ನು **ದಕ್ಷಿಣಾವಾಮಯೋಃ ಸ್ಕಂದಯೋಃ** ಬಲ ಎಡ ಹೆಗಲುಗಳಲ್ಲಿ **ನ್ಯಸೇತ್** ಇಡಬೇಕು. ಇವೆ ಎಂದು ತಿಳಿಯಬೇಕು. ।।೨೯।।

**ಉತ್ತರಹನಾವಗಸ್ತ್ಯಃ ಅಧರಹನೌ ಯಮೋ ಮುಖೇ ಚಾಂಗಾರಕಃ ಶನೈಶ್ಚರ ಉಪಸ್ಥೇ ಬೃಹಸ್ಪತಿಃ ಕಕುದಿ ವಕ್ಷಸ್ಯಾದಿತ್ಯೋ ಹೃದಯೇ ನಾರಾಯಣೋ ಮನಸಿ ಚಂದ್ರೋ ನಾಭ್ಯಾಮುಶನಾಃ ಸ್ತನಯೋರಶ್ವಿನೌ ಬುಧಃ ಪ್ರಾಣಾಪಾನಯೋ ರಾಹುರ್ಗಲೇ ಕೇತವಃ ಸರ್ವಾಂಗೇಷು ರೋಮಸು ಸರ್ವೇ ತಾರಾಗಣಾಃ।।೩೦।।**

**ಉತ್ತರಹನೌ** ಮೇಲಿನ ದವಡೆಯಲ್ಲಿ **ಅಗಸ್ತ್ಯಃ** ಅಗಸ್ತ್ಯನ ನಕ್ಷತ್ರವು **ಅಧರಹನೌ** ಕೆಳದವಡೆಯಲ್ಲಿ **ಯಮಃ** ಯಮ ನಕ್ಷತ್ರ **ಮುಖೇ** ಮುಖದಲ್ಲಿ **ಅಂಗಾರಕಃ** ಮಂಗಳ (ಕುಜ) ಗ್ರಹವು **ಉಪಸ್ಥೇ** ಜನನೇಂದ್ರಿಯದಲ್ಲಿ **ಶನೈಶ್ಚರಃ** ಶನಿಗ್ರಹವು **ಕಕುದಿ** ಕುತ್ತಿಗೆಯ ಹಿಂದೆ **ಬೃಹಸ್ಪತಿಃ** ಗುರುಗ್ರಹವು **ವಕ್ಷಸಿ** ಎದೆಯಲ್ಲಿ **ಆದಿತ್ಯಃ** ಸೂರ್ಯನು **ಹೃದಯೇ** ಚಿತ್ತದಲ್ಲಿ **ನಾರಾಯಣಃ** ಶ್ರೀಹರಿಯು (ಸ್ವಯಂ) **ಮನಸಿ** ಮನಸ್ಸಿನಲ್ಲಿ

**ಚಂದ್ರಃ** ಚಂದ್ರನು **ನಾಭ್ಯಾಂ** ಹೊಕ್ಕಳಲ್ಲಿ **ಉಶನಾಃ** ಶುಕ್ರನು **ಸ್ತನಯೋಃ** ಸ್ತನಗಳಲ್ಲಿ **ಅಶ್ವಿನೌ** ಅಶ್ವಿನೀ ದೇವತೆಗಳು **ಪ್ರಾಣಾಪಾನಯೋಃ** ಪ್ರಾಣಾಪಾನಗಳಲ್ಲಿ **ಬುಧಃ** ಬುಧನು **ಗಲೇ** ಕುತ್ತಿಗೆಯಲ್ಲಿ **ರಾಹುಃ** ರಾಹುವು **ಸರ್ವಾಂಗೇಷು** ಎಲ್ಲ ಅವಯವಗಳಲ್ಲಿ **ಕೇತವಃ** (ನೂರು) ಕೇತುಗಳು **ರೋಮಸು** ಕೂದಲುಗಳಲ್ಲಿ **ತಾರಾಗಣಾಃ** ಇತರ ಎಲ್ಲ ನಕ್ಷತ್ರಸಮೂಹಗಳು ಇರುವವು. ||೩೦||

**ಏತದುಹೈವ ಭಗವತೋ ವಿಷ್ಣೋಃ ಸರ್ವದೇವತಾಮಯಂ ರೂಪಂ ಅಹರಹಃ ಸಂಧ್ಯಾಯಾಂ ಪ್ರಯತೋ ವಾಗ್ಯತೋ ನಿರೀಕ್ಷಮಾಣ ಉಪತಿಷ್ಠೇತ ನಮೋ ನಮೋ ಜ್ಯೋತಿರ್ಲೋಕಾಯ ಕಾಲಾಯನಾಯಾನಿಮಿಷಾಂ ಪತಯೇ ಮಹಾಪುರುಷಾಯ ಧೀಮಹೀತಿ ||೩೧||**

**ಏತದುಹವೈ** ಇದುವೇ **ಭಗವತಃ ವಿಷ್ಣೋಃ** ಐಶ್ವರ್ಯಶಾಲಿಯಾದ ವಿಷ್ಣುವಿನ **ಸರ್ವದೇವತಾಮಯಂ** ಎಲ್ಲ ದೇವತಾ ಪ್ರಧಾನ ರೂಪವು ಇದನ್ನೇ **ಅಹರಹಃ** ಪ್ರತಿದಿನವೂ **ಸಂಧ್ಯಾಯಾಂ** ಸಾಯಂಕಾಲದಲ್ಲಿ **ಪ್ರಯತಃ** ಕಾಯಿಕ ಮಾನಸಿಕ ನಿಯಮಗಳಿಂದ ಕೂಡಿದವನಾಗಿ **ವಾಗ್ಯತಃ** ವಾಙ್ನಿಯಮದಿಂದ ಕೂಡಿ **ನಿರೀಕ್ಷಮಾಣಃ** ನೋಡುತ್ತಾ **ಜ್ಯೋತಿರ್ಲೋಕಾಯ** ಜ್ಯೋತಿಸ್ಸುಗಳಿಗೆ ಆಶ್ರಯನಾದ **ಕಾಲಾಯನಾಯ** ಕಾಲಜ್ಞಾಪಕನಾದ **ಅನಿಮಿಷಾಂ** ದೇವತೆಗಳಿಗೆ **ಪತಯೇ** ಪಾಲಕನಾದ **ಮಹಾಪುರುಷಾಯ** ಸರ್ವೋತ್ತಮ ಪುರುಷನಿಗೆ **ನಮಃ ನಮಃ** ನಮಸ್ಕಾರವು ಅವನನ್ನು **ಧೀಮಹಿ** ಧ್ಯಾನ ಮಾಡುವೆವು **ಇತಿ** ಎಂದು ಮಂತ್ರದಿಂದ **ಉಪತಿಷ್ಠೇತ** ಸ್ತೋತ್ರಮಾಡಬೇಕು. ||೩೧||

**ಗ್ರಹರ್ಕ್ಷತಾರಾಮಯಮಾಧಿದೈವಿಕಂ**
**ರೂಪಂ ಹರೇರ್ಮಂತ್ರಕೃತಸ್ತ್ರಿಕಾಲಂ ।**
**ನಮಸ್ಯತಃ ಸಂಸ್ತುವತೋ ನಶ್ಯತೇ ವೈ**
**ಸ್ವಯಂ ತ್ರಿಕಾಲಂ ಕೃತಮಾಶು ಪಾಪಂ ||೩೨||**

ಶಿಂಶುಮಾರರೂಪವನ್ನು ತೆಗೆದುಕೊಂಡಿರುವುದಕ್ಕೆ ಪ್ರಯೋಜನವನ್ನು ಹೇಳುತ್ತಾರೆ. **ಗ್ರಹರ್ಕ್ಷತಾರಾಮಯಂ** ಗ್ರಹಗಳಿಗೂ, ನಕ್ಷತ್ರಗಳಿಗೂ, ತಾರಾಗಳಿಗೂ ಆಶ್ರಯನಾದ **ಆಧಿದೈವಿಕಂ** ಅಧಿದೇವತೆಗಳಿಗೆ ಆಶ್ರಯವಾದ **ಹರೇಃ ರೂಪಂ** ಶ್ರೀಹರಿಯ ರೂಪವನ್ನು **ತ್ರಿಕಾಲಂ** ಮೂರು ಕಾಲದಲ್ಲಿಯೂ **ಮಂತ್ರಕೃತಃ** ಜಪಿಸುವ

 

**ನಮಸ್ಯತಃ** ನಮಸ್ಕರಿಸುವ **ಸ್ತುವತಃ** ಸ್ತೋತ್ರ ಮಾಡುವ (**ಪುಂಸಃ**) ಅಧಿಕಾರಿಗೆ **ತ್ರಿಕಾಲಂ ಕೃತಂ** ಮೂರು ಕಾಲಗಳಲ್ಲಿ ಮಾಡಿದ **ಪಾಪಂ** ಪಾಪವು **ಆಶು** ಬೇಗನೇ **ಸ್ವಯಂ ನಶ್ಯತೇ ವೈ** ಸಂಪೂರ್ಣವಾಗಿ ನಾಶವಾಗುವುದು ಇದು ''**ನಾರಾಯಣೋ ನಾಮ ನರೋ ನರಾಣಾಂ ಪ್ರಸಿದ್ಧಚೋರಃ ಕಥಿತಃ ಪೃಥಿವ್ಯಾಂ । ಅನೇಕ ಜನ್ಮಾರ್ಜಿತಪಾಪಸಂಚಯಂ ಹರತ್ಯಶೇಷಂ ಸ್ಮೃತ ಮಾತ್ರ ಏವ**'' ಇತ್ಯಾದಿ ಪ್ರಮಾಣಗಳಿಂದ ಸಿದ್ಧವು.

ಈ ಶಿಂಶುಮಾರ ರೂಪವು ಪ್ರಾಕೃತವೆಂದು ತಿಳಿಯಬಾರದೆಂಬುದಕ್ಕೆ ಪ್ರಮಾಣ ಹೇಳುವರು ಆಚಾರ್ಯರು

**ತಾತ್ಪರ್ಯ - ಜ್ಞಾನಾನಂದಾತ್ಮಕೇ ವಿಷ್ಣೌ ಶಿಂಶುಮಾರವಪುಷ್ಯಥ ।**
**ಊರ್ಧ್ವಲೋಕೇಷು ಸಂವ್ಯಾಪ್ತ ಆದಿತ್ಯಾದ್ಯಾಸ್ತದಾಶ್ರಿತಾಃ ॥**
**-ಇತಿ ಬ್ರಹ್ಮಾಂಡೇ ।**

**ಅಥ** ಮಾಂಗಲಿಕನಾದ ಶಿಂಶುಮಾರದೇಹದಲ್ಲಿಯೂ ಜ್ಞಾನಾನಂದಾತ್ಮಕನಾದ ವಿಷ್ಣುವಿನಲ್ಲಿ **ಅಥ** ಊರ್ಧ್ವಲೋಕಗಳಲ್ಲಿ **ಸಂವ್ಯಾಪ್ತಃ** ವ್ಯಾಪ್ತನಾಗಿರುವನು. ಆದಿತ್ಯಾದಿಗಳು ಅವನನ್ನು ಆಶ್ರಯಿಸಿರುವರು. ಇದರಿಂದ **ಊರ್ಧ್ವಲೋಕೇಷು ಸಂವ್ಯಾಪ್ತಃ** ಎಂಬುದರಿಂದ **ಆಧಿದೈವಿಕ** ಎಂಬ ಪದವನ್ನು ವಿವರಿಸುವರು. ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕಗಳಲ್ಲಿ ಆಧಿದೈವಿಕ ಎಂಬ ಭ್ರಾಂತಿ ನಿರಾಕೃತವಾಯಿತು. **ಆದಿತ್ಯಾದ್ಯಾ ತದಾಶ್ರಿತಾ** ಎಂಬುದರಿಂದ **ಗ್ರಹರ್ಕ್ಷತಾರಾಮಯ** ಎಂಬ ಪದ ವಿವರಿಸಿದಂತಾಯಿತು. **ಮಯಟ್** ಪ್ರತ್ಯಯವು ಆನಂದಮಯ ಮೊದಲಾದವುಗಳಲ್ಲಿಯಂತೆ ಪ್ರಾಚುರ್ಯಾರ್ಥವೇ ಹೊರತು **ತ್ರಿಭಿಃ ಗುಣಮಯ್ಯೈಃ ಭಾವೈಃ** ಎಂಬಲ್ಲಿಯಂತೆ ತಾದಾತ್ಮ್ಯವಲ್ಲವೆಂದಂತಾಯಿತು.

**॥ ಇಪ್ಪತ್ತೆರಡನೇ ಅಧ್ಯಾಯವು ಮುಗಿಯಿತು ॥**

★★★

## ಇಪ್ಪತ್ತೆರಡನೇ ಅಧ್ಯಾಯದ ಸಾರ

ಮತ್ತೆ ಮತ್ತೆ ದೊಡ್ಡ ಚೇಳು ಕಚ್ಚಿ ದುಃಖಪಡುವಜನರಂತೆ ವಿವಿಧ ಪಾಪಗಳಿಂದುಂಟಾದ ಸಂತಾಪಗಳಿಂದ ಅತ್ಯಂತ ತಾಪಗೊಂಡ ಸಜ್ಜನರಿಗೆ ಮೂರು ಕಾಲದಲ್ಲಿ ಮಾಡಿದ ಪಾಪಸಮೂಹ ನಿರಸನವಾಗಿ ಶ್ರೇಯೋಭಿವೃದ್ಧಿಯಾಗಲೆಂದು ಶ್ರೀಹರಿಯ ಜ್ಞಾನಾನಂದಾತ್ಮಕ ಶಿಂಶುಮಾರರೂಪ ಮಾಹಾತ್ಮ್ಯವನ್ನು ನಿರೂಪಿಸುವರು ಈ ಅಧ್ಯಾಯದಲ್ಲಿ .

ಯಾವಕಾರಣ ಮೇಷಾದಿರಾಶಿಗಳು ಮೇರುವನ್ನು ಪ್ರದಕ್ಷಿಣೆಯಾಗಿ ಸುತ್ತುವುವೋ ಆ ಕಾರಣ ಮೇರುವನ್ನೂ ಧ್ರುವನನ್ನೂ ಪ್ರದಕ್ಷಿಣೆಯಾಗಿ ಸುತ್ತುವ ಪೂಜ್ಯನಾದ ಸೂರ್ಯನಿಗೆ ರಾಶಿಗಳಲ್ಲಿ ಎದುರಾಗಿ ಮೇಷದಿಂದ ವೃಷಭ ಇತ್ಯಾದಿ ಸಂಚಾರವು ಯುಕ್ತಿಯುಕ್ತವಲ್ಲ. ಆದರೆ ಪೂಜ್ಯರಾದ ತಮ್ಮಿಂದ ಸೂರ್ಯನು ಅಭಿಮುಖವಾಗಿ ಸಂಚರಿಸುವನೆಂದು ಹೇಳಲ್ಪಟ್ಟಿತು. ಯುಕ್ತಿ ವಿರುದ್ಧವಾದ ಈ ಸೂರ್ಯಾದಿ ಗ್ರಹಗಳ ರಾಶ್ಯಭಿಮುಖಗಮನವನ್ನು (ಅದರ ಅಭಿಪ್ರಾಯವನ್ನು) ಹೇಗೆ ಯುಕ್ತಿಪೂರ್ವಕವಾಗಿ ತಿಳಿಯೋಣ? ಮೇಷಾದಿರಾಶಿಗಳೊಂದಿಗೆ ಸೂರ್ಯಾದಿಗ್ರಹಗಳು ಪ್ರದಕ್ಷಿಣೆಯಾಗಿ ಸಂಚರಿಸುವಾಗ ಮೇಷಾದಿಗಳಿಗೆ ಅಭಿಮುಖವಾಗಿ ಬರುವುದು ಸಾಧ್ಯವಿಲ್ಲ. ಇದು ಮೇಷಾದಿಗಳು ಅಪ್ರದಕ್ಷಿಣೆಯಾಗಿ ಹೋಗುತ್ತಿದ್ದರೆ ಸಂಭವಿಸುತ್ತಿತ್ತು. ಆದರೆ, ಹಾಗಿಲ್ಲ. ಆದ್ದರಿಂದ ಈ ಹೇಳಿಕೆಯು ಯುಕ್ತಿಯುಕ್ತವಿದ್ದಂತೆ ತೋರುತ್ತಿಲ್ಲ ಎಂಬ ಪರೀಕ್ಷಿತನ ಪ್ರಶ್ನೆಗೆ ಶುಕಾಚಾರ್ಯರು ಉತ್ತರ ಕೊಟ್ಟರು. ಹೇಗೆ ಪ್ರದಕ್ಷಿಣೆಯಾಗಿ ಸುತ್ತುತ್ತಿರುವ ಕುಂಭಾರನ ಚಕ್ರದೊಂದಿಗೆ ಸುತ್ತುತ್ತಿರುವ ಆ ಚಕ್ರದ ಮೇಲಿರುವ ಇರುವೆ ಮುಂತಾದ ಪ್ರಾಣಿಗಳ ನಡಿಗೆಯು(ವೇಗವು) ಆ ಕುಂಭಾರನ ಚಕ್ರದ ಬೇರೆ ಭಾಗಗಳಲ್ಲಿಯೂ

 

ಇರುವುದರಿಂದ ಚಕ್ರದ ವೇಗಕ್ಕಿಂತ ಭಿನ್ನವೆಂದು ಸಿದ್ಧವೋ(ಚಕ್ರದ ವೇಗವೇ ಅವುಗಳ ವೇಗವಾಗಿದ್ದರೆ ಯಾವಾಗಲೂ ಚಕ್ರದ ಒಂದೇ ಸ್ಥಳದಲ್ಲಿ ಅವು ಕಂಡು ಬರಬೇಕಿತ್ತು) ಇದೇ ರೀತಿಯಲ್ಲಿ ನಕ್ಷತ್ರಗಳ ಒಂಭತ್ತು ಪಾದಗಳೆಂಬ ಮೇಷಾದಿ ರಾಶಿಗಳಿಂದ ಯುಕ್ತವಾದ ಧ್ರುವನನ್ನು ಮೇರುವನ್ನು ಪ್ರದಕ್ಷಿಣೆಯಾಗಿ ಸುತ್ತುವ ಕಾಲವನ್ನು ತಿಳಿಸುವ ಸೂರ್ಯರಥದಿಂದ ಕೂಡಿಕೊಂಡು ಪ್ರದಕ್ಷಿಣೆಯಾಗಿ ಸುತ್ತುತ್ತಿರುವ ಸೂರ್ಯರಥವನ್ನಾಶ್ರಯಿಸಿದ (ಚಂದ್ರಾದಿ ಗ್ರಹಗಳಿಗೆ ಸೂರ್ಯರಥಾಶ್ರಯತ್ವವೂ ವಾಯುಪಾಶವಿಶೇಷ ಮೂಲಕವೆಂದು ತಿಳಿಯಬೇಕು). ಸೂರ್ಯಮೊದಲಾದ ಗ್ರಹಗಳಿಗೆ ಬೇರೆ ಬೇರೆ ನಕ್ಷತ್ರ(ಭಾಗಗಳಲ್ಲಿ) ಬೇರೇ ಬೇರೇ ರಾಶಿಗಳಲ್ಲಿ ಕಂಡು ಬರುವುದರಿಂದ ಗಮನವು(ವೇಗ) ಬೇರೆಯೇ. ಪ್ರದಕ್ಷಿಣೆಯಾಗಿ ಹೋಗುವುದರ ಜೊತೆಗೆ ಪ್ರದಕ್ಷಿಣೆಯಾಗಿ ಹೋಗುತ್ತಿದ್ದರೂ ತಮ್ಮ ತಮ್ಮ ಗತಿ ವಿಶೇಷದಿಂದ(ಹಿಂದೆ ಬೀಳುವ ಮೂಲಕ) ಅಪ್ರದಕ್ಷಿಣೆಯಾದಂತೆ ಆಗುವುದರಿಂದ ಮೇಷಾದಿಗಳಿಗೆ ಅಭಿಮುಖ ಗಮನವು ಯುಕ್ತಿವಿರುದ್ಧವಲ್ಲ.

ಆ ಸೂರ್ಯಾಂತರ್ಯಾಮಿಯಾದ ಎಲ್ಲರಿಗೂ ಮೊದಲನೆಯವನಾದ ಭಗವಂತನಾದ ಸಾಕ್ಷಾನ್ನಾರಾಯಣನು ಜನರ ಕ್ಷೇಮಕ್ಕಾಗಿ ವೇದ ಪ್ರತಿಪಾದಿತವಾದ ತನ್ನ ರೂಪವನ್ನು ಆ ಆ ತಿಂಗಳುಗಳಲ್ಲಿ ಋತುಗಳಲ್ಲಿ ಮಾಡುವ ಕರ್ಮಗಳ ಆ ಆ ಮಾಸನಿಯಾಮಕರೂಪಗಳಿಗೆ ಸಮರ್ಪಣವೆಂಬ ಶುದ್ಧಿಗಾಗಿ ಮಾಸದೇವತಾ ಪರಿಜ್ಞಾನವಿಲ್ಲದೇಹೋದರೆ ಕರ್ಮಗಳು ಶುದ್ಧವಾಗಲಾರವು. ಹನ್ನೆರಡು ರೂಪಗಳಾಗಿ ಬೇರೇ ಬೇರೇ ವ್ಯಕ್ತನಾಗಿ ವೇದಗಳಿಂದಲೂ ಭೂತ ಭವಿಷ್ಯತ್ ವರ್ತಮಾನಗಳನ್ನು ಬಲ್ಲ ಬ್ರಹ್ಮಜ್ಞಾನಿಗಳಿಂದಲೂ ತಿಳಿಯಲ್ಪಡುವವನಾಗಿ ವಸಂತ ಮೊದಲಾದ ಆರು ಋತುಗಳಲ್ಲಿ ಆ ಆ ಕ್ರಮಗಳನ್ನು ಮೀರದೇ ತನ್ನ ಪ್ರೀತಿಗೆ ತಕ್ಕಂತೆ ಆ ಆ ಋತುಗಳಲ್ಲಿ ಅರಳುವ ಹೂಮೊದಲಾದ ಪದಾರ್ಥಗಳನ್ನು ಸೃಷ್ಟಿಸುವನು. ಆ ಆ ಕಾಲದ ಪದಾರ್ಥಗಳು ಆ ಆ ಕಾಲನಿಯಾಮಕನಿಗೆ ಪ್ರೀತಿಕರವಾಗುವುವು.

ಈ ಭೂಮಂಡಲದಲ್ಲಿ ಬ್ರಾಹ್ಮಣಾದಿ ವರ್ಣಗಳ, ಬ್ರಹ್ಮಚರ್ಯಾದಿ ಆಶ್ರಮಗಳ ಆಚಾರಗಳನ್ನು ಅನುಸರಿಸುವ ಪುರುಷರು ವೇದವಿದ್ಯೆಯಲ್ಲಿ ಪ್ರತಿಪಾದಿತಗಳಾದ ದೊಡ್ಡ ಮತ್ತು ಸಣ್ಣ ಕರ್ಮಗಳಿಂದಲೂ ಈಶ್ವರಾರ್ಪಣ ಬುದ್ಧಿ ಎಂಬ ಉಪಾಯ ವಿಸ್ತಾರಗಳಿಂದಲೂ ಶ್ರದ್ಧೆಯಿಂದ ಈ ಸೂರ್ಯಾಂತರ್ಯಾಮಿ ಶ್ರೀಹರಿಯನ್ನು ಆ ಆ ಕಾಲಗಳಲ್ಲಿ ಪೂಜಿಸುವರಾಗಿ ಶ್ರೇಯಸ್ಸನ್ನು ಸಂಪೂರ್ಣವಾಗಿ ಅಥವಾ ಮುಖ್ಯ

ಶ್ರೇಯಸ್ಸಾದ ಮೋಕ್ಷವನ್ನು ಹೊಂದುವರು. ಇದರಿಂದ ಹನ್ನೆರಡು ಭಾಗವಾಗಬೇಕೆಂದು ಹೇಳಿದಂತಾಯಿತು.

ಹನ್ನೆರಡು ಭಾಗವಾದುದರಿಂದ ಜನರ ಅಂತರ್ಯಾಮಿಯೂ, ಸ್ವಾಮಿಯೂ ಆದ ಈ ಸೂರ್ಯಾಂತರ್ಯಾಮಿಯು (ಅವನಿಗೆ ಅಧಿಷ್ಠಾನನಾದ ಸೂರ್ಯನು) ದ್ಯುಲೋಕಭೂಲೋಕಗಳ ಮಧ್ಯದಲ್ಲಿರುವ ಅಂತರಿಕ್ಷದ ಮಧ್ಯದಲ್ಲಿದ್ದು ಕಾಲಚಕ್ರವನ್ನಾಶ್ರಯಿಸಿ ಹನ್ನೆರಡು ತಿಂಗಳುಗಳನ್ನು ಪ್ರವರ್ತಿಸುವನು. ಅವುಗಳನ್ನು ಸಂವತ್ಸರದ ಅವಯವಗಳಾದ ಮೇಷಾದಿಸಂಜ್ಞೆಗಳುಳ್ಳ ಆ ಆ ಸಂಕ್ರಮಣದಿಂದ ಕೂಡಿದ ಮೇಷಮುಂತಾದ ಸೌರಮಾಸಗಳನ್ನಾಗಿಯೂ ಚೈತ್ರ ಮೊದಲಾದ ಚಾಂದ್ರಮಾಸಗಳನ್ನಾಗಿಯೂ ಹೇಳುವರು. ಸೌರಮಾಸವು ಒಂದು ಪಾದ ಹೆಚ್ಚಿಗೆ ಇರುವ ಎರಡು ನಕ್ಷತ್ರಗಳ (೯ ಪಾದಗಳ) ಸಂಚಾರ ಕಾಲ ಚಾಂದ್ರಮಾಸವು ಶುಕ್ಲಕೃಷ್ಣಗಳೆಂಬ ಎರಡು ಪಕ್ಷಗಳ ಕಾಲವಾಗುವುದು. ಎಷ್ಟು ಕಾಲದಲ್ಲಿ ವರ್ಷದ ಆರನೆಯ ಒಂದಂಶವನ್ನು ಈ ಸೂರ್ಯನು ಮುಗಿಸುವನೋ ಅಷ್ಟು ಕಾಲವು ಸಂವತ್ಸರದ ಭಾಗವಾದ ಋತುವೆಂದು ಕರಿಸಿಕೊಳ್ಳುವುದು. ವರ್ಷದ ಹನ್ನೆರಡನೆಯ ಒಂದು ಭಾಗಕ್ಕೆ ಮಾಸವೆಂಬ ಹೆಸರು. ಅಶ್ವಿನಿಭರಣಿಗಳ ನಾಲ್ಕೂ ಪಾದಗಳು ಮತ್ತು ಕೃತ್ತಿಕೆಯ ಒಂದು ಪಾದಸೇರಿ ಒಟ್ಟು ಒಂಭತ್ತುಪಾದದವರೆಗೆ ಸಂಚಾರ ಕಾಲವು ಮೇಷ ಮಾಸವೆಂದು ಮುಂತಾದ ಕ್ರಮದಲ್ಲಿ ಮಾಸಗಳನ್ನು ತಿಳಿಯಬೇಕು. ಎರಡು ಪಕ್ಷಗಳ ವೇಳೆಗೆ ಈ ಒಂಬತ್ತು ಪಾದಗಳನ್ನು ಸಂಚರಿಸುವುದರಿಂದ ಮಾಸಕ್ಕೆ ಹೇಳಿದ ಎರಡೂ ಪರಿಮಾಣವೂ ಸಮಂಜಸವೆಂದೇ ತಿಳಿಯಬೇಕು.

ಮತ್ತು ಎಷ್ಟು ಕಾಲದಲ್ಲಿ ಅಂತರಿಕ್ಷಮಾರ್ಗದ ಅರ್ಧವನ್ನು ಸಂಚರಿಸುವನೋ ಆ ಕಾಲವನ್ನು ಅಯನವೆಂದು ಕರೆಯುವರು. ಅಂತರಿಕ್ಷದಲ್ಲಿ ಅಶ್ವಿನೀ ಮೊದಲಾದ ಮೂರು ಮೂರು ನಕ್ಷತ್ರಗಳ ಒಂಬತ್ತು ಮಾರ್ಗಗಳಿವೆಯೆಂದು ಹಿಂದೆ ಹೇಳಿದ್ದನ್ನು ಇಲ್ಲಿ ತಿಳಿಯಬೇಕು. ಉತ್ತರಾಯಣದಲ್ಲಿ ಮಂದಗತಿ ದಕ್ಷಿಣಾಯನದಲ್ಲಿ ಶೀಘ್ರಗತಿ ವೈಷುವದಲ್ಲಿ ಸಮಾನಗತಿ ಎಂಬ ವಿಶೇಷವನ್ನೂ ಮರೆಯಬಾರದು. ಆಕಾಶದಲ್ಲಿರುವ ನಕ್ಷತ್ರರೂಪ ವೀಥಿಯ ಅರ್ಧ ಅಂದರೆ ೧೪ ನಕ್ಷತ್ರಾತ್ಮಕ ಮಾರ್ಗದಿಂದ ಆರು ತಿಂಗಳ ಕಾಲ ಪ್ರಚರಿಸುವನು ಅದನ್ನೇ ಅಯನವೆನ್ನುವರು.

ಮತ್ತು ದ್ಯುಮಂಡಲ ಪೃಥಿವೀಮಂಡಲಗಳೊಂದಿಗೆ ಇರುವ ಅಂತರಿಕ್ಷ




ಮಂಡಲವನ್ನು ಇಪ್ಪತ್ತೆಂಟು ನಕ್ಷತ್ರಗಳನ್ನೂ ಮುಗಿಸಿ ಎಷ್ಟು ಕಾಲದಲ್ಲಿ ಸಂಚರಿಸುವನೋ ಆ ಕಾಲವನ್ನು ಕಾಲಜ್ಞರು ಸೂರ್ಯನ ನಿಧಾನ ತ್ವರಿತ ಮತ್ತು ಸಮಾನಗತಿ ಭೇದದಿಂದ ಸಂವತ್ಸರ ಪರಿವತ್ಸರ ಇಡಾವತ್ಸರ ಅನುವತ್ಸರ ವತ್ಸರಗಳೆಂದು ಹೇಳುವರು. ಉತ್ತರಾಷಾಡ ನಾಲ್ಕನೇ ಪಾದ ಶ್ರವಣ ಮೊದಲನೇ ಪಾದ ಇವೆರಡು ಸೇರಿ ಅಭಿಜಿನ್ನಕ್ಷತ್ರ ಎಂದು ಬೇರೆ ಎಣಿಸಿದಾಗ ಇಪ್ಪತ್ತೆಂಟು ಆಗುವುದು.

ಹೀಗೆ ಸೂರ್ಯನ ಸ್ಥಾನ, ಕಾರ್ಯಗಳನ್ನು ತಿಳಿಸಿ ಚಂದ್ರಾದಿಗ್ರಹಗಳಿಗೂ ಅವುಗಳನ್ನು ಹೇಳುತ್ತಾರೆ.

ಹೇಳಿದ ರೀತಿಯಲ್ಲಿಯೇ ಸೂರ್ಯಮಂಡಲದ ಮೇಲೆ ಒಂದುಲಕ್ಷಯೋಜನ ದೂರದಲ್ಲಿ ದೊರೆಯುವ ಚಂದ್ರನು ಸೂರ್ಯನ ಸಂವತ್ಸರ ೧೨ ರಾಶಿಗಳ (ಎಲ್ಲ ನಕ್ಷತ್ರಗಳ) ಸಂಚಾರವನ್ನು ಶುಕ್ಲ ಕೃಷ್ಣಪಕ್ಷಗಳೆರಡರಿಂದಲೂ (ತಿಂಗಳಿಂದಲೂ) ಸೂರ್ಯನ ಒಂದು ತಿಂಗಳ ೯ ಪಾದಗಳ ಸಂಚಾರವನ್ನು ಎರಡೂ ಕಾಲು ನಕ್ಷತ್ರಗಳಿಂದಲೂ (ದಿನದಿಂದ) (ಕೃತ್ತಿಕಾ ಪಾದ ಸಹಿತ ಅಶ್ವಿನೀ, ಭರಿಣೀಗಳಿಂದ ಮುಂತಾದ ಕ್ರಮದಿಂದ) ಸೂರ್ಯನ ಒಂದು ಪಕ್ಷ(ಹದಿಮೂರು ದಿನ)ದ ಒಂದು ನಕ್ಷತ್ರ ಸಂಚಾರವನ್ನು ಒಂದೇ ದಿನದಿಂದಲೂ ಸೂರ್ಯನಿಗಿಂತ ಮುಂದೆ ಚರಿಸುವುದರಿಂದ ನಕ್ಷತ್ರಗಳ ಅಗ್ರಣಿಯಾದ್ದರಿಂದಲೂ ಮುಗಿಸುವನು. ಸೂರ್ಯ ಯಾವ ನಕ್ಷತ್ರದಲ್ಲಿ ಇರುವನೋ ಆ ನಕ್ಷತ್ರವನ್ನು ಒಂದೇ ದಿನದಲ್ಲಿ ಸಂಚರಿಸಿ ಮುಂದೆ ಬೇರೆ ನಕ್ಷತ್ರಕ್ಕೆ ಪ್ರವೇಶಿಸುವನು.

ಮತ್ತು ದಿನದಿನಕ್ಕೂ ವೃದ್ಧಿ ಹೊಂದುವ ದಿನದಿನಕ್ಕೂ ಕ್ಷೀಣವಾಗುವ ಕಲೆಗಳಿಂದ ಕ್ರಮವಾಗಿ ಪಿತೃದೇವತೆಗಳಿಗೆ ಹಗಲು ರಾತ್ರಿಗಳನ್ನು ಶುಕ್ಲಪಕ್ಷ ಕೃಷ್ಣಪಕ್ಷಗಳ ಮೂಲಕ ಉಂಟು ಮಾಡುತ್ತ ಆಹಾರ ವೃದ್ಧಿಯನ್ನು ಮಾಡುವುದರಿಂದ ಎಲ್ಲ ಪ್ರಾಣಿ ರಾಶಿ ಚೇಷ್ಟಕನಾಗಿ ಜೀವನಪ್ರದನಾಗಿ ಚಂದ್ರನು ಒಂದೊಂದು ನಕ್ಷತ್ರವನ್ನು ಅರವತ್ತು ಘಳಿಗೆಗಳಿಂದ ಸಂಚರಿಸುವನು. ಇದರಿಂದ ಸೂರ್ಯನ ಪಕ್ಷಸಂಚಾರವನ್ನು ಒಂದು ದಿನದಲ್ಲಿ ಮುಗಿಸುವನು ಎಂದು ಹೇಳಿದ್ದನ್ನು ಸ್ಪಷ್ಟಪಡಿಸಿರುವರು.

ಯಾವ ಈ ಹದಿನಾರು ಕಲೆಗಳುಳ್ಳ ಪುರುಷ ನಾಮಕ ಶ್ರೀಹರಿಯು ಎಲ್ಲರ ಮನಸ್ಸನ್ನು ಪ್ರೇರಿಸುವನು ಚಂದ್ರನ ಪಕ್ಷದಲ್ಲಿ ಮನೋಭಿಮಾನಿ ಎಂದರ್ಥ ಆಹಾರವನ್ನು ಕೊಡುವವನು, ಅಮೃತವನ್ನು ಸುರಿಸುವ ಕಿರಣಗಳುಳ್ಳವನು ಆದ್ದರಿಂದ

ದೇವತೆಗಳು, ಪಿತೃಗಳು, ಮನುಷ್ಯರು, ಭೂತಗಳು, ಪಶುಗಳು, ಪಕ್ಷಿಗಳು, ಸರ್ಪಗಳು, ಬಳ್ಳಿಗಳು ಇವೆಲ್ಲಕ್ಕೂ ಅನ್ನವನ್ನು ವೃದ್ಧಿಗೊಳಿಸುವ ಮೂಲಕ ಪ್ರಾಣಕ್ಕೆ ಸಂತೋಷವನ್ನುಂಟುಮಾಡುವ ಸ್ವಭಾವದವನಾದ್ದರಿಂದ ಸರ್ವಜೀವಪ್ರಧಾನನು, ಸರ್ವಕ್ಕೂ ಉಪಜೀವ್ಯನು ಎಂದು ಜ್ಞಾನಿಗಳು ಹೇಳುವರು.

ಆ ಚಂದ್ರಲೋಕಕ್ಕೂ ಮೇಲೆ ಒಂದು ಲಕ್ಷ ಯೋಜನ ದೂರದಲ್ಲಿ ಅಶ್ವಿನೀ ಮೊದಲಾದ ನಕ್ಷತ್ರಗಳು (ಇರುವವು) ಅವು ಮೇರು ಪರ್ವತವನ್ನು ಪ್ರದಕ್ಷಿಣೆಯಾಗಿಯೇ ಹೋಗುವುವು. ಅವುಗಳಿಗೆ ಸೂರ್ಯಾದಿಗಳಿಗಿರುವಂತೆ ಮಂದಮಧ್ಯಾದಿ ಗತಿಗಳಿಲ್ಲ. ಕಾಲಜ್ಞಾಪನೆಗಾಗಿ ಸೂರ್ಯರಥಚಕ್ರವಾದ ಕಾಲಚಕ್ರದಲ್ಲಿ ಶ್ರೀಹರಿಯಿಂದ ನಿಯುಕ್ತವಾಗಿರುವವು. ಅದಕ್ಕನುಸಾರವಾಗಿ ಪ್ರವರ್ತಿಸುವುದೇ ಅದರಲ್ಲಿ ನಿಯುಕ್ತವಾಗಿರುವಿಕೆಯು. ನಕ್ಷತ್ರ ಮಂಡಲವು ಎತ್ತರದಲ್ಲಿ ಇದ್ದಮೇಲೆ ಸೂರ್ಯಾದಿಗಳಿಗೆ ಆ ಆ ನಕ್ಷತ್ರ ಪ್ರಾಪ್ತಿಯೆಂದರೆ ಅವುಗಳಿಗೆ ಸಮಾನ ಸ್ಥಳಕ್ಕೆ ಬರುವುದು.

ಅವು ಉತ್ತರಾಷಾಢಾ ಮತ್ತು ಶ್ರವಣಗಳ ಸಂಧಿರೂಪವಾದ ಅಥವಾ ರೇವತೀ ಅಶ್ವಿನಿಗಳ ಸಂಧಿರೂಪವಾದ ಅಭಿಜಿತ್ ನಕ್ಷತ್ರವನ್ನು ಲೆಕ್ಕಕ್ಕೆ ತೆಗೆದುಕೊಂಡಾಗ ಇಪ್ಪತ್ತೆಂಟು ದೊರೆಯುವುವು.

ಅಶ್ವಿನ್ಯಾದಿ ನಕ್ಷತ್ರಕ್ಕಿಂತ ಮೇಲೆ ಎರಡು ಲಕ್ಷಯೋಜನಗಳಲ್ಲಿ ಶುಕ್ರನು ದೊರೆಯುವನು. ಅವನು ಸೂರ್ಯನಂತೆಯೇ ಶೀಘ್ರಮಂದಸಮಗತಿಗಳಿಂದ ಕ್ರಮವಾಗಿ ಸೂರ್ಯನ ಮುಂದೆ ಅಂದರೆ ತನ್ನ ಶೀಘ್ರಗತಿಯಿಂದ ಸೂರ್ಯನಿಂದ ಭುಕ್ತನಕ್ಷತ್ರದಲ್ಲಿ ಸಮಗತಿಯಿಂದ ಸೂರ್ಯನಿಂದ ಭುಜ್ಯಮಾನ ನಕ್ಷತ್ರದಲ್ಲಿ ಸಂಚರಿಸುವನು. ಬಹುತೇಕ ಯಾವಾಗಲೂ ಜನರಿಗೆ ಹಿತಕರನೇ ಆದ ಶುಕ್ರನ ಇರುವಿಕೆಯ ಮೂಲಕ ಮಳೆಯು ನಿರ್ಣಯಿಸಲ್ಪಡುವುದು. ಶುಕ್ರನು ಮಳೆಯನ್ನು ತಡೆಯುವ ಅಂಗರಾಕಗ್ರಹದ ಕಾರ್ಯವನ್ನು ತಡೆಯುವನು. ಶುಕ್ರನ ಗತ್ಯಾದಿಗಳನ್ನು ತಿಳಿಸುವುದರಮೂಲಕ ಬುಧನನ್ನು ತಿಳಿಸಿದಂತಾಯಿತು. ಗತ್ಯಾದಿಗಳಲ್ಲಿ ಬುಧನು ಶುಕ್ರನನ್ನು ಹೋಲುವನು.

ಶುಕ್ರ ಮಂಡಲದ ಮೇಲೆ ಎರಡು ಲಕ್ಷ ಯೋಜನಗಳಲ್ಲಿ (ಅಂದರೆ ಎರಡು ಲಕ್ಷಯೋಜನದ ಮೇಲೆ) ಚಂದ್ರನ ಮಗನಾದ ಬುಧನು ದೊರೆಯುವವನಾಗಿ




ಯಾವ ಪಾಪಗ್ರಹದ ಸಂಬಂಧವೂ ಇಲ್ಲದ ಕಾಲದಲ್ಲಿ ಜನರಿಗೆ ಒಳ್ಳೆಯದನ್ನೇ ಮಾಡುವನು. ಯಾವಾಗ ಸೂರ್ಯನನ್ನು ಅತಿಚಾರ ಗತಿಯಿಂದ ಕ್ರಮಪ್ರಾಪ್ತನಕ್ಷತ್ರವನ್ನು ಬಿಟ್ಟು ಮುಂದಿನ ನಕ್ಷತ್ರಕ್ಕೆ ಹೋಗಿ ಅತಿಕ್ರಮಿಸುವನೋ ಆವಾಗ ಹೆಚ್ಚಾದ ಗಾಳಿ ಮೋಡಮುಸುಕಿದ್ದರೂ ಮಳೆಬಾರದಿರುವುದು ಮುಂತಾದ ಭಯವನ್ನು ಸೂಚಿಸುವನು.

ಆ ಬುಧಮಂಡಲದ ಮೇಲೆ ಎರಡು ಲಕ್ಷಯೋಜನಗಳಲ್ಲಿ ದೊರೆಯುವ ಅಂಗಾರಕನೂ ವಕ್ರನಾಗದಿದ್ದರೆ ಮೂರು ಮೂರು ಪಕ್ಷಗಳಿಗೆ (ಒಂದುವರೆ ತಿಂಗಳಿಗೆ) ಒಂದೊಂದು ರಾಶಿಯಂತೆ ಹನ್ನೆರಡು ರಾಶಿಗಳನ್ನು ಒಂದುವರೆ ವರ್ಷದಲ್ಲಿ ಅನುಭವಿಸುವನು. ಜನರಿಗೆ ದುಃಖ ಸೂಚಿಸುವನು. ಶುಭಗ್ರಹ ಸಂಪರ್ಕವಿಲ್ಲದಿರುವಾಗ ಅಹಿತಕರವಾದ ಗ್ರಹವು. ಶುಭಗ್ರಹ ಸಂಪರ್ಕವಿದ್ದಾಗ ಶುಭಸೂಚಕನು.

ಅಂಗಾರಕ ಮಂಡಲದ ಮೇಲೆ ಎರಡು ಲಕ್ಷ ಯೋಜನ ದೂರದಲ್ಲಿರುವ ಪೂಜ್ಯನಾದ ಬೃಹಸ್ಪತಿಯು(ಗುರು) ಒಂದೊಂದು ರಾಶಿಯಲ್ಲಿ ವಕ್ರನಾಗದಿರುವಾಗ ಬೃಹಸ್ಪತಿ ಮಾನದ ಒಂದು ವರ್ಷದಲ್ಲಿ (ಬೃಹಸ್ಪತಿಯು ಹನ್ನೆರಡು ರಾಶಿಗಳನ್ನೂ ಸಂಚರಿಸುವ ಕಾಲ ಹನ್ನೆರಡನೆ ಒಂದು ಭಾಗಕ್ಕೆ ಪರಿವತ್ಸರವೆಂದು ಹೆಸರು) ಸಂಚರಿಸುವನು. ಅಷ್ಟಮಾದಿ ಪಾಪ ಸ್ಥಾನಗಳನ್ನು ಬಿಟ್ಟು ಉಳಿದ ಸ್ಥಾನಗಳಲ್ಲಿ ಬ್ರಾಹ್ಮಣ ಕುಲಕ್ಕೆ ಹಿತಕರನಾಗಿರುವನು.

ಬೃಹಸ್ಪತಿ ಮಂಡಲದ ಮೇಲೆ ಎರಡುಲಕ್ಷ ಯೋಜನಗಳಲ್ಲಿ ಕಂಡು ಬರುವ ಶನೈಶ್ಚರನು ಒಂದೊಂದು ರಾಶಿಯಲ್ಲಿ ಮೂವತ್ತು ತಿಂಗಳು ಕಾಲ ನಿಧಾನವಾಗಿ ಸಂಚರಿಸುತ್ತ ಮೂವತ್ತು ಅನುವತ್ಸರ ಕಾಲಗಳಲ್ಲಿ ಎಲ್ಲ ರಾಶಿಗಳನ್ನೂ ಸುತ್ತುವನು. ಹನ್ನೊಂದನೇ ಸ್ಥಾನ ಒಂದನ್ನು ಬಿಟ್ಟು ಉಳಿದೆಲ್ಲ ಸ್ಥಾನಗಳಲ್ಲಿ ಎಲ್ಲ ಪ್ರಾಣಿಗಳಿಗೂ ದುಃಖಕರನೆಂದು ಅನ್ವರ್ಥವಾದ ಹೆಸರು.

ಶನಿಮಂಡಲದ ಉತ್ತರಕ್ಕೆ ಹನ್ನೊಂದುಲಕ್ಷ ಯೋಜನ ದೂರದಲ್ಲಿ ಸಪ್ತಋಷಿಗಳು ಈ ರೀತಿ ಲೋಕಗಳನ್ನು (ಜನರನ್ನು) ತಮ್ಮ ಅನುಗ್ರಹದಿಂದ ಅಭಿವೃದ್ಧಿಗೊಳಿಸುತ್ತಾ ಸರ್ವೈಶ್ವರ್ಯಸಂಪನ್ನನಾದ ಶ್ರೀಹರಿಯ ಶಿಂಶುಮಾರ ರೂಪದಿಂದಿರುವ ಸ್ಥಾನವನ್ನು ಪ್ರದಕ್ಷಿಣೆಯಾಗಿ ಸಂಚರಿಸುವರು.

ಮತ್ತು ಆ ಸಪ್ತರ್ಷಿ ಮಂಡಲಕ್ಕೆ ಮೇಲೆ ಹದಿಮೂರು ಲಕ್ಷ ಯೋಜನ ದೂರದಲ್ಲಿ ಧ್ರುವ ಮಂಡಲವನ್ನು ಶ್ರೀಹರಿಯ ಸರ್ವೋಚ್ಚವಾದ ಶಿಂಶುಮಾರ ಸ್ಥಾನವೆಂದು ಜ್ಞಾನಿಗಳು ಹೇಳುವರು. ಆ ಸ್ಥಳದಲ್ಲಿ ಪರಮಭಗವದ್ಭಕ್ತನಾದ ಉತ್ತಾನ ಪಾದರಾಜನ ಮಗನಾದ ಧ್ರುವನು ತಾನಿರುವಷ್ಟು ಕಾಲವೂ ಇರುವ (ದಿನಕಲ್ಪ ಪೂರ್ತಿ ಇರುವ) ಅಗ್ನಿಯಿಂದ ಇಂದ್ರನಿಂದ ದಕ್ಷ ಪ್ರಜೇಶ್ವರನಿಂದ ಕಶ್ಯಪರಿಂದ ಯಮಧರ್ಮನಿಂದಲೂ ಗೌರವಪುರಸ್ಸರವಾಗಿ ಪ್ರದಕ್ಷಿಣೆ ಮಾಡಿಸಿಕೊಳ್ಳುವವನಾಗಿ ಮಹರ್ಲೋಕ ವಾಸಿಗಳಾದ ಜೀವರಿಗೆ ತತ್ತ್ವೋಪದೇಶಾದಿಗಳಿಂದ ಉಪಜೀವ್ಯನಾಗಿ ಈಗಲೂ ಶ್ರೀಹರಿಯನ್ನು ಉಪಾಸಿಸುವನು.

ಆ ಧ್ರುವರಾಜನ ಮಹಿಮೆಯು ಈ ಗ್ರಂಥದ ಚತುರ್ಥಸ್ಕಂಧದಲ್ಲಿ ವಿವರವಾಗಿ ಹೇಳಲ್ಪಟ್ಟಿರುವುದು. ಆ ಧ್ರುವರಾಜನಾದರೂ ಸದಾ ಕಣ್ಣು ತೆರೆದಿರುವ ತಿಳಿಯದ ವೇಗವುಳ್ಳ ಕಾಲನಾಮಕ ಶ್ರೀಹರಿಯಿಂದ ತಿರುಗಿಸಲ್ಪಡುವ ಗ್ರಹನಕ್ಷತ್ರಮುಂತಾದ ಜ್ಯೋತಿಸ್ಸಮೂಹಕ್ಕೆ ಆಶ್ರಯವಾದ ಗೂಟಿಯ ಕಂಬದಂತೆ ಸರ್ವನಿಯಾಮಕ ಶ್ರೀಹರಿಯಿಂದ ಇಡಲ್ಪಟ್ಟವನಾಗಿ ಎಲ್ಲ ಕಾಲದಲ್ಲಿಯೂ ಪ್ರಕಾಶಿಸುತ್ತಿರುವನು. ಹೇಗೆ ಮಧ್ಯದಲ್ಲಿ ನೆಟ್ಟಿರುವ ಕಂಬದಲ್ಲಿ (ಮೇಟಿ) ಹಗ್ಗದಿಂದ ಕಟ್ಟಿರುವ ಧಾನ್ಯಗಳನ್ನು ತುಳಿದು ಬೇರ್ಪಡಿಸುವ ಸಾಲಾಗಿರುವ ಎತ್ತು ಮೊದಲಾದವು ತ್ವರಿತ, ಮಂದ, ಸಮ ಗತಿಗಳಿಂದ ತಮ್ಮ ತಮ್ಮ ನಿಯಮಿತ ಸ್ಥಳಗಳನ್ನು ಬಿಡದೇ ಆ ಕಂಬವನ್ನು ಸುತ್ತುವವೋ ಹಾಗೆ.

ಅದೇ ರೀತಿಯಲ್ಲಿ ಸೂರ್ಯನ ರಥಚಕ್ರದಲ್ಲಿ ಶ್ರೀಹರಿಯಿಂದ ವಾಯುಪಾಶದಿಂದ ಕಟ್ಟಲ್ಪಟ್ಟಿರುವ ನಕ್ಷತ್ರಗಣಗಳು ಗ್ರಹಗಳು ಸಪ್ತರ್ಷಿಗಳು ಮುಂತಾದವು ಈ ಧ್ರುವ ಮಂಡಲದಲ್ಲಿ ಕೆಲವು ಒಳ, ಹಲವು ಹೊರ ಸಂಬಂಧದಿಂದ ಧ್ರುವಮಂಡಲವನ್ನೇ ಆಶ್ರಯಿಸಿ ಆತಿವಾಹಿಕ ವಾಯುವಿನಿಂದ ಪ್ರೇರಿಸಲ್ಪಡು-ವವುಗಳಾಗಿ ದಿನಕಲ್ಪ ಮುಗಿಯುವವರೆಗೂ ಧ್ರುವನ ಸುತ್ತಲೂ ಸಂಚರಿಸುವವು.

ಈ ಗ್ರಹಾದಿಗಳು ನಿರಾಶ್ರಯಗಳಲ್ಲ. ಕೆಲವರು ಜ್ಞಾನಿಗಳು ಈ ಗ್ರಹ ಮುಂತಾದ ಜ್ಯೋತಿಸ್ಸಮೂಹವು ಪ್ರಸಿದ್ಧ ಚೇಳಿನ ಅವಯವಗಳಂತೆ ಅವಯವಗಳುಳ್ಳ ಐಶ್ವರ್ಯಶಾಲಿಯಾದ ಶ್ರೀಹರಿಯ ಯೋಗಸಾಮರ್ಥ್ಯದಿಂದ ಧಾರಣಕ್ರಿಯೆಯು ಇರುತ್ತಿರಲು ಭೂಮಿಗೆ ಬೀಳಲಾರವೆಂದು ಪ್ರತಿಪಾದಿಸುವರು.




ಶರೀರವನ್ನು ಗುಂಡಗೆ ಮುದುರಿಸಿಕೊಂಡ ತಲೆಯನ್ನು ಕೆಳಗೆ ಮಾಡಿಕೊಂಡಿರುವ ಶಿಂಶುಮಾರ ಮೂರ್ತಿಯ ಬಾಲದ ಕೊನೆಯಲ್ಲಿ ಧ್ರುವರಾಜನು ನಕ್ಷತ್ರವಾಗಿರುವನು. ಆ ಶಿಂಶುಮಾರನ ಬಾಲದ ಮಧ್ಯದಲ್ಲಿ ದಕ್ಷನು, ಅಗ್ನಿಯು, ಇಂದ್ರನು, ಧರ್ಮನೂ ನಕ್ಷತ್ರರೂಪವಾಗಿರುವರು.

ಬಾಲದ ಬುಡದಲ್ಲಿ ಧಾತೃ ವಿಧಾತೃಗಳೂ, ಸೊಂಟದಲ್ಲಿ ಏಳು ಋಷಿಗಳೂ ಇರುವರು. ಬಲಸುತ್ತಿನಿಂದ ಕುಂಡಲವಾಗಿರುವ ದೇಹವುಳ್ಳ ಆ ಶಿಂಶುಮಾರನ ಬಲಭಾಗದಲ್ಲಿ ಸೂರ್ಯನ ಉತ್ತರಾಯಣ ಗಮನಕ್ಕೆ ಮಾರ್ಗಗಳಾದ ಅಭಿಜಿತ್ತಿನಿಂದ ಹಿಡಿದು ಪುನರ್ವಸು ಪರ್ಯಂತ ನಕ್ಷತ್ರಗಳನ್ನು ಇವೆಯೆಂದು ಹೇಳುವರು.

ದಕ್ಷಿಣಾಯನ ಗಮನಕ್ಕೆ ಮಾರ್ಗಗಳಾದ ಪುಷ್ಯ ಮೊದಲುಗೊಂಡು ಉತ್ತರಾಷಾಢ ಪರ್ಯಂತ ನಕ್ಷತ್ರಗಳನ್ನಾದರೋ ಎಡಭಾಗದಲ್ಲಿ ಹೇಳುವರು. ಹೇಗೆ ದುಂಡಗೆ ಸುತ್ತಿಕೊಂಡ ದೇಹವಿನ್ಯಾಸವುಳ್ಳ ಶಿಂಶುಮಾರ ರೂಪಿಯ ಎರಡೂ ಪಕ್ಕಗಳಲ್ಲಿಯೂ ಅವಯವಗಳು ಹದಿನಾಲ್ಕು ಹದಿನಾಲ್ಕು ಆಗುವುವೋ ಹಾಗೆ ಹೇಳುವರು.

ಬೆನ್ನಿನಲ್ಲಿ ಉತ್ತರದಲ್ಲಿ ಆಕಾಶಗಂಗೆಯು, ಬಲ ಎಡ ಬಲ ಕಟಿ ಪಶ್ಚಾದ್ಭಾಗಗಳಲ್ಲಿ (ನಿತಂಬಗಳಲ್ಲಿ) ಕ್ರಮವಾಗಿ ಪುನರ್ವಸು ಪುಷ್ಯಗಳು, ಬಲ ಎಡ ಪಾದಗಳಲ್ಲಿ ಆರ್ದ್ರಾ ಆಶ್ಲೇಷಗಳು, ಬಲ ಎಡ ಮೂಗುಗಳಲ್ಲಿ ಅಭಿಜಿತ್ ಉತ್ತರಾಷಾಡಗಳು, ಬಲ ಎಡ ಕಣ್ಣುಗಳಲ್ಲಿ ಶ್ರವಣಪೂರ್ವಾಷಾಢಗಳು, ಬಲ ಎಡ ಕಿವಿಗಳಲ್ಲಿ ಧನಿಷ್ಠಾಮೂಲಗಳು, ಮಘಾ ಮೊದಲಾದ ಎಂಟು ನಕ್ಷತ್ರಗಳನ್ನು ದಕ್ಷಿಣಾಯನ ಮಾರ್ಗಕ್ಕೆ ಸೇರಿದವುಗಳನ್ನು ಎಡಭಾಗದ ಸಾಲುಗಳಲ್ಲಿ ಇವೆ ಎಂದು ತಿಳಿಯಬೇಕು.

ಹಾಗೆಯೇ ಮೃಗಶಿರಮೊದಲಾದ ಪೂರ್ವಾಭಾದ್ರಪದದಿಂದ ಪ್ರಾರಂಭವಾಗುವ ಎಂಟು ನಕ್ಷತ್ರಗಳನ್ನು ಉತ್ತರಾಯಣ ಮಾರ್ಗಕ್ಕೆ ಸೇರಿದವುಗಳನ್ನು ಬಲಭಾಗದಲ್ಲಿ ಮೃಗಶಿರ, ರೋಹಿಣಿ, ಕೃತ್ತಿಕ, ಭರಣಿ, ಅಶ್ವಿನಿ, ರೇವತಿ ಉತ್ತರಾಭಾದ್ರಪದ, ಪೂರ್ವಾಭಾದ್ರಪದ ಕ್ರಮದಲ್ಲಿ ಹಿಂದೆ ಹಿಂದೆ ತಿಳಿಯಬೇಕು.

ಶತಭಿಷ, ಜ್ಯೇಷ್ಠಾ ಎರಡು ನಕ್ಷತ್ರಗಳನ್ನು ಬಲ ಎಡ ಹೆಗಲುಗಳಲ್ಲಿ ಇವೆ ಎಂದು ತಿಳಿಯಬೇಕು.

ಮೇಲಿನ ದವಡೆಯಲ್ಲಿ ಅಗಸ್ತ್ಯನ ನಕ್ಷತ್ರವು, ಕೆಳದವಡೆಯಲ್ಲಿ ಯಮ ನಕ್ಷತ್ರ, ಮುಖದಲ್ಲಿ ಮಂಗಳ (ಕುಜ) ಗ್ರಹವು, ಜನನೇಂದ್ರಿಯದಲ್ಲಿ ಶನಿಗ್ರಹವು, ಕುತ್ತಿಗೆಯ ಹಿಂದೆ ಗುರುಗ್ರಹವು, ಎದೆಯಲ್ಲಿ ಸೂರ್ಯನು, ಚಿತ್ತದಲ್ಲಿ ಸ್ವಯಂ ಶ್ರೀಹರಿಯು, ಮನಸ್ಸಿನಲ್ಲಿ ಚಂದ್ರನು, ಹೊಕ್ಕಳಲ್ಲಿ ಶುಕ್ರನು, ಸ್ತನಗಳಲ್ಲಿ ಅಶ್ವಿನೀ ದೇವತೆಗಳು, ಪ್ರಾಣಾಪಾನಗಳಲ್ಲಿ ಬುಧನು, ಕುತ್ತಿಗೆಯಲ್ಲಿ ರಾಹುವು, ಎಲ್ಲ ಅವಯವಗಳಲ್ಲಿ (ನೂರು) ಕೇತುಗಳು, ಕೂದಲುಗಳಲ್ಲಿ ಇತರ ಎಲ್ಲ ನಕ್ಷತ್ರಸಮೂಹಗಳು ಇರುವುವು.

ಇದುವೇ ಐಶ್ವರ್ಯಶಾಲಿಯಾದ ವಿಷ್ಣುವಿನ ಎಲ್ಲ ದೇವತಾ ಪ್ರಧಾನ ರೂಪವು ಇದನ್ನೇ ಪ್ರತಿದಿನವೂ ಸಾಯಂಕಾಲದಲ್ಲಿ ಕಾಯಿಕ ಮಾನಸಿಕ ನಿಯಮಗಳಿಂದ ಕೂಡಿದವನಾಗಿ ವಾಙ್ನಿಯಮದಿಂದ ಕೂಡಿ ನೋಡುತ್ತಾ ಜ್ಯೋತಿಸ್ಸುಗಳಿಗೆ ಆಶ್ರಯನಾದ ಕಾಲಜ್ಞಾಪಕನಾದ ದೇವತೆಗಳಿಗೆ ಪಾಲಕನಾದ ಸರ್ವೋತ್ತಮ ಪುರುಷನಿಗೆ ನಮಸ್ಕಾರವು ಅವನನ್ನು ಧ್ಯಾನ ಮಾಡುವೆವು ಎಂದು ಮಂತ್ರದಿಂದ ಸ್ತೋತ್ರಮಾಡಬೇಕು.

ಶಿಂಶುಮಾರರೂಪವನ್ನು ತೆಗೆದುಕೊಂಡಿರುವುದಕ್ಕೆ ಪ್ರಯೋಜನವನ್ನು ಹೇಳುತ್ತಾರೆ. ಗ್ರಹಗಳಿಗೂ, ನಕ್ಷತ್ರಗಳಿಗೂ, ತಾರಾಗಳಿಗೂ ಆಶ್ರಯನಾದ ಅಧಿ ದೇವತೆಗಳಿಗೆ ಆಶ್ರಯವಾದ ಶ್ರೀಹರಿಯ ರೂಪವನ್ನು ಮೂರು ಕಾಲದಲ್ಲಿಯೂ ಜಪಿಸುವ ನಮಸ್ಕರಿಸುವ ಸ್ತೋತ್ರ ಮಾಡುವ ಅಧಿಕಾರಿಗೆ ಮೂರು ಕಾಲಗಳಲ್ಲಿ ಮಾಡಿದ ಪಾಪವು ಬೇಗನೇ ಸಂಪೂರ್ಣವಾಗಿ ನಾಶವಾಗುವುದು. ಇದು ''**ನಾರಾಯಣೋ ನಾಮ ನರೋ ನರಾಣಾಂ ಪ್ರಸಿದ್ಧಚೋರಃ ಕಥಿತಃ ಪೃಥಿವ್ಯಾಂ । ಅನೇಕ ಜನ್ಮಾರ್ಜಿತಪಾಪಸಂಚಯಂ ಹರತ್ಯೈಶೇಷಂ ಸ್ಮೃತ ಮಾತ್ರ ಏವ**'' ಇತ್ಯಾದಿ ಪ್ರಮಾಣಗಳಿಂದ ಸಿದ್ಧವು. ಈ ಶಿಂಶುಮಾರ ರೂಪವು ಪ್ರಾಕೃತವೆಂದು ತಿಳಿಯಬಾರದು. ಮಾಂಗಲಿಕವಾದ ಶಿಂಶುಮಾರದೇಹದಲ್ಲಿಯೂ, ಜ್ಞಾನಾನಂದಾತ್ಮಕನಾದ ವಿಷ್ಣುವಿನಲ್ಲಿ ಊರ್ಧ್ವಲೋಕಗಳಲ್ಲಿ ವ್ಯಾಪ್ತನಾಗಿರುವನು. ಆದಿತ್ಯಾದಿಗಳು ಅವನನ್ನು ಆಶ್ರಯಿಸಿರುವರು.

॥★★★॥




# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ತ್ರಯೋವಿಂಶತಿತಮೋऽಧ್ಯಾಯಃ

**ಈ ಅಧ್ಯಾಯದಲ್ಲಿ...**

ಹಿಂದಿನ ಅಧ್ಯಾಯದಲ್ಲಿ ಸೂರ್ಯನನ್ನಾರಂಭಿಸಿ ಧ್ರುವನವರೆಗೆ ಜ್ಯೋತಿರ್ಗಣ ಸ್ಥಿತಿಯನ್ನು ಹೇಳಿದರು. ಈಗ ಸೂರ್ಯನ ಕೆಳಗಿರುವ ರಾಹುವಿನ ಸ್ಥಿತಿಯನ್ನು ತಿಳಿಸುವರು. ಇನ್ನುಳಿದಿರುವ ಅತಲ ಮೊದಲಾದ ಕೆಳಗಿನ ಭೂಲೋಕಗಳ ನಿವಾಸಿಗಳ ಐಶ್ವರ್ಯವೂ ಶ್ರೀಹರಿಯ ಮಾಹಾತ್ಮ್ಯವನ್ನೇ ಸೂಚಿಸುವುದಾದ್ದರಿಂದ ಅದನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು.

### ಅತಲಾದಿ ಅಧೋಲೋಕಗಳ ನಿರೂಪಣೆ

ಶನೈಶ್ಚರ ಪರ್ಯಂತ ಗ್ರಹಗಳ ಸ್ಥಿತಿಯನ್ನು ಹೇಳಿ ರಾಹುವಿನ ಸ್ಥಿತಿಯನ್ನು ಏಕೆ ತಿಳಿಸಲಿಲ್ಲ ಎಂಬ ಆತುರ ಬುದ್ಧಿಯ ಮಂದರ ಶಂಕೆಯನ್ನು ಮೊದಲು ಪರಿಹರಿಸುವವರಾಗಿ ರಾಹುವಿನ ಸ್ಥಿತಿಯನ್ನು ಹೇಳಿ ಸೂರ್ಯ ಮೊದಲಾದ ಮಂಡಲಗಳ ಪರಿಮಾಣವನ್ನು ತಿಳಿಸುತ್ತಾರೆ.

### ರಾಹುಮಂಡಲ ನಿರೂಪಣೆ

**ಶ್ರೀ ಶುಕ ಉವಾಚ-**

**ಅಧಸ್ತಾತ್ಸವಿತುರ್ಯೋಜನಾಯುತೇ ಸ್ವರ್ಭಾನುರ್ನಕ್ಷತ್ರವಚ್ಚರತೀತ್ಯೇಕೇ ಯೋऽಸಾವಮರತ್ವಂ ಗ್ರಹತ್ವಂ ವಾಲಭತ ಭಗವದನುಕಂಪಯಾ ಸ್ವಯಮಸುರಾಪಸದಃ ಸೈಂ ಹಿಕೇಯೋ ಹ್ಯತದರ್ಹಸ್ತಸ್ಯ ತಾತ ಜನ್ಮಕರ್ಮಣೀ ಚೋಪರಿಷ್ಟಾದ್ವಕ್ಷ್ಯಾಮಃ ॥೧॥**

**ಸವಿತುಃ** ಸೂರ್ಯನ **ಅಧಸ್ತಾತ್** ಕೆಳಗೆ **ಯೋಜನಾಯುತೇ** ಹತ್ತು ಸಾವಿರ ಯೋಜನ ದೂರದಲ್ಲಿ **ಸ್ವರ್ಭಾನುಃ** ರಾಹುವು **ನಕ್ಷತ್ರವತ್** ನಕ್ಷತ್ರದಂತೆ ಅಂತರಿಕ್ಷ ಮಂಡಲದಲ್ಲಿ ಮೇರುವನ್ನು ಪ್ರದಕ್ಷಿಣೆಯಾಗಿ **ಚರತಿ** ಸಂಚರಿಸುವನು **ಇತಿ** ಎಂದು **ಏಕೇ** ಕೆಲವು ಪುರಾಣಜ್ಞರು ಹೇಳುವರು. ಪೌರಾಣಿಕರೆಂದು ಹೇಳದೇ **ಏಕೇ** ಎಂದು ಹೇಳಿದ್ದರಿಂದ ಈ ವಿಷಯದಲ್ಲಿ ಮತಾಂತರಗಳಿವೆ ಎಂದು ಸೂಚಿಸಿರುವರು. ಜ್ಯೋತಿಶ್ಶಾಸ್ತ್ರಜ್ಞರು ಕೆಲವರು ರಾಹುವು ಮಾನಸೋತ್ತರ ಪರ್ವತದ ಪ್ರಾಂತ ಭೂಮಿಯಿಂದ ಬಂದು ಉದಯವನ್ನು ಹೊಂದಿ ಮತ್ತೆ ಪಶ್ಚಿಮ ಭಾಗದಲ್ಲಿ ಭೂಮಿಯಲ್ಲೇ ಅಸ್ತವನ್ನು ಹೊಂದಿ ಪಾತಾಲ ಬಿಲದ ಮಧ್ಯದಲ್ಲಿ ಪೂರ್ವದಿಕ್ಕಿಗೆ ಹೋಗಿ ಮಾನಸೋತ್ತರ ಪರ್ವತದ ಹೊರಗೆ ಪ್ರಾಂತ ಭೂಮಿಯಲ್ಲಿಯೇ ಅಸ್ತಂಗತನಾಗುವನು ಎಂದು ಹೇಳುವರು. ಆದ್ದರಿಂದಲೇ ಕೆಲವುವೇಳೆ ಅವರು **'ಪಾತಾಲ ಗ್ರಹಣ'** ವಾಯಿತೆಂದೂ ಹೇಳುವರು. ಅವರಲ್ಲಿಯೇ ಮತ್ತೆ ಕೆಲವರು 'ಮೇರುವಿಗೆ ಅಪ್ರದಕ್ಷಿಣೆಯಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಾ ಪಶ್ಚಿಮದಲ್ಲಿ ಉದಯಿಸಿ ಪೂರ್ವದಲ್ಲಿ ಅಸ್ತಂಗತನಾಗುವನು' ಎಂದೂ ಹೇಳುತ್ತಾರೆ **ಸ್ವಯಂ** ಸ್ವರೂಪದಿಂದ **ಅಸುರಾಪಸದಃ** ದುಷ್ಟ ಅಸುರನಾದ **ಸೈಂಹಿಕೇಯಃ** ಸಿಂಹಿಕಾಳ ಮಗನಾದ **ಅತದರ್ಹಃ** ಅಮರನಾಗಲು ಅರ್ಹತೆ ಇಲ್ಲದ **ಯಃ ಅಸೌ** ಯಾವ ಈ ರಾಹುವು **ಭಗವದನುಕಂಪಯಾ** ಶ್ರೀಹರಿಯ ದಯೆಯಿಂದ **ಅಮರತ್ವಂ** ಅಮರತ್ವವನ್ನು **ಗ್ರಹತ್ವಂ ಚ** ಗ್ರಹತ್ವವನ್ನೂ **ಅಲಭತ** ಹೊಂದಿದನೋ **ತಾತ** ಪರೀಕ್ಷಿತನೇ **ತಸ್ಯ** ಆ ರಾಹುವಿನ **ಜನ್ಮಕರ್ಮಣೀ** ಹುಟ್ಟು ಮತ್ತು ಕಾರ್ಯಗಳನ್ನು **ಉಪರಿಷ್ಟಾತ್** ಮುಂದೆ ಸಮುದ್ರಮಥನ ಕಥೆಯನ್ನು ಹೇಳುವಾಗ **ವಕ್ಷ್ಯಾಮಃ** ಹೇಳುವೆವು. ।।೧।।

## ರಾಹುಮಂಡಲ ವಿಸ್ತಾರ, ಗ್ರಹಣ

ಈಗ ಗ್ರಹಣವನ್ನು ಹೇಳುತ್ತಾರೆ

**ಯದದಸ್ತರಣೇರ್ಮಂಡಲಂ ಪ್ರತಪತಿ ತದ್ವಿಸ್ತಾರತೋ ಯೋಜನಾಯುತ-ಮಾಚಕ್ಷತೇ ದ್ವಾದಶಸಹಸ್ರಂ ಸೋಮಸ್ಯ ತ್ರಯೋದಶಸಹಸ್ರಂ ರಾಹೋರ್ಯಃ ಪರ್ವಣಿ ತದ್ ವ್ಯವಧಾನ ಕೃದ್ವೈರಾನುಬಂಧಾತ್ಸೂರ್ಯಾಚಂದ್ರಮಸಾ-ವಭಿಧಾವತಿ ।।೨।।**

 

**ಯತ್** ಯಾವ **ಅದಃ** ಈ **ತರಣಿಮಂಡಲಂ** ಸೂರ್ಯಮಂಡಲವು **ಪ್ರತಪತಿ** ಬಿಸಿಲನ್ನು ಕೊಡುತ್ತಿರುವುದೋ **ತತ್** ಅದು **ವಿಸ್ತಾರತಃ** ವಿಸ್ತಾರದಿಂದ **ಯೋಜನಾಯುತಂ ಆಚಕ್ಷತೇ** ಹತ್ತುಸಾವಿರ ಯೋಜನವಿದೆಯೆಂದು ಹೇಳುವರು ಚಂದ್ರನ ಮಂಡಲವು **ದ್ವಾದಶಸಹಸ್ರಂ** ಎರಡು ಹತ್ತು (ಇಪ್ಪತ್ತು) ಸಾವಿರ ಯೋಜನವಿದೆ ಎಂದು ಹೇಳುವರು **ರಾಹೋಃ** ರಾಹುವಿನ ಮಂಡಲವು **ತ್ರಯೋದಶಸಹಸ್ರಂ** ಮೂರು ಹತ್ತು ಮತ್ತು ಹತ್ತು ಅಂತು ನಲವತ್ತು ಸಾವಿರ ಯೋಜನವಿಸ್ತಾರವುಳ್ಳದೆಂದು ಹೇಳುವರು. (**ದ್ವಿದಶ ಸಹಸ್ರಂ ದ್ವಾದಶ**) (**ದಶ ತ್ರಯಃ ತ್ರಿಂಶತ್ ಅಥ ದಶ ಚ**) ಹೀಗೆ ಅರ್ಥ ಮಾಡಿದ್ದರಿಂದ ಸೂರ್ಯಮಂಡಲಕ್ಕೆ ಎರಡರಷ್ಟು ಚಂದ್ರಮಂಡಲ ಅದರ ಎರಡರಷ್ಟು ರಾಹು ಮಂಡಲವೆಂಬ ಪ್ರಮಾಣಾಂತರವನ್ನನುಸರಿಸಿ ಅನ್ವಯವನ್ನು ತೋರಿಸಿರುವರು. ಅದಕ್ಕಾಗಿಯೇ '**ರಾಹುಸೋಮರವೀಣಾಂ ತು ಮಂಡಲಾದ್ವಿಗುಣೋಕ್ತಿತಾಂ । ವಿನ್ಯೈವ ಸರ್ವಮುನ್ನೇಯಂ ಯೋಜನಾಭೇದತೋಽತ್ರ ಚ**' ಎಂಬ ಪ್ರಮಾಣವನ್ನು ಈ ಹಿಂದೆಯೇ ಆಚಾರ್ಯರೇ ಹೇಳಿರುವರು.

**ವ್ಯವಧಾನಕೃತ್** ಅಮೃತಪಾನಕಾಲದಲ್ಲಿ ಸೂರ್ಯಚಂದ್ರರ ಮಧ್ಯದಲ್ಲಿ ಕುಳಿತು ಅವರಿಬ್ಬರಿಗೂ ಅಂತರವನ್ನುಂಟು ಮಾಡಿ **ಯಃ** ಯಾವ ಈ ರಾಹುವು **ಪರ್ವಣಿ** ಹುಣ್ಣಿಮೆ ಅಮಾವಾಸ್ಯಾ ಪರ್ವಕಾಲದಲ್ಲಿ **ವೈರಾನುಬಂಧಾತ್** ಅವರಿಂದ ಸೂಚಿತನಾದನೆಂದು ಶತೃತ್ವವನ್ನು ಮುಂದುವರಿಸಿಕೊಂಡು **ಸೂರ್ಯಾಚಂದ್ರಮಸೌ ಅಭಿಧಾವತಿ** ಹಿಡಿಯಲು ಸೂರ್ಯಚಂದ್ರರನ್ನು ಎದುರಿಸಿ ಓಡುವನು **ವ್ಯವಧಾನಕೃತ್ ವೈರಾನುಬಂಧಾತ್** ಎಂಬುದರಿಂದ ಓಡುವುದಕ್ಕೆ ಕಾರಣ ತಿಳಿಸಿರುವರು **ಪರ್ವಣಿ** ಎಂದದ್ದರಿಂದ ಪರ್ವಕಾಲದಲ್ಲಿಯೇ ಅವನಿಗೆ ಆ ವಿಧ ಸಾಮರ್ಥ್ಯ ಬರುವುದು ಬೇರೆ ಕಾಲದಲ್ಲಿ ಬರಲಾರದು ಎಂದೂ ಸೂಚಿಸಿರುವರು. ॥೨॥

**ತನ್ನಿಶಾಮ್ಯೋಭಯತ್ರಾಪಿ ಭಗವತಾಽಭಿರಕ್ಷಣಾಯ ಪ್ರಯುಕ್ತಂ ಸುದರ್ಶನಂ ನಾಮ ಭಾಗವತಂ ಚಕ್ರಂ ದುರ್ವಿಷಹಂ ಪರಿವರ್ತಮಾನಂ ಅಭ್ಯವಸ್ಥಿತೋ ಮೂಹೂರ್ತಮುದ್ವಿಜಮಾನಶ್ಚಕಿತಹೃದಯ ಆರಾದೇವ ನಿವರ್ತತೇ ತದುಪರಾಗ ಇತಿ ವದಂತಿ ಲೋಕಾಃ ॥೩॥**

**ತತ್** ಅದನ್ನು **ನಿಶಾಮ್ಯ** ನೋಡಿ **ಉಭಯತ್ರಾಪಿ** ಎರಡೂ ಮಂಡಲಗಳಲ್ಲಿಯೂ **ಆಭಿರಕ್ಷಣಾಯ** ರಕ್ಷಣೆಗಾಗಿ **ಭಗವತಾ** ಶ್ರೀಹರಿಯಿಂದ **ಸುದರ್ಶನಂ ನಾಮ** ಸುದರ್ಶನವೆಂಬ **ಭಾಗವತಂ** ಭಗವಂತನಿಗೆ ಪ್ರಿಯವಾದ **ಚಕ್ರಂ** ಚಕ್ರವು **ಪ್ರಯುಕ್ತಂ (ವರ್ತತೇ)** ಬಿಡಲ್ಪಟ್ಟಿರುವುದು **ಪರಿವರ್ತಮಾನಂ** ಸೂರ್ಯಚಂದ್ರಮಂಡಲ ಸುತ್ತಲೂ ಸುತ್ತುತ್ತಿರುವ **ದುರ್ವಿಷಹಂ** ಸಹಿಸಲಾಗದ **ತತ್** ಅದನ್ನು(ಕ್ಕೆ) **ಮುಹೂರ್ತಂ** ಎರಡು ಘಳಿಗೆವರೆಗೆ **ಅಭ್ಯವಸ್ಥಿತಃ** ಎದುರಾಗಿರುತ್ತ **ಉದ್ವಿಜಮಾನಃ** ಚ ಉದ್ವೇಗಗೊಂಡು ವೇಗವಾಗಿ ಚಲಿಸುತ್ತಾ **ಚಕಿತಹೃದಯಃ** ಹೆದರಿದ ಮನಸುಳ್ಳವನಾಗಿ **ಆರಾದೇವ** ಆ ಮಂಡಲಗಳ ದೂರದಿಂದಲೇ **ನಿವರ್ತತೇ** ಹಿಂತಿರುಗುವವನು **ತತ್** ರಾಹುವು ಮಧ್ಯದಲ್ಲಿರುವುದರಿಂದ ಸೂರ್ಯಚಂದ್ರರು ಕಾಣದಿರುವುದನ್ನೇ **ಲೋಕಾಃ** ಜನರು **ಉಪರಾಗ ಇತಿ** ಗ್ರಹಣವೆಂದು **ವದಂತಿ** ಹೇಳುವರು. ।।೩।।

## ಸಿದ್ಧಚಾರಣ ವಿದ್ಯಾಧರ ಸದನ

**ತತೋಽಧಸ್ತಾತ್ಸಿದ್ಧಚಾರಣವಿದ್ಯಾಧರಾಣಾಂ ಸದನಾನಿ ತಾವನ್ಮಾತ್ರೇ ಏವ ।।೪।।**

**ತತಃ** ಆ ರಾಹು ಮಂಡಲದ **ಅಧಸ್ತಾತ್** ಕೆಳಗೆ **ತಾವನ್ಮಾತ್ರೇ ಏವ** ಹತ್ತು ಸಾವಿರ ಯೋಜನ ದೂರದಲ್ಲಿಯೇ **ಸಿದ್ಧಚಾರಣವಿದ್ಯಾಧರಾಣಾಂ** ಸಿದ್ಧ, ಚಾರಣ, ವಿದ್ಯಾಧರರ **ಸದನಾನಿ** ವಾಸಸ್ಥಳಗಳಿವೆ. ।।೪।।

## ಯಕ್ಷ ರಕ್ಷ ಮೊದಲಾದವರ ವಿಹಾರ ಸ್ಥಾನ

**ತತೋಽಧಸ್ತಾದ್ಯಕ್ಷರಕ್ಷಃಪಿಶಾಚಭೂತಪ್ರೇತಗಣಾನಾಂ ವಿಹಾರಾಜಿರ-ಮಂತರಿಕ್ಷಂ ಯಾವದ್ವಾಯುರ್ವಾತಿ ಯಾವನ್ಮೇಘಾ ಉಪಲಭ್ಯಂತೇ ।।೫।।**

**ತತಃ ಅಧಸ್ತಾತ್** ಅದರ ಕೆಳಗೆ (ಅಷ್ಟೇ ದೂರದಲ್ಲಿ) **ಯಕ್ಷರಾಕ್ಷಸಪಿಶಾಚಭೂತ** ಯಕ್ಷ, ರಾಕ್ಷಸ, ಪಿಶಾಚ, ಭೂತ, ಪ್ರೇತಗಳ **ಗಣಾನಾಂ** ಸಮೂಹಗಳ **ವಿಹಾರಾಜಿರಂ** ಕ್ರೀಡೆಗಾಗಿ ಅಂಗಳದಂತಿರುವ **ಅಂತರಿಕ್ಷಂ** ಅಂತರಿಕ್ಷವು ಇರುವುದು **ಯಾವತ್** ಯಾವ ಈ ಅಂತರಿಕ್ಷದವರೆಗೂ **ವಾಯುರ್ವಾತಿ** ಗಾಳಿ ಬೀಸುವುದು **ಯಾವತ್** ಇದುವರೆಗೂ **ಮೇಘಾಃ** ಮೋಡಗಳು **ಉಪಲಭ್ಯಂತೇ** ದೊರೆಯುವುವು. ।।೫।।




## ಹಕ್ಕಿಗಳು ಹಾರುವ ಪ್ರದೇಶವೂ ಭೂಮಿಯೇ

ಪೃಥಿವಿಯ ಮೇಲೆ ಪಾರ್ಥಿವಪಕ್ಷಿಸಂಚರಿಸುವ ಪ್ರದೇಶವೂ ಪೃಥಿವಿ ಎಂದೇ ವಿವಕ್ಷಿತವೆಂದು ಹೇಳುವರು

**ತತೋಽಧಸ್ತಾತ್ ಶತಯೋಜನಾಂತರೇ ಚೇಯಂ ಪೃಥಿವೀ ಯಾವದ್ಧಂಸಸಾರಸಶ್ಯೇನ ಸುಪರ್ಣಾದಯಃ ಪತತ್ರಿಪ್ರವರಾ ಉತ್ಪತಂತೀ-ತ್ಯುಪವರ್ಣಿತಂ ಭೂಮೇರ್ಯಥಾಸನ್ನಿವೇಶಂ ಅವಸ್ಥಾನಮ್ ॥೬॥**

**ತತಃ ಅಧಸ್ತಾತ್** ಅದರ ಕೆಳಗೆ **ಶತಯೋಜನಾಂತರೇ** ನೂರು ಯೋಜನ ದೂರದಲ್ಲಿ **ಇಯಂ ಪೃಥಿವೀ** ಈ ಭೂಮಿಯು ಇರುವುದು **ಯಾವತ್** ಈ ಭೂ ಪ್ರದೇಶದವರೆಗೆ **ಹಂಸಸಾರಸ** ಗಿಡುಗ (**ಶ್ಯೇನ**) **ಸುಪರ್ಣ** ಗರುಡ **ಆದಯಃ** ಮೊದಲಾದ **ಪತತ್ರಿಪ್ರವರಾಃ** ಪಕ್ಷಿ ಶ್ರೇಷ್ಠಗಳು (ಎತ್ತರ ಹಾರುವ ಶಕ್ತಿಯುಳ್ಳ) **ಉತ್ಪತಂತಿ** ಹಾರುವವು. ಇದರಿಂದ ಹಕ್ಕಿಗಳು ಹಾರುವವರೆಗಿನ ಪ್ರದೇಶವೂ ಭೂಮಿಯೆಂದೇ ಹೇಳಿದಂತಾಯಿತು. **ಇತಿ** ಮೇಲೆ ಹೇಳಿದ ರೀತಿಯಲ್ಲಿ **ಭೂಮೇಃ ಯಥಾಸನ್ನಿವೇಶಂ ಅವಸ್ಥಾನಂ** ಭೂಮಿಯ ಸನ್ನಿವೇಶಕ್ಕೆ ತಕ್ಕಂತೆ ಇರುವುದನ್ನು **ಉಪವರ್ಣಿತಂ** ವಿವೃತವಾಯಿತು. ॥೬॥

## ಭೂಮಿಗಿಂತ ಕೆಲಗಿನ ಏಳು ಲೋಕಗಳು

**ಅವನೇರಪ್ಯಧಸ್ತಾತ್ ಸಪ್ತಭೂವಿವರಾ ಏಕೈಕಶೋ ಯೋಜನಾಯುತಾ-ಯಾಮ ವಿಸ್ತಾರಸ್ತಾರತಮ್ಯೇನೋಪಕ್ಲೃಪ್ತಾಃ ಅತಲಂ ವಿತಲಂ ಸುತಲಂ ತಲಾತಲಂ ಮಹಾತಲಂ ರಸಾತಲಂ ಪಾತಲಮಿತಿ ॥೭॥**

**ಅವನೇಃ** ಭೂಮಿಯ **ಅಧಸ್ತಾತ್ ಅಪಿ** ಕೆಳಗೂ ಕೂಡ **ಏಕೈಕಶಃ** ಒಂದೊಂದು **ಯೋಜನಾಯುತಃ** ಹತ್ತುಸಾವಿರಯೋಜನ **ಆಯಾಮವಿಸ್ತಾರಾಃ** ಉದ್ದ ಅಗಲವುಳ್ಳ ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲಗಳೆಂಬ **ಸಪ್ತ** ಏಳು **ಭೂವಿವರಾ** ಭೂಮಿಯರಂಧ್ರಗಳು **ತಾರತಮ್ಯೇನ** ಒಂದರಕ್ಕಿಂತ ಒಂದರಲ್ಲಿ ಹೆಚ್ಚು ಹೆಚ್ಚು ಸುಖವುಳ್ಳವುಗಳಾಗಿ ಒಂದರ ಕೆಳಗೊಂದರಂತೆ **ಉಪಕ್ಲೃಪ್ತಾಃ** ಶ್ರೀಹರಿಯಿಂದ ನಿರ್ಮಿತವಾಗಿರುವುವು. ಸಾಮಾನ್ಯವಾಗಿ '**ಏತೇಷು**' ಎಂದಾರಂಭಿಸಿ '**ಅಥಾತಲಂ**' ಎಂಬಲ್ಲಿವರೆಗೆ ಅವುಗಳನ್ನು ವರ್ಣಿಸುವರು. ॥೭॥

## ಬಿಲಸ್ವರ್ಗಗಳಲ್ಲಿ ಭೋಗವಿಶೇಷಗಳು

**ಏತೇಷು ಹಿ ಬಿಲಸ್ವರ್ಗೇಷು ಸ್ವರ್ಗಾದಪ್ಯಧಿಕಾಃ ಸಕಲಸಂಪತ್ಸಮೃದ್ಧಯಃ ಕಾಮಭೋಗೈಶ್ವರ್ಯಾನಂದವಿಭೂತಿಭಿಃ ಸುಸಮೃದ್ಧಭವನೋದ್ಯಾನಾಕ್ರೀಡಾ-ವಿಹಾರೇಷು ದೈತ್ಯದಾನವಕಾದ್ರವೇಯಾ ನಿತ್ಯಪ್ರಮುದಿತಾನುರಕ್ತಕಲತ್ರಾಪತ್ಯ-ಬಂಧುಸುಹೃದನುಚರಾ ಗೃಹಪತಯ ಈಶ್ವರಾದಪ್ಯಪ್ರತಿಹತಕಾಮವಿನೋದಾ ನಿವಸಂತಿ ॥೮॥**

**ಸ್ವರ್ಗಾದಪ್ಯಧಿಕಾಃ** ಮೇಲಿನ ಸ್ವರ್ಗಕ್ಕಿಂತ ಹೆಚ್ಚಾದ **ಸಕಲಸಂಪತ್ಸಮೃದ್ಧಯಃ** ಎಲ್ಲಾ ಸಂಪತ್ತುಗಳಿಂದ ಸಮೃದ್ಧವಾದ **ಕಾಮಭೋಗೈಶ್ವರ್ಯವಿಭೂತಿಭಿಃ** ಇಷ್ಟವಾದ ವಿಷಯಗಳು, ಅವುಗಳ ಅನುಭವ, ಐಸಿರಿ, ಆನಂದ ಸಂಪತ್ತುಗಳಿಂದ **ಸುಸಮೃದ್ಧ** ಅತ್ಯಂತ ಪರಿಪೂರ್ಣಗಳಾದ **ಭುವನ** ಮನೆಗಳು **ಉದ್ಯಾನ** ವನಗಳು **ಆಕ್ರೀಡ** ಮಿಥುನ ಕ್ರೀಡೆಗೆ ಯೋಗ್ಯವಾದ ಪರ್ವತಗಳು **ವಿಹಾರೇಷು** ಪ್ರಕಟ ವಿಹಾರಸ್ಥಾನ ಅಥವಾ ಭೂಲೋಕ ವಿಹಾರಕ್ಕಿಂತ ವಿಲಕ್ಷಣ ವಿಹಾರವುಳ್ಳ **ಏತೇಷು ಬಿಲಸ್ವರ್ಗೇಷು** ಈ ಬಿಲಸ್ವರ್ಗಗಳಲ್ಲಿ **ನಿತ್ಯ** ಯಾವಾಗಲೂ **ಪ್ರಮುದಿತ** ಆನಂದದಿಂದಿರುವ **ಅನುರಕ್ತ** ಪ್ರೀತಿಸುವ **ಕಳತ್ರ** ಹೆಂಡತಿ **ಅಪತ್ಯ** ಮಕ್ಕಳುಗಳುಳ್ಳ **ಬಂಧು** ದೇಹ ಸಂಬಂಧಿಗಳು **ಸುಹೃತ್** ಸ್ನೇಹಿತರು **ಅನುಚರಾಃ** ಸೇವಕರಿಂದ ಕೂಡಿದ **ದೈತ್ಯ** ದಿತಿಪುತ್ರರು **ದಾನವ** ದನುಪುತ್ರರು **ಕಾದ್ರವೇಯ** ಕದ್ರುವಿನ ಮಕ್ಕಳಾದ ಸರ್ಪ ಜಾತಿಯ **ಗೃಹಪತಯಃ** ಮನೆಯ ಯಾಜಮಾನರು **ಈಶ್ವರಾದಪಿ** ಶಿವನಿಂದಲೂ **ಅಪ್ರತಿಹತ** ತಡೆಯಿಲ್ಲದ **ಕಾಮವಿನೋದಾಃ** ಕಾಮಸಂತೋಷವುಳ್ಳವರಾಗಿ **ನಿವಸಂತಿ** ವಾಸಿಸುವರು. ಶಿವನಿಂದ ತಡೆಯಿಲ್ಲದಿರುವುದು ವರದಿಂದ ಎಂದು ತಿಳಿಯಬೇಕು. ॥೮॥

**ಯೇಷು ಮಹಾರಾಜ ಮಯೇನ ಮಾಯಯಾ ನಿರ್ಮಿತಾಃ ಪುರೋ ನಾನಾಮಣಿಪ್ರವೇಕವಿರಚಿತವಿಚಿತ್ರಭವನಪ್ರಾಕಾರಗೋಪುರಸಭಾಚೈತ್ಯ ಚತ್ವರಾಯತನಾದಿಭಿರ್ನಾನಾಸ್ವನಮಿಥುನಪಾರಾವತಶುಕಸಾರಿಕಾಕೀರ್ಣಕೃತ್ರಿಮ ಭೂಮಿಭಿರ್ವಿವರೇಶ್ವರಗೃಹೋತ್ತಮೈಃ ಸಮಲಂಕೃತಾಶ್ಚಕಾಸಂತಿ ॥೯॥**

**ಹೇ ಮಹಾರಾಜ** ಪರೀಕ್ಷಿತನೇ! **ಯೇಷು** ಯಾವ ಈ ಬಿಲ ಸ್ವರ್ಗಗಳಲ್ಲಿ **ಮಯೇನ** ಮಯನೆಂಬ ಅಸುರರ ಶಿಲ್ಪಿಯಿಂದ **ಮಾಯಯಾ** ಮಂತ್ರ ಔಷಧಿಗಳಿಂದ ಅರ್ಥಕ್ರಿಯೆಯನ್ನು ಉಂಟುಮಾಡುವ ಶಕ್ತಿ ಎಂಬ ಉಪಾದಾನ ಕಾರಣದಿಂದ




**ನಿರ್ಮಿತಾಃ** ತಯಾರಿಸಲ್ಪಟ್ಟ **ನಾನಾ** ಅನೇಕ ವಿಧ **ಮಣಿಪ್ರವೇಕ** ರತ್ನಶ್ರೇಷ್ಠಗಳಿಂದ **ವಿರಚಿತ** ರಚಿಸಲ್ಪಟ್ಟ **ವಿಚಿತ್ರ** ಆಶ್ಚರ್ಯಕರಗಳಾದ **ಭವನ** ಮನೆಗಳು **ಪ್ರಾಕಾರ** ಗೋಡೆಗಳು, ಗೋಪುರ ಹೆಬ್ಬಾಗಿಲು **ಸಭಾ** ಜನರು ಸೇರುವ ಮಂಟಪಗಳು **ಚೈತ್ಯ** ದೇವಾಲಯಗಳು **ಚತ್ವರ** ಅಂಗಳ (ಚೌರಸ್ತಾ, ಸರ್ಕಲ್, ನಾಲ್ಕು ಮಾರ್ಗಗಳು ಸೇರುವ ಜಾಗ)ಗಳು **ಆಯತನ** ಗಿಡದ ಬುಡದಲ್ಲಿ ಪ್ರವಾಸಿಗರಿಗೆ ವಾಸಿಸಲು ನಿರ್ಮಿಸಿದ ಕಲ್ಲಿನ ಮಂಟಪಗಳು **ಆದಿಭಿಃ** ಮೊದಲಾದವುಗಳಿಂದ ಕೂಡಿದ **ನಾನಾಸ್ವನ** ಬಗೆಬಗೆಯ ಧ್ವನಿ ಮಾಡುವ **ಮಿಥುನ** ಗಂಡು ಹೆಣ್ಣು **ಪಾರಾವತ** ಪಾರಿವಾಳ **ಶುಕ** ಗಿಳಿ **ಸಾರಿಕಾ** ಒಂದು ಜಾತಿಯ ಹೆಣ್ಣು ಹಕ್ಕಿ ಇವುಗಳಿಂದ **ಆಕೀರ್ಣ** ತುಂಬಿದ **ಕೃತ್ರಿಮಭೂಮಿಭಿಃ** ರತ್ನಗಳನ್ನು ಹಾಕಿ ಮಾಡಿದ ನೆಲಗಳುಳ್ಳ **ವಿವರೇಶ್ವರಗೃಹೋತ್ತಮೈಃ** ಆಯಾ ಕೆಳ ಲೋಕಗಳ ಅಧಿಪತಿಗಳ ಅರಮನೆಗಳಿಂದ **ಸಮಲಂಕೃತಾಃ** ಚೆನ್ನಾಗಿ ಅಲಂಕರಿಸಿದ **ಪುರಃ** ನಗರಗಳು **ಚಕಾಸಂತಿ** ಪ್ರಕಾಶಿಸುವುವು. ॥೯॥

**ಉದ್ಯಾನಾನಿ ಚಾತಿತರಾಂ ಮನ ಇಂದ್ರಿಯಾನಂದಿಭಿಃ ಕುಸುಮಫಲಸ್ತಬಕಕಿಸಲ ಯಾವನತರುಚಿರವಿಟಪೈರ್ವಿಟಪಿನಾಂ ಕನಕಲತಾಲಿಂಗಿತಾನಾಂ ಶ್ರೀಭಿಃ ಸಮಿಥುನ ವಿಹಂಗಕುಲಕೋಲಾಹಲಜಲಾಶಯಾನಾಮಮೃತಜಲ- ಪೂರ್ಣಾನಾಂ ಝಷಕುಲೋಲ್ಲಂ ಘನಕ್ಷುಭಿತನೀರನೀರಜಕುಮುದ- ಕುವಲಯಕಲ್ಹಾರನೀಲೋತ್ಪಲಶತಪತ್ರಾದಿವನೇಷು ಕೃತನಿಕೇತಾನಾಮು- ನೇಕವಿಹಾರಾಕುಲಮಧುಕರಾಣಾಂ ಮಧುಕರವಿವಿಧ ಸ್ವನಾದಿಭಿರಿಂದ್ರಿಯೋ- ತ್ಸವೈರಮರಲೋಕಶ್ರಿಯಮತಿಶಯಿತಾನಿ ॥೧೦॥**

(**ಯೇಷು** ಯಾವ ಈ ಲೋಕಗಳಲ್ಲಿ) **ಅತಿತರಾಂ** ಅತಿಶಯವಾಗಿ **ಮನ ಇಂದ್ರಿಯಾನಂದಿಭಿಃ** ಮನಸ್ಸಿಗೂ ಇಂದ್ರಿಯಗಳಿಗೂ ಆನಂದ ನೀಡುವ **ಕುಸುಮಫಲಸ್ತಬಕ** ಹೂಹಣ್ಣುಗಳ ಗೊಂಚಲುಗಳು **ಕಿಸಲಯ** ಚಿಗುರು ಇವುಗಳ ಭಾರದಿಂದ **ಅವನತ** ಬಾಗಿದ **ರುಚಿರ** ಮನೋಹರವಾದ **ವಿಟಪೈಃ** ಕೊಂಬೆಗಳಿಂದ ಉಂಟಾದ **ಕನಕಲತಾಲಿಂಗಿತಾನಾಂ** ಬಂಗಾರದ ಬಳ್ಳಿಗಳಿಂದ ಸುತ್ತುವರಿದ **ವಿಟಪಿನಾಂ** ಹೆಮ್ಮರಗಳ **ಶ್ರೀಭಿಃ** ಸಂಪತ್ತಿನಿಂದ ಕಾಂತಿಯಿಂದ **ಸಮಿಥುನ** ಗಂಡು ಹೆಣ್ಣು ಗುಂಪುಗೂಡಿದ **ವಿಹಂಗಕುಲ** ಹಕ್ಕಿಗಳ ಸಮೂಹದ **ಕೋಲಾಹಲ** ಕಲಕಲ ಶಬ್ದದಿಂದ ಕೂಡಿದ **ಅಮೃತ(ಅಮಲ)ಜಲಪೂರ್ಣಾನಾಂ** ಸಿಹಿಯಾದ ನಿರ್ಮಲವಾದ

ನೀರಿನಿಂದ ತುಂಬಿದ **ಜಲಾಶಯಾನಾಂ** ಸರೋವರಗಳಲ್ಲಿನ **ಝಷಕುಲೋಲ್ಲಂಘನ** ಮೀನಿನ ಸಮೂಹಗಳ ಹಾರಾಟದಿಂದ **ಕ್ಷುಭಿತ** ಚಂಚಲವಾದ **ನೀರ** ನೀರಿನ **ನೀರಜ** ಕಮಲ **ಕುಮುದ** ಕೆನ್ನೈದಿಲೇ **ಕುವಲಯ** ನೈದಿಲೇ **ಕಲ್ಹಾರ** ಸೌಗಂಧಿಕ(ಕಮಲ) **ನೀಲೋತ್ಪಲ** ನೀಲನೈದಿಲೆ **ಶತಪತ್ರ** ನೂರುದಳದ ಕೆಂಪು ಕಮಲ **ಆದಿ** ಪದದಿಂದ ಪುಂಡರೀಕ ಬಿಳಿ ಕಮಲ ಇವುಗಳ **ವನೇಷು** ವನಗಳಲ್ಲಿ (ಸಮೂಹಗಳಲ್ಲಿ) **ಕೃತನಿಕೇತಾನಾಂ** ಮನೆ ಮಾಡಿಕೊಂಡಿರುವ **ಅನೇಕವಿಹಾರಾಕುಲ** ಬಹುವಿಧ ಹಾರಾಟಗಳಲ್ಲಿ ತೊಡಗಿರುವ **ಮಧುಕರಾಣಾಂ** ದುಂಬಿಗಳ **ಇಂದ್ರಿಯೋತ್ಸವೈಃ** ಇಂದ್ರಿಯಗಳಿಗೆ ಆನಂದವನ್ನುಂಟು ಮಾಡುವ **ಮಧುಕರವಿವಿಧಸ್ವನಾದಿಭಿಃ** ದುಂಬಿಗಳ ಬಗೆಬಗೆಯ ಝೇಂಕಾರಗಳಿಂದ **ಅಮರಲೋಕಶ್ರಿಯಂ** ದೇವಲೋಕದ (ಉದ್ಯಾನ) ಕಾಂತಿಯನ್ನು **ಅತಿಶಯಿತಾನಿ** ಮೀರಿದ **ಉದ್ಯಾನಾನಿ ಚ** ಉದ್ಯಾನವನಗಳು **ಚಕಾಸಂತಿ** ಪ್ರಕಾಶಿಸುವವು. ।।೧೦।।

**ಯತ್ರ ಹ ವಾ ನ ಭಯಮಹೋರಾತ್ರಿಭಿಃ ಕಾಲವಿಭಾಗೈರುಪಲಕ್ಷ್ಯತೇ ।।೧೧।।**

**ಯತ್ರ** ಯಾವ ಈ ಕೆಳಲೋಕಗಳಲ್ಲಿ **ಅಹೋರಾತ್ರಿಭಿಃ ಕಾಲ ವಿಭಾಗೈಃ** ಹಗಲು ರಾತ್ರಿ ಮೊದಲಾದ ಕಾಲ ವಿಭಾಗಗಳಿಂದ **ಭಯಂ** ಭಯವು **ನ ಉಪಲಕ್ಷ್ಯತೇ** ಕಂಡು ಬರುವುದಿಲ್ಲ (ಮೃತ್ಯುಭಯವಿಲ್ಲವೆಂದು ಭಾವ).

**ಯತ್ರ ಹಿ ಮಹಾಹಿಪ್ರವರಶಿರೋಮಣಯಃ ಶಾರ್ವರಂ ತಮಃ ಪ್ರಬಾಧಂತೇ ।।೧೨।।**

**ಯತ್ರ** ಯಾವ ಲೋಕಗಳಲ್ಲಿ **ಮಹಾಹಿಪ್ರವರಶಿರೋಮಣಯಃ** ದೊಡ್ಡ ಸರ್ವಶ್ರೇಷ್ಠ ಹೆಡೆಯಲ್ಲಿರುವ ರತ್ನಗಳು **ಶಾರ್ವರಂ** ರಾತ್ರಿಯ **ತಮಃ** ಕತ್ತಲನ್ನು **ಪ್ರಬಾಧಂತೇ** ಸಂಪೂರ್ಣ ಹೋಗಲಾಡಿಸುವುವು. ।।೧೨।।

**ನ ವಾ ಏತೇಷು ವಸತಾಂ ದಿವ್ಯೌಷಧರಸಪಾನಸ್ನಾನಾದಾಧಯೋ ವ್ಯಾಧಯೋ ವಲೀಪಲಿತಜರಾದಯಶ್ಚ ದೇಹವೈವರ್ಣ್ಯದೌರ್ಗಂಧ್ಯಸ್ವೇದ-ಶ್ರಮಗ್ಲಾನಿಕ್ಲಮಾ ಇತಿ ವಯೋಽವಸ್ಥಾಶ್ಚ ಭವಂತಿ ।।೧೩।।**

**ಏತೇಷು** ಈ ಲೋಕಗಳಲ್ಲಿ **ವಸತಾಂ** ವಾಸ ಮಾಡುವವರಿಗೆ **ದಿವ್ಯ** ಅತಿಶಯ ಶಕ್ತಿಯುಳ್ಳ **ಔಷಧರಸಪಾನಾತ್** ಔಷಧಿ ಮತ್ತು ರಸಾಯನ ಕುಡಿಯುವಿಕೆಯ ಸಹಿತವಾದ **ಸ್ನಾನಾತ್** ಸ್ನಾನದಿಂದ **ಆಧಯಃ** ಮನೋರೋಗಗಳು **ವ್ಯಾಧಯಃ** ಶಾರೀರಿಕ ರೋಗಗಳು **ವಲೀ** ಚರ್ಮಗಳ ಸುಕ್ಕುಗಟ್ಟುವಿಕೆ **ಪಲಿತ** ತಲೆಕೂದಲು ಬೆಳ್ಳಗಾಗುವುದು **ಜರಾ** ಮುಪ್ಪು **ಆದಯಃ** ಮೊದಲಾದವು **ದೇಹವೈವರ್ಣ್ಯ** ದೇಹದ ಬಣ್ಣಗೆಡುವುದು **ದೌರ್ಗಂಧ್ಯ** ದುರ್ವಾಸನೆ **ಸ್ವೇದ** ಬೆವರು **ಶ್ರಮ** ದೇಹಾಯಾಸ **ಗ್ಲಾನಿ** ಉತ್ಸಾಹಹಾನಿಯು **ಕ್ಲಮಾಃ** ಶರೀರ ಬಲನಾಶ **ಇತಿ** ಎಂಬಿವುಗಳು **ವಯೋಽವಸ್ಥಾಶ್ಚ** ಶೈಶವ ಕೌಮಾರ ಯೌವ್ವನ ಮುಂತಾದ ವಯೋನಿಮಿತ್ತ ಅವಸ್ಥೆಗಳು **ನ ಭವಂತಿ ವೈ** ಆಗುವುದೇ ಇಲ್ಲ. ।।೧೩।।

**ನ ಹಿ ತೇಷಾಂ ಕಲ್ಯಾಣಾನಾಂ ಪ್ರಭವತಿ ಕುತಶ್ಚನ ಮೃತ್ಯುರ್ವಿನಾ ಭಗವತ್ತೇಜಸಶ್ಚಕ್ರಾಪದೇಶಾತ್ ।।೧೪।।**

**ಕಲ್ಯಾಣಾನಾಂ** ಪುಣ್ಯವಂತರಾದ **ತೇಷಾಂ** ಆ ಲೋಕ ನಿವಾಸಿಗಳಿಗೆ **ಚಕ್ರಾಪದೇಶಾತ್** ಚಕ್ರವೆಂದು ಕರೆಸಿಕೊಳ್ಳುವ **ಭಗವತ್ತೇಜಸಃ ವಿನಾ** ಭಗವಂತನ ತೇಜಸ್ಸನ್ನು ಬಿಟ್ಟು **ಕುತಶ್ಚನ** ಬೇರೆ ಯಾವುದರಿಂದಲೂ **ಮೃತ್ಯುಃ** ಮರಣವು **ನ ಹಿ ಪ್ರಭವತಿ** ಆಗಲಾರದು. ।।೧೪।।

**ಯಸ್ಮಿನ್ ಪ್ರವಿಷ್ಟೇಽಸುರವಧೂನಾಂ ಪ್ರಾಯಃ ಪುಂಸವನಾನಿ ಭಯಾದಾಸ್ರವಂತಿ ಪತಂತಿ ಚ ।।೧೫।।**

**ಯಸ್ಮಿನ್** ಚಕ್ರವೆಂಬ ಭಗವತ್ತೇಜ(ಸ್ಸಿನಲ್ಲಿ)ಸ್ಸು **ಪ್ರವಿಷ್ಟೇ ಸತಿ** ಪ್ರವೇಶಿಸುತ್ತಿರಲು **ಅಸುರವಧೂನಾಂ** ದೈತ್ಯಸ್ತ್ರೀಯರ **ಪುಂಸವನಾನಿ** ಗರ್ಭಗಳು **ಪ್ರಾಯಃ** ಬಹುಮಟ್ಟಿಗೆ **ಭಯಾತ್** ಭಯದಿಂದ **ಆಸ್ರವಂತಿ** ನಾಲ್ಕು ತಿಂಗಳಲ್ಲಿ ಸ್ರವಿಸುವುವು **ಪತಂತಿ ಚ** ಐದು ಆರು ತಿಂಗಳಲ್ಲಿ ಬೀಳುವುವು. ''**ಆ ಚತುರ್ಥಾದ್ಭವೇಚ್ಛ್ರಾವಃ ಪಾತಃ ಪಂಚಮಷಷ್ಠಯೋಃ**' ಎಂದು ವಚನವಿದೆ. ।।೧೫।।

## ಭೂವಿವರಗಳ ವಿಶೇಷ ಲಕ್ಷಣಗಳು - ಅತಲ

ಇದುವರೆಗೆ ಭೂವಿವರಗಳ ಸಾಮಾನ್ಯಲಕ್ಷಣ ಹೇಳಿ ಒಂದೊಂದರ ವಿಶೇಷ ಲಕ್ಷಣವನ್ನು ಹೇಳುವರು

**ಅಥಾತಲೇ ಮಯಪುತ್ರೋಽಸುರೋ ಬಲೋ ನಿವಸತಿ ಯೇನ ಹ ವಾ ಇಹ ಸೃಷ್ಟಾಃ ಷಣ್ಣವತಿ ಮಾಯಾಃ ಕಾಶ್ಚನಾದ್ಯಾಪಿ ಮಾಯಾವಿನೋ ಧಾರಯಂತಿ ಯಸ್ಯ ಚ ವಿಜೃಂಭಮಾಣಸ್ಯ ಮುಖತಸ್ತ್ರಯಃ ಸ್ತ್ರೀಗಣಾ ಉದಪದ್ಯಂತ ಸ್ವೈರಿಣ್ಯಃ ಕಾಮಿನ್ಯಃ ಪುಂಶ್ಚಲ್ಯಃ ॥೧೬॥**

**ಅಥ** ಇನ್ನು ಮುಂದೆ ಒಂದೊಂದು ಲೋಕದ ವಿಶೇಷವನ್ನು ಹೇಳುತ್ತೇವೆ **ಅತಲೇ** ಅತಲ ಲೋಕದಲ್ಲಿ **ಮಯಪುತ್ರಃ** ಮಯಾಸುರನ ಮಗನಾದ **ಬಲಃ** ಬಲನೆಂಬ ಅಸುರನು **ನಿವಸತಿ** ವಾಸ ಮಾಡುವನು **ಯೇನ** ಯಾವ ಬಲನಿಂದ **ಷಣ್ಣವತಿ** ತೊಂಭತ್ತಾರು **ಮಾಯಾಃ** ಮಾಯೆಗಳು **ಇಹ** ಈ ಲೋಕದಲ್ಲಿ **ಸೃಷ್ಟಾ ಹ ವೈ** ಹುಟ್ಟಿದವೆಂದು ಶಾಸ್ತ್ರಪ್ರಸಿದ್ಧಿಯು **(ತಾಸು)** ಅವುಗಳಲ್ಲಿ **ಕಾಶ್ಚನ** ಕೆಲವನ್ನು **ಅದ್ಯಾಪಿ** ಇಂದಿಗೂ **ಮಾಯಾವಿನಃ** ಮಾಯಾವಿಗಳು **ಧಾರಯಂತಿ** ಧರಿಸುವರು. **ವಿಜೃಂಭಮಾಣಸ್ಯ** ಆಕಳಿಸುವ **ಯಸ್ಯ** ಯಾವ ಅಸುರನ **ಮುಖತಃ** ಬಾಯಿಯಿಂದ **ಸ್ವೈರಿಣ್ಯಃ** ತಮ್ಮ ಇಚ್ಛಾನುಸಾರ ಸವರ್ಣರಲ್ಲಿ ರತರಾದವರು **ಕಾಮಿನ್ಯಃ** ಮತ್ತೊಬ್ಬರ ಇಚ್ಛಾನುಸಾರ ಸವರ್ಣ ಅಸವರ್ಣ ಇಬ್ಬರಲ್ಲೂ ರತರಾದವರು **ಪುಂಶ್ಚಲ್ಯಃ** ಗಂಡಸು ಎಂದಾದರೆ ಸಾಕು ಅವನಿಂದ ಸುರತವನ್ನು ಅಪೇಕ್ಷಿಸುವವರು, ಪುರುಷದರ್ಶನ ಮಾತ್ರದಿಂದ ಇಂದ್ರಿಯ ಸ್ಖಲನವುಳ್ಳವರು ಹೀಗೆ **ತ್ರಯಃ** ಮೂರು ಜಾತಿಯ **ಸ್ತ್ರೀಗಣಾಃ** ಸ್ತ್ರೀಯರ ಸಮೂಹಗಳು **ಉದಪದ್ಯಂತ** ಹುಟ್ಟಿದವು. ॥೧೬॥

ಎಲ್ಲರೂ ನಿಯತಪುರುಷರುಳ್ಳವರಲ್ಲವೆಂದು ಹೇಳುವರು. ಅವರ ಸಾಮರ್ಥ್ಯ ಹೇಳುವರು

**ಯಾ ವೈ ಬಿಲಾಯನಪ್ರವಿಷ್ಟಂ ಪುರುಷಂ ರಸೇನ ಹಾಟಕಾಖ್ಯೇನ ಪಾಯಯಿತ್ವಾ ಸ್ವವಿಲಾಸಾವಲೋಕನಾನುರಾಗಸ್ಮಿತಸಲ್ಲಾಪೋಪಗೂಹನಾದಿಭಿಃ ಸ್ವೈರಂ ಕಿಲ ರಮಯಂತಿ ॥೧೭॥**

**ಯಾಃ** ಯಾವ ಸ್ತ್ರೀಯರು **ಬಿಲಾಯನಂ ಪ್ರವಿಷ್ಟಂ ಪುರುಷಂ** ಲೋಕಕ್ಕೆ ಬಂದ ಗಂಡಸನ್ನು **ಹಾಟಕಾಖ್ಯೇನ ರಸೇನ ಪಾಯಯಿತ್ವಾ** ಹಾಟಕವೆಂಬ ರಸದಿಂದ ಪಾನಮಾಡಿಸಿ **ಸ್ವ** ತಮ್ಮ **ವಿಲಾಸ** ಹಾವ ಭಾವಗಳಿಂದಲೂ **ಅವಲೋಕನ** ನೋಟದಿಂದಲೂ **ಅನುರಾಗ** ಪ್ರೇಮದಿಂದಲೂ **ಸ್ಮಿತ** ಮುಗುಳು ನಗೆಯಿಂದಲೂ **ಸಲ್ಲಾಪ** ಪರಸ್ಪರ ಸಂಭಾಷಣೆಯಿಂದಲೂ **ಉಪಗೂಹನ** ಆಲಿಂಗನದಿಂದಲೂ **ಆದಿಭಿಃ**




ಚುಂಬನ ಮೊದಲಾದವುಗಳಿಂದಲೂ **ಸ್ವೈರಂ** ತಮ್ಮ ಮನಬಂದಂತೆ **ರಮಯಂತಿ ವೈ** ಕ್ರೀಡಿಸುವರು ಎಂದು ಪ್ರಸಿದ್ಧವು.

ಇದರಿಂದ ಇವರೆಲ್ಲರಿಗೂ ನಿಯತ ಪುರುಷರಿಲ್ಲವೆಂದೂ ಅವರ ಸಾಮರ್ಥ್ಯವೆಂತಹದೆಂದೂ ತಿಳಿಸಿದಂತಾಯಿತು. **ಪಾಯಯಿತ್ವಾ** ಎಂಬಲ್ಲಿ **ಸಾಧಯಿತ್ವಾ** ಎಂಬ ಪಾಠವಿದ್ದಾಗ ತನ್ನ ವಶ ಮಾಡಿಕೊಂಡು ಎಂದರ್ಥ. **ಬಿಲಾಯನಂ** ಎಂಬ ಪಾಠದಲ್ಲಿ **ಸಾಧಯಿತ್ವಾ** ಎಂದನ್ವಯ. ಸಂಭೋಗ ಸಮರ್ಥನನ್ನಾಗಿ ಮಾಡಿ ಎಂದರ್ಥ.॥೧೭॥

ರಸದ ಸಾಮರ್ಥ್ಯ ಹೇಳುವರು

**ಯಸ್ಮಿನ್ನುಪಭುಕ್ತೇ ಪುರುಷಾ ಈಶ್ವರೋಽಹಂ ಸಿದ್ಧೋಽಹಂ ಇತಿ ಅಯುತಮಹಾಗಜ ಬಲಾತ್ಮಾನಃ ಕತ್ಥಂತೇ ಮದಾಂಧಾ ಇವ ॥೧೮॥**

**ಯಸ್ಮಿನ್** ಯಾವ ಈ ಹಾಟಕ ರಸವನ್ನು **ಉಪಭುಕ್ತೇ ಸತಿ** ಕುಡಿದರೆ **ಪುರುಷಾಃ** ಗಂಡಸರು **ಈಶ್ವರೋಽಹಂ** ನಾನು ಈಶ್ವರನು **ಸಿದ್ಧೋಽಹಂ** ನಾನು ಸಿದ್ಧನು **ಇತಿ** ಎಂದು **ಮದಾಂಧಾ ಇವ** ಮತ್ತಿನಿಂದ ಕುರುಡರಾದವರಂತೆ **ಅಯುತ ಮಹಾಗಜಬಲಾತ್ಮಾನಃ** ಹತ್ತು ಸಾವಿರ ದೊಡ್ಡಸಲಗಗಳ ಬಲವುಳ್ಳವರಾಗಿ **ಕತ್ಥಂತೇ** ಹೊಗಳಿಕೊಳ್ಳುವರು. ॥೧೮॥

## ವಿತಲ

**ತತೋ ವಿತಲೇ ಹರೋ ಭಗವಾನ್ ಹಾಟಕೇಶ್ವರಃ ಸ್ವಪಾರ್ಷದಭೂತ-ಗಣಾವೃತಃ ಪ್ರಜಾಪತಿಸ್ಸರ್ಗೋಪಬೃಂಹಣಾಯ ಭವೋ ಭವಾನ್ಯಾ ಸಹ ಮಿಥುನೀಭೂಯಾಽಸ್ತೇ ಯತ್ರ (ಯತಃ) ಪ್ರವೃತ್ತಾ ಸರಿತ್ಪ್ರವರಾ ಹಾಟಕಾ ನಾಮ ಭವಯೋರ್ವೀರ್ಯೇಣ ಯತ್ತಚ್ಚಿತ್ರ ಭಾನುರ್ಮಾತರಿಶ್ವನೇಧ್ಯಮಾನ ಓಂಜಸಾ ಪಿಬತಿ ತನ್ನಿಷ್ಟನ್ನಂ ಹಾಟಕಾಖ್ಯಂ ಸುವರ್ಣಂ ಭೂಷಣೇನಾ-ಸುರೇಂದ್ರಾವರೂಧೇಷು ಪುರುಷಾಃ ಸಹ ಪುರುಷೀಭಿರ್ಧಾರಯಂತಿ ॥೧೯॥**

**ತತಃ** ಅತಲದ ಕೆಳಗೆ **ವಿತಲೇ** ವಿತಲ ಲೋಕದಲ್ಲಿ **ಹಾಟಕೇಶ್ವರಃ ಭಗವಾನ್ ಹರಃ** ಹಾಟಕೇಶ್ವರನೆಂಬ ಪೂಜ್ಯರಾದ ಸಂಹಾರಕರಾದ **ಭವಃ** ರುದ್ರದೇವರು (ಉತ್ಪಾದಕರಾಗಿ) **ಸ್ವಪಾರ್ಷದ** ತಮ್ಮವರಾದ **ಭೂತಗಣಾವೃತಃ** ಭೂತ ಸಮೂಹದಿಂದ

ಸುತ್ತುವರೆಯಲ್ಪಟ್ಟು **ಪ್ರಜಾಪತಿಸರ್ಗೋಪಬೃಂಹಣಾಯ** ಬ್ರಹ್ಮದೇವರು ಮಾಡುವ ಸೃಷ್ಟಿಯ ವಿಸ್ತಾರಕ್ಕಾಗಿ **ಭವಾನ್ಯಾ ಸಹ** ಪಾರ್ವತಿಯೊಂದಿಗೆ **ಮಿಥುನೀ** ಮೈಥುನದಿಂದ **ಆಸ್ತೇ** ಇರುವವರು **ಯತ್ರ** ಯಾವ ಲೋಕದಲ್ಲಿ **ಭವಯೋಃ** ಶಿವಪಾರ್ವತಿಯರ **ವೀರ್ಯೇಣ** ಶುಕ್ಲಶೋಣಿತದಿಂದ **ಹಾಟಕಾ ನಾಮ** ಹಾಟಕಾ ಎಂಬ **ಸರಿತ್ ಪ್ರವರಾ** ಶ್ರೇಷ್ಠವಾದ ನದಿಯು **ಪ್ರವೃತ್ತಾ** ಹೊರಟಿರುವುದು **ಯತ್ತತ್** ಯಾವ ಆ ವೀರ್ಯವನ್ನು **ಮಾತರಿಶ್ವನಾ** ಗಾಳಿಯಿಂದ **ಏಧ್ಯಮಾನಃ** ಅಭಿವೃದ್ಧಿ ಹೊಂದುತ್ತಿರುವ **ಚಿತ್ರಭಾನುಃ** ಅಗ್ನಿಯು **ಅಂಜಸಾ** ಸಂಪೂರ್ಣವಾಗಿ **ಪಿಬತಿ** ಕುಡಿಯುವನು **ತನ್ನಿಷ್ಠ್ಯೂತಂ** ಆದರಿಂದ ಉಂಟಾದ **ಹಾಟಕಾಖ್ಯಂ ಸುವರ್ಣಂ** ಹಾಟಕವೆಂಬ ಚಿನ್ನವನ್ನು **ಅಸುರೇಂದ್ರಾವರೋಧೇಷು** ಅಸುರ ಶ್ರೇಷ್ಠರ ಅಂತಃಪುರಗಳಲ್ಲಿ **ಪುರುಷೀಭಿಃ ಸಹ** ಗಂಡಸರಂತೆ ಬಲಿಷ್ಠರಾದ ಸ್ತ್ರೀಯರೊಂದಿಗೆ **ಪುರುಷಾಃ** ಪುರುಷರು **ಭೂಷಣೇನ ಧಾರಯಂತಿ** ಒಡವೆಯ ರೂಪದಲ್ಲಿ ಧರಿಸುವರು. ||೧೯||

## ಸುತಲ

**ತತೋಽಧಸ್ತಾತ್ಸುತಲೇ ಉರುಶ್ರವಾಃ ಪುಣ್ಯಶ್ಲೋಕೋ ವಿರೋಚನಾತ್ಮಜೋ ಬಲಿರ್ಭಗವತಾ ಮಹೇಂದ್ರಸ್ಯ ಪ್ರಿಯಂ ಚಿಕೀರ್ಷಮಾಣೇನಾದಿತೇರ್ಲಬ್ಧ-ಕಾಯೋ ಭೂತ್ವಾ ವಟುವಾಮನರೂಪೇಣ ಪರಾಕ್ಷಿಪ್ತಸ್ವಲೋಕತ್ರಯೋ ಭಗವದನುಕಂಪಯೈವ ಪುನಃ ಪ್ರವೇಶಿತ ಇಂದ್ರಾದಿಷ್ವವಿದ್ಯಮಾನಯಾ ಸುಸಂವೃಧ್ಯಾ ಶ್ರಿಯಾಽಭಿಜುಷ್ಟಃ ಸ್ವಧರ್ಮೇಣಾರಾಧಯಂಸ್ತಮೇವ ಭಗವಂತಮಪಗತಸಾಧ್ವಸ ಆಸ್ತೇಽಧುನಾಪಿ ||೨೦||**

**ತತಃ ಅಧಸ್ತಾತ್** ವಿತಲದ ಕೆಳಗೆ **ಸುತಲೇ** ಸುತಲ ಲೋಕದಲ್ಲಿ **ಮಹೇಂದ್ರಸ್ಯ** ಇಂದ್ರದೇವರಿಗೆ **ಪ್ರಿಯಂ** ಹಿತವನ್ನು **ಚಿಕೀರ್ಷಮಾಣೇನ** ಮಾಡಬೇಕೆಂಬ ಇಚ್ಛೆಯುಳ್ಳ **ಅದಿತೇಃ** ಅದಿತಿ ದೇವಿಯಿಂದ **ಲಬ್ಧಕಾಯೋ ಭೂತ್ವಾ** ಸಚ್ಚಿದಾನಂದ ಶರೀರವನ್ನು ವ್ಯಕ್ತಗೊಳಿಸಿ **ವಟುವಾಮನರೂಪೇಣ** ಬ್ರಹ್ಮಚಾರಿಯ ಸಣ್ಣ (ಗಿಡ್ಡ) ರೂಪ ಧರಿಸಿದ **ಭಗವತಾ** ಶ್ರೀಹರಿಯಿಂದ **ಪರಾಕ್ಷಿಪ್ತ** ಕಸಿದುಕೊಂಡ **ಸ್ವಲೋಕತ್ರಯಃ** ತನ್ನ ಅಧೀನವಾದ ಭೂಃ, ಭುವಃ, ಸ್ವಃ ಎಂಬ ಮೂರು ಲೋಕಗಳುಳ್ಳ **ಪುನಃ** ಮತ್ತೆ **ಭಗವದನುಕಂಪಯಾ** ಏವ ಶ್ರೀಹರಿಯ ದಯೆಯಿಂದಲೇ ಸುತಲ ಲೋಕದಲ್ಲಿ ಪ್ರವೇಶಗೊಳಿಸಿದ **ಉರುಶ್ರವಾಃ** ಬಹುಶಾಸ್ತ್ರ ಶ್ರವಣವುಳ್ಳ **ಪುಣ್ಯಶ್ಲೋಕಃ** ಪವಿತ್ರ

ಕೀರ್ತಿಯುಳ್ಳ **ವಿರೋಚನಾತ್ಮಜಃ** ವಿರೋಚನನೆಂಬ ಅಸುರನ ಮಗನಾದ **ಬಲಿಃ** ಬಲಿಚಕ್ರವರ್ತಿಯು **ಇಂದ್ರಾದಿಷ್ವವಿದ್ಯಮಾನಯಾ** ಇಂದ್ರ ಮುಂತಾದವರಲ್ಲಿ ಇಲ್ಲದಿರುವ **ಸುಸಂವೃಧ್ಯಾ** ಅತ್ಯಂತ ಸಮೃದ್ಧಿಯುಳ್ಳ **ಶ್ರಿಯಾ** ಸಂಪತ್ತಿನಿಂದ ಯುಕ್ತನಾಗಿ **ಸ್ವಧರ್ಮೇಣ** ತನಗೆ ವಿಹಿತವಾದ ಧರ್ಮದಿಂದ **ತಮೇವ ಭಗವಂತಂ** ಆ ಶ್ರೀಹರಿಯನ್ನೇ **ಆರಾಧಯನ್** ಆರಾಧಿಸುತ್ತ **ಅಪಗತಸಾಧ್ವಸಃ** ಭಯರಹಿತನಾಗಿ **ಅಧುನಾಪಿ** ಈಗಲೂ **ಆಸ್ತೇ** ಇರುವನು. ಲೋಕತ್ರಯದಲ್ಲಿಯೂ ಪ್ರತಿವರ್ಷದಲ್ಲಿಯೂ ಮಾಡುವ ಬಲೀಂದ್ರ ಪೂಜೆಯಲ್ಲಿ ಪ್ರವೇಶಿತ ಎಂದೂ ವಿಜಯಧ್ವಜರು ಅರ್ಥ ಮಾಡಿರುವರು. ॥೨೦॥

## ಸುತಲಾಧಿಪತ್ಯ ಭೂಮಿದಾನದ ಫಲವೇ?

ಕೆಲವರು ಈ ಸುತಲಾಧಿಪತ್ಯವು ಬಲಿರಾಜನಿಗೆ ಭೂಮಿದಾನದ ಫಲವೆಂದು ತಿಳಿಯುವರು. ಅದನ್ನು ನಿರಾಕರಿಸುವರು. ಪೂರ್ವಜನ್ಮದ ಕಿಂಚಿತ್ ಪುಣ್ಯ ಫಲವಷ್ಟೇ ಎಂದು ಹೇಳುವರು. ವಿಜಯಧ್ವಜರ ಪ್ರಕಾರ ಅಧುನಾ ಎಂಬುದು ಇಲ್ಲಿಗೆ ಸೇರಿದ್ದು.

**ನೊ ಏವೈತತ್ಸಾಕ್ಷಾದ್ವರೋ ಭೂಮಿದಾನಸ್ಯ ಯದ್ಭಗವತ್ಯಶೇಷಜೀವ-ನಿಕಾಯಾನಾಂ ಜೀವಭೂತಾತ್ಮಭೂತೇ ಪರಮಾತ್ಮನಿ ವಾಸುದೇವೇ ತೀರ್ಥತಮೇ ಪಾತ್ರ ಉಪಪನ್ನೇ ಪರಯಾ ಶ್ರದ್ಧಯಾ ಪರಮಾದರಸಮಾಹಿತಮನಸಾ ಸಂಪ್ರತಿಪಾದಿತಸ್ಯ ಸಾಕ್ಷಾದಪವರ್ಗದ್ವಾರಸ್ಯ ಯದ್ಬಿಲನಿಲಯೈಶ್ವರ್ಯಂ ಯಸ್ಯ ಹ ವಾ ಕ್ಷುತ್ತತನಪ್ರಸ್ಖಲನಾದಿಷು ವಿವಶಃ ಸಕೃನ್ನಾಮಗೃಣನ್ ಪುರುಷಃ ಕರ್ಮಬಂಧಮಂಜಸಾ ವಿಧುನೋತಿ ॥೨೧॥**

**ಅಧುನಾ** ಇಂದಿಗೂ **ಯತ್** ಯಾವ **ಬಿಲನಿಲಯೈಶ್ವರ್ಯಂ** ಸುತಲಲೋಕದ ಐಶ್ವರ್ಯವಿದೆಯೋ **ಏತತ್** ಇದು **ಅಶೇಷಜೀವನಿಕಾಯಾನಾಂ** ಬ್ರಹ್ಮಾದಿ ಸಕಲ ಜೀವರಿಗೆ **ಜೀವಭೂತೇ** ಪ್ರಾಣಧಾರಕನಾದ **ಆತ್ಮಭೂತೇ** ಸರ್ವದಾ ಸ್ವಾಮಿಯಾಗಿರುವ **ಪರಮಾತ್ಮನಿ** ಆದ್ದರಿಂದಲೇ ಪರಮಾತ್ಮನಾದ **ವಾಸುದೇವೇ** ವಾಸುದೇವನೆಂಬ **ತೀರ್ಥತಮೇ** ಅತ್ಯಂತ ಪವಿತ್ರನಾದ್ದರಿಂದ **ಉಪಪನ್ನೇ ಪಾತ್ರೇ** ಯುಕ್ತನಾದ ಯೋಗ್ಯನಾದ **ಭಗವತಿ** ಶ್ರೀಹರಿಯಲ್ಲಿ **ಪರಯಾ ಶ್ರದ್ಧಯಾ** ಅತಿಶಯ ಶ್ರದ್ಧೆಯಿಂದ **ಪರಮಾದರಸಮಾಹಿತಮನಸಾ** ಅತ್ಯಂತ ಆದರದಿಂದ ಕೂಡಿದ ಮನಸ್ಸಿನಿಂದ **ಸಂಪ್ರತಿಪಾದಿತಸ್ಯ** ಭಕ್ತಿಯಿಂದ ಕೃಷ್ಣಾರ್ಪಣವೆಂದು ಕೊಟ್ಟುದರ **ಸಾಕ್ಷಾತ್**

ಮುಖ್ಯವಾಗಿ **ಅಪವರ್ಗದ್ವಾರಸ್ಯ** ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾದ **ಭೂಮಿದಾನಸ್ಯ** ಮೂರು ಲೋಕವೆಂಬ ಭೂದಾನಕ್ಕೆ **ಸಾಕ್ಷಾದ್ವರಃ** ಮುಖ್ಯಫಲವು **ನೋ ಏವ** ಅಲ್ಲವೇ ಅಲ್ಲ . **ಪುರುಷಃ** ಅಧಿಕಾರಿಯು **ಕ್ಷುತ್** ಹಸಿವೆ **ಪತನ** ಬೀಳುವುದು **ಪ್ರಸ್ಖಲನ** ಎಡವುವುದು **ಆದಿಷು** ಮೊದಲಾದ ಸಂದರ್ಭಗಳಲ್ಲಿ **ವಿವಶಃ** ಶ್ರೀಹರಿಯಿಂದ ಪ್ರೇರಿತನೆಂಬ ಅನುಸಂಧಾನದಿಂದ ಕೂಡಿದವನಾಗಿ **ಸಕೃತ್** ಒಂದು ಸಲ **ಯಸ್ಯ** ಯಾವ ಶ್ರೀಹರಿಯ **ನಾಮ** ಹೆಸರನ್ನು **ಅಭಿಗೃಣನ್** ಭಕ್ತಿಯಿಂದ ಉಚ್ಚರಿಸುತ್ತ **ಅಂಜಸಾ** ಸಂಪೂರ್ಣವಾಗಿ **ಕರ್ಮಬಂಧಂ** ಕರ್ಮದಿಂದ ಬಂದ ಬಂಧವನ್ನು **ವಿಧುನೋತಿ** ಕಳೆದುಕೊಳ್ಳುವನು (ಜ್ಞಾನದ ಮೂಲಕ). ಅಂತಹ ಪಾತ್ರನಾದ ಶ್ರೀಹರಿಯಲ್ಲಿ ನೀಡಿದ ದಾನವು ಎಂದನ್ವಯ. **ಭಗವತಿ** ಮುಂತಾದ ಪದಗಳಿಂದ ಮುಖ್ಯ ಫಲವಲ್ಲವೆಂಬುದಕ್ಕೆ ಕಾರಣಗಳನ್ನು ತೋರಿಸುವರು. ಉತ್ತಮಪಾತ್ರನೆಂಬುದನ್ನು **ತೀರ್ಥತಮೇ** ಎಂಬುದರಿಂದಲೂ, ಬೇರೆ ಮಹನೀಯರಿರುವಾಗ ಇವನೇ ಯುಕ್ತ ಪಾತ್ರನೆಂಬುದನ್ನು ಅಶೇಷ ಜೀವರಿಗೆ ಜೀವದಾತನೆಂಬುದರಿಂದಲೂ, ಜೀವನಾದರೂ ಅಶುದ್ಧನಲ್ಲವೆಂಬುದನ್ನು ಆತ್ಮನೆಂಬುದರಿಂದಲೂ, ಆ ಸ್ವಾಮಿತ್ವ ಲೋಕದಲ್ಲಿಯಂತೆ ತಾತ್ಕಾಲಿಕವಲ್ಲ ಸಾರ್ವಕಾಲಿಕವೆಂದನ್ನು ಭೂತ ಶಬ್ದದಿಂದಲೂ ಸೂಚಿಸಿರುವರು. ಸ್ವತಂತ್ರನಾದ್ದರಿಂದ ಶ್ರೀಹರಿಯು ದುಃಖನಿವಾರಣ ಸಮರ್ಥನೆಂದರ್ಥ. ಆತ್ಮನಂತೆ ಎಲ್ಲ ಭೂತಗಳಿಗೆ ಪ್ರಿಯನೆಂದೂ ಅರ್ಥ. **ಅಶ್ರದ್ಧಯಾ ಹುತಂ ದತ್ತಂ** ಎಂಬ ಮಾತಿನಂತೆ ಶ್ರದ್ಧೆಯಿಲ್ಲದೇ ಅಥವಾ ಅಲ್ಪ ಶ್ರದ್ಧೆಯಿಂದ ಕೊಟ್ಟದ್ದು ಸಂಕಲ್ಪ ಪೂರ್ವಕವಲ್ಲದ್ದರಿಂದ ಮೋಕ್ಷಕ್ಕೆ ಹೇಗೆ ಕಾರಣವಾದೀತು ಎಂಬ ಶಂಕೆಗೆ ಉತ್ತರವಾಗಿ ಪರಯಾ ಶ್ರದ್ಧಯಾ ಎಂದು ಹೇಳಿರುವರು. ಯಾವನ ನಾಮೋಚ್ಚಾರಣೆಯು ಮೋಕ್ಷಾದಿ ಸಾಧನವೋ ಅವನಿಗೆ ಅತಿಶಯ ಶ್ರದ್ಧೆಯಿಂದ ಸಮರ್ಪಿಸಿದ ಭೂಮಿದಾನವು ಮೋಕ್ಷಕ್ಕೆ ಕಾರಣವೆಂದು ಬೇರೆ ಹೇಳಬೇಕಿಲ್ಲ ಎಂದು ಕೈಮುತ್ಯವನ್ನು ತಿಳಿಸಿದ್ದಾರೆ.

**ವಿ.ವಿ** ಃ- ಇಲ್ಲಿ **ಹ** ಎನ್ನುವುದರಿಂದ **ನಿರ್ಭಯಂ ವಿಷ್ಣುನಾಮ್ನೈವ ಯಥೇಷ್ಟಂ ಪದಮಾಗತಂ** ಎಂಬ ವಾಕ್ಯವು ಈ ವಿಷಯದಲ್ಲಿ ಪ್ರಮಾಣ ಎಂದು ಸೂಚಿತ. **ವಾ** ಹೀಗೆ ನಾಮಸಂಕೀರ್ತನೆಯಿಂದ ಕರ್ಮಮೋಕ್ಷವಾಯಿತು ಎಂದಭಿಪ್ರಾಯ. **ಪ್ರಸ್ಖಲನಾದಿ** ಎಂಬಲ್ಲಿ ಆದಿಪದದಿಂದ ಸ್ವಪ್ನಮೊದಲಾದ ಭಯದರ್ಶನವನ್ನು

 

ಇಟ್ಟುಕೊಳ್ಳಬೇಕು. ಇದರಿಂದ ಪ್ರತ್ಯಕ್ಷವಾಗಿ ಫಲವು ಕಂಡಿದೆಯಾದ್ದರಿಂದ ಅವನೇ ಸರಿಯಾದ ಪಾತ್ರನೆಂದು ತೋರಿಸಿದಂತಾಯಿತು. ।।೨೧।।

## ನಾಮೋಚ್ಚಾರಣ ಮಾತ್ರದಿಂದ ಕರ್ಮಬಂಧವಾಗುವುದೇ?

**ತಮೇವಂ ವಿದ್ವಾನಮೃತ ಇಹ ಭವತಿ** ಎಂಬ ಶ್ರುತಿಯಂತೆ ಅಪರೋಕ್ಷಜ್ಞಾನವೇ ಕರ್ಮಕ್ಷಯರೂಪ ಮೋಕ್ಷಕ್ಕೆ ಸಾಧನವೆಂದು ಪ್ರಸಿದ್ಧವಾಗಿದೆ. ಕಾರಣ ಜ್ಞಾನವಿಲ್ಲದೇ ನಾಮೋಚ್ಚಾರಣೆಯಿಂದ ಕರ್ಮಬಂಧ ಹಾನಿಯಾಗುವುದು ಎಂದು ಹೇಳಿದುದು ಹೇಗೆ? ಎಂದರೆ ಹೇಳುತ್ತಾರೆ

**ಯಸ್ಯ ಹ ವೈ ಪ್ರತಿಬೋಧನಂ ಮುಮುಕ್ಷವೋऽಂಜಸಾ ಹೋಪಲಭ್ಯಂತೇ ಯತ್ತದ್ಭಗವನ್ನಾಮ ಸರ್ವೇಷಾಮಾತ್ಮನಾಮಾತ್ಮದಮೇವ ।।೨೨।।**

**ಮುಮುಕ್ಷವಃ** ಮುಕ್ತಿಯೋಗ್ಯಜೀವರು ಶ್ರೀಹರಿಯ ನಾಮೋಚ್ಚಾರಣೆ ಎಂಬ ಕರ್ಮದಿಂದ **ಅಂಜಸಾ** ತಮ್ಮ ಯೋಗ್ಯತೆಗನುಗುಣವಾದ **ಯಸ್ಯ** ಯಾವ ಪರಮಾತ್ಮನ **ಪ್ರತಿಬೋಧನಂ ತು** ಅಪರೋಕ್ಷಜ್ಞಾನವನ್ನು **ಉಪಲಭಂತೇ** ಹೊಂದುವರಷ್ಟೇ **ವೈ** ಇದು **ಕರ್ಮಣಾ ಜ್ಞಾನಮಾತನೋತಿ** ಎಂಬ ಶ್ರುತಿಪ್ರಮಾಣಸಿದ್ಧವು. ನಾಮೋಚ್ಚಾರಕನು ಭಗವಂತನ ಸಾಕ್ಷಾತ್ಕಾರವನ್ನು ಪಡದೇ ಕರ್ಮಬಂಧವನ್ನು ಕಳೆದುಕೊಳ್ಳುವನೆಂದು ಹಿಂದಿನ ವಾಕ್ಯದ ಅರ್ಥವೆಂದು ಸೂಚಿಸಿದಂತಾಯಿತು. ಭಗವನ್ನಾಮೋಚ್ಚಾರಣವು ಕೇವಲ ಕರ್ಮಕ್ಷಯರೂಪ ಮುಕ್ತಿಯನ್ನು ಮಾತ್ರವಲ್ಲ ಸ್ವರೂಪಾನಂದಾದ್ಯಾವಿರ್ಭಾವರೂಪ (ಸಾಯುಜ್ಯ) ಮುಕ್ತಿಪ್ರದವೂ ಆಗಿದೆ. ಕಾರಣ ಎಲ್ಲ ಮುಕ್ತಿಯೋಗ್ಯರೂ ನಾಮೋಚ್ಚಾರಣ ಮಾಡಬೇಕೆಂದೂ ಹೇಳುತ್ತಾರೆ. **ಯತ್** ಭಗವಂತನನಾಮವು (ಸ್ಮರಣೆಯು) **ಸರ್ವೇಷಾಂ** ಎಲ್ಲ **ಆತ್ಮನಾಂ** ಮೇಲೆ ಹೇಳಿದಂತೆ ಕರ್ಮಕ್ಷಯ ಹೊಂದಿದ ಜೀವರಿಗೆ **ಆತ್ಮದಂ ಏವ** ಸ್ವರೂಪಾನಂದಾಭಿವ್ಯಕ್ತಿಯನ್ನು ಸಾಯುಜ್ಯವನ್ನು ಕೊಟ್ಟೇ ಕೊಡುವುದು. **ಯಸ್ಯ** ಎಂಬುದಕ್ಕೆ **ತಸ್ಮಿನ್** ಅಂತಹ ವಾಸುದೇವನಲ್ಲಿ ಮಾಡಿದ ಭೂದಾನಕ್ಕೆ ಎಂದು ಹಿಂದಕ್ಕೆ ಅನ್ವಯ. ಏವ ಕಾರದಿಂದ ಇದು ಪ್ರಮಾಣಸಿದ್ಧವೆಂದು ಸೂಚಿಸುವರು. ।।೨೨।।

## ಎಲ್ಲರೂ ನಾಮೋಚ್ಚಾರಣದಿಂದೇಕೆ ಮುಕ್ತಿ ಪಡೆಯುವುದಿಲ್ಲ?

ಭಗವಂತನ ನಾಮ ಈ ವಿಧವಾದಮೇಲೆ ಎಲ್ಲರೂ ಏಕೆ ನಾಮೋಚ್ಚಾರಣದಿಂದ ಮುಕ್ತಿ ಪಡೆಯುವುದಿಲ್ಲ? ಅತಿಶಯಭಕ್ತಿಜ್ಞಾನಗಳಿಲ್ಲದ್ದರಿಂದ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ನ ವೈ ಭಗವಾನ್ನೂನಂ ಮನುಷ್ಯಾನನುಜಗ್ರಾಹ ಯದುತ ಪುನರಾತ್ಮಾ-ನುಸ್ಮೃತಿಮೋಕ್ಷಣಂ ಮಾಯಾಮಯಂ ಭೋಗೈಶ್ವರ್ಯಮೇವಾತನುತೇ ॥೨೩॥**

**ಭಗವಾನ್** ಶ್ರೀಹರಿಯು **ಮನುಷ್ಯಾನ್** ಮುಕ್ತಿಯೋಗ್ಯರಲ್ಲದ ಎಲ್ಲ ಸಂಸಾರಿಜೀವರನ್ನೂ ಅಂದರೆ ನಿತ್ಯ ಸಂಸಾರಿಗಳನ್ನು ತಮೋಯೋಗ್ಯರನ್ನೂ **ನೂನಂ** ನಿಶ್ಚಯವಾಗಿಯೂ **ನ ಅನುಜಗ್ರಾಹ** (ನಾಮೋಚ್ಚಾರಣ) ಸಂಪತ್ತನ್ನಿತ್ತು ಅನುಗ್ರಹಿಸಲಿಲ್ಲ. ಹಾಗಾದರೆ ಮೋಕ್ಷವನ್ನು ಅನುಗ್ರಹಿಸಿದನೇ? ಎಂದರೆ ಅದೂ ಇಲ್ಲವೆನ್ನುತ್ತಾರೆ. **ಯತ್ ಆತ್ಮಾನುಸಂಸ್ಮೃತಿಮೋಕ್ಷಣಂ** ಆತ್ಮಪ್ರದಾನರೂಪ ಸಂಸಾರ ಮುಕ್ತಿಯನ್ನು **ಪುನಃ ಉತ** ಅನುಗ್ರಹಿಸಲಿಲ್ಲವೆಂದು ಹೇಳಬೇಕೆ? ಗಂಜಿಯು ಸಿಗದಿರುವಾಗ ಮೃಷ್ಟಾನ್ನ ಸಿಗಲಿಲ್ಲವೆಂದು ಹೇಳಬೇಕಿಲ್ಲ. ಹಾಗಾದರೆ ನಿತ್ಯಸಂಸಾರಿಗಳು ಮಾಡಿದ ನಾಮೋಚ್ಚಾರಣ ವ್ಯರ್ಥವೇ? ಎಂದರೆ ಇಲ್ಲ ಎನ್ನುತ್ತಾರೆ **ಮಾಯಾಮಯಂ** ಪ್ರಾಕೃತ ಆದ್ದರಿಂದ ನಶ್ವರವಾದ **ಭೋಗೈಶ್ವರ್ಯಮೇವ ಆತನುತೇ** ಭೋಗೈಶ್ವರ್ಯಗಳನ್ನೇ ಹೆಚ್ಚಾಗಿ ಕೊಡುವನು. ಈ ಕಾರಣದಿಂದ ಅನಶ್ವರ ಮೋಕ್ಷವನ್ನು ಕೊಡುವುದಿಲ್ಲವೆಂದು ತಿಳಿಸುವರು.

**ಯಾದವಾರ್ಯರು ಆತ್ಮಾನುಸ್ಮೃತಿಮೋಕ್ಷಣಂ** ಎಂಬುದನ್ನು ಭೋಗೈಶ್ವರ್ಯಕ್ಕೆ ವಿಶೇಷಣವಾಗಿ ಅನ್ವಯಿಸಿರುವರು. ಅದರಂತೆ ಪರಮಾತ್ಮನ ಅನುಸರಣೆಗೆ (ಸೇವೆಗೆ) ನಾಶಕವಾದ ಎಂದರ್ಥ. ಆಗ ಏವಕಾರಕ್ಕೆ ಆತ್ಮಾನುಸರಣವನ್ನಲ್ಲವೆಂದರ್ಥ. ಇಲ್ಲಿ **ನೂನಂ** ಎಂದು ಹೇಳಿದ್ದರಿಂದ ಮನುಷ್ಯ ಶಬ್ದಕ್ಕೆ ನಿತ್ಯಸಂಸಾರಿಗಳೆಂದು ಅರ್ಥವನ್ನು ಸೂಚಿಸಿರುವರು. **ಆತ್ಮಾನುಸ್ಮೃತಿಪೋಷಣಂ** ಎಂಬ ಪಾಠದಲ್ಲಿ ಆತ್ಮಾನುಸ್ಮರಣ ಪೋಷಣೆಯನ್ನು ಕೊಡುತ್ತಿಲ್ಲವೆಂದರ್ಥ. ಒಟ್ಟಿನಲ್ಲಿ ಶ್ರೀಹರಿಯ ಅನುಗ್ರಹವೇ ಮೋಕ್ಷಕ್ಕೆ ಕಾರಣವೆಂದು **ಯಮೈವೇಷ ವೃಣುತೇ** ಎಂಬ ಶ್ರುತಿ ಪ್ರಸಿದ್ಧವಾದ್ದರಿಂದ ಶ್ರೀಹರಿಯು 'ಇವನನ್ನು ಮುಕ್ತನನ್ನಾಗಿ ಮಾಡುವೆನು' ಎಂದು ಯಾರಿಗೆ ಅನುಗ್ರಹ




ಮಾಡುವನೋ ಅವನೇ ನಾಮೋಚ್ಚಾರಣರೂಪ ಮೋಕ್ಷಸಾಧನವನ್ನು ಹೊಂದಿ ಮುಕ್ತನಾಗುವನು. ಮತ್ತೊಬ್ಬನಲ್ಲವೆಂದು ಭಾವ. ।।೨೩।।

## ಭಕ್ತ್ಯತಿಶಯವೇ ಬಲಿಯ ಐಶ್ವರ್ಯಕ್ಕೆ ನಿಮಿತ್ತ

ನಿತ್ಯ ಸಂಸಾರಿಗೇ ಕೊಡದಿರುವಾಗ ತಮೋಯೋಗ್ಯರಿಗೆ ಕೊಡುವುದಿಲ್ಲವೆಂದು ಸಿದ್ಧವೇ. ಹಾಗಾದರೆ ದೈತ್ಯನಾದ ಬಲಿಚಕ್ರವರ್ತಿಗೆ ಹೇಗೆ ಇಂತಹ ಐಶ್ವರ್ಯ(ಮೋಕ್ಷದಲ್ಲಿ ಆನಂದಾತಿಶಯ)ವನ್ನು ಅನುಗ್ರಹಿಸಿದನು? ಎಂದು ಶಂಕಿಸಿದರೆ ದೈತ್ಯವಂಶದಲ್ಲಿ ಜನಿಸಿದ್ದರೂ ಮುಕ್ತಿಯೋಗ್ಯನವನು. ರಾಜ್ಯಾಪಹಾರವೆಂಬ ಅಪಕಾರ ಮಾಡಿದಕ್ಕೆ ಕೆಳಲೋಕವೆಂಬ ಕಾರಾಗೃಹದಲ್ಲಿ ವಾಸಮಾಡುವಂತೆ ಮಾಡಿದ. ಪಾಶದಿಂದ ಕಟ್ಟಿ ಬಿಡುಗಡೆ ಮಾಡಿದ. ಶ್ರೀಹರಿಯಲ್ಲಿಯೂ ಅವನಿಗೆ ಭಕ್ತಿಯ ಅತಿಶಯವೇ ಇತ್ತೆಂದು ಅವನ ಮಾತುಗಳಿಂದ ಕಂಡು ಬರುವುದು. ಈ ಭಕ್ತ್ಯತಿಶಯವೇ ಈ ಬಗೆಯ ಐಶ್ವರ್ಯಕ್ಕೆ ನಿಮಿತ್ತವು. ಇಂತಹ ಆಪತ್ತಿನಲ್ಲಿ ಇಂತಹ ಭಕ್ತಿಯು ಮನುಷ್ಯರಲ್ಲಿ ಕಂಡುಬರುವುದಿಲ್ಲ. ಅವರು ಎಲ್ಲರ ಗುಣಗಳಲ್ಲಿ ಅಸೂಯೆ ಪಡುವ ಸ್ವಭಾವದವರು ಎಂಬ ಅಭಿಪ್ರಾಯದಿಂದ ಬಲಿಚಕ್ರವರ್ತಿಯ ಮಾತುಗಳನ್ನೇ ತಿಳಿಸಲು ಹೇಳುತ್ತಾರೆ.

**ಯತ್ತದ್ಭಗವತಾಽನಧಿಗತಾನ್ಯೋಪಾಯೇನ ಚ ಯಾಂಚಾಛಲೇನಾಪಹೃತ ಸ್ವಶರೀರಾವಶೇಷಿತಲೋಕತ್ರಯೋ ಯೋ ವರುಣಪಾಶೈಶ್ಚ ಬದ್ಧೋ ಗಿರಿದರ್ಯಾಂ ಚಾಪವಿದ್ಧ ಇತಿ ಹೋವಾಚ ।।೨೪।।**

**ಅನಧಿಗತಾನ್ಯೋಪಾಯೇನ** (ಆ ಕಾಲದಲ್ಲಿ) ಭಿಕ್ಷೆಯನ್ನು ಬಿಟ್ಟು ಬೇರೊಂದು ಸುಖಸಾಧನವಾದ ಉಪಾಯವನ್ನು ಕಾಣದಿರುವ (ಬಲಿಚಕ್ರವರ್ತಿಗೆ ಬ್ರಾಹ್ಮಣಾನುಗ್ರಹ ಬಲವಿರುವುದರಿಂದ ಬಲದಿಂದ ಯುದ್ಧ ಮಾಡಿ ಗೆಲ್ಲುವುದು ಅಶಕ್ಯವಾದ್ದರಿಂದ ಶ್ರೀಹರಿಯು ಯಾಚನೆಯಿಂದ ಬಲಿಯನ್ನು ನಿಗ್ರಹ ಮಾಡಿದನು) **ಭಗವತಾ** ಶ್ರೀಹರಿಯಿಂದ **ಯಾಂಚಾಛಲೇನ** ಯಾಚನೆಯ ನೆಪದಿಂದ **ಅಪಹೃತ** ಅಪಹರಿಸಲ್ಪಟ್ಟ **ಸ್ವಶರೀರಾವಶೇಷಿತ** ತನ್ನ ಶರೀರವು ಮಾತ್ರ ಉಳಿದಿರುವ **ಲೋಕತ್ರಯ** ಮೂರು ಲೋಕಗಳುಳ್ಳ **ವರುಣಪಾಶೈಃ ಬದ್ಧಃ** ಶ್ರೀಹರಿಯ ಆಜ್ಞೆಯಂತೆ ಗರುಡನಿಂದ ಮೊದಲು ವರುಣಪಾಶದಿಂದ ಕಟ್ಟಲ್ಪಟ್ಟ **ಚ** ಬ್ರಹ್ಮಾದಿಗಳ ಪ್ರಾರ್ಥನೆಯಂತೆ

ಅನಂತರ ಪಾಶ ಮುಕ್ತನಾದ **ಚ** ಮತ್ತು **ಗಿರಿದರ್ಯಾಂ** ವಚನ ಕೊಟ್ಟಂತೆ ಮೂರು ಪಾದ ಭೂಮಿಯನ್ನು ಕೊಟ್ಟೆ ಎಂದು ಹೇಳಿ ಸಂಪೂರ್ಣ ಕೊಡದಿದ್ದುದರಿಂದ ಕಾರಾಗಾರ ರೂಪವಾದ ಪರ್ವತದ ಗುಹೆಯಲ್ಲಿ **ಅಪವಿದ್ಧಃ** ಬಂಧಿಸಲ್ಪಟ್ಟಂತೆ ಇರುವ **ಯಃ** ಯಾವ ಬಲಿ ಚಕ್ರವರ್ತಿಯು **ಇತಿ** ಮುಂದೆಹೇಳುವ ರೀತಿಯಲ್ಲಿ **ಉವಾಚ** ಮಾತನಾಡಿದನು **ಹ** ಪ್ರಾಣವೇ ಹೋದರೂ ಭಗವಂತನಲ್ಲಿ ಭಕ್ತಿಯನ್ನು ಬಿಡುವುದಿಲ್ಲವೆಂಬ ಅಭಿಪ್ರಾಯದಿಂದ ಸೂಚಿಸಿರುವರು **ಇತಿ ಯತ್** ಈ ಕಾರಣದಿಂದ ನಿತ್ಯಸಂಸಾರಿ ಜೀವರನ್ನು ಅನುಗ್ರಹಿಸಲಿಲ್ಲವೆಂದು ಹಿಂದೆ ಅನ್ವಯ.

ಬಲಿಚಕ್ರವರ್ತಿಯ ಮಾತುಗಳಿವು

**ನೂನಂ ಬತಾಯಂ ಭಗವಾನರ್ಥೇಷು ನಿಷ್ಣಾತೋಽಸಾವಿಂದ್ರಸ್ಯ ಸಚಿವೋ ಮಂತ್ರಾಯ ಧೃತ ಏಕಾಂತತೋ ಬೃಹಸ್ಪತಿಸ್ತಮತಿಹಾಯ ಯದಾ ಸ್ವಯಮುಪೇಂದ್ರೇಣಾತದರ್ಹಂ ಮಾಮಯಾಚತ ಪದಾನ್ಯಾತ್ಮನ ಆಶಿಷೋ ನೋ ಏವ ನ ದಾಸ್ಯಾಮಿ ಗಂಭೀರರಯಸ್ಯ ಕಾಲಸ್ಯ ಮನ್ವಂತರಪರಿಮಿತಂ ಕಿಯಲ್ಲೋತ್ರಯಮಿದಮ್ ।।೨೫।।**

**ಇಂದ್ರಸ್ಯ ಸಚಿವಃ** ಇಂದ್ರನ ಸಹಾಯಕರಾದ **ಯಃ ಅಸೌ ಬೃಹಸ್ಪತಿಃ** ಯಾವ ಈ ಬೃಹಸ್ಪತ್ಯಾಚಾರ್ಯರು **ಯದಾ** ಯಾವಾಗ **ಮಂತ್ರಾರ್ಥಂ** ಸಂಧಾನಕ್ಕಾಗಿ (ನನ್ನೊಡನೆ) **ಧೃತಃ** ಇಂದ್ರನಿಂದ ಕಳಿಸಲ್ಪಟ್ಟು **ಏಕಾಂತತಃ** ರಹಸ್ಯದಲ್ಲಿ **ಮಂತ್ರಾಯ** ಮಂತ್ರಾಲೋಚನೆಗಾಗಿ **ಧೃತಃ** ಸನ್ನದ್ಧರಾಗಿದ್ದರೋ **ತದಾ ಆಗತಂ** ಅವರನ್ನು **ಅತಿಹಾಯ** ಬಿಟ್ಟು ಸಂಧಾನಕ್ಕೆ ಮೊದಲೇ ಬಂದು **ಅರ್ಥೇಷು** ಭಕ್ತನಾದ ನನಗೆ ಪುರುಷಾರ್ಥಗಳನ್ನು ಕೊಡಲು **ನಿಷ್ಣಾತಃ** ಉದ್ಯುಕ್ತನಾದ ಅಥವಾ ನನಗೆ ಪ್ರಯೋಜನಕಾರಿಗಳಾದ ತನ್ನ ಪಾದಗಳ ಸೇವೆಯನ್ನು ಕೊಡಲು **ಅಯಂ ಭಗವಾನ್** ಈ ಶ್ರೀಹರಿಯು **ಸ್ವಯಂ** ತಾನೇ **ಉಪೇಂದ್ರೇಣ** ವಟು ವಾಮನ ರೂಪದಿಂದ **ಆತ್ಮನೇ** ಪರಿಪೂರ್ಣನಾದ ತನಗೆ **ಪದಾನಿ** ಮೂರು ಹೆಜ್ಜೆ ಮಾತ್ರ ಭೂಮಿಯನ್ನು **ಅತದರ್ಹಂ** ಯಾಚಿಸಲು ಯೋಗ್ಯನಲ್ಲದ **ಮಾಂ** ನನ್ನನ್ನು **ಅಯಾಚತ** ಬೇಡಿದನು. **ಆಶಿಷಃ ನ ಏವ** ಪರಿಪೂರ್ಣನಾದ ಅವನಿಗೆ ಅಸಾಧ್ಯವಾದುದು (ಬೇಡಬೇಕಾದುದು) ಇಲ್ಲವೇ ಇಲ್ಲ.




ಮುಂದಿನ ಕಲ್ಪದಲ್ಲಿ ಕೊಡುವ ಲೋಕತ್ರಯವು ಈ ಭೂಮಿದಾನಕ್ಕೆ ಫಲವೇ? ಎಂದರೆ ಹೇಳುವರು **ಗಂಭೀರರಯಸ್ಯ** ತಿಳಿಯಲಾಗದಷ್ಟು ವೇಗವುಳ್ಳ **ಕಾಲಸ್ಯ** ಮಹಾಕಾಲದ **ಮನ್ವಂತರಪರಿಮಿತಂ** ಏಕದೇಶವಾದ ಒಂದು ಮನ್ವಂತರ ಕಾಲ ಮಾತ್ರವಿರುವ **ಇದಂ ಲೋಕತ್ರಯಂ** ಈ ತ್ರಿಲೋಕಾಧಿಪತ್ಯವು **ಕಿಯತ್** ಯಾವ ಲೆಕ್ಕಕ್ಕೆ? ಇದು ಅತ್ಯಲ್ಪ, ಅನಿತ್ಯ. ಇದರ ಪ್ರಯುಕ್ತ ಬಲಿಗೆ ಮದವು ಬರಬಾರದು. ಆದ್ದರಿಂದ **ನೋ ದಾಸ್ಯಾಮಿ** ಇವನಿಗೆ ಕೊಡುವುದಿಲ್ಲವೆಂದು ಮೂರುಪಾದ ಬೇಡುವ ನೆಪದಿಂದ ಅಪಹರಿಸಿದನೆಂಬ ಅಭಿಪ್ರಾಯವು **ನೂನಂ** ನಿಶ್ಚಯ **ಬತ** ಭಕ್ತನಾದ ನನ್ನಲ್ಲಿ ಕರುಣೆಯಿಂದಲೇ ಅಲ್ಲವೇ? **ಯಸ್ಯಾನುಗ್ರಹಮಿಚ್ಛಾಮಿ ಹರಿಷ್ಯೇ ತದ್ಧನಂ ಶನೈಃ, ತಂ ಭ್ರಂಶಯಾಮಿ ಸಂಪದ್ಭ್ಯೋ ಯಸ್ಯ ಚೇಚ್ಛಾಮ್ಯನುಗ್ರಹಂ** ಮುಂತಾದ ಅವನ ಮಾತುಗಳಿವೆ.

**ಐಂದ್ರಂ ಪದಂ ನಾಂತರೀಯಂ ಫಲಂ ತು ಹರಿತೋಷಣಂ ಜಗದ್ಧಾತು- ರ್ಬಲೇರ್ಯಸ್ಮಾದಾನಂದೋದ್ರಿಕ್ತತಾ ಭವೇತ್** ಎಂಬ ವಚನಾನುಸಾರ ಬಲಿಚಕ್ರವರ್ತಿ ಮಾಡಿದ ಜಗದ್ದಾನಕ್ಕೆ ಮುಖ್ಯ ಫಲವು ಮುಕ್ತಿಯಲ್ಲಿ(ಆಗುವ) ಆನಂದೋದ್ರೇಕವೇ ಹೊರತು ಇಂದ್ರ ಪದವಿಯು ಮುಖ್ಯವಲ್ಲ. ಅದು ವ್ಯಾಪ್ತವಾದುದು ಅಷ್ಟೇ. ಅಂದರೆ ಮುಖ್ಯಫಲದ ಜೊತೆಗೆ ಬಯಸದಿದ್ದರೂ ಬರುವ ಅಮುಖ್ಯಫಲವೆಂದು ಅಭಿಪ್ರಾಯ. ಅಂದರೆ ಕೃಷಿಗೆ ಧಾನ್ಯವೇ ಫಲವಾಗಿದ್ದರೂ ಹುಲ್ಲು ಇಲ್ಲದೇ ಬರುವುದಿಲ್ಲ. ಇಲ್ಲಿ ಹುಲ್ಲು ಅಮುಖ್ಯ ಫಲ. ಹಾಗೆ ಅಮುಖ್ಯಫಲವಾದ ಪದವಿಯೂ ಬಂದು ಆನಂದಾತಿಶಯರೂಪ ಮುಖ್ಯಫಲವೂ ಬರುವುದು ಎಂದು ತಿಳಿಯಬೇಕು. ।।೨೫।।

ಶ್ರೀಹರಿಯ ಈ ಅಭಿಪ್ರಾಯವನ್ನು ತಮ್ಮ ಅಜ್ಜನೇ ಬಲ್ಲನೆಂದು ಹೇಳುವನು

**ಯಸ್ಯ ಅನುದಾಸ್ಯಮೇವ ಅಸ್ಮತ್ಪಿತಾಮಹಃ ಕಿಲ ವವ್ರೇ ನ ತು ಸ್ವಪಿತ್ರ್ಯಂ ರಾಜ್ಯಂ ಯದಕುತೋಭಯಂ ಪದಂ ದೀಯಮಾನಂ ಭಗವತಾ ವಿರಮಿತೇ ಸ್ವಪಿತರಿ ತಸ್ಯ ಮಹಾನುಭಾವಸ್ಯಾನುಪಥಮನುವರ್ತಿತುಮಲಮಮ್ಯದಿತ- ಕಷಾಯಃ ಕೋ ವಾಸ್ಮದ್ವಿಧಃ ಪರಿಹೀನಭಗವದನುಗ್ರಹಃ ಇತಿ ।।೨೬।।**

**ಅಸ್ಮತ್ ಪಿತಾಮಹಃ** ನನ್ನ ತಂದೆಯ ತಂದೆಯಾದ (ವಿರೋಚನನ ತಂದೆಯಾದ) ಪ್ರಲ್ಹಾದರಾಜನು **ಭಗವತಾ** ನರಸಿಂಹದೇವರಿಂದ **ಸ್ವಪಿತರಿ** ತನ್ನ ತಂದೆಯಾದ

ಹಿರಣ್ಯಕಶಿಪುವು **ವಿರಮಿತೇ ಸತಿ** ಸಂಹೃತನಾಗುತ್ತಿರಲು ಶ್ರೀಹರಿಯಿಂದ **ದೀಯಮಾನಂ** ಕೊಡಲ್ಪಟ್ಟ **ಸ್ವಪಿತ್ರ್ಯಂ** ತನ್ನ ತಂದೆಯದಾದ **ಅಕುತೋಭಯಂ** ಯಾವ ಶತ್ರುಗಳ ಭಯವಿಲ್ಲದ **ಯತ್ ರಾಜ್ಯಪದಂ** ಯಾವಕಾರಣ ರಾಜ್ಯಪದವಿಯನ್ನು **ನ ವವ್ರೇ** ಸ್ವೀಕರಿಸಲಿಲ್ಲ **ತು** ಆದರೆ **ಯಸ್ಯ** ಯಾವ ಶ್ರೀಹರಿಯ **ಅನುದಾಸ್ಯಮೇವ** ಸೇವೆಯನ್ನೇ **ವವ್ರೇ ಕಿಲ** ಕೇಳಿಕೊಂಡನಲ್ಲವೇ! **ಮಹಾನುಭಾವಸ್ಯ ತಸ್ಯ** ಮಹಾನುಭಾವನಾದ ಆ ನಮ್ಮಜ್ಜನು (ಪ್ರಲ್ಹಾದನು) **ಅನುಪಥಂ** ಅನುಸರಿಸಿದ ಮಾರ್ಗವನ್ನು **ಅನುವರ್ತಿತುಂ** ಅನುಸರಿಸಿ ನಡೆಯಲು **ಅಮೃದಿತಕಷಾಯಃ** ಸಂಪೂರ್ಣರಾಗದ್ವೇಷಾದಿದೋಷಗಳ ನಾಶವಾಗದಿರುವ, ಪಾಪವನ್ನು ಕಳೆದುಕೊಳ್ಳದ ಆದ್ದರಿಂದಲೇ **ಪರಿಹೀನಭಗವದನುಗ್ರಹಃ** ಶ್ರೀಹರಿಯ ಅನುಗ್ರಹವಿಲ್ಲದ **ಅಸ್ಮದ್ವಿಧಃ** ನನ್ನಂತಹ **ಕೋ ವಾ** ಯಾವನು ತಾನೇ **ಅಲಂ** ಸಮರ್ಥನಾದಾನು? ಯಾವನೂ ಸಮರ್ಥನಲ್ಲವೆಂದು ಭಾವ **ಇತಿ** ಎಂದು **ಉವಾಚ** ಬಲಿಚಕ್ರವರ್ತಿಯು ಹೇಳಿದನು ಎಂದು ಹಿಂದಕ್ಕೆ ಅನ್ವಯ. **ಪಿತ್ರ್ಯಂ** ಎಂದುದರಿಂದ ತಂದೆಯ ಆಸ್ತಿಯು ತನಗೆ ಉಚಿತವಾದುದೇ ಅದೂ ನಿಷ್ಕಂಟಕವಾದ್ದರಿಂದ ಗ್ರಾಹ್ಯವಾಗಿದ್ದರೂ ಅದನ್ನು ಬೇಡಲಿಲ್ಲ. ಇದರಿಂದ ಶ್ರೀಹರಿಯ ಸೇವೆಗೆ ಇತರ ಫಲಗಳು ಯಾವುವೂ ಮುಖ್ಯವಲ್ಲ ಎಂಬಲ್ಲಿ ತನ್ನ ಹಿರಿಯರ ಆಚಾರವೇ ಪ್ರಮಾಣವೆಂದು ತಿಳಿಸಿದಂತಾಯಿತು. ಪ್ರಲ್ಹಾದರಾಜರು ರಾಗಾದಿದೋಷರಹಿತರೆಂದು, ಭಗವದನುಗ್ರಹಪಾತ್ರರೆಂದು, ತಾನಲ್ಲವೆಂದೂ ತಮ್ಮಿಬ್ಬರಲ್ಲಿರುವ ಅಂತರ ತಿಳಿಸಿದರು. **ಅಪಹೃತ** ಮೊದಲಾದ ಮೂರು ವಿಶೇಷಣ ಕೊಟ್ಟದ್ದರಿಂದ ಅದು ಬಲಿಚಕ್ರವರ್ತಿಯ ಆಪತ್ಕಾಲವೆಂದೂ ಅಂತಹ ಕಾಲದಲ್ಲಿಯೂ ಅವನು ಹೀಗೆ ಹೇಳಿದನೆಂದಮೇಲೆ ಅವನು ಭಕ್ತೋತ್ತಮನೆಂದು ಭಾವ. ಲೋಕದಲ್ಲಿ ಮತ್ತೊಬ್ಬರಿಗೆ ಉಪಕಾರಮಾಡುವವರನ್ನು, ತನಗೆ ಅಪಕಾರಮಾಡುವವರನ್ನು, ಹಿತ ಮಾಡುವವರೆಂದು, ತನ್ನ ಉಪಾಕಾರಿಗಳೆಂದೂ ಯಾರೂ ಬಗೆಯುವುದಿಲ್ಲ. ಆದರೆ ಇಂದ್ರೋಪಕಾರಿಯಾದ ಶ್ರೀಹರಿಯನ್ನು ಬಲಿಯು ತನ್ನ ಉಪಕಾರಿ ಎಂದು ತಿಳಿದನೆಂದಮೇಲೆ ಅವನ ಭಕ್ತಿ ಎಂತಹದೆಂದು ತಿಳಿಯುವುದು ಎಂದು ಭಾವ. ॥೨೬॥

**ತಸ್ಯಾನುಚರಿತಂ ಉತ್ತರಸ್ಮಾದ್ವಿಸ್ತರಿಷ್ಯತೇ ಯಸ್ಯ ಭಗವಾನ್ ಸ್ವಯಂ ಅಖಿಲಜಗದ್ಗುರುರ್ನಾರಾಯಣೋ ದ್ವಾರಿ ಗದಾಪಾಣಿರವತಿಷ್ಠತೇ**

 

**ನಿಜಜನಾನುಕಂಪಿತಹೃದಯೋ ಯೇನ ಪದಾಂಗುಷ್ಠೇನ ದಶಕಂಧರೋ ಯೋಜನಾಯುತಂ ದಿಗ್ವಿಜಯ ಉಚ್ಚಾಟಿತಃ ||೨೭||**

ಶುಕಾಚಾರ್ಯರು ಹೇಳುವರು **ತಸ್ಯ** ಪ್ರಲ್ಹಾದರಾಜರ **ಅನುಚರಿತಂ** ಚರಿತ್ರೆಯನ್ನು **ಉತ್ತರಸ್ಮಾತ್** ಏಳನೇ ಸ್ಕಂಧದಲ್ಲಿ **ವಿಸ್ತರಿಷ್ಯತೇ** ವಿಸ್ತಾರವಾಗಿ ಹೇಳುವೆವು. ಅಥವಾ ಆ ಬಲಿಚಕ್ರವರ್ತಿಯ ಚರಿತ್ರೆಯನ್ನು ಮುಂದೆ ಎಂಟನೇ ಸ್ಕಂಧದಲ್ಲಿ ವಿಸ್ತರಿಸುವೆವು ಎಂದಾದರೂ ಅರ್ಥ. ಶ್ರೀಹರಿಯು ಭಕ್ತರಲ್ಲಿ ದಯಾಪೂರ್ಣನೆಂದು ಹೇಳುತ್ತಾರೆ. **ಅಖಿಲ ಜಗದ್ಗುರುಃ** ಎಲ್ಲ ಜಗತ್ತಿಗೂ ಗುರುವಾದ **ಭಗವಾನ್ ನಾರಾಯಣಃ** ಭಗವಂತನಾದ ನಾರಾಯಣನು **ನಿಜಜನಾನುಕಂಪಿತಹೃದಯಃ** ತನ್ನ ಭಕ್ತರಲ್ಲಿ ದಯೆಯುಳ್ಳ ಮನಸ್ಸುಳ್ಳವನಾಗಿ **ಸ್ವಯಂ** ತಾನು ವಾಮನ ರೂಪಿಯಾಗಿ **ಗದಾಪಾಣಿಃ ಸನ್** ಕೈಯಲ್ಲಿ ಗದೆಯನ್ನು ಹಿಡಿದುಕೊಂಡು. **ಯಸ್ಯ** ಯಾವ ಈ ಬಲಿ ಚಕ್ರವರ್ತಿಯ **ದ್ವಾರಿ** ಮನೆ ಬಾಗಿಲಲ್ಲಿ **ಅವತಿಷ್ಠತೇ** ಇರುವನು **ಯೇನ** ಯಾವ ದ್ವಾರಪಾಲಕನಾದ ವಾಮನನಿಂದ **ದಿಗ್ವಿಜಯೇ** ದಿಕ್ಕುಗಳನ್ನು ಗೆಲ್ಲುತ್ತಾ ಬಲಿಯನ್ನು ಗೆಲ್ಲಲು ಬಂದ ಸಮಯದಲ್ಲಿ **ದಶಕಂಧರಃ** ರಾವಣನು **ಪದಾಂಗುಷ್ಠೇನ** ಕಾಲಿನಿಂದ ಅದರಲ್ಲೂ ಹೆಬ್ಬೆರಳಿನಿಂದಲೇ **ಯೋಜನಾಯುತಂ** ಹತ್ತು ಸಾವಿರ ಯೋಜನ ದೂರಕ್ಕೆ **ಉಚ್ಚಾಟಿತಃ** ಎಸೆಯಲ್ಪಟ್ಟನೋ ಅಂತಹ ತನ್ನ ಪಾದಕ್ಕೆ ಪ್ರಣತನಾದ ಬಲಿಯನ್ನು ಆಪತ್ತಿನಲ್ಲಿ ರಕ್ಷಿಸಿದ ಶ್ರೀಹರಿಗೆ ಅಖಿಲ ಜಗದ್ಗುರುತ್ವಯುಕ್ತವೆಂದು ತಿಳಿಸಿದಂತಾಯಿತು **ಅವತಿಷ್ಠತೇ** ಎಂದು ಆತ್ಮನೇಪದ ಪ್ರಯೋಗದಿಂದ ತಾನು ಕೊಟ್ಟ ವರಕ್ಕೆ ಕಟ್ಟುಬಿದ್ದು ಹಾಗೆ ದ್ವಾರಪಾಲಕನಾಗಿರುವನೆಂದು ಸೂಚಿಸುವರು. ಇಂತಹ ಶ್ರೀಹರಿಯು ಭಕ್ತಜನ ಪ್ರಯೋಜನವನ್ನು ಸಂಪಾದಿಸಿಕೊಡಲು ರಾಜ್ಯಾಪಹಾರ ಮಾಡಿದನೇ ಹೊರತು ಇಂದ್ರದೇವರಿಗೆ ರಾಜ್ಯ ಕಸಿದು ಕೊಡುವುದಕ್ಕಲ್ಲವೆಂದೂ ತಿಳಿಯಬೇಕು. ಇದರಿಂದ ಬಲಿಚಕ್ರವರ್ತಿಯು ಭಗವದ್ಭಕ್ತನೆಂಬುದಕ್ಕೆ ಜ್ಞಾಪಕ ತಿಳಿಸಿದಂತಾಯಿತು. ||೨೭||

## ತಲಾತಲ

**ತತೋಽಧಸ್ತಾತ್ತಲಾತಲೇ ಮಯೋ ನಾಮ ದಾನವೇಂದ್ರಸ್ತ್ರಿಪುರಾಧಿಪತಿಃ ಭಗವತಾ ಮುರಾರಿಣಾ ತ್ರಿಲೋಕ್ಯಾಃ ಶಂ ಚಿಕೀರ್ಷುಣಾ ನಿರ್ದಗ್ಧಸ್ವಪುರತ್ರಯ-ಸ್ತತ್ಪ್ರಸಾದಾಲ್ಲಬ್ಧಪದೋ ಮಾಯಾವಿನಾಮಾಚಾರ್ಯೋ ಮಹಾದೇವೇನ ಪರಿರಕ್ಷಿತೋ ವಿಗತಸುದರ್ಶನಭಯೋ ಮಹೀಯತೇ ||೨೮||**

**ತತೋಽಧಸ್ತಾತ್** ಸುತಲದ ಕೆಳಗೆ **ತಲಾತಲೇ** ತಲಾತಲ ಲೋಕದಲ್ಲಿ **ತ್ರಿಲೋಕ್ಯಾಃ** ಮೂರು ಲೋಕಗಳಿಗೆ **ಶಂ** ಸುಖವನ್ನು **ಚಿಕೀರ್ಷುಣಾ** ಮಾಡ ಬಯಸಿದ **ಭಗವತಾ** ಪೂಜ್ಯನಾದ **ಪುರಾರಿಣಾ (ಮುರಾರಿಣಾ)** ರುದ್ರದೇವರಿಂದ **ನಿರ್ದಗ್ಧಸ್ವಪುರತ್ರಯಃ** ಸುಡಲ್ಪಟ್ಟ ತನ್ನ ಮೂರು ಪಟ್ಟಣಗಳುಳ್ಳ ಅನಂತರ **ತತ್ಪ್ರಸಾದಾತ್** ಆ ರುದ್ರದೇವರ ಅನುಗ್ರಹದಿಂದ **ಲಬ್ಧಪದಃ** ತಲಾತಲ ಸ್ಥಾನವನ್ನು ಹೊಂದಿದ **ಮಾಯಾವಿನಾಂ ಆಚಾರ್ಯಃ** ಮಾಯಾವಿಗಳಿಗೆ ಗುರುವಾದ **ತ್ರಿಪುರಾಧಿಪತಿಃ** ಮೂರು ಪಟ್ಟಣಗಳಿಗೆ ಅಧಿಪತಿಯಾಗಿದ್ದ **ಮಯೋ ನಾಮ ದಾನವೇಂದ್ರಃ** ಮಯನೆಂಬ ದಾನವ ಶ್ರೇಷ್ಠನು **ಮಹಾದೇವೇನ ಪರಿರಕ್ಷಿತಃ** ರುದ್ರದೇವರಿಂದ ಎಲ್ಲ ರೀತಿಯಿಂದ ರಕ್ಷಿತನಾಗಿ **ವಿಗತಸುದರ್ಶನಭಯಃ ಸನ್** ಚಕ್ರದ ಭಯವಿಲ್ಲದವನಾಗಿ **ಮಹೀಯತೇ** ತನ್ನ ಸೇವಕರಿಂದ ಪೂಜಿಸಲ್ಪಡುತ್ತಿರುವನು. ।।೨೮।।

## ಮಹಾತಲ

**ತತೋಽಧಸ್ತಾನ್ಮಹಾತಲೇ ಕಾದ್ರವೇಯಾಣಾಂ ನೈಕಶಿರಸಾಂ ಕ್ರೋಧವಶೋ ನಾಮಗಣಃ ಕುಹಕತಕ್ಷಕಕಾಲಿಯಸುಷೇಣಾದಿಪ್ರಧಾನಾ ಮಹಾಭೋಗವಂತಃ ಪತತ್ರಿರಾಜಾಧಿಪತೇಃ ಪುರುಷೋತ್ತಮವಾಹಾದನವರತಮುದ್ವಿಜಮಾನಾಃ ಸ್ವಕಲತ್ರಾಪತ್ಯಸುಹೃತ್‌ಕುಟುಂಬ ಸಂಗೇನ ಕ್ವಚಿತ್ ಪ್ರಮತ್ತಾ ವಿಚರಂತಿ ।।೨೯।।**

**ತತಃ** ತಲಾತಲದ **ಅಧಸ್ತಾತ್** ಕೆಳಗೆ **ಮಹಾತಲೇ** ಮಹಾತಲ ಲೋಕದಲ್ಲಿ **ಕ್ರೋಧವಶೋ ನಾಮ** ಕ್ರೋಧವಶರೆಂಬ ಅನೇಕ ಹೆಡೆಗಳ **ಕಾದ್ರವೇಯಾಣಾಂ** ಕದ್ರುದೇವಿಯ ಮಕ್ಕಳಾದ ಸರ್ಪಗಳ **ಗಣಃ** ಸಮೂಹವು **ಅಸ್ತಿ** ಇದೆ. **ಮಹಾಭೋಗವಂತಃ** ಸ್ಥೂಲ ಶರೀರವುಳ್ಳ ಕುಹಕ, ತಕ್ಷಕ, ಕಾಲಿಯ, ಸುಷೇಣ **ಆದಿ** ಮೊದಲಾದ **ಪ್ರಧಾನಾಃ** ಮುಖ್ಯವಾದ ಸರ್ಪಗಳು **ಪುರುಷೋತ್ತಮವಾಹಾತ್** ಶ್ರೀಹರಿಯ ವಾಹನವಾದ **ಪತತ್ರಿರಾಜಾಧಿಪತೇಃ** ಹಕ್ಕಿಗಳಲ್ಲಿ ಶ್ರೇಷ್ಠವಾದ ಹಕ್ಕಿಗಳಿಗೆ ಒಡೆಯನಾದ ಗರುಡದೇವರಿಂದ **ಅನವರತಂ** ಯಾವಾಗಲೂ **ಉದ್ವಿಜಮಾನಾಃ** ಭಯದಿಂದ ಉದ್ವೇಗಗೊಂಡು **ಕ್ವಚಿತ್** ಒಂದೊಂದು ಸಲ ಮಾತ್ರ **ಕಲತ್ರ** ತಮ್ಮ ಹೆಂಡತಿಯರ **ಅಪತ್ಯ** ಮಕ್ಕಳು **ಸುಹೃತ್** ಸ್ನೇಹಿತರು **ಕುಟುಂಬಸಂಗೇನ** ತನ್ನಿಂದ ಧಾರಣೆ ಮಾಡಲು ಯೋಗ್ಯರಾದ ಇತರ ತಾಯಿತಂದೆ ಬಂಧು ಮುಂತಾದ ಮನೆ ಜನರ ಸಹವಾಸದಿಂದ **ಪ್ರಮತ್ತಾ ವಿಚರಂತಿ** ಗರುಡನ ಭಯವಿಲ್ಲದೇ ಸಂಚರಿಸುವರು: ।।೨೯।।




## ರಸಾತಲ

**ತತೋಽಧಸ್ತಾದ್ರಸಾತಲೇ ದೈತೇಯಾಃ ದಾನವಾಃ ಪಣಯೋ ನಾಮ ನಿವಾತಕವಚಾಃ ಕಾಲಕೇಯಾ ಹಿರಣ್ಯಪುರವಾಸಿನ ಇತಿ ವಿಬುಧಪ್ರತ್ಯನೀಕಾ ಉತ್ಪತ್ತ್ಯಾ ಮಹೌಜಸೋ ಮಹಾಸಾಹಸಿನೋ ಭಗವತಃ ಸಕಲಲೋಕ-ಮಹಾನುಭಾವಸ್ಯ ಹರೇರೇವ ತೇಜಸಾ ಪ್ರತಿಹತಾವಲೇಪಾ ಬಿಲೇಶಯಾ ಏವ ನಿವಸಂತಿ ಯೇ ವೈ ಸರಮಯೇಂದ್ರದೂತ್ಯಾ ವಾಗ್ಭಿರ್ಮಂತ್ರವರ್ಣಾಭಿ-ರಿಂದ್ರಾದ್ಬಿಭ್ಯತಿ ॥೩೦॥**

**ತತಃ** ಮಹಾತಲದ **ಅಧಸ್ತಾತ್** ಕೆಳಗೆ **ರಸಾತಲೇ** ರಸಾತಲ ಲೋಕದಲ್ಲಿ **ಪಣಯಃ ನಾಮ** ಪಣಿಗಳೆಂದು ಹೆಸರುಳ್ಳ **ನಿವಾತಕವಚಾಃ** ಗಾಳಿಯೂ ಹೋಗದ ಅರ್ಥಾತ್ ಶಸ್ತ್ರಗಳಿಂದ ಅಭೇದ್ಯವಾದ ಕವಚವುಳ್ಳವರಾದ್ದರಿಂದ ಆ ಹೆಸರಿನವರು **ಕಾಲಕೇಯಾಃ** ಕಾಲಕಾ ಎಂಬುವವಳ ಮಕ್ಕಳು **ಹಿರಣ್ಯಪುರವಾಸಿನಃ** ಹಿರಣ್ಯಪುರವಾಸಿಗಳು **ಇತಿ** ಎಂದು ಪ್ರಸಿದ್ಧರಾದ **ವಿಬುಧಪ್ರತ್ಯನೀಕಾಃ** ದೇವತೆಗಳ ಶತ್ರುಗಳಾದ **ಉತ್ಪತ್ತ್ಯಾ** ಹುಟ್ಟಿನಿಂದಲೇ **ಮಹೌಜಸಃ** ಬಹು ಪರಾಕ್ರಮಿಗಳಾದ **ಮಹಾಸಾಹಸಿನಃ** ಅತ್ಯಂತ ಸಾಹಸಿಗಳಾದ **ದೈತೇಯಾಃ** ದಿತಿಯ ಮಕ್ಕಳು **ದಾನವಾಃ** ದನುವಿನ ಮಕ್ಕಳು **ಭಗವತಃ** ಸಮಸ್ತೈಶ್ವರ್ಯಸಂಪನ್ನನಾದ **ಸಕಲಲೋಕ-ಮಹಾನುಭಾವಸ್ಯ** ಎಲ್ಲ ಲೋಕಗಳಲ್ಲಿಯೂ ಮಹಾ ಸಮರ್ಥನಾದ **ಹರೇರೇವ ತೇಜಸಾ** ಶ್ರೀಹರಿಯ ಸುದರ್ಶನ ಚಕ್ರದ ಪ್ರಭಾವದಿಂದಲೇ **ಪ್ರತಿಹತಾವಲೇಪಾಃ ಸಂತಃ** ನಷ್ಟವಾದ ಗರ್ವವುಳ್ಳವರಾಗಿ **ಬಿಲೇಶಯಾ ಏವ** ಸರ್ಪಗಳಂತೆಯೇ **ನಿವಸಂತಿ** ವಾಸಿಸುವರು **ಯೇ** ಯಾವ ಈ ಪಣಿಗಳು **ಇಂದ್ರದೂತ್ಯಾ** ಇಂದ್ರನ ದೂತಿಯಾದ **ಸರಮಯಾ** ಸರಮಾ ಎಂಬ ಹೆಣ್ಣು ನಾಯಿಯ **ಮಂತ್ರವರ್ಣಾಭಿಃ** ವೇದಮಂತ್ರರೂಪವಾದ '**ಹತಾ ಇಂದ್ರೇಣ ಪಣಯಃ ಶಯಧ್ವಂ**' ಇವೇ ಮೊದಲಾದ **ವಾಗ್ಭಿಃ** ಮಾತುಗಳಿಂದ (ಮಾತುಗಳನ್ನು ಕೇಳಿ) **ಇಂದ್ರಾತ್** ಇಂದ್ರನಿಂದ **ಬಿಭ್ಯತಿ** ಹೆದರುವರು. ಅದಕ್ಕಾಗಿಯೇ ಹಾವುಗಳು ಹುತ್ತಿನಲ್ಲಿ ಅಡಗಿರುವಂತೆ ರಸಾತಲದಲ್ಲಿ ಅಡಗಿರುವರು. ಇಲ್ಲಿ ಹೀಗೆ ಆಖ್ಯಾಯಿಕೆ ಇದೆ.

## ಪಣಿಗಳ ಐತಿಹ್ಯ

ಬಲಾಸುರನ ಭಟರಾದ ಪಣಿಗಳೆಂಬ ಅಸುರರು ಬೃಹಸ್ಪತಿಯ ಹಸುಗಳನ್ನು ಬಚ್ಚಿಟ್ಟಿದ್ದರು. ಅವುಗಳನ್ನು ಹುಡುಕಲು ಇಂದ್ರದೇವರು ತನ್ನ ಸರಮಾ ಎಂಬದೇವತೆಗಳ ಹೆಣ್ಣು ನಾಯಿಯನ್ನು ಕಳುಹಿಸಿ ಕೊಟ್ಟರು. ಸಂಧಿಯನ್ನು ಬಯಸಿದ ಪಣಿಗಳು ಆ ನಾಯಿಗೆ ನಿನ್ನ ಇಷ್ಟವೇನು ಎಂದು ಕೇಳಿದರು. ಸಂಧಿಗೊಪ್ಪದ ಆ ಶುನಿಯು ಇಂದ್ರನನ್ನು ಪ್ರಶಂಸಿಸಿ ಆ ಪಣಿಗಳಿಗೆ ಕ್ರೂರನುಡಿಗಳನ್ನಾಡಿತು. ಅದನ್ನು ಕೇಳಿ ಅವರು ಹೆದರಿದರು ಎಂಬುದು ವೇದದಲ್ಲಿ ಬರುವ ಕಥೆ. ಋಗ್ವೇದ ೧೦ನೇ ಮಂಡಲ ೧೦೮ನೇ ಸೂಕ್ತ ಅಂದರೆ ೮ ನೇ ಅಷ್ಟಕ ೬ನೇ ಅಧ್ಯಾಯ ವರ್ಗ ೫ ರಲ್ಲಿ

**'ಕಿಮಿಚ್ಛಂತಿ ಸರಮಾ ಪ್ರೇದಮಾನಡ್ ದೂರೇಹ್ಯಧ್ವಾಜಗುರಿಃ ಪರಾಚೈಃ ।**
**ಕಾ ಸ್ಮೇ ಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ಸರಾಯಾ ಅತರಃ ಪಯಾಂಸಿ ॥**

ಸರಮಾ! ನೀನು ದೂರವಾದ ಮಾರ್ಗದಿಂದ **ಪರಾಚೈಃ** ಹೊರಗೆ ಬಂದಿರುವ ನಾಲಿಗೆಗಳಿಂದ **ಜಗುರಿಃ** ಏನನ್ನು ಹೇಳುತ್ತಾ ಏನನ್ನು ಇಚ್ಛಿಸುತ್ತಾ **ಅತ್ರ** ಇಲ್ಲಿಗೆ **ಪ್ರಾನಟ್** ಬಂದೇ ಈ ನಿನ್ನ **ಅಸ್ಮೇ** ನಮ್ಮಲ್ಲಿಗೆ **ಹಿತಿಃ** ಬರುವಿಕೆಯು **ಕಾ** ಏತಕ್ಕಾಗಿ ನಿನ್ನ **ಪರಿತಕ್ಮ್ಯ** ದೂತಳಾಗಿ ಬರುವಿಕೆಯು **ಕಾ** ಯಾವ ಕಾರ್ಯಕ್ಕಾಗಿ **ಆಸೀತ್** ಇರುವುದು? ನೀನು **ರಸಾಯಾಃ** ರಸಾತಲದ ನದಿಯ **ಪಯಾಂಸಿ** ನೀರನ್ನು **ಕಥಂ ಅತರಃ** ಹೇಗೆ ದಾಟಿದ್ದಿ ಎಂದು ಪಣಿಗಳ ಪ್ರಶ್ನೆ. ಇದನ್ನು ಕೇಳಿದ ಸರಮಾ

**'ಇಂದ್ರಸ್ಯ ದೂತೀರಿಷಿತಾ ಚರಾಮಿ ಮಹ ಇಚ್ಛಂತೀ ಪಣಯೋ ನಿಧೀನ್ವಃ ।**
**ಅತಿಷ್ಕಂದೋ ಭಿಯಸಾ ತನ್ನ ಆವತ್ತಥಾ ರಸಾಯಾ ಅತರಂ ಪಯಾಂಸಿ ॥**

ನಾನು **ಇಂದ್ರಸ್ಯ ದೂತೀಃ** ಇಂದ್ರನ ದೂತಳು **ಇಷಿತಾ** ಅವನಿಂದ ಪ್ರೇರಿತಳಾಗಿ **ಚರಾಮಿ** ಬಂದಿರುವೆನು **ಹೇ ಪಣಯಃ** ಎಲೇ ಪಣಿಗಳೇ **ವಃ** ನಿಮ್ಮ **ಮಹಃ** ಅತಿಶಯವಾದ **ನಿಧೀನ್** ಬೃಹಸ್ಪತಿಯ ಗೋವುಗಳೆಂಬ ನಿಧಿಗಳನ್ನು **ಇಚ್ಛಂತೀ** ಕೊಂಡೊಯ್ಯಲು ಇಚ್ಛಿಸಿ ಬಂದಿರುವೆ **ನಃ** ನಮ್ಮ **ಅತಿಷ್ಕಂದೋ ಭಿಯಸಾ** ಸ್ವಾಮಿಯ ಭಯದಿಂದ **ತತ್** ಆ ನದಿಯ ನೀರು **ಆವತ್** ನಮ್ಮನ್ನು ಕಾಪಾಡಿತು **ತಥಾ** ಆದ್ದರಿಂದ **ರಸಾಯಾಃ** ನದಿಯ **ಪಯಾಂಸಿ** ನೀರನ್ನು **ಅತರಂ** ದಾಟಿದೆನು ಎಂದು ಉತ್ತರ ಕೊಟ್ಟಿತು ಹೀಗೆಯೇ ಮುಂದುವರೆದು **ಹತಾ ಇಂದ್ರೇಣ ಪಣಯಃ ಶಯಧ್ವಂ** ನೀವು




ಇಂದ್ರನಿಂದ ಹತರಾಗಿ ಮಲಗುವಿರಿ ಎಂದು ಹೇಳಿತು. ಅದನ್ನು ಕೇಳಿ ಹೆದರಿ ಸರ್ಪರೂಪದಲ್ಲಿ ಬಿಲದಲ್ಲಿ ಅಡಗಿಕೊಂಡಿರುವರೆಂದು ಅಭಿಪ್ರಾಯ. ।।೩೦।।

ಮಧ್ಯದಲ್ಲಿ ಪಣಿಗಳು ಪರಸ್ಪರ ಮಾತನಾಡಿಕೊಂಡು ಇಂದ್ರನನ್ನು ಹಿಂಸಿಸಲು ವಿಚಾರ ಮಾಡಿದಾಗ ಶುನಿಯು ಇಂದ್ರನ ಸಾಮರ್ಥ್ಯವನ್ನು ವಿವರಿಸಿ ಅವನು ನಿಮ್ಮಿಂದ ಹಿಂಸ್ಯನಲ್ಲ ಅವನೇ ನಿಮ್ಮನ್ನು ಹಿಂಸಿಸುವನು ಎಂದು ಹೇಳಿತು. ಆ ವಾಕ್ಯಗಳು '**ಕೀದೃಙ ಚಂದ್ರ ರಸಮೇ ಕಾದೃಶೀಕಾ ಯಸ್ಯೇದಂ ದೂತೀರಸರಃ ಪರಕಾತ್ । ಚಗಚ್ಛಾನ್ಮಿತ್ರಮೇನಾದಧಾ ಮಾಥಾಗವಾಂ ಕೋಪತಿರ್ನೋಽಭವಾತಿ । ನಾಹಂ ತಂ ವೇದ ದಭ್ಯಂದಭತ್ ಸಯಸ್ಯೇದ ದೂತಿರಸರಂ ಪರಾಕಾತ್ । ನ ತಂ ಗೋಹಂತಿ ಸ್ರವತೋ ಗಭೀರಾಹತಾ ಇಂದ್ರೇಣ ಪಣಯಃ ಶಯಧ್ವಂ । ಇಮಾ ಗಾವಃ ಸರಮೇಯಾ ಐಚ್ಛಾಃ ಪರಿದಿವೋ ಅಂತಾನ್ ಸುಭಗೇ ಪತಂತೀ । ಕಸ್ತ ಏನಾ ಅವಸೃಜಾದಯು ಧ್ವ್ಯಾತಾಕಮಯುಧಾ ಸಂತಿ ತಿಗ್ಮಾ ।।** ಮುಂತಾಗಿ.

## ಪಾತಾಲ

**ತತೋಽಧಸ್ತಾತ್ ಪಾತಾಲೇ ನಾಗಪತಯೋ ವಾಸುಕಿಪ್ರಮುಖಾಃ ಶಂಖಕುಲಿಕ ಮಹಾಶಂಖಶ್ವೇತಧನಂಜಯಧೃತರಾಷ್ಟ್ರಶಂಖಚೂಡ-ಕಂಬಲಾಶ್ವತರದೇವದತ್ತಾದಯೋ ಮಹಾಭೋಗಿನೋ ಮಹಾಮರ್ಷಾಃ ನಿವಸಂತಿ ಯೇಷಾಮುಹ ವೈ ಪಂಚಸಪ್ತದಶ ಶತಸಹಸ್ರಶೀರ್ಷಾಣಾಂ ಫಣಾಸುವಿರಚಿತಾ ಮಹಾಮಣಯೋ ರೋಚಿಷ್ಣವಃ ಪಾತಾಲವರತಿಮಿರನಿಕರಂ ಸ್ವರೋಚಿಷಾ ವಿಧಮಂತಿ ।।೩೧।।**

**ತತಃ ಅಧಸ್ತಾತ್** ರಸಾತಲದ ಕೆಳಗೆ **ಪಾತಾಲೇ** ಪಾತಾಳ ಲೋಕದಲ್ಲಿ **ವಾಸುಕಿ ಪ್ರಮುಖಾಃ** ವಾಸುಕಿ ಸರ್ಪವೇ ಮುಖ್ಯವಾಗಿವುಳ್ಳ ಶಂಖ, ಕುಲಿಕ, ಮಹಾಶಂಖ, ಶ್ವೇತ, ಧನಂಜಯ, ಧೃತರಾಷ್ಟ್ರ, ಶಂಖಚೂಡ, ಕಂಬಲ, ಅಶ್ವತರ, ದೇವತ್ತ ಇವರೇ **ಆದಯಃ** ಮೊದಲಾಗಿವುಳ್ಳ **ಮಹಾಭೋಗಿನಃ** ದೊಡ್ಡ ದೇಹವುಳ್ಳ **ಮಹಾಮರ್ಷಾಃ** ಬಹಳ ಕೋಪವುಳ್ಳ **ನಾಗಪತಯಃ** ಶ್ರೇಷ್ಠ ಸರ್ಪಗಳು **ನಿವಸಂತಿ** ವಾಸಿಸುತ್ತವೆ. **ಪಂಚ ಸಪ್ತದಶಶತಸಹಸ್ರಶೀರ್ಷಾಣಾಂ** ಐದು ಏಳು ಹತ್ತು ನೂರು ಸಾವಿರ ತಲೆಗಳುಳ್ಳ **ಯೇಷಾಂ** ಯಾವ ಸರ್ಪಗಳ **ಫಣಾಸು** ಹೆಡೆಗಳಲ್ಲಿ **ವಿರಚಿತಾಃ** ರಚನೆಮಾಡಿದ,

ವಿಶೇಷವಾಗಿ ಸಂಬದ್ಧವಾದ ಅಂದರೆ ಸ್ವಾಭಾವಿಕವಾದ **ರೋಚಿಷ್ಣವಃ** ಪ್ರಕಾಶಿಸುವ **ಮಹಾಮಣಯಃ** ದೊಡ್ಡರತ್ನಗಳನ್ನು **ಸ್ವರೋಚಿಷಾ** ತಮ್ಮ ಕಾಂತಿಯಿಂದ **ಪಾತಾಲ ವಿವರತಿಮಿರನಿಕರಂ** ಪಾತಲವೆಂಬ ಭೂವಿವರದ ಕತ್ತಲೆಯ ಸಮೂಹವನ್ನು **ವಿಧಮಂತಿ** ನಾಶ ಮಾಡುವವು. **ಶೀರ್ಷ್ಣಾಂ** ಎಂದು ಹೇಳದೇ **ಶೀರ್ಷಾಣಾಂ** ಎಂದು ಹೇಳಿದ್ದರಿಂದ ಇವರ ತಲೆಗಳು ಇತರ ಪುರುಷರ ತಲೆಗಳಗಿಂತ ವಿಲಕ್ಷಣಗಳೆಂದು ಸೂಚಿಸಿರುವರು. **ಶೀರ್ಷಾ** ಎಂಬ ಆಕಾರಾಂತ ಶಬ್ದವೂ ಇದೆ ಎಂದು ತೋರಿಸಿರುವರು. ॥೩೦॥

## ಪಾತಾಲದಲ್ಲಿ ಸಂಕರ್ಷಣದೇವರ ಮಹಿಮೆ

**ತಸ್ಯ ಮೂಲದೇಶೇ ತ್ರಿಂಶದ್ಯೋಜನಸಹಸ್ರಾಂತರೇ ಆಸ್ತೇ ಯಾ ವೈ ಕಲಾ ಭಗವತಸ್ತಾಮಸೀ ಸಮಾಖ್ಯಾತಾನಂತ ಇತಿ ಸಾತ್ವತಾ ಯದ್ ದ್ರಷ್ಟೃದೃಶ್ಯಯೋಃ ಸನ್ನಿಕರ್ಷಣಮಹಮಿತ್ಯಭಿಮಾನಲಕ್ಷಣಂ (ಯಂ) ಸಂಕರ್ಷಣಮಿತ್ಯಾಚಕ್ಷತೇ ॥೩೨॥**

**ತಸ್ಯ** ಪಾತಾಲ ಲೋಕದ **ಮೂಲದೇಶೇ** ಕೆಳಭಾಗದಲ್ಲಿ **ತ್ರಿಂಶದ್ಯೋಜನ-ಸಹಸ್ರಾಂತರೇ** ಮೂವತ್ತು ಸಾವಿರ ಯೋಜನ ದೂರದಲ್ಲಿ **ಯಾ** ಯಾವುದು **ಅನಂತ ಇತಿ ಸಮಾಖ್ಯಾತಾ** ಅನಂತ(ಶೇಷ) ಎಂದು ಕರೆಯಲ್ಪಟ್ಟಿದೆಯೋ **ಸಾ** ಆ **ಭಗವತಃ** ಶ್ರೀಹರಿಯ **ತಾಮಸೀ** ತಮೋಗುಣ ಕಾರ್ಯವಾದ ಸಂಹಾರ ಪ್ರವರ್ತಕವಾದ **ಕಲಾ** ಅಂಶದಿಂದ ಸನ್ನಿಹಿತವಾದ ರೂಪವು **ಯತ್** ಯಾವ ಸ್ವರೂಪವನ್ನು **ಸಾತ್ವತಾಃ** ಪಂಚರಾತ್ರಾಗಮಜ್ಞರು **ದ್ರಷ್ಟೃ** ಜೀವನ **ದೃಶ್ಯಯೋಃ** ಶರೀರ ಮೊದಲಾದ ಜಡ ಇವುಗಳ **ಸನ್ನಿಕರ್ಷಣಂ** ೧. ಸಾಮೀಪ್ಯವನ್ನುಂಟು ಮಾಡುವ ೨. ಚೆನ್ನಾಗಿ ಒಂದೇ ಎಂದು ಮಾಡುವ (ಅಭೇದ ಗ್ರಾಹಕವಾದ) **ಅಹಮಿತಿ** ದೇಹಾದಿಗಳನ್ನು ನಾನು ಎಂದು ಹೇಳುವ **ಅಭಿಮಾನಿ ಲಕ್ಷಣಂ** ಭ್ರಾಂತಿಯನ್ನು ಹುಟ್ಟಿಸುವ ನಾನೇ ಕರ್ತಾ ಎಂದು ಸ್ವಾತಂತ್ರ್ಯಾಭಿಮಾನಕ್ಕೆ ಕಾರಣವಾದ **ಸಂಕರ್ಷಣಂ** ಸಂಕರ್ಷಣನೆಂದೇ **ಆಚಕ್ಷತೇ** ಹೇಳುವರೋ ಆ ಕಲೆಯು **ಆಸ್ತೇ** ಇದೆ ಎಂದು **ವೈ** ಶಾಸ್ತ್ರ ಪ್ರಸಿದ್ಧವು.

ಅಂತೂ ಅಹಂನಾಡಿಯಲ್ಲಿದ್ದು ದೇಹಾದಿಗಳ್ಲಲಿ ಅಹಂ ಕರ್ತಾ ಎಂಬ ಅಭಿಮಾನಿ ಎಂದದ್ದರಿಂದ ಇದು ಸರಿಯಾದ ಜ್ಞಾನವಲ್ಲ ಭ್ರಮ ಎಂದಂತಾಯಿತು. ಈ ಸ್ವಾತಂತ್ರ್ಯಭ್ರಮವು ನಾನಾ ಯೋನಿಗಳಲ್ಲಿ ಹುಟ್ಟುವುದೇ ಮೊದಲಾದ ಅನರ್ಥ




ಕಾರಣವಾದ್ದರಿಂದ ಅದರ ನಿವೃತ್ತಿಗಾಗಿ ಸಂಕರ್ಷಣರೂಪೋಪಾಸನೆ ಮಾಡಬೇಕು. ಇದು ಮಿಶ್ರಸ್ತುತಿ. ಮುಖ್ಯವೃತ್ತಿಯಿಂದ ಶೇಷಾಂತರ್ಯಾಮಿ ಸಂಕರ್ಷಣ-ಪರವಾಗಿಯೂ ಅಮುಖ್ಯವಾಗಿ ಶೇಷದೇವರ ಪರವಾಗಿಯೂ ಯೋಜಿಸಬೇಕು. ಹಿಂದಿನಂತೆ ಅನಂತ ಬಲವಿರುವುದರಿಂದ ಅನಂತನೆಂದು ಕರೆಯುವರು ಎಂಬ ಅಭಿಪ್ರಾಯದಿಂದ ಅವನ ಬಲ ಅಪರಿಮಿತವೆಂದು ಹೇಳುವರು. ಶರಣಾಗತರಿಗೆ ಅನಂತಾಭೀಷ್ಟಪ್ರದ ಅನಂತಾನಿಷ್ಟ ನಿವರ್ತಕನಾದ್ದರಿಂದ ಅನಂತನೆಂದು ಉಪಾಸಿಸಲು ಅನಂತನ ಶಕ್ತಿಯನ್ನು ಪರಿಚಯಿಸುವರು.

**ಭೂಮಂಡಲವು ಅನಂತನ ಹೆಡೆಯ ಮೇಲ ಸಾಸುವೆಯಂತೆ ತೂರುವುದು**

**ತಸ್ಯೇದಂ ಕ್ಷಿತಿಮಂಡಲಂ ಭಗವತೋऽನಂತಮೂರ್ತೇಃ ಸಹಸ್ರಶಿರಸಃ ಏಕಸ್ಮಿನ್ನೇವ ಶೀರ್ಷಣಿ ಧ್ರಿಯಮಾಣಂ ಸಿದ್ಧಾರ್ಥ ಇವ ಲಕ್ಷ್ಯತೇ ॥೩೩॥**

**ತಸ್ಯ** ಆ **ಸಹಸ್ರಶಿರಸಃ** ಸಾವಿರ ಹೆಡೆಗಳುಳ್ಳ **ಅನಂತಮೂರ್ತೇಃ** ಅನಂತ ಬಲವುಳ್ಳ, ಶರೀರವುಳ್ಳ **ಭಗವತಃ** ಶ್ರೀಹರಿಯ ಸನ್ನಿಧಾನಯುತರಾದ ಶೇಷದೇವರ **ಏಕಸ್ಮಿನ್ನೇವ ಶೀರ್ಷಣಿ** ಒಂದೇ ಒಂದು ಹೆಡೆಯಲ್ಲಿ **ಧ್ರಿಯಮಾಣಂ** ಧರಿಸಲ್ಪಟ್ಟಿರುವ **ಕ್ಷಿತಿಮಂಡಲಂ** ಭೂಮಂಡಲವು **ಸಿದ್ಧಾರ್ಥ ಇವ ಲಕ್ಷ್ಯತೇ** ಸಾಸುವೆಯಂತೆ ತೋರುವುದು. ॥೩೩॥

ತಮೋಗುಣ ಕಾರ್ಯವನ್ನು ಹೇಳುತ್ತಾರೆ

**ಯಸ್ಯ ಹ ವಾ ಇದಂ ಕಾಲೇನೋಪಸಂಜಿಹೀರ್ಷತೋऽಮರ್ಷವಿರಚಿತ ರುಚಿರಭ್ರಮದ್‌ಭ್ರುವೋರಂತರೇಣ ಸಂಕರ್ಷಣೋ ನಾಮ ರುದ್ರ ಏಕಾದಶವ್ಯೂಹಸ್ತ್ರ್ಯಕ್ಷಸ್ತ್ರಿಶಿಖಂ ಶೂಲಮುತ್ತಂಭಯನ್ನುದತಿಷ್ಠತ್ ॥೩೪॥**

**ಕಾಲೇನ** ಪ್ರಳಯ ಕಾಲವು ಸಮೀಪಿಸಿದಾಗ **ಇದಂ** ಈ ಜಗತ್ತನ್ನು **ಉಪಸಂಜಿಹೀರ್ಷತಃ** ಸಂಹರಿಸಲಿಚ್ಛಿಸಿದ **ಯಸ್ಯ** ಯಾವ ಈ ಶೇಷದೇವರ **ಅಮರ್ಷವಿರಚಿತ** ಕ್ರೋಧದಿಂದ ಗಂಟು ಮಾಡಿದ **ರುಚಿರ** ಮನೋಹರಗಳಾದ **ಭ್ರಮದ್ ಭ್ರುವೋಃ** ಚಲಿಸುವ ಹುಬ್ಬುಗಳ **ಅಂತರೇಣ** ಮಧ್ಯದಿಂದ **ಏಕಾದಶವ್ಯೂಹಃ** ಹನ್ನೊಂದು ರೀತಿಯ ವಿಭಕ್ತರೂಪ ವಿಶೇಷಗಳುಳ್ಳ **ಸಂಕರ್ಷಣೋನಾಮ ರುದ್ರಃ** ಸಂಕರ್ಷಣನೆಂಬ ರುದ್ರದೇವರು **ತ್ರ್ಯಕ್ಷಃ ಸನ್** ಮೂರುಕಣ್ಣುಗಳುಳ್ಳವರಾಗಿ **ತ್ರಿಶಿಖಂ**

ಮೂರು ಕೊನೆಗಳಿರುವ **ಶೂಲಂ** ಶೂಲವನ್ನು **ಉತ್ತಂಭಯನ್** ಆಡಿಸುತ್ತ **ಉದತಿಷ್ಠತ್** ಹೊರಬಂದರು. **ಹ ವೈ** ಇದು ಪ್ರಸಿದ್ಧ. ||೩೪||

ಪೂಜ್ಯತೆಯನ್ನು ತಿಳಿಸುತ್ತಾರೆ

**ಯಸ್ಯಾಂಘ್ರಿಕಮಲಯುಗಲಾರುಣವಿಶದನಖಮಣಿಮಂಡಲೇಷ್ವಹಿಪತಯಃ ಸಹ ಸಾತ್ವತರ್ಷಭೈರೇಕಾಂತಭಕ್ತಿಯೋಗೇನಾವನಮಂತಃ ಸ್ವವದನಾನಿ ಪರಿಸ್ಫುರತ್ಕುಂಡಲ ಪ್ರಭಾ(ಮಂಡಲ)ಮಂಡಿತಗಂಡಸ್ಥಲಾನ್ಯತಿಮನೋಹರಾಣಿ ಪ್ರಮುದಿತಮನಸಃ ಕಿಲ ವಿಲೋಕಯಂತಿ ||೩೫||**

**ಯಸ್ಯ** ಯಾವ ಈ ಶೇಷದೇವರ **ಅಂಘ್ರಿಕಮಲಯುಗಲ** ಕಮಲದಂತಿರುವ ಪದಗಳ **ಅರುಣ** ಕೆಂಪಾದ **ವಿಶದ** ಶುದ್ಧವಾದ **ನಖಮಣಿಮಂಡಲೇಷು** ಉಗುರಗಳೆಂಬ ಮಣಿಗಳ ಸಮೂಹಗಳಲ್ಲಿ **ಸಾತ್ವತರ್ಷಭೈಃ ಸಹ** ಸಾತ್ವತ ಶ್ರೇಷ್ಠರೊಂದಿಗೆ **ಏಕಾಂತಭಕ್ತಿಯೋಗೇನ** ಅತಿಶಯ ಭಕ್ತಿಯಿಂದ **ಅವನಮಂತಃ** ಬಗ್ಗಿ ನಮಸ್ಕರಿಸುವ **ಅಹಿಪತಯಃ** ಸರ್ಪರಾಜರುಗಳು (ಪ್ರತಿಬಿಂಬಿತಗಳಾದ) **ಪರಿಸ್ಫುರತ್** ಹೊಳೆಯುವ **ಕುಂಡಲಪ್ರಭಾ(ಮಂಡಲ)ಮಂಡಿತ** ಕುಂಡಲಗಳ ಕಾಂತಿ ಸಮೂಹದಿಂದ ಭೂಷಿತವಾದ **ಗಂಡಸ್ಥಲಾನಿ** ಕೆನ್ನೆಗಳುಳ್ಳ **ಅತಿಮನೋಹರಾಣಿ** ಅತ್ಯಂತ ಸುಂದರಗಳಾದ **ಸ್ವವದನಾನಿ** ತಮ್ಮ ಮುಖಗಳನ್ನು **ಪ್ರಮುದಿತಮನಸಃ ಸಂತಃ** ಸಂತುಷ್ಟಮನಸ್ಕರಾಗಿ **ವಿಲೋಕಯಂತಿ ಕಿಲ** ನೋಡಿಕೊಳ್ಳುವರಷ್ಟೇ. ||೩೬||

**ಯಸ್ಯೈವ ಹಿ ನಾಗರಾಜಕುಮಾರ್ಯ ಆಶಿಷ ಆಶಾಸಾನಾಶ್ಚಾರ್ವಂಗ-ದವಲಯ ವಿಲಸಿತವಿಶದವಿಪುಲಧವಲಸುಭಗರುಚಿರಭುಜರಜತಸ್ತಂಭೇ-ಷ್ವಗರುಚಂದನಕುಂಕುಮ ಪಂಕಾನುಲೇಪೇನಾಲಿಂಪಮಾನಾಸ್ತದಭಿಮರ್ಶನೋ-ನ್ಮಥಿತಹೃದಯಮಕರಧ್ವಜಾವೇಶರುಚಿರ ಲಲಿತಸ್ಮಿತಾಸ್ತದನುರಾಗ-ಸಮುದಿತಾಮದವಿಘೂರ್ಣಿತಾವಲೋಕನಯನವದನಾರವಿಂದಂ ಸವ್ರೀಡಂ ಕಿಲ ವಿಲೋಕಯಂತಿ ||೩೬||**

**ಆಶಿಷಃ** ಅಭೀಷ್ಟಗಳನ್ನು **ಆಶಾಸಾನಾಃ** ಅಪೇಕ್ಷಿಸುವ **ನಾಗರಾಜಕುಮಾರ್ಯಃ** ನಾಗರಾಜ ಕುಮಾರಿಯರು **ಯಸ್ಯ** ಯಾವ ಈ ಶೇಷದೇವರ **ಚಾರು** ಸುಂದರವಾದ **ಅಂಗದ** ವಂಕಿ **ವಲಯ** ಬಳೆ(ಕಡಗ)ಗಳಿಂದ **ವಿಲಸಿತ** ಪ್ರಕಾಶಿಸುವ **ವಿಶದ**

 

ವಿಸ್ತಾರವಾದ **ವಿಪುಲ** ದೊಡ್ಡದಾದ **ಧವಲ** ಬೆಳ್ಳಗಿರುವ **ಸುಭಗ** ಸುಂದರವಾದ **ರುಚಿರ** ಮನೋಹರವಾದ **ಭುಜರಜತಸ್ತಂಭೇಷು** ಭುಜಗಳೆಂಬ ಬೆಳ್ಳಿಯ ಕಂಬಗಳಲ್ಲಿ **ಅಗರು ಚಂದನ** ಶ್ರೀಗಂಧ **ಕುಂಕುಮ** ಕೇಸರಿ ಇವುಗಳ **ಪಂಕ** ಕೆಸರಿನಂತೆ ಗಟ್ಟಿಯಾಗಿ ಕಲಿಸಿರುವ **ಅನುಲೇಪನ** ಮೈಗೆ ಹಚ್ಚಿಕೊಳ್ಳುವ ಗಂಧದಿಂದ **ಅವಲಿಂಪಮಾನಾಃ** ಹಚ್ಚುವವರಾಗಿ **ತದಭಿಮರ್ಶನ** ಆ ಭುಜಗಳನ್ನು ಮುಟ್ಟುವುದರಿಂದ **ಉನ್ಮಥಿತ** ವಿಕಾರಗೊಂಡ **ಹೃದಯ** ಮನಸ್ಸಿನಲ್ಲಿ ಉಂಟಾದ **ಮಕರಧ್ವಜಾವೇಶ** ಮನ್ಮಥಾವೇಶದಿಂದ **ರುಚಿರ** ಮನೋಹರವಾದ **ಲಲಿತ** ಸುಂದರವಾದ **ಸ್ಮಿತಾಃ** ಮಂದಹಾಸ ಉಳ್ಳವರಾಗಿ **ತದನುರಾಗ** ಆ ಶೇಷದೇವರಲ್ಲಿ ಪ್ರೇಮದಿಂದ **ಸಮುದಿತಾಃ** ಕೂಡಿದವರಾಗಿ **ಮದಾಘೂರ್ಣಿತ** ಮದದಿಂದ ಚಲಿಸಿದ **ಆ** ಸ್ವಲ್ಪ **ಅರುಣ** ಕೆಂಪಾದ **ಅವಲೋಕನ** ಕೃಪಾಕಟಾಕ್ಷದಿಂದ ಕೂಡಿದ **ನಯನ** ಕಣ್ಣುಗಳುಳ್ಳ **ವದನಾರವಿಂದಂ ಏವ** ಮುಖ ಕಮಲವನ್ನೇ **ಸವ್ರೀಡಂ** ನಾಚಿಕೆಯಿಂದ **ವಿಲೋಕಯಂತಿ ಕಿಲ** ನೋಡುವರಲ್ಲವೇ **ಹಿ** ಪ್ರಸಿದ್ಧವು. ।।೩೬।।

**ಸ ಏಷ(ವ) ಭಗವಾನನಂತೋऽನಂತಗುಣಾರ್ಣವ ಆದಿದೇವ ಉಪಸಂಹೃತಾಮರ್ಷ ರೋಷವೇಗೋ ಲೋಕಾನಾಂ ಸ್ವಸ್ತಯೇ ಆಸ್ತೇ ।।೩೭।।**

**ಅನಂತಗುಣಾರ್ಣವಃ** ಶೃಂಗಾರಾದಿ ಅನಂತ ಗುಣಗಳಿಂದ ತುಂಬಿದ **ಆದಿದೇವಃ** ಶ್ರೇಷ್ಠ ದೇವತೆಯಾದ **ಸಃ** ಅಂತಹ **ಭಗವಾನ್** ಪೂಜ್ಯರಾದ **ಅನಂತ ಏವ** ಶೇಷದೇವರೇ **ಉಪಸಂಹೃತಃ** ತಡೆಹಿಡಿದ **ಅಮರ್ಷ** ಅಸಹನೆ **ರೋಷ** ಕೋಪ ಇವುಗಳ **ವೇಗಃ** ವೇಗವುಳ್ಳವರಾಗಿ **ಲೋಕಾನಾಂ** ಜನರ **ಸ್ವಸ್ತಯೇ** ಕ್ಷೇಮಕ್ಕಾಗಿ **ಆಸ್ತೇ** ಇರುವರು. ।।೩೭।।

**ಧ್ಯಾಯಮಾನಃ ಸುರಾಸುರೋರಗಸಿದ್ಧಗಂಧರ್ವವಿದ್ಯಾಧರಮುನಿಗಣೈ-ರನವರತ ಮದಮುದಿತವಿಕೃತಿವಿಹ್ವಲಲೋಚನಃ ಸುಲಲಿತಮುಖರಿತಾಮೃತೇ-ನಾಪ್ಯಾಯಮಾನಃ ಸ್ವಪಾರ್ಷದವಿಬುಧಯೂಥಪತೀನಪರಿಮ್ಲಾನರಾಗ-ನವತುಲಸಿಕಾಮೋದಮಧ್ವಾಸವೇನ ಮಾದ್ಯನ್ಮಧುಕರವ್ರಾತಮಧುರಗೀತ-ಶ್ರಿಯಂ ವೈಜಯಂತೀಂ ಸ್ವಾಂ ವನಮಾಲಾಂ ನೀಲವಾಸಾ ಏಕಕುಂಡಲೋ ಹಲಕಕುದಿಕೃತಸುಭಗಸುಂದರಭುಜೋ ಭಗವಾನ್ ಮಾಹೇಂದ್ರೋ ವಾರಣೇಂದ್ರ ಇವ ಕಾಂಚನೀಂ ಕಕ್ಷ್ಯಾಂ ಉದಾರಲೀಲೋ ಬಿಭರ್ತಿ ।।೩೮।**

**ಸುರ** ದೇವತೆಗಳು **ಅಸುರ** ದೈತ್ಯರು **ಉರಗ** ಸರ್ಪಗಳು **ಸಿದ್ಧರು ಗಂಧರ್ವರು ವಿದ್ಯಾಧರರು ಮುನಿಗಣೈಃ** ಋಷಿಗಳು ಇವರುಗಳ ಸಮೂಹದಿಂದ **ಧ್ಯಾಯಮಾನಃ** ಧ್ಯಾನಿಸಲ್ಪಡುವ **ಅನವರತ** ಯಾವಾಗಲೂ ಮದಮತ್ತತೆಯಿಂದ **ಮುದಿತ** ಸಂತುಷ್ಟನು **ವಿಕೃತಿವಿಹ್ವಲಲೋಚನಃ ಚ** ವಿಕಾರವಾದ ಕಾತರತೆಯಿಂದ ಕೂಡಿದ ಕಣ್ಣುಗಳುಳ್ಳವನೂ ಆದ **ಸುಲಲಿತಂ** ಸುಂದರವಾದ **ಮುಖರಿತಾಮೃತೇನ** ವಚನಾಮೃತದಿಂದ **ಸ್ವಪಾರ್ಷದ** ತನ್ನ ದ್ವಾರಪಾಲಕರಾದ **ವಿಬುಧಯೂಥಪತೀನ್** ದೇವತಾಗಣಗಳ ನಾಯಕರನ್ನು **ಆಪ್ಯಾಯಮಾನಃ** ಸಂತೋಷಪಡಿಸುವ **ನೀಲವಾಸಾಃ** ನೀಲಾಂಬರಧಾರಿಯಾದ **ಏಕ ಕುಂಡಲಃ** ಒಂದೇ ಕುಂಡಲ ಧರಿಸಿರುವ **ಹಲಕಕುದಿ** ತನ್ನ ಆಯುಧವಾದ ನೇಗಲಿನ ಕೊನೆಯಲ್ಲಿ **ಕೃತ** ಇಟ್ಟಿರುವ **ಸುಭಗ** ಶೋಭನವಾದ **ಸುಂದರ** ಮನೋಹರವಾದ **ಭುಜಃ** ಭುಜವುಳ್ಳ **ಉದಾರಲೀಲಃ** ಉತ್ತಮ ಲೀಲೆಯುಳ್ಳ **ಭಗವಾನ್** ಶೇಷದೇವರು **ಮಾಹೇಂದ್ರಃ** ಇಂದ್ರನ **ವಾರಣೇಂದ್ರಃ** ಗಜಶ್ರೇಷ್ಠವಾದ ಐರಾವತವು **ಕಾಂಚನೀಂ** ಬಂಗಾರದ **ಕಕ್ಷ್ಯಾಂ ಇವ** ಹೊಟ್ಟೆಯ ಪಟ್ಟೆಯನ್ನು ಹೊಂದಿರುವಂತೆ **ಅಪರಿಮಾನರಾಗ** (ಒಣಗದಿರುವ) ಕಳೆಗುಂದದ ಕಾಂತಿಯುಳ್ಳ **ನವತುಲಸಿಕಾ** ಹೊಸ ತುಳಸಿದಳಗಳ **ಆಮೋದ** ಸುವಾಸನೆಯುಳ್ಳ **ಮಧ್ವಾಸವೇನ** ಮಧುರ ರಸದಿಂದ **ಮಾದ್ಯತ್** ಮದಿಸಿದ **ಮಧುಕರವ್ರಾತ** ದುಂಬಿಗಳ ಸಮೂಹದಿಂದ **ಮಧುರಗೀತಶ್ರಿಯಂ** ಇಂಪಾದ ಝೇಂಕಾರ ಶಬ್ದದ ಸಂಪತ್ತುಳ್ಳ **ಸ್ವಾಂ** ತಮ್ಮ **ವೈಜಯಂತೀಂ ವನಮಾಲಾಂ** ವೈಜಂತಿ ಎಂಬ ಪಾದಾವಲಂಬಿಯಾದ ಎಲ್ಲ ಋತುಗಳಲ್ಲಿಯ ಪುಷ್ಪಗಳಿಂದ ನಿರ್ಮಿತವಾದ ಮಧ್ಯದಲ್ಲಿ ಕದಂಬದಿಂದ ಶೋಭಿಸುವ ವನಮಾಲೆಯನ್ನು **ಭಿಭರ್ತಿ** ಧರಿಸಿರುವನು(ರು). ।।೭೮।।

**ಯ ಏಷಃ ಏವಮನುಶ್ರುತೋಽಭಿಧ್ಯಾಯಮಾನೋ ಮುಮುಕ್ಷೂಣಾ-
ಮನಾದಿ ಕಾಲಕರ್ಮವಾಸನಾಗ್ರಥಿತಮವಿದ್ಯಾಮಯಂ ಹೃದಯಗ್ರಂಥಿಂ
ಸತ್ವರಜಸ್ತಮೋಮಯ ಮಂತರ್ಹೃದಯಂ ಗತ ಆಶು ನಿರ್ಭಿನತ್ತಿ ।।೭೯।।**

**ಯಃ ಏಷಃ** ಯಾವ ಈ ಶೇಷದೇವರು **ಏವಂ** ಮೇಲೆ ಹೇಳಿದಂತೆ **ಅನುಶ್ರುತಃ** ಭಕ್ತಿಯಿಂದ ಶ್ರವಣ ಮಾಡಲ್ಪಟ್ಟವರಾಗಿ **ಅಭಿಧ್ಯಾಯಮಾನಃ** ಭಕ್ತಿಯಿಂದ ಮನನ ಧ್ಯಾನ ಮಾಡಲ್ಪಟ್ಟವರಾಗಿ **ಅಂತರ್ಹೃದಯಂ ಗತಃ** ಮನಸ್ಸಿನಲ್ಲಿದ್ದು **ಮುಮುಕ್ಷೂಣಾಂ** ಮುಕ್ತಿಯೋಗ್ಯ ಸಾಧಕರ **ಅನಾದಿಕಾಲಕರ್ಮವಾಸನಾಗ್ರಥಿತಂ** ಅನಾದಿ ಕಾಲದ




ಕರ್ಮ ಸಂಸ್ಕಾರದಿಂದ ಬಿಟ್ಟುಗೊಡದ **ಸತ್ವರಜಸ್ತಮೋಮಯಂ** ಸತ್ವರಜಸ್ತಮೋಗುಣಾತ್ಮಕವಾದ **ಅವಿದ್ಯಾಮಯಂ** ಪ್ರಾಕೃತವಾದ ಶ್ರೀಹರಿಯ ಇಚ್ಛೆಯಿಂದ ಬಂದ **ಹೃದಯಗ್ರಂಥಿಂ** ಮನಸ್ಸಿನಲ್ಲಿರುವ ಅಜ್ಞಾನಮಿಥ್ಯಾಜ್ಞಾನಗಳನ್ನು **ಆಶು** ಬೇಗನೇ **ಭಿನತ್ತಿ** ನಾಶ ಮಾಡುವರು. ॥೬೯॥

**ತಸ್ಯಾನುಭಾವಮಿಮಂ ಭಗವಾನ್ ಸ್ವಾಯಂಭುವೋ ನಾರದಃ ಸಹ ತುಂಬುರುಣಾ ಸಭಾಯಾಂ ಬ್ರಹ್ಮಣಃ ಸಂಶ್ಲೋಕಯಾಮಾಸ ॥೪೦॥**

**ತಸ್ಯ** ಅಂತಹ ಶೇಷದೇವರ ಮತ್ತು ಅವರ ಅಂತರ್ಯಾಮಿ ಸಂಕರ್ಷಣರೂಪಿ ಶ್ರೀಹರಿಯ **ಇಮಂ** ಮುಂದೆ ಹೇಳುವ **ಅನುಭಾವಂ** ಮಹಿಮೆಯನ್ನು **ಸ್ವಾಯಂಭುವಃ** ಬ್ರಹ್ಮದೇವರ ಮಕ್ಕಳಾದ **ನಾರದಃ** ನಾರದರು **ತುಂಬುರುಣಾ ಸಹ** ತುಂಬುರು ಗಂಧರ್ವರೊಂದಿಗೆ **ಬ್ರಹ್ಮಣಃ** ಬ್ರಹ್ಮದೇವರ **ಸಭಾಯಾಂ** ಸಭೆಯಲ್ಲಿ **ಸಂಶ್ಲೋಕಯಾಮಾಸ** ಪದ್ಯರೂಪವಾಗಿ ಹಾಡಿದರು. ॥೪೦॥

ತಾತ್ಪರ್ಯ - ''ಇಲಾವೃತಸ್ಥಸ್ತುತಿವತ್
ಪಾತಾಲಮೂಲಸ್ಥಸ್ತುತಿರ್ಯೋಽಜನಿಯಾಽನಂತ ವಿಷಯಾ ॥ ''

ಇಲ್ಲಿ ಶೇಷದೇವರಿಗೆ ಅನಂತಗುಣಪೂರ್ಣತ್ವ, ಸೃಷ್ಟ್ಯಾದಿಕಾರಣತ್ವ ಹೇಳುವುದು ಅವರಲ್ಲಿ ಅಸಂಭಾವಿತ ಕಾರಣ ಇಲಾವೃತಸ್ಥ ಅನಂತನಿಗೆ ರುದ್ರದೇವರು ಹೇಳಿದಂತೆ ಪಾತಾಲಮೂಲಸ್ಥ ಶೇಷ ತದಂತರ್ಗತ ಶ್ರೀಹರಿಪರವೆಂದು ತಿಳಿಯಬೇಕು. ಹಿಂದೆ ಹೇಳಿದ **ಜೀವವ್ಯಪೇಕ್ಷಯಾ ಚೈವ ತಥಾಂತರ್ಯಾಮ್ಯಪೇಕ್ಷಯಾ** ಎಂಬ ಪ್ರಮಾಣವನ್ನೇ ಇಟ್ಟುಕೊಳ್ಳಬೇಕು.

ಶ್ರೀಹರಿಯ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ರೂಪಗಳಲ್ಲಿ ಎರಡನೆಯ ರೂಪ ಶೇಷದೇವರಲ್ಲಿ ವಿಶೇಷ ಸನ್ನಿಹಿತವಾಗಿರುವುದರಿಂದ ಆ ರೂಪಕ್ಕೆ ಯೋಗ್ಯವಾದ ಗುಣಗಳನ್ನು ಶೇಷದೇವರ ಸ್ತುತಿಯಲ್ಲಿಯೇ ಸೇರಿಸಿ ಹೇಳುತ್ತಾರೆ

**ಉತ್ಪತ್ತಿಸ್ಥಿತಿಲಯಹೇತವೋಽಸ್ಯ ಕಲ್ಪಾಃ**
**ಸತ್ವಾದ್ಯಾಃ ಪ್ರಕೃತಿಗುಣಾಃ ಯದೀಕ್ಷಯಾಽಸನ್ ॥**
**ಯದ್ರೂಪಂ ಧ್ರುವಮಕೃತಂ ಯದೇಕಮಾತ್ಮ-**
**ನ್ನಾನಾಧಾತ್ಕಥಮುಹ ವೇದ ತಸ್ಯ ವರ್ತ್ಮ ॥೪೧॥**

**ಅಸ್ಯ** ಈ ಜಗತ್ತಿನ **ಉತ್ಪತ್ತಿಸ್ಥಿತಿಲಯಹೇತವಃ** ಜನ್ಮ, ಸ್ಥಿತಿ, ಲಯಗಳಿಗೆ ಕಾರಣಗಳಾದ **ಸತ್ತ್ವಾದ್ಯಾಃ ಪ್ರಕೃತಿಗುಣಾಃ** ಸತ್ತ್ವ ಮೊದಲಾದ ಪ್ರಕೃತಿಗುಣಗಳು **ಯದೀಕ್ಷಯಾ** ಯಾವ ಶೇಷಾಂತರ್ಯಾಮಿ ಸಂಕರ್ಷಣರೂಪಿಯ ಕೃಪಾದೃಷ್ಟಿಯಿಂದ **ಕಲ್ಪಾಃ** ತಮ್ಮ ತಮ್ಮ ಕೆಲಸ ಮಾಡುವಲ್ಲಿ ಸಮರ್ಥವಾಗಿ **ಆಸನ್** ಆದವು **ಯದ್ರೂಪಂ** ಯಾವನ ರೂಪವು **ಧ್ರುವಂ** ನಾಶರಹಿತವು **ಅಕೃತಂ** ಅನಾದಿಯೋ **ಯತ್** ಯಾವುದು **ಏಕಂ** ಭೇದ ರಹಿತವು **ಆತ್ಮನ್(ನಿ)** ತನ್ನಲ್ಲಿ **ನಾನಾ** ನಾನಾ ವಿಧವಾದ ಜಗತ್ತನ್ನು **ಆಧಾತ್** ಧರಿಸಿರುವುದು **ತಸ್ಯ** ಅಂತಹ ಶೇಷಾಂತರ್ಯಾಮಿ ಸಂಕರ್ಷಣರೂಪಿಯ **ವರ್ತ್ಮ** ತತ್ತ್ವವನ್ನು **ಕಥಂ ಉ** ಹೇಗೆ ತಾನೆ **ವೇದ ಹ** ತಿಳಿದೀತು? ಸರ್ವಥಾ ತಿಳಿಯಲಾರದೆಂದರ್ಥ. ।।೪೧।।

**ಮೂರ್ತಂ ಯಃ ಪುರುಕೃಪಯಾ ಬಭಾರ ಸತ್ತ್ವಂ**
**ಸಂಶುದ್ಧಂ ಸದಸದಿದಂ ವಿಭಾತಿ ಯತ್ರ ।**
**ಯಲ್ಲೀಲಾಂ ಮೃಗಪತಿರಾದದೇಽನವದ್ಯಾ-**
**ಮಾದಾತುಂ ಸ್ವಜನಮನಾಂಸ್ಯುದಾರವೀರ್ಯಃ ।।೪೨।।**

**ಯತ್ರ** ಯಾವ ಶ್ರೀಹರಿಯಲ್ಲಿ **ಇದಂ** ಈ **ಸದಸತ್** ಕಾರಣಕಾರ್ಯಾತ್ಮಕ ಜಗತ್ತು **ವಿಭಾತಿ** ಪ್ರಕಾಶಿಸುವುದೋ **ಯಃ** ಯಾವನು **ಪುರುಕೃಪಯಾ** ನಮ್ಮ ಮೇಲಿನ ಬಹುದಯೆಯಿಂದ **ಸತ್ತ್ವಂ** ಬಲಜ್ಞಾನಗಳೆರಡು ಕೂಡಿಕೊಂಡಿರುವ ಸ್ವರೂಪದ ಆದ್ದರಿಂದಲೇ **ಸಂಶುದ್ಧಂ** ದೋಷರಹಿತವಾದ **ಮೂರ್ತಂ** ನಮ್ಮ ಬುದ್ಧಿಗೆ ತಿಳಿಯಲನುಕೂಲವಾಗುವಂತೆ ಪರಿಚ್ಛಿನ್ನ ಪರಿಮಾಣದ ಅವತಾರ ರೂಪಗಳನ್ನು **ಬಭಾರ** ಧರಿಸಿದನೋ **ಉದಾರವೀರ್ಯಃ** ಅತಿಶಯ ಪರಾಕ್ರಮವುಳ್ಳ **ಮೃಗಪತಿಃ** ಸಿಂಹವು **ಸ್ವಜನಾನಾಂ** ತನ್ನವರ **ಮನಾಂಸಿ** ಮನಸ್ಸುಗಳನ್ನು **ಆದಾತುಂ** ವಶಪಡಿಸಿಕೊಳ್ಳಲು **ಅನವದ್ಯಾಂ** ನಿರ್ದೋಷವಾದ **ಯಲ್ಲೀಲಾಂ** ಯಾವನ ಶೌರ್ಯ ಮೊದಲಾದ ಕ್ರೀಡೆಯನ್ನು **ಆದದೇ** ಅಭ್ಯಾಸ ಮಾಡಿತೋ ಅಂಥಹ ಅವನ ತತ್ತ್ವವನ್ನು ಹೇಗೆ ತಿಳಿದಾರು? ಎಂದು ಹಿಂದೆ ಅನ್ವಯ. ಇಲ್ಲಿ ಮೂರ್ತಂ (ಆತ್ಮನ್ನಾನಾಧಾತ್) ಎಂಬುದಕ್ಕೆ ತನ್ನಿಂದ ಅಭಿನ್ನವಾದ ಮತ್ಸ್ಯ ಮೊದಲಾದ ನಾನಾ ಅವತಾರಗಳನ್ನು ಧರಿಸಿದನೆಂದೂ ಅವು ಅನಾದಿನಿತ್ಯಗಳೆಂದೂ ಅರ್ಥವು ತಿಳಿದುಬರುವುದು. ।।೪೨।।




ಮುಮುಕ್ಷುಗಳಿಗೆ ಇವನ ಸೇವೆ ಅನಾಯಾಸ ಸಾಧ್ಯವೆಂದು ಹೇಳುವರು

**ಯನ್ನಾಮಶ್ರುತಮನುಕೀರ್ತಯೇದಕಸ್ಮಾ-**
**ದಾರ್ತೋ ವಾ ಯದಿ ಪತಿತಃ ಪ್ರಲೋಭನಾದ್ವಾ ।**
**ಹಂತ್ಯಂಹಃ ಸಪದಿ ನೃಣಾಮಶೇಷಮನ್ಯಂ**
**ಕಂ ಶೇಷಾದ್ಭಗವತ ಆಶ್ರಯೇನ್ಮುಮುಕ್ಷುಃ ॥೪೩॥**

**ಅಕಸ್ಮಾತ್** ಆಕಸ್ಮಿಕವಾಗಿ **ಶ್ರುತಂ ಚೇತ್** ಕೇಳಲ್ಪಟ್ಟದ್ದೇ ಆದರೆ **ಆರ್ತಃ ವಾ** ದುಃಖಿತನಾದವನಾದರೂ **ಯದಿ ಪತಿತಃ** ಧರ್ಮ ಭ್ರಷ್ಟನಾದರೂ **ಪ್ರಲೋಭನಾತ್ ವಾ** ಇನ್ನೊಬ್ಬರನ್ನು ಉಪಹಾಸ ಮಾಡುವುದಕ್ಕಾಗಿಯಾಗಲಿ **ಅನುಕೀರ್ತಯೇತ್ ಚೇತ್** ಭಕ್ತಿಯಿಂದ ಹೇಳಿದ್ದೇ ಆದರೆ **ಯನ್ನಾಮ** ಯಾವ ಹೆಸರು **ನೃಣಾಂ** ಮನುಷ್ಯರ **ಅಶೇಷಂ ಅಂಹಃ** ಎಲ್ಲ ಪಾಪಗಳನ್ನು **ಸಪದಿ** ತಕ್ಷಣ **ಹಂತಿ** ಕಳೆಯುವುದು **ತಸ್ಮಾತ್** ಆದ್ದರಿಂದ ಅಂತಹ **ಭಗವತಃ** ಸಮಸ್ತ ಐಶ್ವರ್ಯಸಂಪನ್ನನಾದ **ಶೇಷಾತ್** ಶೇಷಾಂತರ್ಯಾಮಿ ಶ್ರೀಹರಿಯಿಂದ **ಅನ್ಯಂ ಕಂ** ಬೇರೆ ಯಾರನ್ನು **ಮುಮುಕ್ಷುಃ** ಮೋಕ್ಷಾಪೇಕ್ಷಿಯು **ಆಶ್ರಯೇತ್** ಆಶ್ರಯಿಸಿಯಾನು? ಮೋಕ್ಷಾಪೇಕ್ಷಿಗಳು ಶ್ರೀಹರಿಯನ್ನೇ ಆಶ್ರಯಿಸಬೇಕೆಂದರ್ಥ. ಇಲ್ಲಿ **ಅಹಂ ಭೋಗಪ್ರದೋ ವತ್ಸ ಮೋಕ್ಷದಸ್ತು ಜನಾರ್ದನಃ** ಎಂಬ ರುದ್ರದೇವರ ವಚನವನ್ನು ಸ್ಮರಿಸಬಹುದಾಗಿದೆ. ॥೪೩॥

ಉದಾರ ವೀರ್ಯವನ್ನೇ ಉಪಪಾದಿಸುವರು

**ಮೂರ್ಧನ್ಯರ್ಪಿತಮಣುವತ್ಸಹಸ್ರಮೂರ್ಧ್ನೋ**
**ಭೂಗೋಲಂ ಸಗಿರಿಸರಿತ್ಸಮುದ್ರಸತ್ತ್ವಮ್ ।**
**ಆನಂತ್ಯಾದವಿದಿತವಿಕ್ರಮಸ್ಯ ಭೂಮ್ನಃ**
**ಕೋ ವೀರ್ಯಾಣ್ಯಪಿ ಗಣಯೇತ್ಸಹಸ್ರಜಿಹ್ವಃ ॥೪೪॥**

**ಸಹಸ್ರಮೂರ್ಧ್ನಃ** ಸಾವಿರ ತಲೆಗಳುಳ್ಳ ಈ ಶೇಷಾಂತರ್ಯಾಮಿ ಶ್ರೀಹರಿಯ **ಮೂರ್ಧನಿ** ಒಂದು ತಲೆಯಲ್ಲಿ **ಅರ್ಪಿತಂ** ಇರುವ **ಗಿರಿ** ಬೆಟ್ಟ **ಸರಿತ್** ನದಿಗಳು **ಸಮುದ್ರ** ಸಮುದ್ರಗಳು ಮತ್ತು **ಸತ್ವಂ** ಅಲ್ಲಿ ವಾಸಿಸುವ ಪ್ರಾಣಿಗಳಿಂದ ಸಹಿತವಾದ **ಭೂಗೋಲಂ** ಭೂಮಂಡಲವು **ಅಣುವತ್** ಪರಮಾಣುವಿನಂತೆ ಹಗುರವಾಗಿದೆ.

**ಆನಂತ್ಯಾತ್** ಅನಂತವಾದುದರಿಂದ **ಅವಿದಿತವಿಕ್ರಮಸ್ಯ** ಸಂಪೂರ್ಣವಾಗಿ ತಿಳಿಯಲಾಗದ ಪರಾಕ್ರಮವುಳ್ಳ **ಭೂಮ್ನಃ** ಪೂರ್ಣನಾದ **ತಸ್ಯ** ಆ ಶೇಷಾಂತರ್ಯಾಮಿ ಶ್ರೀಹರಿಯ **ವೀರ್ಯಾಣಿ** ಪರಾಕ್ರಮಗಳನ್ನು **ಸಹಸ್ರಜಿಹ್ವಃ ಅಪಿ** ಸಾವಿರ ನಾಲಿಗೆಯುಳ್ಳವನಾದರೂ **ಕಃ ಗಣಯೇತ್** ಯಾವನು ಎಣಿಸಿಯಾನು? ಶೇಷನು ತನ್ನ ಅಂತರ್ಯಾಮಿಯ ಎಲ್ಲ ಪರಾಕ್ರಮಗಳನ್ನು ಅರಿಯಲಾರನೆಂದು ತಾತ್ಪರ್ಯ. ಸಹಸ್ರಜಿಹ್ವರು ಅವರೇ ತಾನೇ. ।।೪೪।।

**ಏವಂ ಪ್ರಭಾವೋ ಭಗವಾನನಂತೋ**
**ದುರಂತವೀರ್ಯಃ ಸ್ವಗುಣಾನುಭಾವಃ ।**
**ಮೂಲೇ ರಸಾಯಾ ಸ್ಥಿತ ಆತ್ಮತಂತ್ರೋ**
**ಯೋ ಲೀಲಯಾ ಕ್ಷ್ಮಾಂ ಸ್ಥಿತಯೇ ಬಿಭರ್ತಿ ।।೪೫।।**

**ಏವಂ ಪ್ರಭಾವಃ** ಈ ಬಗೆಯ ಸಾಮರ್ಥ್ಯವುಳ್ಳ **ದುರಂತವೀರ್ಯಃ** ಕೊನೆಯಿಲ್ಲದ ಪರಾಕ್ರಮವುಳ್ಳ **ಸ್ವಗುಣಾನುಭಾವಃ** ತನ್ನ ಗುಣಗಳನ್ನೇ ಅನುಭವಿಸುವ ತನ್ನ ಗುಣಗಳ ಸಾಮರ್ಥ್ಯವುಳ್ಳ **ಆತ್ಮತಂತ್ರಃ** ಸ್ವತಂತ್ರನಾದ (ತನ್ನ ಅಧೀನನಾದ) **ಭಗವಾನ್ ಅನಂತಃ** ಐಶ್ವರ್ಯಶಾಲಿಯಾದ ಅನಂತನು **ರಸಾಯಾಃ** ಭೂಮಿಯ **ಮೂಲೇ** ಆಧಾರವಾದ ಕೆಳಭಾಗದಲ್ಲಿ **ಸ್ಥಿತಃ ಸನ್** ಇರುವವನಾಗಿ **ಸ್ಥಿತಯೇ** ಜಗತ್ತಿನ ಸ್ಥಿತಿಗಾಗಿ **ಕ್ಷ್ಮಾಂ** ಭೂಮಿಯನ್ನು **ಬಿಭರ್ತಿ** ಧರಿಸಿರುವನು. ।।೪೫।।

ಪರೀಕ್ಷಿತರ ಪ್ರಶ್ನೆಗೆ ಉತ್ತರವನ್ನು ಮುಗಿಸುತ್ತಾರೆ

**ಏತಾ ಹ್ಯೇವೇಹ ನೃಭಿರುಪಗಂತವ್ಯಾ ಗತಯೋ ಯಥಾಕರ್ಮವಿನಿರ್ಮಿತಾ ಯಥೋಪದೇಶಮನುವರ್ಣಿತಾಃ ।।೪೬।।**

**ನೃಭಿಃ** ಕರ್ಮ ಮಾಡುವ ಜೀವರಿಂದ **ಉಪಗಂತವ್ಯಾಃ** ಕರ್ಮಫಲವಾಗಿ (ನಿಷಿದ್ಧಕರ್ಮ ಬಿಟ್ಟು) ಹೊಂದಬಹುದಾದ **ಗತಯಃ** ಲೋಕಗಳು **ಯಥಾಕರ್ಮ** ಅವರವರ ಕರ್ಮಕ್ಕೆ ತಕ್ಕಂತೆ **ವಿನಿರ್ಮಿತಾಃ** ತರತಮಭಾವದಿಂದ ನಿರ್ಮಿತವಾಗಿರುವುವು **ತಾಃ** ಅವು **ಯಥೋಪದೇಶಂ** ವೇದವ್ಯಾಸದೇವರು ನನಗೆ ಉಪದೇಶಿಸಿದಂತೆಯೇ **ಉಪವರ್ಣಿತಾಃ** ನಿನಗೆ ವಿಸ್ತರಿಸಲ್ಪಟ್ಟಿತು. **ಏವ** ಶಬ್ದದಿಂದ ನಿಷಿದ್ಧಕರ್ಮದಿಂದ ಹೊಂದುವ ಲೋಕವನ್ನು ಬಿಟ್ಟು ಎಂದು ಅನ್ಯವ್ಯವಚ್ಛೇದ ತಿಳಿಯಬೇಕು. **ಹಿ** ಪ್ರಸಿದ್ಧ . ।।೪೬।।




ಉತ್ತಮವಾದ ಮುಕ್ತಿಯೂ ಇರುವುದರಿಂದ ಕರ್ಮ ಮಾಡುವ ಜೀವರಿಂದ ಕರ್ಮಫಲವಾಗಿ ಹೊಂದಬಹುದಾದ ಫಲವು ಇಷ್ಟೇ ಎಂದು ಹೇಳಿದ್ದು ಹೇಗೆ ಎಂದರೆ ಹೇಳುತ್ತಾರೆ

**ಕಾಮಾನ್ ಕಾಮಯಮಾನಸ್ಯೈತಾವತ್ಯೋ ಹಿ ರಾಜನ್ ಪುಂಸಃ ಪ್ರವೃತ್ತಿಲಕ್ಷಣಸ್ಯ ಧರ್ಮಸ್ಯ ವಿಪಾಕಗತಯ ಉಚ್ಚಾವಚಾ ವಿಸದೃಶಾ ಯಥಾಪ್ರಶ್ನಂ ವ್ಯಾಖ್ಯಾತಾಃ ಕಿಮನ್ಯತ್ಕಥಯಾಮ ಇತಿ ।।೪೭।।**

**ಕಾಮಾನ್** ಸ್ವರ್ಗಾದಿಗಳನ್ನು **ಕಾಮಯಮಾನಸ್ಯ** ಇಚ್ಛಿಸುವ **ಪುಂಸಃ** ಜೀವನ **ಪ್ರವೃತ್ತಿಲಕ್ಷಣಸ್ಯ** ಸಕಾಮ ಕರ್ಮದ **ಧರ್ಮಸ್ಯ** ಪುಣ್ಯದ **ವಿಪಾಕಗತಯಃ** ಫಲಗಳಾದ ಲೋಕಗಳು **ಉಚ್ಚಾವಚಾಃ** ಉತ್ತಮ ಮಧ್ಯಮಗಳಾದ್ದರಿಂದ **ವಿಸದೃಶಾಃ** ಬೇರೆ ಬೇರೆ ರೀತಿಯ ಸದೃಶವಲ್ಲದವು **ಏತಾವತ್ಯೋಹಿ** ಇವಷ್ಟೇ ಎಂದು ಶಾಸ್ತ್ರ ಪ್ರಸಿದ್ಧವು. ಅವು **ಯಥಾಪ್ರಶ್ನಂ** ನಿನ್ನ ಪ್ರಶ್ನೆಗನುಗುಣವಾಗಿ **ವ್ಯಾಖ್ಯಾತಾಃ** ವಿವರಿಸಲ್ಪಟ್ಟವು **ಅನ್ಯತ್** ಬೇರೆ **ಕಿಂ** ಏನನ್ನು **ಕಥಯಾಮಃ** ಹೇಳೋಣ? ।।೪೭।।

**ಕಾಮಾನ್** ಎಂದು ಇಷ್ಟೇ ಹೇಳಿದರೇ ಮುಕ್ತಿಯು ಇಚ್ಛಾವಿಷಯವಾದ್ದರಿಂದ ಕಾಮಾನ್ ಎಂಬ ಸಾಧಾರಣ ಶಬ್ದಕ್ಕೆ ವಿಷಯವಾಗುವುದು. ಅದನ್ನು ಪರಿಹರಿಸಲು ಪ್ರವೃತ್ತಿಲಕ್ಷಣಸ್ಯ ಎಂದು ಹೇಳಿದ್ದಾರೆ. ಮುಕ್ತಿಯು ನಿವೃತ್ತಿಲಕ್ಷಣವಾದ್ದರಿಂದ ಇಲ್ಲಿ ಅದನ್ನು ಸ್ವೀಕರಿಸುವಂತಿಲ್ಲ. ಕೇವಲ ಸ್ವರ್ಗಾದಿಕಾಮಗಳು ಮಾತ್ರ ಇಲ್ಲಿ ವಿಷಯ. **ವಿಸದೃಶ** ಎಂಬುದರಿಂದ ಇಲ್ಲಿ ಹೇಳಿದ ಸ್ವರ್ಗಾದಿಗಳಿಗೆ ಸಮಾನ ಲಕ್ಷಣವಿಲ್ಲವೆಂದು ತಿಳಿಸಿದಂತಾಯಿತು. ಇದರಿಂದ ಹೇಳಿದ ಲೋಕ ವಿಭಾಗದ ಉಪಯೋಗವು ಹೇಳಿದಂತಾಯಿತು. **ಯಥಾಪ್ರಶ್ನಂ** ಎಂದದ್ದರಿಂದ ಹೇಳಬೇಕಾದ ಅಂಶ ಉಳಿದಿದೆ ಎಂದು ಸೂಚಿಸಿ ಆ ಬಹ್ವಂಶದಲ್ಲಿ ಯಾವುದನ್ನು ಹೇಳಬೇಕೆಂದು ನೀನು ಕೇಳುವಿಯೋ ಅದಕ್ಕೆ ಉತ್ತರ ಹೇಳುವೆನೆಂಬುದನ್ನು **ಕಿಮನ್ಯತ್** ಎಂಬುದರಿಂದ ತೋರಿಸಿರುವರು.

**।। ಇಪ್ಪತ್ತೂರನೇ ಅಧ್ಯಾಯದ ಅನ್ವಯಾರ್ಥ ಮುಗಿಯಿತು ।।**

★★★

## ಇಪ್ಪತ್ಮೂರನೇ ಅಧ್ಯಾಯ ಸಾರ

ಶುಕಾಚಾರ್ಯರು ಹೇಳುವರು. ಸೂರ್ಯನ ಕೆಳಗೆ ಹತ್ತು ಸಾವಿರ ಯೋಜನ ದೂರದಲ್ಲಿ ರಾಹುವು ನಕ್ಷತ್ರದಂತೆ ಅಂತರಿಕ್ಷ ಮಂಡಲದಲ್ಲಿ ಮೇರುವನ್ನು ಪ್ರದಕ್ಷಿಣೆಯಾಗಿ ಸಂಚರಿಸುವನು ಎಂದು ಕೆಲವು ಪುರಾಣಜ್ಞರು ಹೇಳುವರು. ಈ ವಿಷಯದಲ್ಲಿ ಮತಾಂತರಗಳಿವೆ. ಜ್ಯೋತಿಶ್ಶಾಸ್ತ್ರಜ್ಞರು ಕೆಲವರು ರಾಹುವು ಮಾನಸೋತ್ತರ ಪರ್ವತದ ಪ್ರಾಂತ ಭೂಮಿಯಿಂದ ಬಂದು ಉದಯವನ್ನು ಹೊಂದಿ ಮತ್ತೆ ಪಶ್ಚಿಮ ಭಾಗದಲ್ಲಿ ಭೂಮಿಯಲ್ಲೇ ಅಸ್ತವನ್ನು ಹೊಂದಿ ಪಾತಾಲ ಬಿಲದ ಮಧ್ಯದಲ್ಲಿ ಪೂರ್ವದಿಕ್ಕಿಗೆ ಹೋಗಿ ಮಾನಸೋತ್ತರ ಪರ್ವತದ ಹೊರಗೆ ಪ್ರಾಂತ ಭೂಮಿಯಲ್ಲಿಯೇ ಅಸ್ತಂಗತನಾಗುವನು ಎಂದು ಹೇಳುವರು. ಆದ್ದರಿಂದಲೇ ಕೆಲವುವೇಳೆ ಅವರು '**ಪಾತಾಲ ಗ್ರಹಣ**' ವಾಯಿತೆಂದೂ ಹೇಳುವರು. ಅವರಲ್ಲಿಯೇ ಮತ್ತೆ ಕೆಲವರು 'ಮೇರುವಿಗೆ ಅಪ್ರದಕ್ಷಿಣೆಯಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಾ ಪಶ್ಚಿಮದಲ್ಲಿ ಉದಯಿಸಿ ಪೂರ್ವದಲ್ಲಿ ಅಸ್ತಂಗತನಾಗುವನು' ಎಂದೂ ಹೇಳುತ್ತಾರೆ. ಸ್ವರೂಪದಿಂದ ದುಷ್ಟ ಅಸುರನಾದ ಸಿಂಹಿಕಾಳ ಮಗನಾದ ಅಮರನಾಗಲು ಅರ್ಹತೆ ಇಲ್ಲದ ಯಾವ ಈ ರಾಹುವು ಶ್ರೀಹರಿಯ ದಯೆಯಿಂದ ಅಮರತ್ವವನ್ನು ಗ್ರಹತ್ವವನ್ನೂ ಹೊಂದಿದನೋ ಪರೀಕ್ಷಿತನೇ! ಆ ರಾಹುವಿನ ಹುಟ್ಟು ಮತ್ತು ಕಾರ್ಯಗಳನ್ನು ಮುಂದೆ ಸಮುದ್ರಮಥನ ಕಥೆಯನ್ನು ಹೇಳುವಾಗ ಹೇಳುವೆವು.

ಯಾವ ಈ ಸೂರ್ಯಮಂಡಲವು ಬಿಸಿಲನ್ನು ಕೊಡುತ್ತಿರುವುದೋ ಅದು ವಿಸ್ತಾರದಿಂದ ಹತ್ತುಸಾವಿರ ಯೋಜನವಿದೆಯೆಂದು ಹೇಳುವರು. ಚಂದ್ರನ ಮಂಡಲವು ಇಪ್ಪತ್ತು ಸಾವಿರ ಯೋಜನವಿದೆ ಎಂದು ಹೇಳುವರು. ರಾಹುವಿನ




ಮಂಡಲವು ನಲವತ್ತು ಸಾವಿರ ಯೋಜನವಿಸ್ತಾರವುಳ್ಳದೆಂದು ಹೇಳುವರು. ಸೂರ್ಯಮಂಡಲಕ್ಕೆ ಎರಡರಷ್ಟು ಚಂದ್ರಮಂಡಲ ಅದರ ಎರಡರಷ್ಟು ರಾಹು ಮಂಡಲವೆಂಬ ಪ್ರಮಾಣಾಂತರವನ್ನನುಸರಿಸಿ ಅನ್ವಯವನ್ನು ತೋರಿಸಿರುವರು.

ಅಮೃತಪಾನಕಾಲದಲ್ಲಿ ಸೂರ್ಯಚಂದ್ರರ ಮಧ್ಯದಲ್ಲಿ ಕುಳಿತು ಅವರಿಬ್ಬರಿಗೂ ಅಂತರವನ್ನುಂಟುಮಾಡಿ ಈ ರಾಹುವು ಹುಣ್ಣಿಮೆ ಅಮಾವಾಸ್ಯಾ ಪರ್ವಕಾಲದಲ್ಲಿ ಅವರಿಂದ ಸೂಚಿತನಾದೆನೆಂದು ಶತೃತ್ವವನ್ನು ಮುಂದುವರಿಸಿಕೊಂಡು ಹಿಡಿಯಲು ಸೂರ್ಯಚಂದ್ರರನ್ನು ಎದುರಿಸಿ ಓಡುವನು. ಪರ್ವಕಾಲದಲ್ಲಿಯೇ ಅವನಿಗೆ ಆ ವಿಧ ಸಾಮರ್ಥ್ಯ ಬರುವುದು ಬೇರೆ ಕಾಲದಲ್ಲಿ ಬರಲಾರದು.

ಅದನ್ನು ನೋಡಿ ಎರಡೂ ಮಂಡಲಗಳಲ್ಲಿಯೂ ರಕ್ಷಣೆಗಾಗಿ ಶ್ರೀಹರಿಯಿಂದ ಸುದರ್ಶನವೆಂಬ ಭಗವಂತನಿಗೆ ಪ್ರಿಯವಾದ ಚಕ್ರವು ಬಿಡಲ್ಪಟ್ಟಿರುವುದು. ಸೂರ್ಯಚಂದ್ರಮಂಡಲ ಸುತ್ತಲೂ ಸುತ್ತುತ್ತಿರುವ ಸಹಿಸಲಾಗದ ಅದನ್ನು ಎರಡು ಘಳಿಗೆವರೆಗೆ ಎದುರಾಗಿರುತ್ತ ಉದ್ವೇಗಗೊಂಡು ವೇಗವಾಗಿ ಚಲಿಸುತ್ತಾ ಹೆದರಿದ ಮನಸುಳ್ಳವನಾಗಿ ಆ ಮಂಡಲಗಳ ದೂರದಿಂದಲೇ ಹಿಂತಿರುಗುವನು. ರಾಹುವು ಮಧ್ಯದಲ್ಲಿರುವುದರಿಂದ ಸೂರ್ಯಚಂದ್ರರು ಕಾಣದಿರುವುದನ್ನೇ ಜನರು ಗ್ರಹಣವೆಂದು ಹೇಳುವರು. ಆ ರಾಹು ಮಂಡಲದ ಕೆಳಗೆ ಹತ್ತು ಸಾವಿರ ಯೋಜನ ದೂರದಲ್ಲಿಯೇ ಸಿದ್ಧ, ಚಾರಣ, ವಿದ್ಯಾಧರರ ವಾಸಸ್ಥಳಗಳಿವೆ.

ಅದರ ಕೆಳಗೆ (ಅಷ್ಟೇ ದೂರದಲ್ಲಿ) ಯಕ್ಷ, ರಾಕ್ಷಸ, ಪಿಶಾಚ, ಭೂತ, ಪ್ರೇತಗಳ ಸಮೂಹಗಳ ಕ್ರೀಡೆಗಾಗಿ ಅಂಗಳದಂತಿರುವ ಅಂತರಿಕ್ಷವು ಇರುವುದು. ಈ ಅಂತರಿಕ್ಷದವರೆಗೂ ಗಾಳಿ ಬೀಸುವುದು ಇದುವರೆಗೂ ಮೋಡಗಳು ದೊರೆಯುವುವು.

ಪೃಥಿವಿಯ ಮೇಲೆ ಪಾರ್ಥಿವಪಕ್ಷಿಸಂಚರಿಸುವ ಪ್ರದೇಶವೂ ಪೃಥಿವೀ ಎಂದೇ ವಿವಕ್ಷಿತವಾಗಿರುವುದು. ಈ ಭೂಪ್ರದೇಶದವರೆಗೆ ಗಿಡುಗ (ಶ್ಯೇನ) ಗರುಡ ಮೊದಲಾದ ಪಕ್ಷಿಶ್ರೇಷ್ಠಗಳು (ಎತ್ತರ ಹಾರುವ ಶಕ್ತಿಯುಳ್ಳ) ಹಾರುವುವು. ಅದರ ಕೆಳಗೆ ನೂರು ಯೋಜನ ದೂರದಲ್ಲಿ ಮನುಷ್ಯರು ವಾಸಿಸುವ ಈ ಭೂಮಿಯು ಇರುವುದು.

ಭೂಮಿಯ ಕೆಳಗೂ ಕೂಡ ಒಂದೊಂದು ಹತ್ತು ಸಾವಿರಯೋಜನ ಉದ್ದ ಅಗಲವುಳ್ಳ ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ,

ಪಾತಾಲಗಳೆಂಬ ಏಳು ಭೂಮಿಯರಂಧ್ರಗಳು ಒಂದರಕ್ಕಿಂತ ಒಂದರಲ್ಲಿ ಹೆಚ್ಚು ಹೆಚ್ಚು ಸುಖವುಳ್ಳವುಗಳಾಗಿ ಒಂದರ ಕೆಳಗೊಂದರಂತೆ ಶ್ರೀಹರಿಯಿಂದ ನಿರ್ಮಿತವಾಗಿರುವುವು.

ಮೇಲಿನ ಸ್ವರ್ಗಕ್ಕಿಂತ ಹೆಚ್ಚಾದ ಎಲ್ಲಾ ಸಂಪತ್ತುಗಳಿಂದ ಸಮೃದ್ಧವಾದ ಇಷ್ಟವಾದ ವಿಷಯಗಳು, ಅವುಗಳ ಅನುಭವ, ಐಸಿರಿ, ಆನಂದ ಸಂಪತ್ತುಗಳಿಂದ ಅತ್ಯಂತ ಪರಿಪೂರ್ಣಗಳಾದ ಮನೆಗಳು ವನಗಳು ಮಿಥುನ ಕ್ರೀಡೆಗೆ ಯೋಗ್ಯವಾದ ಪರ್ವತಗಳು ಪ್ರಕಟ ವಿಹಾರಸ್ಥಾನ ಅಥವಾ ಭೂಲೋಕ ವಿಹಾರಕ್ಕಿಂತ ವಿಲಕ್ಷಣ ವಿಹಾರವುಳ್ಳ ಈ ಬಿಲಸ್ವರ್ಗಗಳಲ್ಲಿ ಯಾವಾಗಲೂ ಆನಂದದಿಂದಿರುವ ಪ್ರೀತಿಸುವ ಹೆಂಡತಿ ಮಕ್ಕಳುಗಳುಳ್ಳ ದೇಹ ಸಂಬಂಧಿಗಳು ಸ್ನೇಹಿತರು ಸೇವಕರಿಂದ ಕೂಡಿದ ದಿತಿಪುತ್ರರು ದನುಪುತ್ರರು ಕದ್ರುವಿನ ಮಕ್ಕಳಾದ ಸರ್ಪ ಜಾತಿಯ ಮನೆಯ ಯಾಜಮಾನರು ವರದಿಂದ ಶಿವನಿಂದಲೂ ತಡೆಯಿಲ್ಲದ ಕಾಮಸಂತೋಷವುಳ್ಳವರಾಗಿ ವಾಸಿಸುವರು.

ಪರೀಕ್ಷಿತನೇ! ಯಾವ ಈ ಬಿಲಸ್ವರ್ಗಗಳಲ್ಲಿ ಮಯನೆಂಬ ಅಸುರರ ಶಿಲ್ಪಿಯಿಂದ ರತ್ನಗಳನ್ನು ಹಾಕಿ ಮಾಡಿದ ನೆಲಗಳುಳ್ಳ ಆಯಾ ಕೆಳಲೋಕಗಳ ಅಧಿಪತಿಗಳ ಅರಮನೆಗಳಿಂದ ಚೆನ್ನಾಗಿ ಅಲಂಕರಿಸಿದ ನಗರಗಳು ಪ್ರಕಾಶಿಸುವುವು. ಆ ನಗರಗಳಉ ಮಂತ್ರ ಔಷಧಿಗಳಿಂದ ಅರ್ಥಕ್ರಿಯೆಯನ್ನು ಉಂಟುಮಾಡುವ ಶಕ್ತಿ ಎಂಬ ಉಪಾದಾನ ಕಾರಣದಿಂದ ತಯಾರಿಸಲ್ಪಟ್ಟ ಅನೇಕವಿಧ ರತ್ನಶ್ರೇಷ್ಠಗಳಿಂದ ರಚಿಸಲ್ಪಟ್ಟ ಆಶ್ಚರ್ಯಕರಗಳಾದ ಮನೆಗಳು ಗೋಡೆಗಳು, ಗೋಪುರ ಹೆಬ್ಬಾಗಿಲು, ಜನರು ಸೇರುವ ಮಂಟಪಗಳು, ದೇವಾಲಯಗಳು, ನಾಲ್ಕು ಮಾರ್ಗಗಳು ಸೇರುವ ಜಾಗಗಳು, ಗಿಡದ ಬುಡದಲ್ಲಿ ಪ್ರವಾಸಿಗರಿಗೆ ವಾಸಿಸಲು ನಿರ್ಮಿಸಿದ ಕಲ್ಲಿನ ಮಂಟಪಗಳು ಮೊದಲಾದವುಗಳಿಂದ ಕೂಡಿರುವುವು. ಆ ನಾಗರಗಳಲ್ಲಿ ಬಗೆಬಗೆಯ ಧ್ವನಿ ಮಾಡುವ ಗಂಡು ಹೆಣ್ಣು ಪಾರಿವಾಳ, ಗಿಳಿ, ಸಾರಿಕಾ ಎಂಬ ಒಂದು ಜಾತಿಯ ಹೆಣ್ಣು ಹಕ್ಕಿ ಮೊದಲಾದವು ಇರುವುವು.

ಈ ಲೋಕಗಳಲ್ಲಿ ದೇವಲೋಕದ ಉದ್ಯಾನಗಳ ಕಾಂತಿಯನ್ನು ಮೀರಿದ ಉದ್ಯಾನವನಗಳು ಪ್ರಕಾಶಿಸುವುವು. ಆ ಉದ್ಯಾನಗಳು ಅತಿಶಯವಾಗಿ ಮನಸ್ಸಿಗೂ ಇಂದ್ರಿಯಗಳಿಗೂ ಆನಂದ ನೀಡುವ ಹೂಹಣ್ಣುಗಳ ಗೊಂಚಲುಗಳು, ಚಿಗುರು ಇವುಗಳ ಭಾರದಿಂದ ಬಾಗಿದ ಮನೋಹರವಾದ ಕೊಂಬೆಗಳಿಂದ ಉಂಟಾದ




ಬಂಗಾರದ ಬಳ್ಳಿಗಳಿಂದ ಸುತ್ತುವರಿದ ಹೆಮ್ಮರಗಳ ಸಂಪತ್ತಿನ ಕಾಂತಿಯಿಂದ ಯುಕ್ತವಾಗಿರುವುವು. ಅಲ್ಲಿ ಗುಂಪುಗೂಡಿದ ಗಂಡು ಹೆಣ್ಣು ಹಕ್ಕಿಗಳ ಸಮೂಹದ ಕಲಕಲ ಶಬ್ದ ಕೇಳಿಸುತ್ತಿರುವುದು. ಸಿಹಿಯಾದ ನಿರ್ಮಲವಾದ ನೀರಿನಿಂದ ತುಂಬಿದ ಸರೋವರಗಳು, ಮೀನುಗಳ ಹಾರಾಟದಿಂದ ಚಂಚಲವಾದ ನೀರಿನ ಕಮಲ, ಕೆನ್ನೈದಿಲೆ, ನೈದಿಲೆ, ಸೌಗಂಧಿಕ ಕಮಲ, ನೀಲನೈದಿಲೆ, ನೂರುದಳದ ಕೆಂಪು ಕಮಲ, ಬಿಳಿ ಕಮಲಗಳ ಶೋಭೆಯಿಂದ ಕಂಗೊಳಿಸುವುವು. ಇವುಗಳ ವನಗಳಲ್ಲಿ ದುಂಬಿಗಳು ಬಗೆಬಗೆಯ ಝೇಂಕಾರಗಳನ್ನು ಮಾಡುತ್ತಾ ಅಲ್ಲಿ ಮನೆಮಾಡಿಕೊಂಡಿರುವ, ಬಹುವಿಧ ಹಾರಾಟಗಳಲ್ಲಿ ತೊಡಗಿರುವ ಇತರ ದುಂಬಿಗಳ ಇಂದ್ರಿಯಗಳಿಗೆ ಆನಂದವನ್ನುಂಟುಮಾಡುತ್ತಾ ಶೋಭಿಸುವುವು.

ಈ ಕೆಳಲೋಕಗಳಲ್ಲಿ ಹಗಲು ರಾತ್ರಿ ಮೊದಲಾದ ಕಾಲ ವಿಭಾಗಗಳಿಂದ ಭಯವು ಕಂಡು ಬರುವುದಿಲ್ಲ . ಅಲ್ಲಿ ಮೃತ್ಯುಭಯವು ಇಲ್ಲ. ಈ ಲೋಕಗಳಲ್ಲಿ ದೊಡ್ಡ ಸರ್ವಶ್ರೇಷ್ಠ ಹೆಡೆಯಲ್ಲಿರುವ ರತ್ನಗಳು ರಾತ್ರಿಯ ಕತ್ತಲನ್ನು ಸಂಪೂರ್ಣ ಹೋಗಲಾಡಿಸುವುವು.

ಈ ಲೋಕಗಳಲ್ಲಿ ವಾಸ ಮಾಡುವವರಿಗೆ ಅತಿಶಯ ಶಕ್ತಿಯುಳ್ಳ ಔಷಧಿ ಮತ್ತು ರಸಾಯನ ಕುಡಿಯುವಿಕೆಯ ಸಹಿತವಾದ ಸ್ನಾನದಿಂದ ಮನೋರೋಗಗಳು, ಶಾರೀರಿಕ ರೋಗಗಳು, ಚರ್ಮಗಳ ಸುಕ್ಕುಗಟ್ಟುವಿಕೆ, ತಲೆಕೂದಲು ಬೆಳ್ಳಗಾಗುವುದು, ಮುಪ್ಪು, ದೇಹದ ಬಣ್ಣಗೆಡುವುದು, ದುರ್ವಾಸನೆ, ಬೆವರು, ದೇಹಾಯಾಸ, ಉತ್ಸಾಹ ಹಾನಿಯು ಶರೀರ ಬಲನಾಶ ಎಂಬಿವುಗಳು, ಶೈಶವ, ಕೌಮಾರ, ಯೌವ್ವನ ಮುಂತಾದ ವಯೋನಿಮಿತ್ತ ಅವಸ್ಥೆಗಳು ಆಗುವುದೇ ಇಲ್ಲ. ಪುಣ್ಯವಂತರಾದ ಆ ಲೋಕ ನಿವಾಸಿಗಳಿಗೆ ಚಕ್ರವೆಂದು ಕರೆಸಿಕೊಳ್ಳುವ ಭಗವಂತನ ತೇಜಸ್ಸನ್ನು ಬಿಟ್ಟು ಬೇರೆ ಯಾವುದರಿಂದಲೂ ಮರಣವು ಆಗಲಾರದು. ಚಕ್ರವೆಂಬ ಭಗವತ್ತೇಜಸ್ಸಿನಲ್ಲಿ ಪ್ರವೇಶಿಸುತ್ತಿರಲು ದೈತ್ಯಸ್ತ್ರೀಯರ ಗರ್ಭಗಳು ಬಹುಮಟ್ಟಿಗೆ ಭಯದಿಂದ ನಾಲ್ಕು ತಿಂಗಳಲ್ಲಿ ಸ್ರವಿಸುವುವು, ಐದಾರು ತಿಂಗಳಲ್ಲಿ ಬೀಳುವುವು.

ಇನ್ನು ಮುಂದೆ ಒಂದೊಂದು ಲೋಕದ ವಿಶೇಷವನ್ನು ಹೇಳುತ್ತೇವೆ. ಅತಲ ಲೋಕದಲ್ಲಿ ಮಯಾಸುರನ ಮಗನಾದ ಬಲನೆಂಬ ಅಸುರನು ವಾಸ ಮಾಡುವನು. ಇವನಿಂದ ತೊಂಭತ್ತಾರು ಮಾಯೆಗಳು ಈ ಲೋಕದಲ್ಲಿ ಹುಟ್ಟಿದವೆಂದು

ಪಾತಾಲಗಳೆಂಬ ಏಳು ಭೂಮಿಯರಂಧ್ರಗಳು ಒಂದರಕ್ಕಿಂತ ಒಂದರಲ್ಲಿ ಹೆಚ್ಚು ಹೆಚ್ಚು ಸುಖವುಳ್ಳವುಗಳಾಗಿ ಒಂದರ ಕೆಳಗೊಂದರಂತೆ ಶ್ರೀಹರಿಯಿಂದ ನಿರ್ಮಿತವಾಗಿರುವುವು.

ಮೇಲಿನ ಸ್ವರ್ಗಕ್ಕಿಂತ ಹೆಚ್ಚಾದ ಎಲ್ಲಾ ಸಂಪತ್ತುಗಳಿಂದ ಸಮೃದ್ಧವಾದ ಇಷ್ಟವಾದ ವಿಷಯಗಳು, ಅವುಗಳ ಅನುಭವ, ಐಸಿರಿ, ಆನಂದ ಸಂಪತ್ತುಗಳಿಂದ ಅತ್ಯಂತ ಪರಿಪೂರ್ಣಗಳಾದ ಮನೆಗಳು ವನಗಳು ಮಿಥುನ ಕ್ರೀಡೆಗೆ ಯೋಗ್ಯವಾದ ಪರ್ವತಗಳು ಪ್ರಕಟ ವಿಹಾರಸ್ಥಾನ ಅಥವಾ ಭೂಲೋಕ ವಿಹಾರಕ್ಕಿಂತ ವಿಲಕ್ಷಣ ವಿಹಾರವುಳ್ಳ ಈ ಬಿಲಸ್ವರ್ಗಗಳಲ್ಲಿ ಯಾವಾಗಲೂ ಆನಂದದಿಂದಿರುವ ಪ್ರೀತಿಸುವ ಹೆಂಡತಿ ಮಕ್ಕಳುಗಳುಳ್ಳ ದೇಹ ಸಂಬಂಧಿಗಳು ಸ್ನೇಹಿತರು ಸೇವಕರಿಂದ ಕೂಡಿದ ದಿತಿಪುತ್ರರು ದನುಪುತ್ರರು ಕದ್ರುವಿನ ಮಕ್ಕಳಾದ ಸರ್ಪ ಜಾತಿಯ ಮನೆಯ ಯಾಜಮಾನರು ವರದಿಂದ ಶಿವನಿಂದಲೂ ತಡೆಯಿಲ್ಲದ ಕಾಮಸಂತೋಷವುಳ್ಳವರಾಗಿ ವಾಸಿಸುವರು.

ಪರೀಕ್ಷಿತನೇ! ಯಾವ ಈ ಬಿಲಸ್ವರ್ಗಗಳಲ್ಲಿ ಮಯನೆಂಬ ಅಸುರರ ಶಿಲ್ಪಿಯಿಂದ ರತ್ನಗಳನ್ನು ಹಾಕಿ ಮಾಡಿದ ನೆಲಗಳುಳ್ಳ ಆಯಾ ಕೆಳಲೋಕಗಳ ಅಧಿಪತಿಗಳ ಅರಮನೆಗಳಿಂದ ಚೆನ್ನಾಗಿ ಅಲಂಕರಿಸಿದ ನಗರಗಳು ಪ್ರಕಾಶಿಸುವುವು. ಆ ನಗರಗಳೂ ಮಂತ್ರ ಔಷಧಿಗಳಿಂದ ಅರ್ಥಕ್ರಿಯೆಯನ್ನು ಉಂಟುಮಾಡುವ ಶಕ್ತಿ ಎಂಬ ಉಪಾದಾನ ಕಾರಣದಿಂದ ತಯಾರಿಸಲ್ಪಟ್ಟ ಅನೇಕವಿಧ ರತ್ನಶ್ರೇಷ್ಠಗಳಿಂದ ರಚಿಸಲ್ಪಟ್ಟ ಆಶ್ಚರ್ಯಕರಗಳಾದ ಮನೆಗಳು ಗೋಡೆಗಳು, ಗೋಪುರ ಹೆಬ್ಬಾಗಿಲು, ಜನರು ಸೇರುವ ಮಂಟಪಗಳು, ದೇವಾಲಯಗಳು, ನಾಲ್ಕು ಮಾರ್ಗಗಳು ಸೇರುವ ಜಾಗಗಳು, ಗಿಡದ ಬುಡದಲ್ಲಿ ಪ್ರವಾಸಿಗರಿಗೆ ವಾಸಿಸಲು ನಿರ್ಮಿಸಿದ ಕಲ್ಲಿನ ಮಂಟಪಗಳು ಮೊದಲಾದವುಗಳಿಂದ ಕೂಡಿರುವುವು. ಆ ನಾಗರಗಳಲ್ಲಿ ಬಗೆಬಗೆಯ ಧ್ವನಿ ಮಾಡುವ ಗಂಡು ಹೆಣ್ಣು ಪಾರಿವಾಳ, ಗಿಳಿ, ಸಾರಿಕಾ ಎಂಬ ಒಂದು ಜಾತಿಯ ಹೆಣ್ಣು ಹಕ್ಕಿ ಮೊದಲಾದವು ಇರುವುವು.

ಈ ಲೋಕಗಳಲ್ಲಿ ದೇವಲೋಕದ ಉದ್ಯಾನಗಳ ಕಾಂತಿಯನ್ನು ಮೀರಿದ ಉದ್ಯಾನವನಗಳು ಪ್ರಕಾಶಿಸುವುವು. ಆ ಉದ್ಯಾನಗಳು ಅತಿಶಯವಾಗಿ ಮನಸ್ಸಿಗೂ ಇಂದ್ರಿಯಗಳಿಗೂ ಆನಂದ ನೀಡುವ ಹೂಹಣ್ಣುಗಳ ಗೊಂಚಲುಗಳು, ಚಿಗುರು ಇವುಗಳ ಭಾರದಿಂದ ಬಾಗಿದ ಮನೋಹರವಾದ ಕೊಂಬೆಗಳಿಂದ ಉಂಟಾದ




ಬಂಗಾರದ ಬಳ್ಳಿಗಳಿಂದ ಸುತ್ತುವರಿದ ಹೆಮ್ಮರಗಳ ಸಂಪತ್ತಿನ ಕಾಂತಿಯಿಂದ ಯುಕ್ತವಾಗಿರುವುವು. ಅಲ್ಲಿ ಗುಂಪುಗೂಡಿದ ಗಂಡು ಹೆಣ್ಣು ಹಕ್ಕಿಗಳ ಸಮೂಹದ ಕಲಕಲ ಶಬ್ದ ಕೇಳಿಸುತ್ತಿರುವುದು. ಸಿಹಿಯಾದ ನಿರ್ಮಲವಾದ ನೀರಿನಿಂದ ತುಂಬಿದ ಸರೋವರಗಳು, ಮೀನುಗಳ ಹಾರಾಟದಿಂದ ಚಂಚಲವಾದ ನೀರಿನ ಕಮಲ, ಕೆನ್ನೈದಿಲೆ, ನೈದಿಲೆ, ಸೌಗಂಧಿಕ ಕಮಲ, ನೀಲನೈದಿಲೆ, ನೂರುದಳದ ಕೆಂಪು ಕಮಲ, ಬಿಳಿ ಕಮಲಗಳ ಶೋಭೆಯಿಂದ ಕಂಗೊಳಿಸುವುವು. ಇವುಗಳ ವನಗಳಲ್ಲಿ ದುಂಬಿಗಳು ಬಗೆಬಗೆಯ ಝೇಂಕಾರಗಳನ್ನು ಮಾಡುತ್ತಾ ಅಲ್ಲಿ ಮನೆಮಾಡಿಕೊಂಡಿರುವ, ಬಹುವಿಧ ಹಾರಾಟಗಳಲ್ಲಿ ತೊಡಗಿರುವ ಇತರ ದುಂಬಿಗಳ ಇಂದ್ರಿಯಗಳಿಗೆ ಆನಂದವನ್ನುಂಟುಮಾಡುತ್ತಾ ಶೋಭಿಸುವುವು.

ಈ ಕೆಳಲೋಕಗಳಲ್ಲಿ ಹಗಲು ರಾತ್ರಿ ಮೊದಲಾದ ಕಾಲ ವಿಭಾಗಗಳಿಂದ ಭಯವು ಕಂಡು ಬರುವುದಿಲ್ಲ . ಅಲ್ಲಿ ಮೃತ್ಯುಭಯವು ಇಲ್ಲ. ಈ ಲೋಕಗಳಲ್ಲಿ ದೊಡ್ಡ ಸರ್ವಶ್ರೇಷ್ಠ ಹೆಡೆಯಲ್ಲಿರುವ ರತ್ನಗಳು ರಾತ್ರಿಯ ಕತ್ತಲನ್ನು ಸಂಪೂರ್ಣ ಹೋಗಲಾಡಿಸುವುವು.

ಈ ಲೋಕಗಳಲ್ಲಿ ವಾಸ ಮಾಡುವವರಿಗೆ ಅತಿಶಯ ಶಕ್ತಿಯುಳ್ಳ ಔಷಧಿ ಮತ್ತು ರಸಾಯನ ಕುಡಿಯುವಿಕೆಯ ಸಹಿತವಾದ ಸ್ನಾನದಿಂದ ಮನೋರೋಗಗಳು, ಶಾರೀರಿಕ ರೋಗಗಳು, ಚರ್ಮಗಳ ಸುಕ್ಕುಗಟ್ಟುವಿಕೆ, ತಲೆಕೂದಲು ಬೆಳ್ಳಗಾಗುವುದು, ಮುಪ್ಪು, ದೇಹದ ಬಣ್ಣಗೆಡುವುದು, ದುರ್ವಾಸನೆ, ಬೆವರು, ದೇಹಾಯಾಸ, ಉತ್ಸಾಹ ಹಾನಿಯು ಶರೀರ ಬಲನಾಶ ಎಂಬಿವುಗಳು, ಶೈಶವ, ಕೌಮಾರ, ಯೌವ್ವನ ಮುಂತಾದ ವಯೋನಿಮಿತ್ತ ಅವಸ್ಥೆಗಳು ಆಗುವುದೇ ಇಲ್ಲ. ಪುಣ್ಯವಂತರಾದ ಆ ಲೋಕ ನಿವಾಸಿಗಳಿಗೆ ಚಕ್ರವೆಂದು ಕರೆಸಿಕೊಳ್ಳುವ ಭಗವಂತನ ತೇಜಸ್ಸನ್ನು ಬಿಟ್ಟು ಬೇರೆ ಯಾವುದರಿಂದಲೂ ಮರಣವು ಆಗಲಾರದು. ಚಕ್ರವೆಂಬ ಭಗವತ್ತೇಜಸ್ಸಿನಲ್ಲಿ ಪ್ರವೇಶಿಸುತ್ತಿರಲು ದೈತ್ಯಸ್ತ್ರೀಯರ ಗರ್ಭಗಳು ಬಹುಮಟ್ಟಿಗೆ ಭಯದಿಂದ ನಾಲ್ಕು ತಿಂಗಳಲ್ಲಿ ಸ್ರವಿಸುವುವು, ಐದಾರು ತಿಂಗಳಲ್ಲಿ ಬೀಳುವುವು.

ಇನ್ನು ಮುಂದೆ ಒಂದೊಂದು ಲೋಕದ ವಿಶೇಷವನ್ನು ಹೇಳುತ್ತೇವೆ. ಅತಲ ಲೋಕದಲ್ಲಿ ಮಯಾಸುರನ ಮಗನಾದ ಬಲನೆಂಬ ಅಸುರನು ವಾಸ ಮಾಡುವನು. ಇವನಿಂದ ತೊಂಭತ್ತಾರು ಮಾಯೆಗಳು ಈ ಲೋಕದಲ್ಲಿ ಹುಟ್ಟಿದವೆಂದು

ಶಾಸ್ತ್ರಪ್ರಸಿದ್ಧಿಯು ಇರುವುದು. ಅವುಗಳಲ್ಲಿ ಕೆಲವನ್ನು ಇಂದಿಗೂ ಮಾಯಾವಿಗಳು ಧರಿಸುವರು. ಆಕಳಿಸುವ ಈ ಅಸುರನ ಬಾಯಿಯಿಂದ ಮೂರು ಜಾತಿಯ ಸ್ತ್ರೀಯರು ಹುಟ್ಟಿದರು ೧) ತಮ್ಮ ಇಚ್ಛಾನುಸಾರ ಸವರ್ಣರಲ್ಲಿ ರತರಾದವರು ೨) ಮತ್ತೊಬ್ಬರ ಇಚ್ಛಾನುಸಾರ ಸವರ್ಣ ಅಸವರ್ಣ ಇಬ್ಬರಲ್ಲೂ ರತರಾದವರು ೩) ಗಂಡಸು ಎಂದಾದರೆ ಸಾಕು ಅವನಿಂದ ಸುರತವನ್ನು ಅಪೇಕ್ಷಿಸುವವರು ಅಥವಾ ಪುರುಷದರ್ಶನ ಮಾತ್ರದಿಂದ ಇಂದ್ರಿಯ ಸ್ಖಲನವುಳ್ಳವರು. ಎಲ್ಲರೂ ನಿಯತಪುರುಷರುಳ್ಳವರಲ್ಲ. ಆ ಸ್ತ್ರೀಯರು ಲೋಕಕ್ಕೆ ಬಂದ ಗಂಡಸನ್ನು ಹಾಟಕವೆಂಬ ರಸದಿಂದ ಪಾನಮಾಡಿಸಿ, ತಮ್ಮ ಹಾವ ಭಾವಗಳಿಂದಲೂ, ನೋಟದಿಂದಲೂ, ಪ್ರೇಮದಿಂದಲೂ, ಮುಗುಳು ನಗೆಯಿಂದಲೂ, ಪರಸ್ಪರ ಸಂಭಾಷಣೆಯಿಂದಲೂ, ಆಲಿಂಗನದಿಂದಲೂ, ಚುಂಬನ ಮೊದಲಾದವುಗಳಿಂದಲೂ, ತಮ್ಮ ಮನಬಂದಂತೆ ಕ್ರೀಡಿಸುವರು. ಈ ಹಾಟಕ ರಸವನ್ನು ಕುಡಿದರೆ ಗಂಡಸರು ನಾನು ಈಶ್ವರನು ನಾನು ಸಿದ್ಧನು ಎಂದು ಮತ್ತಿನಿಂದ ಕುರುಡರಾದವರಂತೆ ಹತ್ತು ಸಾವಿರ ದೊಡ್ಡಸಲಗಗಳ ಬಲವುಳ್ಳವರಾಗಿ ಹೊಗಳಿಕೊಳ್ಳುವರು.

ಅತಲದ ಕೆಳಗೆ ವಿತಲ ಲೋಕದಲ್ಲಿ ಹಾಟಕೇಶ್ವರರೆಂಬ ಪೂಜ್ಯರಾದ ಸಂಹಾರಕರಾದ ರುದ್ರದೇವರು(ಉತ್ಪಾದಕರಾಗಿ) ತಮ್ಮವರಾದ ಭೂತ ಸಮೂಹದಿಂದ ಸುತ್ತುವರೆಯಲ್ಪಟ್ಟು ಬ್ರಹ್ಮದೇವರು ಮಾಡುವ ಸೃಷ್ಟಿಯ ವಿಸ್ತಾರಕ್ಕಾಗಿ ಪಾರ್ವತಿಯೊಂದಿಗೆ ಮೈಥುನದಿಂದ ಇರುವರು. ಲೋಕದಲ್ಲಿ ಶಿವಪಾರ್ವತಿಯರ ಶುಕ್ಲಶೋಣಿತದಿಂದ ಹಾಟಕಾ ಎಂಬ ಶ್ರೇಷ್ಠವಾದ ನದಿಯು ಹೊರಟಿರುವುದು. ಆ ವೀರ್ಯವನ್ನು ಗಾಳಿಯಿಂದ ಅಭಿವೃದ್ಧಿ ಹೊಂದುತ್ತಿರುವ ಅಗ್ನಿಯು ಸಂಪೂರ್ಣವಾಗಿ ಕುಡಿಯುವನು. ಅದರಿಂದ ಉಂಟಾದ ಹಾಟಕವೆಂಬ ಚಿನ್ನವನ್ನು ಅಸುರ ಶ್ರೇಷ್ಠರ ಅಂತಃಪುರಗಳಲ್ಲಿ ಗಂಡಸರಂತೆ ಬಲಿಷ್ಠರಾದ ಸ್ತ್ರೀಯರೊಂದಿಗೆ ಪುರುಷರು ಒಡವೆಯ ರೂಪದಲ್ಲಿ ಧರಿಸುವರು.

ವಿತಲದ ಕೆಳಗೆ ಸುತಲ ಲೋಕದಲ್ಲಿ ವಿರೋಚನನೆಂಬ ಅಸುರನ ಮಗನಾದ ಬಲಿಚಕ್ರವರ್ತಿಯು ಇರುವನು. ಈ ಬಲಿಯ ಅಧೀನವಾದ ಭೂಃ, ಭುವಃ, ಸ್ವಃ ಎಂಬ ಮೂರು ಲೋಕಗಳನ್ನು ಇಂದ್ರದೇವರಿಗೆ ಹಿತವನ್ನು ಮಾಡಬೇಕೆಂಬ ಇಚ್ಛೆಯುಳ್ಳ ಅದಿತಿ ದೇವಿಯಿಂದ ಸಚ್ಚಿದಾನಂದ ಶರೀರವನ್ನು ವ್ಯಕ್ತಗೊಳಿಸಿ




ಬ್ರಹ್ಮಚಾರಿಯ ಗಿಡ್ಡ ರೂಪ ಧರಿಸಿದ ಶ್ರೀಹರಿಯು ಕಸಿಸುಕೊಂಡು ದಯೆಯಿಂದ ಅವನನ್ನು ಸುತಲ ಲೋಕದಲ್ಲಿ ಪ್ರವೇಶಗೊಳಿಸಿದನು. ಈ ಬಲಿಯು ಬಹುಶಾಸ್ತ್ರ ಶ್ರವಣವುಳ್ಳವನು. ಪವಿತ್ರ ಕೀರ್ತಿಯುಳ್ಳವನು. ಈ ಸುತಲ ಲೋಕದಲ್ಲಿ ಇಂದ್ರ ಮುಂತಾದವರಲ್ಲಿ ಇಲ್ಲದಿರುವ ಅತ್ಯಂತ ಸಮೃದ್ಧಿಯುಳ್ಳ ಸಂಪತ್ತಿನಿಂದ ಯುಕ್ತನಾಗಿ ತನಗೆ ವಿಹಿತವಾದ ಧರ್ಮದಿಂದ ಆ ಶ್ರೀಹರಿಯನ್ನೇ ಆರಾಧಿಸುತ್ತ ಭಯರಹಿತನಾಗಿ ಈಗಲೂ ಇರುವನು. ಲೋಕತ್ರಯದಲ್ಲಿಯೂ ಪ್ರತಿವರ್ಷದಲ್ಲಿಯೂ ಮಾಡುವ ಬಲೀಂದ್ರ ಪೂಜೆಯಲ್ಲಿ ಪ್ರವೇಶಿತ ಎಂದೂ ವಿಜಯಧ್ವಜರು ಅರ್ಥ ಮಾಡಿರುವರು.

ಕೆಲವರು ಈ ಸುತಲಾಧಿಪತ್ಯವು ಬಲಿರಾಜನಿಗೆ ಭೂಮಿದಾನದ ಫಲವೆಂದು ತಿಳಿಯುವರು. ಆದರೆ ಹಾಗಲ್ಲ. ಅದು ಪೂರ್ವಜನ್ಮದ ಕಿಂಚಿತ್ ಪುಣ್ಯ ಫಲವಷ್ಟೇ!

ವಾಸುದೇವರೂಪಿಯಾದ ಶ್ರೀಹರಿಯು ಬ್ರಹ್ಮಾದಿ ಸಕಲ ಜೀವರಿಗೆ ಪ್ರಾಣಧಾರಕನು. ಸರ್ವದಾ ಸ್ವಾಮಿಯಾಗಿರುವನು. ಸರ್ವಸ್ವಾಮಿಯಾಗಿರುವುದರಿಂದಲೇ ಪರಮಾತ್ಮನೆಂದು ಕರೆಯಲ್ಪಡುವನು. ಅತ್ಯಂತ ಪವಿತ್ರನಾದವನು. ದಾನಕ್ಕೆ ಅತ್ಯಂತ ಯೋಗ್ಯಪಾತ್ರನಾದವನು. ಈ ಅನುಸಂಧಾನಪೂರ್ವಕವಾಗಿ ಶ್ರೀಹರಿಯಲ್ಲಿ ಅತ್ಯಂತ ಆದರದಿಂದ ಕೂಡಿದ ಮನಸ್ಸಿನಿಂದ, ಭಕ್ತಿಯಿಂದ ಕೃಷ್ಣಾರ್ಪಣವೆಂದು ಮಾಡಿದ ಮೂರು ಲೋಕವೆಂಬ ಭೂದಾನಕ್ಕೆ ಮುಖ್ಯವಾಗಿ ಮೋಕ್ಷದಲ್ಲಿ ಆನಂದಾತಿಶಯವೇ ಫಲವಾಗುವುದು. ಈ ಅಲ್ಪವಾದ ಸುತಲಾಧಿಪತ್ಯವು ಮುಖ್ಯಫಲವು ಹೇಗಾಗಲು ಸಾಧ್ಯ ?

ಅಧಿಕಾರಿಯಾದವನು ನಾನು ಶ್ರೀಹರಿಯಿಂದ ಪ್ರೇರಿತನೆಂಬ ಅನುಸಂಧಾನದಿಂದ ಕೂಡಿದವನಾಗಿ, ಹಸಿವೆ, ಬೀಳುವುದು, ಎಡವುವುದು ಮೊದಲಾದ ಸಂದರ್ಭಗಳಲ್ಲಿ ಒಂದು ಸಲ ಶ್ರೀಹರಿಯ ಹೆಸರನ್ನು ಭಕ್ತಿಯಿಂದ ಉಚ್ಚರಿಸುತ್ತ ಸಂಪೂರ್ಣವಾಗಿ ಕರ್ಮದಿಂದ ಬಂದ ಬಂಧವನ್ನು ಜ್ಞಾನದ ಮೂಲಕ ಕಳೆದುಕೊಳ್ಳುವನು. ಯಾವನ ನಾಮೋಚ್ಚಾರಣೆಯು ಮೋಕ್ಷಾದಿ ಸಾಧನವೋ ಅವನಿಗೆ ಅತಿಶಯ ಶ್ರದ್ಧೆಯಿಂದ ಸಮರ್ಪಿಸಿದ ಭೂಮಿದಾನವು ಮೋಕ್ಷಕ್ಕೆ ಕಾರಣವೆಂದು ಬೇರೆ ಹೇಳಬೇಕಿಲ್ಲ ಎಂದು ಕೈಮುತ್ಯವನ್ನು ತಿಳಿಸಿದ್ದಾರೆ.

ಸ್ವತಂತ್ರನಾದ್ದರಿಂದ ಶ್ರೀಹರಿಯು ದುಃಖನಿವಾರಣ ಸಮರ್ಥನು. ಆತ್ಮನಂತೆ ಎಲ್ಲ ಭೂತಗಳಿಗೆ ಪ್ರಿಯನು.

**ತಮೇವಂ ವಿದ್ವಾನಮೃತ ಇಹ ಭವತಿ** ಎಂಬ ಶ್ರುತಿಯಂತೆ ಅಪರೋಕ್ಷ ಜ್ಞಾನವೇ ಕರ್ಮಕ್ಷಯರೂಪ ಮೋಕ್ಷಕ್ಕೆ ಸಾಧನವೆಂದು ಪ್ರಸಿದ್ಧವಾಗಿದೆ. ಕಾರಣ ಜ್ಞಾನವಿಲ್ಲದೇ ನಾಮೋಚ್ಚಾರಣೆಯಿಂದ ಕರ್ಮಬಂಧ ಹಾನಿಯಾಗುವುದು ಎಂದು ಹೇಳಿದುದು ಹೇಗೆ? ಎಂದರೆ ಮುಕ್ತಿಯೋಗ್ಯಜೀವರು ಶ್ರೀಹರಿಯ ನಾಮೋಚ್ಚಾರಣೆ ಎಂಬ ಕರ್ಮದಿಂದ ತಮ್ಮ ಯೋಗ್ಯತೆಗನುಗುಣವಾದ ಪರಮಾತ್ಮನ ಅಪರೋಕ್ಷಜ್ಞಾನವನ್ನು ಹೊಂದುವರಷ್ಟೇ. ಇದು **ಕರ್ಮಣಾ ಜ್ಞಾನಮಾತನೋತಿ** ಎಂಬ ಶ್ರುತಿಪ್ರಮಾಣಸಿದ್ಧವು. ನಾಮೋಚ್ಚಾರಕನು ಭಗವಂತನ ಸಾಕ್ಷಾತ್ಕಾರವನ್ನು ಪೆಡದೇ ಕರ್ಮಬಂಧವನ್ನು ಕಳೆದುಕೊಳ್ಳುವನು. ಭಗವನ್ನಾಮೋಚ್ಚಾರಣವು ಕೇವಲ ಕರ್ಮಕ್ಷಯರೂಪ ಮುಕ್ತಿಯನ್ನು ಮಾತ್ರವಲ್ಲ ಸ್ವರೂಪಾನಂದಾದ್ಯಾವಿರ್ಭಾವರೂಪ ಮುಕ್ತಿಪ್ರದವೂ ಆಗಿದೆ. ಕಾರಣ ಎಲ್ಲ ಮುಕ್ತಿಯೋಗ್ಯರೂ ನಾಮೋಚ್ಚಾರಣ ಮಾಡಬೇಕು. ಭಗವಂತನ ನಾಮಸ್ಮರಣೆಯು ಕರ್ಮಕ್ಷಯ ಹೊಂದಿದ ಜೀವರಿಗೆ ಸ್ವರೂಪಾನಂದಾಭಿವ್ಯಕ್ತಿಯನ್ನು, ಸಾಯುಜ್ಯವನ್ನು ಕೊಟ್ಟೇ ಕೊಡುವುದು.

ಭಗವಂತನ ನಾಮ ಈ ವಿಧವಾದಮೇಲೆ ಎಲ್ಲರೂ ಏಕೆ ನಾಮೋಚ್ಚಾರಣದಿಂದ ಮುಕ್ತಿ ಪಡೆಯುವುದಿಲ್ಲ ವೆಂದರೆ ಅತಿಶಯಭಕ್ತಿ ಜ್ಞಾನಗಳಿಲ್ಲದ್ದರಿಂದ. ಶ್ರೀಹರಿಯು ಮುಕ್ತಿಯೋಗ್ಯರಲ್ಲದ ಎಲ್ಲ ಸಂಸಾರಿಜೀವರನ್ನೂ ಅಂದರೆ ನಿತ್ಯ ಸಂಸಾರಿಗಳನ್ನು ತಮೋಯೋಗ್ಯರನ್ನೂ ನಿಶ್ಚಯವಾಗಿಯೂ ನಾಮೋಚ್ಚಾರಣ ಸಂಪತ್ತನ್ನಿತ್ತು ಅನುಗ್ರಹಿಸಲಿಲ್ಲ. ಹಾಗಾದರೆ ಮೋಕ್ಷವನ್ನು ಅನುಗ್ರಹಿಸಿದನೇ? ಎಂದರೆ ಅದೂ ಇಲ್ಲ. ಆತ್ಮಪ್ರದಾನರೂಪ ಸಂಸಾರ ಮುಕ್ತಿಯನ್ನು ಅನುಗ್ರಹಿಸಲಿಲ್ಲವೆಂದು ಹೇಳಬೇಕೆ? ಗಂಜಿಯು ಸಿಗದಿರುವಾಗ ಮೃಷ್ಟಾನ್ನ ಸಿಗಲಿಲ್ಲವೆಂದು ಹೇಳಬೇಕಿಲ್ಲ. ಹಾಗಾದರೆ ನಿತ್ಯ ಸಂಸಾರಿಗಳು ಮಾಡಿದ ನಾಮೋಚ್ಚಾರಣಪ ವ್ಯರ್ಥವೇ? ಎಂದರೆ ಇಲ್ಲ. ಅವರಿಗೆ ಪ್ರಾಕೃತ ಆದ್ದರಿಂದ ನಶ್ವರವಾದ ಭೋಗೈಶ್ವರ್ಯಗಳನ್ನೇ ಹೆಚ್ಚಾಗಿ ಕೊಡುವನು. ಶಾಶ್ವತ ಮೋಕ್ಷವನ್ನು ಕೊಡುವುದಿಲ್ಲ.

ಒಟ್ಟಿನಲ್ಲಿ ಶ್ರೀಹರಿಯ ಅನುಗ್ರಹವೇ ಮೋಕ್ಷಕ್ಕೆ ಕಾರಣವೆಂದು **ಯಮ್ಮೈವೇಷ ವೃಣುತೇ** ಎಂಬ ಶ್ರುತಿ ಪ್ರಸಿದ್ಧವಾದ್ದರಿಂದ ಶ್ರೀಹರಿಯು 'ಇವನನ್ನು ಮುಕ್ತನನ್ನಾಗಿ ಮಾಡುವೆನು' ಎಂದು ಯಾರಿಗೆ ಅನುಗ್ರಹ ಮಾಡುವನೋ ಅವನೇ ನಾಮೋಚ್ಚಾರಣರೂಪ ಮೋಕ್ಷಸಾಧನವನ್ನು ಹೊಂದಿ ಮುಕ್ತನಾಗುವನು. ಮತ್ತೊಬ್ಬನಲ್ಲ.




ನಿತ್ಯ ಸಂಸಾರಿಗೇ ಕೊಡದಿರುವಾಗ ತಮೋಯೋಗ್ಯರಿಗೆ ಕೊಡುವುದಿಲ್ಲವೆಂದು ಸಿದ್ಧವೇ. ಹಾಗಾದರೆ ದೈತ್ಯನಾದ ಬಲಿಚಕ್ರವರ್ತಿಗೆ ಹೇಗೆ ಇಂತಹ ಐಶ್ವರ್ಯ(ಮೋಕ್ಷದಲ್ಲಿ ಆನಂದಾತಿಶಯ)ವನ್ನು ಅನುಗ್ರಹಿಸಿದನು? ಎಂದು ಶಂಕಿಸಿದರೆ ದೈತ್ಯವಂಶದಲ್ಲಿ ಜನಿಸಿದ್ದರೂ ಮುಕ್ತಿಯೋಗ್ಯನವನು. ರಾಜ್ಯಾಪಹಾರವೆಂಬ ಅಪಕಾರ ಮಾಡಿದಕ್ಕೆ ಕೆಳಲೋಕವೆಂಬ ಕಾರಾಗೃಹದಲ್ಲಿ ವಾಸಮಾಡುವಂತೆ ಮಾಡಿದ. ಪಾಶದಿಂದ ಕಟ್ಟಿ ಬಿಡುಗಡೆ ಮಾಡಿದ. ಶ್ರೀಹರಿಯಲ್ಲಿಯೂ ಅವನಿಗೆ ಭಕ್ತಿಯ ಅತಿಶಯವೇ ಇತ್ತೆಂದು ಅವನ ಮಾತುಗಳಿಂದ ಕಂಡು ಬರುವುದು. ಈ ಭಕ್ತ್ಯತಿಶಯವೇ ಈ ಬಗೆಯ ಐಶ್ವರ್ಯಕ್ಕೆ ನಿಮಿತ್ತವು. ಇಂತಹ ಆಪತ್ತಿನಲ್ಲಿ ಇಂತಹ ಭಕ್ತಿಯು ಮನುಷ್ಯರಲ್ಲಿ ಕಂಡುಬರುವುದಿಲ್ಲ. ಅವರು ಎಲ್ಲರ ಗುಣಗಳಲ್ಲಿ ಅಸೂಯೆ ಪಡುವ ಸ್ವಭಾವದವರು. ಬಲಿಗೆ ಭಕ್ತ್ಯತಿಶಯವಿತ್ತು ಎಂಬುದಕ್ಕೆ ಬಲಿಚಕ್ರವರ್ತಿಯ ಮಾತುಗಳೇ ಜ್ಞಾಪಕ.

ಬಲಿಚಕ್ರವರ್ತಿಗೆ ಬ್ರಾಹ್ಮಣಾನುಗ್ರಹ ಬಲವಿರುವುದರಿಂದ ಬಲದಿಂದ ಯುದ್ಧ ಮಾಡಿ ಗೆಲ್ಲುವುದು ಅಶಕ್ಯವಾದ್ದರಿಂದ. ಶ್ರೀಹರಿಯು ಯಾಚನೆಯಿಂದ ಬಲಿಯನ್ನು ನಿಗ್ರಹ ಮಾಡಿದನು. ಆ ಕಾಲದಲ್ಲಿ ಭಿಕ್ಷೆಯನ್ನು ಬಿಟ್ಟು ಬೇರೊಂದು ಸುಖಸಾಧನವಾದ ಉಪಾಯವನ್ನು ಕಾಣದಿರುವ ಶ್ರೀಹರಿಯಿಂದ ಯಾಚನೆಯ ನೆಪದಿಂದ ಅಪಹರಿಸಲ್ಪಟ್ಟ, ಮೂರು ಲೋಕಗಳುಳ್ಳವನಾದನು. ಕೇವಲ ತನ್ನ ಶರೀರವು ಮಾತ್ರ ಉಳಿದಿತ್ತು. ಆಗ ಶ್ರೀಹರಿಯ ಆಜ್ಞೆಯಂತೆ ಗರುಡನಿಂದ ಮೊದಲು ವರುಣಪಾಶದಿಂದ ಕಟ್ಟಲ್ಪಟ್ಟವನಾಗಿ, ಬ್ರಹ್ಮಾದಿಗಳ ಪ್ರಾರ್ಥನೆಯಂತೆ ಅನಂತರ ಪಾಶ ಮುಕ್ತನಾದನು. ವಚನ ಕೊಟ್ಟಂತೆ ಮೂರು ಪಾದ ಭೂಮಿಯನ್ನು ಕೊಟ್ಟೆ ಎಂದು ಹೇಳಿ ಸಂಪೂರ್ಣ ಕೊಡದಿದ್ದುದರಿಂದ ಕಾರಾಗಾರ ರೂಪವಾದ ಪರ್ವತದ ಗುಹೆಯಲ್ಲಿ ಬಂಧಿಸಲ್ಪಟ್ಟಂತೆ ಆದನು. ಅಂಥಹ ಬಲಿ ಚಕ್ರವರ್ತಿಯು ಮುಂದೆಹೇಳುವ ರೀತಿಯಲ್ಲಿ ಮಾತನಾಡಿದನು.

ಇಂದ್ರನ ಸಹಾಯಕರಾದ ಬೃಹಸ್ಪತ್ಯಾಚಾರ್ಯರು ಯಾವಾಗ ನನ್ನೊಡನೆ ಸಂಧಾನಕ್ಕಾಗಿ ಇಂದ್ರನಿಂದ ಕಳಿಸಲ್ಪಟ್ಟು ರಹಸ್ಯದಲ್ಲಿ ಮಂತ್ರಾಲೋಚನೆಗಾಗಿ ಸನ್ನದ್ಧರಾಗಿದ್ದರೋ, ಆಗ ಶ್ರೀಹರಿಯು ಅವರಿಗಿಂತ ಮೊದಲೇ ಸಂಧಾನಕ್ಕೆ ಬಂದು ಭಕ್ತನಾದ ನನಗೆ ಪುರುಷಾರ್ಥಗಳನ್ನು ಕೊಡಲು ಉದ್ಯುಕ್ತನಾದನು. ಅಥವಾ ನನಗೆ

ಪ್ರಯೋಜನಕಾರಿಗಳಾದ ತನ್ನ ಪಾದಗಳ ಸೇವೆಯನ್ನು ಕೊಡಲು ಈ ಶ್ರೀಹರಿಯು ತಾನೇ ವಟು ವಾಮನರೂಪದಿಂದ ಪರಿಪೂರ್ಣನಾದ ತನಗೆ ಮೂರು ಹೆಜ್ಜೆ ಮಾತ್ರ ಭೂಮಿಯನ್ನು ಯಾಚಿಸಲು ಯೋಗ್ಯನಲ್ಲದ ನನ್ನನ್ನು ಬೇಡಿದನು. ಪರಿಪೂರ್ಣನಾದ ಅವನಿಗೆ ಬೇಡಬೇಕಾದುದು ಇಲ್ಲವೇ ಇಲ್ಲ.

ಮುಂದಿನ ಕಲ್ಪದಲ್ಲಿ ಕೊಡುವ ಲೋಕತ್ರಯವು ಈ ಭೂಮಿದಾನಕ್ಕೆ ಫಲವೇ? ಎಂದರೆ ಹೇಳುವರು ತಿಳಿಯಲಾಗದಷ್ಟು ವೇಗವುಳ್ಳ ಮಹಾಕಾಲದ ಏಕದೇಶವಾದ ಒಂದು ಮನ್ವಂತರ ಕಾಲ ಮಾತ್ರವಿರುವ ಈ ತ್ರಿಲೋಕಾಧಿಪತ್ಯವು ಯಾವ ಲೆಕ್ಕಕ್ಕೆ? ಇದು ಅತ್ಯಲ್ಪ, ಅನಿತ್ಯ. ಇದರ ಪ್ರಯುಕ್ತ ಬಲಿಗೆ ಮದವು ಬರಬಾರದು. ಆದ್ದರಿಂದ ಇವನಿಗೆ ಕೊಡುವುದಿಲ್ಲವೆಂದು ಮೂರುಪಾದ ಬೇಡುವ ನೆಪದಿಂದ ಅಪಹರಿಸಿದನೆಂಬ ಅಭಿಪ್ರಾಯವು ನಿಶ್ಚಯವಾಗಿಯೂ ಭಕ್ತನಾದ ನನ್ನಲ್ಲಿ ಕರುಣೆಯಿಂದಲೇ ಅಲ್ಲವೇ? ಬಲಿಚಕ್ರವರ್ತಿ ಮಾಡಿದ ಜಗದ್ದಾನಕ್ಕೆ ಮುಖ್ಯ ಫಲವು ಮುಕ್ತಿಯಲ್ಲಿ(ಆಗುವ) ಆನಂದೋದ್ರೇಕವೇ ಹೊರತು ಇಂದ್ರ ಪದವಿಯು ಮುಖ್ಯವಲ್ಲ. ಅದು ಮುಖ್ಯಫಲದ ಜೊತೆಗೆ ಬಯಸದಿದ್ದರೂ ಬರುವ ಅಮುಖ್ಯಫಲವೆಂದು ಅಭಿಪ್ರಾಯ. ಅಂದರೆ ಕೃಷಿಗೆ ಧಾನ್ಯವೇ ಫಲವಾಗಿದ್ದರೂ ಹುಲ್ಲು ಇಲ್ಲದೇ ಬರುವುದಿಲ್ಲ. ಇಲ್ಲಿ ಹುಲ್ಲು ಅಮುಖ್ಯ ಫಲ. ಹಾಗೆ ಅಮುಖ್ಯಫಲವಾದ ಪದವಿಯೂ ಬಂದು ಆನಂದಾತಿಶಯರೂಪ ಮುಖ್ಯಫಲವೂ ಬರುವುದು.

ನನ್ನ ಪಿತಾಮಹನಾದ ಪ್ರಲ್ಹಾದರಾಜನು ನರಸಿಂಹದೇವರಿಂದ ತನ್ನ ತಂದೆಯಾದ ಹಿರಣ್ಯಕಶಿಪುವು ಸಂಹೃತನಾಗಿರಲು ಶ್ರೀಹರಿಯಿಂದ ಕೊಡಲ್ಪಟ್ಟ ಶತ್ರುಗಳ ಭಯವಿಲ್ಲದ ರಾಜ್ಯಪದವಿಯನ್ನು ಸ್ವೀಕರಿಸದೆ ಶ್ರೀಹರಿಯೇ ಬೇಕು ಎಂದು ಕೇಳಿಕೊಂಡನಲ್ಲವೇ! ಮಹಾನುಭಾವನಾದ ಆ ನಮ್ಮಜ್ಜನು (ಪ್ರಲ್ಹಾದನು) ಅನುಸರಿಸಿದ ಮಾರ್ಗವನ್ನು ಅನುಸರಿಸಿ ನಡೆಯಲು ಸಂಪೂರ್ಣರಾಗದ್ವೇಷಾದಿ ದೋಷಗಳು ನಾಶವಾಗದಿರುವ, ಪಾಪವನ್ನು ಕಳೆದುಕೊಳ್ಳದ ಆದ್ದರಿಂದಲೇ ಶ್ರೀಹರಿಯ ಅನುಗ್ರಹವಿಲ್ಲದ ನನ್ನಂಥವರು ಸಮರ್ಥರಲ್ಲ.

ಶುಕಾಚಾರ್ಯರು ಹೇಳುವರು ಪ್ರಲ್ಹಾದರಾಜರ ಚರಿತ್ರೆಯನ್ನು ಏಳನೇ ಸ್ಕಂಧದಲ್ಲಿ ವಿಸ್ತಾರವಾಗಿ ಹೇಳುವೆವು. ಆ ಬಲಿಚಕ್ರವರ್ತಿಯ ಚರಿತ್ರೆಯನ್ನು ಮುಂದೆ




ಎಂಟನೇ ಸ್ಕಂಧದಲ್ಲಿ ವಿಸ್ತರಿಸುವೆವು. ಶ್ರೀಹರಿಯು ಭಕ್ತರಲ್ಲಿ ದಯಾಪೂರ್ಣನೆಂದು ಹೇಳುತ್ತಾರೆ. ಎಲ್ಲ ಜಗತ್ತಿಗೂ ಗುರುವಾದ ಭಗವಂತನಾದ ನಾರಾಯಣನು ತನ್ನ ಭಕ್ತರಲ್ಲಿ ದಯೆಯುಳ್ಳ ಮನಸ್ಸುಳ್ಳವನಾಗಿ ತಾನು ವಾಮನ ರೂಪಿಯಾಗಿ ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಈ ಬಲಿ ಚಕ್ರವರ್ತಿಯ ಮನೆ ಬಾಗಿಲಲ್ಲಿ ಇರುವನು. ಒಮ್ಮೆ ದಿಕ್ಕುಗಳನ್ನು ಗೆಲ್ಲುತ್ತಾ ಬಲಿಯನ್ನು ಗೆಲ್ಲಲು ರಾವಣನು ಬಂದನು. ಆ ಸಮಯದಲ್ಲಿ ರಾವಣನು ದ್ವಾರಪಾಲಕನಾದ ವಾಮನನಿಂದ ಹೆಬ್ಬೆರಳಿನಿಂದಲೇ ಹತ್ತುಸಾವಿರ ಯೋಜನ ದೂರಕ್ಕೆ ಎಸೆಯಲ್ಪಟ್ಟನು. ಅಂತಹ ತನ್ನ ಪಾದಕ್ಕೆ ಪ್ರಣತನಾದ ಬಲಿಯನ್ನು ಆಪತ್ತಿನಲ್ಲಿ ರಕ್ಷಿಸಿದ ಶ್ರೀಹರಿಗೆ ಅಖಿಲ ಜಗದ್ಗುರುತ್ವವು ಯುಕ್ತವು. ತಾನು ಕೊಟ್ಟ ವರಕ್ಕೆ ಕಟ್ಟುಬಿದ್ದು ಹಾಗೆ ದ್ವಾರಪಾಲಕನಾಗಿರುವನು. ಇಂತಹ ಶ್ರೀಹರಿಯು ಭಕ್ತಜನ ಪ್ರಯೋಜನವನ್ನು ಸಂಪಾದಿಸಿಕೊಡಲು ರಾಜ್ಯಾಪಹಾರ ಮಾಡಿದನೇ ಹೊರತು ಇಂದ್ರದೇವರಿಗೆ ರಾಜ್ಯ ಕಸಿದು ಕೊಡುವುದಕ್ಕಲ್ಲ.

ಸುತಲದ ಕೆಳಗೆ ತಲಾತಲ ಲೋಕದಲ್ಲಿ ಮಾಯಾವಿಗಳಿಗೆ ಗುರುವಾದ ಮಯನೆಂಬ ದಾನವಶ್ರೇಷ್ಠನು ರುದ್ರದೇವರಿಂದ ಎಲ್ಲ ರೀತಿಯಿಂದ ರಕ್ಷಿತನಾಗಿ ಚಕ್ರದ ಭಯವಿಲ್ಲದವನಾಗಿ ತನ್ನ ಸೇವಕರಿಂದ ಪೂಜಿಸಲ್ಪಡುತ್ತಿರುವನು. ಮೂರು ಲೋಕಗಳಿಗೆ ಸುಖವನ್ನು ಮಾಡ ಬಯಸಿದ ಪೂಜ್ಯರಾದ ರುದ್ರ ದೇವರಿಂದ ಸುಡಲ್ಪಟ್ಟ ತನ್ನ ಮೂರು ಪಟ್ಟಣಗಳುಳ್ಳವನಾದರೂ ಅನಂತರ ಆ ರುದ್ರದೇವರ ಅನುಗ್ರಹದಿಂದ ತಲಾತಲ ಸ್ಥಾನವನ್ನು ಹೊಂದಿದನು.

ತಲಾತಲದ ಕೆಳಗೆ ಮಹಾತಲ ಲೋಕದಲ್ಲಿ ಕ್ರೋಧವಶರೆಂಬ ಅನೇಕ ಹೆಡೆಗಳ ಕದ್ರುದೇವಿಯ ಮಕ್ಕಳಾದ ಸರ್ಪಗಳ ಸಮೂಹವು ಇದೆ. ಸ್ಥೂಲಶರೀರವುಳ್ಳ ಕುಹಕ, ತಕ್ಷಕ, ಕಾಲಿಯ, ಸುಷೇಣ ಮೊದಲಾದ ಮುಖ್ಯವಾದ ಸರ್ಪಗಳು ಶ್ರೀಹರಿಯ ವಾಹನವಾದ ಹಕ್ಕಿಗಳಲ್ಲಿ ಶ್ರೇಷ್ಠವಾದ ಹಕ್ಕಿಗಳಿಗೆ ಒಡೆಯನಾದ ಗರುಡದೇವರಿಂದ ಯಾವಾಗಲೂ ಭಯದಿಂದ ಉದ್ವೇಗಗೊಳ್ಳುವವು. ಒಂದೊಂದು ಸಲ ಮಾತ್ರ ತಮ್ಮ ಹೆಂಡತಿಯರು, ಮಕ್ಕಳು, ಸ್ನೇಹಿತರು, ತಾಯಿ, ತಂದೆ, ಬಂಧು ಮುಂತಾದ ಮನೆಜನರ ಸಹವಾಸದಿಂದ ಗರುಡನ ಭಯವಿಲ್ಲದೇ ಸಂಚರಿಸುವರು.

ಮಹಾತಲದ ಕೆಳಗೆ ರಸಾತಲ ಲೋಕದಲ್ಲಿ ಪಣಿಗಳೆಂದು ಹೆಸರುಳ್ಳ ದಿತಿಯ ಮಕ್ಕಳು, ದನುವಿನ ಮಕ್ಕಳು, ಕಾಲಕೆಯ ಮಕ್ಕಳು ಇರುವರು. ಅವರು ಗಾಳಿಯೂ ಹೋಗದ ಶಸ್ತ್ರಗಳಿಂದ ಅಭೇದ್ಯವಾದ ಕವಚವುಳ್ಳವರಾದ್ದರಿಂದ ನಿವಾತಕವಚರು ಎಂಬ ಹೆಸರಿನವರಾಗುವರು. ಹಿರಣ್ಯಪುರವಾಸಿಗಳು ಎಂದು ಪ್ರಸಿದ್ಧರಾದ ಇವರು ದೇವತೆಗಳ ಶತ್ರುಗಳು. ಹುಟ್ಟಿನಿಂದಲೇ ಬಹು ಪರಾಕ್ರಮಿಗಳು. ಅತ್ಯಂತ ಸಾಹಸಿಗಳು. ಸಮಸ್ತೈಶ್ವರ್ಯಸಂಪನ್ನನಾದ ಎಲ್ಲ ಲೋಕಗಳಲ್ಲಿಯೂ ಮಹಾ ಸಮರ್ಥನಾದ ಶ್ರೀಹರಿಯ ಸುದರ್ಶನಚಕ್ರದ ಪ್ರಭಾವದಿಂದಲೇ ನಷ್ಟವಾದ ಗರ್ವವುಳ್ಳವರಾಗಿ ಸರ್ಪಗಳಂತೆಯೇ ವಾಸಿಸುವರು. ಈ ಪಣಿಗಳು ಇಂದ್ರನ ದೂತಿಯಾದ ಸರಮಾ ಎಂಬ ಹೆಣ್ಣು ನಾಯಿಯ ವೇದಮಂತ್ರರೂಪವಾದ **'ಹತಾ ಇಂದ್ರೇಣ ಪಣಯಃ ಶಯಧ್ವಂ'** ಇವೇ ಮೊದಲಾದ ಮಾತುಗಳನ್ನು ಕೇಳಿ ಇಂದ್ರನಿಂದ ಹೆದರುವರು. ಆದಕ್ಕಾಗಿಯೇ ಹಾವುಗಳು ಹುತ್ತಿನಲ್ಲಿ ಅಡಗಿರುವಂತೆ ರಸಾತಲದಲ್ಲಿ ಅಡಗಿರುವರು. ಇಲ್ಲಿ ಹೀಗೆ ಆಖ್ಯಾಯಿಕೆ ಇದೆ.

ಬಲಾಸುರನ ಭಟರಾದ ಪಣಿಗಳೆಂಬ ಅಸುರರು ಬೃಹಸ್ಪತಿಯ ಹಸುಗಳನ್ನು ಬಚ್ಚಿಟ್ಟಿದ್ದರು. ಅವುಗಳನ್ನು ಹುಡುಕಲು ಇಂದ್ರದೇವರು ತನ್ನ ಸರಮಾ ಎಂಬದೇವತೆಗಳ ಹೆಣ್ಣು ನಾಯಿಯನ್ನು ಕಳುಹಿಸಿ ಕೊಟ್ಟರು. ಸಂಧಿಯನ್ನು ಬಯಸಿದ ಪಣಿಗಳು ಆ ನಾಯಿಗೆ ನಿನ್ನ ಇಷ್ಟವೇನು ಎಂದು ಕೇಳಿದರು. ಸಂಧಿಗೊಪ್ಪದ ಆ ಶುನಿಯು ಇಂದ್ರನನ್ನು ಪ್ರಶಂಸಿಸಿ ಆ ಪಣಿಗಳಿಗೆ ಕ್ರೂರನುಡಿಗಳನ್ನಾಡಿತು. ಅದನ್ನು ಕೇಳಿ ಅವರು ಹೆದರಿದರು ಎಂಬುದು ವೇದದಲ್ಲಿ ಬರುವ ಕಥೆ.

ಸರಮಾ! ನೀನು ದೂರವಾದ ಮಾರ್ಗದಿಂದ ಹೊರಗೆ ಬಂದಿರುವ ನಾಲಿಗೆಗಳಿಂದ ಏನನ್ನು ಹೇಳುತ್ತಾ ಏನನ್ನು ಇಚ್ಛಿಸುತ್ತಾ ಇಲ್ಲಿಗೆ ಬಂದೆ? ಈ ನಿನ್ನ ನಮ್ಮಲ್ಲಿಗೆ ಬರುವಿಕೆಯು ಏತಕ್ಕಾಗಿ? ನಿನ್ನ ದೂತಳಾಗಿ ಬರುವಿಕೆಯು ಯಾವ ಕಾರ್ಯಕ್ಕಾಗಿ ಇರುವುದು? ನೀನು ರಸಾತಲದ ನದಿಯ ನೀರನ್ನು ಹೇಗೆ ದಾಟಿದ್ದಿ ಎಂದು ಪಣಿಗಳ ಪ್ರಶ್ನೆ. ಇದನ್ನು ಕೇಳಿದ ಸರಮಾ - ನಾನು ಇಂದ್ರನ ದೂತಳು. ಅವನಿಂದ ಪ್ರೇರಿತಳಾಗಿ ಬಂದಿರುವೆನು. ಎಲೇ ಪಣಿಗಳೇ! ನಿಮ್ಮ ಅತಿಶಯವಾದ ಬೃಹಸ್ಪತಿಯ ಗೋವುಗಳೆಂಬ ನಿಧಿಗಳನ್ನು ಕೊಂಡೊಯ್ಯಲು ಇಚ್ಛಿಸಿ ಬಂದಿರುವೆ. ನಮ್ಮ ಸ್ವಾಮಿಯ ಭಯದಿಂದ ಆ ನದಿಯ ನೀರು ನಮ್ಮನ್ನು ಕಾಪಾಡಿತು. ಆದ್ದರಿಂದ




ನದಿಯ ನೀರನ್ನು ದಾಟಿದೆನು ಎಂದು ಉತ್ತರ ಕೊಟ್ಟಿತು. ಹೀಗೆಯೇ ಮುಂದುವರೆದು ನೀವು ಇಂದ್ರನಿಂದ ಹತರಾಗಿ ಮಲಗುವಿರಿ ಎಂದು ಹೇಳಿತು. ಮಧ್ಯದಲ್ಲಿ ಪಣಿಗಳು ಪರಸ್ಪರ ಮಾತನಾಡಿಕೊಂಡು ಇಂದ್ರನನ್ನು ಹಿಂಸಿಸಲು ವಿಚಾರ ಮಾಡಿದಾಗ ಶುನಿಯು ಇಂದ್ರನ ಸಾಮರ್ಥ್ಯವನ್ನು ವಿವರಿಸಿ ಅವನು ನಿಮ್ಮಿಂದ ಹಿಂಸ್ಯನಲ್ಲ ಅವನೇ ನಿಮ್ಮನ್ನು ಹಿಂಸಿಸುವನು ಎಂದು ಹೇಳಿತು. ಅದನ್ನು ಕೇಳಿ ಹೆದರಿ ಸರ್ಪರೂಪದಲ್ಲಿ ಬಿಲದಲ್ಲಿ ಅಡಗಿಕೊಂಡಿರುವರೆಂದು ಅಭಿಪ್ರಾಯ.

ರಸಾತಲದ ಕೆಳಗೆ ಪಾತಾಳ ಲೋಕದಲ್ಲಿ ವಾಸುಕಿ, ಶಂಖ, ಕುಲಿಕ, ಮಹಾಶಂಖ, ಶ್ವೇತ, ಧನಂಜಯ, ಧೃತರಾಷ್ಟ್ರ, ಶಂಖಚೂಡ, ಕಂಬಲ, ಅಶ್ವತರ, ದೇವತ್ತ ಇವರೇ ಮೊದಲಾಗಿವುಳ್ಳ ದೊಡ್ಡ ದೇಹವುಳ್ಳ ಬಹಳ ಕೋಪವುಳ್ಳ ಶ್ರೇಷ್ಠ ಸರ್ಪಗಳು ವಾಸಿಸುತ್ತವೆ. ಐದು, ಏಳು, ಹತ್ತು, ನೂರು, ಸಾವಿರ, ತಲೆಗಳುಳ್ಳ ಈ ಸರ್ಪಗಳ ಹೆಡೆಗಳಲ್ಲಿ ರಚನೆಮಾಡಿದ, ಸ್ವಾಭಾವಿಕವಾದ ಪ್ರಕಾಶಿಸುವ ದೊಡ್ಡರತ್ನಗಳನ್ನು ತಮ್ಮ ಕಾಂತಿಯಿಂದ ಪಾತಲವೆಂಬ ಭೂವಿವರದ ಕತ್ತಲೆಯ ಸಮೂಹವನ್ನು ನಾಶ ಮಾಡುವುವು.

ಪಾತಾಲ ಲೋಕದ ಕೆಳಭಾಗದಲ್ಲಿ ಮೂವತ್ತುಸಾವಿರಯೋಜನ ದೂರದಲ್ಲಿ ಅನಂತ(ಶೇಷ) ಎಂದು ಕರೆಯಲ್ಪಡುವ ತಮೋಗುಣ ಕಾರ್ಯವಾದ, ಸಂಹಾರ ಪ್ರವರ್ತಕವಾದ ಅಂಶದಿಂದ ಸನ್ನಿಹಿತವಾದ ಶ್ರೀಹರಿಯ ರೂಪವು ಇರುವುದು. ಈ ಸ್ವರೂಪವನ್ನು ಪಂಚರಾತ್ರಾಗಮಜ್ಞರು ಜೀವನ ಶರೀರ ಮೊದಲಾದ ಜಡ ಪದಾರ್ಥಗಳ ಸಮ್ಯಕ್ ಕರ್ಷಣ ಅಂದರೆ ೧. ಸಾಮೀಪ್ಯವನ್ನುಂಟು ಮಾಡುವ ೨. ಚೆನ್ನಾಗಿ ಒಂದೇ ಎಂದು ಮಾಡುವ (ಅಭೇದ ಗ್ರಾಹಕವಾದ) ದೇಹಾದಿಗಳಲ್ಲಿ ನಾನು ಎಂಬ ಭ್ರಾಂತಿಯನ್ನು ಹುಟ್ಟಿಸುವ, ನಾನೇ ಕರ್ತಾ ಎಂಬ ಸ್ವಾತಂತ್ರ್ಯಾಭಿಮಾನಕ್ಕೆ ಕಾರಣವಾದ ಸಂಕರ್ಷಣನೆಂದು ಹೇಳುವರು. ಇದು ಶಾಸ್ತ್ರ ಪ್ರಸಿದ್ಧವು.

ಅಂತೂ ಅಹಂನಾಡಿಯಲ್ಲಿದ್ದು ದೇಹಾದಿಗಳ್ಲಲಿ ಅಹಂ ಕರ್ತಾ ಎಂಬ ಅಭಿಮಾನ ಎಂದದ್ದರಿಂದ ಇದು ಸರಿಯಾದ ಜ್ಞಾನವಲ್ಲ ಭ್ರಮ ಎಂದಂತಾಯಿತು. ಈ ಸ್ವಾತಂತ್ರ್ಯಭ್ರಮವು ನಾನಾ ಯೋನಿಗಳಲ್ಲಿ ಹುಟ್ಟುವುದೇ ಮೊದಲಾದ ಅನರ್ಥ ಕಾರಣವಾದ್ದರಿಂದ ಅದರ ನಿವೃತ್ತಿಗಾಗಿ ಸಂಕರ್ಷಣರೂಪೋಪಾಸನೆ ಮಾಡಬೇಕು. ಇದು ಮಿಶ್ರಸ್ತುತಿ. ಮುಖ್ಯವೃತ್ತಿಯಿಂದ ಶೇಷಾಂತರ್ಯಾಮಿ ಸಂಕರ್ಷಣಪರವಾಗಿಯೂ

ಅಮುಖ್ಯವಾಗಿ ಶೇಷದೇವರ ಪರವಾಗಿಯೂ ಯೋಜಿಸಬೇಕು. ಅನಂತ ಬಲವಿರುವುದರಿಂದ ಅನಂತನೆಂದು ಕರೆಯುವರು. ಶರಣಾಗತರಿಗೆ ಅನಂತಾಭೀಷ್ಟಪ್ರದ ಅನಂತಾನಿಷ್ಟ ನಿವರ್ತಕನಾದ್ದರಿಂದ ಅನಂತನೆಂದು ಉಪಾಸಿಸಲು ಅನಂತನ ಶಕ್ತಿಯನ್ನು ಪರಿಚಯಿಸುವರು. ಆ ಸಾವಿರ ಹೆಡೆಗಳುಳ್ಳ, ಅನಂತ ಬಲವುಳ್ಳ ಶರೀರವುಳ್ಳ ಶ್ರೀಹರಿಯ ಸನ್ನಿಧಾನಯುತರಾದ ಶೇಷದೇವರ ಒಂದೇ ಒಂದು ಹೆಡೆಯಲ್ಲಿ ಧರಿಸಲ್ಪಟ್ಟಿರುವ ಭೂಮಂಡಲವು ಸಾಸುವೆಯಂತೆ ತೋರುವುದು.

ತಮೋಗುಣ ಕಾರ್ಯವನ್ನು ಹೇಳುತ್ತಾರೆ. ಪ್ರಳಯ ಕಾಲವು ಸಮೀಪಿಸಿದಾಗ ಈ ಜಗತ್ತನ್ನು ಸಂಹರಿಸಲಿಚ್ಛಿಸಿದ ಈ ಶೇಷದೇವರ ಕ್ರೋಧದಿಂದ ಗಂಟು ಮಾಡಿದ ಮನೋಹರಗಳಾದ ಚಲಿಸುವ ಹುಬ್ಬುಗಳ ಮಧ್ಯದಿಂದ ಹನ್ನೊಂದು ರೀತಿಯ ವಿಭಕ್ತರೂಪ ವಿಶೇಷಗಳುಳ್ಳ ಸಂಕರ್ಷಣನೆಂಬ ರುದ್ರದೇವರು ಮೂರುಕಣ್ಣುಗಳುಳ್ಳ-ವರಾಗಿ ಮೂರು ಕೊನೆಗಳಿರುವ ಶೂಲವನ್ನು ಆಡಿಸುತ್ತ ಹೊರಬಂದರು.

ಈ ಶೇಷದೇವರ ಕಮಲದಂತಿರುವ ಪದಗಳ ಕೆಂಪಾದ ಶುದ್ಧವಾದ ಉಗುರಗಳೆಂಬ ಮಣಿಗಳ ಸಮೂಹಗಳಲ್ಲಿ ಸಾತ್ವತ ಶ್ರೇಷ್ಠರೊಂದಿಗೆ ಅತಿಶಯ ಭಕ್ತಿಯಿಂದ ಬಗ್ಗಿ ನಮಸ್ಕರಿಸುವ ಸರ್ಪರಾಜರುಗಳು (ಪ್ರತಿಬಿಂಬಿತಗಳಾದ) ಹೊಳೆಯುವ ಕುಂಡಲಗಳ ಕಾಂತಿ ಸಮೂಹದಿಂದ ಭೂಷಿತವಾದ ಕೆನ್ನೆಗಳುಳ್ಳ ಅತ್ಯಂತ ಸುಂದರಗಳಾದ ತಮ್ಮ ಮುಖಗಳನ್ನು ಸಂತುಷ್ಟಮನಸ್ಕರಾಗಿ ನೋಡುಕೊಳ್ಳುವರು.

ಅಭೀಷ್ಟಗಳನ್ನು ಅಪೇಕ್ಷಿಸುವ ನಾಗರಾಜ ಕುಮಾರಿಯರು ಈ ಶೇಷದೇವರ ಸುಂದರವಾದ ವಂಕಿ ಬಳಿಗಳಿಂದ ಪ್ರಕಾಶಿಸುವ ವಿಸ್ತಾರವಾದ ದೊಡ್ಡದಾದ ಬೆಳ್ಳಗಿರುವ ಸುಂದರವಾದ ಮನೋಹರವಾದ ಭುಜಗಳೆಂಬ ಬೆಳ್ಳಿಯ ಕಂಬಗಳಲ್ಲಿ ಶ್ರೀಗಂಧ, ಕೇಸರಿ ಇವುಗಳ ಕೆಸರಿನಂತೆ ಗಟ್ಟಿಯಾಗಿ ಕಲಿಸಿರುವ ಮೈಗೆ ಹಚ್ಚಿಕೊಳ್ಳುವ ಗಂಧದಿಂದ ಹಚ್ಚುವವರಾಗಿ ಆ ಭುಜಗಳನ್ನು ಮುಟ್ಟುವುದರಿಂದ ವಿಕಾರಗೊಂಡ ಮನಸ್ಸಿನಲ್ಲಿ ಉಂಟಾದ ಮನ್ಮಥಾವೇಶದಿಂದ ಮನೋಹರವಾದ ಸುಂದರವಾದ ಮಂದಹಾಸ ಉಳ್ಳವರಾಗಿ ಆ ಶೇಷದೇವರಲ್ಲಿ ಪ್ರೇಮದಿಂದ ಕೂಡಿದವರಾಗಿ ಆ ಶೇಷದೇವರ, ಮದದಿಂದ ಚಲಿಸಿದ ಸ್ವಲ್ಪ ಕೆಂಪಾದ ಕೃಪಾಕಟಾಕ್ಷದಿಂದ ಕೂಡಿದ ಕಣ್ಣುಗಳುಳ್ಳ ಮುಖಕಮಲವನ್ನೇ ನಾಚಿಕೆಯಿಂದ ನೋಡುವರು. ಶೃಂಗಾರಾದಿ




ಅನಂತ ಗುಣಗಳಿಂದ ತುಂಬಿದ ಶ್ರೇಷ್ಠ ದೇವತೆಯಾದ ಪೂಜ್ಯರಾದ ಶೇಷದೇವರೇ ಅಸಹನೆ ಕೋಪಗಳ ವೇಗವನ್ನು ತಡೆಹಿಡಿದವರಾಗಿ ಜನರ ಕ್ಷೇಮಕ್ಕಾಗಿ ಇರುವರು.

ದೇವತೆಗಳು, ದೈತ್ಯರು, ಸರ್ಪಗಳು, ಸಿದ್ಧರು, ಗಂಧರ್ವರು, ವಿದ್ಯಾಧರರು, ಋಷಿಗಳು ಇವರುಗಳ ಸಮೂಹದಿಂದ ಧ್ಯಾನಿಸಲ್ಪಡುವ ಉತ್ತಮ ಲೀಲೆಯುಳ್ಳ ಸಂಕರ್ಷಣನು ಯಾವಾಗಲೂ ಮದಮತ್ತತೆಯಿಂದ ಸಂತುಷ್ಟನು. ವಿಕಾರವಾದ ಕಾತರತೆಯಿಂದ ಕೂಡಿದ ಕಣ್ಣುಗಳುಳ್ಳವನು. ಸುಂದರವಾದ ವಚನಾಮೃತದಿಂದ ತನ್ನ ದ್ವಾರಪಾಲಕರಾದ ದೇವತಾಗಣಗಳ ನಾಯಕರನ್ನು ಸಂತೋಷಪಡಿಸುವನು. ನೀಲಾಂಬರಧಾರಿಯಾಗಿ ಒಂದೇ ಕುಂಡಲ ಧರಿಸಿರುವನು. ತನ್ನ ಆಯುಧವಾದ ನೇಗಲಿನ ಕೊನೆಯಲ್ಲಿ ಇಟ್ಟಿರುವ ಶೋಭನವಾದ ಮನೋಹರವಾದ ಭುಜವುಳ್ಳವನು. ಇಂದ್ರನ ಐರಾವತವು ಬಂಗಾರದ ಹೊಟ್ಟೆಯ ಪಟ್ಟೆಯನ್ನು ಹೊಂದಿರುವಂತೆ ಕಳೆಗುಂದದ ಕಾಂತಿಯುಳ್ಳ ಹೊಸ ತುಳಸಿದಳಗಳ ಸುವಾಸನೆಯುಳ್ಳ ಮಧುರ ರಸದಿಂದ ಮದಿಸಿದ ದುಂಬಿಗಳ ಸಮೂಹದಿಂದ ಇಂಪಾದ ಝೇಂಕಾರ ಶಬ್ದದ ಸಂಪತ್ತುಳ್ಳ ತಮ್ಮ ವೈಜಯಂತಿ ಎಂಬ ಪಾದಾವಲಂಬಿಯಾದ ಎಲ್ಲ ಋತುಗಳಲ್ಲಿಯ ಪುಷ್ಪಗಳಿಂದ ನಿರ್ಮಿತವಾದ ಮಧ್ಯದಲ್ಲಿ ಕದಂಬದಿಂದ ಶೋಭಿಸುವ ವನಮಾಲೆಯನ್ನು ಧರಿಸಿರುವನು.

ಈ ಶೇಷದೇವರು ಮೇಲೆ ಹೇಳಿದಂತೆ ಭಕ್ತಿಯಿಂದ ಶ್ರವಣ, ಮನನ, ಧ್ಯಾನ ಮಾಡುವ ಮುಕ್ತಿಯೋಗ್ಯ ಸಾಧಕರ ಮನಸ್ಸಿನಲ್ಲಿದ್ದು ಅನಾದಿಕಾಲದ ಕರ್ಮ ಸಂಸ್ಕಾರದಿಂದ ಬಿಟ್ಟುಗೊಡದ, ಸತ್ವರಜಸ್ತಮೋಗುಣಾತ್ಮಕವಾದ, ಪ್ರಾಕೃತವಾದ ಮನಸ್ಸಿನಲ್ಲಿರುವ, ಶ್ರೀಹರಿಯ ಇಚ್ಛೆಯಿಂದ ಬಂದ ಅಜ್ಞಾನಮಿಥ್ಯಾಜ್ಞಾನಗಳನ್ನು ಬೇಗನೇ ನಾಶ ಮಾಡುವರು.

ಅಂತಹ ಶೇಷದೇವರ ಮತ್ತು ಅವರ ಅಂತರ್ಯಾಮಿ ಸಂಕರ್ಷಣರೂಪಿ ಶ್ರೀಹರಿಯ ಮುಂದೆ ಹೇಳುವ ಮಹಿಮೆಯನ್ನು ಬ್ರಹ್ಮದೇವರ ಮಕ್ಕಳಾದ ನಾರದರು ತುಂಬುರು ಗಂಧರ್ವರೊಂದಿಗೆ ಬ್ರಹ್ಮದೇವರ ಸಭೆಯಲ್ಲಿ ಪದ್ಯರೂಪವಾಗಿ ಹಾಡಿದರು.

ಇಲ್ಲಿ ಶೇಷದೇವರಿಗೆ ಅನಂತಗುಣಪೂರ್ಣತ್ವ, ಸೃಷ್ಟ್ಯಾದಿಕಾರಣತ್ವ ಹೇಳುವುದು ಅವರಲ್ಲಿ ಅಸಂಭಾವಿತ ಕಾರಣ ಇಲಾವೃತಸ್ಥ ಅನಂತನಿಗೆ ರುದ್ರದೇವರು

ಹೇಳಿದಂತೆ ಪಾತಾಲಮೂಲಸ್ಥ ಶೇಷ ತದಂತರ್ಗತ ಶ್ರೀಹರಿಪರವೆಂದು ತಿಳಿಯಬೇಕು.

ಶ್ರೀಹರಿಯ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ರೂಪಗಳಲ್ಲಿ ಎರಡನೆಯ ರೂಪ ಶೇಷದೇವರಲ್ಲಿ ವಿಶೇಷ ಸನ್ನಿಹಿತವಾಗಿರುವುದರಿಂದ ಆ ರೂಪಕ್ಕೆ ಯೋಗ್ಯವಾದ ಗುಣಗಳನ್ನು ಶೇಷದೇವರ ಸ್ತುತಿಯಲ್ಲಿಯೇ ಸೇರಿಸಿ ಹೇಳುತ್ತಾರೆ.

ಈ ಜಗತ್ತಿನ ಜನ್ಮ, ಸ್ಥಿತಿ, ಲಯಗಳಿಗೆ ಕಾರಣಗಳಾದ ಸತ್ವ ಮೊದಲಾದ ಪ್ರಕೃತಿಗುಣಗಳು ಶೇಷಾಂತರ್ಯಾಮಿ ಸಂಕರ್ಷಣರೂಪಿಯ ಕೃಪಾದೃಷ್ಟಿಯಿಂದ ತಮ್ಮ ತಮ್ಮ ಕೆಲಸ ಮಾಡುವಲ್ಲಿ ಸಮರ್ಥವಾಗಿವೆ. ಈ ಸಂಕರ್ಷಣರೂಪವು ನಾಶರಹಿತವು, ಅನಾದಿಯು, ಭೇದ ರಹಿತವು ಆಗಿದೆ. ತನ್ನಲ್ಲಿ ನಾನಾ ವಿಧವಾದ ಜಗತ್ತನ್ನು ಧರಿಸಿರುವುದು. ಅಂತಹ ಶೇಷಾಂತರ್ಯಾಮಿ ಸಂಕರ್ಷಣರೂಪಿಯ ತತ್ತ್ವವು ಹೇಗೆ ತಾನೆ ಸಾಮಾನ್ಯರಿಗೆ ತಿಳಿದೀತು?

ಶ್ರೀಹರಿಯಲ್ಲಿ ಈ ಕಾರಣಕಾರ್ಯಾತ್ಮಕ ಜಗತ್ತು ಪ್ರಕಾಶಿಸುವುದು. ಆ ಶ್ರೀಹರಿಯು ನಮ್ಮ ಮೇಲಿನ ಬಹುದಯೆಯಿಂದ ನಮ್ಮ ಬುದ್ಧಿಗೆ ತಿಳಿಯಲು ಅನುಕೂಲವಾಗುವಂತೆ ಜ್ಞಾನಾನಂದಾತ್ಮಕವಾದ ಆದ್ದರಿಂದಲೇ ದೋಷರಹಿತವಾದ ಪರಿಚ್ಛಿನ್ನ ಪರಿಮಾಣದ ಅವತಾರ ರೂಪಗಳನ್ನು ಧರಿಸಿದನು. ಅತಿಶಯ ಪರಾಕ್ರಮವುಳ್ಳ ಸಿಂಹವು ತನ್ನವರ ಮನಸ್ಸುಗಳನ್ನು ವಶಪಡಿಸಿಕೊಳ್ಳಲು ನಿರ್ದೋಷವಾದ ಯಾವನ ಶೌರ್ಯ ಮೊದಲಾದ ಕ್ರೀಡೆಯನ್ನು ಅಭ್ಯಾಸ ಮಾಡಿತೋ ಅಂಥಹ ಅವನ ತತ್ತ್ವವನ್ನು ಹೇಗೆ ತಿಳಿದಾರು?

ಆ ಶ್ರೀಹರಿಯ ನಾಮವನ್ನು ಯಾರು ಆಕಸ್ಮಿಕವಾಗಿ ಆಗಲಿ, ದುಃಖಿತನಾದವನಾಗಲಿ, ಧರ್ಮ ಭ್ರಷ್ಟನಾಗಲಿ, ಇನ್ನೊಬ್ಬರನ್ನು ಉಪಹಾಸ ಮಾಡುವುದಕ್ಕಾಗಿಯಾಗಲಿ, ಭಕ್ತಿಯಿಂದ ಹೇಳಿದ್ದೇ ಆದರೆ ಮನುಷ್ಯರು ತಮ್ಮ ಎಲ್ಲ ಪಾಪಗಳನ್ನು ತಕ್ಷಣ ಕಳೆದುಕೊಳ್ಳುವರು. ಆದ್ದರಿಂದ ಅಂತಹ ಸಮಸ್ತ ಐಶ್ವರ್ಯಸಂಪನ್ನನಾದ ಶೇಷಾಂತರ್ಯಾಮಿ ಶ್ರೀಹರಿಯಿಂದ ಬೇರೆ ಯಾರನ್ನು ಮೋಕ್ಷಾಪೇಕ್ಷಿಯು ಆಶ್ರಯಿಸಿಯಾನು? ಮೋಕ್ಷಾಪೇಕ್ಷಿಗಳು ಶ್ರೀಹರಿಯನ್ನೇ ಆಶ್ರಯಿಸಬೇಕು.




ಸಾವಿರ ತಲೆಗಳುಳ್ಳ ಈ ಶೇಷಾಂತರ್ಯಾಮಿ ಶ್ರೀಹರಿಯ ಒಂದು ತಲೆಯಲ್ಲಿ ಇರುವ ಬೆಟ್ಟ ನದಿಗಳು ಸಮುದ್ರಗಳು ಮತ್ತು ಅಲ್ಲಿ ವಾಸಿಸುವ ಪ್ರಾಣಿಗಳಿಂದ ಸಹಿತವಾದ ಭೂಮಂಡಲವು ಪರಮಾಣುವಿನಂತೆ ಹಗುರವಾಗಿದೆ. ಅನಂತವಾದುದರಿಂದ ಸಂಪೂರ್ಣವಾಗಿ ತಿಳಿಯಲಾಗದ ಪರಾಕ್ರಮವುಳ್ಳ ಪೂರ್ಣನಾದ ಆ ಶೇಷಾಂತರ್ಯಾಮಿ ಶ್ರೀಹರಿಯ ಪರಾಕ್ರಮಗಳನ್ನು ಸಾವಿರ ನಾಲಿಗೆಯುಳ್ಳವನಾದರೂ ಯಾವನು ಎಣಿಸಿಯಾನು?

ಈ ಬಗೆಯ ಸಾಮರ್ಥ್ಯವುಳ್ಳ, ಕೊನೆಯಿಲ್ಲದ ಪರಾಕ್ರಮವುಳ್ಳ, ತನ್ನ ಗುಣಗಳನ್ನೇ ಅನುಭವಿಸುವ, ತನ್ನ ಗುಣಗಳ ಸಾಮರ್ಥ್ಯವುಳ್ಳ, ಸ್ವತಂತ್ರನಾದ, ಐಶ್ವರ್ಯಶಾಲಿಯಾದ ಅನಂತನು ಭೂಮಿಯ ಆಧಾರವಾದ ಕೆಳಭಾಗದಲ್ಲಿ ಇರುವವನಾಗಿ ಜಗತ್ತಿನ ಸ್ಥಿತಿಗಾಗಿ ಭೂಮಿಯನ್ನು ಧರಿಸಿರುವನು.

ಹೇ ರಾಜನ್! ಕರ್ಮ ಮಾಡುವ ಜೀವರಿಂದ ಅನಿಷಿದ್ಧ ಕರ್ಮಫಲವಾಗಿ ಹೊಂದಬಹುದಾದ ಲೋಕಗಳು ಅವರವರ ಕರ್ಮಕ್ಕೆ ತಕ್ಕಂತೆ ತರತಮಭಾವದಿಂದ ನಿರ್ಮಿತವಾಗಿರುವುವು. ಅವು ವೇದವ್ಯಾಸದೇವರು ನನಗೆ ಉಪದೇಶಿಸಿದಂತೆಯೇ ನಿನಗೆ ವಿಸ್ತರಿಸಲ್ಪಟ್ಟಿತು ಎಂದ ಶುಕಾಚಾರ್ಯರು ನುಡಿದರು.

ಸ್ವರ್ಗಾದಿಗಳನ್ನು ಇಚ್ಛಿಸುವ ಜೀವನ ಸಕಾಮಕರ್ಮದ ಪುಣ್ಯದ ಫಲಗಳಾದ ವಿಸದೃಶವಾದ ಫಲವುಳ್ಳ ಲೋಕಗಳು ಉತ್ತಮ ಮಧ್ಯಮಗಳೆಂದು ಬೇರೆ ಬೇರೆ ರೀತಿಯಾಗಿರುವುವು. ಅಂಥಹ ಲೋಕಗಳು ಇವಷ್ಟೇ ಎಂದು ಶಾಸ್ತ್ರ ಪ್ರಸಿದ್ಧವು. ಅವು ನಿನ್ನ ಪ್ರಶ್ನೆಗನುಗುಣವಾಗಿ ವಿವರಿಸಲ್ಪಟ್ಟವು. ಬೇರೆ ಏನನ್ನು ಹೇಳೋಣ?

|| ★★★ ||

# ಅಥ ಶ್ರೀಮದ್ಭಾಗವತೇ - ಪಂಚಮಸ್ಕಂಧೇ
# ಚತುರ್ವಿಂಶತಿತಮೋಽಧ್ಯಾಯಃ

**ಈ ಅಧ್ಯಾಯದಲ್ಲಿ...**

ನರಕಗಳು ಅತಿ ಭಯಂಕರಗಳಾದವುಗಳು. ಕ್ಷಣಿಕ ಸಾಂಸಾರಿಕ ಭೋಗಗಳು ಬಹುದುಃಖಕಾರಣವಾದ ನರಕಗಳಿಗೆ ಕಾರಣಗಳಾಗುವುವು. ಕಾರಣ ಅವು ಅತಿ ಹೇಯವಾದವುಗಳು. ಅವುಗಳಲ್ಲಿ ಸುದೃಢ ವೈರಾಗ್ಯ ಸಂಪಾದನೆ ಮಾಡಿ ಸಾತ್ವಿಕರು ಮೋಕ್ಷಪ್ರದನಾದ ಭಗವಂತನ ಪೂಜಾ, ತತ್ತ್ವಜ್ಞಾನಾರ್ಜನೆ ಮುಂತಾದ ನಿವೃತ್ತಕರ್ಮಗಳಲ್ಲಿಯೇ ನಿರತರಾಗಬೇಕು ಎಂದು ತಿಳಿಸಲು ನರಕಯಾತನೆಗಳನ್ನು ಈ ಅಧ್ಯಾಯದಲ್ಲಿ ಹೇಳುವರು.

### ನರಕ ವರ್ಣನೆ

ಮೊದಲು ಹಿಂದೆ ಹೇಳಿದ ಜೀವರ ಗತಿಗಳು ಉತ್ತಮಾಧಮಗಳು ಮತ್ತು ವಿಲಕ್ಷಣಗಳು ಎಂಬ ಭೋಗ ವೈಚಿತ್ರ್ಯ ವಿಷಯದಲ್ಲಿ ಪರೀಕ್ಷಿದ್ರಾಜರು ಪ್ರಶ್ನಿಸುತ್ತಾರೆ.

**ರಾಜೋವಾಚ**

**ಮಹರ್ಷೇ ಏತದ್ವೈಚಿತ್ರ್ಯಂ ಲೋಕಸ್ಯ ಕಥಂ ಇತಿ** ||೦||

**ಮಹರ್ಷೇ** ಶುಕಾಚಾರ್ಯರೇ **ಲೋಕಸ್ಯ** ಸ್ವರ್ಗ ಮೊದಲುಮಾಡಿ ಪಾತಾಳದವರೆಗಿನ ಲೋಕಗಳ ಮತ್ತು ವಿಶೇಷವಾಗಿ ಅದರಲ್ಲಿರುವ ಜನರಲ್ಲಿ **ಏತತ್** ಪ್ರತ್ಯಕ್ಷದಿಂದಲೂ ನಿಮ್ಮ ಮಾತಿನಿಂದಲೂ ಆಗಮದಿಂದಲೂ ಸಿದ್ಧವಾದ ಒಬ್ಬನು ಸುಖಿಯೂ ಒಬ್ಬನು ದುಃಖಿಯೂ ಎಂಬ **ವೈಚಿತ್ರ್ಯಂ** ವೈವಿಧ್ಯವು **ಕಥಂ** ಹೇಗೆ ಕೂಡುವುದು?




ಪ್ರವೃತ್ತಿ ಕರ್ಮಗಳನ್ನೇ ಎಲ್ಲರೂ ಮಾಡುತ್ತಿರುವಾಗ ಸಾಮಾನ್ಯ ಸುಖ, ವಿಶೇಷ ಸುಖಗಳಿಗೆ ಕಾರಣವೇನು? ಸುಖವೇ ಆಗಲಿ, ದುಃಖವೇ ಆಗಲಿ ಹೆಚ್ಚು ಕಡಿಮೆ ಎಂಬ ತಾರತಮ್ಯವು ಇರುವುದಕ್ಕೆ ಕಾರಣವೇನೆಂದು ಅಭಿಪ್ರಾಯ. ಈ ಗತಿಗಳು ಎಲ್ಲವೂ ಎಲ್ಲರಿಗೂ ಆಗುವವೇ? ಒಬ್ಬೊಬ್ಬನಿಗೆ ಒಂದೊಂದೇ ಆಗುವುದೇ? ಅಥವಾ ಒಬ್ಬನಿಗೇನೇ ಅನೇಕ ಗತಿಗಳೇ? ಈ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುತ್ತಾರೆ. ।।೧।।

**ಶ್ರೀ ಶುಕ ಉವಾಚ-**

**ಬಹುಗುಣತ್ವಾತ್ಕರ್ತುಃ ಶ್ರದ್ಧಾಯಾಃ ಕರ್ಮಗತಯಃ ಪೃಥಗ್ವಿಧಾಃ ಸರ್ವಾ ಏವ ಸರ್ವಸ್ಯ ತಾರತಮ್ಯೇನ ಭವಂತಿ ।।೨।।**

**ಕರ್ತುಃ** ಕರ್ಮ ಮಾಡುವ ಜೀವನ **ಶ್ರದ್ಧಾಯಾಃ** ನಾನು ಸತ್ತನಂತರ ಹೀಗೆ ಆಗುವೆನು ಎಂಬ ಜ್ಞಾನವೆಂಬ ಶ್ರದ್ಧೆಯು **ಬಹುಗುಣತ್ವಾತ್** ಸಾತ್ವಿಕಾದಿ ಗುಣಗಳಿಂದಲೂ ಪೂಜ್ಯದೇವತಾ ಭೇದದಿಂದಲೂ ಅನೇಕ ಬಗೆಯಾಗಿರುವುದರಿಂದ **ಪೃಥಗ್ವಿಧಾಃ** ಬೇರೆ ಬೇರೆ ರೀತಿಯ **ಕರ್ಮಗತಯಃ** ಕರ್ಮ ಫಲಗಳಾದ ಲೋಕಗಳು **ಸರ್ವಾಃ ಏವ** ಎಲ್ಲವೂ **ಸರ್ವಸ್ಯ** ಎಲ್ಲ ಜೀವರಿಗೂ **ತಾರತಮ್ಯೇನ** ಅವರವರ ಕರ್ಮಾನುಗುಣವಾಗಿ **ಭವಂತಿ** ಆಗುವವು. ಗುಣವೈಚಿತ್ರ್ಯದಿಂದ ನಿರ್ಮಿತವಾದ್ದರಿಂದ ಲೋಕಗಳಲ್ಲಿ ವೈಚಿತ್ರ್ಯವೂ ಯುಕ್ತವೆಂದು ತಾತ್ಪರ್ಯ.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮರ್ಹತಿ । ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ । ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ । ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾಂಸ್ತು ತಾನ್ । ಯಜಂತೇ ಸಾತ್ವಿಕಾ ದೇವಾನ್ ಯಕ್ಷರಂಕ್ಷಾಂಸಿ ರಾಜಸಾಃ । ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ।** ಎಂಬ ಗೀತಾಭಿಪ್ರಾಯವೂ ಇದೇ. ಶ್ರದ್ಧಾವೈಚಿತ್ರ್ಯದಿಂದ ಫಲ ವೈಚಿತ್ರ್ಯವೆಂದು ಭಾವ. **ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ । ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು । ಸತ್ವಾನು ರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ । ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ** ಎಂದು ಶ್ರದ್ಧಾತ್ರೈವಿಧ್ಯ ಹೇಳಲ್ಪಟ್ಟಿದೆ. ।।೨।।

**ಅಥೇದಾನೀಂ ಪ್ರತಿಷಿದ್ಧಲಕ್ಷಣಸ್ಯಾಧರ್ಮಸ್ಯ ತಥೈವ ಕರ್ತುಃ ಶ್ರದ್ಧಾಯಾಃ ವೈಶಾದೃಶ್ಯಾತ್ ಕರ್ಮಫಲಂ ವಿಶದೃಶಂ ಭವತಿ ।।೩।।**

ಹೀಗೆ ಸಾತ್ವಿಕಾದಿ ಪ್ರಭೇದದಿಂದ ಮೂರು ಬಗೆಯಾದ ಪ್ರವೃತ್ತಿ ಧರ್ಮಕ್ಕೂ ಫಲದ ಗತಿಯನ್ನು ಹೇಳಿ ಈಗ ಅಧರ್ಮದ ಗತಿಯನ್ನು ಹೇಳುತ್ತೇನೆಂದು ಪ್ರತಿಜ್ಞೆ ಮಾಡುತ್ತಾರೆ.

**ಪ್ರತಿಷಿದ್ಧಲಕ್ಷಣಸ್ಯ** ನಿಷೇಧವೇ ಪ್ರಮಾಣವಾಗಿರುವ **ಅಧರ್ಮಸ್ಯ** ಪಾಪದ **ತಥೈವ** ಹಾಗೆಯೇ **ಕರ್ತುಃ** ಅದನ್ನು ಮಾಡುವವನ **ಶ್ರದ್ಧಾಯಾಃ** ಪರಲೋಕ ವಿಷಯದ ಬುದ್ಧಿಯು **ವೈಶಾದೃಶ್ಯಾತ್** ವಿರುದ್ಧ ಸ್ವರೂಪದಿಂದ ತಾಮಸತರ ತಾಮಸತಮವೆಂಬ ಭೇದದಿಂದ ವೈಲಕ್ಷಣ್ಯವಿರುವುದರಿಂದ **ಕರ್ಮಫಲಂ** ಅಧರ್ಮದ ಫಲವು **ತಥೈವ** ಧರ್ಮಫಲದಂತೆಯೇ **ವಿಸದೃಶಂ** ವಿಲಕ್ಷಣವಾಗಿ **ಭವತಿ** ಆಗುವುದು **ಅಥ** ಆ ಕಾರಣದಿಂದ

**ಯಾ ಹಿ ಅನಾದ್ಯವಿದ್ಯಾಕಾಮಾನಾಂ ತತ್ಪರಿಣಾಮಲಕ್ಷಣಾಃ ಸೃತಯಃ ಸಹಸ್ರಶಃ ಪ್ರವೃತ್ತಾಸ್ತಾಃ ಪ್ರಾಚುರ್ಯೇಣಾನುವರ್ಣಯಿಷ್ಯಾಮಃ ॥೪॥**

**ಅನಾದ್ಯವಿದ್ಯಾಕಾಮಾನಾಂ** ಅನಾದಿಯಾದ ಅವಿದ್ಯೆಯಿಂದ ವಿಲಸಿತವಾದ ಕಾಮವುಳ್ಳ ಜೀವರ **ತತ್ಪರಿಣಾಮಲಕ್ಷಣಾಃ** ಅಧರ್ಮ ಪರಿಪಾಕ ಸ್ವರೂಪಗಳಾದ **ಸೃತಯಃ** ಗತಿಗಳು **ಸಹಸ್ರಶಃ** ಸಾವಿರಾರು ನರಕರೂಪವಾದವುಗಳು **ಪ್ರವೃತ್ತಾಃ** ಉಂಟಾಗಿರುವುವೋ **ತಾಃ** ಅವುಗಳನ್ನು **ಪ್ರಾಚುರ್ಯೇಣ** ಪ್ರಧಾನವಾಗಿ **ಇದಾನೀಂ** ಈಗ **ಅನುವರ್ಣಯಿಷ್ಯಾಮಃ** ಕ್ರಮವಾಗಿ ಹೇಳುವೆವು **ಹಿ** ಇವು ಶಾಸ್ತ್ರ ಪ್ರಸಿದ್ಧವು.

**ರಾಜೋವಾಚ-**

**ನರಕಾ ನಾಮ ಭಗವನ್ ಕಿಂ ದೇಶವಿಶೇಷಾಃ ಅಥವಾ ಬಹಿಸ್ತ್ರಿಲೋಕ್ಯಾ ಆಹೋಸ್ವಿದಂತರಾಲ ಇತಿ ॥೫॥**

**ಭಗವನ್** ಪೂಜ್ಯರೇ **ನರಕಾ ನಾಮ** ನರಕಗಳೆಂಬುವುವು **ಕಿಂ ದೇಶವಿಶೇಷಾಃ** ಭೂಮಿಯ ಮೇಲೆ ಇರುವ ದೇಶ ವಿಶೇಷಗಳೇ ಅಥವಾ ಮಹಾದುಃಖಾನುಭವಗಳೇ? ದೇಶ ವಿಶೇಷಗಳೆಂದಾದಲ್ಲಿ **ತ್ರಿಲೋಕ್ಯಾಃ ಬಹಿಃ** ಮೂರು ಲೋಕಗಳ ಹೊರಗಿರುವವೇ **ಆಹೋಸ್ವಿತ್** ಅಥವಾ **ಅಂತರಾಲೇ** ಒಳಗಿರುವುದಾದರೆ ಯಾವ ದಿಕ್ಕಿನಲ್ಲಿ ಎಷ್ಟು ಕೆಳಗೆ ಅಥವಾ ಎಷ್ಟು ಮೇಲೆ ಇವೆ? ॥೫॥




**ಋಷಿರುವಾಚ-**

**ಅಂತರಾಲ ಏವ ತ್ರಿಜಗತ್ಯಾಸ್ತು ದಿಶಿ ದಕ್ಷಿಣಸ್ಯಾಮಧಸ್ತಾತ್ ಭೂಮೇರುಪರಿಷ್ಟಾದಂಡ ಜಲಾಶಯಸ್ಯಾಗ್ನಿಷ್ವಾತ್ತಾದಯಃ ಪಿತೃಗಣಾಃ ಯಸ್ಯಾಂ ದಿಶಿ ಸ್ವಾನಾಂ ಗೋತ್ರಾಣಾಂ ಪರಮೇಣ ಸಮಾಧಿನಾ ಸತ್ಯಾ ಏವಾಶಿಷಃ ಆಶಾಸಾನಾ ನಿವಸಂತಿ ॥೬॥**

ಮೂರು ಲೋಕದವೊಳಗೆ ಎಂಬ ಪಕ್ಷವನ್ನು ಒಪ್ಪಿಕೊಂಡು ಉತ್ತರಿಸುತ್ತಾರೆ. **ತ್ರಿಜಗತ್ಯಾಃ** ಮೂರು ಲೋಕದ **ಅಂತರಾಲೇ ಏವ** ಮಧ್ಯದಲ್ಲಿಯೇ **ಭೂಮೇಃ ಅಧಸ್ತಾತ್** ಭೂಮಿಯ ಕೆಳಗೆ **ಅಂಡಜಲಾಶಯಸ್ಯ** ಬ್ರಹ್ಮಾಂಡದ ಒಳಗಿನ ನೀರಿನ (ಗರ್ಭೋದಕದ ಮೇಲೆ) **ಉಪರಿಷ್ಟಾತ್** ಮೇಲೆ **ದಕ್ಷಿಣಸ್ಯಾಂ ದಿಶಿ** ಭರತ ಖಂಡದ ದಕ್ಷಿಣದಿಕ್ಕಿಗೆ ಸರಿಯಾಗಿ ಇರುವುವು. **ಯಸ್ಯಾಂ ದಿಶಿ** ಯಾವ ಈ ದಕ್ಷಿಣ ದಿಕ್ಕಿನಲ್ಲಿ **ಅಗ್ನಿಷ್ವಾತ್ತಾದಯಃ ಪಿತೃಗಣಾಃ** ಅಗ್ನಿಷ್ವತ್ತರೇಮೊದಲಾದ ಪಿತೃಗಣಗಳು **ಪರಮೇಣ ಸಮಾಧಿನಾ** ಅತಿಶಯವಾದ ಶ್ರೀಹರಿಯಲ್ಲಿ ಏಕಾಗ್ರ ಮನಸ್ಸಿನಿಂದ **ಸ್ವಗೋತ್ರಾಣಾಂ** ತಮ್ಮ ಗೋತ್ರದಲ್ಲಿ ಜನಿಸಿದವರಿಗೆ **ಸತ್ಯಾಃ ಆಶಿಷಃ** ಯಥಾರ್ಥಗಳಾದ ಅಭ್ಯುದಯಗಳನ್ನು **ಆಶಾಸಾನಾಃ ಏವ** ಬಯಸುವರಾಗಿಯೇ **ನಿವಸಂತಿ** ವಾಸಿಸುವರು. ॥೬॥

ದುಃಖಾನುಭವವಿದ್ದರೂ ಆ ಶಬ್ದವಾಚ್ಯಗಳಲ್ಲವೆಂದೂ ಅವನ್ನು ಅನುಭವಿಸುವ ಪ್ರದೇಶ ವಿಶೇಷಗಳೇ ನರಕಗಳು ಎಂದು ಭಾವ.

**ಯತ್ರ ಹವಾವ ಭಗವಾನ್ ಪಿತೃರಾಜೋ ವೈವಸ್ವತಃ ಸ್ವವಿಷಯಂ ಪ್ರಾಪಿತೇಷು ಸ್ವಪುರುಷೈರ್ಜಂತುಷು ಸಂಪರೇತೇಷು ಯಥಾ ಕರ್ಮಾವದ್ಯ-ಮೇವಾನುಲ್ಲಂಘಿತ ಭಗವಚ್ಛಾಸನಃ ಸಗಣೋ ದಮಂ ಧಾರಯತಿ ॥೭॥**

**ಯತ್ರ ಹವಾವ** ಯಾವ ಈ ನರಕ ಪ್ರದೇಶದಲ್ಲಿ **ಅನುಲ್ಲಂಘಿತಭಗವಚ್ಛಾಸನಃ** ಶ್ರೀಹರಿಯ ಅಪ್ಪಣೆಯನ್ನು ಮೀರದಿರುವ **ವೈವಸ್ವತಃ** ವಿವಸ್ವಾನ್ ಎಂಬ ಸೂರ್ಯನ ಮಗನಾದ **ಪಿತೃರಾಜಃ** ಯಮಧರ್ಮರಾಜರು **ಸ್ವಪುರುಷೈಃ** ತಮ್ಮ ದೂತರಿಂದ **ಸ್ವವಿಷಯಂ** ತಮ್ಮ ಪ್ರದೇಶಕ್ಕೆ **ಪ್ರಾಪಿತೇಷು** ತರಲ್ಪಟ್ಟ **ಸಂಪರೇತೇಷು** ಮೃತರಾದ **ಜಂತುಷು** ಜೀವಿಗಳಲ್ಲಿ **ಯಥಾಕರ್ಮಾವದ್ಯಂ** ನಿಷಿದ್ಧಕರ್ಮಗಳಿಂದುಟಾದ ಪಾಪಕ್ಕೆ ತಕ್ಕಂತೆ **ದಮಂ** ಶಿಕ್ಷೆಯನ್ನು **ಸಗಣಃ** ಪರಿವಾರ ಸಹಿತನಾಗಿ **ಧಾರಯತಿ** ವಿಧಿಸುವರು.

ಆ ದಿಕ್ಕಿನಲ್ಲಿರುವ ನರಕಗಳನ್ನು ಇಪ್ಪತ್ತೊಂದು ಎಂದು ಹೇಳುವರು

**ತತ್ರಹೈಕೇ ನರಕಾನೇಕವಿಂಶತಿಂ ಗಣಯಂತಿ ಅಥ ತಾಂಸ್ತೇ ರಾಜನ್ನಾಮರೂಪ ಲಕ್ಷಣತೋಽನುಕ್ರಮಿಷ್ಯಾಮಃ ತಾಮಿಸ್ರೋಽಂಧತಾಮಿಸ್ರೋ ರೌರವೋ ಮಹಾರೌರವಃ ಕುಂಭೀಪಾಕಃ ಕಾಲಸೂತ್ರ ಅಸೀಪತ್ರವನಂ ಸೂಕರಮುಖೋ-ಽಂಧಕೂಪಃ ಕೃಮಿಭೋಜನಃ ಸಂದಂಶಸ್ತಪ್ತಸೂರ್ಮಿರ್ವಜ್ರಕಂಟಕಃ ಶಾಲ್ಮಲೀ ವೈತರಣೀ ಪೂಯೋದಃ ಪ್ರಾಣರೂಧೋ ವಿಶಸನಂ ಲಾಲಾಭಕ್ಷಃ ಸಾರಮೇಯಾದನಮವೀಚೀಪೂರಂ(ರಯ) ರೇತಃಪಾನಮಿತಿ ||೮||**

**ಕಿಂಚಾನ್ಯೇಽಪಿ ಕ್ಷಾರಕರ್ದಮೋ ರಕ್ಷೋಗಣಭೋಜನಃ ಶೂಲಪ್ರೋತೋ ದಂದಶೂಕಃ ಪಟನಿರೋಧಃ ಪರ್ಯಾವರ್ತನಂ ಸೂಚೀಮುಖಮಿತ್ಯಷ್ಟಾ-ವಿಂಶತಿನರಕಾ ವಿವಿಧ ಯಾತನಾಭೂಮಯಃ ||೯||**

**ಏಕೇ** ಕೆಲವರು **ತತ್ರ** ಕೆಳಗೆ ದಕ್ಷಿಣ ದಿಕ್ಕಿನಲ್ಲಿ **ಏಕವಿಂಶತಿ** ಇಪ್ಪತ್ತೊಂದು **ನರಕಾನ್** ನರಕಗಳನ್ನು **ಗಣಯಂತಿ** ಎಣಿಸುವರು **ಅಥ** ಆದ್ದರಿಂದ **ರಾಜನ್** ರಾಜನೇ **ತಾನ್** ಅವುಗಳನ್ನು **ನಾಮರೂಪಲಕ್ಷಣತಃ** ಹೆಸರು, ಆಕಾರ, ಲಕ್ಷಣಗಳಿಂದ **ತೇ** ನಿನಗೆ **ಅನುಕ್ರಮಿಷ್ಯಾಮಃ** ಕ್ರಮವಾಗಿ ವಿವರಿಸುವೆವು **ಹ** ಇವುಗಳಲ್ಲಿ ಏಳು ಪ್ರಧಾನಗಳೆಂದು ಸ್ಮೃತಿಪ್ರಸಿದ್ಧವು- ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸೀಪತ್ರವನ, ಸೂಕರಮುಖ, ಅಂಧಕೂಪ, ಕೃಮಿಭೋಜನ, ಸಂದಂಶ, ತಪ್ತ(ಭೂ)ಸೂರ್ಮಿ(ಮಿ), ವಜ್ರಕಂಟಕ, ಶಾಲ್ಮಲೀ, ವೈತರಣೀ, ಪೂಯೋದ, ಪ್ರಾಣರೋಧ, ವಿಶಸನ, ಲಾಲಭಕ್ಷ, ಸಾರಮೇಯಾದನ, ಅವೀಚೀಪೂರ(ರಯ), ರೇತಃಪಾನ ಎಂದು ಇಪ್ಪತ್ತೊಂದು ನರಕಗಳು. ||೮||

ಇಲ್ಲಿಗೆ ಮುಗಿಯಲಿಲ್ಲ ಇನ್ನೂ ಇವೆ ಎಂದು ಹೇಳುತ್ತಾರೆ **ಕಿಂಚ** ಮತ್ತು **ಅನ್ಯೇ** ಇವುಗಳಿಂದ ಭಿನ್ನವಾದ ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲಪ್ರೋತ, ದಂದಶೂಕ, ಪಟನಿರೋಧ, ಪರ್ಯಾವರ್ತನ, ಸೂಚೀಮುಖಗಳೆಂದೂ ಇವೆ **ಇತಿ** ಹೀಗೆ **ಅಷ್ಟಾವಿಂಶತಿ** ಇಪ್ಪತ್ತೆಂಟು **ನರಕಾಃ** ನರಕಗಳು **ವಿವಿಧಯಾತನಾಭೂಮಯಃ** ಅನೇಕ ರೀತಿಯ ತೀವ್ರದುಃಖವನ್ನನುಭವಿಸುವ ಪ್ರದೇಶಗಳು ಎಂದರ್ಥ. ||೯||

 

## ತಾಮಿಸ್ರ ನರಕ

ಇನ್ನು ಮುಂದೆ ಆ ಆ ನರಕಗಳಲ್ಲಿ ಆ ಆ ದುಷ್ಕರ್ಮಗಳ ನಿಮಿತ್ತದುಃಖ-ವಿಶೇಷಗಳನ್ನು ಹೇಳುತ್ತಾರೆ. ಮೊದಲಿಗೆ ತಾಮಿಸ್ರ ನರಕದ ವಿಷಯ ಹೇಳುತ್ತಾರೆ.

**ತತ್ರ ಹ ಯಸ್ತು ಪರವಿತ್ತಾಪತ್ಯಕಲತ್ರಾಣ್ಯಪಹರತಿ ಸ ಹಿ ಕಾಲಪಾಶಬದ್ಧೋ ಯಮ ಪುರುಷೈರತಿಭಯಾನಕೈಸ್ತಾಮಿಸ್ರೇ ನರಕೇ ಬಲಾನ್ನಿಪಾತ್ಯತೇ । ಅನಶನಾತಿಪಾನದಂಡ ಸಂತಾಡನಸಂತರ್ಜನಾದಿಭಿಃ ಪಾತ್ಯಮಾನೋ ಜಂತುರ್ಯತ್ರಕಶ್ಮಲಮಾಸಾದಿತ ಏಕದೈವ ಮೂರ್ಚ್ಛಾಮುಪಯಾತಿ ತಮಿಸ್ರಪ್ರಾಯೇ ॥೧೦॥**

**ತತ್ರ** ಮೇಲೆ ಹೇಳಿದ ಇಪ್ಪತ್ತೆಂಟು ನರಕಗಳಲ್ಲೊಂದಾದ **ತಾಮಿಸ್ರೇ** ತಾಮಿಸ್ರವೆಂಬ ನರಕದಲ್ಲಿ **ಯಸ್ತು** ಯಾವನು **ಪರವಿತ್ತಾಪತ್ಯಕಲತ್ರಾಣಿ ಅಪಹರತಿ** ಮತ್ತೊಬ್ಬರ ಹಣ, ಮಕ್ಕಳು, ಹೆಂಡತಿಯರನ್ನು ಅಪಹರಿಸುವನೋ **ಸಃ** ಅವನು **ಅತಿಭಯಾನಕೈಃ** ಅತ್ಯಂತ ಭಯವನ್ನುಂಟುಮಾಡುವ **ಯಮಪುರುಷೈಃ** ಯಮಭಟರಿಂದ **ಕಾಲಪಾಶಬದ್ಧಃ** ಮೃತ್ಯುಪಾಶದಿಂದ ಕಟ್ಟಲ್ಪಟ್ಟವನಾಗಿ **ಬಲಾತ್** ಬಲಾತ್ಕಾರದಿಂದ **ನಿಪಾತ್ಯತೇ ಹಿ** ನಿಶ್ಚಯವಾಗಿ ತಳ್ಳಲ್ಪಡುವನು **ತಮಿಸ್ರಪ್ರಾಯೇ** ಕತ್ತಲೆಯೇ ಹೆಚ್ಚಾಗಿರುವ **ಯತ್ರ** ಯಾವ ಈ ನರಕದಲ್ಲಿ **ಅನಶನ** ಆಹಾರವಿಲ್ಲದಿರುವುದು **ಅತಿಪಾನ** ಹೆಚ್ಚು ಕುಡಿಯುವುದು **ದಂಡ** ಶಿಕ್ಷೆ **ಸಂತಾಡನ** ಚೆನ್ನಾಗಿ ಹೊಡೆಯುವುದು **ಸಂತರ್ಜನ** ಹೆದರಿಸುವುದು **ಆದಿಭಿಃ** ಮೊದಲಾದವುಗಳಿಂದ **ಪಾತ್ಯಮಾನಃ** ಪೀಡಿಸಲ್ಪಡುವನಾಗಿ **ಜಂತುಃ** ಜೀವನು **ಕಶ್ಮಲಂ** ಬಹುದುಃಖವನ್ನು **ಆಸಾದಿತಃ** ಹೊಂದಿಸಲ್ಪಟ್ಟವನಾಗಿ **ಏಕದಾ ಏವ** ಒಂದೊಂದು ಸಲ ಮಾತ್ರ **ಮೂರ್ಚ್ಛಾಂ ಉಪಯಾತಿ** ಮೂರ್ಚ್ಛೆ ಹೊಂದುವನು. ಏಕದಾ ಎಂದು ಹೇಳಿದ್ದರಿಂದ ಬಿಟ್ಟು ಬಿಟ್ಟು ಪೀಡಿಸಲ್ಪಡುವ ಈ ಪಾಪಿಯು ಕೆಲವು ಸಲ ಮೂರ್ಚ್ಛೆ ಹೋಗದಿರುವುದೂ ಉಂಟು ಎಂದು ತಿಳಿಸಿರುವರು. ॥೧೦॥

## ಅಂಧತಾಮಿಸ್ರ ನರಕ

**ಏವಮೇವಾಂಧತಾಮಿಸ್ರೇ ಯಸ್ತು ವಂಚಯಿತ್ವಾ ಪುರುಷಂ ಧನದಾರಾದೀನು-ಪಭುಂಕ್ತೇ ಯತ್ರ ಶರೀರೀ ನಿಪಾತ್ಯಮಾನೋ ಯಾತನಾಸ್ಥೊ ವೇದನಯಾ**

**ನಷ್ಟಮತಿರ್ನಷ್ಟದೃಷ್ಟಿಶ್ಚ ಭವತಿ ಯಥಾ ಹಿ ವನಸ್ಪತಿರ್ವೃಶ್ಚ್ಯಮಾನಮೂಲ-ಸ್ತಸ್ಮಾದಂಧತಾಮಿಸ್ರಂ ತಮುಪದಿಶಂತಿ ॥೧೧॥**

**ಯಸ್ತು** ಯಾವನಾದರೋ **ಪುರುಷಂ ವಂಚಯಿತ್ವಾ** ಯಜಮಾನನನ್ನು ವಂಚಿಸಿ ಅಂದರೆ ಅವನಿಗೆ ತಿಳಿಯದಂತೆ **ಧನದಾರಾದೀನ್** ಹಣ, ಹೆಂಡತಿ ಮೊದಲಾದವರನ್ನು **ಉಪಭುಂಕ್ತೇ** ತಾನು ಅನುಭವಿಸುವನೋ **ಸಃ** ಅವನು **ಏವಮೇವ ಭಯಂಕರ** ಯಮಭಟರಿಂದ ಮೃತ್ಯುಪಾಶಬದ್ಧನಾಗಿ **ಅಂಧತಾಮಿಶ್ರೇ** ಅಂಧತಾಮಿಶ್ರ ನರಕದಲ್ಲಿ ಬಲಾತ್ಕಾರವಾಗಿ ತಳ್ಳಲ್ಪಡುವನು **ಯತ್ರ** ಯಾವ ಈ ಅಂಧತಾಮಿಶ್ರದಲ್ಲಿ **ವೃಶ್ಚ್ಯಮಾನಮೂಲಃ** ಬುಡಕತ್ತರಿಸಿದ **ವನಸ್ಪತಿಃ** ಮರವು **ಯಥಾ ಹಿ** ಹೇಗೆ ಬೀಳಿಸಲ್ಪಡುವುದೋ **ತಥಾ** ಹಾಗೆ **ವೃಶ್ಚ್ಯಮಾನಮೂಲಃ** ಕತ್ತರಿಸಲ್ಪಡುವ ಜನನೇಂದ್ರಿಯವುಳ್ಳವನಾಗಿ **ನಿಪಾತ್ಯಮಾನಃ** ಬೀಳಿಸಲ್ಪಡುವ **ಶರೀರೀ** ಜೀವನು **ಯಾತನಾಸ್ಥಃ** ಬಹುದುಃಖದಲ್ಲಿರುವನಾಗಿ **ವೇದನಯಾ** ನೋವಿನಿಂದ **ನಷ್ಟಮತಿಃ** ಪ್ರಜ್ಞೆ ಇಲ್ಲದವನಾಗಿ **ನಷ್ಟದೃಷ್ಟಿಶ್ಚ** ಕಣ್ಣು ಕಾಣದವನಾಗಿಯೂ **ಭವತಿ** ಆಗುವನು **ತಸ್ಮಾತ್** ಅಲ್ಲಿ ಬಿದ್ದ ಪಾಪಿಯು ದೃಷ್ಟಿಹೀನನಾಗುವ ಕಾರಣದಿಂದ **ತಂ** ಆ ನರಕವನ್ನು **ಅಂಧತಾಮಿಸ್ರಂ** ಕುರುಡುತನ ಉಂಟು ಮಾಡುವ ಕತ್ತಲೆಯುಳ್ಳದ್ದನ್ನಾಗಿ **ಉಪದಿಶಂತಿ** ಕರೆಯುವರು. ತಾಮಿಸ್ರದಲ್ಲಿ ಬುದ್ಧಿನಾಶ ಅಂಧತಾಮಿಸ್ರದಲ್ಲಿ ಸಂಪೂರ್ಣ ದೃಷ್ಟಿನಾಶವೆಂಬ ವಿಶೇಷವನ್ನು ತಿಳಿಯಬೇಕು. ॥೧೧॥

## ರೌರವ ನರಕ

**ಯಸ್ತ್ವಿಹ ವಾ ಏತದಹಮಿತಿ ಮಮೇದಮಿತಿ ಭೂತದ್ರೋಹೇಣ ಕೇವಲಂ ಕುಟುಂಬಮೇವಾದಿನಂ ಪುಷ್ಣಾತಿ । ಸ ತದಿಹ ವಿಹಾಯ ಸ್ವಯಮೇವ ತದಶುಭೇನ ರೌರವೇ ನಿಪತತಿ ॥೧೨॥**

**ಯಃ ತು** ಯಾವನಾದರೋ **ಇಹ** ಈ ಲೋಕದಲ್ಲಿ **ಏತತ್** ಈ ಶರೀರ ಈ ಗೃಹಾದಿಗಳನ್ನು **ಅಹಂ** ನಾನು ಮಾಡುತ್ತೇನೆ **ಇತಿ** ಎಂದು **ಇದಂ** ಈ ಭೂಮಂಡಲವು (ಹಣವೊದಲಾದವು) **ಮಮ** ನನ್ನದು **ಇತಿ** ಎಂದು ಭ್ರಾಂತಿಯಿಂದ **ಭೂತದ್ರೋಹೇಣ** ಪ್ರಾಣಿಗಳಿಗೆ ದ್ರೋಹ ಮಾಡಿ **ಕೇವಲಂ ಕುಟುಂಬಂ** ತನ್ನ ಕುಟುಂಬವನ್ನು ಮಾತ್ರ **ಅನುದಿನಂ** ಏವ ಯಾವಾಗಲೂ (ಪ್ರತಿದಿನವೂ) **ಪುಷ್ಣಾತಿ** ಪೋಷಿಸುವನೋ **ಸಃ** ಆ ಪಾಪಿಯು **ತತ್** ಅದೆಲ್ಲವನ್ನು **ಇಹ** ಈ ಲೋಕದಲ್ಲಿಯೇ




**ವಿಹಾಯ** ಬಿಟ್ಟು **ತದಶುಭೇನ** ಆ ಪಾಪದಿಂದ **ಸ್ವಯಮೇವ** ತಾನೇ **ರೌರವೇ ನಿಪತತಿ** ರೌರವ ನರಕದಲ್ಲಿ ಬೀಳುವನು (ಸತ್ತಮೇಲೆ). ಎರಡು ಇತಿ ಶಬ್ದಗಳು ಅಹಂತಾ, ಮಮತಾ ಪ್ರತ್ಯೇಕವಾಗಿ ನರಕ ಕಾರಣವೆಂದು ಸೂಚಿಸುವುವು.

ಮತ್ತೊಂದು ರೀತಿಯಿಂದ ರೌರವವನ್ನು ನಿರ್ವಚನ ಮಾಡುತ್ತಾರೆ

**ಯೇ ಚೇಹ ಯಥೈವಾಮುನಾ ವಿಹಿಂಸಿತಾ ಜಂತವಃ ಪರತ್ರ ಯಮಯಾತನಾ ಉಪಗತಂ ತ ಏವ ರುರವೋ ಭೂತ್ವಾ ಯಥಾ ತಮೇವ ವಿಹಿಂಸಂತಿ ತಸ್ಮಾದ್ರೌರವಮಿತ್ಯಾಹುಃ ರುರುರಿತಿ ಸರ್ಪಾದತಿಕ್ರೂರಸತ್ವಾಪದೇಶಃ ।।೧೩।।**

**ಯಥಾ** ಯಾವ ಕಾರಣದಿಂದ **ಅಮುನಾ ಏವ** ಇವನಿಂದಲೇ **ಇಹ** ಇಲ್ಲಿ **ವಿಹಿಂಸಿತಾಃ** ಹಿಂಸಿಸಲ್ಪಟ್ಟ **ಯೇ ಚ ಜಂತವಃ** ಯಾವ ಪ್ರಾಣಿಗಳಿವೆಯೋ **ತೇ ಏವ** ಅವುಗಳೇ **ಪರತ್ರ** ಪರಲೋಕದಲ್ಲಿ **ಯಮಯಾತನಾ ಉಪಗತಂ** ಯಮದೇವರಿಂದ ತೀವ್ರವೇದನೆಗೊಳಗಾದ **ತಂ ಏವ** ಅವನನ್ನೇ **ರುರವಃ ಭೂತ್ವಾ** ನಾನಾ ವಿಷಮುಖ ಮೃಗಗಳಾಗಿ **ಯಥಾ** ಹೇಗೆ **ವಿಹಿಂಸಂತಿ** ಹಿಂಸಿಸುವುವೋ **ತಸ್ಮಾತ್** ಆ ಕಾರಣದಿಂದ ಆ ನರಕವನ್ನು **ರೌರವಮಿತ್ಯಾಹುಃ** ರೌರವವೆಂದು ಕರೆಯುವರು. ಅಂಥಹ ಅನುಸಂಧಾನವುಳ್ಳ ಯಮದೂತರೇ ರುರುಗಳಾಗುವರು ಎಂದೂ ಅರ್ಥ ಮಾಡಿರುವರು. **ರುರು ಇತಿ** ರುರು ಎಂದು **ಸರ್ಪಾದತಿಕ್ರೂರಸತ್ವಾಪದೇಶಃ** ಹಾವಿಗಿಂತಲೂ ಅತಿಕ್ರೂರ ಪ್ರಾಣಿಯ ಹೆಸರು. ।।೧೩।।

## ಮಹಾರೌರವ ನರಕ

**ಏವಮೇವ ಮಹಾರೌರವೋ ಯತ್ರ ನಿಪತಿತಪುರುಷಂ ಕ್ರವ್ಯಾದಾ ರುರುವಸ್ತತ್ಕ್ರವ್ಯೇಣ ಖಾದಯಂತಿ ಯಃ ಕೇವಲಂ ಹಿ ದೇಹಂಭರಃ ।।೧೪।।**

**ಏವಂ ಏವ** ಇದೇ ರೀತಿಯಲ್ಲಿಯೇ **ಮಹಾರೌರವಃ** ಮಹಾರೌರವ ನರಕವೂ ದುಃಖಕರ **ಯತ್ರ** ಯಾವ ಈ ನರಕದಲ್ಲಿ **ನಿಪತಿತಂ** ಬಿದ್ದ (ಪಾಪದ ಫಲವಾಗಿ) **ಪುರುಷಂ** ಜೀವನನ್ನು **ಕ್ರವ್ಯಾದಾಃ** ಮಾಂಸಾಹಾರಿಗಳಾದ **ರುರವಃ** ಅತಿ ಕ್ರೂರ ವಿಷ ಪ್ರಾಣಿಗಳು **ತತ್ಕ್ರವ್ಯೇಣ** ಆ ಪಾಪದಿಂದ **ಖಾದಯಂತಿ** ತಿನ್ನುವವು **ಯಃ** ಯಾವನು **ಕೇವಲಂ** ದೇವತಾದಿಗಳಿಗೆ ಕೊಡದೇ **ದೇಹಂಭರಃ** ತನ್ನ ದೇಹ ಪೋಷಣೆಗಾಗಿಯೇ ತಿನ್ನುವನೋ **ಸಃ** ಅವನು ಆ ನರಕದಲ್ಲಿ ಬೀಳುವನು ಅಥವಾ ನರಕದಲ್ಲಿ ಬಿದ್ದ ಯಾವನು ಕೇವಲ ದೇಹಂಭರನೋ ಅವನನ್ನು ಎಂದಾದರೂ ಅನ್ವಯ. ।।೧೪।।

## ಕುಂಭೀಪಾಕ ನರಕ

**ಯಸ್ತ್ವಿಹ ವಾ ಉಗ್ರಃ ಪಶೂನ್ ಪಕ್ಷಿಣೋ ವಾ ಪ್ರಾಣಿನಃ ಉಪರುಂಧಯತಿ ತಮಕರುಣಂ ಪುರುಷಾದೈರಪಿ ವಿಗರ್ಹಿತಮಮುತ್ರ ಯಮಾನುಚರಾಃ ಕುಂಭೀಪಾಕೇ ತಪ್ತತೈಲ ಉಪರುಂಧಯಂತಿ ॥೧೫॥**

**ಇಹ** ಈ ಲೋಕದಲ್ಲಿ **ಉಗ್ರಃ** ಕ್ರೂರನಾದ **ಯಃ ತು** ಯಾವನು **ಪಶೂನ್** ಪಶುಗಳನ್ನಾಗಲಿ **ಪಕ್ಷಿಣಃ ವಾ** ಪಕ್ಷಿಗಳನ್ನಾಗಲಿ **ಪ್ರಾಣಿನಃ** ಪ್ರಾಣಿಗಳನ್ನು **ಉಪರುಂಧಯತಿ** ಉಸಿರಾಡಲು ಬರದಂತೆ ಮಾಡುವನೋ (ಬೇಯಿಸುವನೋ, ರಧಿ ದಾಹೇ ಎಂದು ಧಾತು) **ತಂ** ಆ **ಪುರುಷಾದೈಃ ಅಪಿ** ನರಭಕ್ಷಕರಿಂದಲೂ **ವಿಗರ್ಹಿತಂ** ನಿಂದಿಸಲ್ಪಡುವ **ಅಕರುಣಂ** ಕರುಣೆಯಿಲ್ಲದವನನ್ನು **ಅಮುತ್ರ** ಸತ್ತಮೇಲೆ ಪರಲೋಕದಲ್ಲಿ **ಯಮಾನುಚರಾಃ** ಯಮಭಟರು **ತಪ್ತತೈಲೇ** ಕಾದ ಎಣ್ಣೆಯಿಂದ ತುಂಬಿದ **ಕುಂಭೀಪಾಕೇ** ಕುಂಭೀಪಾಕವೆಂಬ ನರಕದಲ್ಲಿ **ಉಪರುಂಧಯಂತಿ** ಉಸಿರಾಡಲು ಬರದಂತೆ ಮಾಡುವರು (ಬೇಯಿಸುವರು). ॥೧೫॥

## ಕಾಲಸೂತ್ರ ನರಕ

**ಯಸ್ತ್ವಿಹ (ಮಾತೃ)ಪಿತೃಭ್ರಾತೃ(ವಿಪ್ರ)ಬ್ರಹ್ಮಧ್ರುಕ್ ತದರ್ಥಾಪಹರ್ತಾ ವಾ ಸ ಕಾಲ ಸೂತ್ರಸಂಜ್ಞೇ ನರಕೇಽಯುತಯೋಜನಪರಿಮಂಡಲೇ ತಾಮ್ರಮಯೇ ಖಲೇ ತಪ್ತತಲ ಉಪರ್ಯಧಸ್ತಾದಗ್ನ್ಯರ್ಕಾಭ್ಯಾಂ ತಪ್ಯಮಾನೇಽ-ಭಿನಿವೇಶಿತಃ ಕ್ಷುತ್ಪಿಪಾಸಾಭ್ಯಾಂ ಚ ದಹ್ಯಮಾನಾಂತರ್ಬಹಿಃಶರೀರ ಆಸ್ತೇ ಶೇತೇ ತಿಷ್ಠತಿ ಪರಿಧಾವತಿ ಯಾಚತಿ ಚ ಯಾವಂತಿ ಪಶುರೋಮಾಣಿ ತಾವದ್ವರ್ಷಸಹಸ್ರಾಣಿ ಕಾಲಸೂತ್ರ ಸಂಜ್ಞಕೇ ನರಕೇ ವಸತಿ ॥೧೬॥**

**ಯಃ** ಯಾವನು **ಇಹ** ಈ ಲೋಕದಲ್ಲಿ **ಪಿತೃ** ತಂದೆ **ಭ್ರಾತೃ** ಸಹೋದರ **ಬ್ರಹ್ಮ** ಬ್ರಾಹ್ಮಣರು **ಮಾತೃ** ತಾಯಿ (**ವಿಪ್ರಬ್ರಹ್ಮಧೃಕ್** ಎಂಬ ಪಾಠದಲ್ಲಿ **ವಿಪ್ರ** ಬ್ರಾಹ್ಮಣ **ಬ್ರಹ್ಮ** ದೇವರು) ಇವರಿಗೆ **ಧ್ರುಕ್** ದ್ರೋಹ ಮಾಡುವನೋ **ಸಃ** ಅವನು **ಅಯುತ ಯೋಜನಪರಿಮಂಡಲೇ** ಹತ್ತುಸಾವಿರ ಯೋಜನ ವಿಸ್ತಾರವಾಗಿ ದುಂಡಾಗಿರುವ **ತಾಮ್ರಮಯೇ** ತಾಮ್ರದಿಂದ ಮಾಡಿದ **ಖಲೇ** ಧಾನ್ಯವನ್ನು ಒಣಗಿಸುವ ಖಣದಂತಿರುವ **ತಪ್ತತಲೇ** ಕೆಳಗೆ ಕಾದಿರುವ **ಉಪರಿ** ಮೇಲೆ **ಅರ್ಕ** ಸೂರ್ಯ **ಅಧಸ್ತಾತ್** ಕೆಳಗೆ **ಅಗ್ನಿಭ್ಯಾಂ** ಅಗ್ನಿಯಿಂದಲೂ **ತಪ್ಯಮಾನೇ** ಕಾಯುತ್ತಿರುವ




**ಕಾಲಸೂತ್ರೇ** ಕಾಲಸೂತ್ರವೆಂಬ ನರಕದಲ್ಲಿ **ಅಭಿನಿವೇಶಿತಃ** ಇರಿಸಲ್ಪಟ್ಟವನಾಗಿ **ಕ್ಷುತ್ ಪಿಪಾಸಾಭ್ಯಾಂ ಚ** ಹಸಿವೆ ನೀರಡಿಕೆಗಳಿಂದ ಕೂಡ **ದಹ್ಯಮಾನಃ** ಸುಡುತ್ತಿರುವ **ಅಂತಃ ಬಹಿಃ ಶರೀರಃ** ದೇಹದ ಒಳಹೊರಭಾಗವುಳ್ಳವನಾಗಿ **ಆಸ್ತೇ** ಇರುವನು. **ಶೇತೇ** ಮಲಗುವನು **ತಿಷ್ಠತಿ** ನಿಲ್ಲುವನು **ಪರಿಧಾವತಿ** ಓಡುವನು **ಯಾಚತೇ ಚ** ಇದರಿಂದ ಬಿಡಿಸಿರಿ ಎಂದು ಬೇಡುವನು **ಪಶುರೋಮಾಣಿ** ಇವನು ದ್ರೋಹ ಮಾಡಿದ ಪಶುಗಳ ಮೈಮೇಲಿನ ಕೂದಲುಗಳು **ಯಾವಂತಿ (ಸಹಸ್ರಾಣಿ)** ಎಷ್ಟು ಸಾವಿರವೋ **ತಾವದ್ವರ್ಷಸಹಸ್ರಾಣಿ** ಅಷ್ಟು ಸಾವಿರ ವರ್ಷ **ಕಾಲಸೂತ್ರಸಂಜ್ಞಕೇ ನರಕೇ** ಕಾಲಸೂತ್ರವೆಂಬ ನರಕದಲ್ಲಿ **ವಸತಿ** ವಾಸಿಸುವನು. ಪಶು ರೋಮ ಎಂದು ಹೇಳಿದ್ದರಿಂದ ಪಿತ್ರಾದಿ ದ್ರೋಹ ಮಾತ್ರವಲ್ಲ ಪಶುದ್ರೋಹಿಯೂ ಈ ನರಕಕ್ಕೆ ಬೀಳುವನೆಂದು ಹೇಳಿದಂತಾಯಿತು. ||೧೬||

**ಯಸ್ತ್ವಿಹ ವೈ ನಿಜವೇದಪಥಾದನಾಪದ್ಯಪಗತಃ ಪಾಷಂಡಂ ಚೋಪಗತಸ್ತಮಸಿ-ಪತ್ರವನಂ ಪ್ರವೇಶ್ಯ ಕಷಯಾ ಪ್ರಹರಂತಿ ತತ್ರ ಹಾಸಾದಿತಃ ಇತಸ್ತತೋ ಧಾವಮಾನಃ ಉಭಯತೋ ಧಾರೈಸ್ತಾಲವನಾಸಿಪತ್ರೈಶ್ಛಿದ್ಯಮಾನಸರ್ವಾಂಗೋ ಹಾ ಹತೋಽಸ್ಮೀತಿ ಪರಮಯಾ ವೇದನಯಾ ಮೂರ್ಛಿತಃ ಪದೇ ಪದೇ ನಿಪತತಿ ಸ್ವಧರ್ಮಹಾ ಪಾಷಂಡಾನುಗತಃ ಫಲಂ ಭುಂಕ್ತೇ ||೧೭||**

**ಇಹ** ಈ ಲೋಕದಲ್ಲಿ **ಯಃ** ಯಾವನು **ಅನಾಪದಿ** ಆಪತ್ಕಾಲವಿಲ್ಲದಿರುವಾಗ **ನಿಜವೇದಪಥಾತ್** ತನ್ನ ವೈದಿಕ ಮಾರ್ಗದಿಂದ **ಅಪಗತಃ** ದೂರನಾಗಿ (**ಕುಪಥಾಃ** ದುಷ್ಟ ಅವೈದಿಕ ಮಾರ್ಗಗಳನ್ನು) **ಪಾಖಂ(ಷಂ)ಡಂ** ಬೌದ್ಧ ಜೈನಾದಿ ಮತಗಳನ್ನು **ಉಪಗತಃ** ಆಶ್ರಯಿಸುವನೋ **ತಂ** ಅವನನ್ನು **ಅಸಿಪತ್ರವನಂ** ಅಸಿಪತ್ರವನವೆಂಬ ನರಕದಲ್ಲಿ **ಪ್ರವೇಶ್ಯ** ಪ್ರವೇಶ ಮಾಡಿಸಿ **ಕಶಯಾ ಪ್ರವಹಂತಿ** ಚಾವಟಿಯಿಂದ ಚೆನ್ನಾಗಿ ಹೊಡೆಯುವರು (**ಅನಾಪದಿ** ಎಂದು ಹೇಳಿದ್ದರಿಂದ ಆಪತ್ಕಾಲದಲ್ಲಿ ಒಂದು ಬಗೆಯ ಅವಕಾಶವಿತ್ತಿರುವರು). **ತತ್ರ** ಆ ನರಕದಲ್ಲಿ **ಆಸಾದಿತಃ ಸನ್** ಸೇರಿದವನಾಗಿ **ಇತಸ್ತತಃ** ಏಟು ತಡೆಯಲಾಗದೇ ಇತ್ತ ಅತ್ತ **ಧಾವಮಾನಃ** ಓಡುತ್ತ **ಉಭಯತೋ ಧಾರೈಃ** ಎರಡೂ ಕಡೆಗಳಲ್ಲಿ ಚೂಪಾಗಿರುವ **ತಾಲವನಾಸಿಪತ್ರೈಃ** ಖಡ್ಗದಂತಿರುವ ತಾಳೆಗಿಡಗಳ ಎಲೆಗಳಿಂದ **ಛಿದ್ಯಮಾನಸರ್ವಾಂಗಃ** ಕತ್ತರಿಸಲ್ಪಡುವ ಎಲ್ಲ ಅವಯವಗಳುಳ್ಳವನಾಗಿ **ಹಾ** ಅಯ್ಯೋ **ಹತಃ ಅಸ್ಮಿ** ನಾನು ಕೊಲ್ಲಲ್ಪಟ್ಟೆನು **ಇತಿ** ಎಂದು ಕಿರುಚುತ್ತ **ಪರಮಯಾ ವೇದನಯಾ** ಅತಿಶಯ ನೋವಿನಿಂದ **ಪದೇ ಪದೇ**

ಹೆಜ್ಜೆ ಹೆಜ್ಜೆಗೆ **ಮೂರ್ಛಿತಃ ನಿಪತತಿ** ಮೂರ್ಛೆ ಹೊಂದಿ ಬೀಳುವನು **ಸ್ವಧರ್ಮಹಾ** ತನ್ನ ವರ್ಣಾಶ್ರಮಧರ್ಮಗಳನ್ನು ತ್ಯಜಿಸಿದ **ಪಾಷಂಡಾನುಗತಃ** ಪಾಷಂಡ ಮತವನ್ನನುಸರಿಸಿದ ಆ ಪಾಪಿಯು **ಫಲಂ ಭುಂಕ್ತೇ** ಪಾಪದ ಫಲವನ್ನು ಅನುಭವಿಸುವನು. ||೧೭||

## ಸೂಕರಮುಖ ನರಕ

**ಯಸ್ತ್ವಿಹ ರಾಜಾ ರಾಜಪುರುಷೋ ವಾ ಅದಂಡ್ಯೇ ದಂಡಂ ಪ್ರಣಯತಿ ಬ್ರಾಹ್ಮಣೇ ವಾ ಶರೀರದಂಡಂ ಸ ಪಾಪೀಯಾನ್ನರಕೇಽಮುತ್ರ ಸೂಕರಮುಖೇ ನಿಪತತಿ ತತ್ರಾತಿ ಬಲೈರ್ನಿಷ್ಪೀಡ್ಯಮಾನಾವಯವೋ ಯಥೈವೇಕ್ಷುದಂಡಂ ಆರ್ತಸ್ವರೇಣ ಸ್ವನಯನ್ ಕ್ವಚಿನ್ಮೂರ್ಛಿತಃ ಕಶ್ಮಲಮುಪಗತೋ ಯಥೈವೇಹ ದೃಷ್ಟದೋಷ ಉಪರದ್ಧಃ ||೧೮||**

**ಇಹ** ಈ ಲೋಕದಲ್ಲಿ **ರಾಜಾ** ರಾಜನಾಗಲಿ **ರಾಜಪುರುಷಃ** ರಾಜಭಟರಾಗಲಿ **ಯಃ** ಯಾವನು **ಅದಂಡ್ಯೇ** ಶಿಕ್ಷೆಗೆ ಅರ್ಹನಲ್ಲದವನಿಗೆ **ದಂಡಂ** ಶಿಕ್ಷೆಯನ್ನು **ಪ್ರಣಯತಿ** ಮಾಡುವನೋ **ಬ್ರಾಹ್ಮಣೇ ವಾ** ತಪ್ಪುಮಾಡಿರುವ ಬ್ರಾಹ್ಮಣನಿಗೆ **ಶರೀರದಂಡಂ** ಶಾರೀರೀಕ ಶಿಕ್ಷೆಯನ್ನು **ಪ್ರಣಯತಿ** ವಿಧಿಸುವನೋ **ಪಾಪೀಯಾನ್** ಅತ್ಯಂತ ಪಾಪಿಯಾದ **ಸಃ** ಅವನು **ಅಮುತ್ರ** ಪರಲೋಕದಲ್ಲಿ (ಸತ್ತಮೇಲೆ) **ಸೂಕರಮುಖೇ ನರಕೇ** ಸೂಕರ ಮುಖವೆಂಬ ನರಕದಲ್ಲಿ **ನಿಪತತಿ** ಬೀಳುವನು. **ಇಹ** ಈ ಲೋಕದಲ್ಲಿ **ದೃಷ್ಟದೋಷಃ** ಕಳ್ಳತನಮೊದಲಾದ (ದೋಷ) ಅಪರಾಧಗಳಿಂದ ಸಿಕ್ಕಿಬಿದ್ದ ಕಳ್ಳನು (ತಿಳಿಯಲ್ಪಟ್ಟ ದೋಷವುಳ್ಳವನು) **ಉಪರುದ್ಧಃ** ಸೆರೆಮನೆಯಲ್ಲಿ ಬೇಡಿಯಿಂದ ಬಂಧಿತನಾಗಿ **ಯಥೈವ** ಹೇಗೆ **ಕಶ್ಮಲಂ** ಬಹುದುಃಖವನ್ನು **ಉಪಗತಃ ಭವತಿ** ಹೊಂದುವನೋ (ಹೊಂದಿದವನಾಗುವನೋ) **ತಥೈವ** ಹಾಗೆಯೇ **ತತ್ರ** ಆ ಸೂಕರ ಮುಖದಲ್ಲಿ ಬಿದ್ದ ಪಾಪಿಯು ಆ ನರಕದಲ್ಲಿ **ಅತಿಬಲೈಃ** ಅತ್ಯಂತ ಬಲಿಷ್ಠಗಳಾದ ಹಂದಿಯಾಕಾರದ ಯಮಭಟರಿಂದ **ಯಥೈವ ಇಕ್ಷುದಂಡಃ** ಕಬ್ಬಿನಂತೆ **ನಿಷ್ಪೀಡ್ಯ(ನಿಷ್ಪೇಷ್ಯ)ಮಾನಾವಯವಃ** ಹಿಂಡಲ್ಪಡುವ ಎಲ್ಲ ಅವಯವಗಳುಳ್ಳವನಾಗಿ **ಆರ್ತಸ್ವರೇಣ** ದೈನ್ಯವಾದ ದನಿಯಿಂದ **ಸ್ತನಯನ್** ಕೂಗಿಕೊಳ್ಳುತ್ತ **ಕ್ವಚಿತ್** ಕೆಲವೊಮ್ಮೆ **ಮೂರ್ಛಿತಃ** ಮೂರ್ಛಿತನಾಗಿ **ಕಶ್ಮಲಂ ಉಪಗತಃ** ಬುದ್ಧಿಭ್ರಮೆಯನ್ನು ಹೊಂದುವನು. ||೧೮||




## ಅಂಧಕೂಪ ನರಕ

**ಯಸ್ತ್ವಿಹ ವೈ ಭೂತಾನಾಮೀಶ್ವರಕಲ್ಪಿತವೃತ್ತೀನಾಮವಿದಿತಪರವ್ಯಥಾನಾಂ ಸ್ವಯಂ ಪುರುಷೋಽಪಕಲ್ಪಿತವೃತ್ತಿರ್ವಿದಿತಪರವ್ಯಥೋ ವ್ಯಥಾಮಾಚರತಿ ಸ ಪರತ್ರಾಂಧಕೂಪೇ ತದಭಿದ್ರೋಹೇಣ ನಿಪತತಿ ತತ್ರ ಹಾಸೌ ತೈರ್ಜಂತುಭಿಃ ಪಶುಮೃಗಪಕ್ಷಿ ಸರೀಸೃಪೈರ್ಮಶಕಯೂಕಮತ್ಕುಣಮಕ್ಷಿಕಾದಿಭಿರ್ಯೇ ಕೇಚನೇಹಾಭಿದ್ರೋಗ್ಧಾರಸ್ತೈಃ ಸರ್ವತೋಽಭಿದ್ರುಹ್ಯಮಾಣಸ್ತಮಸಿ ವಿಹತ-ನಿದ್ರಾನಿರ್ವೃತ್ತಿರಲಬ್ಧಾವಸ್ಥಾನಃ ಪರಿಕ್ರಾಮತಿ ಯಥಾ ಕುಶರೀರೇ ಜೀವಃ ||೧೯||**

**ಸ್ವಯಂ** ತಾನು **ಪುರುಷೋಪಕಲ್ಪಿತವೃತ್ತಿಃ** ಶ್ರೀಹರಿಯಿಂದ ನಿರ್ಮಿತವಾದ ಹೊದಿಕೆ, ಅನ್ನ ಮುಂತಾದ ಜೀವನೋಪಾಯವುಳ್ಳ ಅಥವಾ ಶ್ರೀಹರಿಯಿಂದ ನಿರ್ಮಿತವಾದ ವಿಧಿನಿಷೇಧರೂಪ ಜೀವನೋಪಾಯವುಳ್ಳ **ವಿದಿತಪರವ್ಯಥಃ** ಮತ್ತೊಬ್ಬರ ವೇದನೆಯನ್ನು ಬಲ್ಲ **ಯಃ** ಯಾವನು **ಇಹ** ಈ ಲೋಕದಲ್ಲಿ **ಈಶ್ವರಕಲ್ಪಿತವೃತ್ತೀನಾಂ** ಶ್ರೀಹರಿಯಿಂದ ನಿರ್ಮಿತವಾದ ಸ್ವಾಭಾವಿಕವೆನಿಸುವ ಮನುಷ್ಯರಕ್ತಪಾನವೇ ಜೀವನೋಪಾಯವಾಗಿವುಳ್ಳ **ಅವಿದಿತ ಪರವ್ಯಥಾನಾಂ** ಮತ್ತೊಬ್ಬರ ವೇದನೆಯನ್ನರಿಯದ **ಭೂತಾನಾಂ** ಸೊಳ್ಳೆ, ತೆಗಣೆ ಮೊದಲಾದ ಪ್ರಾಣಿಗಳಿಗೆ **ಅಪಕಲ್ಪಿತವೃತ್ತಿಃ** ಜೀವನಕ್ಕೆ ಅವಕಾಶ ಕಲ್ಪಿಸಲು ಸಮರ್ಥನಾಗದೆ **ವ್ಯಥಾಂ** ನೋವನ್ನು **ಆಚರತಿ** ಉಂಟು ಮಾಡುವನೋ **ಸಃ** ಅವನು **ಪರತ್ರ** ಸತ್ತಮೇಲೆ ಪರಲೋಕದಲ್ಲಿ **ತದಭಿದ್ರೋಹೇಣ** ಆ ಪ್ರಾಣಿಗಳಿಗೆ ದ್ರೋಹ ಮಾಡಿದ್ದಕ್ಕಾಗಿ **ಅಂಧಕೂಪೇ ನಿಪತತಿ** ಅಂಧಕೂಪವೆಂಬ ನರಕದಲ್ಲಿ ಬೀಳುವನು.

**ತತ್ರ** ಅಲ್ಲಿ **ಅಸೌ** ಇವನು **ತೈಃ ಜಂತುಭಿಃ** ಆ ಪ್ರಾಣಿಗಳಿಂದ ಅಂದರೆ **ಇಹ** ಈ ಲೋಕದಲ್ಲಿ **ಅಭಿದ್ರೋಗ್ಧಾರಃ** ದ್ರೋಹಕ್ಕೆ ಒಳಗಾದ **ಯೇ ಕೇಚನ** ಯಾವುಗಳೋ **ತೈಃ** ಅಂತಹ **ಪಶು ಮೃಗ ಪಕ್ಷಿ ಸರೀಸೃಪ** ಸರ್ಪ **ಮಶಕ** ಸೊಳ್ಳೆ **ಯೂಕ** ಹೇನು **ಮತ್ಕುಣ** ತಿಗಣೆ **ಮಕ್ಷಿಕ** ನೊಣ **ಆದಿಭಿಃ** ಮೊದಲಾದವುಗಳಿಂದ **ತಮಸಿ** ಕತ್ತಲೆಯಲ್ಲಿ **ಸರ್ವತಃ ಅಭಿದ್ರುಹ್ಯಮಾಣಃ** ಎಲ್ಲ ಕಡೆಗಳಿಂದಲೂ ಹಿಂಸಿತನಾಗಿ (ಕಚ್ಚಲ್ಪಟ್ಟು ನಿದ್ದೆಯ ಸುಖವಿಲ್ಲದೆ) **ವೃತ್ತಿ** ಎಂಬ ಪಾಠದಲ್ಲಿ ನಿದ್ದೆಯೇ ಇಲ್ಲದೆ **ಅಲಬ್ಧಾವಸ್ಥಾನಃ** ಒಂದೇ ಕಡೆ ನಿಲ್ಲಲಾಗದೆ **ಕುಶರೀರೇ** ಕುಷ್ಠಾದಿರೋಗಗಳಿಂದ ದೂಷಿತವಾದ ದೇಹದಲ್ಲಿ ಇರುವ **ಜೀವಃ ಯಥಾ** ಜೀವನಂತೆ **ಪರಿಕ್ರಾಮತಿ** ಸುತ್ತುವನು. ||೧೯||

## ಕೃಮಿಭೋಜನ ನರಕ

**ಯಸ್ತ್ವಿಹವಾಽಸಂವಿಭಜ್ಯಾಶ್ನಾತಿ ಯತ್ಕಿಂಚನೋಪನತಮನಿವರ್ತಿತ-ಯಜ್ಞೋಪಾಯಮಸಂಸ್ಕೃತಂ ಸ ಪರತ್ರ ಕೃಮಿಭೋಜನೇ ನರಕಾಧಮೇ ನಿಪತತಿ ತತ್ರ ಶತಸಹಸ್ರಯೋಜನೇ ಕೃಮಿಕುಂಡೇ ಕೃಮಿಭೂತಃ ಸ್ವಯಂ ಕೃಮಿಭಿರೇವ ಭಕ್ಷ್ಯಮಾಣಃ ಕೃಮಿಭೋಜನೋ ಯಾವದಪ್ರದತ್ತಾಕೃತ ನಿರ್ವೇಶಸ್ತಾವದಾತ್ಮಾನಂ ಪಾತಯತಿ ।।೨೦।।**

**ಯಃ** ಯಾವನು ಇಹ ಈ ಲೋಕದಲ್ಲಿ **ಉಪನತಂ** ಶ್ರೀಹರಿಯ ಇಚ್ಛೆಯಿಂದ ತನಗೆ ದೊರೆತ **ಯತ್ಕಿಂಚನ** ಅನ್ನ ಮೊದಲಾದ ತಿನ್ನುವ ಪದಾರ್ಥಗಳನ್ನು **ಅಸಂವಿಭಜ್ಯ** ಅತಿಥಿ, ಭೃತ್ಯ, ಬಾಲ, ವೃದ್ಧ ಮೊದಲಾದವರಿಗೆ ಹಂಚಿಕೊಡದೆ **ಅಶ್ನಾತಿ** ತಾನೊಬ್ಬನೇ ತಿನ್ನುವನೋ **ಯಃ** ಯಾವನು **ಅನಿವರ್ತಿತಯಜ್ಞೋಪಾಯಂ** ದೇವತಾಪೂಜಾ ರೂಪವಾದ ಯಾಗಾದಿಶ್ರೇಯಸ್ಸಾಧನವನ್ನಾಗಿ ಮಾಡದಿರುವ ಅನ್ನಾದಿಗಳನ್ನು ತಿನ್ನುವನೋ ಯಾವನು **ಅಸಂಸ್ಕೃತಂ** ವೈಶ್ವದೇವ ಮುಂತಾದ ಸಂಸ್ಕಾರವಿಲ್ಲದ ಅನ್ನಾದಿಗಳನ್ನು ತಿನ್ನುವನೋ **ಸಃ** ಅವನು **ಪರತ್ರ** ಸತ್ತನಂತರ ಪರಲೋಕದಲ್ಲಿ **ಕೃಮಿಭೋಜನೇ ನರಕಾಧಮೇ ನಿಪತತಿ** ಕೃಮಿ ಭೋಜನವೆಂಬ ನಿಕೃಷ್ಟ ನರಕದಲ್ಲಿ ಬೀಳುವನು. **ತತ್ರ** ಆ ನರಕದಲ್ಲಿ **ಶತಸಹಸ್ರಯೋಜನೇ** ನೂರು ಸಾವಿರ ಯೋಜನದ **ಕೃಮಿಕುಂಡೇ** ಹುಳಗಳ ತೆಗ್ಗಿನಲ್ಲಿ **ಕೃಮಿಭೂತಃ** ಕೃಮಿಯಾಗಿ **ಸ್ವಯಂ** ತಾನು **ಕೃಮಿಭಿಃ ಭಕ್ಷ್ಯಮಾಣಃ** ಕೃಮಿಗಳಿಂದ ತಿನ್ನಲ್ಪಡುವವನಾಗಿ **ಕೃಮಿಭೋಜನಃ ಭವತಿ** ಕೃಮಿಗಳೇ ಆಹಾರವಾಗಿವುಳ್ಳವನಾಗುವನು **ಯಾವತ್** ಎಲ್ಲಿಯವರೆಗೆ **ಅಪ್ರಮತ್ತಃ** ಅಥಿತಿ ಮುಂತಾದವರಿಗೆ ಕೊಡದಿರುವುದಕ್ಕೆ **ಅಕೃತನಿರ್ವೇಶಃ** ಪ್ರಾಯಶ್ಚಿತ್ತ ಮಾಡಿಕೊಳ್ಳುವುದಿಲ್ಲವೋ **ತಾವತ್** ಅಲ್ಲಿಯವರೆಗೆ **ಆತ್ಮಾನಂ** ತನ್ನನ್ನು **ಪಾತಯತಿ** ನರಕದಲ್ಲಿ ಬೀಳಿಸುವನು. ಪ್ರಾಯಶ್ಚಿತ್ತ ಮಾಡಿಕೊಂಡರೆ ನರಕ ತಪ್ಪುವುದು ಎಂದು ಭಾವ. ।।೨೦।।

## ಸಂದಂಶ ನರಕ

**ಯಸ್ತ್ವಿಹ ವೈ ಸ್ತೇಯೇನ ಬಲಾದ್ವಾ ಹಿರಣ್ಯರತ್ನಾದೀನಿ ಬ್ರಾಹ್ಮಣಸ್ಯ ಚಾಪಹರತಿ ಅನ್ಯಸ್ಯ ವಾನಾಪದಿ ಪುರುಷಂ ತಂ ಅಮುತ್ರ ರಾಜನ್ ಯಮಪುರುಷಾಃ ಅಯಸ್ಮಯೈರಗ್ನಿವರ್ಣೈಃ ಸಂದಂಶೈಸ್ತ್ವಚಿ ನಿಷ್ಕಾಲಯಂತಿ ।।೨೧।।**





**ಯಃ** ಯಾವ **ಪುರುಷಃ** ಮನುಷ್ಯನು **ಅನಾಪದಿ** ಆಪತ್ಕಾಲವಿಲ್ಲದಿದ್ದಾಗ **ಇಹ** ಈ ಲೋಕದಲ್ಲಿ **ಸ್ತೇಯೇನ** ಕಳ್ಳತನದಿಂದಲೋ **ಬಲಾದ್ವಾ** ಬಲಾತ್ಕಾರದಿಂದಲೋ **ಬ್ರಾಹ್ಮಣಸ್ಯ** ಬ್ರಾಹ್ಮಣನ **ಅಥವಾ ಅನ್ಯಸ್ಯ** ಬೇರೆಯವರ ಹಿರಣ್ಯರತ್ನಾದೀನ್ ಬಂಗಾರ ರತ್ನ ಮುಂತಾದವುಗಳನ್ನು **ಅಪಹರತಿ** ತೆಗೆದುಕೊಳ್ಳುವನೋ **ರಾಜನ್** ಪರೀಕ್ಷಿತನೇ! **ತಂ** ಅವನನ್ನು **ಅಮುತ್ರ** ಸತ್ತ ನಂತರ ಪರಲೋಕದಲ್ಲಿ **ಯಮಪುರುಷಾಃ** ಯಮಭಟರು **ಅಯಸ್ಮಯೈಃ** ಕಬ್ಬಿಣದ **ಅಗ್ನಿವರ್ಣೈಃ** ಕೆಂಪಾಗಿರುವ **ಸಂದಂಶೈಃ** ಚಿಮುಟಗಳಿಂದ **ತ್ವಚಿ** ಚರ್ಮದಲ್ಲಿ **ನಿಷ್ಕಾಲಯಂತಿ** ಮಾಂಸವನ್ನು ಕಿತ್ತುವರು. ಇದು ಸಂದಂಶನರಕ (ತಪ್ತಸೂರ್ಮಿನರಕ). ॥೨೦॥

**ಯಸ್ತ್ವಿಹ ವಾಽಗಮ್ಯಾಂ ಸ್ತ್ರಿಯಂ ಪುರುಷಂ ವಾ ಯೋಷಿದಪಿ ಗಚ್ಛತಿ ತಾವಮುತ್ರ ಕಶಯಾ ತಾಡಯಂತಸ್ತರ್ಜಯಂತಸ್ತಪ್ತಯಾ ಸೂರ್ಮ್ಯಾ ಲೋಹಮಯ್ಯಾ ಪುರುಷಮಾಲಿಂಗಯಂತಿ ಸ್ತ್ರಿಯಂ ಚ ಪುರುಷರೂಪಯಾ ಸೂರ್ಮ್ಯಾ ॥೨೨॥**

**ಯಃ** ಯಾವನು **ಇಹ** ಈ ಲೋಕದಲ್ಲಿ **ಅಗಮ್ಯಾಂ** ರತಿಗೆ ಯೋಗ್ಯಳಲ್ಲದ **ಸ್ತ್ರಿಯಂ** ಹೆಂಗಸನ್ನು **ಗಚ್ಛತಿ** ರತಿಗಾಗಿ ಹೊಂದುವನೋ **ಯೋಷಿದಪಿ** ಸ್ತ್ರೀಯಾದರೂ **ಪುರುಷಂ** ಹೊಂದಬಾರದ ಪುರುಷನನ್ನು ರತಿಗಾಗಿ ಹೊಂದುವಳೋ **ತೌ** ಅವರನ್ನು **ಅಮುತ್ರ** ಪರಲೋಕದಲ್ಲಿ **ಕಶಯಾ ತಾಡಯಂತಃ** ಚಾವಟಿಯಿಂದ ಹೊಡೆಯುತ್ತ **ತರ್ಜಯಂತಃ** ಹೆದರಿಸುತ್ತ **ಲೋಹಮಯ್ಯಾ** ಲೋಹದಿಂದ ಮಾಡಿದ **ತಪ್ತಯಾ** ಚೆನ್ನಾಗಿ ಕಾದಿರುವ **ಸೂರ್ಮ್ಯಾ** ಹೆಣ್ಣು ಪ್ರತಿಮೆಯೊಡನೆ **ಪುರುಷಂ** ಪುರುಷನನ್ನು **ಆಲಿಂಗಯಂತಿ** ಅಪ್ಪಿಕೊಳ್ಳುವಂತೆ ಮಾಡುವರು **ಸ್ತ್ರಿಯಂ ಚ** ಹೆಂಗಸನ್ನು **ಪುರುಷರೂಪಯಾ ಸೂರ್ಮ್ಯಾ** ಕಾಯಿಸಿದ ಕಬ್ಬಿಣದ ಗಂಡು ಪ್ರತಿಮೆಯೊಡನೆ ಅಪ್ಪಿಕೊಳ್ಳುವಂತೆ ಮಾಡುವರು. ॥೨೨॥

## ವಜ್ರಕಂಟಕಶಾಲ್ಮಲೀ ನರಕ

**ಯಸ್ತ್ವಿಹ ವೈ ಸರ್ವಾಭಿಗಮಃ ತಮಮುತ್ರ ನಿರಯೇ ವರ್ತಮಾನಂ ವಜ್ರಕಂಟಕಶಾಲ್ಮಲೀಂ ಆರೋಪ್ಯ ನಿಷ್ಕರ್ಷಯಂತಿ ॥೨೩॥**

**ಇಹ** ಈ ಲೋಕದಲ್ಲಿ **ಯಃ** ಯಾವನು **ಸರ್ವಾಭಿಗಮಃ** ಕಂಡ ಹೆಂಗಸರನ್ನೆಲ್ಲ ಬಲಾತ್ಕಾರವಾಗಿ ಭೋಗಿಸುವನೋ **ತಂ** ಅವನನ್ನು **ವಜ್ರಕಂಟಕಶಾಲ್ಮಲೀಂ** ವಜ್ರದಂತೆ

ಗಟ್ಟಿಯಾಗಿರುವ ಮುಳ್ಳಿನ ಜಾಲಿ ಮರವನ್ನು **ಆರೋಪ್ಯ** ಹತ್ತಿಸಿ **ನಿಷ್ಕರ್ಷಯಂತಿ** ಕೆಳಗೆ ಎಳೆಯುವರು **ಅಭಿಗಮ** ಎಂದರೆ ಒಪ್ಪಿಗೆಯಿಲ್ಲದ ಸ್ತ್ರೀಯೊಂದಿಗೆ ಬಲಾತ್ಕಾರವಾಗಿ ಬೆರೆಯುವುದು. ಕೆಲವರು ಪಶುಗಳೊಡನೆ ಬೆರೆಯವರು ಎಂದೂ ಅರ್ಥ ಮಾಡಿರುವರು. ।।೨೩।।

## ವೈತರಣೀ ನರಕ

**ಯೇ ತ್ವಿಹ ವಾ ರಾಜನ್ಯೋ ರಾಜಪುರುಷಾ ವಾ ಪಾಷಂಡಾ ಧರ್ಮಸೇತೂನ್ ಭಿಂದಂತಿ ತೇ ಸಂಪರೇತ್ಯ ವೈತರಣ್ಯಾಂ ನಿಪತಂತಿ ಭಿನ್ನಮರ್ಯಾದಾಃ ತಸ್ಯಾಂ ನಿರಯಪರಿಖಾಭೂತಾಯಾಂ ನದ್ಯಾಂ ಯಾದೋಗಣೈರಿತಸ್ತತೋ ಭಕ್ಷ್ಯಮಾಣಾ ಆತ್ಮನಾ ನ ವಿಯುಜ್ಯಮಾನಾಸ್ತೇ ಸ್ವಾಸುಭಿರುಹ್ಯಮಾನಾಶ್ಚೌಘೇನ ಕರ್ಮಪಾಕ-ಮನುಸ್ಮರಂತೋ ವಿಣ್ಮೂತ್ರಪೂಯಶೋಣಿತಕೇಶನಖಾಸ್ಥಿಮೇದೋಮಾಂಸ-ವಾಹಿನ್ಯಾಮುಪತಪ್ಯಂತೇ ।।೨೪।।**

ಇಹ ಈ ಲೋಕದಲ್ಲಿ **ಪಾಷಂಡಾಃ** ಪಾಷಂಡಿಗಳಾದ **ಯೇ ರಾಜನ್ಯಾಃ** ಯಾವ ರಾಜರಾಗಲಿ **ರಾಜಪುರುಷಾ ವಾ** ರಾಜ ಸೇವಕರಾಗಲಿ **ಧರ್ಮಸೇತೂನ್** ಧರ್ಮದ ಕಟ್ಟಳೆಗಳನ್ನು **ಭಿಂದಂತಿ** ಮುರಿಯುವರೋ **ಭಿನ್ನಮರ್ಯಾದಾಃ ತೇ** ಧರ್ಮದ ಎಲ್ಲೆಗಳನ್ನು ಹಾಳು ಮಾಡಿದ ಅವರು **ಸಂಪರೇತ್ಯ** ಸತ್ತ ನಂತರ **ವೈತರಣ್ಯಾಂ ನಿಪತಂತಿ** ವೈತರಣಿಯಲ್ಲಿ ಬೀಳುವರು **ನಿರಯಪರಿಖಾಭೂತಾಯಾಂ** ನರಕದ ಕಂದಕದಂತಿರುವ **ತಸ್ಯಾಂ ನದ್ಯಾಂ** ಆ ನದಿಯಲ್ಲಿ **ಯಾದೋಗಣೈಃ** ಮೊಸಳೆ ಮೊದಲಾದ ಜಲಚರಗಳಿಂದ **ಇತಸ್ತತಃ** ಇತ್ತ ಅತ್ತ ಕಿತ್ತು **ಭಕ್ಷ್ಯಮಾಣಾಃ** ತಿನ್ನಲ್ಪಡುವವರಾಗಿ **ಓಘೇನ** ಪ್ರವಾಹದಿಂದ **ಉಹ್ಯಮಾನಾ ಚ** ಕೊಚ್ಚಿಕೊಂಡು ಹೋಗಲ್ಪಟ್ಟರೂ **ಆತ್ಮನಾ** ಯಾತನಾ ದೇಹದಿಂದಲೂ **ಸ್ವಾಸುಭಿಃ ಚ** ತಮ್ಮ ಪ್ರಾಣಗಳಿಂದಲೂ **ನ ವಿಯುಜ್ಯಮಾನಾಃ** ವಿಯೋಗ ಇಲ್ಲದವರಾಗಿ ಸಾಯದಲೇ **ಕರ್ಮಪಾಕಂ** ತಮ್ಮ ಪಾಪಕರ್ಮದ ಫಲವನ್ನು **ಅನುಸ್ಮರಂತಃ** ಸ್ಮರಿಸುತ್ತಾ **ವಿಟ್** ಮಲ **ಮೂತ್ರ** ಉಚ್ಚೆ **ಪೂಯ** ಕಿವು **ಶೋಣಿತ** ರಕ್ತ **ಕೇಶ** ಕೂದಲು **ನಖ** ಉಗರು **ಅಸ್ಥಿ** ಎಲಬು **ಮದ** ಕೊಬ್ಬು **ಮಾಂಸ** ಹೆಣ ಇವುಗಳ **ವಾಹಿನ್ಯಾ** ರೂಪದಲ್ಲಿ ಹರಿಯುವ ನದಿಯಾದ ಆ ವೈತರಣಿಯಲ್ಲಿ **ಉಪತಪ್ಯಂತೇ** ದುಃಖಪಡುವರು. ।।೨೪।।




## ಪೂಯೋದ ನರಕ

**ಯೇ ತ್ವಿಹ ವೈ ವೃಷಲೀಪತಯೋ ನಷ್ಟಶೌಚಾಚಾರನಿಯಮಾಸ್ತ್ಯಕ್ತಲಜ್ಜಾಃ ಪಶುಚರ್ಯಾಂ ಚರಂತಿ ತೇ ಚಾಪಿ ಪ್ರೇತ್ಯ ಪೂಯವಿಣ್ಮೂತ್ರಶ್ಲೇಷ್ಮಮಲ-ಪೂರ್ಣಾರ್ಣವೇ ನಿಪತಂತಿ ತದೇವಾತಿಭೀಭತ್ಸಿತಮಶ್ನಂತಿ ।।೨೫।।**

ಮುಂದಿನ ವಾಕ್ಯದಲ್ಲಿಯ ಬ್ರಾಹ್ಮಣಾದಯಃ ಎಂಬುದನ್ನು ಇಲ್ಲಿ ಅಪಕರ್ಷಮಾಡಿಕೊಳ್ಳಬೇಕು.

**ಇಹ** ಈ ಲೋಕದಲ್ಲಿ **ಯೇ** ಯಾವ **ಬ್ರಾಹ್ಮಣಾದಯಃ** ಬ್ರಾಹ್ಮಣ ಕ್ಷತ್ರಿಯ ವೈಶ್ಯವರ್ಣದವರು **ವೃಷಲೀಪತಯಃ** ಶೂದ್ರಸ್ತ್ರೀ ಪತಿಗಳಾಗಿ **ನಷ್ಟಶೌಚಾಚಾರ ನಿಯಮಾಃ** ಶೌಚ ಆಚಾರ ನಿಯಮಗಳನ್ನು ಬಿಟ್ಟವರಾಗಿ **ತ್ಯಕ್ತಲಜ್ಜಾಃ** ನಾಚಿಕೆ ಬಿಟ್ಟವರಾಗಿ **ಪಶುಚರ್ಯಾಂ** ಸ್ವೇಚ್ಛಾಚಾರವನ್ನೇ **ಚರಂತಿ** ಮಾಡುವರೋ **ತೇ ಚಾಪಿ** ಅವರೂ ಕೂಡ **ಪ್ರೇತ್ಯ** ಮರಣ ಹೊಂದಿ **ಪೂಯವಿಣ್ಮೂತ್ರಶ್ಲೇಷ್ಮಮಲ ಪೂರ್ಣಾರ್ಣವೇ** ಕಿವು, ಮಲ, ಮೂತ್ರ, ಶ್ಲೇಷ್ಮ (ಕಫ, ಸಿಂಬಳ)ಗಳೆಂಬ ಕೊಳೆಗಳಿಂದ ತುಂಬಿದ ಪೂಯೋದವೆಂಬ ಸಮುದ್ರದಲ್ಲಿ **ನಿಪತಂತಿ** ಬೀಳುವರು **ಚ** ಮತ್ತು **ಅತಿಬೀಭತ್ಸಿತಂ** ಅತ್ಯಂತ ಅಸಹ್ಯವಾದ **ತದೇವ** ಆ ಕಿವು ಮೊದಲಾದವನ್ನೇ **ಅಶ್ನಂತಿ** ತಿನ್ನುವರು. ।।೨೫।।

## ಪ್ರಾಣರೋಧ ನರಕ

**ಯೇ ತ್ವಿಹ ವೈ ಶ್ವಗರ್ದಭಪತಯೋ ಬ್ರಾಹ್ಮಣಾದಯೋ ಮೃಗಯಾವಿಹಾರಾ ಅತೀರ್ಥೇ ಚ ಮೃಗಾನ್ನಿಘ್ನಂತಿ ತಾನಪಿ ಸಂಪರೇತಾನ್ ಲಕ್ಷ್ಯಭೂತಾನ್ ಯಮಪುರುಷಾ ಇಷುಭಿರ್ವಿಧ್ಯಂತಿ ।।೨೬।।**

**ಇಹ** ಇಲ್ಲಿಯೇ **ಬ್ರಾಹ್ಮಣಾದಯಃ ಚ** ಯಾವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ವರ್ಣದವರು **ಶ್ವಗರ್ದಭಪತಯಃ** ನಾಯಿಕತ್ತೆಗಳನ್ನು ಸಾಕಿದವರಾಗಿ **ಮೃಗಯಾ ವಿಹಾರಾಃ** ಬೇಟೆ ಆಡುವುದರಲ್ಲಿ ಆಸಕ್ತರಾಗಿ **ಅತೀರ್ಥೇಷು** ಅಪಾತ್ರರಿಗಾಗಿ ಅಥವಾ ವಿಹಿತವಲ್ಲದಕಾಲದಲ್ಲಿ **ಮೃಗಾನ್** ಪ್ರಾಣಿಗಳನ್ನು **ನಿಘ್ನಂತಿ** ಕೊಲ್ಲುವರೋ **ಸಂಪೇರೇತಾನ್ ತಾನ್ ಅಪಿ** ಸತ್ತ ಅವರನ್ನೂ **ಲಕ್ಷ್ಯಭೂತಾನ್ ಕೃತ್ವಾ** ಗುರಿಯಾಗಿಟ್ಟುಕೊಂಡು **ಯಮಪುರುಷಾಃ** ಯಮಭಟರು **ಇಷುಭಿಃ** ಬಾಣಗಳಿಂದ **ವಿಧ್ಯಂತಿ** ಹೊಡೆಯುವರು. ।।೨೬।।

## ವೈಶಸನ ನರಕ

**ಯೇ ತ್ವಿಹ ವೈ ಡಾಂಭಿಕಾ ಡಂಭಯಜ್ಞೇಷು ಪಶೂನ್ ವಿಶಸಂತಿ ತಾನಮುಷ್ಮಿಂಲ್ಲೋಕೇ ವೈಶಸನೇ ನರಕೇ ಪತಿತಾನ್ನಿರಯಪತಯಃ ಪಾತಯಿತ್ವಾ ವಿಶಸಂತಿ ॥೨೭॥**

**ಇಹ** ಈ ಲೋಕದಲ್ಲಿ **ಯೇ ಡಾಂಭಿಕಾಃ** ದೈವಭಕ್ತಿಯಿಲ್ಲದೆ ಧರ್ಮಾಚರಣೆ ತತ್ತ್ವ ತಿಳಿಯದೇ ಲೋಕವಂಚನೆ ಮಾಡಿ ತನ್ನ ಜೀವನ ನಡೆಸುವುದಕ್ಕಾಗಿ ತಾನು ಧಾರ್ಮಿಕನೆಂದು ತೋರಿಸಲು ಕರ್ಮಾನುಷ್ಠಾನ ಮಾಡುವ ಬ್ರಾಹ್ಮಣಾದಿ ಮೂರು ವರ್ಣದವರಾದ **ಡಂಭಯಜ್ಞೇಷು** ಡಂಭಕ್ಕಾಗಿ ಮಾಡಿದ ಯಜ್ಞಗಳಲ್ಲಿ **ಪಶೂನ್** ಪಶುಗಳನ್ನು **ವಿಶಸಂತಿ** ಕತ್ತರಿಸುವರೋ **ತಾನ್** ಅವರನ್ನು **ಅಮುಷ್ಮಿನ್ ಲೋಕೇ** ಪರಲೋಕದಲ್ಲಿ **ವೈಶಸನೇ ನರಕೇ ಪತಿತಾನ್** ವೈಶಸನ ನರಕದಲ್ಲಿ ಬಿದ್ದವರನ್ನು **ನಿರಯ ಪತಯಃ** ನರಕ ಪಾಲಕರಾದ ಯಮಭಟರು **ಪಾತಯಿತ್ವಾ** ಕೆಳಗೆ ಉರುಳಿಸಿ **ವಿಶಸಂತಿ** ಕತ್ತರಿಸುವರು, ತುಂಡರಿಸುವರು. ॥೨೭॥

## ರೇತಃಪಾನ ನರಕ

**ಯಸ್ತ್ವಿಹ ವೈ ಸವರ್ಣಾಂ ಭಾರ್ಯಾಂ ದ್ವಿಜೋ ರೇತಃ ಪಾಯಯತಿ ಕಾಮ ಮೋಹಿತಸ್ತಂ ಪಾಪಕೃತಮಮುತ್ರ ರೇತಃಕುಲ್ಯಾಯಾಂ ಪಾತಯಿತ್ವಾ ರೇತಃ ಪಾಯಯಂತಿ ॥೨೮॥**

**ಇಹ** ಈ ಲೋಕದಲ್ಲಿ **ಯಃ** ತ್ರಿವರ್ಣದ ಯಾವನು **ಕಾಮಮೋಹಿತಃ** ಕಾಮೋದ್ರೇಕದಿಂದ ಮುಗ್ಧನಾಗಿ **ಸವರ್ಣಾಂ** ತನ್ನ ಜಾತಿಯ **ಭಾರ್ಯಾಂ** ಹೆಂಡತಿಯನ್ನು **ರೇತಃ ಪಾಯಯತಿ** ರೇತಸ್ಸನ್ನು ಕುಡಿಸುವನೋ (ವಶೀಕರಣಕ್ಕಾಗಿ) (**ಪ್ರಾಪಯತಿ** ಎಂಬ ಪಾಠದಲ್ಲಿ ತನ್ನ ರಕ್ಷಣೆಗೊಳಪಟ್ಟ ಬೇರೊಬ್ಬರ ಹೆಂಡತಿಗೆ ರೇತಸ್ಸನ್ನು ಹೊಂದಿಸುವನೋ ಎಂದರ್ಥ) **ಪಾಪಕೃತಂ ತಂ** ಪಾಪ ಮಾಡಿದ ಅವನನ್ನು **ಅಮುತ್ರ** ಪರಲೋಕದಲ್ಲಿ **ರೇತಃಕುಲ್ಯಾಯಾಂ ಪಾತಯಿತ್ವಾ** ರೇತಸ್ಸಿನ ಕಾಲುವೆಯಲ್ಲಿ ಕೆಡವಿ **ರೇತಃ ಪಾಯಯಂತಿ** ರೇತಸ್ಸನ್ನು ಕುಡಿಸುವರು. ॥೨೮॥

 

## ಸಾರಮೇಯಾದನ ನರಕ

**ಯೇತ್ವಿಹ ವೈ ದಸ್ಯವೋಽಗ್ನಿದಾ ಗರದಾ ಗ್ರಾಮಾನ್ ಸಾರ್ಥಾನ್ ವಾ ವಿಲುಂಪಂತಿ ರಾಜಾ ರಾಜಭಟಾ ವಾ ತಾಂಶ್ಚಾಪಿ ಹಿ ಪರೇತಾನ್ಯಮದೂತಾ ವಜ್ರದಂಷ್ಟ್ರಾಃ ಶ್ವಾನಃ ಸಪ್ತಶತಾನಿ ವಿಂಶತಿಶ್ಚ ತೈಃ ಸರಭಸಂ ಖಾದಯಂತಿ ॥೨೯॥**

ಇಹ ಈ ಲೋಕದಲ್ಲಿ **ದಸ್ಯವಃ** ಕಳ್ಳರಾಗಲಿ **ರಾಜಾ(ನಃ)ರಾಜಭಟಾ ವಾ** ರಾಜರಾಗಲಿ ರಾಜಭಟರಾಗಲಿ **ಯೇ ತು** ಯಾವರು **ಅಗ್ನಿದಾಃ ಸಂತಃ** ಬೆಂಕಿ ಇಟ್ಟವರಾಗಿ **ಗರದಾಃ (ಸಂತಃ)** ವಿಷ ನೀಡಿದವರಾಗಿ **ಗ್ರಾಮಾನ್** ಊರುಗಳನ್ನು **ಸಾರ್ಥಾನ್** ವ್ಯಾಪಾರಿಗಳನ್ನು ದಾರಿಹೋಕರನ್ನು **ವಿಲುಂಪಂತಿ** ನಾಶ ಪಡಿಸುವರೋ **ಪರೇತಾನ್** ಸತ್ತು ಹೋದ **ತಾಂಶ್ಚಾಪಿ** ಆ ಕಳ್ಳರನ್ನು ರಾಜರನ್ನು ರಾಜಭಟರನ್ನೂ **ಯಮದೂತಾಃ** ಯಮಕಿಂಕರರು **ವಜ್ರದಂಷ್ಟ್ರಾಃ** ವಜ್ರದಂತೆ ಗಟ್ಟಿಯಾದ ಹಲ್ಲುಳ್ಳ **ಸಪ್ತಶತಾನಿ** ಏಳು ನೂರು **ಚ** ಮತ್ತು **ವಿಂಶತಿಃ** ಇಪ್ಪತ್ತು **ಶ್ವಾನಃ(ಯೇ ಸಂತಿ)** ನಾಯಿಗಳೇನಿವೆಯೋ **ತೈಃ** ಅವುಗಳಿಂದ **ಸರಭಸಂ** ವೇಗವಾಗಿ **ಖಾದಯಂತಿ** ತಿನ್ನಿಸುವರು. ॥೨೯॥

## ಅವೀಚೀಪೂರ ನರಕ

**ಯಸ್ತ್ವಿಹ ವಾಽನೃತಂ ವದತಿ ಸಾಕ್ಷ್ಯೇ ದ್ರವ್ಯವಿನಿಮಯೇ ದಾನೇ ವಾ ಕಥಂಚಿತ್ ಸ ವೈ ಪ್ರೇತ್ಯ ನರಕೇ ಅವೀಚೀಮತ್ಯಧಃಶಿರಾ ನಿರವಕಾಶೇ ಯೋಜನಶತೋಚ್ಛ್ರಯಾದ್ಗಿರಿಶೃಂಗಾನ್ನಿಪಾತ್ಯತೇ ಯತ್ರಜ್ಜಲಮಿವ ಸ್ಥಲಮಶ್ಮ-ಪೃಷ್ಠಮವಭಾಸತೇ ತದವೀಚೀಮತ್ ತಿಲಶೋಽತಿವಿಶೀರ್ಯಮಾಣ-ಶರೀರೋ ನ ಮ್ರಿಯಮಾಣಃ ಪುನರಾರೋಪಿತೋ ನಿಪತತಿ ॥೩೦॥**

ಇಹ ಈ ಲೋಕದಲ್ಲಿ **ಯಃ ತು** ಯಾವನು **ಸಾಕ್ಷ್ಯೇ** ಸಾಕ್ಷಿ ಹೇಳುವಾಗ **ದ್ರವ್ಯ ವಿನಿಮಯೇ** ಹಣ ಕೊಟ್ಟು ಕೊಂಡುಕೊಳ್ಳುವಾಗ ವ್ಯಾಪಾರದಲ್ಲಿ (ಕ್ರಯವಿಕ್ರಯದಲ್ಲಿ) **ದಾನೇ ವಾ** ದಾನದಲ್ಲಾಗಲಿ **ಕಥಂಚಿತ್** ಆಶೆಗೊಳಗಾಗಿ ಹೇಗೋ **ಅನೃತಂ ವದತಿ** ಸುಳ್ಳು ಹೇಳುವನೋ **ಸಃ** ಅವನು **ಪ್ರೇತ್ಯ** ಮರಣ ಹೊಂದಿ **ಯೋಜನ ಶತೋಚ್ಛ್ರಯಾತ್** ಒಂದು ನೂರು ಯೋಜನ ಎತ್ತರವಾದ **ಗಿರಿಶೃಂಗಾತ್** ಬೆಟ್ಟದ ಶಿಖರದಿಂದ **ಅಧಃಶಿರಾಃ** ತಲೆಕೆಳಾಗಾದವನಾಗಿ **ನಿರವಕಾಶೇ** ಯಾವ ಆಶ್ರಯವೂ ಇಲ್ಲದ **ಅವೀಚೀಮತಿ ನರಕೇ** ಕಲ್ಲಿನಿಂದ ತುಂಬಿರುವ ನೀರಿಲ್ಲದ ಹಳ್ಳದಲ್ಲಿ **ನಿಪಾತ್ಯತೇ**

ಬೀಳಿಸಲ್ಪಡುವನು **ಯತ್** ಯಾವ **ಅಶ್ಮಪೃಷ್ಠಂ ಸ್ಥಲಂ** ಕಲ್ಲಿರುವ ಸ್ಥಳವು ಜಲಮಿವ ದೂರದಿಂದ ನೀರಿದ್ದಂತೆ **ಅವಭಾಸತೇ** ಕಾಣುವುದು **ತತ್** ಅದೇ **ಅವೀಚೀಮತ್** ಅವೀಚೀಮತ್ ಎಂದು ಕರಿಸಿಕೊಳ್ಳುವುದು **ಅವೀಚೀಮತಿ** ಆ ನೀರಿಲ್ಲದ ಕಾರಣ ತರಂಗಗಳಿಲ್ಲದ ಕಲ್ಲಿನ ಮೇಲೆ **ತಿಲಶಃ** ಎಳ್ಳಿನಷ್ಟು ಚೂರು ಚೂರಾಗಿ **ವಿಶೀರ್ಯಮಾಣಶಿರಃ ಅಪಿ** ನುಚ್ಚುನೂರಾಗುವ ಶರೀರ(ಯಾತನಾ) ಉಳ್ಳವನಾದರೂ **ನ ಮ್ರಿಯಮಾಣಃ** ಸಾಯದೇ ಇರುವವನಾಗಿ **ಪುನಃ** ಮತ್ತೆ **ಆರೋಪಿತಃ** ಶಿಖರಕ್ಕೆ ಏರಿಸಲ್ಪಟ್ಟು **ನಿಪತತಿ** ಬೀಳುವನು. ।।೩೦।।

## ಲಾಲಾಭಕ್ಷ ನರಕ

**ಯಸ್ತ್ವಿಹ ವಿಪ್ರೋ ರಾಜನ್ಯೋ ವೈಶ್ಯೋ ವಾ ಸೋಮಪೀಥಾಸ್ತತ್ಕಲತ್ರಂ ವಾ ಸುರಾಂ ವ್ರತಸ್ಥಿತೋ ವಾ ಪಿಬತಿ ತೇಷಾಂ ನಿರಯನೀತಾನಾಮುರಸಿ ಪದಾಕ್ರಮ್ಯಾಸ್ಯೇ ವಹ್ನಿನಾ ದ್ರವಮಾಣಂ ಕಾರ್ಷ್ಣಾಯಸಂ ನಿಷಿಂಚಂತಿ ।।೩೧।।**

**ಇಹ** ಈ ಲೋಕದಲ್ಲಿ **ವಿಪ್ರಃ** ಬ್ರಾಹ್ಮಣನು **ತತ್ಕಲತ್ರಂ ವಾ** ಅವನ ಹೆಂಡತಿಯಾಗಲಿ (ಬ್ರಾಹ್ಮಣಿ) **ಸೋಮಪೀಥಾಃ** ಸೋಮ ಪಾನ ಮಾಡಿದ **ರಾಜನ್ಯಃ** ರಾಜನಾಗಲಿ **ತತ್ಕಲತ್ರಂ ವಾ** ಅವನ ಹೆಂಡತಿಯಾಗಲಿ **ವ್ರತಸ್ಥಿತಃ** ತಂದಯ ಶ್ರಾದ್ಧ ಮುಂತಾದ ವ್ರತದಲ್ಲಿರುವ **ವೈಶ್ಯಃ ತತ್ಕಲತ್ರಂ ವಾ** ವೈಶ್ಯನಾಗಲಿ ಅವನ ಪತ್ನಿಯಾಗಲಿ **ಯಃ** ಯಾರು **ಸುರಾಂ ಪಿಬತಿ** ಮದ್ಯಪಾನ ಮಾಡುವನೋ **ನಿರಯನೀತಾಯಾಂ** ಸತ್ತನಂತರ ನರಕಕ್ಕೆ ಒಯ್ಯಲ್ಪಟ್ಟ **ತೇಷಾಂ** ಅವರ **ಉರಸಿ** ಎದೆಯ ಮೇಲೆ **ಪದಾ** ಕಾಲಿನಿಂದ **ಆಕ್ರಮ್ಯ** ತುಳಿದುಕೊಂಡು **ಆಸ್ಯೇ** ಅವರ ಬಾಯಿಯಲ್ಲಿ **ವಹ್ನಿನಾ** ಬೆಂಕಿಯಿಂದ **ದ್ರವಮಾಣಂ** ಕಾಯಿಸಿ ಕರಗಿಸಿ ನೀರಾಗಿ ಮಾಡಲ್ಪಟ್ಟ **ಕಾರ್ಷ್ಣಾಯಸಂ** ಕಬ್ಬಿಣವನ್ನು **ನಿಷಿಂಚಂತಿ** ಸುರಿಯುವರು. ಬ್ರಾಹ್ಮಣರಿಗೆ ಸುರಾಪಾನ ಯಾವಾಗಲೂ ನಿಷಿದ್ಧ. ರಾಜರಿಗೆ ಅವರ ಹೆಂಡತಿಯರಿಗೆ (ಕ್ಷತ್ರಿಯರಿಗೆ) ಯಜ್ಞ ಮಾಡಿ ಸೋಮಪಾನ ಮಾಡಿದ ಮೇಲೆ ನಿಷಿದ್ಧ ಅದಕ್ಕೆ ಮೊದಲು ಅವರು ವೀರಪಾನವೆಂದು ಯುದ್ಧಕ್ಕೆ ಮೊದಲು ಅಥವಾ ನಂತರ ಮದ್ಯಪಾನ ಮಾಡಲು ಅವಕಾಶವಿದೆ. ಕ್ಷತ್ರಿಯ ಸ್ತ್ರೀಯರು ಸುರತಕಾಲದಲ್ಲಿ ಮದ್ಯಪಾನ ಮಾಡಬಹುದಾಗಿದೆ. ವೈಶ್ಯರಿಗೆ ತಂದೆ ತಾಯಿ ಮುಂತಾದವರು ಸತ್ತಾಗ ದೀಕ್ಷಾಕಾಲದಲ್ಲಿ ಮದ್ಯಪಾನ ನಿಷಿದ್ಧ. ಈ ವಿಶೇಷಾನುಸಾರ ಅರ್ಥ ಮಾಡಿದೆ. ।।೩೧।।




### ಕ್ಷಾರಕರ್ದಮ ನರಕ

**ಅಥ ಯಸ್ತ್ವಿಹ ವಾ ಆತ್ಮಸಂಭಾವನೇನ ಸ್ವಯಮಧಮೋ ಜನ್ಮತಪೋವಿದ್ಯಾಚಾರ ವರ್ಣಾಶ್ರಮವತೋ ವರೀಯಸೋ ನ ಬಹುಮನ್ಯೇತ ಸ ಮೃತಕ ಏವ ಮೃತ್ವಾ ಕ್ಷಾರಕರ್ದಮೇ ನಿರಯೇಽವಾರ್ಕ್‌ಶಿರಾಃ ನಿಪಾತಿತೋ ದುರಂತಾ ಯಾತನಾ ಹ್ಯಶ್ನುತೇ ।।೩೨।।**

ಇಹ ಈ ಲೋಕದಲ್ಲಿ ಸ್ವಯಂ ತಾನು **ಅಧಮಃ** ನೀಚನು **ಆತ್ಮಸಂಭಾವನೇನ** ತಾನು ಉತ್ತಮನೆಂಬ ಭಾವನೆಯಿಂದ **ಯಃ** ಯಾವನು **ಜನ್ಮತಪೋವಿದ್ಯಾಚಾರ ವರ್ಣಾಶ್ರಮವತಃ** ಹುಟ್ಟಿನಿಂದ, ತಪಸ್ಸಿನಿಂದ, ವಿದ್ಯೆಯಿಂದ, ಆಚಾರದಿಂದ, ವರ್ಣದಿಂದ, ಆಶ್ರಮದಿಂದ ಕೂಡಿರುವ **ವರೀಯಸಃ** ಶ್ರೇಷ್ಠರನ್ನು ಗೌರವಾರ್ಹರನ್ನು **ನ ಬಹುಮನ್ಯತೇ ಚ** ಗೌರವಿಸುವುದಿಲ್ಲವೋ **ಸಃ** ಅವನು **ಮೃತಕ ಏವ** ಬದುಕಿದ್ದೂ ಸತ್ತಂತೆಯೇ **ಮೃತ್ವಾ** ಮರಣ ಹೊಂದಿ **ಅವಾರ್ಕ್‌ಶಿರಾಃ** ತಲೆಕೆಳಗಾಗಿ **ಕ್ಷಾರಕರ್ದಮೇ ನಿರಯೇ** ಉಪ್ಪುಕೆಸರಿನ ನರಕದಲ್ಲಿ **ನಿಪತಿತಃ** ಬಿದ್ದವನಾಗಿ **ದುರಂತಯಾತನಾಃ** ಕೊನೆಯಿಲ್ಲದ ದುಃಖಗಳನ್ನು **ಅಶ್ನುತೇ ಹಿ** ಅನುಭವಿಸುವನೆಂದು ಶಾಸ್ತ್ರ ಸಿದ್ಧವು. ।।೩೨।।

### ರಕ್ಷೋಗಣಭೋಜನ ನರಕ

**ಯಸ್ತ್ವಿಹ ವೈ ಪುರುಷಾಃ ಪುರುಷಮೇಧೇನ ಯಜೇರನ್ನಶಾಸ್ತ್ರೀಯಾನ್ ವಾ ಪಶೂನ್ ಖಾದಂತಿ ಯಾಶ್ಚ ಸ್ತ್ರಿಯೋಽಥ ಪಶೂಂಶ್ಚ ಖಾದಂತಿ ತಾಂಶ್ಚ ತಾಶ್ಚವೈ ಪಶವ ಇಹ ನಿಹತಾಸ್ತೇ ಯಮಸಾದನೇ ಯಾತಯಂತೋ ರಕ್ಷೋಗಣಾಃ ಸೌನಿಕಾ ಇವ ಸ್ವಧಿತಿನಾ ವಿದಾರ್ಯಾಸೃಕ್ ಪಿಬಂತಿ ನೃತ್ಯಂತಿ ಗಾಯಂತಿ ಹಸಂತಿ ಚ ಹೃಷ್ಯಮಾಣಾ ಯಥೇಹ ಪುರಷಾದಾಃ ।।೩೩।।**

ಇಹ ಈ ಲೋಕದಲ್ಲಿ **ಯೇ** ಯಾವ **ಪುರುಷಾಃ** ಪುರುಷರು **ಪುರುಷಮೇಧೇನ** ಪುರುಷನನ್ನು ಸಂಹರಿಸುವ ಯಾಗದಿಂದ **ಯಜೇರೇನ್** ಭೈರವ ಮೊದಲಾದವರನ್ನು ಉದ್ದೇಶಿಸಿ ಯಾಗ ಮಾಡುವರೋ **ಅಶಾಸ್ತ್ರೀಯಾನ್** ಶಾಸ್ತ್ರನಿಷಿದ್ಧಗಳಾದ **ಪಶೂನ್ ವಾ** ಪ್ರಾಣಿಗಳನ್ನಾದರೂ **ಖಾದಂತಿ** ತಿನ್ನುವರೋ **ಅಥ** ಮತ್ತು **ಯಾಃ ಸ್ತ್ರಿಯಃ** ಯಾವ ಹೆಂಗಸರು **ಪಶೂನ್** ಪಶುಗಳನ್ನು **ಖಾದಂತಿ ಚ** ತಿನ್ನುವರೋ **ತಾನ್ ಚ** ಆ

ಪುರುಷರನ್ನು **ತಾಃ ಚ** ಆ ಸ್ತ್ರೀಯರನ್ನೂ **ಇಹ ನಿಹತಾಃ** ಇಲ್ಲಿ ಕೊಲ್ಲಲ್ಪಟ್ಟ **ತೇ ಪಶವಃ** ಆ ಪಶುಗಳು **ಯಮಸದನೇ** ನರಕದಲ್ಲಿ **ರಕ್ಷೋಗಣಾಃ(ಭೂತ್ವಾ)** ರಾಕ್ಷಸಗಳಾಗಿ **ಯಾತಯಂತಃ** ದುಃಖಪಡಿಸುತ್ತಾ **(ಸೈನಿಕಾ) ಸೌನಿಕಾ ಇವ** (ಸೈನಿಕರಂತೆ) ಹಿಂಸಕರಾದ ಪಶುಮಾರಕರಂತೆ **ಸ್ವಧಿತಿನಾ** ಖಡ್ಗದಿಂದ **ವಿದಾರ್ಯ** ಕತ್ತರಿಸಿ **ಇಹ** ಈ ಲೋಕದಲ್ಲಿ **ಪುರುಷಾದಾಃ ಯಥಾ** ನರಭಕ್ಷಕರಾದಾಗ ಹಿಂದೆ ಅವರು ಮಾಡಿದಂತೆ **ಅಸೃಕ್ ಪಿಬಂತಿ** ರಕ್ತ ಕುಡಿಯುವುವು **ನೃತ್ಯಂತಿ** ಕುಣಿಯುವುವು **ಗಾಯಂತಿ** ಹಾಡುವುವು **ಹೃಷ್ಯಮಾಣಾಃ** ಸಂತೋಷವನ್ನು ಹೊಂದಿದವುಗಳಾಗಿ **ಹಸಂತಿ ಚ** ನಗುವುವು. ||೩೩||

## ಶೂಲಪ್ರೋತ ನರಕ

**ಯೇ ತ್ವಿಹ ವಾ ಅನಾಗಸೋಽರಣ್ಯೇ ಗ್ರಾಮೇ ವಾ ವೈಸ್ರಂಭಕೈರುಪ-ವಿಸ್ರಂಭಯ್ಯ ಜಿಜೀವಿಷೂನ್ ಶೂಲಸೂತ್ರಾದಿಷೂಪಪ್ರೋತಾನ್ ಕ್ರೀಡನಯಾ ಪಾತಯಂತಿ ತೇಽಪಿ ಚ ಪ್ರೇತ್ಯ ಯಮಯಾತನಾಸು ಶೂಲಸೂತ್ರಾದಿಷು ಪ್ರೋತಾತ್ಮಾನಃ ಕ್ಷುತ್ತೃಡ್ಭ್ಯಾಂ ಚೋಪಹತಾಃ ಕಂಕಬಲಾಕಾದಿಭಿಶ್ಚೇತಸ್ತತ-ಸ್ತಿಗ್ಮತುಂಡೈರಾಹನ್ಯಮಾನಾ ಆತ್ಮಶಮಲಂ ಸ್ಮರಂತಿ ||೩೪||**

**ಇಹ** ಈ ಲೋಕದಲ್ಲಿ **ಯೇ ವಾ** ಯಾರು **ಜಿಜೀವಿಷೂನ್** ಬದುಕಬಯಸುವ **ಅನಾಗಸಃ** ನಿರಪರಾಧಿಗಳನ್ನು **ಅರಣ್ಯೇ ಗ್ರಾಮೇ ವಾ** ಅಡವಿಯಲ್ಲಾಗಲಿ ಊರಲ್ಲಾಗಲಿ **ವೈಸ್ರಂಭಕೈಃ** ನಂಬಿಕೆ ಹುಟ್ಟಿಸುವ ಉಪಾಯಗಳಿಂದ **ಉಪವಿಸ್ರಂಭಯ್ಯ** ನಂಬಿಸಿ **ಕ್ರೀಡನಯಾ** ಆಟವಾಗಿ **ಶೂಲಸೂತ್ರಾದಿಷು** ಚೂಪಾದ ಕಬ್ಬಿಣದ ಕಂಬದಲ್ಲಿ ಹಗ್ಗದಲ್ಲಿ ಎತ್ತರ ಪ್ರದೇಶದಲ್ಲಿ **ಉಪಪ್ರೋತಾನ್** ಪೋಣಿಸಿ, ಕಟ್ಟಿಹಾಕಿ, ನಿಲ್ಲಿಸಿ **ಪಾತಯಂತಿ** ಸಾಯಿಸುವರೋ, ಕೆಳಗೆ ತಳ್ಳುವರೋ **ತೇ ಅಪಿ** ಅವರೂ ಸಹ **ಪ್ರೇತ್ಯ** ಸತ್ತ ಮೇಲೆ **ಯಮಯಾತನಾಸು** ಯಮನ ಅಧಿಕಾರಕ್ಕೆ ಒಳಪಟ್ಟ ನರಕಗಳಲ್ಲಿ **ಶೂಲಸೂತ್ರಾದಿಷು** ಶೂಲದಾರ(ಹಗ್ಗ)ಗಳಲ್ಲಿ **ಪ್ರೋತಾತ್ಮಾನಃ** ಪೋಣಿಸಲ್ಪಟ್ಟ ಶರೀರವುಳ್ಳವರಾಗಿ **ಕ್ಷುತ್ತೃಡ್ಭ್ಯಾಂ** ಹಸಿವೆ ನೀರಡಿಕೆಗಳಿಂದ **ಅಭಿಹತಾಃ** ನೊಂದು **ತಿಗ್ಮತುಂಡೈಃ** ತೀಕ್ಷ್ಣ ಕೊಕ್ಕುಗಳುಳ್ಳ **ಕಂಕಬಲಾಕಾದಿಭಿಃ** ಗಿಡಗ, ಹದ್ದು ಮೊದಲಾದವುಗಳಿಂದ **ಇತಸ್ತತಃ** ಇತ್ತ ಅತ್ತ **ಆಹನ್ಯಮಾನಾಃ** ಕುಕ್ಕಲ್ಪಡುವವರಾಗಿ **ಆತ್ಮಶಮಲಂ** ತಾವು ಮಾಡಿದ ಪಾಪವನ್ನು **ಸ್ಮರಂತಿ** ನೆನಪಿಸಿಕೊಳ್ಳುವರು. ||೩೪||

## ದಂದಶೂಕ ನರಕ

**ಯೇ ತ್ವಿಹ ವೈ ಭೂತಾನ್ಯುದ್ವೇಜಯಂತಿ ನರಾ ಅತ್ಯುಲ್ಬಣಸ್ವಭಾವಾ ಯಥಾ ದಂದಶೂಕಾಸ್ತೇಽಪಿ ಪ್ರೇತ್ಯ ನರಕೇ ದಂದಶೂಕಾಖ್ಯೇ ನಿಪತಂತಿ ಯತ್ರ ನೃಪ ದಂದಶೂಕಾಃ ಪಂಚಮುಖಾಃ ಸಪ್ತಮುಖಾ ಉಪಸೃಪ್ಯ ಗ್ರಸಂತಿ ಯಥಾ ಬಿಲೇಶಯಾಃ ।।೩೫।।**

ಇಹ ಈ ಲೋಕದಲ್ಲಿ **ಯಥಾ ದಂದಶೂಕಾಃ** ಯಾವಾಗಲೂ ಕಚ್ಚುವ ಹಾವುಗಳಂತೆ **ಅತ್ಯುಲ್ಬಣಸ್ವಭಾವಾಃ** ಅತಿಕ್ರೂರ ಸ್ವಭಾವದ ಮನುಷ್ಯರು **ಯೇ** ಯಾರು **ಭೂತಾನಿ** ಪ್ರಾಣಿಗಳನ್ನು **ಉದ್ವೇಜಯಂತಿ** ದುಃಖ, ಭಯಗೊಳಿಸುವರೋ **ತೇಽಪಿ** ಅವರೂ ಸಹ **ಪ್ರೇತ್ಯ** ಸತ್ತಮೇಲೆ **ದಂದಶೂಕಾಖ್ಯೇ ನರಕೇ** ದಂದಶೂಕವೆಂಬ ನರಕದಲ್ಲಿ **ನಿಪತಂತಿ** ಬೀಳುತ್ತಾರೆ. **ನೃಪ** ರಾಜನೇ! **ಯತ್ರ** ಯಾವ ಈ ನರಕದಲ್ಲಿ **ಪಂಚಮುಖಾಃ** ಐದು ಹೆಡೆಯ **ಸಪ್ತಮುಖಾಃ** ಏಳು ಹೆಡೆಯ **ದಂದಶೂಕಾಃ** ಹಾವುಗಳು **ಉಪಸೃಪ್ಯ** ಆ ಪಾಪಿಯನ್ನು ಸಮೀಪಿಸಿ **ಯಥಾ ಬಿಲೇಶಯಾಃ** ಅಜಗರಗಳಂತೇ (ಹೆಬ್ಬಾವುಗಳಂತೇ) **ಗ್ರಸಂತಿ** ನುಂಗುವುವು. ।।೩೫।।

## ಅವಟನಿರೋಧ ನರಕ

**ಯೇ ತ್ವಿಹ ವಾ ಅವಟಕುಸೂಲಗೃಹಾದಿಷು ಭೂತಾನಿ ರುಂಧಂತಿ ತಥಾಽಮುತ್ರ ತೇಷ್ವೇವೋಪವೇಶ್ಯ ಸಗರೇಣ ವಹ್ನಿನಾ ಧೂಮೇನ ನಿರುಂಧಂತಿ ।।೩೬।।**

ಇಹ ಈ ಲೋಕದಲ್ಲಿ **ಯೇ** ಯಾರು **ಭೂತಾನಿ** ಪ್ರಾಣಿಗಳನ್ನು **ಅವಟ** ಉಸಿರಾಡಿಸಲಾಗದ ಬಿಲದಲ್ಲಿ **ಕುಸೂಲ** ಧಾನ್ಯ ಹಾಕುವ ಹಗೆಗಳಲ್ಲಿ **ಗೃಹ** ಕಾರಾಗೃಹದಲ್ಲಿ **ಆದಿಷು** ನೀರಲ್ಲಿ ಮುಳುಗಿಸಿ ಪೆಟ್ಟಿಗೆಯಲ್ಲಿ ಮುಚ್ಚಿ **ರುಂಧಂತಿ** ಉಸಿರು ಕಟ್ಟುವಂತೆ ಮಾಡುವರೋ ಅವರನ್ನು **ಅಮುತ್ರ** ಪರಲೋಕದಲ್ಲಿ **ತಥಾ** ಅದೇರೀತಿಯಲ್ಲಿ **ತೇಷ್ವೇವ** ಹೊಗೆ ಮೊದಲಾದವುಗಳಲ್ಲಿಯೇ **ಉಪವೇಶ್ಯ** ಪ್ರವೇಶ ಮಾಡಿಸಿ **ಸಗರೇಣ** ವಿಷ ಸಹಿತವಾದ **ವಹ್ನಿನಾ** ಬೆಂಕಿಯಿಂದ **ಧೂಮೇನ** ಹೊಗೆಯಿಂದ **ನಿರುಂಧಂತಿ** ಉಸಿರಾಡುವಂತೆ ಮಾಡುವರು. ।।೩೬।।

## ಪರ್ಯಾವರ್ತ ನರಕ

**ಯಸ್ತ್ವಿಹ ವಾಽತಿಥೀನಭ್ಯಾಗತಾನ್ವಾ ಗೃಹಪತಿರಸಕೃದುಪಗತಮನ್ಯು-ರ್ದಿಧಕ್ಷುರಿವಾಪಚಕ್ಷುಷಾ ನಿರಿಕ್ಷತೇ ತಸ್ಯ ಚಾಪಿ ನಿರಯೇ ಪಾಪದೃಷ್ಟೇರಕ್ಷಿಣೀ ವಕ್ರತುಂಡಾ ಗೃಧ್ರಕಂಕಕಾಕಬಲಾಕಾದಯಃ ಪ್ರಸಹ್ಯೋರುಬಲಾದುತ್ಪಾಟಯಂತಿ ॥೩೭॥**

ಇಹ ಈ ಲೋಕದಲ್ಲಿ **ಗೃಹಪತಿಃ** ಮನೆಯ ಯಜಮಾನನಾದ **ಯಃ** ಯಾವನು **ಅಸಕೃತ್** ಮತ್ತೆ ಮತ್ತೆ **ಉಪಗತಮನ್ಯುಃ** ಕೋಪಗೊಂಡವನಾಗಿ **ಅತಿಥೀನ್** ಗೊತ್ತಿಲ್ಲದೆ ಮನೆಗೆ ಬಂದ ಜನರನ್ನು **ಅಭ್ಯಾಗತಾನ್** ಮನೆಗೆ ಬಂದ ಗೊತ್ತಿಲ್ಲದವರನ್ನಾಗಲಿ **ದಿಧಕ್ಷುಃ ಇವ** ಸುಡಬಯುಸುವನಂತೆ **ಅಪಚಕ್ಷುಷಾ** ಕೆಟ್ಟಗಣ್ಣಿನಿಂದ **ನಿರೀಕ್ಷತೇ** ನೋಡುವನೋ **ಪಾಪದೃಷ್ಟೇಃ ತಸ್ಯ** ಪಾಪದ ನೋಟವುಳ್ಳ ಅವನ **ಅಕ್ಷಿಣೀ ಚಾಪಿ** ಕಣ್ಣುಗಳನ್ನು **ನಿರಯೇ** ನರಕದಲ್ಲಿ **ವಕ್ರತುಂಡಾಃ** ಡೊಂಕಾದ ಕೊಕ್ಕುಳ್ಳ **ಗೃಧ್ರ** ಹದ್ದು **ಕಂಕ** ಕಾಗೆ **ಬಲಾಕ** ಉದ್ದಮೂತಿಯ ಗಿಡಗ **ಆದಯಃ** ಮೊದಲಾದವು **ಬಲಾತ್** ಬಲಾತ್ಕಾರದಿಂದ **ಉರುಬಲಾತ್** ಹೆಚ್ಚು ಬಲವನ್ನು ಉಪಯೋಗಿಸಿ **ಉತ್ಪಾಟಯಂತಿ** ಕೀಳುವುವು (ಗುಡ್ಡೆಗಳನ್ನು). ॥೩೭॥

## ಸೂಚೀಮುಖ ನರಕ

**ಯಸ್ತ್ವಿಹ ವಾಽರ್ಥಾಭಿಮತಿರಹಂಕೃತಿಸ್ತಿರ್ಯಕ್ ಪ್ರೇಕ್ಷಣಃ ಸರ್ವತಃ ಶಂಕೀ ವ್ಯಯವಿನಾಶಚಿಂತಯಾ ಪರಿಶುಷ್ಯಮಾಣಹೃದಯವದನೋ ನಿರ್ವೃತಿ-ಮನುಪಗತೋ ಗ್ರಹ ಇವ ಅರ್ಥಮಭಿರಕ್ಷತಿ ಸ ಚಾಪಿ ಪ್ರೇತ್ಯ ತತ್ಸಂಪಾದನೋತ್ಕರ್ಷಣಸಂರಕ್ಷಣಶಮಲಗ್ರಹಃ ಸೂಚೀಮುಖೇ ನರಕೇ ನಿಪತತಿ ಯತ್ರ ಹ ವಿತ್ತಗ್ರಹಂ ಪಾಪಪುರುಷಂ ಧರ್ಮರಾಜ ಪುರುಷಾ ವಾಯಕಾ ಇವ ಸರ್ವತೋಽಂಗೇಷು ಸೂತ್ರೈಃ ಪರಿವಯಂತಿ ॥೩೮॥**

ಇಹ ಈ ಲೋಕದಲ್ಲಿ **ಅರ್ಥಾಭಿಮತಿಃ** ಹಣ ಮನೆ ಮೊದಲಾದವುಗಳಲ್ಲಿಯೇ ಅಭಿಮಾನವವುಳ್ಳ **ಅಹಂಕೃತಿಃ** ಅಹಂಕಾರ ತುಂಬಿದ **ತಿರ್ಯಕ್ ಪ್ರೇಕ್ಷಣಃ** ವಕ್ರವಾಗಿ ನೋಡುವ **ಸರ್ವತಃ** ಎಲ್ಲರಿಂದಲೂ **ಶಂಕೀ** ಹಣಕ್ಕೆ ಮನೆ ಮೊದಲಾದವುಗಳಿಗೆ ತೊಂದರೆ ಇದೆ ಎಂದು ಶಂಕಿಸುವ **ವ್ಯಯವಿನಾಶಚಿಂತಯಾ** ಖರ್ಚಾಗುವುದು ನಾಶವಾಗುವುದು ಎಂಬ ಚಿಂತೆಯಿಂದ **ಪರಿಶುಷ್ಯಮಾಣಹೃದಯವದನಃ** ಒಣಗಿದ

ಮನಸ್ಸು, ಮುಖವುಳ್ಳ **ಯಃ** ಯಾವನು **ನಿರ್ವೃತಿಂ** ಮನಃಶಾಂತಿಯನ್ನು **ಅನುಪಗತಃ ಸನ್** ಹೊಂದದೇ **ಗ್ರಹಃ** ಬ್ರಹ್ಮರಾಕ್ಷಸ ಮೊದಲಾದ ಪಿಶಾಚಗಳು **ಅರ್ಥಂ ಇವ** ಮತ್ತೊಬ್ಬರು ತೆಗೆದುಕೊಳ್ಳದಂತೆ ಹಣವನ್ನು ರಕ್ಷಿಸುವಂತೆ **ಅಭಿರಕ್ಷತಿ** ಧನವನ್ನು ಕಾಪಾಡುವನೋ **ತತ್ಸಂಪಾದನ** ಆ ಹಣದ ಸಂಪಾದನೆ **ಉತ್ಕರ್ಷಣ** ಬೆಳೆಸುವುದು **ಅಭಿರಕ್ಷಣ** ಕಾಪಾಡುವುದು ಇವುಗಳಿಂದ **ಶಮಲಗ್ರಹಃ** ಪಾಪವನ್ನು ಗಳಿಸಿದ **ಸಃ ಚ** ಅವನು **ಪ್ರೇತ್ಯ** ಸತ್ತ ಮೇಲೆ **ಸೂಚೀಮುಖೇ ನರಕೇ** ಸೂಚೀಮುಖವೆಂಬ ನರಕದಲ್ಲಿ **ನಿಪತತಿ** ಬೀಳುವನು **ಯತ್ರ** ಯಾವ ಈ ನರಕದಲ್ಲಿ **ಧರ್ಮರಾಜಪುರುಷಾಃ** ಯಮಭಟರು **ವಿತ್ತಗ್ರಹಂ** ಧನ ಪಿಶಾಚಿಯಾದ **ಪಾಪಪುರುಷಂ** ಈ ಪಾಪಿಯನ್ನು **ವಾಯಕಾ ಇವ** ಕೌದಿಗಳನ್ನು ಹೊಲೆಯುವವರಂತೆ **ಸೂತ್ರೈಃ** ಚೂಪಾದ ತಂತಿಗಳಿಂದ **ಅಂಗೇಷು** ಅವಯವಗಳಲ್ಲಿ **ಸರ್ವತಃ** ಎಲ್ಲ ಕಡೆಯಲ್ಲಿ **ಪರಿವಯಂತಿ** ಅಡ್ಡಕ್ಕೂ ಉದ್ದಕ್ಕೂ ಹೊಲೆಯುವರು. ।।೩೮।।

**ಉಪಸಂಹಾರ**

**ಏವಂವಿಧಾ ನರಕಾ ಯಮಲೋಕೇ ಸಂತಿ ಶತಶಃ ಸಹಸ್ರಶಸ್ತೇಷು ಸರ್ವೇಷು ಸರ್ವ ಏವಾಧರ್ಮವರ್ತಿನೋ ಯೇಕೇಚಿದಿಹೂದಿತಾ ಅನುದಿತಾಶ್ಚಾವನಿಪತೇ ಪರ್ಯಾಯೇಣ ವಿಶಂತಿ ।।೩೯।।**

**ಯಮಲೋಕೇ** ಯಮಲೋಕದಲ್ಲಿ **ಏವಂವಿಧಾಃ** ಹೀಗೆ ಬಹುದುಃಖವುಳ್ಳ **ನರಕಾಃ** ನರಕಗಳು **ಶತಶಃ** ನೂರುಗಟ್ಟಲೆ **ಸಹಸ್ರಶಃ** ಸಾವಿರಗಟ್ಟಲೆ **ಸಂತಿ** ಇವೆ **ತೇಷು ಸರ್ವೇಷು** ಅವೆಲ್ಲವುಗಳಲ್ಲಿಯೂ **ಅವನಿಪತೇ** ಪರೀಕ್ಷಿದ್ರಾಜನೇ! **ಅಧರ್ಮವರ್ತಿನಃ** ಪಾಪದಲ್ಲಿ ನಿರತರಾದ **ಇಹ** ಈ ಪ್ರಕರಣದಲ್ಲಿ **ಉದಿತಾಃ** ಹೇಳಲ್ಪಟ್ಟ **ಅನುದಿತಾಶ್ಚ** ಹೇಳಲ್ಪಡದಿರುವ **ಯೇ ಕೇಚಿತ್** ಯಾರುಂಟೋ **ತೇ ಸರ್ವೇ ಏವ** ಅವರೆಲ್ಲರೂ **ಪರ್ಯಾಯೇಣ** ಒಂದರನಂತರ ಒಂದರಲ್ಲಿ **ವಿಶಂತಿ** ಪ್ರವೇಶಿಸುವರು. ।।೩೯।।

**ತಥೈವ ಧರ್ಮಾನುವರ್ತಿನಃ ಉತ್ತರತ್ರ ಇಹ ತು ಪುನರ್ಭವೇ ಉಭಯಶೇಷಾಭ್ಯಾಂ ನಿವಿಶಂತಿ ।।೪೦।।**

**ತಥೈವ** ಹೀಗೆಯೇ **ಧರ್ಮಾನುವರ್ತಿನಃ** ಧರ್ಮವನ್ನೇ ಅನುಸರಿಸುವವರು **ಉತ್ತರತ್ರ** ಸ್ವರ್ಗವನ್ನು **ವಿಶಂತಿ** ಪ್ರವೇಶಿಸುವರು **ಇಹ** ಈ ಲೋಕದಲ್ಲಿ **ಪುನರ್ಭವೇ ತು** ಮತ್ತೆ ಹುಟ್ಟುವಾಗ **ಉಭಯಶೇಷಾಭ್ಯಾಂ** ಸ್ವರ್ಗದಲ್ಲಿ ಅನುಭವಿಸಿ ಉಳಿದ

ಧರ್ಮದ, ನರಕದಲ್ಲಿ ಅನುಭವಿಸಿ ಉಳಿದ ಪಾಪ ಶೇಷಗಳ ನಿಮಿತ್ತದಿಂದ **ನಿವಿಶಂತಿ** ಪ್ರವೇಶಿಸುವರು, ಹುಟ್ಟುವರು. ।।೪೦।।

**ನಿವೃತ್ತಿಲಕ್ಷಣಮಾರ್ಗಃ ಆದಾವೇವ ವ್ಯಾಖ್ಯಾತಃ ಏತಾವಾನೇವಾಂಡಕೋಶೋ ಯಶ್ಚತುರ್ದಶಧಾ ಪುರಾಣೇಷೂಪಕಲ್ಪಿತಃ ।।೪೧।।**

**ನಿವೃತ್ತಿಲಕ್ಷಣಮಾರ್ಗಃ** ಮೋಕ್ಷಕ್ಕೆ ಕಾರಣವಾದ ಧರ್ಮ ಮಾರ್ಗವು **ಆದೌ ಏವ** ಮೊದಲಿಗೆ ದ್ವಿತೀಯ ಸ್ಕಂಧದಲ್ಲಿ **ವ್ಯಾಖ್ಯಾತಃ** ವೈಶ್ವಾನರಲೋಕವನ್ನು ಹೊಂದುವನು ಮುಂತಾಗಿ ವಿವರಿಸಲ್ಪಟ್ಟಿದೆ **ಅಂಡಕೋಶಃ** ಬ್ರಹ್ಮಾಂಡ ಕೋಶವು **ಏತಾವಾನೇವ** ಇಷ್ಟೇ **ಯಃ** ಯಾವ ಈ ಬ್ರಹ್ಮಾಂಡ ಕೋಶವು **ಪುರಾಣೇಷು** ಪುರಾಣಗಳಲ್ಲಿ **ಚತುರ್ದಶಧಾ** ಹದಿನಾಲ್ಕು ಲೋಕಗಳಾಗಿ **ಉಪಕಲ್ಪಿತಃ** ವಿಶೇಷವಾಗಿ ವಿಭಕ್ತವಾಗಿ **ಉದ್ಗೀಯತೇ** ವಿವೃತವಾಗಿದೆ. ।।೪೧।।

## ಫಲಸ್ತುತಿ

**ಯಸ್ತದ್ಭಗವತೋ ನಾರಾಯಣಸ್ಯ ಸಾಕ್ಷಾನ್ಮಹಾಪುರುಷಸ್ಯ ಸ್ಥವಿಷ್ಠಂ ರೂಪಮಾತ್ಮಮಾಯಯಾ ಗುಣಮಯಮನುವರ್ಣಿತಂ ಆದೃತಃ ಪಠತಿ ಶೃಣೋತಿ ಶ್ರಾವಯತಿ ಸ ಏವಾಯಂ ಭಗವತಃ ಪರಮಾತ್ಮನೋ ಹ್ಯಣಿಷ್ಠಮಪಿ ಶ್ರದ್ಧಧಾನೋ ಭಕ್ತಿವಿಶುದ್ಧಬುದ್ಧಿರ್ವೇದ ।।೪೨।।**

**ಭಗವತಃ** ಸಮಸ್ತೈಶ್ವರ್ಯಸಂಪನ್ನನಾದ **ಸಾಕ್ಷಾತ್** ನಿರುಪಚರಿತವಾಗಿ **ಮಹಾಪುರುಷಸ್ಯ** ಸರ್ವೋತ್ತಮನಾದ **ನಾರಾಯಣಸ್ಯ** ಶ್ರೀಹರಿಯ **ಆತ್ಮಮಾಯಯಾ** ಅವನ ಸ್ವರೂಪಭೂತ ಇಚ್ಛೆಯಿಂದ **ಗುಣಮಯಂ** ಪ್ರಾಕೃತಗುಣವಿಕಾರವಾಗಿ ಸೃಷ್ಟವಾದ **ಯತ್** ಯಾವ **ಸ್ಥವಿಷ್ಠಂ** ಬ್ರಹ್ಮಾಂಡಾತ್ಮಕವಾದ ಸ್ಥೂಲ **ರೂಪಂ** ರೂಪವೋ **ತತ್** ಅದನ್ನು **ಆದೃತಃ ಚ** ಶ್ರದ್ಧೆಯಿಂದ **ಯಃ** ಯಾವನು **ಪಠತಿ** ಓದುವನೋ **ಶೃಣೋತಿ** ಕೇಳುವನೋ **ಶ್ರಾವಯತಿ** ಜನರಿಗೆ ಹೇಳುವನೋ **ಸಃ** ಅವನು **ಅಯಮೇವ** ಅವನೇ **ಭಗವತಃ** ಶ್ರೀಹರಿಯ **ಅಣಿಷ್ಠಂ** ಸೂಕ್ಷ್ಮತಮವಾದ ತನ್ನ ಬಿಂಬರೂಪವನ್ನು **ಅತಿ ಶ್ರದ್ಧಧಾನಃ ಸನ್** ಅತ್ಯಂತ ಶ್ರದ್ಧಾಯುಕ್ತನಾಗಿ **ಭಕ್ತಿವಿಶುದ್ಧಬುದ್ಧಿಃ** ಭಕ್ತಿಯಿಂದ ನಿರ್ದೋಷವಾದ ಬುದ್ಧಿಯುಳ್ಳವನಾಗಿ **ವೇದ ಹಿ** ತಿಳಿಯುವನಷ್ಟೇ! ಸೂಕ್ಷ್ಮರೂಪ ಜ್ಞಾನಕ್ಕೆ ಸ್ಥೂಲರೂಪ ಜ್ಞಾನ ಕಾರಣವೆಂದು ಭಾವ. ।।೪೨।।




**ಶ್ರುತ್ವಾ ಸ್ಥೂಲಂ ತಥಾ ಸೂಕ್ಷ್ಮಂ ರೂಪಂ ಭಗವತೋ ಯತಿಃ ।**
**ಸ್ಥೂಲೇ ನಿರ್ಜತಮಾತ್ಮಾನಂ ಶನೈಃ ಸೂಕ್ಷ್ಮಧಿಯಾ ನಯೇದಿತಿ ಕ್ರಮಃ ॥೪೩॥**

**ಯತಿಃ** ಇಂದ್ರಿಯ ನಿಯಮನವುಳ್ಳ ಉಪಾಸಕನು **ಭಗವತಃ** ಶ್ರೀಹರಿಯ **ಸ್ಥೂಲಂ** ಸ್ಥೂಲರೂಪವನ್ನು **ತಥಾ** ಹಾಗು **ಸೂಕ್ಷ್ಮಂ** ಸೂಕ್ಷ್ಮರೂಪವನ್ನು **ಶ್ರುತ್ವಾ** ಕೇಳಿ **ಸ್ಥೂಲೇ** ಸ್ಥೂಲರೂಪದಲ್ಲಿ **ನಿರ್ಜಿತಂ** ಉಪಾಸನ ಸಿದ್ಧಿಪಡೆದ **ಆತ್ಮಾನಂ** ಮನಸ್ಸನ್ನು **ಶನೈಃ** ಮೆಲ್ಲಗೆ **ಸೂಕ್ಷ್ಮಧಿಯಾ** ಸೂಕ್ಷ್ಮರೂಪೋಪಾಸನೆಯಿಂದ **ನಯೇತ್** ಪರಮಾತ್ಮನ ಕಡೆಗೆ ಒಯ್ಯಬೇಕು **ಇತಿ** ಎಂದು **ಕ್ರಮಃ** ಕ್ರಮವು. ॥೪೩॥

ಹೇಳಿದ ವಿಷಯವನ್ನು ಮುಗಿಸುತ್ತಾ ಅನಾಯಾಸವಾಗಿ ತಿಳಿಯಲು ಅನುಕೂಲವಾಗುವಂತೆ ಸಂಗ್ರಹಿಸಿ ಹೇಳುತ್ತಾರೆ

**ಭೂದ್ವೀಪವರ್ಷಸರಿದದ್ರಿನಭಃಸಮುದ್ರ-**
**ಪಾತಾಲದಿಙ್ನರಕಭಾಗಣಲೋಕಸಂಸ್ಥಮ್ ।**
**ಗೀತಂ ಮಯಾ ತವ ನೃಪಾದ್ಭುತಮೀಶ್ವರಸ್ಯ**
**ಸ್ಥೂಲಂ ವಪುಃ ಸಕಲಜೀವನಿಕಾಯಧಾಮ್ನಃ ॥೪೪॥**

**ಹೇ ನೃಪ** ಪರೀಕ್ಷಿದ್ರಾಜನೇ! **ಸಕಲಜೀವನಿಕಾಯಧಾಮ್ನಃ** ಸಮಸ್ತಜೀವ ಸಮೂಹಕ್ಕೆ ಆಶ್ರಯನಾದ, ಸಕಲ ಜೀವ ಸಮೂಹವು ಆವಾಸಸ್ಥಾನವಾಗಿವುಳ್ಳ, ಸಕಲ ಜೀವರಿಗೆ ಆಶ್ರಯವಾದ, ಬ್ರಹ್ಮಾಂಡಕ್ಕೆ ಆಶ್ರಯನಾದ **ಈಶ್ವರಸ್ಯ** ಸರ್ವನಿಯಾಮಕನಾದ ಶ್ರೀಹರಿಯ **ಅದ್ಭುತಂ** ಅತ್ಯಾಶ್ಚರ್ಯಕರವಾದ **ಭೂದ್ವೀಪವರ್ಷಸರಿದದ್ರಿನಭ ಸಮುದ್ರಪಾತಾಲದಿಜನರಕಭಾಗಣಲೋಕಸಂಸ್ಥಃ** ಭೂಮಿ, ಅದರ ದ್ವೀಪಗಳು, ಅವುಗಳ ವರ್ಷಗಳು, ಅವುಗಳ ನದಿಗಳು, ಬೆಟ್ಟಗಳು, ಆಕಾಶ, ಸಮುದ್ರ, ಪಾತಾಲ, ದಿಕ್ಕುಗಳು, ನರಕ, ತೇಜೋಗಣಗಳು, ಲೋಕಗಳು ಇವೇ ಅವಯವಗಳಾಗಿವುಳ್ಳ **ಸ್ಥೂಲಂ ವಪುಃ** ಪ್ರತಿಮಾರೂಪವಾದ ಶರೀರವು **ತವ** ನಿನಗಾಗಿ **ಮಯಾ** ನನ್ನಿಂದ **ಗೀತಂ** ಹೇಳಲ್ಪಟ್ಟಿತು.

**॥ ಇಲ್ಲಿಗೆ ಶ್ರೀಮದ್ಭಾಗವತ ಪಂಚಮಸ್ಕಂಧದಲ್ಲಿ ಇಪ್ಪತ್ನಾಲ್ಕನೇ ಅಧ್ಯಾಯವು ಸಮಾಪ್ತವಾಯಿತು ॥**

★★★

# ಇಪ್ಪತ್ನಾಲ್ಕನೇ ಅಧ್ಯಾಯದ ಸಾರ

ನರಕಗಳು ಅತಿ ಭಯಂಕರಗಳಾದವುಗಳು. ಕ್ಷಣಿಕ ಸಾಂಸಾರಿಕ ಭೋಗಗಳು ಬಹುದುಃಖಕಾರಣವಾದ ನರಕಗಳಿಗೆ ಕಾರಣಗಳಾಗುವುವು. ಕಾರಣ ಅವು ಅತಿ ಹೇಯವಾದವುಗಳು. ಅವುಗಳಲ್ಲಿ ಸುದೃಢ ವೈರಾಗ್ಯ ಸಂಪಾದನೆ ಮಾಡಿ ಸಾತ್ವಿಕರು ಮೋಕ್ಷಪ್ರದನಾದ ಭಗವಂತನ ಪೂಜಾ, ತತ್ತ್ವಜ್ಞಾನಾರ್ಜನೆ ಮುಂತಾದ ನಿವೃತ್ತಕರ್ಮಗಳಲ್ಲಿಯೇ ನಿರತರಾಗಬೇಕು ಎಂದು ತಿಳಿಸಲು ನರಕಯಾತನೆಗಳನ್ನು ಈ ಅಧ್ಯಾಯದಲ್ಲಿ ಹೇಳುವರು.

ಮೊದಲು ಹಿಂದೆ ಹೇಳಿದ ಜೀವರ ಗತಿಗಳು ಉತ್ತಮಾಧಮಗಳು ಮತ್ತು ವಿಲಕ್ಷಣಗಳು ಎಂಬ ಭೋಗ ವೈಚಿತ್ರ್ಯ ವಿಷಯದಲ್ಲಿ ಪರೀಕ್ಷಿದ್ರಾಜರು ಪ್ರಶ್ನಿಸುತ್ತಾರೆ.

ಶುಕಾಚಾರ್ಯರೇ! ಸ್ವರ್ಗ ಮೊದಲುಮಾಡಿ ಪಾತಾಳದವರೆಗಿನ ಲೋಕಗಳಲ್ಲಿ ವಿಶೇಷವಾಗಿ ಅದರಲ್ಲಿರುವ ಜನರಲ್ಲಿ ಪ್ರತ್ಯಕ್ಷದಿಂದಲೂ ನಿಮ್ಮ ಮಾತಿನಿಂದಲೂ ಆಗಮದಿಂದಲೂ ಸಿದ್ಧವಾದ ಒಬ್ಬನು ಸುಖಿಯೂ ಒಬ್ಬನು ದುಃಖಿಯೂ ಎಂಬ ವೈವಿಧ್ಯವು ಹೇಗೆ ಕೂಡುವುದು? ಪ್ರವೃತ್ತಿಕರ್ಮಗಳನ್ನೇ ಎಲ್ಲರೂ ಮಾಡುತ್ತಿರುವಾಗ ಸಾಮಾನ್ಯ ಸುಖ, ವಿಶೇಷ ಸುಖಗಳಿಗೆ ಕಾರಣವೇನು? ಸುಖವೇ ಆಗಲಿ, ದುಃಖವೇ ಆಗಲಿ ಹೆಚ್ಚು ಕಡಿಮೆ ಎಂಬ ತಾರತಮ್ಯವು ಇರುವುದಕ್ಕೆ ಕಾರಣವೇನು? ಈ ಗತಿಗಳು ಎಲ್ಲವೂ ಎಲ್ಲರಿಗೂ ಆಗುವುವೇ? ಒಬ್ಬೊಬ್ಬನಿಗೆ ಒಂದೋಂದೇ ಆಗುವುದೇ? ಒಬ್ಬನಿಗೇನೇ ಅನೇಕ ಗತಿಗಳೇ? ಈ ಪ್ರಶ್ನೆಗಳಿಗೆಲ್ಲ ಉತ್ತರ ಶುಕಾಚಾರ್ಯರು ಕೊಡುತ್ತಾರೆ.




ಕರ್ಮ ಮಾಡುವ ಜೀವನ ಶ್ರದ್ಧೆಯು ಸಾತ್ವಿಕಾದಿ ಗುಣಗಳಿಂದಲೂ ಪೂಜ್ಯದೇವತಾ ಭೇದದಿಂದಲೂ ಅನೇಕ ಬಗೆಯಾಗಿರುವುದು. ಈ ಶ್ರದ್ಧೆಯು ನಾನು ಸತ್ತನಂತರ ಹೀಗೆ ಆಗುವೆನು ಎಂಬ ಜ್ಞಾನರೂಪವಾದುದು. ಈ ಶ್ರದ್ಧೆಯ ವೈವಿಧ್ಯದಿಂದ ಬೇರೆ ಬೇರೆ ರೀತಿಯ ಕರ್ಮ ಫಲಗಳಾದ ಲೋಕಗಳು ಜೀವರಿಗೆ ಅವರವರ ಕರ್ಮಾನುಗುಣವಾಗಿ ಆಗುವುವು. ಗುಣವೈಚಿತ್ರ್ಯದಿಂದ ನಿರ್ಮಿತವಾದ್ದರಿಂದ ಲೋಕಗಳಲ್ಲಿ ವೈಚಿತ್ರ್ಯವೂ ಯುಕ್ತವೇ.

ಹೀಗೆ ಸಾತ್ವಿಕಾದಿ ಪ್ರಭೇದದಿಂದ ಮೂರು ಬಗೆಯಾದ ಪ್ರವೃತ್ತಿ ಧರ್ಮಕ್ಕೂ ಫಲವನ್ನು ಹೇಳಿ ಈಗ ಅಧರ್ಮದ ಗತಿಯನ್ನು ಹೇಳುತ್ತಾರೆ. ಕರ್ಮವು ನಿಷಿದ್ಧವಾದರೇ ಅದರ ಆಚರಣೆಯಿಂದ ಪಾಪ ಬರುವುದು. ಕಾರಣ ಪಾಪವಿದೆ ಎಂಬುದಕ್ಕೆ ನಿಷೇಧವೇ ಪ್ರಮಾಣವಾಗಿದೆ. ಹಾಗೆಯೇ ಕರ್ಮಮಾಡುವವ ಬುದ್ಧಿಯು ಪರಲೋಕವಿಷಯದಲ್ಲಿ ವಿಲಕ್ಷಣವಾಗಿರುವುದು. ಕೆಲವರ ಬುದ್ಧಿ ತಾಮಸತರವಾದರೆ ಕೆಲವರದ್ದು ತಾಮಸತಮವಾಗಿರುವುದು. ಆದ್ದರಿಂದ ಅಧರ್ಮದ ಫಲವು ಧರ್ಮಫಲದಂತೆಯೇ ವಿಲಕ್ಷಣವಾಗಿ ಆಗುವುದು.

ಅನಾದಿ ಅವಿದ್ಯೆಯಿಂದ ವಿಲಸಿತವಾದ ಕಾಮವುಳ್ಳ ಜೀವರ ಅಧರ್ಮ ಪರಿಪಾಕ ಸ್ವರೂಪಗಳಾದ ಗತಿಗಳು ಸಾವಿರಾರು ನರಕರೂಪವಾದವುಗಳು. ಶಾಸ್ತ್ರಪ್ರಸಿದ್ಧವಾದ ಆ ಗತಿಗಳನ್ನು ಕ್ರಮವಾಗಿ ಹೇಳುವರು.

ಪರೀಕ್ಷಿನ್ಮಹಾರಾಜ ಕೇಳುವನು. ಪೂಜ್ಯರೇ! ನರಕಗಳೆಂಬುವುವು ಭೂಮಿಯ ಮೇಲೆ ಇರುವ ದೇಶ ವಿಶೇಷಗಳೇ ಅಥವಾ ಮಹಾದುಃಖಾನುಭವಗಳೇ? ದೇಶ ವಿಶೇಷಗಳೆಂದಾದಲ್ಲಿ ಮೂರು ಲೋಕಗಳ ಹೊರಗಿರುವುವೇ ಅಥವಾ ಒಳಗಿರುವುದಾದರೆ ಯಾವ ದಿಕ್ಕಿನಲ್ಲಿ ಎಷ್ಟು ಕೆಳಗೆ ಅಥವಾ ಎಷ್ಟು ಮೇಲೆ ಇವೆ?

ಶುಕಾಚಾರ್ಯರು ಹೇಳುತ್ತಾರೆ. ಈ ನರಕಗಳು ಮೂರು ಲೋಕದ ಮಧ್ಯದಲ್ಲಿಯೇ ಭೂಮಿಯ ಕೆಳಗೆ ಬ್ರಹ್ಮಾಂಡದ ಒಳಗಿನ ನೀರಿನ (ಗರ್ಭೋದಕದ) ಮೇಲೆ ಭರತ ಖಂಡದ ದಕ್ಷಿಣದಿಕ್ಕಿಗೆ ಸರಿಯಾಗಿ ಇರುವುವು. ಈ ದಕ್ಷಿಣ ದಿಕ್ಕಿನಲ್ಲಿ ಅಗ್ನಿಷ್ವತ್ತರೇಮೊದಲಾದ ಪಿತೃಗಣಗಳು ವಾಸಿಸುವರು. ಅವರು ಅತಿಶಯವಾದ ಶ್ರೀಹರಿಯಲ್ಲಿನ ಏಕಾಗ್ರ ಮನಸ್ಸಿನಿಂದ ತಮ್ಮ ಗೋತ್ರದಲ್ಲಿ ಜನಿಸಿದವರಿಗೆ

ಅಭ್ಯುದಯಗಳನ್ನು ಬಯಸುವರು. ದುಃಖಾನುಭವವಿದ್ದರೂ ಆ ಶಬ್ದವಾಚ್ಯಗಳಲ್ಲವೆಂದೂ ಅವನ್ನು ಅನುಭವಿಸುವ ಪ್ರದೇಶ ವಿಶೇಷಗಳೇ ನರಕಗಳು.

ಈ ನರಕ ಪ್ರದೇಶದಲ್ಲಿ ಶ್ರೀಹರಿಯ ಅಪ್ಪಣೆಯನ್ನು ಮೀರದಿರುವ ವಿವಸ್ವಾನ್ ಎಂಬ ಸೂರ್ಯನ ಮಗನಾದ ಯಮಧರ್ಮ ರಾಜರು ತಮ್ಮ ದೂತರಿಂದ ತಮ್ಮ ಪ್ರದೇಶಕ್ಕೆ ತರಲ್ಪಟ್ಟ ಮೃತರಾದ ಜೀವಿಗಳಲ್ಲಿ ನಿಷಿದ್ಧ ಕರ್ಮಗಳಿಂದುಟಾದ ಪಾಪಕ್ಕೆ ತಕ್ಕಂತೆ ಶಿಕ್ಷೆಯನ್ನು ಪರಿವಾರ ಸಹಿತರಾಗಿ ವಿಧಿಸುವರು.

ಕೆಲವರು ಕೆಳಗೆ ದಕ್ಷಿಣ ದಿಕ್ಕಿನಲ್ಲಿ ಇಪ್ಪತ್ತೊಂದು ನರಕಗಳನ್ನು ಎಣಿಸುವರು. ರಾಜನೇ! ಅವುಗಳನ್ನು ಹೆಸರು, ಆಕಾರ, ಲಕ್ಷಣಗಳಿಂದ ನಿನಗೆ ಕ್ರಮವಾಗಿ ವಿವರಿಸುವೆವು. ಇವುಗಳಲ್ಲಿ ಏಳು ಪ್ರಧಾನಗಳೆಂದು ಸ್ಮೃತಿಪ್ರಸಿದ್ಧವು - ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸೀಪತ್ರವನ, ಸೂಕರಮುಖ, ಅಂಧಕೂಪ, ಕ್ರಿಮಿಭೋಜನ, ಸಂದಂಶ, ತಪ್ತಸೂರ್ಮಿ (ತಪ್ತಭೂಮಿ), ವಜ್ರಕಂಟಕ, ಶಾಲ್ಮಲೀ, ವೈತರಣೀ, ಪೂಯೋದ, ಪ್ರಾಣರೋಧ, ವಿಶಸನ, ಲಾಲಭಕ್ಷ, ಸಾರಮೇಯಾದನ, ಅವೀಚೀಪೂರ(ರಯ), ರೇತಃಪಾನ ಎಂದು ಇಪ್ಪತ್ತೊಂದು ನರಕಗಳು.

ಮತ್ತು ಇವುಗಳಿಂದ ಭಿನ್ನವಾದ ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲಪ್ರೋತ, ದಂದಶೂಕ, ಪಟನಿರೋಧ, ಪರ್ಯಾವರ್ತನ, ಸೂಚೀಮುಖಗಳೆಂದೂ ಇವೆ. ಹೀಗೆ ಇಪ್ಪತ್ತೆಂಟು ನರಕಗಳು ಅನೇಕ ರೀತಿಯ ತೀವ್ರದುಃಖವನ್ನನುಭವಿಸುವ ಪ್ರದೇಶಗಳು.

ಇಪ್ಪತ್ತೆಂಟು ನರಕಗಳಲ್ಲೊಂದಾದ ತಾಮಿಸ್ರವೆಂಬ ನರಕದಲ್ಲಿ ಯಾವನು ಮತ್ತೊಬ್ಬರ ಹಣ, ಮಕ್ಕಳು, ಹೆಂಡತಿಯರನ್ನು ಅಪಹರಿಸುವನೋ ಅವನು ಅತ್ಯಂತ ಭಯವನ್ನುಂಟು ಮಾಡುವ ಯಮಭಟರಿಂದ ಮೃತ್ಯುಪಾಶದಿಂದ ಕಟ್ಟಲ್ಪಟ್ಟವನಾಗಿ ಬಲಾತ್ಕಾರದಿಂದ ನಿಶ್ಚಯವಾಗಿ ತಳ್ಳಲ್ಪಡುವನು. ಕತ್ತಲೆಯೇ ಹೆಚ್ಚಾಗಿರುವ ಈ ನರಕದಲ್ಲಿ ಆಹಾರವಿಲ್ಲದಿರುವುದು, ಹೆಚ್ಚು ಕುಡಿಯುವುದು, ಚೆನ್ನಾಗಿ ಹೊಡೆಯುವುದು, ಹೆದರಿಸುವುದು ಮೊದಲಾದವುಗಳಿಂದ ಪೀಡಿಸಲ್ಪಡುವನಾಗಿ ಜೀವನು ಬಹುದುಃಖದಿಂದ ಒಂದೊಂದು ಸಲ ಮಾತ್ರ ವಿಸರ್ಜನೆ ಮಾಡುವನು, ಮೂರ್ಛೆ ಹೊಂದುವನು. ಬಿಟ್ಟು ಬಿಟ್ಟು ಪೀಡಿಸಲ್ಪಡುವ ಈ ಪಾಪಿಯು ಕೆಲವು ಸಲ ಮೂರ್ಛೆ ಹೋಗದಿರುವುದೂ ಉಂಟು.




ಯಾವನಾದರೋ ಯಜಮಾನನಿಗೆ ತಿಳಿಯದಂತೆ ಹಣ, ಹೆಂಡತಿ ಮೊದಲಾದವರನ್ನು ತಾನು ಅನುಭವಿಸುವನೋ ಅವನು ಭಯಂಕರ ಯಮಭಟರಿಂದ ಮೃತ್ಯುಪಾಶಬದ್ಧನಾಗಿ ಅಂಧತಾಮಿಶ್ರ ನರಕದಲ್ಲಿ ಬಲಾತ್ಕಾರವಾಗಿ ತಳ್ಳಲ್ಪಡುವನು. ಈ ಅಂಧತಾಮಿಶ್ರದಲ್ಲಿ ಬುಡಕತ್ತರಿಸಿದ ಮರವು ಹೇಗೆ ಬೀಳಿಸಲ್ಪಡುವುದೋ ಹಾಗೆ ಕತ್ತರಿಸಲ್ಪಡುವ ಜನನೇಂದ್ರಿಯವುಳ್ಳವನಾಗಿ ಬೀಳಿಸಲ್ಪಡುವ ಜೀವನು ಬಹುದುಃಖದಲ್ಲಿರುವನಾಗಿ ನೋವಿನಿಂದ ಪ್ರಜ್ಞೆ ಇಲ್ಲದವನಾಗಿ ಕಣ್ಣು ಕಾಣದವನಾಗಿಯೂ ಆಗುವನು. ಅಲ್ಲಿ ಬಿದ್ದ ಪಾಪಿಯು ದೃಷ್ಟಿಹೀನನಾಗುವ ಕಾರಣದಿಂದ ಆ ನರಕವನ್ನು ಕುರುಡುತನ ಉಂಟು ಮಾಡುವ ಕತ್ತಲೆಯುಳ್ಳದ್ದನ್ನಾಗಿ ಕರೆಯುವರು. ತಾಮಿಸ್ರದಲ್ಲಿ ಬುದ್ಧಿನಾಶ ಅಂಧತಾಮಿಸ್ರದಲ್ಲಿ ಸಂಪೂರ್ಣ ದೃಷ್ಟಿನಾಶವೆಂಬ ವಿಶೇಷವನ್ನು ತಿಳಿಯಬೇಕು.

ಯಾವನಾದರೋ ಈ ಲೋಕದಲ್ಲಿ ಈ ಶರೀರ ಈ ಗೃಹಾದಿಗಳನ್ನು ನಾನು ಮಾಡುತ್ತೇನೆ ಎಂದು, ಈ ಭೂಮಂಡಲವು (ಹಣಮೊದಲಾದವು) ನನ್ನದು ಎಂದು ಭ್ರಾಂತಿಯಿಂದ ಪ್ರಾಣಿಗಳಿಗೆ ದ್ರೋಹ ಮಾಡಿ ತನ್ನ ಕುಟುಂಬವನ್ನು ಮಾತ್ರ ಪ್ರತಿದಿನವೂ ಪೋಷಿಸುವನೋ ಆ ಪಾಪಿಯು ಅದೆಲ್ಲವನ್ನು ಈ ಲೋಕದಲ್ಲಿಯೇ ಬಿಟ್ಟು ಆ ಪಾಪದಿಂದ ಸತ್ತಮೇಲೆ ರೌರವ ನರಕದಲ್ಲಿ ಬೀಳುವನು. ಇವನಿಂದ ಇಲ್ಲಿ ಹಿಂಸಿಸಲ್ಪಟ್ಟ ಪ್ರಾಣಿಗಳೇ ಪರಲೋಕದಲ್ಲಿ ತೀವ್ರವೇದನೆಗೊಳಗಾದ ಅವನನ್ನು ನಾನಾ ವಿಷಮುಖ ಮೃಗಗಳಾಗಿ ಹಿಂಸಿಸುವುವು. ಆ ಕಾರಣದಿಂದ ಆ ನರಕವನ್ನು ರೌರವವೆಂದು ಕರೆಯುವರು. ರುರು ಎಂದು ಹಾವಿಗಿಂತಲೂ ಅತಿಕ್ರೂರ ಪ್ರಾಣಿಯ ಹೆಸರು. ಯಮದೇವರ ಆಜ್ಞೆಯಂತೆ ಅಂಥಹ ಅನುಸಂಧಾನವುಳ್ಳ ಯಮದೂತರೇ ರುರುಗಳಾಗುವರು.

ಇದೇ ರೀತಿಯಲ್ಲಿ ಮಹಾರೌರವ ನರಕವೂ ದುಃಖಕರ. ಈ ನರಕದಲ್ಲಿ ಪಾಪದ ಫಲವಾಗಿ ಬಿದ್ದ ಜೀವನನ್ನು ಮಾಂಸಾಹಾರಿಗಳಾದ ಅತಿ ಕ್ರೂರ ವಿಷ ಪ್ರಾಣಿಗಳು ತಿನ್ನುವುವು. ಯಾವನು ದೇವತಾದಿಗಳಿಗೆ ಕೊಡದೇ ತನ್ನ ದೇಹ ಪೋಷಣೆಗಾಗಿಯೇ ತಿನ್ನುವನೋ ಅವನು ಆ ನರಕದಲ್ಲಿ ಬೀಳುವನು. ಈ ಲೋಕದಲ್ಲಿ ಕ್ರೂರನಾದ ಯಾವನು ಪಶು, ಪಕ್ಷಿ ಮುಂತಾದ ಪ್ರಾಣಿಗಳನ್ನು ಬೇಯಿಸುವಮೂಲಕ ಉಸಿರಾಡಲು ಬರದಂತೆ ಮಾಡುವನೋ, ಅಂಥಹ ನರಭಕ್ಷಕರಿಂದಲೂ ನಿಂದಿಸಲ್ಪಡುವ, ಕರುಣೆಯಿಲ್ಲದವನನ್ನು ಸತ್ತಮೇಲೆ ಪರಲೋಕದಲ್ಲಿ ಯಮಭಟರು

ಕಾದ ಎಣ್ಣೆಯಿಂದ ತುಂಬಿದ ಕುಂಭೀಪಾಕವೆಂಬ ನರಕದಲ್ಲಿ ಉಸಿರಾಡಲು ಬರದಂತೆ ಬೇಯಿಸುವರು.

ಯಾವನು ಈ ಲೋಕದಲ್ಲಿ ತಂದೆ, ಸಹೋದರ, ಬ್ರಾಹ್ಮಣರು, ತಾಯಿ ಇವರಿಗೆ ದ್ರೋಹ ಮಾಡುವನೋ ಅವನು ಹತ್ತುಸಾವಿರ ಯೋಜನ ವಿಸ್ತಾರವಾಗಿ ದುಂಡಾಗಿರುವ ತಾಮ್ರದಿಂದ ಮಾಡಿದ, ಧಾನ್ಯವನು ಒಣಗಿಸುವ ಖಣದಂತಿರುವ, ಮೇಲೆ ಸೂರ್ಯ ಕೆಳಗೆ ಅಗ್ನಿಯಿಂದಲೂ ಸುಡುವ ಕಾಲಸೂತ್ರವೆಂಬ ನರಕದಲ್ಲಿ ಇರಿಸಲ್ಪಟ್ಟವನಾಗಿ ಹಸಿವೆ ನೀರಡಿಕೆಗಳಿಂದ ಕೂಡ ಸುಡುತ್ತಿರುವ ದೇಹದ ಒಳಹೊರಭಾಗವುಳ್ಳವನಾಗಿ ಇರುವನು, ಮಲಗುವನು, ನಿಲ್ಲುವನು, ಓಡುವನು. ಇದರಿಂದ ಬಿಡಿಸಿರಿ ಎಂದು ಬೇಡುವನು. ಇವನು ದ್ರೋಹ ಮಾಡಿದ ಪಶುಗಳ ಮೈಮೇಲಿನ ಕೂದಲುಗಳು ಎಷ್ಟು ಸಾವಿರವೋ ಅಷ್ಟು ಸಾವಿರ ವರ್ಷ ಕಾಲಸೂತ್ರವೆಂಬ ನರಕದಲ್ಲಿ ವಾಸಿಸುವನು. ಪಿತ್ರಾದಿದ್ರೋಹ ಮಾತ್ರವಲ್ಲ ಪಶುದ್ರೋಹಿಯೂ ಈ ನರಕಕ್ಕೆ ಬೀಳುವನು.

ಈ ಲೋಕದಲ್ಲಿ ಯಾವನು ಆಪತ್ಕಾಲವಿಲ್ಲದಿರುವಾಗ ತನ್ನ ವೈದಿಕ ಮಾರ್ಗದಿಂದ ದೂರನಾಗಿ ದುಷ್ಟ ಅವೈದಿಕ ಮಾರ್ಗಗಳನ್ನು, ಬೌದ್ಧ, ಜೈನಾದಿ ಮತಗಳನ್ನು ಆಶ್ರಯಿಸುವನೋ ಅವನನ್ನು ಅಸಿಪತ್ರವನವೆಂಬ ನರಕದಲ್ಲಿ ಪ್ರವೇಶ ಮಾಡಿಸಿ ಚಾವಟಿಯಿಂದ ಚೆನ್ನಾಗಿ ಹೊಡೆಯುವರು. ಆಪತ್ಕಾಲದಲ್ಲಿ ಒಂದು ಬಗೆಯ ಅವಕಾಶವಿತ್ತಿರುವರು. ಆ ನರಕದಲ್ಲಿ ಸೇರಿದವನಾಗಿ ಏಟು ತಡೆಯಲಾಗದೇ ಇತ್ತ ಅತ್ತ ಓಡುತ್ತ ಎರಡೂ ಕಡೆಗಳಲ್ಲಿ ಚೂಪಾಗಿರುವ ಖಡ್ಗದಂತಿರುವ ತಾಳೆಗಿಡಗಳ ಎಲೆಗಳಿಂದ ಕತ್ತರಿಸಲ್ಪಡುವ ಎಲ್ಲ ಅವಯವಗಳುಳ್ಳವನಾಗುವನು. ಅಯ್ಯೋ ನಾನು ಕೊಲ್ಲಲ್ಪಟ್ಟೆನು ಎಂದು ಕಿರುಚುತ್ತ ಅತಿಶಯ ನೋವಿನಿಂದ ಹೆಜ್ಜೆ ಹೆಜ್ಜೆಗೆ ಮೂರ್ಛೆ ಹೊಂದಿ ಬೀಳುವನು. ತನ್ನ ವರ್ಣಾಶ್ರಮಧರ್ಮಗಳನ್ನು ತ್ಯಜಿಸಿದ ಪಾಷಂಡ ಮತವನ್ನನುಸರಿಸಿದ ಆ ಪಾಪಿಯು ಪಾಪದ ಫಲವನ್ನು ಅನುಭವಿಸುವನು.

ಈ ಲೋಕದಲ್ಲಿ ರಾಜನಾಗಲಿ ರಾಜಭಟನಾಗಲಿ ಯಾವನು ಶಿಕ್ಷೆಗೆ ಅರ್ಹನಲ್ಲದವನಿಗೆ ಶಿಕ್ಷೆಯನ್ನು ಮಾಡುವನೋ, ತಪ್ಪುಮಾಡಿರುವ ಬ್ರಾಹ್ಮಣನಿಗೆ ಶಾರೀರಿಕ ಶಿಕ್ಷೆಯನ್ನು ವಿಧಿಸುವನೋ, ಅತ್ಯಂತ ಪಾಪಿಯಾದ ಅವನು ಪರಲೋಕದಲ್ಲಿ ಸೂಕರ ಮುಖವೆಂಬ ನರಕದಲ್ಲಿ ಬೀಳುವನು. ಈ ಲೋಕದಲ್ಲಿ




ಕಳ್ಳತನಮೊದಲಾದ ಅಪರಾಧಗಳಿಂದ ಸಿಕ್ಕಿಬಿದ್ದ ಕಳ್ಳನು ಸೆರೆಮನೆಯಲ್ಲಿ ಬೇಡಿಯಿಂದ ಬಂಧಿತನಾಗಿ ಹೇಗೆ ಬಹು ದುಃಖವನ್ನು ಹೊಂದುವನೋ ಹಾಗೆಯೇ ಆ ಸೂಕರಮುಖದಲ್ಲಿ ಬಿದ್ದ ಪಾಪಿಯು ಅತ್ಯಂತ ಬಲಿಷ್ಠಗಳಾದ ಹಂದಿಯಾಕಾರದ ಯಮಭಟರಿಂದ ಕಬ್ಬಿನಂತೆ ಹಿಂಡಲ್ಪಡುವ ಎಲ್ಲ ಅವಯವಗಳುಳ್ಳವನಾಗಿ ದೈನ್ಯವಾದ ದನಿಯಿಂದ ಕೂಗಿಕೊಳ್ಳುತ್ತ ಕೆಲವೊಮ್ಮೆ ಮೂರ್ಛಿತನಾಗಿ ಬುದ್ಧಿಭ್ರಮೆಯನ್ನು ಹೊಂದುವನು.

ಮಾನವನು ಶ್ರೀಹರಿಯಿಂದ ನಿರ್ಮಿತವಾದ ಹೊದಿಕೆ, ಅನ್ನ ಮುಂತಾದ ಜೀವನೋಪಾಯವುಳ್ಳವನು. ಶ್ರೀಹರಿಯಿಂದ ನಿರ್ಮಿತವಾದ ವಿಧಿನಿಷೇಧರೂಪ ಜೀವನೋಪಾಯವುಳ್ಳವನು. ಮತ್ತೊಬ್ಬರ ವೇದನೆಯನ್ನು ಬಲ್ಲವನು. ಅಂಥಹ ಯಾವ ಮನುಜನು, ಈ ಲೋಕದಲ್ಲಿ ಶ್ರೀಹರಿಯಿಂದ ನಿರ್ಮಿತವಾದ, ಸ್ವಾಭಾವಿಕವೆನಿಸುವ ಮನುಷ್ಯರಕ್ತಪಾನವೇ ಜೀವನೋಪಾಯವಾಗಿವುಳ್ಳ, ಮತ್ತೊಬ್ಬರ ವೇದನೆಯನ್ನರಿಯದ ಸೊಳ್ಳೆ, ತಗಣಿ ಮೊದಲಾದ ಪ್ರಾಣಿಗಳಿಗೆ ಜೀವನಕ್ಕೆ ಅವಕಾಶ ಕಲ್ಪಿಸಲು ಸಮರ್ಥನಾಗದೆ ನೋವನ್ನುಂಟು ಮಾಡುವನೋ ಅವನು ಸತ್ತಮೇಲೆ ಪರಲೋಕದಲ್ಲಿ ಆ ಪ್ರಾಣಿಗಳಿಗೆ ದ್ರೋಹ ಮಾಡಿದ್ದಕ್ಕಾಗಿ ಅಂಧಕೂಪವೆಂಬ ನರಕದಲ್ಲಿ ಬೀಳುವನು.

ಅಲ್ಲಿ ಇವನು ದ್ರೋಹಕ್ಕೊಳಗಾದ ಆ ಆ ಪಶು ಮೃಗ ಪಕ್ಷಿ ಸರ್ಪ ಸೊಳ್ಳೆ ಹೇನು ತಿಗಣಿ ನೊಣ ಮೊದಲಾದವುಗಳಿಂದ ಕತ್ತಲೆಯಲ್ಲಿ ಎಲ್ಲ ಕಡೆಗಳಿಂದಲೂ ಕಚ್ಚಲ್ಪಟ್ಟು ನಿದ್ದೆಯ ಸುಖವಿಲ್ಲದೆ ಒಂದೇ ಕಡೆ ನಿಲ್ಲಲಾಗದೆ ಕುಷ್ಠಾದಿರೋಗಗಳಿಂದ ದೂಷಿತವಾದ ದೇಹದಲ್ಲಿ ಇರುವ ಜೀವನಂತೆ ಸುತ್ತುವನು.

ಯಾವನು ಈ ಲೋಕದಲ್ಲಿ ಶ್ರೀಹರಿಯ ಇಚ್ಛೆಯಿಂದ ತನಗೆ ದೊರೆತ ಅನ್ನ ಮೊದಲಾದ ತಿನ್ನುವ ಪದಾರ್ಥಗಳನ್ನು ಅತಿಥಿ, ಭೃತ್ಯ, ಬಾಲ, ವೃದ್ಧ ಮೊದಲಾದವರಿಗೆ ಹಂಚಿಕೊಡದೆ ತಾನೊಬ್ಬನೇ ತಿನ್ನುವನೋ ಯಾವನು ದೇವತಾಪೂಜಾರೂಪವಾದ ಯಾಗಾದಿಶ್ರೇಯಸ್ಸಾಧನವನ್ನಾಗಿ ಮಾಡದಿರುವ ಅನ್ನಾದಿಗಳನ್ನು ತಿನ್ನುವನೋ, ಯಾವನು ವೈಶ್ವದೇವ ಮುಂತಾದ ಸಂಸ್ಕಾರವಿಲ್ಲದ ಅನ್ನಾದಿಗಳನ್ನು ತಿನ್ನುವನೋ ಅವನು ಸತ್ತನಂತರ ಪರಲೋಕದಲ್ಲಿ ಕೃಮಿಭೋಜನವೆಂಬ ನಿಕೃಷ್ಟ ನರಕದಲ್ಲಿ ಬೀಳುವನು. ಆ ನರಕದಲ್ಲಿ ನೂರು ಸಾವಿರ

ಯೋಜನದ ಹುಳಗಳ ತೆಗ್ಗಿನಲ್ಲಿ ಕೃಮಿಯಾಗಿ ತಾನು ಕೃಮಿಗಳಿಂದ ತಿನ್ನಲ್ಪಡುವವನಾಗಿ ಕೃಮಿಗಳೇ ಆಹಾರವಾಗಿವುಳ್ಳವನಾಗುವನು. ಎಲ್ಲಿಯವರೆಗೆ ಅಥಿತಿ ಮುಂತಾದವರಿಗೆ ಕೊಡದಿರುವುದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ತನ್ನನ್ನು ನರಕದಲ್ಲಿ ಬೀಳಿಸುವನು. ಪ್ರಾಯಶ್ಚಿತ್ತ ಮಾಡಿಕೊಂಡರೆ ನರಕ ತಪ್ಪುವುದು.

ಪರೀಕ್ಷಿತನೇ! ಯಾವ ಮನುಷ್ಯನು ಆಪತ್ಕಾಲವಿಲ್ಲದಿದ್ದಾಗ ಈ ಲೋಕದಲ್ಲಿ ಕಳ್ಳತನದಿಂದಲೋ ಬಲಾತ್ಕಾರದಿಂದಲೋ ಬ್ರಾಹ್ಮಣನ ಮತ್ತಿತರರ ಬಂಗಾರ, ರತ್ನ ಮುಂತಾದವುಗಳನ್ನು ತೆಗೆದುಕೊಳ್ಳುವನೋ ಅವನನ್ನು ಸತ್ತ ನಂತರ ಪರಲೋಕದಲ್ಲಿ ಯಮಭಟರು ಕಬ್ಬಿಣದ ಕೆಂಪಾಗಿರುವ ಚಿಮಟಗಳಿಂದ ಚರ್ಮದಲ್ಲಿ ಮಾಂಸವನ್ನು ಕಿತ್ತುವರು. ಇದು ಸಂದಂಶನರಕ.

ಯಾವನು ಈ ಲೋಕದಲ್ಲಿ ರತಿಗೆ ಯೋಗ್ಯಳಲ್ಲದ ಹೆಂಗಸನ್ನು ರತಿಗಾಗಿ ಹೊಂದುವನೋ, ಸ್ತ್ರೀಯಾದರೂ ಹೊಂದಬಾರದ ಪುರುಷನನ್ನು ರತಿಗಾಗಿ ಹೊಂದುವಳೋ ಅವರನ್ನು ಪರಲೋಕದಲ್ಲಿ ಚಾವಟಿಯಿಂದ ಹೊಡೆಯುತ್ತ ಹೆದರಿಸುತ್ತ ಲೋಹದಿಂದ ಮಾಡಿದ ಚೆನ್ನಾಗಿ ಕಾದಿರುವ ಹೆಣ್ಣು ಪ್ರತಿಮೆಯೊಡನೆ ಪುರುಷನನ್ನು ಅಪ್ಪಿಕೊಳ್ಳುವಂತೆ ಮಾಡುವರು. ಹೆಂಗಸನ್ನು ಕಾಯಿಸಿದ ಕಬ್ಬಿಣದ ಗಂಡು ಪ್ರತಿಮೆಯೊಡನೆ ಅಪ್ಪಿಕೊಳ್ಳುವಂತೆ ಮಾಡುವರು.

ಈ ಲೋಕದಲ್ಲಿ ಯಾವನು ಕಂಡ ಹೆಂಗಸರನ್ನೆಲ್ಲ ಬಲಾತ್ಕಾರವಾಗಿ ಭೋಗಿಸುವನೋ ಅವನನ್ನು ವಜ್ರದಂತೆ ಗಟ್ಟಿಯಾಗಿರುವ ಮುಳ್ಳಿನ ಜಾಲಿ ಮರವನ್ನು ಹತ್ತಿಸಿ ಕೆಳಗೆ ಎಳೆಯುವರು.

ಈ ಲೋಕದಲ್ಲಿ ಪಾಷಂಡಿಗಳಾದ ಯಾವ ರಾಜರಾಗಲಿ, ರಾಜಸೇವಕರಾಗಲಿ ಧರ್ಮದ ಕಟ್ಟಳೆಗಳನ್ನು ಮುರಿಯುವರೋ, ಧರ್ಮದ ಎಲ್ಲೆಗಳನ್ನು ಹಾಳು ಮಾಡಿದ ಅವರು ಸತ್ತ ನಂತರ ವೈತರಣಿಯಲ್ಲಿ ಬೀಳುವರು. ನರಕದ ಕಂದಕದಂತಿರುವ ಆ ನದಿಯಲ್ಲಿ ಮೊಸಳೆ ಮೊದಲಾದ ಜಲಚರಗಳಿಂದ ಇತ್ತ ಅತ್ತ ಕಿತ್ತು ತಿನ್ನಲ್ಪಡುವವರಾಗಿ ಪ್ರವಾಹದಿಂದ ಕೊಚ್ಚಿಕೊಂಡು ಹೋಗಲ್ಪಟ್ಟರೂ ಯಾತನಾ ದೇಹದಿಂದಲೂ ತಮ್ಮ ಪ್ರಾಣಗಳಿಂದಲೂ ವಿಯೋಗ ಇಲ್ಲದವರಾಗಿ ಸಾಯದಲೇ ತಮ್ಮ ಪಾಪಕರ್ಮದ ಫಲವನ್ನು ಸ್ಮರಿಸುತ್ತಾ ಮಲ ಉಚ್ಚೆ ಕಿವು ರಕ್ತ ಕೂದಲು ಉಗರು ಎಲಬು ಕೊಬ್ಬು

 

ಮಾಂಸ ಹೆಣ ಇವುಗಳ ರೂಪದಲ್ಲಿ ಹರಿಯುವ ನದಿಯಾದ ಆ ವೈತರಣಿಯಲ್ಲಿ ದುಃಖಪಡುವರು.

ಈ ಲೋಕದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯವರ್ಣದವರು ಶೂದ್ರಸ್ತ್ರೀ ಪತಿಗಳಾಗಿ ಶೌಚ, ಆಚಾರ ನಿಯಮಗಳನ್ನು ಬಿಟ್ಟವರಾಗಿ ನಾಚಿಕೆ ಬಿಟ್ಟವರಾಗಿ ಸ್ವೇಚ್ಛಾಚಾರವನ್ನೇ ಮಾಡುವವರೋ ಅವರೂ ಕೂಡ ಮರಣ ಹೊಂದಿ ಕಿವು, ಮಲ, ಮೂತ್ರ, ಕಫ, ಸಿಂಬಳಗಳೆಂಬ ಕೊಳೆಗಳಿಂದ ತುಂಬಿದ ಪೂಯೋದವೆಂಬ ಸಮುದ್ರದಲ್ಲಿ ಬೀಳುವರು. ಮತ್ತು ಅತ್ಯಂತ ಅಸಹ್ಯವಾದ ಆ ಕಿವು ಮೊದಲಾದವನ್ನೇ ತಿನ್ನುವರು.

ಇಲ್ಲಿಯೇ ಯಾವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಣದವರು ನಾಯಿಕತ್ತೆಗಳನ್ನು ಸಾಕಿದವರಾಗಿ ಬೇಟೆ ಆಡುವುದರಲ್ಲಿ ಆಸಕ್ತರಾಗಿ ಅಪಾತ್ರರಿಗಾಗಿ ಅಥವಾ ವಿಹಿತವಲ್ಲದಕಾಲದಲ್ಲಿ ಪ್ರಾಣಿಗಳನ್ನು ಕೊಲ್ಲುವರೋ ಸತ್ತ ಅವರನ್ನೂ ಗುರಿಯಾಗಿಟ್ಟುಕೊಂಡು ಯಮಭಟರು ಬಾಣಗಳಿಂದ ಹೊಡೆಯುವರು.

ಈ ಲೋಕದಲ್ಲಿ ದೈವಭಕ್ತಿಯಿಲ್ಲದೆ ಧರ್ಮಾಚರಣೆ ತತ್ತ್ವ ತಿಳಿಯದೇ ಲೋಕವಂಚನೆ ಮಾಡಿ ತನ್ನ ಜೀವನ ನಡೆಸುವುದಕ್ಕಾಗಿ ತಾನು ಧಾರ್ಮಿಕನೆಂದು ತೋರಿಸಲು ಕರ್ಮಾನುಷ್ಠಾನ ಮಾಡುವ ಬ್ರಾಹ್ಮಣಾದಿ ಮೂರು ವರ್ಣದವರು ಡಂಭಕ್ಕಾಗಿ ಮಾಡಿದ ಯಜ್ಞಗಳಲ್ಲಿ ಪಶುಗಳನ್ನು ಕತ್ತರಿಸುವರೋ ಅವರನ್ನು ಪರಲೋಕದಲ್ಲಿ ವೈಶಸನ ನರಕದಲ್ಲಿ ನರಕ ಪಾಲಕರಾದ ಯಮಭಟರು ಕೆಳಗೆ ಉರುಳಿಸಿ ಕತ್ತರಿಸುವರು, ತುಂಡರಿಸುವರು.

ಈ ಲೋಕದಲ್ಲಿ ತ್ರಿವರ್ಣದ ಯಾವನು ಕಾಮೋದ್ರೇಕದಿಂದ ಮುಗ್ಧನಾಗಿ ತನ್ನ ಜಾತಿಯ ಹೆಂಡತಿಗೆ ವಶೀಕರಣಕ್ಕಾಗಿ ರೇತಸ್ಸನ್ನು ಕುಡಿಸುವನೋ, ತನ್ನ ರಕ್ಷಣೆಗೊಳಪಟ್ಟ ಬೇರೊಬ್ಬರ ಹೆಂಡತಿಗೆ ರೇತಸ್ಸನ್ನು ಹೊಂದಿಸುವನೋ, ಅವನನ್ನು ಪರಲೋಕದಲ್ಲಿ ರೇತಸ್ಸಿನ ಕಾಲುವೆಯಲ್ಲಿ ಕೆಡವಿ ರೇತಸ್ಸನ್ನು ಕುಡಿಸುವರು.

ಈ ಲೋಕದಲ್ಲಿ ಕಳ್ಳರಾಗಲಿ, ರಾಜರಾಗಲಿ, ರಾಜಭಟರಾಗಲಿ ಯಾರು ಬೆಂಕಿ ಇಟ್ಟವರಾಗಿ, ವಿಷ ನೀಡಿದವರಾಗಿ, ಊರುಗಳನ್ನು, ವ್ಯಾಪಾರಿಗಳನ್ನು, ದಾರಿಹೋಕರನ್ನು ನಾಶಪಡಿಸುವರೋ, ಸತ್ತು ಹೋದ ಆ ಕಳ್ಳರನ್ನು, ರಾಜರನ್ನು,

ರಾಜಭಟರನ್ನೂ ಯಮಕಿಂಕರರು ವಜ್ರದಂತೆ ಗಟ್ಟಿಯಾದ ಹಲ್ಲುಳ್ಳ ಏಳುನೂರು ಮತ್ತು ಇಪ್ಪತ್ತು ನಾಯಿಗಳಿಂದ ವೇಗವಾಗಿ ತಿನ್ನಿಸುವರು.

ಈ ಲೋಕದಲ್ಲಿ ಯಾವನು ಸಾಕ್ಷಿ ಹೇಳುವಾಗ, ವ್ಯಾಪಾರದಲ್ಲಿ ಹಣ ಕೊಟ್ಟು ಕೊಂಡುಕೊಳ್ಳುವಾಗ, ದಾನದಲ್ಲಾಗಲಿ ಆಶೆಗೊಳಗಾಗಿ ಹೇಗೋ ಸುಳ್ಳು ಹೇಳುವನೋ ಅವನು ಮರಣ ಹೊಂದಿ ಒಂದುನೂರು ಯೋಜನ ಎತ್ತರವಾದ ಬೆಟ್ಟದ ಶಿಖರದಿಂದ ತಲೆಕೆಳಾಗಾದವನಾಗಿ ಯಾವ ಆಶ್ರಯವೂ ಇಲ್ಲದ ಕಲ್ಲಿನಿಂದ ತುಂಬಿರುವ ನೀರಿಲ್ಲದ ಹಳ್ಳದಲ್ಲಿ ಬೀಳಿಸಲ್ಪಡುವನು. ಯಾವ ಕಲ್ಲಿರುವ ಸ್ಥಳವು ದೂರದಿಂದ ನೀರಿದ್ದಂತೆ ಕಾಣುವುದು ಅದೇ ಅವೀಚೀಮತ್ ಎಂದು ಕರಿಸಿಕೊಳ್ಳುವುದು. ಪಾಪಿಯು ಆ ನೀರಿಲ್ಲದ ಕಾರಣ ತರಂಗಗಳಿಲ್ಲದ ಕಲ್ಲಿನ ಮೇಲೆ ಎಳ್ಳಿನಷ್ಟು ಚೂರು ಚೂರಾಗಿ ನುಚ್ಚುನೂರಾಗುವ ಶರೀರಯಾತನಾ ಉಳ್ಳವನಾದರೂ ಸಾಯದೇ ಇರುವವನಾಗಿ ಮತ್ತೆ ಶಿಖರಕ್ಕೆ ಏರಿಸಲ್ಪಟ್ಟು ಬೀಳುವನು.

ಈ ಲೋಕದಲ್ಲಿ ಬ್ರಾಹ್ಮಣನು ಅವನ ಹೆಂಡತಿಯಾಗಲಿ (ಬ್ರಾಹ್ಮಣಿ) ಸೋಮ ಪಾನ ಮಾಡಿದ ರಾಜನಾಗಲಿ ಅವನ ಹೆಂಡತಿಯಾಗಲಿ ತಂದಯ ಶ್ರಾದ್ಧ ಮುಂತಾದ ವ್ರತದಲ್ಲಿರುವ ವೈಶ್ಯನಾಗಲಿ ಅವನ ಪತ್ನಿಯಾಗಲಿ ಯಾರು ಮದ್ಯಪಾನ ಮಾಡುವನೋ ಸತ್ತನಂತರ ನರಕಕ್ಕೆ ಒಯ್ಯಲ್ಪಟ್ಟ ಅವರ ಎದೆಯ ಮೇಲೆ ಕಾಲಿನಿಂದ ತುಳಿದುಕೊಂಡು ಅವರ ಬಾಯಿಯಲ್ಲಿ ಬೆಂಕಿಯಿಂದ ಕಾಯಿಸಿ ಕರಗಿಸಿ ನೀರಾಗಿ ಮಾಡಲ್ಪಟ್ಟ ಕಬ್ಬಿಣವನ್ನು ಸುರಿಯುವರು. ಬ್ರಾಹ್ಮಣರಿಗೆ ಸುರಾಪಾನ ಯಾವಾಗಲೂ ನಿಷಿದ್ಧ. ರಾಜರಿಗೆ ಅವರ ಹೆಂಡತಿಯರಿಗೆ (ಕ್ಷತ್ರಿಯರಿಗೆ) ಯಜ್ಞ ಮಾಡಿ ಸೋಮಪಾನ ಮಾಡಿದ ಮೇಲೆ ನಿಷಿದ್ಧ. ಅದಕ್ಕೆ ಮೊದಲು ಅವರು ವೀರಪಾನವೆಂದು ಯುದ್ಧಕ್ಕೆ ಮೊದಲು ಅಥವಾ ನಂತರ ಮದ್ಯಪಾನ ಮಾಡಲು ಅವಕಾಶವಿದೆ. ಕ್ಷತ್ರಿಯ ಸ್ತ್ರೀಯರು ಸುರತಕಾಲದಲ್ಲಿ ಮದ್ಯಪಾನ ಮಾಡಬಹುದಾಗಿದೆ. ವೈಶ್ಯರಿಗೆ ತಂದೆ ತಾಯಿ ಮುಂತಾದವರು ಸತ್ತಾಗ ದೀಕ್ಷಾಕಾಲದಲ್ಲಿ ಮದ್ಯಪಾನ ನಿಷಿದ್ಧ.

ಈ ಲೋಕದಲ್ಲಿ ತಾನು ನೀಚನು, ತಾನು ಉತ್ತಮನೆಂಬ ಭಾವನೆಯಿಂದ ಯಾವನು ಹುಟ್ಟಿನಿಂದ, ತಪಸ್ಸಿನಿಂದ, ವಿದ್ಯೆಯಿಂದ, ಆಚಾರದಿಂದ, ವರ್ಣದಿಂದ, ಆಶ್ರಮದಿಂದ ಕೂಡಿರುವ ಶ್ರೇಷ್ಠರನ್ನು ಗೌರವಾರ್ಹರನ್ನು ಗೌರವಿಸುವುದಿಲ್ಲವೋ

 

ಅವನು ಬದುಕಿದ್ದೂ ಸತ್ತಂತೆಯೇ. ಮರಣ ಹೊಂದಿ ತಲೆಕೆಳಗಾಗಿ ಉಪ್ಪುಕೆಸರಿನ ನರಕದಲ್ಲಿ ಬಿದ್ದವನಾಗಿ ಕೊನೆಯಿಲ್ಲದ ದುಃಖಗಳನ್ನು ಅನುಭವಿಸುವನೆಂದು ಶಾಸ್ತ್ರ ಸಿದ್ಧವು.

ಈ ಲೋಕದಲ್ಲಿ ಯಾವ ಪುರುಷರು ನರಬಲಿಯುಳ್ಳ ಯಾಗದಿಂದ ಭೈರವ ಮೊದಲಾದವರನ್ನು ಉದ್ದೇಶಿಸಿ ಯಾಗ ಮಾಡುವರೋ ಶಾಸ್ತ್ರನಿಷಿದ್ಧಗಳಾದ ಪ್ರಾಣಿಗಳನ್ನಾದರೂ ತಿನ್ನುವರೋ ಮತ್ತು ಯಾವ ಹೆಂಗಸರು ಪಶುಗಳನ್ನು ತಿನ್ನುವರೋ ಆ ಪುರುಷರನ್ನು ಆ ಸ್ತ್ರೀಯರನ್ನೂ ಇಲ್ಲಿ ಕೊಲ್ಲಲ್ಪಟ್ಟ ಆ ಪಶುಗಳು ನರಕದಲ್ಲಿ ರಾಕ್ಷಸಗಳಾಗಿ ದುಃಖಪಡಿಸುತ್ತಾ ಹಿಂಸಕರಾದ ಪಶುಮಾರಕರಂತೆ ಖಡ್ಗದಿಂದ ಕತ್ತರಿಸಿ ಈ ಲೋಕದಲ್ಲಿ ನರಭಕ್ಷಕರಾದಾಗ ಹಿಂದೆ ಅವರು ಮಾಡಿದಂತೆ ರಕ್ತ ಕುಡಿಯುವುವು. ಕುಣಿಯುವುವು ಹಾಡುವುವು, ಸಂತೋಷವನ್ನು ಹೊಂದಿದವುಗಳಾಗಿ ನಗುವುವು.

ಈ ಲೋಕದಲ್ಲಿ ಯಾರು ಬದುಕಬಯಸುವ ನಿರಪರಾಧಿಗಳನ್ನು ಅಡವಿಯಲ್ಲಾಗಲಿ ಊರಲ್ಲಾಗಲಿ ನಂಬಿಕೆ ಹುಟ್ಟಿಸುವ ಉಪಾಯಗಳಿಂದ ನಂಬಿಸಿ ಆಟವಾಗಿ ಚೂಪಾದ ಕಬ್ಬಿಣದ ಕಂಬದಲ್ಲಿ ಹಗ್ಗದಲ್ಲಿ ಎತ್ತರ ಪ್ರದೇಶದಲ್ಲಿ ಪೋಣಿಸಿ, ಕಟ್ಟಿಹಾಕಿ, ನಿಲ್ಲಿಸಿ, ಸಾಯಿಸುವರೋ, ಕೆಳಗೆ ತಳ್ಳುವರೋ ಅವರೂ ಸಹ ಸತ್ತ ಮೇಲೆ ಯಮನ ಅಧಿಕಾರಕ್ಕೆ ಒಳಪಟ್ಟ ನರಕಗಳಲ್ಲಿ ಶೂಲದಾರಗಳಲ್ಲಿ ಪೋಣಿಸಲ್ಪಟ್ಟ ಶರೀರವುಳ್ಳವರಾಗಿ ಹಸಿವೆ ನೀರಡಿಕೆಗಳಿಂದ ನೊಂದು ತೀಕ್ಷ್ಣ ಕೊಕ್ಕುಗಳುಳ್ಳ ಗಿಡಗ, ಹದ್ದು ಮೊದಲಾದವುಗಳಿಂದ ಇತ್ತ ಅತ್ತ ಕುಕ್ಕಲ್ಪಡುವರಾಗಿ ತಾವು ಮಾಡಿದ ಪಾಪವನ್ನು ನೆನಪಿಸಿಕೊಳ್ಳುವರು.

ಈ ಲೋಕದಲ್ಲಿ ಯಾವಾಗಲೂ ಕಚ್ಚುವ ಹಾವುಗಳಂತೆ ಅತಿಕ್ರೂರ ಸ್ವಭಾವದ ಯಾವ ಮನುಷ್ಯರು ಪ್ರಾಣಿಗಳನ್ನು ದುಃಖ, ಭಯಗೊಳಿಸುವರೋ ಅವರೂ ಸಹ ಸತ್ತಮೇಲೆ ದಂದಶೂಕವೆಂಬ ನರಕದಲ್ಲಿ ಬೀಳುತ್ತಾರೆ. ರಾಜನೇ! ಈ ನರಕದಲ್ಲಿ ಐದು ಹೆಡೆಯ, ಏಳು ಹೆಡೆಯ ಹಾವುಗಳು ಆ ಪಾಪಿಯನ್ನು ಸಮೀಪಿಸಿ ಹೆಬ್ಬಾವುಗಳಂತೆ ನುಂಗುವುವು.

ಈ ಲೋಕದಲ್ಲಿ ಯಾರು ಪ್ರಾಣಿಗಳನ್ನು ಉಸಿರಾಡಿಸಲಾಗದ ಬಿಲದಲ್ಲಿ ಧಾನ್ಯ ಹಾಕುವ ಹಗೆಗಳಲ್ಲಿ ಕಾರಾಗೃಹದಲ್ಲಿ ನೀರಲ್ಲಿ ಮುಳುಗಿಸಿ ಪೆಟ್ಟಿಗೆಯಲ್ಲಿ ಮುಚ್ಚಿ

ಉಸಿರು ಕಟ್ಟುವಂತೆ ಮಾಡುವರೋ ಅವರನ್ನು ಪರಲೋಕದಲ್ಲಿ ಅದೇರೀತಿಯಲ್ಲಿ ಹೊಗೆ ಮೊದಲಾದವುಗಳಲ್ಲಿಯೇ ಪ್ರವೇಶ ಮಾಡಿಸಿ ವಿಷ ಸಹಿತವಾದ ಬೆಂಕಿಯಿಂದ ಹೊಗೆಯಿಂದ ಉಸಿರಾಡುವಂತೆ ಮಾಡುವರು.

ಈ ಲೋಕದಲ್ಲಿ ಮನೆಯ ಯಜಮಾನನಾದ ಯಾವನು ಮತ್ತೆ ಮತ್ತೆ ಕೋಪಗೊಂಡವನಾಗಿ ಗೊತ್ತಿಲ್ಲದೆ ಮನೆಗೆ ಬಂದ ಜನರನ್ನು ಮನೆಗೆ ಬಂದ ಗೊತ್ತಿಲ್ಲದವರನ್ನಾಗಲಿ ಸುಡಬಯುಸುವನಂತೆ ಕೆಟ್ಟಗಣ್ಣಿನಿಂದ ನೋಡುವನೋ ಪಾಪದ ನೋಟವುಳ್ಳ ಅವನ ಕಣ್ಣುಗಳನ್ನು ನರಕದಲ್ಲಿ ಡೊಂಕಾದ ಕೊಕ್ಕುಳ್ಳ ಹದ್ದು ಕಾಗೆ ಉದ್ದಮೂತಿಯ ಗಿಡಗ ಮೊದಲಾದವು ಬಲಾತ್ಕಾರದಿಂದ ಹೆಚ್ಚು ಬಲವನ್ನು ಉಪಯೋಗಿಸಿ ಗುಡ್ಡೆಗಳನ್ನು ಕೀಳುವುವು.

ಈ ಲೋಕದಲ್ಲಿ ಹಣ, ಮನೆ ಮೊದಲಾದವುಗಳಲ್ಲಿಯೇ ಅಭಿಮಾನವುಳ್ಳ, ಅಹಂಕಾರ ತುಂಬಿದ, ವಕ್ರವಾಗಿ ನೋಡುವ, ಇತತರಿಂದ ತನ್ನ ಹಣ ಖರ್ಚಾಗುವುದು, ಮನೆ ನಾಶವಾಗುವುದು ಎಂಬ ಚಿಂತೆಯಿಂದ ಒಣಗಿದ ಮನಸ್ಸು, ಮುಖವುಳ್ಳ ಯಾವನು ಮನಃಶಾಂತಿಯನ್ನು ಹೊಂದದೇ ಬ್ರಹ್ಮರಾಕ್ಷಸ ಮೊದಲಾದ ಪಿಶಾಚಗಳು ಮತ್ತೊಬ್ಬರು ತೆಗೆದುಕೊಳ್ಳದಂತೆ ಹಣವನ್ನು ರಕ್ಷಿಸುವಂತೆ ಧನವನ್ನು ಕಾಪಾಡುವನೋ ಆ ಹಣದ ಸಂಪಾದನೆ ಬೆಳೆಸುವುದು, ಕಾಪಾಡುವುದು, ಇವುಗಳಿಂದ ಪಾಪವನ್ನು ಗಳಿಸಿದ ಅವನು ಸತ್ತ ಮೇಲೆ ಸೂಚೀಮುಖವೆಂಬ ನರಕದಲ್ಲಿ ಬೀಳುವನು. ಈ ನರಕದಲ್ಲಿ ಯಮಭಟರು ಧನ ಪಿಶಾಚಿಯಾದ ಈ ಪಾಪಿಯನ್ನು ಕೌದಿಗಳನ್ನು ಹೊಲೆಯುವವರಂತೆ ಚೂಪಾದ ತಂತಿಗಳಿಂದ ಅವಯವಗಳಲ್ಲಿ ಎಲ್ಲ ಕಡೆಯಲ್ಲಿ ಅಡ್ಡಕ್ಕೂ ಉದ್ದಕ್ಕೂ ಹೊಲೆಯುವರು.

ಯಮಲೋಕದಲ್ಲಿ ಹೀಗೆ ಬಹುದುಃಖವುಳ್ಳ ನರಕಗಳು ನೂರುಗಟ್ಟಲೆ ಸಾವಿರಗಟ್ಟಲೆ ಇವೆ. ಪರೀಕ್ಷಿದ್ರಾಜನೇ! ಅವೆಲ್ಲವುಗಳಲ್ಲಿಯೂ ಪಾಪದಲ್ಲಿ ನಿರತರಾದ, ಈ ಪ್ರಕರಣದಲ್ಲಿ ಹೇಳಲ್ಪಟ್ಟ ಹೇಳಲ್ಪಡದಿರುವ ಯಾರುಂಟೋ, ಅವರೆಲ್ಲರೂ ಒಂದರನಂತರ ಒಂದರಲ್ಲಿ ಪ್ರವೇಶಿಸುವರು.

ಹೀಗೆಯೇ ಧರ್ಮವನ್ನೇ ಅನುಸರಿಸುವವರು ಸ್ವರ್ಗವನ್ನು ಪ್ರವೇಶಿಸುವರು. ಈ ಲೋಕದಲ್ಲಿ ಮತ್ತೆ ಹುಟ್ಟುವಾಗ ಸ್ವರ್ಗದಲ್ಲಿ ಅನುಭವಿಸಿ ಉಳಿದ ಧರ್ಮದ, ನರಕದಲ್ಲಿ ಅನುಭವಿಸಿ ಉಳಿದ ಪಾಪ ಶೇಷಗಳ ನಿಮಿತ್ತದಿಂದ ಪ್ರವೇಶಿಸುವರು,




ಹುಟ್ಟುವರು. ಮೋಕ್ಷಕ್ಕೆ ಕಾರಣವಾದ ಧರ್ಮಮಾರ್ಗವು ಮೊದಲಿಗೆ ದ್ವಿತೀಯ ಸ್ಕಂಧದಲ್ಲಿ ವೈಶ್ವಾನರಲೋಕವನ್ನು ಹೊಂದುವನು ಮುಂತಾಗಿ ವಿವರಿಸಲ್ಪಟ್ಟಿದೆ.

ನೀನು ಕೇಳಬಯಸಿದ ಬ್ರಹ್ಮಾಂಡ ಕೋಶವು ಇಷ್ಟೇ. ಈ ಬ್ರಹ್ಮಾಂಡ ಕೋಶವು ಪುರಾಣಗಳಲ್ಲಿ ಹದಿನಾಲ್ಕು ಲೋಕಗಳಾಗಿ ವಿಶೇಷವಾಗಿ ವಿಭಕ್ತವಾಗಿ ವಿವೃತವಾಗಿದೆ. ಸಮಸ್ತೈಶ್ವರ್ಯಸಂಪನ್ನನಾದ ನಿರುಪಚರಿತವಾಗಿ ಸರ್ವೋತ್ತಮನಾದ ಶ್ರೀಹರಿಯ ಸ್ವರೂಪಭೂತಇಚ್ಛೆಯಿಂದ ಪ್ರಾಕೃತಗುಣವಿಕಾರವಾಗಿ ಸೃಷ್ಟವಾದ ಯಾವ ಬ್ರಹ್ಮಾಂಡಾತ್ಮಕವಾದ ಸ್ಥೂಲ ರೂಪವನ್ನು ಶ್ರದ್ಧೆಯಿಂದ ಯಾವನು ಓದುವನೋ, ಕೇಳುವನೋ, ಜನರಿಗೆ ಹೇಳುವನೋ ಅವನೇ ಶ್ರೀಹರಿಯ ಸೂಕ್ಷ್ಮತಮವಾದ ತನ್ನ ಬಿಂಬರೂಪವನ್ನು ಅತ್ಯಂತ ಶ್ರದ್ಧಾಯುಕ್ತನಾಗಿ ಭಕ್ತಿಯಿಂದ ನಿರ್ದೋಷವಾದ ಬುದ್ಧಿಯುಳ್ಳವನಾಗಿ ತಿಳಿಯುವನಷ್ಟೇ! ಸೂಕ್ಷ್ಮರೂಪ ಜ್ಞಾನಕ್ಕೆ ಸ್ಥೂಲರೂಪ ಜ್ಞಾನ ಕಾರಣ.

ಇಂದ್ರಿಯ ನಿಯಮನವುಳ್ಳ ಉಪಾಸಕನು ಶ್ರೀಹರಿಯ ಸ್ಥೂಲರೂಪವನ್ನು ಹಾಗು ಸೂಕ್ಷ್ಮರೂಪವನ್ನು ಕೇಳಿ ಸ್ಥೂಲರೂಪದಲ್ಲಿ ಉಪಾಸನ ಸಿದ್ಧಿಪಡೆದ ಮನಸ್ಸನ್ನು ಮೆಲ್ಲಗೆ ಸೂಕ್ಷ್ಮರೂಪೋಪಾಸನೆಯಿಂದ ಪರಮಾತ್ಮನ ಕಡೆಗೆ ಒಯ್ಯಬೇಕು ಎಂದು ಕ್ರಮವು.

ಪರೀಕ್ಷಿದ್ರಾಜನೇ! ಸಮಸ್ತ ಜೀವ ಸಮೂಹಕ್ಕೆ ಆಶ್ರಯನಾದ, ಸಕಲ ಜೀವ ಸಮೂಹವು ಆವಾಸಸ್ಥಾನವಾಗಿವುಳ್ಳ, ಸಕಲ ಜೀವರಿಗೆ ಆಶ್ರಯನಾದ, ಬ್ರಹ್ಮಾಂಡಕ್ಕೆ ಆಶ್ರಯನಾದ, ಸರ್ವನಿಯಾಮಕನಾದ ಶ್ರೀಹರಿಯ ಅತ್ಯಾಶ್ಚರ್ಯಕರವಾದ ಭೂಮಿ, ಅದರ ದ್ವೀಪಗಳು, ಅವುಗಳ ವರ್ಷಗಳು, ಅವುಗಳ ನದಿಗಳು, ಬೆಟ್ಟಗಳು, ಆಕಾಶ, ಸಮುದ್ರ, ಪಾತಾಲ, ದಿಕ್ಕುಗಳು, ನರಕ, ತೇಜೋಗಣಗಳು, ಲೋಕಗಳು ಇವೇ ಅವಯವಗಳಾಗಿವುಳ್ಳ ಪ್ರತಿಮಾರೂಪವಾದ ಶರೀರವು ನಿನಗಾಗಿ ನನ್ನಿಂದ ಹೇಳಲ್ಪಟ್ಟಿತು.

॥★★★॥

॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

॥★★★॥

# ಪರಿಶಿಷ್ಟ

| ಭೂಮಂಡಲ - ಸಪ್ತ ದ್ವೀಪಗಳು | | ಸಪ್ತ ಸಮುದ್ರಗಳು | |
|---|---|---|---|
| ದ್ವೀಪ | ಯೋಜನ | ಸಮುದ್ರ | ಯೋಜನ |
| 1. ಜಂಬೂ | 1 ಲಕ್ಷ | 1. ಲವಣೋದ | 1 ಲಕ್ಷ |
| 2. ಪ್ಲಕ್ಷ | 2 ಲಕ್ಷ | 2. ಇಕ್ಷುರಸೋದ | 2 ಲಕ್ಷ |
| 3. ಶಾಲ್ಮಲ | 4 ಲಕ್ಷ | 3. ಸುರೋದ | 4 ಲಕ್ಷ |
| 4. ಕುಶ | 8 ಲಕ್ಷ | 4. ಘೃತೋದ | 8 ಲಕ್ಷ |
| 5. ಕ್ರೌಂಚ | 16 ಲಕ್ಷ | 5. ಕ್ಷೀರೋದ | 16 ಲಕ್ಷ |
| 6. ಶಾಕ | 32 ಲಕ್ಷ | 6. ದಧಿಮಂಡೋದ | 32 ಲಕ್ಷ |
| 7. ಪುಷ್ಕರ | 64 ಲಕ್ಷ | 7. ಶುದ್ಧೋದ | 64 ಲಕ್ಷ |

## ಜಂಬೂದ್ವೀಪ

ಪರಿಮಾಣ ........................ 1 ಲಕ್ಷ ಯೋಜನ ವಿಸ್ತಾರ
ಸಮುದ್ರಾವರಣ ................. ಲವಣ ಸಮುದ್ರ (ಲವಣೋದ)
ದ್ವೀಪಕ್ಕೆ ಹೆಸರನ್ನಿತ್ತಿರುವುದು ...... ಜಂಬೂ ವೃಕ್ಷ
ಅಧಿಪತಿ.......................... ಆಗ್ನೀಧ್ರ
ವರ್ಷಗಳು ....................... 9

### ಜಂಬೂದ್ವೀಪ ವರ್ಷಗಳು

1. ಇಲಾವೃತ 2. ಅಜನಾಭ 3. ಕಿಂಪುರುಷ 4. ಹರಿವರ್ಷ 5. ಭದ್ರಾಶ್ವ
6. ರಮ್ಯಕ 7. ಹಿರಣ್ಮಯ 8. ಕುರು 9. ಕೇತುಮಾಲ

### ಅಷ್ಟ ಮರ್ಯಾದಾ ಪರ್ವತಗಳು

1. ನೀಲ 2. ಶ್ವೇತ 3. ಶೃಂಗವಾನ್ 4. ನಿಷಧ 5. ಹೇಮಕೂಟ
6. ಹಿಮಾಲಯ 7. ಮಲಯವಾನ್ 8. ಗಂಧಮಾದನ

# ಮೇರುಪರ್ವತ

**ಅವಷ್ಟಂಭ ಗಿರಿಗಳು (ಮೇರುವಿನ ಸುತ್ತಲಿರುವುವು)**

1. ಮಂದಾರ 2. ಮೇರುಮಂದಾರ 3. ಸುಪಾರ್ಶ್ವ 4.ಕುಮುದ

**ಕೀಲ ಪರ್ವತಗಳು**

ಜಠರ, ಕೈಲಾಸ, ಪವಮಾನ, ಶೃಂಗ, ದೇವಕೂಟ, ಕರವೀರ, ಪಾರಿಯಾತ್ರ, ಮಕರ

**ಕೇಸರ ಪರ್ವತಗಳು**

ಕುರಂಗ, ಕುರರ, ಕುಸುಂಭಕ, ವೈಕಂಕ, ಚಿತ್ರಕೂಟ, ಶಿಶಿರ, ಪತಂಗ, ರುಚಕ, ನಿಷಧ, ಶಿತಿವಾಸ, ಕಪಿಲ, ಶಂಖ, ವೈಡೂರ್ಯ, ಜಾರುಧಿ, ಹಂಸ, ಋಷಭ, ನೀರನಾಗ, ಕಾಲಂಜರ, ನಾರದ

**ನಾಲ್ಕು ವೃಕ್ಷರಾಶಿಗಳು**

1. ಚ್ಯೂತ 2. ಜಂಬೂ 3. ಕದಂಬ 4. ನ್ಯಗ್ರೋಧ

ಎತ್ತರ :- 1100 ಯೋಜನ

**ಉಪವನಗಳು**

1. ನಂದನ 2. ಚೈತ್ರರಥ 3. ವೈಭ್ರಾಜಕ 4. ವಿಶ್ವತೋಭದ್ರ

**ಮಹಾನದಿಗಳು**

1. ಅರುಣೋದ (ಮಂದಾರದ ಪೂರ್ವದಲ್ಲಿ)
2. ಜಂಬೂ ನದಿ (ಮಂದಾರದ ದಕ್ಷಿಣದಲ್ಲಿ)

**ಸರೋವರಗಳು (ಹ್ರದಗಳು)**

1. ಪಯಃ 2. ಮಧು 3. ಇಕ್ಷುರಸ 4. ಮೃಷ್ಟಜಲ

**ಮಹಾವೃಕ್ಷಗಳು**

1. ಮಹಾಕದಂಬ (ಸುಪಾರ್ಶ್ವ ಪರ್ವತದ ಮೇಲೆ)
2. ಶತಬಲಶ (ಕುಮುದ ಪರ್ವತದ ಮೇಲೆ ನೂರು ಶಾಖೆಗಳಿರುವ ವೃಕ್ಷ)




## ಮಹಾನಗರಗಳು (ಮೇರುಪರ್ವತದಮೇಲೆ)

1. ಶತಕೋಟಿ (ಬ್ರಹ್ಮಸದನ)

## ಮಹಾನಗರಗಳು (ಮೇರುಪರ್ವತದ ಎಂಟು ದಿಕ್ಕುಗಳಲ್ಲಿ )

| | | |
|---|---|---|
| 1. ಪೂರ್ವ | ಅಮರಾವತೀ | ಇಂದ್ರ |
| 2. ಆಗ್ನೇಯ | ತೇಜೋವತೀ | ಅಗ್ನಿ |
| 3. ಸಂಯಮಿನೀ | ದಕ್ಷಿಣ | ಯಮ |
| 4. ಕೃಷ್ಣಾಂಗನಾ | ನೈರುತ್ಯ | ನಿರ್ಋತಿ |
| 5. ಶ್ರದ್ಧಾವತೀ | ಪಶ್ಚಿಮ | ವರುಣ |
| 6. ಗಂಧವತೀ | ವಾಯವ್ಯ | ಪ್ರವಹ ವಾಯು |
| 7. ಮಹೋದ | ಉತ್ತರ | ಕುಬೇರ |
| 8. ಯಶೋವತೀ | ಈಶಾನ್ಯ | ರುದ್ರ |

## ಗಂಗೆಯ ನಾಲ್ಕು ಪ್ರಭೇದಗಳು

1. ಸೀತಾ 2. ಅಲಕನಂದಾ 3. ಚಕ್ಷುಃ 4. ಭದ್ರಾ

## ಜಂಬೂದ್ವೀಪದ ವರ್ಷಗಳಲ್ಲಿರುವ ಭಗವದ್ರೂಪಗಳು

| | | |
|---|---|---|
| 1. ಇಲಾವೃತ | ಸಂಕರ್ಷಣ | ಶ್ರೀರುದ್ರದೇವರು |
| 2. ಭದ್ರಾಶ್ವ | ಹಯಗ್ರೀವ | ಭದ್ರಶ್ರವ |
| 3. ಹರಿವರ್ಷ | ನರಸಿಂಹ | ಪ್ರಹ್ಲಾದ |
| 4. ಕೇತುಮಾಲ | ಪ್ರಮದ್ಯುಮ್ನ | ಕಾಮದೇವ ರತಿ |
| 5. ರಮ್ಯಕ | ಮತ್ಸ್ಯ | ವೈವಸ್ವತ ಮನು |
| 6. ಹಿರಣ್ಮಯ | ಕೂರ್ಮ | ಅರ್ಯಮಾ |
| 7. ಉತ್ತರ ಕುರು | ವರಾಹ | ಭೂದೇವಿ |
| 8. ಕಿಂಪುರುಷ | ರಾಮ | ಹನುಮಂತ |
| 9. ಭಾರತ | ನರನಾರಾಯಣ | ನಾರದ |

## ಭರತವರ್ಷ ಪರ್ವತಗಳು

1. ಮಲಯ 2. ಮೈನಾಕ 3. ತ್ರಿಕೂಟ 4. ಋಷಭ 5. ವಿಂಧ್ಯ ಇತ್ಯಾದಿ

**ಭರತವರ್ಷ ನದಿಗಳು**

1. ಗಂಗಾ 2. ಸಿಂಧು 3. ಬ್ರಹ್ಮಪುತ್ರ 4. ಕಾವೇರಿ 5. ಗೋದಾವರೀ 6. ತಾಮ್ರಪರ್ಣೀ 7. ಕೃಷ್ಣಾ 8. ತುಂಗಭದ್ರಾ 9. ಮಲಾಪಹಾರೀ ಇತ್ಯಾದಿ

**ಜಂಬೂದ್ವೀಪ 1 ಲಕ್ಷ ಯೋಜನ ವಿವರ**

| | |
|---|---|
| ಮೇರು ಪೂರ್ವ ಪಶ್ಚಿಮ | 16,000 ಯೋಜನ |
| ಇಲಾವೃತ ಪೂರ್ವ ಪಶ್ಚಿಮ | 18,000 ಯೋಜನ |
| ಮಾಲ್ಯವಾನ್, ಗಂಧಮಾದನ | 4,000 ಯೋಜನ |
| ಕೇತುಮಾಲದಿಂದ ಪಶ್ಚಿಮಸಮುದ್ರದವರೆಗೆ | 31,000 ಯೋಜನ |
| ಭದ್ರಾಶ್ವ ದಿಂದ ಪೂರ್ವಸಮುದ್ರದವರೆಗೆ | 31,000 ಯೋಜನ |
| ಒಟ್ಟು -(1ಲಕ್ಷ) | 1,00,000 ಯೋಜನ |

## ಪ್ಲಕ್ಷದ್ವೀಪ

ಪರಿಮಾಣ -............... 2 ಲಕ್ಷ ಯೋಜನ ವಿಸ್ತಾರ
ಸಮುದ್ರಾವರಣ - ......... ಕಬ್ಬಿನಹಾಲಿನ ಸಮುದ್ರ (ಇಕ್ಷುರಸೋದ)
ದ್ವೀಪಕ್ಕೆ ಹೆಸರನ್ನಿತ್ತಿರುವುದು -ಪ್ಲಕ್ಷ ವೃಕ್ಷ
ಅಧಿಪತಿ - ................. ಇಧ್ಮಜಿಹ್ವ
ಉಪಾಸ್ಯ -................. ಶ್ರೀಹರಿ
ವರ್ಷಗಳು -............... 7

**ಪ್ಲಕ್ಷದ್ವೀಪ ವರ್ಷಗಳು**

ಶಿವ, ಯಶಸ್ಯ, ಸುಭದ್ರ, ಶಾಂತ, ಕ್ಷೇಮ, ಅಮೃತ, ಅಭಯ

**ಮರ್ಯಾದಾ ಪರ್ವತಗಳು**

ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಧೂಮ್ರವರ್ಣ, ಹಿರಣ್ಯಗ್ರೀವ, ಮೇಘಮಾಲ

 

**ಮಹಾನದಿಗಳು**

ಅರುಣಾ, ಅನುಗುಣಾ, ಆಂಗಿರಸಿ, ಸಾವಿತ್ರೀ, ಸುಪ್ರಭಾತಾ, ಋತಂಭರಾ, ಸತ್ಯಂಭರಾ

**ಚತುರ್ವರ್ಣಗಳು**

ಹಂಸ, ಪತಂಗ, ಗೂರ್ಧ್ವಾಯನ, ಸತ್ಯಾಂಗ(ಸಪ್ತಾಂಗ)

## ಶಾಲ್ಮಲಿ ದ್ವೀಪ

ಪರಿಮಾಣ - .............. 4 ಲಕ್ಷ ಯೋಜನ ವಿಸ್ತಾರ
ಸಮುದ್ರಾವರಣ - ........ ಹೆಂಡದ ಸಮುದ್ರ (ಸುರೋದ)
ದ್ವೀಪಕ್ಕೆ ಹೆಸರನ್ನಿತ್ತಿರುವುದು- ಶಾಲ್ಮಲ ವೃಕ್ಷ
ಅಧಿಪತಿ -................. ಯಜ್ಞಬಾಹು
ಉಪಾಸ್ಯ -................ ಸೋಮಾಂತರ್ಗತ ಸೋಮನಾಮಕ ಶ್ರೀಹರಿ
ವರ್ಷಗಳು - .............. 7

**ಶಾಲ್ಮಲ ದ್ವೀಪ ವರ್ಷಗಳು**

ಸುರೋಚನ, ಸೌಮನಸ್ಯ , ರಮಣಕ, ದೇವಬರ್ಹ, ಪಾರಿಭದ್ರ , ಆಪ್ಯಾಯನ, ಅಭಿಜಾತ

**ಪ್ರಧಾನ ಪರ್ವತಗಳು**

ಸುರಸ, ಶತಶೃಂಗ, ವಾಮದೇವ, ಕುಂದ, ಮುಕುಂದ, ಪುಷ್ಪವರ್ಷ, ಸಹಶ್ರುತಿ

**ಮುಖ್ಯ ನದಿಗಳು**

ಅನುಮತಿ, ಸಿನೀವಾಲೀ, ಸರಸ್ವತೀ, ಕುಹೂ, ರಜನೀ, ನಂದಾ, ರಾಕಾ

**ಚಾತುರ್ವರ್ಣಗಳು**

ಶ್ರುತಧರ, ವೀರ್ಯಧರ, ವಸುಂಧರ, ಊರ್ಧ್ವಧರ

**ಉಪಾಸ್ಯ ರೂಪ**

ಚಂದ್ರನ ಅಂತರ್ಯಾಮಿಯಾದ ಸೋಮನಾಮಕ ಶ್ರೀಹರಿ

## ಕುಶದ್ವೀಪ

ಪರಿಮಾಣ - .............. 8 ಲಕ್ಷ ಯೋಜನ ವಿಸ್ತಾರ

ಸಮುದ್ರಾವರಣ - ........ ತುಪ್ಪದ ಸಮುದ್ರ (ಘೃತೋದ)

ದ್ವೀಪಕ್ಕೆ ಹೆಸರನ್ನಿತ್ತಿರುವುದು-ಅಗ್ನಿಯಂತೆ ಪ್ರಜ್ವಲಿಸುವ ಹುಲ್ಲು

ಅಧಿಪತಿ -................. ಹಿರಣ್ಯರೇತ

ಉಪಾಸ್ಯ -................ ಅಗ್ನ್ಯಂತರ್ಗತ ಅಗ್ನಿನಾಮಕ ಶ್ರೀಹರಿ

ವರ್ಷಗಳು - .............. 7

**ಕುಶದ್ವೀಪದ ವರ್ಷಗಳು**

ವಸುದಾನ, ದೃಡರುಚಿ, ನಾಭಿ, ಗುಪ್ತ, ಸತ್ಯವ್ರತ, ವಿಪ್ರ, ವಾಮದೇವ ನಾಮಭ್ಯಃ

**ಸಪ್ತ ಗಿರಿಗಳು**

ಚಕ್ರ, ಶೃಂಗ, ಕಪಿಲ, ಛಿನ್ನಕೂಟ, ದೇವಾನೀಕ, ಊರ್ಧ್ವರೋಮಾ ದ್ರವಿಣ ಇತಿ ಎಂಬುವು ಪರ್ವತಗಳು.

**ಸಪ್ತ ನದಿಗಳು**

ರಸಕುಲ್ಯಾ, ಮಧುಕುಲ್ಯಾ, ಶ್ರುತವಿಂದಾ, ಮಿತ್ರವೃಂದಾ, ದೇವಗರ್ಭಾ, ಘೃತಚ್ಯುತಾ, ಮಂತ್ರಮಾಲಾ

**ಚಾತುರ್ವರ್ಣಗಳು**

ಕುಶಲ, ಕೋವಿದ, ಅಭಿಯುಕ್ತ, ಕುಶಲಕರೆಂಬ

**ಉಪಾಸ್ಯ ರೂಪ**

ಅಗ್ನ್ಯಂತರ್ಗತ ಅಗ್ನಿ ನಾಮಕ ಶ್ರೀಹರಿ




# ಕ್ರೌಂಚ ದ್ವೀಪ

ಪರಿಮಾಣ - .............. 16 ಲಕ್ಷ ಯೋಜನ ವಿಸ್ತಾರ
ಸಮುದ್ರಾವರಣ - ........ ಮೊಸರಿನ ಸಮುದ್ರ
ದ್ವೀಪಕ್ಕೆ ಹೆಸರನ್ನಿತ್ತಿರುವುದು - ಕ್ರೌಂಚ ಪರ್ವತ
ಅಧಿಪತಿ - ................. ಘೃತಪೃಷ್ಠ
ವರ್ಷಗಳು - .............. 7
ಉಪಾಸ್ಯ - ................ ವರುಣಾಂತರ್ಯಾಮಿ ಶ್ರೀಹರಿ

## ಕ್ರೌಂಚ ದ್ವೀಪ ವರ್ಷಗಳು

ಆಮ, ಮಧುಮೇಹ, ಮೇಘಪೃಷ್ಠ, ಸುಧಾಮ, ಋಷಿಜ್ಯೋತಿ, ಲೋಹಿತಾರ್ಣ, ವನಸ್ಪತಿ

## ಪರ್ವತಗಳು

ಶುಕ್ಲ, ವರ್ಧಮಾನ, ಉಪಬರ್ಹಣ ಉಪಭೋಜನ, ನಂದ, ನಂದನ, ಸರ್ವತೋಭದ್ರ

## ಮಹಾನದಿಗಳು

ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ರೂಪವತೀ, ಪವಿತ್ರಾ, ಶುಕ್ಲಾ

## ಚತುರ್ವರ್ಣಗಳು

ಗುರು, ಋಷಭ, ದ್ರವಿಣ, ದೇವಕ

## ಶಾಕದ್ವೀಪ

ಪರಿಮಾಣ - .............. 32 ಲಕ್ಷ ಯೋಜನ ವಿಸ್ತಾರ
ಸಮುದ್ರಾವರಣ - ........ ಕ್ಷೀರಸಮುದ್ರ
ದ್ವೀಪಕ್ಕೆ ಹೆಸರನ್ನಿತ್ತಿರುವುದು -ಶಾಕ ಎಂಬ ದೊಡ್ಡಮರವು
ಅಧಿಪತಿ -................. ಮೇಧಾತಿಥಿ
ವರ್ಷಗಳು - .............. 7
ಉಪಾಸ್ಯ -................ ವಾಯು ಅಂತರ್ಯಾಮಿ ವಾಯುನಾಮಕ ಶ್ರೀಹರಿ

**ಶಾಕದ್ವೀಪ ವರ್ಷಗಳು**

ಪುರೋಜವ, ಮನೋಜವ, ವೇಪಮಾನ, ಧೂಮ್ರಾನೀಕ, ವಿಚಿತ್ರರೇಫ, ಬಹುರೂಪ, ವಿಶ್ವಾಧಾರ

**ಎಲ್ಲೆಯ ಪರ್ವತಗಳು**

ಈಶಾನ, ಉರುಶೃಂಗ, ಬಲಭದ್ರ , ಶತಕೇಸ, ಸಹಸ್ರಸ್ರೋತ, ದೇವಪಾಲ, ಮಹಾನಸ

**ಮಹಾನದಿಗಳು**

ಅನಘ, ಆಯುರ್ದಾ, ಉಭಯಸ್ಪೃಷ್ಟಿ, ಅಪರಾಜಿತಾ, ಪಂಚಪದೀ, ಸಹಸ್ರಶೃತಿ, ನಿಜಧೃತಿ

**ಚತುರ್ವರ್ಣಗಳು**

ಧೃತವ್ರತ, ಸತ್ಯವ್ರತ, ದಾನವ್ರತ, ಅನುವ್ರತ




# ಪುಷ್ಕರದ್ವೀಪ

ಪರಿಮಾಣ - .............. 64 ಲಕ್ಷ ಯೋಜನ ವಿಸ್ತಾರ
ಸಮುದ್ರಾವರಣ - ........ ಸ್ವಾದೂದಕ
ದ್ವೀಪಕ್ಕೆ ಹೆಸರನ್ನಿತ್ತಿರುವುದು - ದ್ವೀಪದಮಧ್ಯದಲ್ಲಿರುವ ದೊಡ್ಡ ಕಮಲ
ಅಧಿಪತಿ -................. ವೀತಿಹೋತ್ರ
ವರ್ಷಗಳು -.............. 2
ಉಪಾಸ್ಯ -................ ಬ್ರಹ್ಮಾಂತರ್ಯಾಮಿ ಬ್ರಹ್ಮನಾಮಕನಾದ ಶ್ರೀಹರಿ
ಪರ್ವತ -................. ಮಾನಸೋತ್ತರ

**ಪುಷ್ಕರದ್ವೀಪ ವರ್ಷಗಳು - ರಮಣಕ, ಧಾತುಕ**

**ಮಾನಸೋತ್ತರ ಪರ್ವತ**

ಎತ್ತರ - 10000 ಯೋಜನ    ವಿಸ್ತಾರ - 10000 ಯೋಜನ

| ದಿಕ್ಕು | ದೇವತೆ | ಪಟ್ಟಣ |
|---|---|---|
| ಪೂರ್ವ | - ಇಂದ್ರ | - ದೇವಧಾನೀ |
| ದಕ್ಷಿಣ | - ಯಮ | - ಸಂಯಮಿನೀ |
| ಪಶ್ಚಿಮ | - ವರುಣ | - ನಿಮ್ಲೋಚನೀ |
| ಉತ್ತರ | - ಸೋಮ | - ವಿಭಾವರೀ |

**ದ್ವೀಪಾಧಿಪತಿಗಳು-ದ್ವೀಪಾಖ್ಯಾತಿಕರ ವಿಶೇಷಗಳು**

| ದ್ವೀಪ | ಅಧಿಪತಿ | ದ್ವೀಪಾಖ್ಯಾತಿಕರ |
|---|---|---|
| ಜಂಬೂ | ಆಗ್ನೀಧ್ರ | ಜಂಬೂವೃಕ್ಷ |
| ಪ್ಲಕ್ಷ | ಇಧ್ಮಜಿಹ್ವ | ಪ್ಲಕ್ಷ ವೃಕ್ಷ |
| ಶಾಲ್ಮಲ | ಯಜ್ಞಬಾಹು | ಶಾಲ್ಮಲ ವೃಕ್ಷ |
| ಕುಶ | ಹಿರಣ್ಯರೇತ | ಕುಶಸ್ತಂಭ ತೃಣ |
| ಕ್ರೌಂಚ | ಘೃತಪೃಷ್ಠ | ಕ್ರೌಂಚ ಪರ್ವತ |
| ಶಾಕ | ಮೇಧಾತಿಥಿ | ಶಾಕ ವೃಕ್ಷ |
| ಪುಷ್ಕರ | ವೀತಿಹೋತ್ರ | ಪದ್ಮ |

# ಸೂರ್ಯಮಂಡಲ ವಿವರ

## ಉತ್ತರಾಯಣ ವೀಥೀ

(ಉತ್ತರಾಯಣದಲ್ಲಿ ಸೂರ್ಯನಿಗೆ ಎದುರಾಗುವ ನಕ್ಷತ್ರಗಳು)
ಅಭಿಜಿತ್, ಶ್ರವಣ, ಧನಿಷ್ಠ, ಶತಭಿಷಾ, ಪೂರ್ವಾಭಾದ್ರಪದಾ, ಉತ್ತರಾಭಾದ್ರಪದಾ, ರೇವತೀ, ಅಶ್ವಿನೀ, ಭರಣೀ, ಕೃತ್ತಿಕಾ, ರೋಹಿಣೀ, ಮೃಗಶಿರಾ, ಆರ್ದ್ರಾ, ಪುನರ್ವಸು

## ದಕ್ಷಿಣಾಯನ ವೀಥೀ

(ದಕ್ಷಿಣಾಯನದಲ್ಲಿ ಸೂರ್ಯನಿಗೆ ಎದುರಾಗುವ ನಕ್ಷತ್ರಗಳು)
ಪುಷ್ಯ, ಆಶ್ಲೇಷಾ, ಮಘಾ, ಪೂರ್ವಾಫಾಲ್ಗುಣೀ, ಉತ್ತರಾಫಾಲ್ಗುಣೀ, ಹಸ್ತಾ, ಚಿತ್ತಾ, ಸ್ವಾತೀ, ವಿಶಾಖಾ, ಅನುರಾಧಾ, ಜ್ಯೇಷ್ಠಾ, ಮೂಲಂ, ಪೂರ್ವಾಷಾಢಾ, ಉತ್ತರಾಷಾಢಾ

## ಸೂರ್ಯಚಂದ್ರರ ಭುಕ್ತಿ

(ಸೂರ್ಯನು ಚರಿಸುವ ಮಾರ್ಗವನ್ನು ಚಂದ್ರನು ಎಷ್ಟು ದಿನಗಳಲ್ಲಿ ಚರಿಸುವನು ಎಂದು ಕೆಳಗಿನ ಕೋಷ್ಟಕದಲ್ಲಿ ತೋರಿಸಿದೆ)

| ಸೂರ್ಯ | ಚಂದ್ರ |
|---|---|
| ಸಂವತ್ಸರ | ಮಾಸ |
| ಮಾಸ | $2^{1/4}$ ನಕ್ಷತ್ರ |
| ಪಕ್ಷಭುಕ್ತಿ | ದಿನ |
| ರಾಶಿ (1 ಮಾಸ) | 2 ಅಥವಾ 3 ದಿನ |
| ನಕ್ಷತ್ರ (1 ಪಕ್ಷ) | 1-1/2 ದಿನ |




**ಸೂರ್ಯರಥ ಕ್ರಮಿಸುವ ಯೋಜನಗಳು**

| | |
|---|---|
| 60 ಘಳಿಗೆ | 9 ಕೋಟಿ 51 ಲಕ್ಷ ಯೋಜನಗಳು |
| 15 ಘಳಿಗೆ | 2 ಕೋಟಿ 37 ಲಕ್ಷ 75 ಸಾವಿರ ಯೋಜನಗಳು |
| 1 ಮುಹೂರ್ತ | 34 ಲಕ್ಷ 8 ನೂರು ಯೋಜನಗಳು |
| 1 ಕ್ಷಣ | 2 ಸಾವಿರ ಯೋಜನ 2 ಕ್ರೋಶ |

**ಸೂರ್ಯನ ರಥಚಕ್ರ**

ಸೂರ್ಯನರಥಚಕ್ರದ ವರ್ಣನೆಯು ಮಹಾಭಾರತ, ಭಾಗವತ
ಗ್ರಂಥಗಳಲ್ಲಿ
ಯಸ್ಯೈಕಂ ಚಕ್ರಂ ದ್ವಾದಶಾರಂ ಷಣ್ಣೇಮಿ
ತ್ರಿನಾಭಿ ಸಂವತ್ಸರಾತ್ಮಕಂ ಏಕಂ ಚಕ್ರಂ ।

ಏಕಾಂ ನಾಭಿಂ ಸಪ್ತಶತಾ ಅರಾಃ ಶ್ರಿತಾಃ
ಪ್ರಧಿಷ್ವನ್ಯಾ ವಿಂಶತಿರರ್ಪಿತಾ ಅರಾಃ ।
ಅನೇಮಿ ಚಕ್ರಂ ಪರಿವರ್ತತೇಽಜರಂ
ಮಾಯಾಽಶ್ವಿನೌ ಸಮನಕ್ತಿ ಚರ್ಷಣೇ ॥
ಏಕಂ ಚಕ್ರಂ ವರ್ತತೇ ದ್ವಾದಶಾರಂ
ಷಣ್ಣಾಭಿಮೇಕಾಕ್ಷಮಮೃತಸ್ಯ ಧಾರಣಮ್ ।

ಸೂರ್ಯರಥಚಾಲಕತ್ವೇನ ಅಶ್ವಿನೋಃ ಶೋಭಾಂ ವಕ್ತುಂ ಸೂರ್ಯರಥಸಂಬಂಧಿಚಕ್ರದ್ವಯಗತಿಂ ವರ್ಣಯತಿ ಪಾದತ್ರಿಕದ್ವಯೇನ । ಏಕಪದಮಾವೃತ್ಯ ಯೋಜ್ಯಂ । ಏಕಂ ಚಕ್ರಂ ಈದೃಶಂ ಪರಿವರ್ತತೇ ಭ್ರಮತಿ । ಅನ್ಯದೇಕಂ ಚಕ್ರಂ ಈದೃಶಂ ವರ್ತತೇ ಚಲತೀತ್ಯರ್ಥಃ । ಕೀದೃಶಮೇಕಂ ಚಕ್ರಂ ಆದ್ಯಸ್ಯ ಏಕಾಂ ನಾಭಿಂ ಸಪ್ತಶತಾಃ ಸಪ್ತಶತಸಂಖ್ಯಾಃ ಅರಾಃ ಅನ್ಯಾಶ್ಚ ವಿಂಶತಿ ಸಂಖ್ಯಾಃ ಅರಾಃ ಶ್ರಿತಾಃ ಸಂಲಗ್ನಾಃ । ಚಕ್ರಮಧ್ಯಸ್ಥನಾಭೌ ವಿಂಶತ್ಯಧಿಕಸಪ್ತಶತಸಂಖ್ಯಾಃ ಅರಾಃ ತಿರ್ಯಕ್ ಸಂಲಗ್ನಾ ಇತ್ಯರ್ಥಃ । ಕಿಂಭೂತಾಃ ಅರಾಃ ? ಪ್ರಧಿಷು ಬಾಹ್ಯಚಕ್ರಾವಯವೇಷು ಅರ್ಪಿತಾ ಅಧಿನಿವೇಶಿತಾ ಇತ್ಯರ್ಥಃ । ಕೀದೃಶಮನ್ಯಚ್ಚಕ್ರಂ ದ್ವಾದಶಾರಂ ಷಣ್ಣಾಭಿ । ಕೀದೃಶಂ ಪ್ರಥಮಚಕ್ರಂ ? ಅನೇಮಿ ಚಲನೇಮಿರಹಿತಂ ಇತ್ಯರ್ಥಃ । ಅಜರಂ ನ ಜೀರ್ಯತೇ

ಇತ್ಯಜರಮ್ । ಜೀರ್ಣಂ ನ ಭವತೀತ್ಯರ್ಥಃ । ಏಕಂ ಚಕ್ರಂ ಮಧ್ಯಶಂಕುನಿಹಿತಪಾಶವತ್ ಸ್ವಸ್ಥಲೇ ಏವ ಪರಿಭ್ರಮತ್ । ದ್ವಿತೀಯಂ ತು ಸಮಂತತಃ ಚರತಿ ಇತ್ಯಾಶಯಃ । ಅತ್ರ ಪಂಚಾರೇ ಚಕ್ರೇ ಇತ್ಯಾದಿ ಶ್ರುತಯೋ ಮಾನಂ ।

## ಸೂರ್ಯನ ಗತಿಗಳು

ಜಾರದ್ಗವ - ಮಧ್ಯಮಮಾರ್ಗ
ಐರಾವತ - ಉತ್ತರಮಾರ್ಗ
ವೈಶ್ವಾನರ - ದಕ್ಷಿಣಮಾರ್ಗ

ಜಾರದ್ಗವ - 1. ಆರ್ಷಭೀ 2. ಗೋವೀಥೀ 3. ಜಾರದ್ಗವೀ
ಐರಾವತ - 1. ನಾಗವೀಥೀ 2. ಗಜವೀಥೀ 3. ಐರಾವತೀ
ವೈಶ್ವಾನರ - 1. ಅಜವೀಥೀ 2. ಮೃಗವೀಥೀ 3. ವೈಶ್ವಾನರೀ

ನಾಗವೀಥೀ - 1. ಅಶ್ವಿನೀ 2. ಭರಣೀ 3. ಕೃತ್ತಿಕಾ
ಗಜವೀಥೀ - 1. ರೋಹಿಣೀ 2. ಮೃಗಶಿರಾ 3. ಆರಿದ್ರಾ
ಐರಾವತೀ - 1. ಪುನರ್ವಸು 2. ಪುಷ್ಯ 3. ಆಶ್ಲೇಷಾ
ಆರ್ಷಭೀ - 1. ಮಖಾ 2. ಪೂರ್ವಾಭಾದ್ರಾ 3. ಉತ್ತರಾ
ಗೋವೀಥೀ - 1. ಹಸ್ತ 2. ಚಿತ್ತಾ 3. ಸ್ವಾತೀ
ಜಾರದ್ಗವೀ - 1. ವಿಶಾಖಾ 2. ಅನುರಾಧಾ 3. ಜ್ಯೇಷ್ಠಾ
ಅಜವೀಥೀ - 1. ಮೂಲ 2. ಪೂರ್ವಾಷಾಢ 3. ಉತ್ತರಾಷಾಢ
ಮೃಗವೀಥೀ - 1. ಶ್ರವಣ 2. ಧನಿಷ್ಠಾ 3. ಶತಭಿಷಾ
ವೈಶ್ವಾನರೀ - 1. ಪೂರ್ವಾಭಾದ್ರಾ 2. ಉತ್ತರಾಭಾದ್ರಾ 3. ರೇವತೀ

ಉತ್ತರಾಯಣ - ಮಂದಗತಿ (ಆರೋಹಣ) ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ (ಕ್ರಮೇಣ ದೀರ್ಘಂ ದಿನಂ 30 ಘಳಿಗೆ ಕಿಂತ ಹೆಚ್ಚು, ಕ್ರಮೇಣ ಹ್ರಸ್ವಾ ರಾತ್ರಿಃ 30 ಘಳಿಗೆ ಕಿಂತ ಕಡಿಮೆ)




ದಕ್ಷಿಣಾಯನ - ಶ್ರೀಘ್ರಗತಿ (ಅವರೋಹಣ) ವೃಶ್ಚಿಕ, ಧನು, ಮಕರ, ಕುಂಭ, ಮೀನ (ಹ್ರಸ್ವಂ ದಿನಂ 30 ಘಳಿಗೆ ಕಿಂತ ಕಡಿಮೆ, ದೀರ್ಘಾ ರಾತ್ರಿಃ 30 ಘಳಿಗೆ ಕಿಂತ ಹೆಚ್ಚು)

ವಿಷುವ - ಸಮಾನಗತಿ, ಮೇಷ, ತುಲಾ (ಸಮಾನಂ ದಿನಂ, ಸಮಾನಾ ರಾತ್ರಿಃ)

**ಜ್ಯೋತಿಶ್ಚಕ್ರವನ್ನು ಸುತ್ತುತ್ತಿರುವಂತೆ ಮಾಡುವ ಏಳು ವಾಯುಗಳು**

1. ಅವಹ 2. ಪ್ರವಹ 3. ಉದ್ವಹ 4. ಸಂವಹ 5. ವಿವಹ
6. ಪರಾವಹ 7. ಪರಿವಹ

## ಅಂತರಿಕ್ಷ

| | |
|---|---|
| ಧ್ರುವ ಮಂಡಲ | 13 ಲಕ್ಷ ಯೋಜನ |
| ಸಪ್ತರ್ಷಿ ಮಂಡಲ | 11 ಲಕ್ಷ ಯೋಜನ |
| ಶನೈಶ್ಚರ ಗ್ರಹ | 2 ಲಕ್ಷ ಯೋಜನ |
| ಬೃಹಸ್ಪತಿ ಗ್ರಹ | 2 ಲಕ್ಷ ಯೋಜನ |
| ಅಂಗಾರಕ ಗ್ರಹ | 2 ಲಕ್ಷ ಯೋಜನ |
| ಬುದ್ಧ ಗ್ರಹ | 2 ಲಕ್ಷ ಯೋಜನ |
| ಶುಕ್ರ ಗ್ರಹ | 2 ಲಕ್ಷ ಯೋಜನ |
| ನಕ್ಷತ್ರ ಮಂಡಲ | 1 ಲಕ್ಷ ಯೋಜನ |
| ಚಂದ್ರ ಮಂಡಲ | 1 ಲಕ್ಷ ಯೋಜನ |
| ಸೂರ್ಯ ಮಂಡಲ | 1 ಲಕ್ಷ ಯೋಜನ |
| ರಾಹು ಮಂಡಲ | 10000 ಯೋಜನ |
| ಸಿದ್ಧ, ಚಾರಣ, ವಿದ್ಯಾಧರ ಮನೆಗಳು | 10000 ಯೋಜನ |
| ಭೂಭಾಗ (ಹಕ್ಕಿಹಾರುವ ಎತ್ತರತನಕ ಇರುವ ಪ್ರದೇಶ) | 100 ಯೋಜನ |

## ಊರ್ಧ್ವಲೋಕಗಳ ಎತ್ತರ

(ಮ.ಭಾ.ತಾ.ನಿ ಅನುಗುಣವಾಗಿ)

| | |
|---|---|
| ಅಂತರಿಕ್ಷ | ಭೂಮಿಯಮೇಲೆ 1 ಲಕ್ಷ ಯೋಜನ |
| ಸ್ವರ್ಗ | ಭೂಮಿಯಮೇಲೆ 50 ಲಕ್ಷ ಯೋಜನ |
| ಮಹರ್ಲೋಕ | ಸ್ವರ್ಗದಮೇಲೆ 75 ಲಕ್ಷ ಯೋಜನ |
| ಜನೋಲೋಕ | ಮಹರ್ಲೋಕದಮೇಲೆ 1,12,50,000 ಯೋಜನ |
| ತಪೋಲೋಕ | ಜನೋಲೋಕದಮೇಲೆ 1,68,50,000 ಯೋಜನ |
| ಸತ್ಯಲೋಕ | ತಪೋಲೋಕದಮೇಲೆ 2,53,12,500 ಯೋಜನ |

## ಅಧೋಲೋಕಗಳು

1. ಅತಲ 2. ವಿತಲ 3. ಸುತಲ 4. ರಸಾತಲ 5. ತಲಾತಲ 6. ಮಹಾತಲ 7. ಪಾತಾಲ

## ನರಕಗಳು

1. ತಾಮಿಸ್ರ 2. ಅಂಧತಾಮಿಸ್ರ 3. ರೌರವ 4. ಮಹಾರೌರವ 5. ಕುಂಭೀಪಾಕ 6. ಕಾಲಸೂತ್ರ 7. ಅಸೀಪತ್ರವನಂ 8. ಶೂಕರಮುಖ 9. ಅಂಧಕೂಪ 10. ಕೃಮಿಭೋಜನ 11. ಸಂದಂಶ 12. ತಪ್ತಸೂರ್ಮಿ 13. ವಜ್ರಕಂಟಕ 14. ಶಾಲ್ಮಲೀ 15. ವೈತರಣೀ 16. ಪೂಯೋದ 17. ಪ್ರಾಣರೋಧ 18. ವಿಶಸನಂ 19. ಲಾಲಾಭಕ್ಷ 20. ಸಾರಮೇಯಾದನ 21. ಅವೀಚೀಪೂರ 22. ರೇತಃ ಪಾನ 22. ಕ್ಷಾರಕರ್ದಮ 23. ರಕ್ಷೋಗಣಭೋಜನ 24. ಶೂಲಪ್ರೋತ 25. ದಂದಶೂಕ 26. ಪಟನಿರೋಧ 27. ಪರ್ಯಾವರ್ತನಂ 28. ಸೂಚೀಮುಖಂ

### ಸ್ತ್ರೀ ದರ್ಶನ/ಸಂಗ ಪಾಪ

| | |
|---|---|
| 1. ಸ್ವಸ್ತ್ರೀ | ವಿಹಿತ ಕಾಲಗಳಲ್ಲಿ ಪಾಪವಿಲ್ಲ |
| 2. ಪರಸ್ತ್ರೀ ದರ್ಶನ | ಕ್ಷುದ್ರ ಪಾತಕ |




| | |
|---|---|
| 3. ಪರಸ್ತ್ರೀ ಸಂಗ | ಉಪಪಾತಕ |
| 4. ವರ್ಣಬಾಹ್ಯಸ್ತ್ರೀ ಸಂಗ | ಪಾತಕ |
| 5. ಮಾತ್ರಾದಿ ಗಮನ | ಮಹಾಪಾತಕ |
| 6. ಉತ್ತಮಸ್ತ್ರೀ ದರ್ಶನ | ಸುಮಹಾಪಾತಕ |
| 7. ಉತ್ತಮಸ್ತ್ರೀ ಸಂಗ | ಅತಿಸುಮಹಾಪಾತಕ |
| 8. ಋಷಿಪತ್ನಿ ಸಂಗ | ಘೋರಾತಿಸುಮಹಾಪಾತಕ |
| 9. ದೇವಸ್ತ್ರೀ ಸಂಗ | ಘೋರತರಾತಿಸುಮಹಾಪಾತಕ |
| 10. ವಿಷ್ಣುಸ್ತ್ರೀ ದರ್ಶನ | ಘೋರತಮಾತಿಸುಮಹಾಪಾತಕ |

## ಅಧಿಕಾರಿ ತಾರತಮ್ಯ

**(6ನೇ ಅಧ್ಯಾಯ ಶ್ಲೋಕ 5 ತಾತ್ಪರ್ಯದಂತೆ)**

1. ಮಹಾಧಿಕಾರಿಗಳು ದೇವತೆಗಳು, ಮರೀಚ್ಯಾದಿ ಋಷಿಗಳು

2. ಅಲ್ಪಾಧಿಕಾರಿಗಳು

80 ಋಷಿಗಳು, 7 ಪಿತೃಗಳು,

100 ಅಪ್ಸರೆಯರು, 100 ಗಂಧರ್ವರು

100 ರಾಜರು, 20 ಸಿದ್ಧಚಾರಣರು

3. ಅನಧಿಕಾರಿಗಳು ಕೆಳಗಿನವರು

**ಮಹಾಭಾರತತಾತ್ಪರ್ಯನಿರ್ಣಯ ಗ್ರಂಥದಲ್ಲಿ ಬಂದ ಭೂಗೋಳ ವಿವರ**

ವಹ್ನಿಂ ವಿವಕ್ಷಂತಮಮುಂ ನಿವಾರ್ಯ
ಯಯೌ ಸವಿಪ್ರಃ ಸಹಫಲ್ಗುನೋ ಹರಿಃ ।
ಆಶಾಮುದೀಚೀಂ ಬೃಹತಾ ರಥೇನ
ಕ್ಷಣೇನ ತೀರ್ತ್ವೈವ ಚ ಸ್ಪತವಾರಿಧೀನ್ ॥ ೨೦.೨೭॥

ದದುಶ್ಚ ಮಾರ್ಗಂ ಗಿರಯೋಽಬ್ಧಯಸ್ತಥಾ
ವಿದಾರ್ಯ ಚಕ್ರೇಣ ತಮೋಽಂಧಮೀಶಃ ।
ಘನೋದಕಂ ಚಾಪ್ಯತಿತೀರ್ಯ ತತ್ರ ದದರ್ಶ
ಧಾಮ ಸ್ವಮನಂತವೀರ್ಯಃ ॥ ೨೦.೨೮॥

ಸಂಸ್ಥಾಪ್ಯ ದೂರೇ ಸರಥಂ ಸವಿಪ್ರಂ
ಪಾರ್ಥಂ ಸ್ವರೂಪೇ ದ್ವಿಚತುಷ್ಕಬಾಹೌ ।
ಸಮಸ್ತರತ್ನೋಜ್ವಲದಿವ್ಯಭೂಷಣೇ
ವಿವೇಶ ನಿತ್ಯೋರುಗುಣಾರ್ಣವೇ ಪ್ರಭುಃ ॥೨೧.೨೯॥

ಸಹಸ್ರಮೂರ್ಧನ್ಯುರುಶೇಷಭೋಗ
ಆಸೀನರೂಪೇಽಮಿತಸೂರ್ಯದೀಧಿತೌ ।
ರಮಾಸಹಾಯೇ ತಟಿದುಜ್ವಲಾಂಬರೇ
ಮುಕ್ತೈರ್ವಿರಿಂಚಾದಿಭಿರರ್ಚಿತೇ ಸದಾ ॥೨೧.೩೦॥

ಅಪ್ರಾಕೃತಾತ್ ಸದನಾದ್ ವಾಸುದೇವೋ
ನಿಸ್ಸೃತ್ಯ ಸೂರ್ಯಾಧಿಕಲಕ್ಷದೀಧಿತೇಃ ।
ರಥಂ ಸಮಾರುಹ್ಯ ಸಪಾರ್ಥವಿಪ್ರ
ಆಗಾತ್ ಸುತಾಂಶ್ಚೈವ ದದೌ ದ್ವಿಜಾಯ ॥೨೧.೩೩॥

ತತಃ ಕೃಷ್ಣಃ ಪುರೀಮೇತ್ಯ ಬೋಧಯಾಮಾಸ ಫಲ್ಗುನಮ್ ।
ಕಿಮೇತದ್ ದೃಷ್ಟಮಿತ್ಯೇವ ತೇನ ಪೃಷ್ಟೋ ರಮಾಪತಿಃ ॥ ೨೧.೩೯॥

ಅಯಂ ದ್ವೀಪಃ ಸಾಗರಶ್ಚ ಲಕ್ಷಯೋಜನವಿಸ್ತೃತೌ ।
ತದನ್ಯೇ ತು ಕ್ರಮೇಣೈವ ದ್ವಿಗುಣೇನೋತ್ತರೋತ್ತರಾಃ ॥೨೧.೪೦॥

ಅನ್ಯಾಧ್ಯರ್ಧಸ್ಥಲಂ ಹೈಮಂ ಬಾಹ್ಯತೋ ವಜ್ರಲೇಪಕಮ್ ।
ಏತತ್ ಸರ್ವಂ ಲೋಕನಾಮ ಹ್ಯೇತಸ್ಮಾತ್ ದ್ವಿಗುಣಂ ತಮಃ ।

ಅಂಧಂ ಯತ್ರ ಪತಂತ್ಯುಗ್ರಾ ಮಿಥ್ಯಾಜ್ಞಾನಪರಾಯಣಾಃ ॥೨೧.೪೧॥

ಘನೋದಕಂ ತದ್‌ದ್ವಿಗುಣಂ ತದಂತೇ ಧಾಮ ಮಾಮಕಮ್ ।
ಯತ್ತದ್ ದೃಷ್ಟಂ ತ್ವಯಾ ಪಾರ್ಥ ತತ್ರ ಮುಕ್ತೈರಜಾದಿಭಿಃ ।
ಸೇವ್ಯಮಾನಃ ಸ್ಥಿತೋ ನಿತ್ಯಂ ಸರ್ವೈಃ ಪರಮಪೂರುಷಃ ॥೨೧.೪೨॥

ಲೋಕಾಲೋಕಪ್ರದೇಶಸ್ತು ಪಂಚಾಶಲ್ಲಕ್ಷವಿಸ್ತೃತಃ ।
ಸಪಂಚಾಶತ್ಸಹಸ್ರಶ್ಚ ತಸ್ಯಾಪಿ ಗಣನಂ ತಥಾ ॥೨೧.೪೩॥




ಯೋಜನಾನಾಂ ಪಂಚವಿಂಶತ್ಕೋಟಯೋ ಮೇರುಪರ್ವತಾತ್ ।
ಚತಸೃಷ್ವಪಿ ದಿಕ್ಷೂರ್ಧ್ವಮಧಶ್ಚಾಂಡಂ ಪ್ರಕೀರ್ತಿತಮ್ ॥೨೦.೪೪॥

ಅಬಗ್ನೀರನಭೋಹಂಕೃನ್ಮಹತ್ತತ್ವಗುಣತ್ರಯೈಃ ।
ಕ್ರಮಾದ್ ದಶೋತ್ತರೈರೇತದಾವೃತಂ ಪರತಸ್ತತಃ ॥೨೦.೪೫॥

ತತಃ ಕದಾಚಿತ್ ಪ್ರವರೇ ಸಭಾತಲೇ
ಧರ್ಮಾತ್ಮಜೋ ರಾಜಭಿಭ್ರಾರ್ತೃಭಿಶ್ಚ ।
ವೃತಾ ನಿಶಮ್ಯೈವ ಸಭಾಃ ಸುರಾಣಾಂ
ಯಥಾ ಸ್ಥಿತಾ ನಾರದಮನ್ವಪೃಚ್ಛತ್ ॥೨೦.೫೦॥

ಅಂತರಿಕ್ಷಂ ತ್ವಯಾ ಪ್ರೋಕ್ತಂ ಲಕ್ಷಯೋಜನಮುಚ್ಛ್ರಿತಮ್ ।
ಅರ್ಧಕೋಟ್ಯುಚ್ಛ್ರಿತಃ ಸ್ವರ್ಗೋ ವಿಮಾನಾವಲಿಸಂಕುಲಃ ॥೨೦.೫೦॥

ಭುವಃ ಸ್ವರ್ಗಶ್ಚ ಕೋಟ್ಯೈವ ಯೋಜನಾನಾಂ ಪ್ರವಿಸ್ತೃತೌ ।
ಮಹರ್ಜನಸ್ತಪಶ್ಚೈವ ಕ್ರಮಾದಧ್ಯರ್ಧಯೋಜನಾಃ ।
ಪಂಚಾಶತ್ಕೋಟಿವಿಸ್ತಾರಾ ಯೋಜನಾನಾಂ ಸಮಸ್ತಶಃ ॥೨೦.೫೨॥

ಯಾವಂತ ಏತೇ ಮಿಲಿತಾಸ್ತತ್ಪ್ರಮಾಣ ಉದೀರಿತಃ ।
ಸತ್ಯಾಖ್ಯೋ ಬ್ರಹ್ಮಲೋಕಸ್ತು ಯತ್ರ ಬ್ರಹ್ಮಾ ವಿರಾಜತೇ ॥೨೦.೫೩॥

ತತಶ್ಚ ದ್ವಿಗುಣಃ ಪ್ರೋಕ್ತೋ ವಿಷ್ಣುಲೋಕಃ ಸನಾತನಃ ।
ಉತ್ತರೋತ್ತರತಃ ಸರ್ವೇ ಸುಖೇ ಶತಗುಣೋತ್ತರಾಃ ॥೨೦.೫೪॥

ದಿವ್ಯರತ್ನಸಮಾಕೀರ್ಣಂ ತಥಾ ಪಾತಾಲಸಪ್ತಕಮ್ ।
ಅಧಸ್ತಾಚ್ಛೇಷದೇವೇನ ಬಲಿನಾ ಸಮಧಿಷ್ಠಿತಮ್ ॥೨೦.೫೬॥

ಕಾಮಭೋಗಸಮಾಯುಕ್ತಾ ಬಹುವರ್ಷಸಹಸ್ರಿಣಃ ।
ಸಪ್ತದ್ವೀಪೇಷು ಪುರುಷಾ ನಾರ್ಯಶ್ಚೋಕ್ತಾಃ ಸುರೂಪಿಣಃ ॥೨೦.೫೭॥

ಏಷಾಂ ಚ ಸರ್ವಲೋಕಾನಾಂ ಧಾತಾ ನಾರಾಯಣಃ ಪರಃ ।
ವಿಷ್ಣುಲೋಕಸ್ಥಿತೋ ಮುಕ್ತೈಃ ಸದಾ ಸರ್ವೈರುಪಾಸ್ಯತೇ ॥೨೦.೫೮॥

## ಕಠಿಣ ಪದಗಳ ಕೋಶ

ಪೃಥು, ಪರಿಣಾಹ - ದಪ್ಪ
ದೀರ್ಘ - ಉದ್ದ
ಉತ್ಸೇಧ, ಉಚ್ಛ್ರಯ, ಉತ್ತುಂಗ, ಆಯಾಮ, ಉನ್ನಾಹ - ಎತ್ತರ
ವ್ಯಾಮ - ಹಸ್ತಪರಿಮಾಣ
ಅರತ್ನಿ - ಮೊಳಕೈಯಿಂದ ಹಿಡಿದು ಕಿರುಬೆರಳಿನ ತುದಿಯವರೆಗಿನ ಅಳತೆ
ವ್ಯಾಸ - ವಿಸ್ತಾರ (ಡಯಾಮೀಟರ್, diameter)
ಪರಿಧಿ - ಸುತ್ತಳತೆ (ಸರ್ಕಂಫರೆನ್ಸ್, circumference)
ವ್ಯಾಸ - ಸುತ್ತಳತೆ/3(ಸರ್ಕಂಫರೆನ್ಸ್, circumference / 3)
ನೇಮಿ - ಚಕ್ರದ ಅಂಚು
ನಾಭಿ - ಚಕ್ರದ ತೂಬು
ಅಕ್ಷ - ಅಚ್ಚಿನ ಒಂದು ಭಾಗ






# ಶ್ಲೋಕಾರ್ಧಾನುಕ್ರಮಣಿಕಾ

## ಅ

## ಆ



## ಇ

## ಗ

## ಚ



## ಛ



## ಜ



## ತ

## ದ



## ನ

॥★★★॥






ಕಲ್ಪಾಯುಷಾಂ ಸ್ಥಾನಜಯಾತ್ ಪುನರ್ಭವಾತ್
ಕ್ಷಣಾಯುಷಾಂ ಭಾರತಭೋಜಯೋ ವರಃ ।
ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ
ಸಂನ್ಯಸ್ಯ ಸಂಯಾತ್ಯಭಯಂ ಪದಂ ಹರೇಃ ॥

ಕಲ್ಪಾಯುಷ್ಯಪರ ಮಹರ್ಲೋಕಾದಿ ಪ್ರಾಪ್ತಿಗಿಂತ ಸತ್ಸಂಗತಿ,
ಹರಿಕಥಾ ಶ್ರವಣಾದಿಗಳಿಂದ ಭಕ್ತಿಯುಳ್ಳವರಿಗೆ
ನಿವೃತ್ತಕರ್ಮಾನುಷ್ಠಾನದಿಂದ ಮೋಕ್ಷವಾಗುವುದರಿಂದ
ಭಾರತವರ್ಷದಲ್ಲಿ ಜನ್ಮ ಶ್ರೇಷ್ಠ!

